# ಶಿವಾನುಭವ

| ವರ್ಷ ೨೬ | ಜನೇವರಿ ೧೯೫೨ | ಸಂಚಿಕೆ ೧ |
| --- | --- | --- |

## ಮೋಕ್ಷ ಇಲ್ಲವೆ ಮುಕ್ತಿ.

( ಲೇಃ—ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ ಒಂಟಮುರಿ)

ಇವರಡೂ ಶಬ್ದಗಳ ಅರ್ಥವು ಬಿಡುಗಡೆ ಎಂದಾಗುತ್ತದೆ. ಮುಚ್ ಧಾತುವಿನಿಂದ ಇವೆರಡೂ ಶಬ್ದಗಳು ಹುಟ್ಟಿರುತ್ತವೆ. ಮೋಕ್ಷ ಮತ್ತು ಮುಕ್ತಿ ಇವು ಬೇರೆ ಬೇರೆ ಇದ್ದರೂ ಅರ್ಥದಲ್ಲಿ ಮಾತ್ರ ಸಮಾನವುಳ್ಳವಿರುತ್ತವೆ. ಆದುದರಿಂದ ಮೋಕ್ಷಹೊಂದುವದೂ ಮುಕ್ತಿ ಪಡೆವುದೂ ಒಂದೇ ಇರುವವು.

ಇಲ್ಲಿ ಈ ಬಿಡುಗಡೆಯು ಏತರಿಂದ ? ಎಂಬ ಆಕಾಂಕ್ಷೆಯುಂಟಾಗುವದು. ಬಡತನ ಹಾಗೂ ಶಾರೀರಕ ಕಷ್ಟತಾಪಗಳು ರೋಗ ರುಜೆಗಳು ಇತ್ಯಾದಿಗಳಿಂದ ಬೆಂದುಬೆಂಡಾದ ಮಾನವನು ದೇಹವಿಟ್ಟರೆ, "ಅವನು ಒಮ್ಮೆ ಮುಕ್ತನಾದನು; ಇದು ಒಳ್ಳೆಯದೇ ಆಯಿತು." ಎಂದು ಕೆಲವರು ಅಭಿಪ್ರಾಯಪಡುವರು. ಆದರೆ ಇದು ಆತನ ವರ್ತಮಾನ ಜನ್ಮದ ಬಿಡುಗಡೆಮಾತ್ರವಾಯಿತು ಸರಿ! ಆದರೆ ಇಷ್ಟರಿಂದ, ಆತನು ಮುಂಬರುವ ಜನ್ಮಗಳೆಲ್ಲ ನಿಂತಂತೆ ಆಗಲಿಲ್ಲ. ಸರ್ವ ಜನ್ಮಗಳ ಅಪಾರವಾದ ಸಂಚಿತಕರ್ಮವೂ, ಸಾಂಪ್ರತ ಜನ್ಮದ ಆಗಾಮೀ ಕರ್ಮವೂ ಅವನ ಬೆನ್ನು ಬಿಡಲಾರವು. ಅವನ್ನು ಭೋಗಿಸಿ ತೀರಿಸದಿದ್ದರೆ ನಿರ್ವಾಹವೇ

ಇಲ್ಲ. ಆ ಕಾರಣ ಪುನಃಜನ್ಮತೊಟ್ಟು ಆ ಜನ್ಮಭೂಮಿಗೆ ಬರಲೇ ಬೇಕು. ಕರ್ಮವು ನಿಃಪಾತವಾಗದೆ ಭವಚಕ್ರವು ನಿಲ್ಲಲಾರದು. ಈ ಭವಬಂಧನದಿಂದ ಸಂಪೂರ್ಣಬಿಡುಗಡೆ ಹೊಂದಿದರೆ ಮಾತ್ರ, ಆ ಜೀವನು ನಿತ್ಯಸುಖಿಯಾಗುವನು. ಇದೇ ಮೋಕ್ಷ ಇಲ್ಲವೆ ಮುಕ್ತಿಯೆನಿಸುವದು.

ಬಹು ಜನ ಭಕ್ತರು ದೇವರಲ್ಲಿ ಸದ್ಭಕ್ತಿಯನಾಚರಿಸಿ, ಆತನ ಕೃಪೆ ಪಡೆದು ಕೈಲಾಸಕ್ಕೆ ತೆರಳಿದ ಕಥೆಗಳು, ಪುರಾಣಗಳಲ್ಲಿ ಅನೇಕವಿರುತ್ತವೆ. ಆಗ ಶಿವನ ಅಪ್ಪಣೆಪಡೆದು ಶಿವದೂತರು ಕೈಲಾಸದಿಂದ ವಿಮಾನ ತೆಗೆದುಕೊಂಡು ಬಂದು, ಆ ಭಕ್ತನನ್ನು ಕರೆದುಕೊಂಡು ಹೋದರೆಂದು ಪೌರಾಣಿಕರು ಹೇಳುತ್ತಿರುವರು. ಆದರೆ ಇವೆಲ್ಲ ಅಕ್ಷರಶಃ ನಿಜವಾದವೆಂದು ಹೇಳಲಿಕ್ಕಾಗುವದಿಲ್ಲ. ಕೇಳುವವರಿಗೆ ಮನೋಹರವೆನಿಸುವಂತೆ ರೂಪಿಸಿ, ಅಲಂಕರಿಸಿರುವರು. ಆದುದರಿಂದ ಇವನ್ನು ತಾತ್ವಿಕ ದೃಷ್ಟಿಯ ಒರೆಗಲ್ಲಿಗೆ ತಿಕ್ಕಿ ಅವುಗಳ ಸತ್ಯತೆಯನ್ನು ಅರಿತುಕೊಳ್ಳುವದು ಬಹು ಅವಶ್ಯವದೆ. ಇಲ್ಲಿ ಮುಖ್ಯವಾಗಿ (೧) ಶಿವನೆಂದರೆ ಯಾರು? (೨) ಅವನ ಕೃಪೆಪಡೆಯುವದು ಹೇಗೆ? (೩) ಶಿವನ ಅಪ್ಪಣೆ ಅದಾವುದು? (೪) ಶಿವದೂತರು ಅವಾರು? (೫) ವಿಮಾನವೆಂದರೇನು? (೬) ಕೈಲಾಸದಿಂದ ಬರುವದು ಹೇಗೆ? ಈ ಆರು ಸಂಗತಿಗಳ ಬಗೆಗೆ ಆಲೋಚಿಸಬೇಕಾಗಿದೆ. ಅದಕ್ಕೆ ಅನುಕೂಲವಾಗಬೇಕೆಂದು ಕೆಳಗೆ ಬೇರೆ ಬೇರೆ ತತ್ವವಿದ್ದದರ ಕೆಲ ಅಭಿಪ್ರಾಯಗಳನ್ನು ಕೊಟ್ಟಿರುತ್ತದೆ.

೧ "ದೇವಲೋಕ ಮರ್ತ್ಯಲೋಕವೆಂಬುವು ಬೇರೆ ಮತ್ತುಂಟೆ?
ಈ ಲೋಕದಲ್ಲೇ ಮತ್ತೆ ಅನಂತಲೋಕ! ಸತ್ಯವ ನುಡಿ
ವುದೇ ದೇವಲೋಕ, ಮಿಥ್ಯವನುಡಿವುದೇ ಮರ್ತ್ಯಲೋಕ.
ಆಚಾರವೇ ಸ್ವರ್ಗ, ಅನಾಚಾರವೇ ನರಕ. ಕೂಡಲ
ಸಂಗಮದೇವಾ ನೀವೇ ಪ್ರಮಾಣ"

ಶ್ರೀ ಬಸವೇಶ್ವರ ದೇವರು.

೨ ಸುಜ್ಞಾನವೇಲಿಂಗ (ಶಿವ) — ಪ್ರಮಥರು (ವಚನಶಾಸ್ತ್ರ)
ಪ್ರಜ್ಞಾನಂ ಬ್ರಹ್ಮ (ದೇವರು) - ಉಪನಿಷತ್‌ಕಾರರು.

ಮೋಕ್ಷ ಇಲ್ಲವೆ ಮುಕ್ತಿ

೩ ಭಕ್ತ ದೇಹಿಕ ಲಿಂಗಸ್ಥಳ —ಶ್ರೀ ಚನ್ನಬಸವೇಶ್ವರರು.

೪ ಶರಣ ಜನರ ಸದುಹೃದಯ ನಳಿನದೊಳು ।
ಪರಿಶೋಭಿಸುತಿಹುದು ನಿನ್ನ ( ಶಂಭುಲಿಂಗನ ) ಪಾದ ॥
ಶ್ರೀ ನಿಜಗುಣ ಶಿವಯೋಗಿಗಳು.

ಇವರ ಈ ಅಭಿಪ್ರಾಯಗಳಿಗನುಸರಿಸಿ ಮೇಲಿನ ಆರು ಸಂಗತಿಗಳನ್ನು ವಿಚಾರಿಸೋಣ! "ಕೈಲಾಸ ( ದೇವಲೋಕ ) ಮರ್ತ್ಯಲೋಕಗಳು ಬೇರೆಡೆ ಇಲ್ಲ. ಅವೆಲ್ಲ ಇಲ್ಲೇ ಇರುವವು." ಎಂದ ಮೇಲೆ ಶಿವದೂತರು ಆ ಭಕ್ತನನ್ನು ಬೇರೆಕಡೆ ಒಯ್ಯುವದು ಶಕ್ಯವಿಲ್ಲವೆಂದಂತಾಯಿತು. ಇನ್ನು ಶಿವವೆಂದರೆ ಯಾರು ನೋಡಿರಿ.

೧ **ಶಿವಃ**— ಸುಜ್ಞಾನ ಇಲ್ಲವೆ ಪ್ರಜ್ಞಾನವೇ ದೇವರು (ಶಿವನು) ಅದರಂತೆ ಅಂತಹ ಜ್ಞಾನವುಳ್ಳ ಸಾತ್ವಿಕ ಪುರುಷನು ಸಹ ಗುರು ಇಲ್ಲವೆ ಶಿವನು.

೨ **ಶಿವಕೃಪೆ ಪಡೆವುದುಃ**— ಪ್ರಪಂಚದ ಕಷ್ಟತಾಪಗಳಿಂದ ನೊಂದು ಇದಕ್ಕೆ ಹೇಯಬುದ್ಧಿ ಪಡೆದ ಮನುಷ್ಯನು (ಭಕ್ತನು) ಅದನ್ನು ತಿರಸ್ಕರಿಸಿ ತದ್ವಿರುದ್ಧ ಶಿವತತ್ತ್ವಮುಖದಿರುವಿ "ಆತನನ್ನು ಪಡೆಯುವ ಮಾರ್ಗತೋರಿಸು ಎಂದು, ಅಂತಹ ಬಲ್ಲ ಗುರುದೇವನಲ್ಲಿ ಮೊರೆ ಇಡುವನು. ಅವನು ದಯಾಳುವಾಗಿ, ಆ ಶಿಷ್ಯಗೆ .ಲಿಂಗ ( ಅಂದರೆ ಜ್ಞಾನ ) ಧಾರಣಮಾಡುವನು. ಆ ಜ್ಞಾನವನ್ನು ಬಿಟ್ಟು ಸುಜ್ಞಾನಮಾರ್ಗ ವಿಡಿದು ನಡೆಯಲು ಆಜ್ಞಾಪಿಸುವನು. ಇದೇ ಆತನ ಮೇಲೆ ಆದ ಶಿವ ಕೃಪೆಯು.

೩ **ಶಿವನ ಅಪ್ಪಣೆಃ**— ಪ್ರತಿಯೊಬ್ಬರಲ್ಲಿ ಶಿವ ( ಅಂತರಾತ್ಮ) ನಿರುವನಷ್ಟೇ "ಮನದೊಳು ಶಿವ ತಾನು ಮನೆಮಾಡಿಕೊಂಡಿಹ" ಎಂದು ಸರ್ಪಭೂಷಣ ಮಹನೀಯರು ಹೇಳಿರುವದನ್ನು ಅರಿಯದವರಾರೂ ಇಲ್ಲ. ಆ ಶಿವನು ಆಗಾಗ್ಗೆ ಮನುಷ್ಯನಿಗೆ ಪ್ರೇರಣೆ ಮಾಡುತ್ತಲೇ ಇರುವನು. ಈ ಪ್ರೇರಣೆಯೇ ಶಿವನ ಅಪ್ಪಣೆಯು.

೪ **ಶಿವದೂತರುಃ**— ಲಿಂಗಧಾರಿಗಳಾದ ಭಕ್ತರೆಲ್ಲರೂ ಶಿವನ ಆಜ್ಞಾಧಾರಿಗಳು. ಇವರೆಲ್ಲರು ಶಿವನ ದೂತರೇ.

೫ **ವಿಮಾನ:—**ಶಿವಮತ (ವೀರಶೈವ ಧರ್ಮ)ವೇ ವಿಮಾನವು. ಅದರಲ್ಲಿ ಆ ಶಿವಕೃಪೆ ಪಡೆದ ಭಕ್ತನು ಕುಳ್ಳಿರಿಸುವದೆಂದರೆ ಸಾಮಾಜಿಕರು ಅವನನ್ನು ತಮ್ಮಲ್ಲಿ ಸೇರ್ಪಡೆ ಮಾಡಿಕೊಂಡು ಅವನೊಡನೆ ಸಹಾನುಭೂತಿ ಸಹಕಾರಿತೆಯಿಂದ ವರ್ತಿಸುವದು ಇಲ್ಲವೇ ಸಮಾನತ್ವದಿಂದ ಕೂಡಿಕೊಂಡು ನಡೆಯುವದು.

೬ **ಕಾಯವೇ ಕೈಲಾಸ:—** ಏಕೆಂದರೆ "ದೇಹವೇ ದೇವಾಲಯ" ಒಳಗಿರುವ ಪ್ರಾಣಲಿಂಗ (ಅಂತರಾತ್ಮ) ನೇ ಶಿವನು." ಇದರಿಂದ ತನುವೇ ಕೈಲಾಸವೆಂಬುದು ಸ್ಪಷ್ಟವಾಗುವದು. (ಇದು ಅಜ್ಞಾನಿಗಳಿಗೇನೂ ಅಲ್ಲ. ಸದ್ಭಕ್ತರಿಗೆ ಮಾತ್ರ.) ಆ ಭಕ್ತರು ಪವಿತ್ರವಾದ ದೇಹದೊಡವೆರೆದು ಬರುವದರಿಂದ, ಅವರು ಕೈಲಾಸದಿಂದಲೇ ಬಂದಂತಾಯಿತು. ಅಥವಾ "ಶಿವಭಕ್ತರಿರುವರದೇ ಕೈಲಾಸವು" ಅಲ್ಲಿಂದ ಬರುವದರಿಂದಲೂ ಕೈಲಾಸದತ್ತಣಿಂದ ಆಗಮಿಸಿದಂತಾಯಿತು.

ಮೋಕ್ಷದಲ್ಲಿ ಇದು ತರಗತಿಗಳಿರುವವೆಂದು ಗ್ರಂಥಗಳಿಂದ ತಿಳಿಯುತ್ತದೆ. ಅವು:—೧ ಸಾಲೋಕ್ಯ೨ ಸಾಮೀಪ್ಯ ೩ ಸಾರೂಪ್ಯ ೪ ಸಾಯುಜ್ಯ ೫ ಕೈವಲ್ಯ. ಇವನ್ನು ಬೇರೆ ಬೇರೆಯಾಗಿ ವಿವರಿಸೋಣ.

೧ **ಸಾಲೋಕ್ಯ:** ಸಲೋಕ+ಯ = ಸಾಲೋಕ್ಯ. ಇದರ ಅರ್ಥವು "ಜನರಿಂದ ಕೂಡಿಕೊಂಡಿರುವದು." ಅಥವಾ ದೇವ (ಶಿವ)ಲೋಕದಲ್ಲಿ ಹೋಗಿ ವಾಸಿಸುವದು ಎಂದಾಗುತ್ತದೆ. ಈ ವಿಷಯವಾಗಿ ಮೇಲೆ ಕೈಲಾಸಕ್ಕೆ ತೆರಳಿದ ಕಥೆಯು ಬಗೆಗೆ ವಿವರಿಸುವಲ್ಲಿ ಬಂದಿರುತ್ತದೆ. ಅದರ ಮುಖ್ಯಾಂಶವೆಂದರೆ ಪ್ರಪಂಚಕ್ಕೆ ಬೇಸತ್ತ ಮನುಷ್ಯನು ಗುರುದೇವನ ಕೃಪೆ ಪಡೆದು, ಪೂಜಿಸಲು ಲಿಂಗವನ್ನು ಸಂಪಾದಿಸುವನು. ಅವನನ್ನು ವೀರಶೈವ ಸಾಮಾಜಿಕರು ತಮ್ಮೊಳಗೆ ಬೆರಿಸಿಕೊಂಡು ಅವನೊಡನೆ ಸಮಾನಸ್ಕಂವತೆಯಿಂದ ನಡೆಯುವರು. ಹಾಗೂ ಶಿವಾಚಾರದಲ್ಲಿ ಪ್ರಗತಿಗೊಳಿಸುವರು. ಅವರೇ ಶಿವಗಣಂಗಳು. "ಶಿವಭಕ್ತರಿರುವ ಠಾವೇ ದೇವಲೋಕ, ಶಿವಾಚಾರವೇ ಶಿವಲೋಕ"ವೆಂದಿರುವದರಿಂದ, ಆ ನೂತನ ಶಿವಭಕ್ತನು ಕೈಲಾಸದಲ್ಲಿಯೇ ಹೋಗಿ ವಾಸಿಸಿದಂತಾಯಿತು. ಈ ರೀತಿ ಲಿಂಗದೀಕ್ಷೆ ಪಡೆದವನೇ ಈಶ್ವರನು. ಈತನು ಮೊದಲು ಗುರುದೇವ

ನಿಂದ ನರದೇಹದ ಮಹತ್ವವನ್ನು ತಿಳಿದುಕೊಂಡನು. ಅದು ಜ್ಞಾನದಿಂದ ಕೂಡಿಕೊಂಡಿದೆ, ಇತರ ಪ್ರಾಣಿಗಳಿಗೆ ಇಂತಹ ಜ್ಞಾನವಿಲ್ಲ. ಅವುಗಳಿಗೆ ಹುಟ್ಟು ಬುದ್ಧಿ ಮಾತ್ರವಿರುವದು. ಮನುಷ್ಯನ ಜ್ಞಾನವು ಬೆಳಿಸಿದಷ್ಟು ಬೆಳೆಯುತ್ತದೆ. ಕೊನೆಗೆ ಸಾಕ್ಷಾತ್ ಶಿವನಾಗುವ ಯೋಗ್ಯತೆ ಅದರಲ್ಲಿರುತ್ತದೆ. ಅದನ್ನು ವಿನಾಕಾರಣ ವಿಷಯಾಶೆಯ ಮಬ್ಬಿನಲ್ಲಿ ಹಾಳುಮಾಡಿಕೊಳ್ಳುವದು ಬಹು ಹಾನಿಕರವು; ಅದು ಲಭಿಸಿದಾಗ ಅದರ ಸದುಪಯೋಗ ಮಾಡಿಕೊಂಡು ಜನ್ಮದ ಉದ್ಧಾರ ಹೊಂದಬೇಕು. ಅದು ಸಹ ಸಾಹಜಿಕವಾಗಿ ಪ್ರಾಪ್ತವಾಗುವ ವಸ್ತುವಲ್ಲ! ಇತ್ಯಾದಿ. ಈ ರೀತಿ ನರದೇಹದ ಬಗೆಗೆ ಅರಿತುಕೊಂಡು ವಿವೇಕಯುತನಾದುದೇ ಆತನ ವೈಶಿಷ್ಟ್ಯವು. ಈತನೇನೋ ಕೈಲಾಸವನ್ನು ಸೇರುವನು ಸರಿ. ಆದರೆ " ಅಬ್ಬಿ ದೇಹಲಿ ಬಹುತ ದೂರ ಹೈ " ಎಂಬಂತೆ, ಪ್ರತ್ಯಕ್ಷ ಶಿವನನ್ನು ಕಾಣಲಿಕ್ಕೆ ಇನ್ನೂ ಕೈಲಾಸ ಲೋಕದಲ್ಲಿಯೇ ಮುನ್ನಿನ ಮಾರ್ಗವನ್ನು ಕ್ರಮಿಸಬೇಕಾಗುತ್ತದೆ. ಅದರ ಸಲುವಾಗಿ ಪೂರ್ವ ಸೌರಣೆಯನ್ನು ಮಾಡಿಕೊಳ್ಳಬೇಕಾಗುವದು. ಈಶ್ವರನು ಈ ಕಾರ್ಯಕ್ಕೆ ಉದ್ಯುಕ್ತನಾಗಲು, ಅವನಿಗೆ ' ಮಹೇಶ್ವರ ' ನೆಂಬ ಹೆಸರು ಪ್ರಾಪ್ತವಾಗುವದು. ಈ ಸಿದ್ಧತೆಯೆಂದರೆ, ತನ್ನಲ್ಲಿರುವ ಕೆಡಕು ಗುಣಗಳನ್ನೆಲ್ಲ ಕಿತ್ತುಹಾಕಿ ಒಳ್ಳೆಯ ಗುಣಗಳನ್ನು ಸಂಗ್ರಹಿಸಿ ನೀತಿ ಸದಾಚಾರವಂತನಾಗುವದಿರುತ್ತದೆ. ಮಹೇಶ್ವರನು ಪೂಜಿಸುವ ಆ ಲಿಂಗವು ಗುರುಲಿಂಗವೆನಿಸುತ್ತದೆ. " ತನುವೇ ಗುರುವು. ಆಚಾರವೇ ಗುರುವು. " ಎಂದು ಹೇಳಿರುವದರಿಂದ ತನ್ನ ತನುವು ಕೈಲಾಸದಂತೆ ಪವಿತ್ರವಾಗುವದಿನೆಯಿಂದ ಅದನ್ನು ಸುನೀತಿ ಸದಾಚಾರಗಳಿಂದ ಮುಕ್ತನಾಗಿ ಮಾಡಿಕೊಳ್ಳದಿದ್ದರೆ, ನಿರ್ವಾಹವೇ ಇಲ್ಲ. ಇದಾಗದೆ ಅವನಿಗೆ ಶಿವದರ್ಶನವಾಗುವದು ಶಕ್ಯವೇ ಇಲ್ಲ. ಇದೆಲ್ಲ ಸಾಲೋಕ್ಯದ ವಿವರಣೆಯೇ ಆಯಿತು. ಒಟ್ಟಿಗೆ ಶಿವಭಕ್ತರು ( ಲಿಂಗಧಾರಿಗಳು ) ವಾಸಿಸುವ ಪ್ರದೇಶದಲ್ಲಿ ಭಕ್ತನು ಅವರಿಂದ ಕೂಡಿಕೊಂಡಿರುವಿಕೆಯೇ ಸಾಲೋಕ್ಯ ಮೋಕ್ಷವೆನಿಸುವದು.

**ಸಾಮೀಪ್ಯ ಮೋಕ್ಷ:—** ಹೀಗೆ ಸಿದ್ಧತೆ ಹೊಂದಿದ ಮೇಲೆ, ಮಾಹೇಶ್ವರನು ಶಿವನತ್ತ ಮಾರ್ಗ ಕ್ರಮಿಸಲು ಯೋಗ್ಯನಾಗುವನು. ಆಗ ಅವನು ಬಹಿರಂಗದ ಲಿಂಗ ಪೂಜೆಯನ್ನು ದಾಟಿ, ಅಂತರಂಗದ

ಪೂಜೆಗೆ ಆರಂಭಿಸುವನು. ಆದುದರಿಂದ ಅವನಿಗೆ ಪ್ರಸಾದಿ ಎಂಬ ಹೊಸ ಹೆಸರು ಪ್ರಾಪ್ತವಾಗುವದು. ಈ ನಾಮವು ಸಾರ್ಥಕವಾಗಬೇಕೆಂದು ಅವನು ತನ್ನಲ್ಲಿ ಪ್ರಸಾದವು ( ಶಿವತ್ವವು ) ಇರುವದೆಂದು ಗ್ರಹಿಸಿಕೊಳ್ಳು ವನು. ಅಹಂಕಾರವನ್ನು ( ನಾನು ಎಂಬದನ್ನು ) ಪೂರ್ಣ ವರ್ಜಿಸು ವನು. ತನ್ನಲ್ಲಿರುವ ಅಂತರಾತ್ಮನೇ ( ಶಿವ ) ಎಲ್ಲ ಬಗೆಯ ವ್ಯವಹಾರ ಗಳನ್ನು ನಡಿಸುವನೆಂದೂ ತಾನು ಆದಾವುದನ್ನು ಮಾಡುವದಿಲ್ಲವೆಂದೂ ಒಳಿತಾಗಿ ನಂಬುವನು. ಆ ಶಿವನ ಪ್ರೇರಣೆಯಿಂದಲೇ ಆತನ ಶಿಷ್ಯತ್ವ ವಹಿಸಿದ ಕಾರ್ಯವೂ ಇಂದ್ರಿಯಗಳೂ ಕಾರ್ಯ ನಡಿಸುವವು. ತನ ಗೇನೂ ಅವುಗಳ ಸಂಬಂಧವು ತಿಲಮಾತ್ರವೂ ಇಲ್ಲವೆಂದೇ ಬಗೆದಿರು ವನು. ಹೀಗೆ ಶಿವನ ಆಳಾಗಿ ಅವನು ಹೇಳಿದಷ್ಟು ಕಾರ್ಯ ಮಾಡಿ ಕೊಂಡಿರುವನು. ಇದೇ ಮೇರೆಗೆ ತಾನು ಆದಾವ ವಿಷಯವನ್ನೂ ತನ ಗೆಂದು ಅವನು ಭೋಗಿಸುವದಿಲ್ಲ. ಪ್ರತಿಯೊಂದನ್ನು ಆ ಶಿವನಿಗೆ ಅರ್ಪಿ ಸಿಯೇ ಅವನ ಸಲುವಾಗಿಯೇ ಅವನೊಡನೆಯೇ ಕೈಕೊಳ್ಳುವನು. ಹೀಗಾ ದುದರಿಂದ, ದೇಹ ಮೂಲಕವಾಗಿ ತಾನು ಮಾಡತಕ್ಕ ಕಾರ್ಯಗಳಿಂದ ಅವನಿಗೆ ಪುಣ್ಯ ( ಸುಕೃತ ) ಪಾಪ ( ದುಷ್ಕೃತ್ಯ )ಗಳೇನೂ ಘಟಿಸುವದಿಲ್ಲ. ಈ ವಿಧದ ವ್ಯವಹಾರದಿಂದ ಅವನಲ್ಲಿ ಪ್ರಸಾದಿತ್ವವು ಹೆಚ್ಚೆಚ್ಚು ಒಡ ಮೂಡುತ್ತ ಹೋಗುವದು. ಶಿವನೇ ದೇಹದ ಒಳಗೂ ಹೊರಗೂ ಎಲ್ಲ ಕಾರ್ಯಗಳನ್ನು ಸ್ವೇಚ್ಛೆಯಿಂದ ಮಾಡುತ್ತ ಸ್ವಲೀಲಾಸಕ್ತನಾಗಿಬಿಡುವನು. ಆಗ ಪ್ರಸಾದಿಗೆ 'ನಾನು' ಎಂದು ಆತನ ದೇಹ-ಮನ-ಇಂದ್ರಿಯಗಳು ಮೊದಲಾದುವೆಲ್ಲ ಎನಿತೆನಿತೂ ಇಣಿರೆಕ್ಕಕೂಡದು, ಇಂತಹ ಸದೃಢ ವ್ರತ ವನ್ನು ಆಚರಿಸಿದರೆ ಮಾತ್ರ ಆತನಿಗೆ ಶಿವನ ಪ್ರತ್ಯಕ್ಷ ದರ್ಶನಯೋಗವು ಸಮೀಪಿಸಹತ್ತುವದು ಅಂತೇ ಇದಕ್ಕೆ ಸಾಮೀಪ್ಯ ಮೋಕ್ಷವೆನ್ನುವರು. ಈ ಕಾಲದಲ್ಲಿ ಪ್ರಸಾದಿಯು ತನ್ನಲ್ಲಿ "ಶಿವನೇ ಇರುವನು" ಎಂದು ಭಾವಿಸಿರುವನೇ ಹೊರತು, ಅವನಿಗೆ ಇನ್ನೂ ಪ್ರತ್ಯಕ್ಷ ಶಿವದರ್ಶನವು ( ಸಾಕ್ಷಾತ್ಕಾರವು ) ಆಗುವದಿಲ್ಲ.

೩ **ಸಾರೂಪ್ಯ ಮೋಕ್ಷ**:— ಸರೂಪ+ಯ= ಸಾರೂಪ್ಯ. ಅಂದರೆ ಭಕ್ತನು ತಾನು ಪ್ರತ್ಯಕ್ಷ ಶಿವರೂಪವನ್ನೇ ಧರಿಸಿಬಿಡುವದು. ಇದೇನೂ ಸಾಧಾರಣ ಸಂಗತಿಯಲ್ಲ. ಬಹಿರಂಗದಲ್ಲಿ ಬರಿಯ ವೆಗ್ಗಳವಾಗಿ ವಿಭೂತಿ

ರುದ್ರಾಕ್ಷಿ ಕಾವಿ ಬಟ್ಟೆಗಳನ್ನು ಧರಿಸಿದರೆ ಆಗದು. ಅದು ಅರಿಯದ ಮುಗ್ಧರನ್ನು ವಂಚಿಸುವ ನಟನೆ ಮಾತ್ರ. ನಿಜವಾದ ಸಾರೂಪ್ಯವು, ಶಿವನ ಗುಣಗಳನ್ನು ತನ್ನಲ್ಲಿ ಸಂಗ್ರಹಿಸಿಕೊಂಡರೆ ಮಾತ್ರ ಲಭಿಸುವದು. ಶಿವನ ಗುಣಗಳು ಅಪ್ರತಿಮ ( ಲೋಕೋತ್ತರ ) ವಾಗಿರುವವು. (೧) ಜಗತ್ತಿಗೆಲ್ಲ ಬೇಕಾದುದನ್ನು ಅವನು ಏನೊಂದರ ಅಪೇಕ್ಷೆ ಇಲ್ಲದಲೆ, ಹಾಗೂ ಬೇಡುವ ಪೂರ್ವದಲ್ಲಿಯೇ ತಾನೇ ಅರಿತುಕೊಂಡು ಪೂರಯಿಸುವನು. ನೋಡಿರಿ ಇದೆಂತಹ ದಯಾಲುತ್ವವು! ಆದುದರಿಂದ ಮೊದಲು ಸಾರೂಪ್ಯ ಪಡೆಯಬೇಕೆಂಬುವವನಲ್ಲಿ ದಯಾಲುತ್ವ ( ಅಪ್ರತಿಮ ಕರುಣೆಯು ) ಒಡಮೂಡಬೇಕು. (೨) ಶಿವನು ಸುಮ್ಮಸುಮ್ಮನೆಯೆ ಯಾರಮೇಲೂ ವ್ಯಕ್ತಿವಿಷಯಕ್ಕೆ ಕೋಪವನ್ನಾಗಲಿ ಅನುಗ್ರಹವನ್ನಾಗಲಿ ಮಾಡಲಾರನು. ಪ್ರತಿಯೊಬ್ಬರು ತಮ್ಮ ಕರ್ಮ ಫಲವನ್ನು ತಾವೇ ಅನುಭೋಗಿಸುವರು. ಅವಕ್ಕೆ ಅವರೇ ಹೊಣೆಗಾರರು ಆ ಕಾರಣ ಸಾರೂಪ್ಯನಿಗೆ ಎಲ್ಲಿಯೂ ಸಹಾನುಭೂತಿಯು ಇರಬೇಕಾಗುವದು (೩) ಸಾರೂಪ್ಯಗಾರನು ಯಾರನ್ನೂ ಇಳಿಸಿಯಾಗಲಿ ಏರಿಸಿಯಾಗಲಿ ಮಾತಾಡಕೂಡದು. ಯಾರು ತನಗೆ ಏನೆಂದರೂ ಅದನ್ನು ಲೆಕ್ಕಿಸಬಾರದು. ಸ್ತುತಿ ನಿಂದೆಗಳನ್ನು ಸಮಭಾವದಲ್ಲಿಯೇ ಕಾಣಬೇಕು ಜನರ ತಪ್ಪುಗಳನ್ನೆಲ್ಲ ದೊಡ್ಡ ಮನಸ್ಸಿನಿಂದ ಕ್ಷಮಿಸಬೇಕು. (೪) ಅವನು ಎಲ್ಲರಲ್ಲಿಯೂ ಪರಿಪೂರ್ಣ ವಾತ್ಸಲ್ಯವುಳ್ಳವನಾಗಿಂಬೇಕ. ಯಾವಾಗಲೂ ಜನರಿಗೆ ಒಳಿತನ್ನೇ ಬಯಸಬೇಕು. ಕೆಡಕುಮಾಡಿದವರಿಗು ಸಹ ಹಿತವನ್ನೇ ಮಾಡಬೇಕು. ಎಲ್ಲರನ್ನೂ ಸಮದೃಷ್ಟಿಯಿಂದಲೇ ಕಾಣಬೇಕು ಇತ್ಯಾದಿ. ಈ ವಿಧದ ಗುಣ ಸಾದೃಶ್ಯವೇ ಸಾರೂಪ್ಯವೆನಿಸುವದು. ಇಂತಹನೆ ಶಿವನ ದರ್ಶನ ಪಡೆಯಲಿಕ್ಕೆ ಯೋಗ್ಯನಾಗುವನು. ತನ್ನಲ್ಲಿದ್ದಂತೆಯೇ ಎಲ್ಲ ಜನರಲ್ಲಿಯೂ ಪ್ರಾಣಿಗಳಲ್ಲಿಯೂ ಸಹ ಶಿವನಿರುವದನ್ನು ಪ್ರಸಾದಿಯು ಮನಗಂಡು, ತದನುಸಾರ ವರ್ತಿಸಿದರೆ ಅವನೇ ಪ್ರಾಣಲಿಂಗಿಯಾಗುಲಿವನು. ಈ ಪ್ರಸಾದಲಿಂಗಿಯೇ ಸಾರೂಪ್ಯ ಮೋಕ್ಷ ಹೊಂದಲು ಅರ್ಹನು.

**೪ ಸಾಯುಜ್ಯ ಮೋಕ್ಷಃ—** ಸಯುಜ+ಯ = ಸಾಯುಜ್ಯ. ಇದು ಯುಜ್ ( ಕೂಡು, ಬೆರೆ ) ಧಾತುವಿನಿಂದ ಹುಟ್ಟಿರುತ್ತವೆ. ಯೋಗ ಶಬ್ದವಾದರೂ ಯುಜ್ ಧಾತುವಿನಿಂದಲೇ ಹುಟ್ಟಿರುವದು. ಆದುದರಿಂದ

ಯೋಗ ಪಡೆಯುವದೂ ಸಾಯುಜ್ಯಮೋಕ್ಷ ಸಂಪಾದಿಸುವದೂ ಒಂದೇ ಎನ್ನಲು ಅಡ್ಡಿ ಇಲ್ಲ. ಯೋಗವು ಮುಖ್ಯವಾಗಿ ಪಾತಂಜಲಯೋಗವೆಂದೂ ಶಿವಯೋಗವೆಂದೂ ಎರಡು ವಿಧವೆನ್ನಬಹುದು. ಪಾತಂಜಲ ಯೋಗವು ಬಹುಕಠಿಣವಾದುದೂ ಅನಿಶ್ಚಿತವೂ ಸರ್ವದಾ ಸಹಜ ಆನಂದವನೀಯಲಾರದಂತಹದೂ ಆಗಿರುವದರಿಂದ ಪ್ರಮಥರು ಅದನ್ನು ಧಿಕ್ಕರಿಸಿರುವರು. ನಮ್ಮ ವೀರಶೈವರದು ಶಿವಯೋಗವು. ಅದು ಷಟ್ಸ್ಥಲ ಮಾರ್ಗದಿಂದಲೇ ಪ್ರಾಪ್ತವಾಗತಕ್ಕದು. ಪ್ರಸಾದದೊಡಗೂಡಿ ಯೊಂದಾಗುವದೇ ಶಿವಯೋಗ ( ಸಾಯುಜ್ಯಮೋಕ್ಷ ) ವು. ಸಾರೂಪ್ಯವಡೆದವನು ಮತ್ತೂ ಮುನ್ನಡೆಯುತ್ತ ವನಸ್ಪತಿಕೋಟಿ ಖನಿಜ ಕೋಟಿಗಳಲ್ಲಿ ಸಹ ಶಿವನ ( ಪರಮಾತ್ಮನ ) ವಾಸ್ತವ್ಯವಿರುವದನ್ನು ಕಂಡುಕೊಳ್ಳುವನು. ಇಡೀ ವಿಶ್ವದಲ್ಲೆಲ್ಲ ಒಳಹೊರಗೆ ಶಿವನೇ ಪರಿಪೂರ್ಣವಾಗಿ ಬೆಳಗುತ್ತಿರುವದನ್ನು ಕಾಣುವನು. ತನ್ನಲ್ಲಿದ್ದ ಅಂತರಾತ್ಮನೇ ಇಷ್ಟೆಲ್ಲವನ್ನು ವ್ಯಾಪಿಸಿ ಬೆಳಗುತ್ತಿರುವನೆಂದು ಮನಸಾ ಅರಿದು ದೃಢವಾಗಿ ನಂಬುವನು. ಇಂತು ಅನಂತವಾಗಿಯೂ ಅಖಂಡವಾಗಿಯೂ ಪರಂಜ್ಯೋತಿ ಸ್ವರೂಪದಿಂದ ಸುಪ್ರಕಾಶದಿಂದ ಶೋಭಿಸುತ್ತಿರುವದೇ ( ಸಾಯುಜ್ಯ ) ಮೋಕ್ಷವು. ಇಂತಹ ಸ್ಥಿತಿಗೆ ಮುಟ್ಟಿದವನೇ ಸತ್ಯಶರಣನು. ಮಹಾ ಜಂಗಮನು. ಶಿವಯೋಗೀಶ್ವರನು. ಸೇವ್ಯ ( ಸಹಜ ) ಪ್ರಸಾದಿಯು. ಪರಮ ಹಂಸನು. ಸದ್ಗತಿ ( ಸತ್ತನ್ನು ಹೊಂದುವದು ) ಎಂದರೂ ಇದೇ ಸಾಯುಜ್ಯಪಡೆಯುವದು.

**ಕೈವಲ್ಯಮೋಕ್ಷಃ—** ಕೇವಲ+ಯ=ಕೈವಲ್ಯ. ಶಿವನೊಳಗೆ ಬೆರೆದ್ದು ತೀರ ಆತನಂತೆಯೇ ಆಗಿ, ಏಕರೂಪತೆ ಧರಿಸುವದೇ ಕೈವಲ್ಯವು. ಮೂಲಶಿವತತ್ವವಾವುದೋ ಏಕೀಭವಿಸಿದ ವಸ್ತುವಾವುದೋ ಎಂಬುದು, ತಿಲಮಾತ್ರವೂ ತಿಳಿಯದಂತೆ ಸಮರಸವಾಗಿ ಬಿಡಬೇಕು. ಇದನ್ನು ವೀರಶೈವರು ಸಾಮರಸ್ಯವೆಂದಿರುವರು. ಅಂಗಲಿಂಗಗಳು ಬೆರೆದು ಕೇವಲ ಒಂದೆಯೇ ಆಗಿ ಹೋಗುವದೇ ಲಿಂಗಾಂಗ ಸಾಮರಸ್ಯವು. ಐಕ್ಯನು ಈ ವಿಧವಾಗಿ ವಿಶ್ವನಾಥನಲ್ಲಿ ( ಮಹಾಲಿಂಗದಲ್ಲಿ ) ಸಮರಸಹೊಂದಿ ಕೈವಲ್ಯ ಮೋಕ್ಷಪಡೆಯುವನು. ಸಾಯುಜ್ಯದಲ್ಲಿ ಬೆರೆದ ವಸ್ತುವಿನ ಅಹಂಕಾರ ಬುದ್ಧಿ ( ಶಾರೀರಕ ಮಾನಸಿಕ ) ಮೊದಲಾದವು ಆರಂಭದಲ್ಲಿ ಸಂಪೂರ್ಣ

ವಳಿಯುದಿದ್ದರೂ ಕೊನೆಕೊನೆಗೆ ಅವು ಇಲ್ಲದಂತಾಗಿರುವವು. ಈ ಕೇವಲಿಯಲ್ಲಿ ( ಕೈವಲ್ಯಪಡೆದವರಲ್ಲಿ ) ಯಂತೂ ಅವುಗಳಸುಳಿವು ಸಹ ಉಳಿಯದೆ ತೀರ ವಿಲೀನವಾಗಿರುವವು.

ಶ್ರೀ ನಿಜಗುಣ ಶಿವಯೋಗೀಶ್ವರರು ಕೈವಲ್ಯ ಪದ್ಧತಿ ( ಮೋಕ್ಷದ ದಾರಿ ) ಎಂಬದೊಂದು ಗ್ರಂಥಬರೆದಿದ್ದಾರೆ. ಅದರಲ್ಲಿ ಮೋಕ್ಷವಡೆಯುವದಕ್ಕೆ ಅವಶ್ಯವಾದ ಎಲ್ಲ ಸಂಗತಿಗಳನ್ನು ಕುರಿತು, ಬಲು ಸರಸಾಗಿ ವರ್ಣಿಸಿರುವರು. ಆ ಗ್ರಂಥವು ಸರ್ವ ಮಾನ್ಯವಾದುದಾಗಿದೆ. ಶಕ್ಯವಿದ್ದವರೆಲ್ಲರೂ ಅದನ್ನು ನೋಡಬಹುದು. ಇದರಂತೆಯೇ ಅವರು ಮತ್ತೂ ಅತ್ಯುತ್ತಮವಾದ ಬೇರೆಗ್ರಂಥಗಳನ್ನೂ ಬರೆದಿರುವರು.

ಇಲ್ಲಿಗೆ ಮೋಕ್ಷದ ಮೇಲಿನ ಅಂತಸ್ತಿಗೆ ಮುಟ್ಟುವ ಪಾವಟಿಗೆಗಳು ತೀರಿದವು. ಜೀವಾನುಭವ ಚಕ್ರದಿಂದ ಮುಕ್ತನಾಗಿ, ಶಾಶ್ವತವಾದ ಪರಮೋಚ್ಚಸುಖವನ್ನು ಹೊಂದಿ ಧನ್ಯನಾಗುವನು.

ಮೋಕ್ಷದ ಮೇಲಿನ ವರ್ಣನವನ್ನು ನೋಡಿದರೆ, ನಮ್ಮ ಪ್ರಮಥರು ಅದೆಷ್ಟು ಕೌಶಲ್ಯದಿಂದ ನಮ್ಮ ಷಟ್‌ಸ್ಥಲ ಜ್ಞಾನಮಾರ್ಗವನ್ನು ನಿರ್ಣಯಿಸಿರುವರೆಂಬುದು, ಕಣ್ಣೆದುರು ಮೂರ್ತಿಮಂತಾಗಿ ನಿಲ್ಲದೆ ಇರದು. ಇಂತಹ ಅತ್ಯುತ್ತಮ ಧರ್ಮದಲ್ಲಿ ವೀರಶೈವರು ಜನ್ಮಪಡೆದು, ಅದರ ಬೆಲೆಯನರಿಯದೆ ಸುಮ್ಮಸುಮ್ಮನೆ ತಮ್ಮ ಜನ್ಮವನ್ನು ಹಾಳುಮಾಡಿಕೊಳ್ಳುವದನ್ನು ನೋಡಿದರೆ, ಅದಾರಿಗೆ ವ್ಯಸನವಾಗದೆ ಇರುವದು ? ಪರಸಮಾಜದ ಅನೇಕಜನ ಬಲ್ಲವರು ನಮ್ಮ ವಚನಶಾಸ್ತ್ರವನ್ನು ಒಳಿತಾಗಿ ಓದಿ ಚರ್ಚಿಸಿ, ಅದರ ಸ್ವಾರಸ್ಯವನ್ನು ಕಂಡು ಹರ್ಷಭರಿತರಾಗಿ 'ಅಹಹ ಇಂತಹ ಶ್ರೇಷ್ಠಮತದಲ್ಲಿ ಹುಟ್ಟಿಯೂ ಅದರ ಪ್ರಯೋಜನವನ್ನುಹೊಂದದೆ, ದೇಹಬಿಡುವ ದುರ್ದೈವಿಗಳನೇನೆನ್ನಬೇಕು ! " ಎಂದು ಉದ್ಗಾರವೆತ್ತಿರುವರು. ಇದರಿಂದಲಾದರೂ ಶಿವಭಕ್ತರು ಕಣ್ದೆರೆಯುವರೇ !

ಹೀಗೆ ಲಿಂಗಾಂಗಿಗಳಿಗೆಲ್ಲ ಸಾಮಾನ್ಯವಾಗಿ ಹೇಳುವದು ನಮ್ಮೊಳಗಿನ ಬಹುಜನ ಶಿಷ್ಟರಿಗೆ ಮನಸ್ಸಿಗೆ ಬರುವದಿಲ್ಲ. ಅವರು ಅನ್ನುವದೆಂದರೆ:-

"ಸಮಾಜದಲ್ಲಿ ಬಹುಜನ ಸಮೂಹವು ಎಂದಾದರೂ ಅಜ್ಞಾನ ಪಂಕ
ದಲ್ಲಿ ಸಿಕ್ಕುಬಿದ್ದಿರುವದು ಸ್ವಾಭಾವಿಕವು.. ಅವರಿಗೆ ಹೇಗೆ ಈ ಜ್ಞಾನ
ವಿಷಯುವು ಸಾಧ್ಯವಾದೀತು ? ಬಲ್ಲಿದರಾದ ಅಲ್ಪ ಸ್ವಲ್ಪ ಜನರಿಗೇ ಅದು
ಸಾಧ್ಯವು." ಇದು ಕಣ್ಣಲ್ಲಿ ಧೂಳವನೆಸೆಯುಲು ಮಾತ್ರ ಒಳಿತಾಗಿದೆ.
ಆದರೆ ಇದಕ್ಕೆ ಪ್ರತಿಯಾಗಿ ಹೀಗೆ ಕೇಳಬಹುದು. "ಆ ಸಾಮಾನ್ಯ ಜನ
ಸಮೂಹವು ಅದೆಂದು ಮೋಕ್ಷಕ್ಕೆ ಭಾಜನವಾಗುವದು ?" ಈಗ ನಡೆದ
ರೀತಿಯಿಂದಲೇ ನಡೆದರೆ ಆ ಕಾಲವು ಬರುವ ಸಂಭವವೇ ಇಲ್ಲ.
ಏಕೆಂದರೆ ಬಸವಾದಿ ಪ್ರಮುಥರಾಗಿ ಈಗ ಎಂಟುನೂರು ವರ್ಷಗಳಾದವು
ಆದರೂ ಇನ್ನೂ ಎಳ್ಳಷ್ಟು ಸಹ ಪ್ರಗತಿಯಾಗಿರುವದಿಲ್ಲ. ಅದೂ ಅಲ್ಲದೆ
ತಿರುಗಿ ಪರಾಗತಿ ಮಾತ್ರ ಕಲ್ಪನಾತೀತವಾಗಿ ಆಗಿರುವುದು. ನಮ್ಮ ಗುರು
ವರ್ಗದವರಿಗೆ, ಭಕ್ತರು ನಿಜವಾಗಿ ಸುಧಾರಣೆಹೊಂದುವುದು ಬೇಕೇ? ಇಲ್ಲ
ಅವರಿಗೆ ಬರಿಯು ಮುಗ್ಧ ಭಕ್ತಿಯನ್ನು ಮಾತ್ರ ಕಲಿಸಿ, ತಮ್ಮ ಬೇ
ಯನ್ನು ಬೇಯಿಸಿಕೊಂಬುವದೇ ಒಳಿತು ತೋರುತ್ತದೆ. ಉಪಾಯವಿಲ್ಲ
ಭಕ್ತರು ತಾವೇ ತಮ್ಮ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳಬೇಕ
"ನಾವು ವೀರಶೈವರು, ಲಿಂಗಧಾರಿಗಳು ಆಗಿಯೂ ಕೂಡ, ಮೋಕ್ಷ
ಹೆಣಗಾಡದೆ ಹೋದರೆ, ಅಲಿಂಗಿಗಳಾದವರು ಅದಾವ ಗತಿಯನ್ನೈದಬೇಕ
ಲಿಂಗಧರಿಸಿದುವರ ಪ್ರಯೋಜನವೇನು ? ಪ್ರತಿಯೊಂದು ಮನೆಗೆ ಸ್ವತಂ
ಗುರುಗಳಿದ್ದು ಸಹ ಇದು ಶಕ್ಯವಾಗಬಾರದೆ ? ಲಿಂಗಧರಿಸಿದ ಮೇಲೆ, ಸ
ಪ್ರಯತ್ನದಿಂದ ಅದರ ಫಲವನ್ನು ಪಡೆಯುವದು ವಿಹಿತವೆಂಬುದು ಸ್ಪಷ್ಟ
ಅದೆ. ಹಾಗೆ ಮಾಡದೆ ಸುಮ್ಮನೆ ಲಿಂಗವನ್ನು ಧರಿಸಿಕೊಂಡು ಭ
ಳಂತೆ ವರ್ತಿಸಿದರೆ ಅವರು ಅತ್ಯಂತ ತಿರಸ್ಕರಣೀಯರು. ಶ್ರೀ ಬಸವ
ನವರು ಅವರನ್ನು—

"ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ
ಕಣ್ಣೆ ಬರಿಯ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ"

ಎಂತಲೂ

"ಜಲುಮೆಯಿಂದ ಭಕ್ತನ ಮಾಡಹೋದರೆ, ಕೆಟ್ಟವನೆಂತು
ಸದ್ಭಕ್ತನಹನಯ್ಯಾ ಕೂಡಲ ಸಂಗಮದೇವಾ." ಎಂತಲೂ

ತಮ್ಮ ಅನೇಕ ವಚನಗಳಲ್ಲಿ ಉದ್ಗಾರ ತೆಗೆದಿದ್ದಾರೆ. ಇದು ಭಕ್ತರಿಗಾಗಲಿ
ಗುರುವರ್ಗಕ್ಕಾಗಲಿ ಶೋಭಿಸುವದೇ ! ಇರಲಿ. ಇನ್ನು ಮೋಕ್ಷಕ್ಕೆ
ಸಂಬಂಧಿಸಿದ ಕೆಲ ವಿಚಿತ್ರ ಕಲ್ಪನೆಗಳು ಇಲ್ಲಿ ವಿಚಾರಿಸಲ್ಪಡುವವು. ಅವು
( ಅ ) ಸದೇಹ ಮೋಕ್ಷ, ವಿದೇಹ ಮೋಕ್ಷ. ( ಬ ) ಲಿಂಗದೊಳ
ಗಾಗುವದು. ( ಕ ) ಧ್ಯಾನಧಾರಣ ಸಮಾಧಿಗಳು.

( ಅ ) ಸದೇಹ ಮೋಕ್ಷವೆಂದರೆ— ( ೧ ) ದೇಹ ಸಹಿತವಾಗ
ಮೋಕ್ಷಪಡೆಯುವದು. ಇದೊಂದರ್ಥ. ( ೨ ) ದೇಹವಿರುವಾಗಲೇ ಮೋಕ್ಷ
ವನ್ನನುಭವಿಸುತ್ತಲಿರುವದೆಂಬುದು ಎರಡನೆಯರ್ಥ. ಇವುಗಳಲ್ಲಿ ಮೊದ
ಲನೆಯದು ತೀರ ಸುಳ್ಳು. ಅದು ಮೇಲೆ ಹೇಳಿದ ವಿಮಾನದಲ್ಲಿ ಕುಳಿತು
ಸಾಗುವ ಸಾಲೋಕ್ಯ ಮೋಕ್ಷದ ಕಥೆಯನ್ನು ಕೇಳಿ ಕೇಳಿ ಉದ್ಭವಿಸಿರು
ತ್ತದೆ. ದೇಹವನ್ನು ಇಲ್ಲಿಯೇ ತ್ಯಜಿಸತಕ್ಕದ್ದು. ಅದು ಭೂಮಿಯೊಳಗೆ ಮಣ್ಣಿ
ನಲ್ಲಿಯೇ ಬೆರೆದು ನಿಲ್ಲುವಂತಹದಾಗುವದು. ಈ ಸಟೆಯು ಉದ್ಭವಿಸಿ
ದಂತೆಯೇ ಮತ್ತೆ ಎರಡು ಮಾತುಗಳು ಇದರ ಅಂಗಭೂತವಾದವು
ಗಳು ಕೇಳಬರುವವು. ಒಂದು ಮೇಲಿಂದ ಮೋಕ್ಷಕ್ಕೆ ಹೋಗತಕ್ಕ
ಮಹಾ ಪುರುಷರು ವಿಭೂತಿಯ ಗಟ್ಟಿಯನ್ನು ಚೆಲ್ಲಿದುದು. ಇನ್ನೊಂದು
ಅಂತಹರೇ ಹೋಗುವಾಗ ತಾಳದ ಜೋಡು ಒಗೆದರು ಇವೆರಡೂ ತೀರ
ಕಾಲ್ಪನಿಕಗಳೇ ಹೊರತು ನಿಜವಾದವಲ್ಲ. ಏಕೆಂದರೆ ಮೋಕ್ಷಹೊಂದು
ವುದರಲ್ಲಿ ಮೇಲೆಲ್ಲಿಯೂ ಹೋಗತಕ್ಕದ್ದಿರುವದಿಲ್ಲ. ಅಂದಮೇಲೆ ಧೂಳತ
ರಾಗಲಿ, ತಾಳಗಳಾಗಲಿ ಮೇಲಿಂದ ಅವು ಹೇಗೆ ಬೀಳುವವು. ಆದರೆ
ಜನರಲ್ಲಿ ಒಂದು ರೀತಿ ಭಕ್ತಿ ಚೈತನ್ಯವನ್ನು ಉದ್ಭೂತಗೊಳಿಸುವ ಸದು
ದ್ದೇಶದಿಂದ ಪ್ರೇರಿತರಾಗಿ, ಜಾಣರಾದವರು ಹಾಗೆ ಹುಟ್ಟಿಸಿ ( ಕಲ್ಪಿಸಿ )
ಹೇಳಿರುವರು. ವಿಭೂತಿಯ ಧೂಳತ ಬಿದ್ದಿತೆನ್ನುವವರಲ್ಲಿ, ಜನರು ಮಹಾ
ವಿಭೂತಿತ್ವ ಪಡೆಯಬೇಕೆಂಬ ನಿರೋಪವನ್ನು ಭಕ್ತರಿಗೆ ಆ ಮೋಕ್ಷ
ಪಡೆದ ಸತ್ಪುರುಷರು ಕೊಟ್ಟಿರುವರೆಂಬುದು ಸೂಚಿತವಾಗುತ್ತದೆ. ಅದ
ರಂತೆ ತಾಳಾ ಕಟ್ಟಿಯುತ್ತ ( ನಾಮ ಸಂಕೀರ್ತನೆ ಮಾಡುತ್ತ ) ನಾದ
ಬ್ರಹ್ಮದಲ್ಲಿಯೇ ನಿಮಗ್ನರಾಗಿ ಉನ್ನತಿ ಪಡೆದವರು “ನೀವಾದರೂ ನಮ್ಮಂತೆ
ಯೇ ದೇವಭಜನಾಸಕ್ತರಾಗಿ ನಾದ ಬ್ರಹ್ಮದಲ್ಲಿ ಬೆರೆದು ದೇವರೊಳೈಕ್ಯ
ಪಡೆಯಿರಿ” ಎಂಬ ಆಕಾಂಕ್ಷೆಯನ್ನು ವ್ಯಕ್ತಪಡಿಸಿದರೆಂಬುದನ್ನೇ ಇಲ್ಲಿಯ

ಸಾಮಾನ್ಯ ಮಾನವರ ಮನದಲ್ಲಿ ಒತ್ತಿಮೂಡಿಸಿದರೆಂಬುದು ವ್ಯಕ್ತವಾಗುತ್ತದೆ. ಈ ಬಯಕೆಗಳು ಇಷ್ಟವಾದವುಗಳೇ ಉಂಟು. ಅದರಂತೆ ಅವುಗಳ ಸುಪರಿಣಾಮವಾದರೂ ಜನರಲ್ಲಿ ಒದಗಿದ್ದುದು ಕಂಡುಬರುತ್ತದೆ.

ಸದೇಹ ಮೋಕ್ಷದ ಎರಡನೆಯ ಅರ್ಥವು ಮಾತ್ರ ಸತ್ಯವಾದುದಿರುವುದು. ಭಕ್ತನು ತನ್ನ ದೇಹವಿರುವಾಗಲೇ ಪ್ರಜ್ಞಾನವನ್ನು ಪಡೆದು ತಾನು (ಜೀವ) ಶಿವ ಜಗತ್ತು ಈ ಮೂರರ ಸತ್ಯ ಸ್ವರೂಪವನರಿಯುವನು. ಅವೆಲ್ಲ ಕೇವಲ ತನ್ನ ಸ್ವರೂಪವೇ ಇರುವವೆಂಬುವನ್ನು ಮನಗಾಣುವನು. ಆಗ ಅವನಿಗೆ ಬ್ರಹ್ಮಾನಂದ (ಲಿಂಗಾನಂದ) ಸುಖವು ಪ್ರಾಪ್ತವಾಗಿ, ಅದರಲ್ಲಿ ಬೆರೆದು ಏಕ ಸ್ವರೂಪನಾಗುವನು. ಮುಂದೆ ದೇಹ ಬಿದ್ದಮೇಲಾದರೂ ಈ ಸ್ಥಿತಿಯು ಸ್ಥಿರವಾಗಿಯೇ ಉಳಿಯುವದು. ಆಗ ಅವನ ಜೀವಭಾವವು ಸಂಪೂರ್ಣ ಅಳಿದುಹೋಗಿ ಪರಮಾತ್ಮಸ್ವರೂಪವು ಅಳವಟ್ಟಿರುವದು. ಇದೇ ಸ್ವಾಭಾವಿಕ ಮೋಕ್ಷವು.

ವಿದೇಹ ಮೋಕ್ಷ– "ದೇಹವಿದ್ದಾಗ ಮೋಕ್ಷ ಎಂಬುದು ಎಂದೆಂದೂ ಲಭಿಸಲಾರದು. ಸತ್ತಮೇಲೆಯೇ ಅದು ದೊರೆಯುವ ವಸ್ತುವು" ಎಂದು ಕೆಲವರು ಅಜ್ಞಾನದಿಂದ ನಂಬಿರುವರು. ಆದರೆ ಇದು ತಪ್ಪು ತಿಳವಳಿಕೆಯು. ಜೀವದಿಂದಿರುವಾಗಲೇ ಮೋಕ್ಷವು ಸಂಪಾದಿಸತಕ್ಕ ವಸ್ತುವೇ ಹೊರತು ಸತ್ತಮೇಲಲ್ಲ ಎಂಬುದು ನಿಶ್ಚಿತವು. "ಸತ್ತಹೊರತು ಸ್ವರ್ಗ (ಸ್ಥೂಲ ರೀತಿಯ ಮೋಕ್ಷ) ಕಾಣದು" ಎಂಬ ಗಾದೆಯಿಂದ ಇದು ತಲೆದೋರಿದಂತೆ ಕಾಣುತ್ತದೆ. ಆದರೆ ಜೀವಿಸಿದಾಗಲೇ ಮಹಾಜ್ಞಾನಯುತನಾಗಿ ತದನುಸಾರ ಆಚರಿಸಿ, ಮೋಕ್ಷಪಡೆಯುವವರ ವಿನಾ ಬೇರೆ ಜನರು ಸತ್ತರೆ ಅವರಿಗೆಂದೂ ಮೋಕ್ಷವಾಗದು. ಅವರವರ ಧರ್ಮಾನುಸಾರವಾಗಿ ಜನ್ಮ ಧರಿಸಿ ಪುನಃ ಈ ಕರ್ಮ ಭೂಮಿಗೆ ಬರಲೇಬೇಕು.

ಹೀಗೆ ಹೇಳಿದರೆ ಒಂದು ಶಂಕೆಯು ಮುಂದೆ ಬರುವದು. ಅದು "ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ" ಎಂಬ ಆಗಮದ ಗತಿಯೇನು? ಎಂಬುದು. ಇದಕ್ಕೆ ಸಮಾಧಾನವೇನೆಂದರೆ— ಲಿಂಗಧಾರಿಯು ಲಿಂಗದ ನೆನಹಿನಲ್ಲಿಯೇ ಹೆಚ್ಚಾಗಲಿ ಕಡಿಮೆಯಾಗಲಿ ಇರುವದ

ರಿಂದ, ಅವನು ಪುನಃ ಪುನಃ ಮೋಕ್ಷ ಪಡೆವವರೆಗೆ ಲಿಂಗಾಯತ ಮತದಲ್ಲಿಯೇ ಜನ್ಮಿಸುವನು. ಅವು ಅನೇಕವಾದರೂ ಅವೆಲ್ಲ ಒಂದೇ ಜನ್ಮವೆಂದು ತಿಳಿಯಬೇಕು. ಅವೆಲ್ಲ ಲಿಂಗಧಾರಿ ಜನ್ಮವೇ ಆಗಿರುತ್ತವೆ. ಮನುಷ್ಯನು " ಅರಿಯನದೆಂತಿರಬೇಡ ಮೂರುದಿನಂ " ಎಂದು ಚಿಂತಾಕ್ರಾಂತನಾಗಿರುತ್ತಾನೆಂಬುದರಲ್ಲಿ ಎಲ್ಲರೂ ಬಲ್ಲರು. ಇಲ್ಲಿ ಹುಟ್ಟು ವುದೊಂದು ದಿನ, ಹೋಗುವದೊಂದು ದಿನ, ಎಷ್ಟೇಕಾಲವಿದ್ದರೂ ಅವೆಲ್ಲ ಒಂದೇದಿನ. ಹೀಗೆ ಮೂರು ದಿನವೆಂದು ಹಿಡಿಯುವದು ವಾಡಿಕೆಯಾಗಿದೆ. ಅದೇ ಮೇರೆಗೆ ವೀರಶೈವ ಮತದಲ್ಲಿ ಎಷ್ಟೇಸಾರೆ ತಿರುಗಿತಿರುಗಿ ಬಂದರೂ ಅದೆಲ್ಲ ಒಂದೇ ಒಂದೇ ಜನ್ಮವೆನಿಸುವದು. ಅವನು ಬೇರೆ ಜನ್ಮಕ್ಕೆ ಎಂದೆಂದೂ ಹೋಗುವದಿಲ್ಲ ಎಂಬುದನ್ನೇ ಆ ಆಗಮ ವಚ ನವು ಹೇಳುವದಲ್ಲದೆ, ಅವನು ಅದು ಹೇಗೆ ನಡೆದರೂ ವರ್ತಮಾನ ಜನ್ಮದಲ್ಲಿಯೇ ಅವರಿಗೆ ಮೋಕ್ಷವಾಗುವದೆಂಬ ಭ್ರಾಂತಿಗೆ ಯಾರೂ ಬೀಳ ಬಾರದು.

( ಬ ) ಲಿಂಗದೊಳಗಾಗುವದು— ಅಯ್ಯಗಳು ತೀರಿಕೊಂಡರೆ "ಅವರು ಲಿಂಗದೊಳಗಾದರು" ಎಂದು ಹೇಳುತ್ತ ಅವರ ಸಮಾಧಿಯ ಮೇಲೆ ಗದ್ದುಗೆಯನ್ನು ಕಟ್ಟಿಸಿ ಅದರ ಮೇಲೆ ಲಿಂಗಬಸವಣ್ಣಗಳನ್ನು ಸ್ಥಾಪಿಸುವರು. ಇಲ್ಲಿ ಒಂದು ಮಹತ್ವದ ಪ್ರಶ್ನೆಯುದ್ಭವಿಸುವದು ಏನೆಂದರೆ–

"ಲಿಂಗಮಧ್ಯೇ ಜಗತ್ ಸರ್ವಂ । ತ್ರೈಲೋಕ್ಯಂ ಸಚರಾ
ಚರಂ ॥ ಲಿಂಗಬಾಹ್ಯತ್ ಪರಂನಾಸ್ತಿ ।
ಎಂದು ಸಿದ್ಧಾಂತಗೊಳಿಸಿದ್ದುದು, ಎಲ್ಲರಿಗೂ ಗೊತ್ತಿದ್ದ ಸಂಗತಿಯು.

ಹೀಗಿರಲು "ಸತ್ತಮೇಲೆ ಲಿಂಗದೊಳಗಾದರು" ಎಂದರೆ ಜೀವಿಸುತ್ತಿದ್ದಾಗ ಎಲ್ಲಿದ್ದರು? ಆಗ ಲಿಂಗದೊಳಗಿರಲಿಲ್ಲವೇ? ಎಂಬ ಆಕಾಂಕ್ಷೆಯೊಡ ಮೂಡುವದು. ಮೇಲಿನ ಶ್ಲೋಕದಂತೆ ಆಗ ಸಹ ಲಿಂಗದೊಳಗೆ ಇದ್ದ ರೆಂದು ಹೇಳುವದು ಯುಕ್ತವಾಗಿದೆ. ಅಲ್ಲದೆ ಸಕಲರ ಹುಟ್ಟು, ಇರವು, ಸಾವು, ಕೈವಲ್ಯವೆಂಬುವೆಲ್ಲ ಲಿಂಗದೊಳಗೆ ನಡೆಯುವವೆಂಬುದಾವರೂ ತಾತ್ವಿಕ ದೃಷ್ಟಿಯಿಂದ ಸಂಸಿದ್ಧವಾದದು. ಆದರೂ ಅರಿತವ ಹರ (ಶರಣ) ಅರಿಯದವ ನರ ಎಂಬ ನಾಣ್ನುಡಿಯಂತೆ, ಕೆಲವರು ನಮ್ಮ ತತ್ವ

ಅರಿತುಕೊಳ್ಳದೆ ಹೋಗುವದರಿಂದ ಲೌಕಿಕದೃಷ್ಟಿಯಲ್ಲಿ ನರರಾಗಿ ಪುನಃ ಭವಕ್ಕೆ ಬರುವರು. ಬಲ್ಲಿದರಾದ ಲಿಂಗಾಂಗಿಗಳಿಲ್ಲದೂ ಕೈವಲ್ಯ ಭಾಜನರೇ! ಅನ್ನಲು ಅಡ್ಡಿ ಇಲ್ಲ. ಈ ಆಯ್ಯನವರ ಹೇಳ್ಪಿಕೆಯನ್ನೇ ಅನುಸರಿಸಿ ಕೆಲ ಜನ ಭಕ್ತರಾದರು ತಮ್ಮ ಪೂಜ್ಯ ಹಿರಿಯರ ಸಮಾಧಿಯ ಮೇಲೆಯೂ ಕಟ್ಟೆಯನ್ನು ಕಟ್ಟಿಸಿ ಮೇಲೆ ಲಿಂಗ ಬಸವಣ್ಣಗಳನ್ನು ಕೂಡ್ರಿಸುವರು. ಆದರೆ ಇದೆಲ್ಲ ಬರಿಯ ಡಂಭಾಚಾರವೇವಿನಾ ಸತ್ಯವಾದುದಲ್ಲ; ಇಂತಹದೇನೂ ಪ್ರಮಥರಿಗೆ ಸಮ್ಮತವಿಲ್ಲ.

(ಕ) ಧ್ಯಾನ-ಧಾರಣ ಸಮಾಧಿಗಳು:— ಪಾತಂಜಲಯೋಗದ ಅಷ್ಟಾಂಗಗಳಲ್ಲಿ ಕೊನೆಯವಾದ ಈ ಧ್ಯಾನ, ಧಾರಣ, ಸಮಾಧಿಗಳನ್ನು ಮಾತ್ರ ಪ್ರಮಥರು ಸ್ವೀಕರಿಸಿದ್ದಾರೆ. ಇವನ್ನಷ್ಟು ತಾಂತ್ರಿಕ ರೀತಿಯಿಂದ ಹೇಳಿ ಈ ವಿಷಯವನ್ನು ಮುಗಿಸುವ.

ಧ್ಯಾನ:— ಯಾವಾಗಲೂ ಲಿಂಗ (ಸುಜ್ಞಾನ) ದ ನೆನಹಿನಲ್ಲಿಯೇ ಇರುವದು ಧ್ಯಾನವೆನಿಸುವದು. ಇದು ಸ್ಥಿರಪಡುವ ಸಲುವಾಗಿಯೇ ಈ ಮುಂಚೆ ಬರೆದ ಸಂಧ್ಯಾನವು ಬಳಿಕೆಗೆ ಬಂದಿರುವದು. ಬರಿಯ ಶಿವ ಶಿವ' ಎಂದರೆ ಅದು ಧ್ಯಾನವಾಗದು. ಜೀವವೊಲ್ಲದೆ ಅಂದಂತಾಗುವದು. ಫಲಕಾರಿಯಾಗದು. ಎಂತಹ ವಿಘ್ನಗಳೊದಗಿದರೂ ಆ ಧ್ಯಾನದಿಂದ ತ್ಯಜಿಸದಂತೆ ದೃಢ ವಿಶ್ವಾಸವಿರಬೇಕಾಗುವದು.

ಧಾರಣ:— ಧ್ಯಾನವು ಭಕ್ತನಲ್ಲಿ ನೆಲೆಗೊಳ್ಳಲಿಕ್ಕೆ ಒಂದು ಉತ್ಕೃಷ್ಟ ಸಾಧನವಾಗಲೆಂದೇ ಪ್ರಮಥರು ಲಿಂಗಧ್ಯಾನವನ್ನು ಏರ್ಪಡಿಸಿದ್ದಾರೆ. ಲಿಂಗಧಾರಿಯು ಸರ್ವಕಾಲದಲ್ಲಿಯೂ ಸುಜ್ಞಾನ ಮಾರ್ಗವಿಡಿದೇ ನಡೆಯುವದು ಅವಶ್ಯವದೆ. ಹೀಗೆ ಮಾಡಿದಾಗಲೇ ಅದು ಧಾರಣವಾಗುವದು. ಭಾಮಾರ್ಗದಿಂದ ಅವನು ದೂರವಿರಲಿಕ್ಕೇಬೇಕು. ಬರಿಯ ಹೊರದೇಹದಲ್ಲಿ ಇಷ್ಟಲಿಂಗವನ್ನು ಧರಿಸಿದಷ್ಟಕ್ಕೇ ಈ ಧಾರಣವು ಒದಗಲಾರದು. ಶುದ್ಧಮನದಲ್ಲಿ ಏಕಾಗ್ರಭಾವನೆಯಿಂದ ಲಿಂಗವನ್ನು ನೆನೆಯುವದರಿಂದಲೇ ಲಭಿಸುವದು.

ಸಮಾಧಿ— ಷಟ್‌ಸ್ಥಲ ಮಾರ್ಗದಲ್ಲಿ ಸರಿಯಾಗಿ ನಡೆದು, ಷಡ್ಲಿಂಗಗಳಲ್ಲಿ ಐಕ್ಯ ನೆರೆಯುವದೇ ಸ್ಥಿರವಾದ ನಿಜಸಮಾಧಿಯು. ಇಂತಹ ಸಮಾಧಿಯೇ ಲಿಂಗಾಂಗಿಗಳಿಗೆ ಒಪ್ಪಿತವಾಗಿದೆ. ಅದನ್ನೇ ಅವರು ಲಿಂಗಾಂಗ ಸಾಮರಸ್ಯವೆನ್ನುವರು. ಷಟ್‌ಸ್ಥಲಗಳ ವರ್ಣನೆಯಲ್ಲಿ ಅದು ವಿಶದವಾಗಿ ಬಂದಿರುವದು ತಮ್ಮೆಲ್ಲರಿಗೆ ಈ ಮೊದಲೇ ತಿಳಿದಿರುವದು ಈಗಿನ್ನೂ ಹೆಚ್ಚಿಗೆ ಬರೆಯುವ ಕಾರಣವಿಲ್ಲ.

---

# ಮಲತ್ರಯಗಳು

(ಲೇಖಕ: — ಶ್ರೀ ಸಿ. ನಾ. ಮಹಂತಣ್ಣವರ. ಹೂಸೂರ.)

---

ಜಗತ್ತಿನ ಸುಶಿಕ್ಷಿತ ರಾಷ್ಟ್ರಗಳೆಲ್ಲ ತಮ್ಮ ಶರೀರದ ಕರ್ಮೇಂದ್ರಿಯ
ಗಳ ಜ್ಞಾನೇಂದ್ರಿಯಗಳ ಹಾಗು ನಖಶಿಖಾಂತವಾದ ಎಲ್ಲ ಶರೀರದ ಪ್ರದೇಶ
ಮಲಗಳನ್ನು ಆರೋಗ್ಯ ದೃಷ್ಟಿಯಿಂದ ಆಗಾಗ್ಗೆ ತೊಳೆದುಕೊಳ್ಳುವದ
ಲ್ಲದೆ, ಇತ್ತಕ್ಕ ಮನೆಯ ಪಾಕಶಾಲೆ, ಭೋಜನಶಾಲೆ, ಕ್ರೀಡಾಶಾಲೆ,
ದೇವತಾರ್ಚನಾಶಾಲೆ, ಪಟ್ಟಶಾಲೆ, ಸ್ನಾನಖಾನೆ ಮೊದಲಾದವುಗಳ ಮಲ
ನವನ್ನು ನಿರ್ಮಲಗೊಳಿಸುತ್ತ ಹಾಸಿಗೆ ಹೊದಿಕೆಗಳನ್ನೂ ಉಡುಪು ತೊಡುಪು
ಗಳನ್ನೂ ಶುಚಿಯಾಗಿಡುತ್ತ, ತೋಟಪಾಟಗಳನ್ನು ಸಹ ಹಸನಾಗಿಸು
ದುಂಟು. ಪಂಚಕಮಿಟಿ, ಮ್ಯುನಿಸಿಪಾಲ್ಟಿಗಳ ನಗರಸಭೆಯಾಧಿಕಾರಿಗಳ
ತಮ್ಮ ತಮ್ಮ ಗ್ರಾಮ ಪಟ್ಟಣಗಳ ಸ್ವಚ್ಛತೆಯುತೆಯ ಬಗ್ಗೆ ಹೆಚ್ಚು ಲಕ್ಷ
ಗೊಡುವರು. ಅಂತೆಯೇ ಸುಧಾರಿಸಿದ ರಾಷ್ಟ್ರಗಳ ನಿವಾಸಿಗಳ ಸಾ
ಜನಿಕ ಆಫೀಸ, ಕಾರಖಾನೆ, ಚರ್ಚ ಮೊದಲಾದವು ನಿರ್ಮಲವ
ನಂದನ ವನದಂತೆ ಮನೋಹರವಾಗಿ ಕಂಗೊಳಿಸುವವು. ನಮ್ಮ ಭ
ಖಂಡವು ಆಂಗ್ಲರ ವಶವಾದಂದಿನಿಂದ ಪಟ್ಟಣಗಳ ಸಂಖ್ಯೆಯು ಬೆಳೆ
ಅಲ್ಲಿ ಆಂಗ್ಲಾಧಿಕಾರಿಗಳ ಬಹಿರಂಗದ ನಡೆನುಡಿ ವೇಷಾಡಂಬರಗಳ ಆ
ಕರ್ಷಣವಾಗಿ, ಅವರ ಕೆಲಸ ಮಾಡುವ ಪದ್ಧತಿ, ಅವರಲ್ಲಿರುವ ಸುಶಿ
ಕರ್ತವ್ಯದಕ್ಷತೆ, ಉದ್ಯೋಗಶೀಲತೆ, ನ್ಯಾಯ ನಿಷ್ಠುರತೆಗಳು ನಮ

ಸಾರ್ವತ್ರಿಕವಾಗಿ ಪಸರಿಸದೆ ವೇಷಾಡಂಬರಗಳು ಮಾತ್ರ ಮನೆ ಮಾಡಿಕೊಂಡು ನಿಂತು, ಧರ್ಮನಿಷ್ಠೆಯು ಭ್ರಷ್ಟವಾಗಿ, ಅನಾಚಾರವು ಆವರಿಸಿ, ಸತ್ಯವು ಎತ್ತಲೋ ಹೋಗಿ ಅಸತ್ಯದ ಅನಾಹುತಗಳು ಮುಂದರಿಯಲು ಮಲತ್ರಯಗಳ ಮಲಿನತ್ವವೇ ಕಾರಣವಾಗಿರುವದೆಂದು ಸದು ಹೃದಯಿಗಳಿಗೆ ಸಮನಿಸದೆ ಇರದು.

ಲೋಕಾಚಾರ, ಶ್ರುತ್ಯಾಚಾರ, ಜ್ಞಾನಾಚಾರಗಳಿಗೆ ನಿಜ ನಿರ್ಮಲತ್ವವು ಅವಶ್ಯವಾದದ್ದು. ಮಾನವನು ಬಾಹ್ಯನಿರ್ಮಲತ್ವವನುಂಟು ಮಾಡುವ ಕ್ರಿಯಾಚಾರವನ್ನೇ ಅನುಸರಿಸಿದರೆ ತೀರದು. ಇದರಿಂದ ಆರೋಗ್ಯವು ಮಾತ್ರ ಸಾಧಿಸಬಹುದು. ಶರೀರಾರೋಗ್ಯವು ಅತ್ಯವಶ್ಯವೆಂಬದನ್ನು ಯಾರಿಗೂ ಹೇಳಬೇಕಿಲ್ಲ. ಆದರೆ ಜ್ಞಾನಾಚಾರಕ್ಕೆ ಮಲಭಾವವು ಅತಂಕವಾದದ್ದು. ಬಹಿರಂಗದಲ್ಲಿ ಈ ಶರೀರವನ್ನೂ ವಸ್ತ್ರಗಳನ್ನೂ ಎಷ್ಟು ಹಸನಾಗಿಟ್ಟರೂ ನಿರ್ಮಲನಾಗಲರಿಯನು. ಮಲಭಾವಿಯಾದವನ ಅಂಗವು ಸದಾ ಮಲಿನವೇ ಸರಿ. ಅಂಥವನು ಬಾಹ್ಯಕ್ರಿಯಾದೀಕ್ಷೆಯನ್ನು ಹೊಂದಿದರೂ ಅಂಗದೊಳು ಲಿಂಗವ ಧರಿಸಲು ಯೋಗ್ಯನಲ್ಲ. "ಅಂಗಂ ಮಲಿನಂ ಪ್ರೋಕ್ತಂ ಲಿಂಗಂ ನಿರ್ಮಲಮೇವಚ। ಅಂಗ ಲಿಂಗ ಸಂಯೋಗೇನ ಶಾರವದರಕಂ ವ್ರಜೇತ್"॥ ಎಂಬ ಆಗಮೋಕ್ತಿಯಂತೆ ನಿರ್ಮಲನೂ ನಿರ್ದೇಹಿಯೂ ಆಗದ ಹೊರತು ಲಿಂಗಾಂಗ ಸಾಮರಸ್ಯದ ನಿಜಾನಂದದ ಅನುಭವವು ಆಗದು. ಇದನ್ನರಿತ ವಿಶ್ವಧರ್ಮಿಗಳಾದ ವೀರಶೈವಾಚಾರಿಗಳು ಮಲತ್ರಯಗಳನ್ನು ಮುರಿಯಲು ಮೂರು ದೀಕ್ಷೆಗಳನ್ನು ಮುಂದರಿಸಿದ್ದಾರೆ. ಈ ಜೀವನಿಗೆ ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲಗಳು ಮುಸುಗಿ ಆ ಜೀವನನ್ನು ಅತ್ತಿತ್ತ ಮಿಸುಗದಂತೆ ಕಟ್ಟಿ ಹಾಕಿರುವವು. ವೇಧಾ ದೀಕ್ಷೆಯಿಂದ ಅಣವಾದಿ ಮಲಗಳೂ ಮಂತ್ರ ದೀಕ್ಷೆಯಿಂದ ಮಾಯಾಂಶವೂ ಕ್ರಿಯಾದೀಕ್ಷೆಯಿಂದ ಕಾರ್ಮಿಕಾಂಶವೂ ಕಡೆಗಾಗಿ ನಿಜನಿರ್ಮಲತ್ವವು ನೆಲೆಗೊಳ್ಳುವದು.

"ಅಣವಂಗರ್ಭ ಸಂಬಂಧಂ ತನ್ಮೋಹಂ ಮಾಯಾಮಲಂ।
ಕಾರ್ಮಿಕಂದ್ರವ್ಯ ಸಂಬಂಧಂ ಇತ್ಯೇತೆ ಮಲತ್ರಯಂ॥

ಸ್ತ್ರೀ ಪುರುಷರ ರೇತೋರಕ್ತದಿಂದ ಉದಯಿಸಿದೆನೆಂಬ ಅಭಿಮಾನದ ಮಲಭಾವವೇ ಆಣವ ಮಲವೆನಿಸುವದು.

ತನುಕರಣೇಂದ್ರಿಯದ ಜಡತತ್ವ ಸಮುದಾಯವೇ ತಾನೆಂಬ ಅಭಿಮಾನವೇ ಕಾರ್ಮಿಕ ಮಲವು.

ತಂದೆ ತಾಯಿಗಳ ರೇತೋರಕ್ತದಿಂದ ಉದಯಿಸಿದೆ, ಅವರ ಕುಲ ಶುದ್ಧವಿರುವದು, ನನ್ನಿಂದ ನನ್ನ ಮಕ್ಕಳುದಯಿಸಿದರು, ಅವರ ಕುಲವೂ ಶುದ್ಧ, ನನ್ನ ಅಜ್ಜಂದಿರರು ಒಳ್ಳೇ ಗೋತ್ರದವರು, ಅವರ ವಂಶಸ್ಥರೇ ನಾವು. ಅಂದ ಬಳಿಕ ನಮ್ಮ ಗೋತ್ರ ಸೂತ್ರಾದಿಗಳೆಲ್ಲ ಅತಿ ಶುದ್ಧವೆಂಬ ಅಭಿಮಾನವೇ ಮಾಯಾ ಮಲವು.

ಹಿಮಾಲಯ ಪರ್ವತದಲ್ಲಿ ಹುಟ್ಟಿದ ನದಿಗಳೆಲ್ಲ ಎಲ್ಲ ಪರ್ವತಗಳಲ್ಲಿ ಹಿಮವತ್ಪರ್ವತವೂ ಅದರೊಳಗಿನ ಶಿಖರಗಳೂ ಜಗತ್ಪೂಜ್ಯಗಳು. ಅವುಗಳಿಂದ ಹಲವು ಆಕೃತಿಗಳಾಗಿ ಹರಿದು ಬಂದಿರುವೆವು. ನಾವು ನಮ್ಮ ಎಡಬಲದ ಭೂಮಿಗೆ ಫಲವತ್ತಾದ ರೇವೆಯ ಮಣ್ಣನ್ನು ಕೊಡುವೆವು. ಸರ್ವ ಪ್ರಾಣಿಗಳ ಜೀವಾನಾಧಾರವಾಗಿರುವೆವು ನಾವು ಹರಿದ ಸ್ಥಳದಿಂದ ಜನರು ಕಾಲುವೆಗಳನ್ನು ಮಾಡಿಕೊಂಡು ಸರ್ವ ಧಾನ್ಯಗಳನ್ನು ಬೆಳೆಯುವರು. ನಾವು ಆಳವಾಗಿ ಹರಿದಲ್ಲಿ ಹಡಗುಗಳು ಓಡಾಡುವವು. ನಮ್ಮಿಂದಧಿಕರಾರಿರುವರು? ಎಂದು ಅಭಿಮಾನ ವಹಿಸಿದರೂ ಮಳೆಗಾಲದ ಅವುಗಳ ಮಹಾಪೂರಗಳಿಂದ ಕಸಕಡ್ಡಿ ಮೊದಲಾದ ಕಶ್ಮಲಗಳೂ ಹಾಗು ಅವು ಹರಿದಿರುವ ಭೂಮಿಯ ಖನಿಜದ್ರವ್ಯಗಳೂ ಅವುಗಳಿಗೆ ಕೂಡಿದ ಹಳ್ಳಗಳ ಮಲವೂ ಮಿಶ್ರವಾಗಿರುವದು ಸಹಜ. ನದಿಗಳ ಹುಟ್ಟು ಮೆಟ್ಟುಗಳು ನೆಟ್ಟಗಿದ್ದರೂ ಅವು ಹರಿಯುವ ಕರ್ಮಭೂಮಿಯಿಂದ ಕಶ್ಮಲವು ಕೂಡುವದು ಸ್ವಾಭಾವಿಕ. ಮಳೆಯ ಹನಿಗಳು ಹುಟ್ಟುವಾಗ ಶುದ್ಧವಿದ್ದರೂ ಪರ್ವತ, ಅಡಿ, ಕೊಳ್ಳ ಹಳ್ಳಗಳಲ್ಲಡಕವಾದ ಮಲಾಂಶಗಳು ಪ್ರವಾಹದ ಶಕ್ತಿಯಿಂದ ಬೆರೆಯಲೇ ಬೇಕು. ಇಂಥ ಮಳೆಯ ನೀರನ್ನು ಕುಡಿಯುವವಾದರೆ ಕಾಸಿ ಫಿಲ್ಟರದಿಂದ ಸೋಸಿ ಕುಡಿಯಬೇಕಾಗುವದು. ಇದರಂತೆ ಭಾವದಲ್ಲಿ ಸ್ಥಿರಗೊಂಡ ಮಲತ್ರಯಗಳನ್ನು ಹೋಗಲಾಡಿಸಲು ದೀಕ್ಷಾತ್ರಯಗಳು ಎಷ್ಟು ಅವಶ್ಯವೆಂಬವು ಸುವಿವೇಕಿಗಳಿಗೆ ಹೊಳೆಯದೆ ಇರದು. ಇದನ್ನರಿತ ಶರಣನೊಬ್ಬನು "ಮಲದೇಹಿಗಳ ಅಂಗದ ಮೇಲೆ ಲಿಂಗವಿದ್ದರೇನಯ್ಯ?- ಅದು ಲಿಂಗವಲ್ಲ.

ಅದೆಂತೆಂದೊಡೆ ಪ್ರಸಾದ ಸಂಸ್ಕಾರ ದೇಹಿಯಲ್ಲ. ಆವು ಸೋಂಕಿದಲಿಂಗವು ಹಾಳಕೇರಿ ಶಿಲೆಯಂತಾಯಿತು. ಅವ ಲಿಂಗಾಂಗಿ ಲಿಂಗಪ್ರಾಣಿಯಾಗುವನೇ? ಅವ ಮುಟ್ಟಿದ ಭಾಂಡಭಾಜನ ಹೊರಕಾಣೆ, ಅದು ಹೊರಮಡಿಕೆಯೆನಿಸುವದು. ಅವ ಮಲದೇಹಿ, ಅವನ ಲಿಂಗದಲ್ಲಿ ಗುರುವಿಲ್ಲ. ಲಿಂಗವಿಲ್ಲ, ಜಂಗಮವಿಲ್ಲ, ಅಶುದ್ಧ ಮಲದೇಹಿ, ಅಶುದ್ಧ ಸೂತಕ ದೇಹಿ, ನಮ್ಮ ಚನ್ನಪ್ರಿಯ ನಿರ್ಮಾಯ ಪ್ರಭುವೇ" ಎಂದು ಮಲದೇಹಿಯನ್ನು ಹೀಯಾಳಿಸಿದ್ದಾರೆ.

ಲೌಕಿಕದಲ್ಲಿ ಎಷ್ಟೋ ಪಕ್ಷಪಂಗಡಗಳೂ ಜಾತಿವಿಜಾತಿಗಳೂ ಕುಲಗೋತ್ರಗಳೂ ಮತಪಂಥಗಳೂ ಇದ್ದರೂ ಕೂಡ "ಯದ್ದೃಷ್ಟಂ ತನ್ನಷ್ಟಂ" ತತ್ವಮಸಿ" "ಖಲ್ವಿದಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ಸೋಹಂ" "ಶಿವೋಹಂ" "ಲಿಂಗಮಧ್ಯೇ ಜಗತ್ಸರ್ವಂ" "ಜಂಗಮಂ ಜಗದ್ಭರಿತಂ" ಎಂಬ ಉಕ್ತಿಗಳು ತಾನು ಯಾರೆಂಬ ಪ್ರಶ್ನೆಯ ಉತ್ತರವನ್ನು ಒತ್ತಿ ಹೇಳುತ್ತಲಿವೆ. ತಂದೆ ತಾಯಿಗಳ ರೇತೋರಕ್ತದಿಂದ ಈ ಶರೀರವಾಗಿದೆಯೆಂಬ ನಂಬಿಗೆಯೇ ಆಣವ ಮಲವು. ಈ ಶರೀರವು ತಾಯಿಯ ರಕ್ತದಿಂದಾಗಿದ್ದರೆ ಆ ತಾಯಿ ತಂದೆಗಳಲ್ಲಿ ಮಕ್ಕಳನ್ನು ಹುಟ್ಟಿಸುವ ಶಕ್ತಿ ಇದ್ದರೆ ಹೆಂಗಸರು ಮುಟ್ಟಾದಾಗ ಎಳೆ ಗಿಡಗಳನ್ನಾಗಲಿ ಹಸುಗೂಸುಗಳನ್ನಾಗಲಿ ಸೋಂಕಿದರೆ ಅಥವಾ ಅವರ ಸೆರಗು ತಾಕಿದರೆ ಅವು ಒಣಗುತ್ತಿರಲಿಲ್ಲ. ಕೂಸುಗಳಿಗೆ ಮುಟ್ಟುದೋಷವಾಗಿ ಸಾಯುತ್ತಿರಲಿಲ್ಲ. ಗರ್ಭವಾದಬಳಿಕ ಕೂಸುಗಳಿಗೆ ಎಲ್ಲ ಅವಯವಗಳ ರಚನೆಯನ್ನುಂಟುಮಾಡುವವರಾರು? ಹೊಟ್ಟೆಯಲ್ಲಿಯೂ ಹಾಗು ಜನಿಸಿದನಂತರವೂ ಬೆಳೆಯಿಸುವವರಾರು? ಇವೆಲ್ಲ ವಿಶ್ವಾಂತರ್ಯಾಮಿಯ ಕೃತ್ಯಗಳಲ್ಲದೆ ಮತ್ತೇನು? ಜಗದೀಶನು ನಿರ್ನಿಮಿತ್ತನೂ ನಿರ್ಭಿನ್ನನೂ ಆಗಿ ಜಗತ್ತಿನ ಪಂಚ ಕೃತ್ಯಗಳನ್ನು ಸಾಗಿಸುತ್ತಿರುವನು. ಪುತ್ರ ಜನನಕ್ಕೆ ತಾಯಿತಂದೆಗಳು ನಿಮಿತ್ತಮಾತ್ರರಲ್ಲದೆ ಮಕ್ಕಳನ್ನು ತಾವು ತಮ್ಮ ರೇತೋ ರಕ್ತದಿಂದ ರಚಿಸುವ ಶಕ್ತಿಯುಳ್ಳವರೆಂಬ ತಿಳವಳಿಕೆಯು ತಪ್ಪೆಂದು ಸರ್ವರೂ ಒಪ್ಪುವ ಸಂಗತಿಯಾಗಿದೆ. "ಆತ್ಮಾವೈ ಪುತ್ರ ನಾಮಾಸಿ,, "ಆತ್ಮಜನ್ಮ,, "ಆತ್ಮಸಂಭವ" ಎಂಬ ಉಕ್ತಿಗಳು ತಂದೆಯಿಂದ ಪುತ್ರ ಜನನವೆಂದು ಲೋಕೋಕ್ತಿ ಇದ್ದರೂ ಜಗದಾತ್ಮನಿಂದ ಪುತ್ರಾತ್ಮನೆಂದೇ ಸಂಸಿದ್ಧವಾದ ಮಾತು. ತಂದೆತಾಯಿಗಳಲ್ಲಿ ಮಕ್ಕಳನ್ನು ಹುಟ್ಟಿಸುವ ಶಕ್ತಿ ಇದ್ದರೆ ಹೆಂಡತಿಯು

ಋತುವಾದ ೧೫ ದಿವಸಗಳೊಳಗಾಗಿ ತಮ್ಮ ಕ್ರೀಡೆಯಿಂದ ಬೇಕಾದಾಗ ಮಕ್ಕಳನ್ನು ಪಡೆಯಬೇಕಿತ್ತು. ಎಷ್ಟೋ ದಂಪತಿಗಳು ಮಕ್ಕಳು; ಮಕ್ಕಳು; ಎಂದು ಕಕ್ಕಸಂಬಡುವದನ್ನು ನೋಡುತ್ತಲಿರುವೆವು. ಎಷ್ಟೋ ವತನದಾರರು ಮಕ್ಕಳಿಲ್ಲದೆ ನಿಸ್ಸಂತಾನರಾಗಿ ಮುಳುಗಿಹೋಗುವವರನ್ನೂ ಕಣ್ಣಾರೆ ಕಾಣುತ್ತೇವೆ.

ಸ್ವಾತಿಯ ನಕ್ಷತ್ರದ ಹೆಸರಿನ ಮಳೆಗಾಲದಲ್ಲಿ ಸಮುದ್ರದೊಳಗಿನ ಚಿಪ್ಪುಗಳು ಬಾಯ್ದೆರೆದು ನೀರಮೇಲೆ ಅಲೆಯುತ್ತಿದ್ದರೂ, ಆ ಚಿಪ್ಪಿನಲ್ಲಿ ಸ್ವಾತಿಯ ಹನಿಗಳು ಬೀಳುತ್ತಿದ್ದರೂ ಚಿಪ್ಪಿನಲ್ಲಿ ಬಿದ್ದ ಹನಿಗಳೆಲ್ಲವೂ ಮುತ್ತಾಗಲರಿಯವು. ಮಳೆಯ ಹನಿಗಳು ಬಾಯ್ದೆರದ ಚಿಪ್ಪಿನಲ್ಲಿ ಬಿದ್ದ ಸಮಯದಲ್ಲಿ ಮಾತ್ರ ಸೂರ್ಯನ ಕಿರಣಗಳು ಆ ಹನಿಗಳನ್ನು ಪ್ರವೇಶಿಸಲು, ಆ ಚಿತ್ಪ್ರಕಾಶದಿಂದ ಮುತ್ತುಗಳಾಗುತ್ತವೆ. ಇದರಂತೆ ದಂಪತಿಗಳ ಕೂಟದಲ್ಲಿ ನಿಜಾನಂದವು (ಆತ್ಮಾನಂದವು) ಉಕ್ಕಿ ಆತ್ಮಜ್ಯೋತಿಯು ಪ್ರಕಾಶಿಸಿದಾಗಲೇ ಗರ್ಭವು ನಿಲ್ಲುವದರಿಂದ "ಆತ್ಮಾವೈ ಪುತ್ರನಾಮಾಸಿ,, "ಆತ್ಮ ಸಂಭವಃ,, ಎಂಬ ಉಕ್ತಿಗಳು ಜನನಾರಂಭಕ್ಕೆ ಉದ್ಭವಿಸುವವು. ಈ ಅನುಭವದಿಂದ ಆಣವ ಮಲಭಾವವು ಛಿದ್ರಿಸದೆ ಇರದು.

ಜಡರಕ್ತದಿಂದ ಗಟ್ಟಿಗೊಂಡು ಬೆಳೆದ ತನುವೇ ತಾನೆಂಬುದೀ ಲೋಕವು. ಆ ಲೌಕಿಕರಲ್ಲಿ ಕೆಲವರು ಮೃಣ್ಮಯ ಗೊಂಬೆಯಂತೆ ಹಸಿಯ ಮಾಂಸ ತುಂಬಿದ ಚರ್ಮದ ತತ್ತಿಯೋಪಾದಿಯಲ್ಲಿ ಬಿದ್ದ ಶವದ ಶರೀರಮಂ ನೋಡಿ ಅದರಲ್ಲಿ ರಕ್ತವಿಲ್ಲದುದಂ ಕಂಡು ರಕ್ತವೇ ಚೈತನ್ಯವೆಂದು ಭಾವಿಸುವರು. ಕೆಲವರು ಶ್ವಾಸಮಿಲ್ಲದುದ ಕಂಡು ವಾಯುವೇ ಚೈತನ್ಯವೆಂದು ತಿಳಿಯುವರು. ಕೆಲವರು ಮಲವೇ ತಾವೆಂದು ನಿಶ್ಚಯಿಸುವರು. ಕೆಲವರು ಜೀವವೇ ಚೈತನ್ಯವೆಂದು ನಿರ್ಧರಿಸುವರು. ಇವೆಲ್ಲ ಜಡತತ್ವಗಳಾದಕಾರಣ ತನುಕರಣೇಂದ್ರಿಯಾದಿ ೨೫ ಜಡ ತತ್ವಗಳ ಸಮುದಾಯವು ತಾವೆಂಬಭಿಮಾನವೇ ಕಾರ್ಮಿಕ ಮಲವು.

ಈ ಕರ್ಮ ಭೂಮಿಯಲ್ಲಿ ಜನಿಸಿದ ತನ್ನ ತಾಯಿ ತಂದೆ ಅಜ್ಜ ಅಜ್ಜಿ ಮಕ್ಕಳು ಮರಿಗಳು ಆಪ್ತೇಷ್ಟರು ಬಂಧುಬಳಗದವರು ಹೊಲ

ಮುಂ ಧನಧಾನ್ಯಾದಿ ಸ್ಥಾವರ ಜಂಗಮಾದಿಗಳಲ್ಲಿ ತಾನು ತನ್ನದೆಂಬ ಭಾವನೆ ಬಲಿತು ಅವುಗಳಲ್ಲಿ ಮಾಯಾ ಮೋಹಾಸಕ್ತನಾಗಿರುವದೇ ಮಾಯಾಮಲವು. ಈ ಎಲ್ಲ ಜಡಾಜಡಾತ್ಮಕಗಳು ತನ್ನ ಪ್ರಪಂಚಕ್ಕೆ ಸಂಬಂಧಿಸಿದವುಗಳಾದರೂ ಈಶ ನಿರ್ಮಿತಂಗಳು. ಪುಣ್ಯವಶದಿಂದ ಪ್ರಾಪ್ತ ವಾದವುಗಳು. ಪುಣ್ಯವಿರುವವರೆಗೆ ಉಪಭೋಗಿಸಲನುಕೂಲವಾದವುಗಳು. ಪುಣ್ಯ ತೀರಿದಬಳಿಕ ಅನುಭೋಗಿಸಲು ಅತಿ ದೂರಾಗಿ ಹೋಗುವವು. ಆಗ ಎಷ್ಟು ಆಕಾಂಕ್ಷಿಸಿದರೂ ಅವುಗಳ ಭೋಗವು ಸಿಗಲಾರದು. ಕಾರಣ ಯಾವಾಗಲೂ ಸದಸದ್ವಿವೇಕಿಯಾಗಿ ಅಸದ್‌ವಸ್ತುಗಳನ್ನು ಅತಿಗಳೆದು ಸದ್‌ವಸ್ತುವಿನಲ್ಲಿ ನಿರತನಾಗಿ ಸದಾಚಾರಿಯಾಗಿ ಸದ್ವಸ್ತುವಾದ ಆ ಪರತರ ಶಿವಲಿಂಗ ದೇವನ ಪೂಜೆ, ಅರ್ಚನೆ, ಅರ್ಪಣೆಗಳಲ್ಲಿ ಅತಿಮೋಹಿಯಾದರೆ ಮಾಯಾಮಲದ ಮೂಲವೇ ಕಡಿದಂತಾಗುವದು. ಇದನ್ನರಿತ ಮಹಾ ಮಹಿಮರು "ಹುಟ್ಟು ಹೋದುಗೆಟ್ಟುದೇ ನಿರ್ವಾಣ । ಮಲಮಾಯಾ ಕರ್ಮಗಳನಳಿದುದೇ ನಿರ್ವಾಣ । ಶೋಕ ಮೋಹ ನಷ್ಟವಾದುದೇ ನಿರ್ವಾಣ । ಇಹಪರಂಗಳ ಇಚ್ಛೆ ಹಿಂಗುವದೇ ನಿರ್ವಾಣ । ಇಂತಪ್ಪ ನಿರ್ವಾಣಿಯೇ ಸೌರಾಷ್ಟ್ರ ಸೋಮೇಶ್ವರನೇ ತಾನು"

"ಅಣುರೇಣು ಪ್ರಾಣಿಗಳು ಮೊದಲಾಗಿ ಜಲಚರ ಭೂಚರ ಖೇಚರ ಗಳಲ್ಲಿ ಸಂಚರಿಸುವ ಕ್ರಿಮಿಕೀಟಕ ಪತಂಗ ಪಕ್ಷಿ ಮೃಗಪಶು ಸುರನ ರೋರಗರೆಲ್ಲರಲ್ಲಿ ಶಿವ ಚೈತನ್ಯದ ಅಂಶವಾದ ಕಳೆಬಿಂದುವು ದಶರತ್ನ ಛಾಯೆಯಿಂ ಆಕಾರವಲ್ಲದೆ ನಿರಾಕಾರವಲ್ಲದೆ ಸಾವಯವನವಲ್ಲದೆ ನಿರವಯ ವಲ್ಲದೆ, ಸಕಲವಲ್ಲದೆ, ನಿಃಕಲವಲ್ಲದೆ, ಗುಣಿಯಲ್ಲದೆ, ನಿರ್ಗುಣಿಯಲ್ಲದೆ, ಸ್ತ್ರೀಪುನ್ನಪುಂಸಕಮಲ್ಲದೆ ಶೂನ್ಯ ನಿಶ್ಶೂನ್ಯ ಮಹಾಶೂನ್ಯನೊಳಕೊಂಡ ಅಖಂಡ ಅದ್ವಯ ಸಚ್ಚಿದಾನಂದ ಶಾಶ್ವತ ಪರಿಪೂರ್ಣ ಪರಬ್ರಹ್ಮವದು. ಸರ್ವಜ್ಞತ್ವ ಸರ್ವ ಚೈತನ್ಯತ್ವ, ಸರ್ವೇಶತ್ವ, ಸರ್ವ ವ್ಯಾಪಕತ್ವ, ಜಗ ದ್ವಿಲಕ್ಷಣತ್ವ, ಸರ್ವ ಸಾಮರ್ಥ್ಯತ್ವ, ಸೃಷ್ಟ್ಯಾದಿ ಸ್ಥಿತಿಲಯ ಕಾರ್ಯ ಕಾರಣಂಗಳಿಗೆಲ್ಲಕ್ಕಾಧಾರವಾದ ಜಗದಾದಿ ಬೀಜ ಮೂಲ ಸ್ತಂಭಾದ್ಯಂತರ ರಹಿತ ಪರತತ್ವ ಅಗಣಿತ ಕೋಟಿ ಸೂರ್ಯ ಚಂದ್ರಾದಿಗಳ ಪ್ರಭೆಯಂ ತಿರಸ್ಕರಿಸುವ ಪರಂಜ್ಯೋತಿಯದು.

ಜಡನೇತ್ರಕ್ಕಗೋಚರಮಾಗಿ ಬಚ್ಚಬರಿಯ ಪರಮ ಪ್ರಕಾಶವೇ ಪಿಂಡ ಬ್ರಹ್ಮಾಂಡಗಳ ಹೊರಗೆಲ್ಲ ಪರಿಪೂರ್ಣತ್ವದಿಂ ಅಖಂಡ ತತ್ವಮಾದರೂ

ಭಿನ್ನಾಭಿನ್ನತ್ವಮಿಲ್ಲದೆ ಬಹು ಭೇದಂಗಳೊಳ್ ಭಿನ್ನರ್ಗೆ ಭಿನ್ನತ್ವನಾಗಿ ಅಭಿನ್ನರ್ಗೆ ಏಕಾತ್ಮನಾಗಿರ್ದು, ಮಹತ್ತಿಗೆ ಮಹಚ್ಚೇತನಾತ್ಮಕನಾಗಿ ಪರಮಾಣುವಿಗೆ ಅತಿ ಪರಮಾಣು ರೂಪನಾಗಿ ತಾನೀ ನಾಮರೂಪ ಕ್ರಿಯಾರಹಿತನಾಗಿದ್ದರೂ ಸೃಷ್ಟ್ಯಾದಿ ಸರ್ವ ಕಾರ್ಯಂಗಳಲ್ಲಿ ತಾನಿಲ್ಲದಾಗ ಸೂಜಿಕಲ್ಲಿನ ಸನ್ನಿಧಿಯಿಂ ಸೂಜಿ ಚೇಷ್ಟಿಸುವಂತೆ ತನ್ನ ಸಾನ್ನಿಧ್ಯದಿಂದ ಅಖಿಳ ಜಡರೂಪವಾದ ಆ ಅಚೇತನ ಭೂತಾದಿ ತತ್ವಂಗಳಿಗೆಲ್ಲ ಚೇತನಮುಂಟಾಗಿರುವದರಿಂದ ಆ ಸೂರ್ಯನ ಅಖಿಳ ಕಾರ್ಯ ಸಾಕ್ಷಿ, ಚೈತನ್ಯಾತ್ಮ ಚಿನ್ನಾದ ಚಿಕ್ಕಲಾ ಚಿದ್ಬಿಂದುವದು ಪ್ರಭಾಮಯನಾಗಿ ಕಾರಣೋದ್ದಿಶ್ಯ ರೇತೋ ರಕ್ತಬಿಂದುವಿನ ಮರೆಯಲ್ಲಿ ಆಕಸ್ಮಿಕವಾಗಿ ಇದರ್ದಕ್ಕೆ ಅವಿರಳನಾಗಿ ವಿಲಕ್ಷಣನಾಗಿರುವದರಿಂದ ಆ ಆತ್ಮ ಸಾನ್ನಿಧ್ಯಸಾಕ್ಷಿ. ಚೈತನ್ಯದಿಂದ ಆ ಪಿಂಡೋತ್ಪತ್ತಿಯಾಗುವದಲ್ಲದೆ ದುರ್ಗಂಧ ಮಯವಾದ ಮಾತಾಪಿತರ ಯೋನಿಚಕ್ರದ ಜಡಮಲದಲ್ಲಿ ಪಿಂಡಮಂ ಗಟ್ಟಿಗೊಳಿಸುವ ಸಾಮರ್ಥ್ಯಮುಂಟೇ ? ಅದುಕಾರಣ ಮಾತಾಪಿತರುಗಳ ರಕ್ತರೇತುಗಳಿಂದ ನಾನು ಉದಯಿಸಿದೆನೆಂಬುದು ಸರ್ವಥಾ ನಿಶ್ಚಯವಲ್ಲವು. ”

ಕೃಷಿಜ್ಞಾನ ಪ್ರದೀಪಿಕೆ, ಪು. ೩೩

ಶಿವಸೃಷ್ಟಿಯನ್ನು ಬೋಧಿಸುವ ಪಿಂಡೋತ್ಪತ್ತಿಯು ಪರಮೋಪದೇಶವಿದು. ವೇದಾಂತಜನ್ಯವಾದ ಪರಮ ಪ್ರಕಾಶವಿದು. ವೇದಾಂತ ಸಾರವಾದ ಸುಜ್ಞಾನವಿದು. ವೇಧಾದೀಕ್ಷೆಯಲ್ಲಿ ಬೋಧಿಸಲ್ಪಡುವ ವೇದಾಂತ ಮಂದಿರವಾದ ವೀರಶೈವ ಷಟ್‌ಸ್ಥಲದಲ್ಲಿ ಮೊದಲನೆಯದಾದ ಪಿಂಡಸ್ಥಲದ ನಿರ್ದೇಶವಿದು. ವೇದಾಂತ ವಿವರವಾದ {ಕರಣಹಸಿಗೆಯ ಪಡಿಯಚ್ಚುವಿದು. ಈ ವೇಧಾದೀಕ್ಷಾ ಕ್ರಮೋಪದೇಶ ರಹಿತರಾದ ದೀಕ್ಷಾಚಾರ್ಯರಿಗೆ “ ಮಣ್ಣೆಂಬುದೇ ದೇಹ, ಹೊನ್ನೆಂಬುದೇ ಕಾಂಕ್ಷೆ, ಹೆಣ್ಣೆಂಬುದೇ ಸಕಲ ಸುಖಭೋಗಂಗಳು. ಅಣ್ಣಾ ಇವಂ ಚನ್ನಾಗಿ ಹೇಳದೆ ಮಣ್ಣ ಮುದ್ದೆಯ ಚನ್ನಾಗಿ ಕೊಟ್ಟು ಮಣ್ಣೊಳೇ ಹೋದೆ ಆತುರ ವೈರಿ ಮಾರೇಶ್ವರಾ ” ಎಂದು ಚನ್ನಾಗಿ ಕಿವಿಹಿಂಡುವ ಕೈಪಿಡಿಯಿದು.

ಭಾವತ್ರಯಗಳ ಮಲತ್ರಯಗಳನ್ನು ಹೋಗಲಾಡಿಸುವ ದೀಕ್ಷಾತ್ರಯಗಳಿಂದ ಶಿವಭಾವಿಯಾಗಿ ಶಿವನೇ ತಾನಾಗುವ ಪರಿಯನರುಹುವ

ಶ್ರೀ ದೇವರದಾಸಿಮಾರ್ಯರು "ಕಣ್ಣು ಮಾಸಲು, ಶಿವನ ಕೈ ಮಾಸಲು' ಶಿವನ ಕಾಲು ಮಾಸಲು, ಶಿವನ ನಾಲಿಗೆ ಮಾಸಲು, ಶಿವನ ಕಿವಿ ಮಾಸಲು ಬೇಸರವೋಗದಂತಿದ್ದರೆ, ಆತನೇ ಜಗದೀಶ ಕಾಣಾ ರಾಮನಾಥಾ" ಎಂದು ಶಿವಾನುಭಾವಿಗಳನ್ನು ತೃಪ್ತಿಪಡಿಸುವ ಅನುಭವಾಮೃತವಿದು.

"ಮಣ್ಣಿನಲ್ಲಿ ಹುಟ್ಟಿದ ಹೊನ್ನು, ಕಲ್ಲಿನಲ್ಲಿ ಹುಟ್ಟಿದ ರನ್ನ, ಚಿಪಿನಲ್ಲಿ ಹುಟ್ಟಿದ ಮುತ್ತು, ವೃಕ್ಷದಲ್ಲಿ ಹುಟ್ಟಿದ ಗಂಧ, ಇವು ತಮ್ಮ ಸ್ವಸ್ಥಾನಂಗಳ ಮೀರಿ, ಪರಸ್ಥಾನವೊಳು ಸಂದು, ಪ್ರಾಪ್ತಿಯು ನೈದುವಂತೆ, ಪಿಂಡಾಂಡದಲ್ಲಿ ಹುಟ್ಟಿ, ಅಂಡವನತಿಗಳೆದು ನಿಜಪಿಂಡವಾದಂತೆ ಗುರುಕರ ಕಮಲದಲ್ಲಿ ಹುಟ್ಟಿ, ಲಿಂಗಮೂರ್ತಿ ಸರ್ವಾಂಗದಲ್ಲಿ ಬೆಳೆದು, ಜಂಗಮವಪ್ಪ ನಿರಂಗ ಪ್ರಸಾದದಲ್ಲಿ ಬೆರೆದು, ಅವಿರಳನಾದವಂ ಬಂಧ ಮೋಕ್ಷ ಕರ್ಮಂಗಳ ಬೆಂಬಳಿಗೆ ಸಲ್ಲ, ಆವ ನಿರಂಜನ ವಸ್ತು ಶಂಭು ವಿಂಗತ್ತತ್ತ ಅತಿ ಬಳ ನೋಡಾ, ಮಾತುಳಂಗ ಮಧುಕೇಶ್ವರಾ" ಎಂದುಸುರಿದ ಮಹಾ ಶರಣನ ವಚನಾಮೃತವಿದು.

ಕೆಲವರು ಹೇಳುವ ಹೊನ್ನು ಹೆಣ್ಣು ಮಣ್ಣು ಈ ಮೂರು ಮಲಂಗಳಾಗದೆ ಈ ಮೂರರ ಮೇಲಿನ ಆಶೆಯೇ ಮಲಂಗಳೆಂದುಸುರುವೆ.

# ಸ್ತ್ರೀಪುರುಷರು ಸಮಾನಹಕ್ಕುಳ್ಳವರು.

( ಲೇಃ — ಸಂಪಾದಕರು. )

ಭಾರತದ ಘಟನೆಯಲ್ಲಿ ಸ್ತ್ರೀಪುರುಷರು ಸಮಾನಹಕ್ಕುಳ್ಳವರೆಂತಲೂ ಈ ತರದ ಲಿಂಗಭೇದವನ್ನು ಮಾಡಕೂಡದೆಂತಲೂ ನಿಯಮಗಳನ್ನು ಮಾಡಲಾಗಿದೆ. ಆಧುನಿಕಕಾಲದಲ್ಲಿ ಈ ತತ್ವವನ್ನು ಪಾಲಿಸುವ ದೇಶಗಳ ಸಂಖ್ಯೆಯು ಹೆಚ್ಚುತ್ತಲಿದೆ. ಆದ್ದರಿಂದ ಸ್ತ್ರೀಯರು ಪಾರ್ಲಿಮೆಂಟಿನಲ್ಲಿಯೂ ಆಡಳಿತೆಯ ಎಲ್ಲ ಶಾಖೆಗಳಲ್ಲಿಯೂ ಸೇರ್ಪಡೆಯಾಗಹತ್ತಿದ್ದಾರೆ. ಭಾರತದಲ್ಲಿ ಈ ಸ್ಥಿತಿಯು ಮೊದಲು ಇರಲಿಲ್ಲ. ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ಹೊಂದಲು ಅನರ್ಹರೆಂಬ ತಿಳುವಳಿಕೆಯು ಇದ್ದಿತು. ಈ ತತ್ವವನ್ನು ಬ್ರಾಹ್ಮಣ ಧರ್ಮಶಾಸ್ತ್ರಗಳು ಯಾವಾಗಲೂ ಸಮರ್ಥಿಸುತ್ತ ಬಂದಿರುತ್ತವೆ. ಆದರೆ ದ್ರಾವಿಡ ದೇಶಗಳಾದ ಕರ್ನಾಟಕ ಆಂಧ್ರ ಮತ್ತು ತಮಿಳು ಪ್ರಾಂತಗಳಲ್ಲಿ ಸ್ತ್ರೀಯರಿಗೆ ವಿಶೇಷ ಹಕ್ಕುಗಳು ಇದ್ದುದು ಯಾವಾಗಲೂ ಕಂಡುಬರುತ್ತದೆ. ಈ ಮೂರು ಪ್ರಾಂತದ ನಿವಾಸಿಗಳು ಮುಖ್ಯವಾಗಿ ವೀರಶೈವರು ಈ ತತ್ವವನ್ನು ಪರಿಪಾಲಿಸುತ್ತ ಬಂದಿದ್ದು ಕಂಡುಬರುತ್ತದೆ.

ಇದರಿಂದ ಬಸವಾದಿ ಪ್ರಮಥರ ಕಾಲದಲ್ಲಿ ಬಹು ಜನ ಸ್ತ್ರೀಯರು ವಚನಕಾರರಾಗಿದ್ದಾರೆ. ಗಂಡನು ವಚನಕಾರನಿದ್ದಲ್ಲಿ ಆವನ ಹೆಂಡತಿಯೂ ವಚನಕಾರ್ತಿಯಾಗಿದ್ದಾಳೆ. ಆಯ್ದಕ್ಕಿಮಾರಯ್ಯ, ಉರಿಲಿಂಗಪೆದ್ದಿ, ಎಡೆಮಠದ ನಾಗಿದೇವ ಮೊದಲಾದವರು ವಚನಕಾರರಿದ್ದು ಅವರ ಹೆಂಡಂದಿರೂ ಕೂಡ ವಚನಕಾರ್ತಿಯರಾಗಿದ್ದಾರೆ. ಇದರಿಂದ ಪ್ರಮಥರ ಕಾಲದಲ್ಲಿ ಜ್ಞಾನಾರ್ಜನೆಯ ವಿಷಯದಲ್ಲಿ ಸ್ತ್ರೀಪುರುಷರು ಸಮಾನ ಹಕ್ಕುಳ್ಳವರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಕೇವಲ ಜ್ಞಾನಾರ್ಜನೆಯಲ್ಲಿ ಮಾತ್ರವಲ್ಲ, ಆಚಾರ ವಿಚಾರಗಳಲ್ಲಿಯೂ ಕೂಡ ಸಮಾನತೆಯಿಂದ ನಡೆಯುತ್ತಿದ್ದರೆಂದು ತಿಳಿದುಬರುತ್ತದೆ. ವೀರಶೈವ ಸ್ತ್ರೀಯಳು ಪುರುಷರಂತೆಯೇ ಲಿಂಗಧಾರಣೆಗೆ ಯೋಗ್ಯಳಾಗಿದ್ದಾಳೆ. ಆದ್ದರಿಂದ ಆವಳು ತನ್ನ ಸ್ವಂತ ಅರ್ಚಣೆಯ ಮೂಲಕವೇ ಮೋಕ್ಷಪದವಿಯನ್ನು ಹೊಂದಿತ

ಕ್ಕದ್ದು. ಇದರಲ್ಲಿ ಅವಳು ತನ್ನ ಪತಿಯ ಆಚರಣೆಗಳ ಫಲವನ್ನು ಅಪೇಕ್ಷಿಸುತ್ತ ಕುಳ್ಳಿರುವದು ಅನಾವಶ್ಯಕವಾಗಿರುತ್ತದೆ.

ಈ ತೆರದ ಸಮಾನಭಾವವು ಕೇವಲ ಧರ್ಮದೃಷ್ಟಿಯಿಂದ ಮಾತ್ರವಲ್ಲ, ಐಹಿಕ ವಸ್ತುಗಳು ಅಂದರೆ ಮನೆತನದ ಜಿಂದಗಿ ಮತ್ತು ಸ್ವತ್ತು ಇವುಗಳನ್ನು ಸ್ತ್ರೀಯಳು ಅನುಭವಿಸುವದರಲ್ಲಿಯೂ ಕೂಡ ಸ್ವತಂತ್ರಳಾಗಿದ್ದಾಳೆಂದು ತೋರಿಬರುತ್ತದೆ. ಇದನ್ನು ತೋರಿಸುವಂಥ ಕೆಲವು ಶಿವಶರಣೆಯರ ಚರಿತ್ರೆಗಳು ಸಹ ಇರುತ್ತವೆ. ಅವುಗಳಲ್ಲಿ ಒಂದನ್ನು ಉದಾಹರಣೆಗಾಗಿ ನಾವು ಕೆಳಗೆ ಕೊಡುತ್ತೇವೆ.

ಚಂದವೂರೆಂಬ ಪಟ್ಟಣವಿದ್ದು ಅಲ್ಲಿ ಮಲ್ಲಯ್ಯನೆಂಬ ವರ್ತಕನು ವ್ಯಾಪಾರ ಮಾಡಿಕೊಂಡಿರುತ್ತಿದ್ದನು. ಅವನು ಪರದೇಶ ವ್ಯಾಪಾರದಲ್ಲಿರುತ್ತಿದ್ದನು. ಅವನಿಗೆ ನಾಚಯ್ಯ ಮತ್ತು ಅರುಣಾದ್ರಿ ಎಂಬ ಇಬ್ಬರು ಗಂಡು ಮಕ್ಕಳೂ ಶಿವಪ್ರಿಯನಾಚಿ ಎಂಬ ಒಬ್ಬ ಹೆಣ್ಣುಮಗಳೂ ಇದ್ದರು. ಮುಂದೆ ಮಲ್ಲಯ್ಯನು ತೀರಿಕೊಂಡನು. ಆಗ ಅವನ ಇಬ್ಬರು ಮಕ್ಕಳು ಅವನ ಆಸ್ತಿಯಲ್ಲಿ ಭಾಗ ಮಾಡಿಕೊಂಡರು. ಆಗ ಅವರು ತಮ್ಮ ತಂಗಿಯಾದ ಶಿವಪ್ರಿಯನಾಚಿಗೆ ತಮ್ಮಹಿಸೆಯಷ್ಟೇ ಅಂದರೆ ಒಂದು ಮೂರಾಂಶ ಭಾಗವನ್ನು ಬೇರೆ ಪಾಲು ಮಾಡಿಕೊಟ್ಟರು. ಆಗ ಅವಳು ತನ್ನ ಪಾಲಿಗೆ ಬಂದದ್ದನ್ನು ತೆಗೆದುಕೊಂಡು ಬೇರೆ ಇರಲಿಕ್ಕೆ ಹತ್ತಿದಳು. ಅವಳು ಕೇವಲ ಶಿವಾನುಭಾವಿಯಾಗಿ ತಾನು ಗಳಿಸುತ್ತಿದ್ದ ಹಣವನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುತ್ತ ಬಂದಳು.

ಹೀಗಿರುವಲ್ಲಿ ನಾಚಯ್ಯನು ವ್ಯಾಪಾರಕ್ಕೋಸ್ಕರ ದ್ವೀಪಾಂತರಕ್ಕೆ ಹೋದನು. ಆದರೆ ಮಧ್ಯದಲ್ಲಿ ಅವನಿದ್ದ ಹಡಗವು ಒಡೆದುಹೋದದ್ದರಿಂದ ಅವನು ಮರಣಹೊಂದಿದನು. ಬಹಳ ದಿವಸಗಳಾದರೂ ಅವನು ತನ್ನ ಗ್ರಾಮಕ್ಕೆ ತಿರುಗಿಬರಲಿಲ್ಲ. ಜನರೆಲ್ಲರು ಅವನು ಸಮುದ್ರದಲ್ಲಿ ಮುಳುಗಿ ಸತ್ತನೆಂದು ತಿಳಿದರು.

ಮುಂದೆ ಅರುಣಾದ್ರಿಯು ತನ್ನ ಅಣ್ಣನು ತೀರಿಕೊಂಡನೆಂದು ತಿಳಿದು ಮನೆತನದ ಎಲ್ಲ ಆಸ್ತಿಯನ್ನು ತಾನೇ ಆಕ್ರಮಿಸಬೇಕೆಂಬ ದುರಾಶೆಯುಳ್ಳವನಾಗಿ ತನ್ನ ತಂಗಿಗೆ— ಸ್ತ್ರೀಯರಿಗೆ ಮನೆಯ ಆಸ್ತಿಯಲ್ಲಿ ಪಾಲು

ಕೊಡುವದು ಎಲ್ಲಿಯೂ ಇಲ್ಲ. ನೀನು ಅನುಭವಿಸುತ್ತಿದ್ದ ಆಸ್ತಿಯನ್ನೆಲ್ಲ ನನಗೆ ತಿರುಗಿಕೊಡು ಎಂದು ಆವಳೊಡನೆ ವಾದಿಸಹತ್ತಿದನು ಮತ್ತು ಅವಳನ್ನು ಬಹಳ ಬಾಧಿಸಿ ಆಕೆಯಲ್ಲಿದ್ದ ದ್ರವ್ಯವನ್ನೆಲ್ಲ ಬಲಾತ್ಕಾರದಿಂದ ಕಸಿದುಕೊಂಡುಬಿಟ್ಟನು. ಆಗ ಆಕೆಯು ಜನರಲ್ಲಿ ಮೊರೆ ಇಟ್ಟಳು. ಆದರೆ ಅವಳನ್ನು ಯಾರೂ ಕೇಳಲಿಲ್ಲ.

ಶಿವಪ್ರಿಯನಾಚಿಯು ಕೇವಲ ಶಿವಭಕ್ತಳಾಗಿದ್ದಳು. ಅವಳು ಪರಮಾತ್ಮನಿಗೆ— ಎಲೋ ಶಿವನೇ, ನಿನ್ನ ದಾಸೋಹದಲ್ಲಿ ನಾನು ಇರಬೇಕೆಂದು ಅಣ್ಣನು ನನಗೆ ಪಾಲುಕೊಟ್ಟು ಹೋದನು. ಈಗ ಅರುಣಾದ್ರಿಯು ನನ್ನನ್ನು ಬಹಳ ಹಿಂಸೆಪಡಿಸಿ ಅದನ್ನು ಕಸಿದುಕೊಂಡುಬಿಟ್ಟನು. ಇದರಿಂದ ನಿನಗೆ ಮಾಡುವ ಸೇವೆಯು ನಿಂತುಬಿಟ್ಟಿದೆ. ಏನುಮಾಡಲಿ, ಎಂದು ಅವನಲ್ಲಿ ಮೊರೆಯಿಟ್ಟಳು.

ಶಿವನಿಗೆ ಭಕ್ತೆಯಾದ ಆಕೆಯ ಮೊರೆಯು ಕೇಳಿಸಿತು. ಆಗ ಅವನು ನಾಚಯ್ಯನ ರೂಪುತೊಟ್ಟು ಪಟ್ಟಣಕ್ಕೆ ಬಂದು ತನ್ನ ಮನೆಯಲ್ಲಿ ಇರಹತ್ತಿದನು. ಆಗ ಅರುಣಾದ್ರಿಯು ತನ್ನ ಅಣ್ಣನು ಇನ್ನೂ ಬದುಕಿದ್ದಾನೆಂದು ತಿಳಿದನು. ಮನೆಯಲ್ಲಿ ಆಗ ನಾಚಯ್ಯನು ಬಂದ ಇರಹತ್ತಲು ಅವನು ತಮ್ಮನಿಗೆ ನಾವಿಬ್ಬರು ತಂಗಿಗೆ ಪಾಲುಮಾಡಿಕೊಟ್ಟದ್ದಾಗಿದೆ. ಆಕೆಯ ಆಸ್ತಿಯನ್ನು ಆಕೆಗೆ ತಿರುಗಿಕೊಡು ಎಂದು ಹೇಳಿ ಅವಳ ದ್ರವ್ಯವನ್ನೆಲ್ಲ ಅವಳಿಗೆ ತಿರುಗಕೊಡಿಸಿದನು.

ಮುಂದೆ ಕೆಲವು ದಿವಸಗಳಾದ ಮೇಲೆ ಶಿವನು ನಾನು ಮಾಡತಕ್ಕ ಕಾರ್ಯವು ಮುಗಿಯಿತು ಎಂದು ತಿಳಿದು ಬಯಲಾಗಿ ಹೋದನು. ಆಗ ಜನರು ನಾಚಯ್ಯನನ್ನು ಎಲ್ಲಿ ಹುಡಿಕಿದರೂ ಸಿಕ್ಕಲಿಲ್ಲ. ಅವರು ಚಕಿತರಾದರು. ಅವರು ಶಿವಪ್ರಿಯನಾಚಿಯ ಭಕ್ತಿಗೆ ಮೆಚ್ಚಿ ಇವಳಿಗೆ ಶಿವನು ಪ್ರೀತನಾಗಿ ನಾಚಯ್ಯನಾಗಿ ಬಂದು ಆಕೆಯ ಪಾಲು ಕೊಡಿಸಿ ಹೋದನೆಂದು ತಿಳಿದರು. ಅಂದಿನಿಂದ ಶಿವಪ್ರಿಯನಾಚಿಗೆ ಅರುಣಾದ್ರಿಯಾಗಲಿ ಅಥವಾ ಬೇರೆ ಯಾರಾಗಲಿ ತೊಂದರೆ ಪಡಿಸುವದನ್ನು ನಿಲ್ಲಿಸಿದರು.

ಶಿವಪ್ರಿಯನಾಚಿಯು ಲಿಂಗಭಕ್ತಿಯುಳ್ಳವಳಾಗಿ ಆಚರಿಸುವವಳಾಗಿದ್ದಳು. 'ಪಿರಿಯೊಡೆಯ'ರೆಂಬ ಹೆಸರು ಆಕೆಯು ಇಷ್ಟಲಿಂಗಕ್ಕಿದ್ದು ಕಡೆಗೆ ಅವಳು ಅದರಲ್ಲಿಯೇ ಬೆರೆದುಹೋದಳು.

ಶಿವಪ್ರಿಯನಾಚಿಯು ವಚನಕಾರಳಿರಬಹುದೆಂದು ನಮಗೆ ತೋರುತ್ತದೆ. 'ಪಿರಿಯೊಡೆಯ' ಎಂಬುದೇ ಅವಳ ಮುದ್ರಿಕೆಯಾಗಿ ಬಹುದು. ಆದರೆ ಈ ಮುದ್ರಿಕೆಯ ವಚನಗಳು ನಮಗೆ ದೊರೆತಿರುವದಿಲ್ಲ.

ಈ ಕಥೆಯಲ್ಲಿ ಪವಾಡಗಳಿದ್ದರೂ ಅವು ವಚನಕಾರರ ತತ್ವಗಳಿಗೆ ವಿರೋಧವಿರುವದಿಲ್ಲ. ಸ್ತ್ರೀಪುರುಷರು ಸಮಾನರೆಂಬ ತತ್ವವನ್ನು ಅವು ಸಮರ್ಥಿಸುತ್ತವೆ.

ಈಚೆಗೆ ಪಾರ್ಲಮೆಂಟಿನಲ್ಲಿ ಹೊಸದಾಗಿ ಹಿಂದೂ ವಾರಸಾ ಕಾಯಿದೆಯು ಚರ್ಚೆಗೆ ಬಂದಿರುತ್ತದೆ. ಅದರಲ್ಲಿ ಮನೆತನದ ಆಸ್ತಿಯಲ್ಲಿ ಗಂಡುಮಗನಿಗೆ ಇರುವಷ್ಟೇ ಅಧಿಕಾರವು ಹೆಣ್ಣುಮಗಳಿಗೂ ಇರುತ್ತದೆ, ಹೆಂಡತಿಯು ಗಂಡನಷ್ಟೇ ಅಧಿಕಾರವುಳ್ಳವಳು ಎಂಬ ತತ್ವಗಳನ್ನು ಕಾಯದೆಯಲ್ಲಿ ಹೊಸದಾಗಿ ಸೇರ್ಪಡೆಮಾಡಲು ಬಹುಜನರು ಸಿದ್ಧರಾಗಿದ್ದಾರೆ. ಇದಕ್ಕೆ ಪುರಾಣ ಮತವಾದಿಗಳು ತಮ್ಮ ಕಡುತರವಾದ ವಿರೋಧವನ್ನು ತೋರಿಸಹತ್ತಿದ್ದಾರೆ. ಆದರೆ ಈ ವಿಷಯದಲ್ಲಿ ವೀರಶೈವರು ಯಾವ ಪಕ್ಷವನ್ನು ಸ್ವೀಕರಿಸುವರೆಂಬುದು ಇನ್ನೂ ತಿಳಿದುಬಂದಿಲ್ಲ. ಆದರೆ ಇನ್ನುಮೇಲೆ ಅವರು ತಮ್ಮ ಅಭಿಪ್ರಾಯನ್ನು ವ್ಯಕ್ತಮಾಡುವ ಸಂಧಿಯು ಬಂದೇಬರುವದು. ಆಗ ಅವರು ಪ್ರಮಥರ ಮಾರ್ಗವನ್ನು ಸ್ವೀಕರಿಸುವವರಾದರೆ ಹೆಣ್ಣುಮಕ್ಕಳಿಗೆ ಗಂಡುಮಕ್ಕಳಿಗೆ ಸಿಗುವಂತೆ ಮನೆತನದ ಆಸ್ತಿಯಲ್ಲಿ ಸರಿ ವಿಭಾಗಮಾಡಿಕೊಡುವದನ್ನು ಒಪ್ಪಲೇಬೇಕಾಗುವದು. ಇಲ್ಲದಿದ್ದರೆ ಪ್ರತಿಗಾಮಿ ಸ್ವರೂಪದ ಬ್ರಾಹ್ಮಣ ಮಾರ್ಗದಂತೆ ನಡೆಯುವದನ್ನು ಅವರು ಒಪ್ಪಬೇಕಾದೀತು. ಹೀಗಾದಲ್ಲಿ ವೀರಶೈವರು ಪ್ರಮಥರ ಮಾರ್ಗವನ್ನು ಬಿಟ್ಟಂತೆಯೇ ಸರಿ.

---

# ಶಿವಶರಣ ಆಯುದಕ್ಕಿ ಮಾರಯ್ಯನ ನಡೆ.

( ಸಂಪಾದಕರು. )

—:೦:—

ಸುಧಾರಿಸಿದ ರಾಷ್ಟ್ರಗಳ ಸಮಸ್ಯೆಗಳು ಎಲ್ಲ ಕಾಲಗಳಲ್ಲಿಯೂ ಒಂದೇ ವಿಧವಾಗಿ ಇದ್ದುದು ಕಂಡುಬರುತ್ತದೆ. ಪುರಾತನಕಾಲದಲ್ಲಿ ಭಾರತದಲ್ಲಿ ವಿಪುಲ ಭೂಮಿಯು ಸಾಗುವಳಿಯಾಗಿ ಇದ್ದರೂ ಬಡಜನರು ಅವುಗಳನ್ನು ಉಪಯೋಗಿಸದೆ ದೊಡ್ಡ ಪಟ್ಟಣಗಳಿದ್ದಲ್ಲಿಗೆ ಹೋಗಿ ತಮ್ಮ ನಿರ್ವಾಹ ಸಾಗಿಸುತ್ತಿದ್ದುದು ಕಂಡುಬರುತ್ತದೆ. ಅಲ್ಲಿ ಸಣ್ಣ ಪುಟ್ಟ ಉದ್ಯೋಗಗಳನ್ನು ಮಾಡುವದು ಕಡೆಗೆ ಭಿಕ್ಷೆ ಬೇಡುವದು ಇಂಥ ಕಾರ್ಯಗಳಲ್ಲಿ ಆವರು ಈಗಿನಂತೆ ತೊಡಗಿರುತ್ತಿದ್ದರು. ಆಗ ಸಹ ಬಡವರೂ ಉದ್ಯೋಗವಿಲ್ಲದವರೂ ಸಮಾಜದಲ್ಲಿ ಕಂಡುಬರುತ್ತಿದ್ದರು. ಈ ಸಂಗತಿಯು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಆವರಲ್ಲಿ ಬಹುಜನರು ಬಡವರಾಗಿದ್ದರು. ಅದರೆ ಜ್ಞಾನಿಗಳಾದ್ದರಿಂದ ಆವರು ಭಿಕ್ಷೆಯನು ಬೇಡಬೇಕೆಂದು ಯಾರಿಗೂ ಉಪದೇಶ ಮಾಡಲಿಲ್ಲ. ಎಲ್ಲರೂ ಶ್ರಮ ವಹಿಸಿ ಕೆಲವೊಂದು ಉದ್ಯೋಗವನ್ನು ಮಾಡಬೇಕೆಂದು ಬೋಧಿಸಿದರು. ಈ ಎಲ್ಲ ಸಂಗತಿಗಳು ಈಗಿನ ಸಮಾಜಕ್ಕೆ ಪೂರ್ಣವಾಗಿ ಅನ್ವಯಿಸುತ್ತವೆ. ಈ ದೃಷ್ಟಿಯಿಂದ ಆಯುದಕ್ಕಿ ಮಾರಯ್ಯನ ಚರಿತ್ರೆಯು ಬಹು ಬೋಧಪ್ರದವಾಗಿರುತ್ತದೆ.

ಮಾರಯ್ಯನು ರಾಯಚೂರ ಜಿಲ್ಹೆಯಲ್ಲಿರುವ ಅಮರೇಶ್ವರನ ಕೇವಲ ಭಕ್ತನಾಗಿ ಆಚರಿಸುತ್ತಿದ್ದನು. ಈ ದೇವಾಲಯವಿದ್ದ ಸ್ಥಾನವು ಪುಣ್ಯಕ್ಷೇತ್ರವೆಂದು ಜನರು ಈಗಲೂ ತಿಳಿಯುತ್ತಾರೆ. ಈಕ್ಷೇತ್ರವು ಕೃಷ್ಣಾ ನದೀತೀರಕ್ಕೆ ಬಹು ಸಮೀಪವಾಗಿದೆ. ಇದು ಗುಡಗುಂಟೆ ಸಂಸ್ಥಾನದಲ್ಲಿಯ ಒಂದು ಸುಂದರ ಪ್ರದೇಶವು. ಇದರ ಸಮೀಪದಲ್ಲಿ ರೇವಣಸಿದ್ಧೇಶ್ವರ ದೇವಾಲಯವಿದೆ. ಇದರಿಂದ ಆ ಮಹಾಪುರುಷನು ಈ ಸ್ಥಾನದಲ್ಲಿ ವಾಸಿಸಿರಬಹುದೆಂದು ತೋರುತ್ತದೆ. ಅನೇಕ ತೀರ್ಥಗಳು ಇಲ್ಲಿ ಇದ್ದು ಒಂದು ವಿಶಾಲವಾದ ಸರೋವರವೂ ಇದೆ. ಸಮೀಪದಲ್ಲಿ ಕಪಿಲೇಶ್ವರನ ಗುಡ್ಡವೆಂದು ಕರೆಯಲ್ಪಡುವ ಒಂದು ಪವಿತ್ರ ಸ್ಥಾನವಿದೆ. ಈ ದೇವಾಲಯಕ್ಕೆ ಸಮೀಪವಾಗಿಯೇ ಮಾರಯ್ಯನು ವಾಸಿಸುತ್ತಿರಬಹುದೆಂದು ತೋರುತ್ತದೆ.

ಬಸವಾದಿ ಪ್ರಮಥರ ಕಾಲದಲ್ಲಿ ಚಾಲುಕ್ಯರ ರಾಜಧಾನಿಯಾದ ಕಲ್ಯಾಣವು ಬಹು ವೈಭವದಿಂದ ಮೆರೆಯುತ್ತಿತ್ತು. ಅದು ಒಬ್ಬ ಚಕ್ರವರ್ತಿಯ ಆವಾಸ ಸ್ಥಾನವಾಗಿತ್ತು. ಅಲ್ಲಿದ್ದ ಗುಡಿಗೋಪುರಗಳ ಅವಶೇಷಗಳು ಈಗಲೂ ಕಲ್ಯಾಣದ ಸುತ್ತಲೂ ನಾಲ್ಕೆಂಟು ಮೈಲುಗಳ ವರೆಗೆ ನಮ್ಮ ಕಣ್ಣಿಗೆ ಬೀಳುತ್ತವೆ. ಇವುಗಳ ಮೇಲಿಂದ ಈ ರಾಜಧಾನಿಯ ಮೊದಲಿನ ಕಾಲದ ವಿಸ್ತಾರವನ್ನು ನಾವು ಊಹಿಸಬಹುದಾಗಿದೆ. ಆಯ್ದಕ್ಕಿ ಮಾರಯ್ಯನು ತನ್ನ ಗ್ರಾಮವನ್ನು ಬಿಟ್ಟು ಕಲ್ಯಾಣ ಪಟ್ಟಣಕ್ಕೆ ಬಂದು ವಾಸಿಸಹತ್ತಿದನು.

ಈ ಕಾಲದಲ್ಲಿ ಅವನು ಲಕ್ಕಮ್ಮನೆಂಬ ಹೆಂಡತಿಯನ್ನು ಲಗ್ನವಾಗಿದ್ದನು. ಆದರೆ ಮಾರಯ್ಯನು ಬಹಳ ಬಡವನಾಗಿ ತನ್ನ ಉಪಜೀವನವನ್ನು ಸಾಗಿಸಲು ಅವನಿಗೆ ಬಹಳ ಕಷ್ಟವಾಗಹತ್ತಿತ್ತು. ಆಗ ಉಭಯ ದಂಪತಿಗಳು ತಮ್ಮ ಉಪಜೀವನವನ್ನು ಹೇಗೆ ಸಾಗಿಸಬೇಕೆಂಬುದನ್ನು ಕುರಿತು ಬಹಳ ವಿಚಾರ ಮಾಡಹತ್ತಿದರು.

ಈ ಕಾಲದಲ್ಲಿ ಬಸವೇಶ್ವರನು ಕಲ್ಯಾಣದಲ್ಲಿ ಮುಖ್ಯ ಪ್ರಧಾನನಾಗಿ ವೀರಶೈವ ಧರ್ಮವನ್ನು ಎಲ್ಲ ಕಡೆಗೂ ವಿಸ್ತರಿಸುವದರಲ್ಲಿ ತೊಡಗಿದ್ದನು. ಶಿವಶರಣರೆಲ್ಲರೂ ಶಿವಾನುಭವ ಮಂಟಪದಲ್ಲಿ ಸೇರಿಕೊಂಡು ಶಿವಾನುಭವದ ತತ್ವಗಳನ್ನು ಪ್ರಸ್ಥಾಪಿಸುವವರಾಗಿದ್ದರು. ಶಿವಶರಣನಾದ ಮಾರಯ್ಯನೂ ಅವನ ಹೆಂಡತಿ ಲಕ್ಕಮ್ಮನೂ ಶಿವಜ್ಞಾನಿಗಳಾಗಿ ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ಕೇಳುತ್ತ ತಾವೂ ವಚನಗಳನ್ನು ರಚಿಸುವವರಾಗಿದ್ದರು. ಶಿವಾನುಭವಿಗಳು ಭಿಕ್ಷೆಯನ್ನು ಬೇಡದೆ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅದರಿಂದ ಬಂದ ಹಣವನ್ನು ದಾಸೋಹ ತತ್ವಗಳಿಗನುಸಾರವಾಗಿ ಉಪಯೋಗಿಸುವದೇ ಅವರ ಧರ್ಮವಾಗಿತ್ತು. ಆದ್ದರಿಂದ ಈ ದಂಪತಿಗಳು ಯಾವ ಕಾಯಕ ಕೈಕೊಳ್ಳಬೇಕೆಂಬುದನ್ನು ವಿಚಾರ ಮಾಡುತ್ತಿರಲು ಪೇಟೆಯ ಬೀದಿಯಲ್ಲಿ ವರ್ತಕರು ಕಾಳು ಮಾರುವಾಗ್ಗೆ ನೆಲದಮೇಲೆ ಬಹಳ ಅಕ್ಕಿಯನ್ನು ಚಲ್ಲುತ್ತಾರೆ. ಅವು ಹಾಳಾಗಿಹೋಗುತ್ತವೆ. ಅವನ್ನು ಗುಡಿಸಿ ಎಲ್ಲಿಯೋ ಒಗೆದು ಬಿಡುತ್ತಾರೆ. ಆದ್ದರಿಂದ ಇಂಥ ಅಕ್ಕಿಯನ್ನು ಆರಿಸಿ ಮನೆಗೆ ತಂದು ಅವರ ಮೇಲೆ ತಮ್ಮ ಉಪಜೀವನ ನಡಿಸಬೇಕೆಂದು ನಿಶ್ಚಯಿಸಿದರು. ಅವರು ಇದನ್ನೇ ತಮ್ಮ ಕಾಯಕವಾಗಿಟ್ಟುಕೊಂಡರು.

ಅವರು ಕಾಯಕ ಮಾಡುವ ರೀತಿಯು ಎಲ್ಲರೂ ಅನುಕರಣ ಮಾಡುವಂತಹದಾಗಿದೆ. ಅದು ಸಾಂಪ್ರತಕಾಲದಲ್ಲೂ ಸಹ ಅನ್ವಯಿಸುವಂತಹದು. ಒಂದು ವೇಳೆ ಅವರು ಕೈಕೊಂಡ ರೀತಿಯಂತೆ ನಾವು ನಮ್ಮ ಉದ್ಯೋಗವಲ್ಲಿ ಪ್ರವರ್ತಿಸಿದರೆ ನಾವು ಸುಖವಾಗಿರುವದಷ್ಟೇ ಅಲ್ಲ, ಇಡೀ ದೇಶವು ಸುಖವಾಗಿರುವದರಲ್ಲಿ ಸಂದೇಹವಿರಲಾರದು. ಅವರು ಕೈಕೊಂಡ ರೀತಿಯು ಹೇಗಿದ್ದಿತೆಂದರೆ—

ಮಾರಯ್ಯನು ತನ್ನ ಕಾಯಕದಲ್ಲಿ ಸೋಮಾರಿಯಾಗಿ ಯಾವ ದಿವಸವನ್ನೂ ವ್ಯರ್ಥ ಕಳೆಯುತ್ತಿರಲಿಲ್ಲ. ಅವನು ದಿನಾಲು ತಪ್ಪದೆ ಕೆಲಸಕ್ಕೆ ಹೋಗುವನು. ಅವನು ಮುಂಜಾವಿನಲ್ಲಿ ಮೂರು ಜಾವದವರೆಗೆ ಮೂರು ಸೊಲಿಗೆ ಅಕ್ಕಿಯನ್ನು ಕೂಡಿಸುವನು. ಹೆಚ್ಚಿಗೆ ಅಕ್ಕಿಯು ದೊರೆಯುವಂತಿದ್ದರೂ ಅದನ್ನು ಆರಿಸುತ್ತಿರಲಿಲ್ಲ. ಯಾಕೆಂದರೆ, ಅನಾವಶ್ಯಕವಾಗಿ ಕೂಡಿಸಬಾರದೆಂದು ಶಿವಶರಣರ ತತ್ವವಿದೆ. ಬಸವೇಶ್ವರರ ಅರಮನೆಯಲ್ಲಿ ಆಗಿಂದಾಗ್ಗೆ ಪ್ರಸ್ತಗಳು ಆಗುತ್ತಿದ್ದವು. ಆಗ ಅವನ ಸೇವಕರ ಅಜಾಗ್ರತೆಯ ಮೂಲಕ ಕಾಳುಕಡಿಗಳು ಹೆಚ್ಚಾಗಿ ಅವನ ಅರಮನೆಯ ಮುಂದೆ ಬೀಳುತ್ತಿದ್ದವು. ಮಾರಯ್ಯನು ಅಲ್ಲಿಗೆಹೋಗಿ ಅವುಗಳನ್ನು ಆರಿಸಿಕೊಂಡು ಬರುವನು. ಹೀಗೆ ಮೂರು ಸೊಲಿಗೆ ಅಕ್ಕಿಯು ಸಂಗ್ರಹವಾದ ಕೂಡಲೆ ಮಾರಯ್ಯನು ಮನೆಗೆ ಬಂದು ಹೀಗೆ ಕೂಡಿದ ಅಕ್ಕಿಯನ್ನು ಹೆಂಡತಿಗೆ ಕೊಡುವನು. ಆಮೇಲೆ ಅವಳು ಅದರಿಂದ ಅಡಿಗೆ ಮಾಡಿ ಉಭಯತರು ಪ್ರಸಾದ ರೂಪವಾಗಿ ಅದನ್ನು ಭುಂಜಿಸುವರು, ತಾವು ಸಂಪಾದಿಸಿದ್ದು ತಮ್ಮ ಶ್ರಮದ ಮೂಲಕ ಇರಬೇಕು. ಮತ್ತು ಅದನ್ನು ಪ್ರಸಾದವೆಂದು ತಿಳಿದು ಭುಂಜಿಸಬೇಕೆಂದು ಶಿವಶರಣರ ತತ್ವವಿದೆ. ಒಂದು ವೇಳೆ ಗಳಿಸಿದ್ದರಲ್ಲಿ ಏನಾದರೂ ಹೆಚ್ಚುಳಿದರೆ ಅದನ್ನು ದಾಸೋಹಕ್ಕಾಗಿ ಭಕ್ತನು ಉಪಯೋಗಿಸತಕ್ಕದ್ದು. ಹೀಗೆ ಪ್ರಮಥರ ಆಚರಣೆ ಇದೆ.

ಗುರುಲಿಂಗ ಜಂಗಮಕ್ಕೆ ಉಪಯೋಗಿಸುವದೇ ದಾಸೋಹವೆನಿಸಿಕೊಳ್ಳುತ್ತದೆ. ಪ್ರಮಥರ ತತ್ವಗಳ ಪ್ರಕಾರ ಈ ಗುರುಲಿಂಗ ಜಂಗಮಗಳು ಅನುಕ್ರಮವಾಗಿ ತಾನು ಮಾಡುವ ಬಾಹ್ಯ ಕ್ರಿಯೆ, ಅಂತರಂಗದ ವಿಚಾರ, ಮತ್ತು ಸ್ವಾನುಭವ ಇವುಗಳಿಗೆ ಸಂಬಂಧಪಡುತ್ತವೆ. ಇದರ ಅರ್ಥವು ತನ್ನ ಬಾಹ್ಯ ಕ್ರಿಯೆ ತನ್ನ ಅಂತರಂಗವ ವಿಚಾರ

ಮತ್ತು ತನ್ನಲ್ಲಿ ಉಂಟಾದ ಜ್ಞಾನ ಇವುಗಳ ಸಂಪೂರ್ಣತೆಗಾಗಿ ಯಾವ ಕಾರ್ಯಗಳನ್ನು ಮಾಡಬೇಕೋ ಅವುಗಳೇ ದಾಸೋಹ ಕಾರ್ಯಗಳೆನಿಸಿಕೊಳ್ಳುತ್ತವೆಂದಾಗುತ್ತದೆ. ಇಂಥ ಕಾರ್ಯಗಳಿಗೋಸ್ಕರ ಭಕ್ತನಾದವನು ತಾನು ಅನುಭವಿಸಿದ ಬಳಿಕ ಉಳಿದದ್ದನ್ನು ವಿನಿಯೋಗಿಸತಕ್ಕದ್ದು. ಈ ತತ್ವಕ್ಕನುಸರಿಸಿ ನಡಿಯುವದೇ ಶಿವಾನುಭವಿಯ ವರ್ತನೆಯಾಗಿದೆ.

ಹೀಗೆ ಮಾರಯ್ಯನು ತನ್ನ ಕಾಯಕದಲ್ಲಿ ವರ್ತಿಸುತ್ತಾ ಇದ್ದು ಅದು ಮುಗಿದಬಳಿಕ ತನ್ನ ಉಳಿದ ವೇಳೆಯನ್ನು ಅವನು ಶಿವಾನುಭವ ಮಂಟಪದಲ್ಲಿ ಜರಗುತ್ತಿದ್ದ ವಿವಾದಗಳನ್ನು ಅಥವಾ ವಿಚಾರ ವಿನಿಮಯಗಳನ್ನು ಕೇಳಲಿಕ್ಕೆ ಹೋಗುವನು. ಈ ರೀತಿ ಮಾರಯ್ಯನು ತನ್ನ ಜೀವಿತವನ್ನು ಸಾಗಿಸುವನು. ಬಸವಾದಿ ಪ್ರಮಥರ ಜೀವಿತ ಕ್ರಮವು ಹೀಗೆಯೇ ಇದ್ದುದು ಕಂಡುಬರುತ್ತಿದೆ. ಇದು ಧಾರ್ಮಿಕ ಉಚ್ಚ ವರ್ತನೆಯೇ ಸರಿ. ಮನುಷ್ಯನು ಜಟಾಧಾರಿಯಾಗಿ ಏಕಾಂತವಾಸಿಯಾಗಿ ಕಾಲಕಳೆಯುತ್ತಿದ್ದರೆ ಅವು ಆತ್ಮ ಸಂಪೂರ್ಣತೆಗೆ ಸಹಾಯಕಾರಿಯಾಗಲಾರದು.

ಹೀಗಿರುವಲ್ಲಿ ಒಂದು ದಿವಸ ಬಸವೇಶ್ವರನು ಮಾರಯ್ಯನು ಬಡತನದಲ್ಲಿ ಬಹು ಕಷ್ಟಪಡುತ್ತಿರುವದನ್ನು ಕೇಳಿ ಕನಿಕರ ಪಟ್ಟು ತನ್ನ ಸೇವಕರಿಗೆ ಮಾರಯ್ಯನು ಬರುವ ದಾರಿಯಲ್ಲಿ ಹೇರಳವಾಗಿ ಅಕ್ಕಿಯನ್ನು ಸುರಿದು ಬಾಯೆಂದು ಹೇಳಿ ಕಳುಹಲು ಅವರು ಹಾಗೆಯೇ ಮಾಡಿದರು ಮತ್ತು ತನ್ನ ಹೆಂಡಂದಿರಾದ ಗಂಗಾಂಬಿಕೆ ಮತ್ತು ನೀಲಾಂಬಿಕೆಯುವರಿಗೂ ಒರಳುಗಳ ಸುತ್ತಲೂ ಹಾಗೆಯೇ ಹೆಚ್ಚಾಗಿ ಕಾಳು ಚಲ್ಲಿರಿ ಎಂದು ತಿಳಿಸಿದನು. ಅವರು ಹಾಗೆಯೇ ಮಾಡಿದರು.

ಮರುದಿನ ಮಾರಯ್ಯನು ಎಂದಿನಂತೆ ಬೆಳಿಗ್ಗೆ ಎದ್ದು ಕಾಳನ್ನು ಹುಡುಕುತ್ತ ದಾರಿಯಲ್ಲಿ ಬರುತ್ತಿರಲು ಅವನು ಹೆಚ್ಚಾಗಿ ಅಲ್ಲಲ್ಲಿ ಕಾಳು ಬಿದ್ದದ್ದನ್ನು ಕಂಡು ಅವನು ಬಳಬಳನೆ ಅವುಗಳನ್ನು ಬಳದುಕೊಂಡು, ಬಸವೇಶ್ವರನ ಮನೆಯನ್ನು ಪ್ರವೇಶಿಸಲಾಗಿ ಅಲ್ಲಿಯೂ ಸಹ ಒರಳಿನ ಸುತ್ತಲೂ ಕಾಳು ದಟ್ಟಾಗಿ ಬಿದ್ದದ್ದನ್ನು ನೋಡಿ ಅವುಗಳನ್ನೆಲ್ಲ ತೆಗೆದುಕೊಂಡು ಮೂರು ಮಾನ ಅಕ್ಕಿಯನ್ನು ಒಂದೇ ಜಾವದಲ್ಲಿ ಕೂಡಿಸಿಕೊಂಡು ಬಹಳ ಸಂತುಷ್ಟನಾಗಿ ತನ್ನ ಮನೆಗೆ ಬಂದು ಲಕ್ಕಮ್ಮನ ಕೈಯ್ಯಲ್ಲಿ ಅವುಗಳನ್ನು ತಂದುಕೊಟ್ಟನು.

ಲಕ್ಕಮ್ಮನು ಅದನ್ನು ನೋಡಿ ಹರುಷಿತಳಾಗಲಿಲ್ಲ. ಅವಳು ಏನೂ ಮಾತನಾಡದೆ ಸುಮ್ಮನಿದ್ದಳು. ಆಗ ಮಾರಯ್ಯನು ಅವಳಿಗೆ — ಸತಿಯೇ ಮೌನವೇಕೆ ಎಂದು ಕೇಳಲು ಅವಳು ಅವನಿಗೆ— ಮೂರು ಜಾವದಲ್ಲಿ ತರತಕ್ಕ ಅಕ್ಕಿಯನ್ನು ಹೀಗೆ ಒಂದೇ ಜಾವದಲ್ಲಿ ಹೇಗೆ ನೀನು ತಂದೆ ? ಇನ್ನು ಎರಡು ಜಾವದವರಿಗೆ ಶ್ರಮವಾಡುವದನ್ನು ಉಳಿಸಿ ಕೊಂಡೆ. ಇದು ಕಾಯಕದ ನೇಮವನ್ನು ಪಾಲಿಸಿದಂತಾಯಿತೇ ಎಂದು ಕೇಳಲು ಮಾರಯ್ಯನು— ನಾನು ಬಸವನ ಮನೆಗೆ ಹೋದಾಗ್ಗೆ ಗಂಗಾಂಬಿಕೆ ನೀಲಾಂಬಿಕೆಯರು ಬಸವನು ಈ ರೀತಿ ತನ್ನ ಸೇವಕರ ಕಡೆಯಿಂದ ಅಲ್ಲಲ್ಲಿ ಹೆಚ್ಚಿಗೆ ಅಕ್ಕಿಯನ್ನು ನನ್ನಸಲುವಾಗಿ ಚಲ್ಲಿಸಿದ್ದಾನೆಂದು ನನಗೆ ತಿಳಿಸಿದರೆಂದು ಅವಳಿಗೆ ಹೇಳಿದನು.

ಇದನ್ನು ಲಕ್ಕಮ್ಮನು ಕೇಳಿ ಬಹಳ ಕೋಪಾವಿಷ್ಟಳಾದಳು. ಅವಳು ಆಗ— ಬಸವನು ತಾನು ಸಿರಿವಂತನೆಂದು ಗರ್ವಿಷ್ಠನಾಗಿದ್ದಾನೆ. ಶರಣರ ನಿಷ್ಠೆ ಎಂಬುದು ಆವನಿಗೆ ತಿಳಿಯದು. ಅವನು ಹೀಗೆ ನಮಗೆ ದಾನ ಮಾಡುತ್ತಾನೆಯೇ ? ಅವನು ಆಚರಿಸಿದ್ದು ಸಮುದ್ರಕ್ಕೆ ಉಪ್ಪುಕೊಡ್ಡಂತೆ, ಹಾಲ ಸಮುದ್ರಕ್ಕೆ ಹಯನವನ್ನು ಕೊಡುವಂತೆ, ಸಿದ್ಧರಸಕ್ಕೆ ಬಡತನವೆಂದು ಆದಕ್ಕೆ ಕಾಣಿಕೆಯನ್ನು ಕೊಡುವಂತೆ, ಹೀಗಿದ್ದು ನೀನು ನಾವು ಬಡವರೆಂಬುವರ ಮನೆಯಲ್ಲಿ ಈ ರೀತಿ ಕಾಯಕವನ್ನು ಹೇಗೆ ತಂದೆ ಎಂದು ಪತಿಯನ್ನು ಗದರಿಸಿದಳು. ಅವಳು ಪತಿಗೆ ನೀನು ತಂದ ಇಂಥ ಕಾಳು ಕಾಯಕಕ್ಕೆ ಸಲ್ಲದು ಅವುಗಳನ್ನು ಪರಮಾತ್ಮನಿಗೆ ಅರ್ಪಿಸಲು ಬರಲಾರದು. ಅವುಗಳನ್ನು ಬಸವನ ಮನೆಯ ಅಂಗಣದಲ್ಲಿ ಚಲ್ಲಿ ಬಾ, ಬಸವೇಶ್ವರನು ತಾನು ೧ ಲಕ್ಷ ೯೬ ಸಾವಿರ ಜಂಗಮರಿಗೆ ದಿನಾಲು ಅನ್ನ ನೀಡುತ್ತಿದ್ದೇನೆಂದು ಗರ್ವಿಷ್ಠನಾಗಿದ್ದಾನೆ. ಆದ್ದರಿಂದ ನೀನು ಅವನಲ್ಲಿದ್ದ ಎಲ್ಲ ಗಣಂಗಳಿಗೂ ನಾಳಿನ ದಿವಸ ನಮ್ಮ ಮನೆಗೆ ಭೋಜನಕ್ಕೆ ಬರಬೇಕೆಂದು ಆಮಂತ್ರಣವನ್ನು ಕೊಡು ಎಂದು ಹೇಳಿ ಪತಿಯನ್ನು ಕಳುಹಿಸಿದಳು. ಮಾರಯ್ಯನು ಹಾಗೆಯೇ ಆಗಲೆಂದು ಸತಿಯ ಆಜ್ಞೆಯನ್ನು ಮೀರಲಾರದೆ ಬಸವೇಶ್ವರನ ಮನೆಯ ಅಂಗಣದಲ್ಲಿ ಹೋಗಿ ಆಕೆಯು ಹೇಳಿದಂತೆಯೇ ಕಾಳುಗಳನ್ನು ಅಲ್ಲಿ ಚಲ್ಲಿಕೊಟ್ಟನು. ಮತ್ತು ಅಲ್ಲಿದ್ದ ಗಣಾಧೀಶ್ವರರೆಲ್ಲರೂ ನಾಳಿನ ದಿವಸ ನಮ್ಮ ಮನೆಗೆ ಭೋಜ

ನಕ್ಕೆ ಬರಬೇಕೆಂದು ಆಮಂತ್ರಣವನ್ನು ಕೊಟ್ಟನು. ಅವನ ಬಿನ್ನಹವನ್ನು ಬಸವ ಮೊದಲ್ಗೊಂಡು ಎಲ್ಲ ಶಿವಶರಣರೂ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳೂ ಒಪ್ಪಿಕೊಂಡರು.

ಇತ್ತ ಲಕ್ಕಮ್ಮನು ಮರುದಿನ ಅಸಂಖ್ಯಾತ ಮಹಾ ಗಣಂಗಳು ಮನೆಗೆ ಭೋಜನಕ್ಕೆ ಬರುವರೆಂದು ಕಾಯಕದಿಂದ ತಂದಿದ್ದ ಪದಾರ್ಥಗಳಿಂದ ಅಡಿಗೆಯನ್ನು ಸಿದ್ಧ ಮಾಡಿದಳು. ಆಮಂತ್ರಣವನ್ನಿತ್ತಂತೆ ಬಸವೇಶ್ವರ ಚನ್ನಬಸವೇಶ್ವರ ಮೊದಲ್ಗೊಂಡು ಎಲ್ಲ ಗಣಂಗಳು ಮರುದಿನ ಊಟಕ್ಕೋಸ್ಕರ ಮಾರಯ್ಯನ ಮನೆಗೆ ಬಂದರು. ಆದರೆ ಮನೆಯಲ್ಲಿ ಲ್ಲಿಯೂ ಅಡಿಗೆಯ ಸಾರಂಭವು ಅವರಿಗೆ ಕಾಣಿಸಲಿಲ್ಲ. ಅವರು ಆಶ್ಚರ್ಯಪಡುತ್ತ ಭೋಜನಕ್ಕೋಸ್ಕರ ತಮ್ಮ ತಮ್ಮ ಸ್ಥಲಗಳಲ್ಲಿ ಬಂದು ಕುಳಿತುಕೊಂಡರು. ಆಗ ಲಕ್ಕಮ್ಮನು ತನ್ನ ಕಾಯಕದಿಂದ ಬಂದ ಮೂರು ಸೊಲಿಗೆ ಧಾನ್ಯದಿಂದ ಸಿದ್ಧಮಾಡಿದ ಅನ್ನವನ್ನು ಅವರಿಗೆ ಎಡೆಮಾಡಹತ್ತಿದಳು ಅದು ಎಷ್ಟು ಮಾತ್ರವೂ ಕಡಿಮೆಯಾಗಲಿಲ್ಲ. ಅದು ಎಲ್ಲರಿಗೂ ಸಾಕಾಯಿತು. ಆಗ ಕಾಯಕದ ಮಹತ್ವವು ಎಷ್ಟೆಂಬುದು ಎಲ್ಲರಿಗೂ ತಿಳಿದುಬಂದಿತು. ಭಿಕ್ಷೆ ಬೇಡಿ ತಂದ ಆಹಾರ ಪದಾರ್ಥಗಳು ಶ್ರಮವಹಿಸಿ ಸಂಪಾದಿಸಿದವುಗಳಿಗೆ ಪಾಸಟಿಯಾಗಲಾರವೆಂಬುದು ಅವರಿಗೆ ತಿಳಿದುಬಂದಿತು. ಶ್ರಮಪಟ್ಟು ಕಾಯಕದಿಂದ ತಂದ ಪದಾರ್ಥಗಳು ಎಂದು ಸವೆಯಲಾರವು. ಅವುಗಳು ಶಾಶ್ವತವಾದವುಗಳು, ಅವು ಯಾವಾಗಲೂ ಇರುವಂಥವು ಎಂಬುದು ಅವರಿಗೆ ಕಂಡುಬಂದಿತು. ಇದನ್ನು ನೋಡಿ ಬಸವಣ್ಣನು ನನ್ನಿಂದ ತಪ್ಪಾಯಿತೆಂದು ಲಕ್ಕಮ್ಮ ಮಾರಯ್ಯನಿಗೆ ಹೇಳಿ ಅವರಿಗೆ ನಮಿಸಿ ಮನೆಗೆ ಬಂದನು. ಈ ಪ್ರಕಾರ ಆಯದಕ್ಕಿ ಮಾರಯ್ಯ ಲಕ್ಕಮ್ಮಗಳು ತಮ್ಮ ಕಾಯಕವನ್ನು ಮಾಡುತ್ತ ತಮ್ಮ ಮಹಿಮೆಯನ್ನು ಜಗತ್ತಿಲ್ಲಿ ತೋರಿ ಮೆರೆದರು.

ಅವರು ಕಾಯಕವನ್ನು ಮಾಡುತ್ತ ಬಂದರೂ ಅವರು ತಮ್ಮ ನಿತ್ಯ ಲಿಂಗಾರ್ಚನೆಯಲ್ಲಿ ತಲ್ಲೀನರಾಗಿ ತಮ್ಮ ಪ್ರಪಂಚವನ್ನು ಸಾಗಿಸುವರು. ಕಾಯಕದಿಂದ ತಮಗೆ ಬಂದಿತೆಂದು ಅವರು ಎಂದೂ ಉಬ್ಬಲಿಲ್ಲ.

ಅವರು ಲಿಂಗಾರ್ಚನೆಯಲ್ಲಿ ಸುಗಂಧವನ್ನು ಬೀರುವಂಥ ಪುಷ್ಪಗಳನ್ನೂ ಪಲ್ಲವಗಳನ್ನೂ ಸಂಗ್ರಹಿಸಿ ಅವುಗಳಿಂದಲೂ ಧೂಪ ದೀಪ

ಅಕ್ಷತೆಗಳಿಂದಲೂ ತಮ್ಮ ಲಿಂಗಪೂಜೆಯನ್ನು ಮಾಡುತ್ತ ಲಿಂಗದಲ್ಲಿ ಧ್ಯಾನ ಮಗ್ನರಾಗಿ ತಮ್ಮ ನಿತ್ಯದ ಆಚರಣೆಗಳನ್ನು ಪಾಲಿಸುವರು. ಸತಿಪತಿಗಳಿಬ್ಬರೂ ಲಿಂಗ ಭೋಗೋಪಭೋಗಿಗಳು. ಹೀಗೆ ಅವರು ಆನಂದದಿಂದ ತಮ್ಮ ಜೀವನ ಕ್ರಮವನ್ನು ಸಾಗಿಸುತ್ತ ಸಾಮರಸ್ಯ ಪದವನ್ನು ಹೊಂದಿದರು.

ಆಯದಕ್ಕಿ ಮಾರಯ್ಯ ಮತ್ತು ಲಕ್ಕಮ್ಮ ಇವರು ಶ್ರೇಷ್ಠ ತರಗತಿಯ ವಚನಕಾರರಿದ್ದಾರೆ. ಆಯದಕ್ಕಿ ಮಾರಯ್ಯನ ವಚನಗಳು ಕೆಲವು ಮಾತ್ರ ನಮ್ಮ ಸಂಗ್ರಹವಲ್ಲಿವೆ. ಅವು ಉಚ್ಚ ಭಾವನೆಯಿಂದ ತುಂಬಿಕೊಂಡಂಥವು ಇವೆ. ಅವುಗಳಲ್ಲಿ ಕೆಲವುಗಳನ್ನಾಗಲಿ ಆರಿಸಿಕೊಳ್ಳದೆ ಇದ್ದ ಒಬ್ಬನಾದರೂ ವಚನಸಂಗ್ರಹಕಾರನು ದೊರೆಯುವದಿಲ್ಲ. ಕಾಯಕದ ವಿಷಯವಾಗಿ ಬರೆಯುವಲ್ಲಿ ಎಲ್ಲರೂ 'ಕಾಯಕವೇ ಕೈಲಾಸ' ಎಂಬ ನುಡಿಯನ್ನು ತಮ್ಮ ಲೇಖಗಳಲ್ಲಿ ಮತ್ತು ಭಾಷಣಗಳಲ್ಲಿ ಹೇಳುವದುಂಟು. ಈ ನುಡಿಯು ಆಯದಕ್ಕಿ ಮಾರಯ್ಯನದಿರುತ್ತದೆ. ಮಾರಯ್ಯನ ಮುದ್ರಿಕೆಗಳು : "ಅಮರೇಶ್ವರಾ, ಅಮಳೇಶ್ವರ ಲಿಂಗ, ಅಮಳೇಶ್ವರಾ." ಎಂದು ಇವೆ.

ಆಯದಕ್ಕಿ ಮಾರಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಇದರಿಂದ ಈತನು ಈಚಿನವನಾಗಿರದೆ ಬಸವೇಶ್ವರನ ಕಾಲದವನಾಗಿರಬೇಕೆಂದು ತೋರುತ್ತದೆ.

ಬಸವೇಶ್ವರನ ಕಾಲದಲ್ಲಿ ಶಿವಶರಣರ ಆಚರಣೆಗಳು, ನಡೆನುಡಿಗಳು ಇವುಗಳನ್ನು ನಿರೀಕ್ಷಿಸಿದಲ್ಲಿ ಆಧುನಿಕ ಕಾಲದಲ್ಲಿ ರೂಢಿಗೆ ಬರುತ್ತ ಇರುವ ಪದ್ಧತಿಗಳು ಆ ಕಾಲದಲ್ಲಿಯೂ ಆಚರಣೆಗೆ ಬಂದಿದ್ದವೆಂಬುದು ಗೊತ್ತಾಗುತ್ತದೆ. ಇದು ಒಮ್ಮೊಮ್ಮೆ ನಮಗೆ ಆಶ್ಚರ್ಯವನ್ನುಂಟುಪಂತಹದಿರುತ್ತದೆ.

# ಕೈ॥ ಎಸ್. ಎಸ್. ಬಸವನಾಳರು

(ಲೇಖಕರು:— ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳು ಶರಣಸಾಹಿತ್ಯ-ಸಂಪಾದಕರು, ಬೆಂಗಳೂರು.)

---

'ಜಯ ಕರ್ನಾಟಕ' ಪತ್ರಿಕೆಯ ಸಂಪಾದಕರೂ, ಬೆಳಗಾಂವಿ ಲಿಂಗರಾಜ ಕಾಲೇಜಿನ ನಿವೃತ್ತ ಕನ್ನಡ ಮತ್ತು ಇತಿಹಾಸ ಪ್ರಾಧ್ಯಾಪಕರೂ, ಕರ್ನಾಟಕ ವಿದ್ಯಾವರ್ಧಕ ಸಂಘದ ಓರ್ವ ಮುಂದಾಳುಗಳೂ, ಶಿಕ್ಷಣ ಶಾಸ್ತ್ರ ಪ್ರವೀಣರೂ, ಕರ್ನಾಟಕ ಏಕೀಕರಣದ ಉಜ್ವಲಾಭಿಮಾನಿಗಳೂ, ಕರ್ನಾಟಕ ವಿಶ್ವವಿದ್ಯಾನಿಲಯದ ಸ್ಥಾಪಕರಲ್ಲಿ ಒಬ್ಬರೂ ಆದ, ಪ್ರೊ॥ ಎಸ್. ಎಸ್. ಬಸವನಾಳ ಎಂ. ಎ. ರವರು, ತಾ। ೨೨-೧೨-೫೧ ಸಂಜೆ ೫-೩೦ ಗಂಟೆಗೆ ಧಾರವಾಡದ ತಮ್ಮ ಮನೆಯಲ್ಲಿ ತಮ್ಮ ೫೮ನೇ ವರ್ಷ ವಯಸ್ಸಿನಲ್ಲಿ ಹೃದಯ ಕ್ರಿಯೆ ನಿಂತು ಇಹಲೋಕ ವ್ಯಾಪಾರವನ್ನು ತ್ಯಜಿಸಿ ಶಿವಲೋಕ ಪ್ರಾಪ್ತಿಯನ್ನು ಪಡೆದರೆಂದು ಕೇಳಿ ನಾವು ಕಣ್ಣೀರಿಡುತ್ತೇವೆ. ಶ್ರೀ. ಬಸವನಾಳರ ವಿಯೋಗವು ಕರ್ನಾಟಕದ ಓರ್ವ ಅನುಭವಿಕ ಪ್ರಮುಖ ಮಹನೀಯರು ಇಲ್ಲದಂತೆ ಮಾಡಿತೆಂದು ಹೇಳಬಹುದಾಗಿದೆ.

ಕೈ। ಬಸವನಾಳರು ಬಹುಮುಖವಾದ ಪ್ರಜ್ಞೆಯುಳ್ಳವರು. ನಮಗೆ ತಿಳಿದ ಮಟ್ಟಿಗೆ ವೀರಶೈವ ಸಮಾಜದಲ್ಲಿ ಮೊಟ್ಟಮೊದಲು ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದವರಿವರು. ಆಗ ಇವರು ಬಯಸಿದ್ದರೆ ಸರಕಾರದಲ್ಲಿ ಉನ್ನತವಾದ ಅಧಿಕಾರ ಸಿಗುತ್ತಿತ್ತು. ಆದರೆ ಇವರ ಜೀವನವು ಸೇವಾ ಪ್ರಧಾನವಾದುದರಿಂದ ಇವರು ತಮ್ಮ ಬೆಲೆಯುಳ್ಳ ಬಾಳನ್ನು ಸಮಾಜದ, ದೇಶದ ಸೇವೆಗೆ ಮೀಸಲು ಮಾಡಿದರು. ಸುಮಾರು ೩೫ ವರ್ಷಗಳ ತಮ್ಮ ಸಾರ್ವಜನಿಕ ಜೀವನದಲ್ಲಿ ಇವರು ನಾನಾ ಮುಖಗಳಿಂದ ಜನಜೀವನಕ್ಕೆ ಮಿಗಿಲಾದ ಸೇವೆಯನ್ನೆಸಗಿದ್ದಾರೆ.

## ಶಿಕ್ಷಣ ಪ್ರಚಾರ.

ಪ್ರೊ। ಬಸವನಾಳರು ದೇಶದ ಅಭಿವೃದ್ಧಿಗೆ ಶಿಕ್ಷಣ ಪ್ರಚಾರವು ಅತ್ಯಗತ್ಯವೆಂದು ಭಾವಿಸಿ ಕರ್ನಾಟಕದಲ್ಲಿ ಪ್ರಸಿದ್ಧವಾದ ಕೆ. ಎಲ್. ಇ.

ಸೊಸೈಟಿಯವರೊಡನೆ ಕೂಡಿಕೊಂಡು ಹೆಚ್ಚು ಹುರುಪಿನಿಂದ ಕೆಲಸ ಮಾಡಿದರು. ಧಾರವಾಡದ ರಾಜಾ ಲಖಮಗೌಡ ಹೈಸ್ಕೂಲ್, ಬೆಳಗಾಂವಿಯ ಆರಟಾಳ್-ಗಿಲಗಂಚಿ ಹೈಸ್ಕೂಲ್, ಲಿಂಗರಾಜ ಕಾಲೇಜು, ಮತ್ತು ಟ್ರೇನಿಂಗ್ ಕಾಲೇಜು, ಸೊಲ್ಲಾಪುರದಲ್ಲಿ ಕೆ. ಎಲ್. ಇ. ಹೈಸ್ಕೂಲ್ ಮೊದಲಾದವುಗಳನ್ನು ಸ್ಥಾಪಿಸಿದರು. ಬಾಗಲಕೋಟೆಯ ಬಸವೇಶ್ವರ ಕಾಲೇಜು, ವಿಜಾಪುರದ ಸಿದ್ಧೇಶ್ವರ ಹೈಸ್ಕೂಲ್, ಮತ್ತು ವಿಜಯಾ ಕಾಲೇಜು, ಬಳ್ಳಾರಿಯ ವೀರಶೈವ ಹೈಸ್ಕೂಲ್ ಮತ್ತು ಕಾಲೇಜು, ಹುಬ್ಬಳ್ಳಿಯ ಭೂಮರಡ್ಡಿ ಇಂಜನಿಯರಿಂಗ್ ಕಾಲೇಜು ಮತ್ತು ಜಿ. ಜಿ. ಕಾಮರ್ಸ್ ಕಾಲೇಜು ಮೊದಲಾದವುಗಳ ಸ್ಥಾಪನೆಯ ಬಗ್ಗೆ ಇವರು ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಅಲ್ಲದೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಬೋರ್ಡ್ ಪರೀಕ್ಷಾ ಸದಸ್ಯರಾಗಿಯೂ, ಮುಂಬಾಯಿ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿಯೂ ಇದ್ದರು. ಇವರು ಮೊದಲು ಧಾರವಾಡದಲ್ಲಿ ಹೈಸ್ಕೂಲ್ ಉಪಾಧ್ಯಾಯರಾಗಿಯೂ ಆಮೇಲೆ ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿಯೂ ಹಲವು ವರ್ಷಗಳ ಕಾಲ ಕೆಲಸ ಮಾಡಿದರು. ಅನಂತರ ತಮ್ಮ ಅನಾರೋಗ್ಯದ ನಿಮಿತ್ತನಾಗಿ ಆ ಪ್ರಾಧ್ಯಾಪಕ ವೃತ್ತಿಯನ್ನು ಬಿಟ್ಟು ಧಾರವಾಡದಲ್ಲಿ ತಮ್ಮ ಸ್ವತಂತ್ರವಾದ ಪತ್ರಿಕಾ ವ್ಯವಸಾಯವನ್ನು ಪ್ರಾರಂಭಿಸಿ ನಡೆಸುತ್ತಿದ್ದರು.

## ಸಾಹಿತ್ಯ ಸೇವೆ.

ಪ್ರೊ॥ ಬಸವನಾಳರು ಕನ್ನಡ, ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲಿ ಉದ್ದಾಮ ಪಂಡಿತರು. ಮರಾಠಿ ಮತ್ತು ತೆಲುಗು ಭಾಷೆಗಳ ಪರಿಚಯವನ್ನೂ ಉಳ್ಳವರಾಗಿದ್ದರು. ಇವರು ತಮ್ಮ ಜೀವಮಾನವನ್ನೆಲ್ಲ ಗ್ರಂಥರಚನೆಯಲ್ಲಿ ಉಪಯೋಗಿಸಿದರು ಎಂದರೆ ತಪ್ಪಾಗಲಾರದು. ಕರ್ನಾಟಕ ವಿದ್ಯಾವರ್ಧಕ ಸಂಘ, ವೀರಶೈವ ಸಾಹಿತ್ಯ ಸಮಿತಿಗಳ ಮೂಲಕವಾಗಿಯೂ ಸ್ವತಂತ್ರವಾಗಿಯೂ ಇವರು ಅನೇಕ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

ಮುಂದೆ ಹೇಳುವ ಗ್ರಂಥಗಳು ಈ ಮಹನೀಯರಿಂದ ಸಂಪಾದಿಸಲ್ಪಟ್ಟು ಪ್ರಕಟವಾಗಿವೆ.

೧. ಕರ್ನಾಟಕ ಕಾವ್ಯಾವಲೋಕನಂ
೨. ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ
೩. ಚೆನ್ನಬಸವ ಪುರಾಣಂ
೪. ಪ್ರಭುಲಿಂಗಲೀಲೆ
೫. ಶಬರಶಂಕರ ವಿಲಾಸಂ
೬. ವೀರಶೈವ ತತ್ವ ಪ್ರಕಾಶ
೭. ಬಸವಣ್ಣನವರ ವಚನಗಳು
೮. ಪಂಪಾಶತಕ, ರಕ್ಷಾಶತಕ, ಮಲುಹಣರಗಳೆ, ಕುಂಬಾರ ಗುಂಡಯ್ಯ ರಗಳೆ
೯. ಕೈವಲ್ಯ ಕಲ್ಪವಲ್ಲರಿ
೧೦. ಹಿಂದೂಸ್ಥಾನದ ಇತಿಹಾಸ
೧೧. Sayings of Basava

ಈ ಮೇಲೆ ಕಂಡ ಗ್ರಂಥಗಳೇ ಅಲ್ಲದೆ ಅನೇಕ ಗ್ರಂಥಗಳಿಗೆ ಮುನ್ನುಡಿಯನ್ನು ಬರೆದು, ಅನೇಕರಿಗೆ ಗ್ರಂಥಗಳನ್ನು ಪರಿಷ್ಕರಿಸಿ ಕೊಟ್ಟು ಕನ್ನಡ ಸಾಹಿತ್ಯಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಅವರು ೧೯೪೪ರಲ್ಲಿ ಸೇರಿದ ಅ. ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿಯೂ ಅದೇ ವರ್ಷ ಹಿರೇಕೆರೂರಿನಲ್ಲಿ ನಡೆದ ಅ. ಭಾರತ ವೀರಶೈವ ಸಾಹಿತ್ಯ ಸಮ್ಮೇಳನದ ಉದ್ಘಾಟಕರಾಗಿಯೂ ಚುನಾಯಿತರಾಗಿ ಗೌರವಿಸಲ್ಪಟ್ಟಿದ್ದಾರೆ. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾಗಿಯೂ, ಕೋಶ ಸಮಿತಿಯ ಸದಸ್ಯರಾಗಿಯೂ ಇದ್ದರು. ವೀರಶೈವ ಸಾಹಿತ್ಯದಲ್ಲಿ ಪ್ರೊ|| ಬಸವನಾಳರು ಅದ್ವಿತೀಯ ಪಂಡಿತರಾಗಿದ್ದರು. ಉತ್ತಮೋತ್ತಮ ವಿಮರ್ಶಕರಾಗಿದ್ದರು.

## ಪತ್ರಿಕಾ ಕ್ಷೇತ್ರದಲ್ಲಿ.

ಶ್ರೀ. ಬಸವನಾಳರು ಹುಟ್ಟು ಸಾಹಿತಿಗಳಾದಂತೆಯೇ ಶ್ರೇಷ್ಠ ಪತ್ರಿಕಾ ವೃತ್ತಿಯವರೂ ಆಗಿದ್ದರು. ಇವರು ಸುಮಾರು ೩೦ ವರ್ಷಗಳ ಹಿಂದೆಯೇ ಧಾರವಾಡದಿಂದ “ಪ್ರಬೋಧ” ಎಂಬ ಉತ್ತಮವಾದ ಮಾಸ ಪತ್ರಿಕೆಯನ್ನು ಪ್ರಾರಂಭಿಸಿ ನಡೆಸಿದರು. ವಿದ್ಯಾವರ್ಧಕ ಸಂಘದ ‘ವಾಗ್ಭೂಷಣ’

ಪತ್ರಿಕೆಗೂ ಹೆಚ್ಚಿನ ಸೇವೆಯನ್ನು ಸಲ್ಲಿಸಿದರು. ಇತ್ತೀಚಿಗೆ ಶ್ರೀ. ಆಲೂರು ವೆಂಕಟರಾಯರಿಂದ ಪ್ರಾರಂಭಿಸಲ್ಪಟ್ಟ, ಶ್ರೀ ಬೆಳಗಾವಿ ರಾಮಚಂದ್ರರಾಯರಿಂದ ಮುಂದುವರಿಸಲ್ಪಟ್ಟ 'ಜಯ ಕರ್ನಾಟಕ' ಮಾಸ ಪತ್ರಿಕೆಯನ್ನು ವಹಿಸಿಕೊಂಡು ಉತ್ತಮವಾಗಿ ನಡೆಸಿದರು. ಅಲ್ಲದೆ ಜಯಕರ್ನಾಟಕ ಎಂಬ ವಾರ ಪತ್ರಿಕೆಯನ್ನೂ ಪ್ರಾರಂಭಿಸಿದರು. ಈ ಪತ್ರಿಕೆಗಳಿಗಾಗಿಯೇ ಧಾರವಾಡದ ಉಳವಿ ಬಸವೇಶ್ವರ ಗುಡ್ಡದಲ್ಲಿರುವ ತಮ್ಮ ಮನೆಯಲ್ಲಿ 'ರವೀಂದ್ರ ಮುದ್ರಣಾಲಯ' ಎಂಬ ಅಚ್ಚುಕೂಟವನ್ನು ಸ್ಥಾಪಿಸಿದರು. ತಮ್ಮ ಸುದೀರ್ಘವಾದ ಜೀವನದಲ್ಲಿ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳಿಗೆ ಪ್ರೊ॥ ಬಸವನಾಳರು ನೂರಾರು ಮಹತ್ವದ ಲೇಖನಗಳನ್ನು ಬರೆದು ಉಪಕಾರ ಮಾಡಿದರು. ಈ ರೀತಿಯಿಂದ ಶ್ರೀ ಬಸವನಾಳರಿಂದ ಕನ್ನಡ ಪತ್ರಿಕಾ ಪ್ರಪಂಚಕ್ಕೆ ಹೆಚ್ಚಿನ ಸೇವೆಯಾಗಿದೆಯೆಂದು ಹೇಳಬಹುದು. ನಮ್ಮ ನಾಡಿನಲ್ಲಿ ಇವರೊಬ್ಬ ವಿದ್ವಾನ್ ಸಂಪಾದಕರಾಗಿದ್ದರು.

## ಸಮಾಜ ಸೇವಾ ಕಾರ್ಯಗಳು.

ಪ್ರೊ॥ ಬಸವನಾಳರು ವೀರಶೈವ ಸಮಾಜದ ಒಂದು ಗಣ್ಯ ಮನೆತನಕ್ಕೆ ಸೇರಿದವರು. ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನವನ್ನು ಉಳ್ಳವರು. ೧೯೩೬ ರಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಅಖಿಲಭಾರತ ವೀರಶೈವ ತರುಣ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೩೮ ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿದ್ದರು. ಇವರು ಕರ್ನಾಟಕವನ್ನೆಲ್ಲಾ ಸುತ್ತಾಡಿ ನಾಡಹಬ್ಬ, ಬಸವ ಜಯಂತಿ ಮೊದಲಾದ ವಿಶೇಷ ಕಾಲಗಳಲ್ಲಿ ತಮ್ಮ ವಿದ್ವತ್ಪೂರ್ಣವಾದ ಭಾಷಣಗಳಿಂದ ಜನಜಾಗೃತಿಯನ್ನು ಮಾಡಿದ್ದಾರೆ. ಅನೇಕ ಕಡೆ ಕರ್ನಾಟಕ ಸಂಘಗಳನ್ನು ಸ್ಥಾಪಿಸಿದ್ದಾರೆ. ತರುಣ ಸಂಘಗಳನ್ನು ಪ್ರೋತ್ಸಾಹಿಸಿದ್ದಾರೆ. ಕರ್ನಾಟಕ ಏಕೀಕರಣಕ್ಕೆ ಬೆಂಬಲವಿತ್ತಿದ್ದಾರೆ. ಇವರು ವಿಶಾಲ ಭಾರತವನ್ನೆಲ್ಲಾ ಸುತ್ತಾಡಿ ವಿಶೇಷ ಲೋಕಾನುಭವವನ್ನು ಪಡೆದಿದ್ದರು. ಶ್ರೀ ಬಸವನಾಳರು ಭೀಮಕವಿಯ ಬಸವಪುರಾಣ, ಬಸವಣ್ಣನವರ ವಚನಗಳ ಪುಸ್ತಕ ಇವುಗಳ ಸಂಶೋಧನೆಯ ಕಾರ್ಯವನ್ನು ಮಾಡಿ ಮುಗಿಸಿದ್ದಾರೆ.

## ಗುಣ ಪ್ರಶಂಸೆ

ಶ್ರೀ ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳರು ಉನ್ನತವಾದ ಜೀವನವುಳ್ಳವರು. ಆಡಕವಾದ ಮೈಕಟ್ಟು, ನಸುಗೆಂಪಾದ ದೇಹಕಾಂತಿ, ಪ್ರಶಾಂತವಾದ ಮುಖಮುದ್ರೆ, ವಿದ್ವತ್ಪೂರ್ಣವೂ ಹಿತಮಿತವೂ ಆದ ಮಾತುಗಾರಿಕೆ, ವಿನಯ ಮತ್ತು ವಿವೇಕದಿಂದ ಕೂಡಿದ ನಡೆವಳಿಕೆ, ಆಶೆಯಿಲ್ಲದ ಮನಸ್ಸು, ಸದಾ ಪರೋಪಕಾರಕ್ಕಾಗಿ ಚಿಂತಿಸುವ ಆತ್ಮ, ದೊಡ್ಡ ಕುಟುಂಬದಲ್ಲಿ ಸಹನೆಯಿಂದ ಬಾಳುವ ಶಾಂತಜೀವನ, ದೀನಾನಾಥರಲ್ಲಿ ಕನಿಕರ, ಗುರುಹಿರಿಯರಲ್ಲಿ ಭಕ್ತಿವಿಶ್ವಾಸ ಇವು ಬಸವನಾಳರ ಜೀವನದ ಹೆಗ್ಗುರುತುಗಳೆಂದು ಹೇಳಬಹುದು.

ಶ್ರೀಯುತರ ವಿಯೋಗದಿಂದ ಅ. ಭಾ. ವೀರಶೈವ ಸಮಾಜ ಬಾಂಧವರು ಕನ್ನಡ ನಾಡುನುಡಿಗಳ ಅಭಿಮಾನಿಗಳೂ ಶ್ರೀಯುತರ ಸಾವಿರಾರು ಮಂದಿ ಶಿಷ್ಯಪ್ರಶಿಷ್ಯರೂ, ಸ್ನೇಹಿತ ವರ್ಗದವರೂ ಕಣ್ಣೀರನ್ನು ಸುರಿಸುತ್ತಿದ್ದಾರೆ. ಅವರ ವಿಯೋಗದಿಂದ ಅವರ ಧರ್ಮಪತ್ನಿಯವರಾದ ಶ್ರೀಮತಿ ಶಾಂತಮ್ಮನವರೂ ಅವರ ಸಹೋದರರಾದ ಶ್ರೀ ವ್ಹಿ. ಎಸ್. ಬಸವನಾಳ ವಕೀಲರೂ ಅವರ ೬ ಮಂದಿ ಹೆಣ್ಣು ಮತ್ತು ೪ ಮಂದಿ ಗಂಡುಮಕ್ಕಳೂ ಹೆಚ್ಚಿನ ದುಃಖಕ್ಕೆ ಈಡಾಗಿದ್ದಾರೆ. ಮೃತರ ಆತ್ಮಕ್ಕೆ ಶಾಂತಿಯನ್ನೂ, ವಿಯೋಗಿಗಳ ಮನಸ್ಸಿಗೆ ಸಮಾಧಾನವನ್ನೂ ಕರುಣಾಳುವಾದ ಪರಮೇಶ್ವರನು ಅನುಗ್ರಹಿಸಲಿ. ಅವರ ಕೀರ್ತಿ ದೇಹವು ಕನ್ನಡ ನಾಡನುಡಿಗಳಿರುವವರೆಗೆ ಮೆರೆಯಲಿ.

ಶ್ರೀ ಶಿವಲಿಂಗಪ್ಪ ಬಸವನಾಳರ ತಂದೆ ಶಿವಯೋಗಪ್ಪನವರು ಬಳ್ಳಾರಿಯಲ್ಲಿ ರೇಲ್ವೆಸ್ಟೇಷನ್ ಮಾಸ್ತರರಾಗಿದ್ದಾಗ ೧೮೯೩ರಲ್ಲಿ ಇವರು ಬಳ್ಳಾರಿಯಲ್ಲಿಯೇ ಜನ್ಮಿಸಿದರು. ಇವರ ಪ್ರಾಥಮಿಕ ಶಿಕ್ಷಣ ತೆಲುಗಿನಲ್ಲಾಯಿತು. ಅನಂತರ ಶಿವಯೋಗೆಪ್ಪನವರಿಗೆ ಹಾವೇರಿಗೆ ವರ್ಗವಾದಮೇಲೆ ಇವರಿಗೆ ಕನ್ನಡ ಶಿಕ್ಷಣ ಪ್ರಾರಂಭವಾಯಿತು. ಮುಂದೆ ಗದಗ ಧಾರವಾಡದಲ್ಲಿ ಶಿಕ್ಷಣ ಮುಂದುವರಿಯಿತು. ಅನಂತರ ಕಾಲೇಜು ಶಿಕ್ಷಣ ಪುಣೆಯ ಡೆಕ್ಕನ ಕಾಲೇಜಿನಲ್ಲಾಯಿತು. ೧೯೧೬ರಲ್ಲಿ ಇವರು ಎಂ. ಎ. ಪರೀಕ್ಷೆ

ಯಲ್ಲಿ ಉತ್ತೀರ್ಣರಾದರು ಪುಣೆಯಲ್ಲಿ ಅಭ್ಯಾಸಮಾಡಿದುದರಿಂದ ಮರಾಠಿ ಭಾಷೆ ಪರಿಚಯವಾಯಿತು. ಇವರು ಎಂ. ಎ. ಆದಾಗ ಕೆಲವು ಹಣ ಬಹುಮಾನ ಬಂತು. ಆದರೆ ಆ ಬಹುಮಾನವನ್ನು ಗ್ರಂಥ ರೂಪದಲ್ಲಿ ಪಡೆದರು.

ಶ್ರೀ ಬಸವನಾಳರು ಕರ್ನಾಟಕ ವಿಶ್ವವಿದ್ಯಾನಿಲಯದ ಸಭೆಯಲ್ಲಿ ಭಾಗವಹಿಸಿದಾಗ ಎದೆನೋವು ಕಾಣಿಸಿಕೊಂಡು ಅಲ್ಲಿಂದ ಮನೆಗೆ ಬಂದು ಸ್ವಲ್ಪ ಹೊತ್ತಿನಲ್ಲಿಯೇ ಶಿವಲೋಕಕ್ಕೆ ಪ್ರಯಾಣಮಾಡಿದರು. ಮರಣ ಕಾಲದಲ್ಲಿ ಇವರ ಸಹೋದರರು ಮುಂಬಯಿಯಲ್ಲಿದ್ದುದರಿಂದ ಅವರು ಅಲ್ಲಿಂದ ಬರುವವರೆಗೆ ಇವರ ಸಮಾಧಿ ತಡವಾಯಿತು. ತಾ॥ ೨೩-೧೨-೫೧ ಸಂಜೆ ಧಾರವಾಡ ಲಿಂಗಾಯತ ಭವನದ ಆವರಣದಲ್ಲಿ ಲಿಂಗರಾಜರ ಅಮೃತಶಿಲಾಪುತ್ತಳಿಯಿರುವ ಸ್ಥಳದಲ್ಲಿ ಸಮಾಧಿಯಾಯಿತು. ಇವರ ಅಂತ್ಯ ದರ್ಶನಕ್ಕೆ ಮುಂಬಯಿ ಬೆಳಗಾವ, ಗದಗ, ಹುಬ್ಬಳ್ಳಿ, ಬಾಗಿಲ ಕೋಟೆ, ಹಾವೇರಿ, ದಾವಣಗೆರೆ ಮೊದಲಾದ ಕಡೆಗಳಿಂದ ಸಾವಿರಾರು ಜನರು ಬಂದಿದ್ದರು. ಮೃತರ ಕಳೇಬರದ ಮೆರವಣಿಗೆಯಲ್ಲಿ ೭-೮ ಸಾವಿರ ಜನರು ಸೇರಿದ್ದರು. ಶ್ರೀ ಬಸವನಾಳರ ವಿಯೋಗದಿಂದ ಕನ್ನಡ ನಾಡು ಕಳವಳಗೊಂಡಿದೆ. ಹುಬ್ಬಳ್ಳಿ-ಧಾರವಾಡಗಳಲ್ಲಿ ಹರತಾಳವಾಗಿದೆ. ನವಯುಗ ವಿಶ್ವಕರ್ನಾಟಕ ಮೊದಲಾದ ಕನ್ನಡ ಪತ್ರಿಕೆಗಳು ಅಗ್ರಲೇಖನ ಬರೆದಿವೆ. ಇವೆಲ್ಲ ಕರ್ನಾಟಕದಲ್ಲೆಲ್ಲಾ ಶ್ರೀಯುತರ ಜನಪ್ರಿಯತೆಯ ನಿದರ್ಶನವೆನ್ನಬಹುದು.

## ಕಣ್ಣೀರು

ಕಂದ॥ ಬಸವನ ಆಳೆಂದೆನ್ನುವ ।
ಜಸಮಂ ಗಳಿಸುತ್ತೆ ಧರೆಯೊಳೆಸೆದಿರ್ದಾತಂ ॥
ಅಸುವಳಿದೀಗಳ್ ಪೋದಂ ।
ರಸೆಯೊಳಗಾಯ್ತುದರಿನಿಂದು ಮುಗುದಂ ಜನಕಂ ॥ ೧ ॥

ಶಿವಶರಣರಂತೆ ನಡೆದಂ ।
ಶಿವಲಿಂಗಾಭಿಧ ವಿಮತ್ಯಬುಧಕುಲತಿಲಕಂ ॥

ಶಿವಯೋಗಪ್ಪನ ತನುಜಂ ।
ಶಿವಮೂರ್ತಿಯ ಭಕ್ತವೃಂದ ಚಿಂತಾರತ್ನಂ ॥ ೨ ॥

ನೀನಳಿದುದಕೇ ಮರುಗೆಂ ।
ಮಾನವಕುಲಗಣ್ಯ ಬಸವನ ಸಾಹ್ವಯನೇ ॥
ಮಾಸಿನಿ ಕನ್ನಡ ತಾಯ್ಮೊಗಂ ।
ಕ್ಷೀಣಿಸುವಳ್ ವಿರಹದಿಂದಲಿಂಬುಪೆ ಸಂತಾಪಂ ॥ ೩ ॥

ಲಿಂಗಾಯತರ ಮತಕ್ಕಂ ।
ಮಂಗಳಕರನೆನಿಸಿ ಪಿರಿಯ ಜಸಮಂ ತಂದಯ್ ॥
ಲಿಂಗಾಂಗನಿಷ್ಠನೆನಿಸುತೆ ।
ಬಂಗಾರಕೆ ಮೆರಗನಿಟ್ಟತೆರದಿಂದೆಸೆವಯ್ ॥ ೪ ॥

ನಡೆದಂತೆ ನುಡಿವ ಧರೆಯೊಳ್ ।
ನುಡಿದಂದದೆ ನಡೆದು ನಿನ್ನ ಜೀವನ ಪಥದೊಳ್ ॥
ನಡೆನುಡಿಯೊಂದಾದುದರಿಂ ।
ಪ್ರೌಢನಡಿಯಂ ಪಡೆದೆಯೆಂದು ಬುಧಕುಲವಂದ್ಯಾ ॥ ೫ ॥

ತುಂಬಿದ ಬಾವಿಗೆ ಕಲ್ಲಂ ।
ಕುಂಭಿಣಿಯೊಳ್ ಬೀರಿದಂದವಾಯ್ತ್ತೀಗಳ್ ॥
ಶಂಭೋ, ನಿನ್ನಯ ಕೃಪೆಯುಂ ।
ನಂಬಿದವರ್ಗೇತಕಿಂತು ದುಃಖಂ ಧರೆಯೊಳ್ ॥ ೬ ॥

—ಬ. ಶಿವಮೂರ್ತಿಶಾಸ್ತ್ರೀ,

# ಭಾರತ ತತ್ವ ಜ್ಞಾನ ಪರಿಷತ್ತು.

ಭಾರತ ತತ್ವಜ್ಞಾನ ಪರಿಷತ್ತು ಡಿಸೆಂಬರ ೨೭ನೇ ತಾರೀಖಿನ ದಿವಸ ಪುಣೆ ಪಟ್ಟಣದಲ್ಲಿ ಫರ್ಗ್ಯುಸನ್ ಕಾಲೇಜಿನ ಸಭಾಮಂದಿರದಲ್ಲಿ ಸೇರಿತ್ತು. ಈ ಪರಿಷತ್ತನ್ನು ತೆರೆಯುವ ಸಮಾರಂಭವನ್ನು ಕೇಂದ್ರ ಮಂತ್ರಿಗಳಾದ ಶ್ರೀ ಎನ್. ವ್ಹಿ. ಗಾಡಗೀಳ ಇವರು ನೆರವೇರಿಸಿದರು. ಮತ್ತು ಅಲಹಾಬಾದ ವಿಶ್ವವಿದ್ಯಾಲಯದ ಡಾ॥ ಏ. ಸಿ. ಮುಕರ್ಜಿ ಅವರು ಅದರ ಅಧ್ಯಕ್ಷರಾಗಿದ್ದರು. ಮಹಾರಾಷ್ಟ್ರ ವಿಶ್ವವಿದ್ಯಾಲಯದ ವ್ಹಾಯಿಸ್ ಚಾನ್ಸೆಲರಾದ ಡಾ। ಜಯಕರ ಇವರು ಸತ್ಕಾರಕ ಸಂಘದ ಚೇರಮನ್ನರಾಗಿದ್ದರು. ಸಭೆಗೆ ಭಾರತದ ಬೇರೆ ಬೇರೆ ಭಾಗಗಳಿಂದ ೧೫೦ ಜನ ಪ್ರತಿನಿಧಿಗಳು ಬಂದಿದ್ದರು. ಅದಕ್ಕೆ ರಾಷ್ಟ್ರಸಂಘದ ಸಲುವಾಗಿ ನಾಲ್ಕು ಪ್ರತಿನಿಧಿಗಳು ಬಂದದ್ದರ ಮೇಲಿಂದ ಈ ಸಭೆಯ ಮಹತ್ವವು ಎಷ್ಟಿದ್ದಿತೆಂಬುದು ಗೊತ್ತಾಗುತ್ತದೆ.

ಭಾರತದ ಸಂಸ್ಕೃತಿಯು ಬಹು ಹಳೆಯದಾದುದು, ವ್ಯಾಪಕವಾದುದು, ಆದ್ದರಿಂದ ಪೃಥ್ವಿಯ ರಾಜ್ಯಗಳಲ್ಲಿ ಉಂಟಾಗಿರುವ ಬಿಕ್ಕಟ್ಟುಗಳನ್ನು ಪರಿಹಾರ ಮಾಡಲಿಕ್ಕೆ ಅದರಿಂದ ಸಹಾಯವಾದೀತೆಂಬ ತಿಳುವಳಿಕೆಯು ಎಲ್ಲ ದೇಶಗಳಲ್ಲಿ ಉಂಟಾಗಿರುತ್ತದೆ. ಆದ್ದರಿಂದ ಅಂತರ ರಾಷ್ಟ್ರೀಯ ಪ್ರಶ್ನೆಗಳಲ್ಲಿ ಭಾರತಕ್ಕೆ ಮಹತ್ವದ ಸ್ಥಾನವು ಪ್ರಾಪ್ತವಾಗುತ್ತದೆ. ಇದಕ್ಕೆ ಅನುಗುಣವಾಗಿ ಈ ತತ್ವಜ್ಞಾನ ಪರಿಷತ್ತಿನಲ್ಲಿ ಭಾಷಣಗಳು ಜರುಗಿರುತ್ತವೆ.

ಉದ್ಘಾಟಕರಾದ ಶ್ರೀ ಗಾಡಗೀಳ ಇವರು ತಮ್ಮ ಭಾಷಣದಲ್ಲಿ ಸದ್ಯದ ಸಮಸ್ಯೆಗಳನ್ನು ತತ್ವಜ್ಞಾನವು ಬಿಡಿಸಬಲ್ಲದೋ ಹೇಗೆಂಬುದನ್ನು ಇವುಗಳು ಆಹ್ವಾನ ಮಾಡುವಂತೆ ನನಗೆ ಭಾಸವಾಗುತ್ತದೆ. ಶ್ರೀ ಗಾಡಗೀಳ ಇವರು ಯಾವಾಗಲೂ ರಾಜಕೀಯ ಸಮಸ್ಯೆಗಳಲ್ಲಿ ಇದ್ದವರು ಆದ್ದರಿಂದ ಅವರು ತಮ್ಮ ಭಾಷಣದಲ್ಲಿ ಅನಿರೀಕ್ಷಿತ ಬಿಕ್ಕಟ್ಟುಗಳೂ ದೇಶದಲ್ಲಿ ಒದಗಿದ್ದರಿಂದ ಸುಧಾರಣೆಯ ಕೆಲಸಗಳು ನಮ್ಮಿಂದಾಗಿಲ್ಲ. ಆದ್ದರಿಂದ ನಿರಾಶಾಮಯವಾದ ವಾತಾವರಣವು ಜನತೆಯಲ್ಲಿ ಉಂಟಾಗಿದೆ. ಇವುಗಳನ್ನು ಬಿಡಿಸಲು ಜೀವನದ ಬಗ್ಗೆ ವ್ಯಾಪಕವಾದ ನೋಟವು

ಎಲ್ಲರಲ್ಲಿ ಉಂಟಾಗಬೇಕು. ಈ ತೆರದ ಯೋಜನೆಯು ಈಗ ನಮಗೆ ಬೇಕಾಗಿರುತ್ತದೆ. ಈ ದೃಷ್ಟಿಯಿಂದ ನಾವೆಲ್ಲರೂ ವಿಚಾರ ಮಾಡಬೇಕೆಂದು ಅವರು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಅಧ್ಯಕ್ಷರಾದ ಡಾ॥ ಏ. ಸಿ. ಮುಕರ್ಜಿಯವರು ತಮ್ಮ ಭಾಷಣದಲ್ಲಿ ಮನುಷ್ಯನ ಜೀವನದ ರೀತಿಯನ್ನು ವಿವರಿಸುತ್ತ ಅದು ಈಗಿನ ಶಾಸ್ತ್ರೀಯ ಅಥವಾ ವಿಜ್ಞಾನದ ಪ್ರಯೋಗಗಳಿಗೆ ಮೀರಿದ್ದಿರುತ್ತದೆ. ಜೀವನದ ಗುಣಗಳನ್ನು ತಿಳಿಯಲು ವಿಜ್ಞಾನಿಗಳು ಪದಾರ್ಥಗಳನ್ನು ತಿಳಿಯಲು ಹೇಗೆ ಅವುಗಳನ್ನು ಛೇದ ಪರೀಕ್ಷೆ ಮಾಡುತ್ತಾರೋ ಹಾಗೆ ಮಾಡಲು ಬರಲಾರದು. ಅದು ಇಂಥ ಪ್ರಯೋಗಗಳಿಗೆ ಮೀರಿದ್ದಿರುತ್ತದೆ. ಈ ಸಂಗತಿಯನ್ನು ನಾವು ಲಕ್ಷಿಸದೆ ಹೋದರೆ ಮಾನವನ ಜ್ಞಾನವು ಇತರ ನಿರ್ಜೀವ ವಸ್ತುಗಳಂತೆ ಉಳಿದು ಅದರ ಪ್ರಗತಿಯು ಕುಂಠಿತವಾಗುವದೆಂದು ವಿವರಿಸಿದರು.

ಒಟ್ಟಿಗೆ ಉಭಯತರ ಭಾಷಣಗಳಲ್ಲಿ ತತ್ವಜ್ಞಾನದ ಮೂಲಕ ಪ್ರಗತಿಯ ನಿಶ್ಚಿತ ಸ್ವರೂಪ ರೇಷೆಗಳನ್ನು ತೋರಿಸಿದ್ದು ಏನೂ ಕಂಡು ಬರುವದಿಲ್ಲ.

ಆದರೆ ಸತ್ಕಾರಕ ಸಂಘದ ಅಧ್ಯಕ್ಷರಾದ ಡಾ॥ ಜಯಕರ ಇವರ ಭಾಷಣದಲ್ಲಿ ದೇಶವು ಈಗ ಕೈಕೊಳ್ಳಬೇಕಾದ ಕಾರ್ಯಗಳ ದೃಷ್ಟಿಯಿಂದ ಅನೇಕ ಮಹತ್ವದ ಸೂಚನೆಗಳು ಇದ್ದದ್ದು ಕಂಡುಬರುತ್ತದೆ. ಅವರು ಹೇಳಿದ್ದೇನೆಂದರೆ ಈಗ ಪೃಥ್ವಿಯ ಎಲ್ಲ ರಾಜ್ಯಗಳಲ್ಲಿ ಜನರು ಅನೇಕ ತೆರದ ಬಲವುಗಳಿಗೆ ಒಳಗಾಗಿದ್ದಾರೆ. ವಿಕಾರ ಪೂರಿತ ಮನೋಭಾವನೆಗಳು ಎಲ್ಲೆಲ್ಲ ಉಂಟಾಗಿವೆ. ಸುತ್ತಲೂ ಬೇಗೆ ಹತ್ತಿ ಜ್ವಾಲೆಗಳು ಪಸರಿಸಹತ್ತಿವೆ. ಈ ಸ್ಥಿತಿಯನ್ನು ದೂರಮಾಡಲು ತತ್ವಜ್ಞಾನಿಗಳು ಮಾತ್ರ ಸಮರ್ಥರೇ ಹೊರತು ಬೇರೆ ಯಾರೂ ಇಲ್ಲ ಎಂದು ನುಡಿದು ಅವರಿಂದಲೇ ಜಗತ್ತಿನಲ್ಲಿ ಶಾಂತತೆಯನ್ನುಂಟುಮಾಡುವದು ಶಕ್ಯವೆಂದು ಹೇಳಿದರು. ಡಾ॥ ಜಯಕರ ಇವರು ಹೀಗೆ ಪ್ರಸ್ತಾಪಿಸಿದ್ದು ಬಹಳ ಮಹತ್ವದ್ದಿದೆ. ಅವರು ಹೇಳಿದ್ದು ತತ್ವಜ್ಞಾನಿಗಳು ಕ್ಷಣಿಕ ಮತ್ತು ಆಕುಂಚಿತ ಒಡಕುಗಳಿಗೆ ಮಹತ್ವ ಕೊಡುವದಿಲ್ಲ. ಅವರು ಸ್ಥಾಯಿಕ

ಹೊಂದ ಮತ್ತು ಚಿರಕಾಲ ಉಳಿಯುವ ತತ್ವಗಳನ್ನು ಪ್ರಯೋಗದಲ್ಲಿ ತರಲು ಪ್ರಯತ್ನಿಸುತ್ತಾರೆ. ಇದನ್ನು ಲಕ್ಷಿಸಿ ಅವರು ಇಹ ಮತ್ತು ಪರ ಎಂಬವುಗಳನ್ನು ವಿಂಗಡಿಸುವದಿಲ್ಲೆಂದು ಹೇಳಿದರು. ಅವರು ಮನುಷ್ಯ ಪ್ರಾಣಿ, ಉದ್ಭಿಜಗಳು ಮತ್ತು ಜೀವ ಜಂತುಗಳು ಇವುಗಳಲ್ಲೆಲ್ಲ ಒಂದೇ ಚೈತನ್ಯವು ತುಂಬಿರುತ್ತದೆ. ಇದು ಒಂದೇವಿಧವಾಗಿರುತ್ತದೆ. ಡಾ॥ ಜಗದೀಶ ಚಂದ್ರ ಬೋಸ ಇವರು ಪ್ರಯೋಗಗಳ ಮೂಲಕ ಇದನ್ನು ಸಿದ್ಧಪಡಿಸಿದ್ದಾರೆ. ವೇದ ವಾಙ್ಮಯವು ಇದನ್ನೇ ಸಮರ್ಥಿಸುತ್ತದೆ ಎಂದು ಹೇಳುತ್ತ ಅವರು ಟೆನಿಸನ್ ಎಂಬ ಇಂಗ್ಲಿಷ ಕವಿಯಾದರೂ ಈ ತತ್ವವನ್ನೇ ತನ್ನ ಕಾವ್ಯಗಳಲ್ಲಿ ಪ್ರತಿಪಾದಿಸುತ್ತಾನೆ. ಈ ಸ್ಥಿತಿಯಲ್ಲಿ ನಾವು ಭಾರತನ ತತ್ವಜ್ಞಾನಿಗಳು ತಮ್ಮ ತತ್ವಜ್ಞಾನವನ್ನು ಜಗತ್ತಿನಲ್ಲಿ ಧೈರ್ಯದಿಂದ ಬಹಿರಂಗವಾಗಿ ಸಾರಬೇಕು. ಅದು ಯಾರಿಗೂ ಅಂಜುವ ಕಾರಣವಿಲ್ಲ. ಅವರು ತಮ್ಮಲ್ಲಿ ಅಲ್ಪತ್ವವು ಇದೆ ಎಂದು ತಿಳಿದು ಹಿಂಜರಿಯಕೂಡದು. ನಮಗೆ ಈಗ ಸ್ವಾತಂತ್ರ್ಯವು ದೊರಕಿರುತ್ತದೆ ಎಂದು ಅವರು ತಿಳಿಯಪಡಿಸಿದರು.

ಆವೇಳೆ ಸಭಾಕಾಲದಲ್ಲಿ ವಿವಿಧ ವಿಷಯಗಳು ಚರ್ಚಿಸಲ್ಪಟ್ಟು ಕೆಲವು ನಿರ್ಣಯಗಳು ಆದವು. ಆದರೆ ಪ್ರಕೃತ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳ ಮೇಲೆ ಯಾವ ಮಹತ್ವದ ನಿರ್ಣಯಗಳಾದಂತೆ ಕಂಡುಬರದಿದ್ದರೂ ನಮ್ಮ ದೇಶದ ತತ್ವಜ್ಞಾನಿಗಳು ಡಾ॥ ಜಯಕರ ಇವರು ತೋರಿಸಿದ ಮಾರ್ಗವನ್ನು ಇನ್ನೂ ಅನುಸರಿಸಹತ್ತಿರುವದಿಲ್ಲೆಂದು ಕಂಡುಬರುತ್ತದೆ.

ಡಾ॥ ಜಯಕರ ಇವರು ನುಡಿದಂತೆ ತತ್ವಜ್ಞಾನವನ್ನು ಆಚರಣೆಯಲ್ಲಿ ತರಲು ಅನೇಕ ಅತಂಕಗಳಿವೆ. ಮೊದಲನೆಯ ಮುಖ್ಯ ಅತಂಕವು ಹಿಂದೂ ಸಮಾಜದಲ್ಲಿರುವ ಜಾತಿಭೇದಗಳು. ಇವುಗಳ ಮೂಲಕ ಹೆಚ್ಚು ಕಡಿಮೆ ಎಂಬ ಭಾವನೆಗಳು ಜನರಲ್ಲಿ ತುಂಬಿಹೋಗಿರುತ್ತವೆ. ಎಲ್ಲರೂ ಸರಿಸಮಾನರೆಂಬ ಭಾವವು ಅವರಲ್ಲಿ ಉಂಟಾಗಿಲ್ಲ. ಇದರಿಂದ ತತ್ವಗಳು ಅವರಲ್ಲಿ ಆಚರಣೆಯಲ್ಲಿ ಬರುವದು ಕಷ್ಟವು. ಅಲ್ಲದೆ ಬಹುಜನ ಸಮಾಜವು ಇನ್ನೂ ಅನಾಗರಿಕತೆಯ ಸ್ಥಿತಿಯಲ್ಲಿ ಇದೆ. ಇದರಿಂದ ಸಮಾ

ಜದಲ್ಲಿ ಸುಶಿಕ್ಷಿತರು ಮತ್ತು ಅಶಿಕ್ಷಿತರು ಎಂಬ ಎರಡು ಪಂಗಡಗಳಾಗಿವೆ. ಇಂಥ ಪಂಗಡಗಳಿರುವವರೆಗೆ ಸಮಾಜ ರಚನೆಯ ಪ್ರಯತ್ನಗಳು ಸುಲಭ ಸಾಧ್ಯವಲ್ಲ.

ಡಾ॥ ಜಯಕರರು ಯಾವ ತತ್ವಗಳನ್ನು ಅವಲಂಬಿಸಿ ಸಮಾಜ ರಚನೆಯನ್ನು ಮಾಡಬೇಕೆಂದು ಅಭಿಪ್ರಾಯಪಟ್ಟಿರುವರೋ ಅವುಗಳನ್ನು ಸರಿಯಾಗಿ ಬಸವಾದಿ ಪ್ರಮಥರು ೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಒಂದು ಬಲವಾದ ಸಮಾಜವನ್ನು ಕಟ್ಟಿದರು. ಇದರಲ್ಲಿ ಅವರು ಉಚ್ಚ ನೈತಿಕ ಮತ್ತು ಆಧ್ಯಾತ್ಮಿಕ ತತ್ವಗಳನ್ನು ಅವಲಂಬಿಸಿದ್ದಾರೆ. ವ್ಯವಹಾರ ಮತ್ತು ಉದ್ಯೋಗ ಇವುಗಳನ್ನು ಸಹ ಇದರಲ್ಲಿ ಸೇರ್ಪಡೆ ಮಾಡಿದ್ದಾರೆ. ಇದರ ರೀತಿಯನ್ನು ನಮ್ಮ ಆಧುನಿಕ ವೀರಶೈವ ವಿದ್ವಾಂಸರು ತಿಳಿದು ಕೊಂಡು ಅದನ್ನು ಜನತೆಯ ಮುಂದೆ ಇಡುವದು ಬಹು ಅವಶ್ಯವಾಗಿದೆ.

---

ಕ್ಕರ್ಥ. ಈ ಸಕಲ ಪ್ರಪಂಚು ದಾಂಟಿದವಗಲ್ಲದೆ ಅಂಗದ ನಿಜವು ಕಾಣಬಾರದು ಎಂಬುದೀಗ ಇಳತಿವ ಮೀರಿ ನಿಂದವಗಲ್ಲದೆ ಸದಾಶಿವ ಮೂರ್ತಿ ಲಿಂಗವಿಲ್ಲ ಎಂಬ ಶಬ್ದಕ್ಕರ್ಥ.

೧೩ ಉರಿಯ ಸಿರಿಯ ನಡುವೆ ಒಂದು ಸರೋವರದಲ್ಲಿ ನರಿ ತಿರುಗಾಡುತ್ತಿದೆ. ಬಾಲ ಉಡುವಿನಂತ. ನಡು ಬಳ್ಳುವಿನ ಚೊಲ್ಲೆಯ ದಂತ, ತಲೆ ಕೋಡಗದಂತೆ, ರೂಪು ನರಿಯಾಗಿ, ಆತ್ಮ ಕುಕ್ಕುರನಾಗಿ, ಏತಕ್ಕೂ ಸಿಕ್ಕದೆ ಸರೋವರದಲ್ಲಿ ಹರಿದಾಡುತ್ತಿದೆ. ಅದು ಸದಾಶಿವ ಮೂರ್ತಿಲಿಂಗನವರಿದವರಿಗಲ್ಲದೆ ಸಿಕ್ಕದು ಆ ಜೀವ.

ಟೀಕು:— ತಾರತ್ರಯಾಗ್ನಿ ಸಂಬಂಧವಾದ ಸ್ಥೂಲದೇಹದ ಪ್ರಾರಬ್ಧಭೋಗ ಸಂಬಂಧವಾದ ಸೂಕ್ಷ್ಮ ದೇಹದ ಮಧ್ಯದಲ್ಲಿ ಎಂಬುದೀಗ ಉರಿಯ ಸಿರಿಯ ನಡುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮ ದೇಹದ ಮಧ್ಯಸ್ಥವಾದ ಹೃದಯ ಕಮಲದಲ್ಲಿ ಜೀವನು ಹಂಸಗತಿಗಳಿಂ ಸಂಚರಿಸುತ್ತಿಹನೆಂಬುದೀಗ ಒಂದು ಸರೋವರದಲ್ಲಿ ನರಿ ತಿರುಗಾಡುತ್ತಿದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಭವಪಾಶವು ತಮೋಗುಣದಲ್ಲಿ ಕೂಡಿರುತ್ತಿಹುದೆಂಬುದೀಗ ಬಾಲ ಉಡುವಿನಂದ ವೆಂಬ ಶಬ್ದಕ್ಕರ್ಥ. ಆ ಜೀವನ ಅಂತರ್ದೇಹವು ಸತ್ವಗುಣವನೊಳಗೆ ಕೂಡಿಕೊಂಡಿಹುದೆಂಬುದೀಗ ನಡು ಬಳ್ಳುವಿನ ಚೊಲ್ಲಹದಂದವೆಂಬ ಶಬ್ದಕ್ಕರ್ಥ. ಆ ಜೀವವೃತ್ತಿ ಜ್ಞಾನವೆಂಬ ಶಿರಸ್ಸು ಮನೋವರ್ತನೆಯಲ್ಲಿ ಕೂಡಿರುತ್ತಿಹುದೆಂಬುದೀಗ ತಲೆ ಕೋಡಗದಂದ ಎಂಬ ಶಬ್ದಕ್ಕರ್ಥ. ಆ ದೇಹವು ಜೀವನ ವ್ಯವಹಾರದಲ್ಲಿ ಕೂಡಿರುತ್ತಿಹುದೆಂಬುದೀಗ ರೂಪು ನರಿಯಾಗಿ ಎಂಬ ಶಬ್ದಕ್ಕರ್ಥ. ಆ ಜೀವನು ಇಂದ್ರಿಯಗಳ ವ್ಯವಹಾರದಲ್ಲಿ ಚರಿಸುತ್ತಿಹನೆಂಬುದೀಗ ಆತ್ಮ ಕುಕ್ಕುರನಾಗಿ ಎಂಬ ಶಬ್ದಕ್ಕರ್ಥ. ಆ ಜೀವನ ನಿಲವು ಭಿನ್ನ ಯೋಗಾಭ್ಯಾಸಂಗಳಿಂ ಗ್ರಹಿಸಿಹೆನೆಂದೊಡೆ ಅಸಾಧ್ಯವೆಂಬುದೀಗ ಯಾತಕ್ಕು ಸಿಕ್ಕದ ಎಂಬ ಶಬ್ದಕ್ಕರ್ಥ. ಆ ಜೀವನು ಅಷ್ಟದಳ ಕಮಲದಲ್ಲಿ ಮನ ಪವನಂಗಳೆಂಬ ರೆಕ್ಕೆಗಳಿಂ ಚರಿಸುತ್ತಿಹುದಾಗಿ ಸುಜ್ಞಾನೋದಯದಿಂ ತನ್ನ ನಿಜವ ತಿಳಿದ ಶರಣಂಗೆ ಜೀವಭಾವವಳಿದು ಸಜ್ಜೀವ ಸ್ವರೂಪವಾಗುತ್ತಿಹುದಲ್ಲದೆ ಉಳಿದವರಿಗೆ ಅಸಾಧ್ಯವೆಂಬುದೀಗ ಸರೋವರದಲ್ಲಿ ಹರಿದಾಡುತ್ತಿದೆ, ಅದು ಸದಾಶಿವಮೂರ್ತಿ ಲಿಂಗವನರಿದವರಿಗಲ್ಲದೆ ಸಿಕ್ಕದು ಜೀವ ಎಂಬ ಶಬ್ದಕ್ಕರ್ಥ.

## (೩) ಜ್ಞಾನದಿಂದಲೇ ಮಾಯೆಯ ನಿವೃತ್ತಿಯು.

**ವಿವರಣೆ:—** ಮಾಯಾ ಪಾಶವು ಲಿಂಗಜ್ಞಾನದಿಂದ ನಿವೃತ್ತಿಯಾಗುತ್ತದೆ. (೧೪) ಮನುಷ್ಯನ ಕರ್ಮತ್ರಯಗಳೂ ಕೂಡ ಜ್ಞಾನದಿಂದಲೇ ದೂರಾಗುತ್ತವೆ. (೧೫) ಜ್ಞಾನಿಯಾದವನು ಸಮಾಚಾರದಿಂದ ವರ್ತಿಸಬೇಕು. (೧೬) ಹೀಗೆ ಆಚರಿಸಿದಲ್ಲಿ ಅವನಿಗೆ ಬಚ್ಚಬರಿಯ ಬಯಲು ಅಂದರೆ ಮೋಕ್ಷವು ಪ್ರಾಪ್ತವಾಗುತ್ತದೆ. (೧೭) ಮತ್ತು ಮಾಯೆಯು ಅಳಿದು ಇಷ್ಟ ಪ್ರಾಣ ಭಾವಲಿಂಗಗಳು ಅಳವಡುವವು. (೧೮) ಆದರೆ ಭಿನ್ನಾಚಾರದಿಂದ ವರ್ತಿಸುವವರಿಗೆ ಇದು ಅಳವಡಲಾರದು. (೧೯) ಮಾಯಾಪ್ರಪಂಚು ನಿವೃತ್ತಿಮಾಡಿದಲ್ಲಿ ಚಿದ್ಘನ ಪ್ರಕಾಶವು ದೋರಿಕೊಳ್ಳುವದು. (೨೦-೨೧)

### ವಚನಗಳು

೧೪. ಗಂಡನಿಲ್ಲದ ಸತಿ ಯೋನಿ ಇಲ್ಲದೆ ಮಕ್ಕಳ ಹಡೆದು ನಾಲಿಗೆ ಇಲ್ಲದ ಬಾಯಲ್ಲಿ ಜೋಗುಳವಾಡುತ್ತೈದಾಳೆ. ತೊಟ್ಟಿಲಿಲ್ಲದ ನೇಣು ಹೊರತೆಯಾಗಿ ಗಂಟ ಕಟ್ಟಿ ಮಗುವಿಲ್ಲದೆ ಶಿಶುವಳುತ್ತಿದೆ. ಅದಕ್ಕೆ ಮೊಲೆ ಇಲ್ಲ. ಹಾಲ ಬೇಕು. ಸದಾಶಿವಮೂರ್ತಿ ಲಿಂಗವ ನರಿತಲ್ಲದಾಗದು.

ಟೀಕು:- ಜೀವನ ವ್ಯವಹಾರವಿಲ್ಲದ ಜ್ಞಾನಶಕ್ತಿ ಸ್ವರೂಪನಾದ ಶರಣನೆಂಬುದೀಗ ಗಂಡನಿಲ್ಲದ ಸತಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸಹಿತವಾದ ಶರಣ ಸತಿಗೆ ಉತ್ಪತ್ತಿ ನಾಸ್ತಿಯಾಯಿತ್ತೆಂಬುದೀಗ ಯೋನಿ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಉತ್ಪತ್ತಿ ನಾಸ್ತಿಯಾಗಿರ್ಪ ಚಿತ್‌ಸ್ವರೂಪನಾದ ಶರಣ ಸತಿಯಲ್ಲಿ ಸದ್ರೂಪವಾದಲ್ಲಿ ಶ್ರೀಗುರು ಅವಿರಳ ಸಂಗವ ಮಾಡಲು ಅಲ್ಲಿ ಚಿದ್ಗರ್ಭ ತಲೆದೋರಿ ಸಚ್ಚಿದಾನಂದ ಸ್ವರೂಪನಾದ ಲಿಂಗತ್ರಯವು ಉದಯಿಸಿದವೆಂಬುದೀಗ ಮಕ್ಕಳ ಹಡೆದು ಎಂಬ ಶಬ್ದಕ್ಕರ್ಥ. ಆ ಲಿಂಗತ್ರಯದಲ್ಲಿ ಸಮರಸ ಭಾವವ ಘಟಿಸಿದ ಶರಣ ಸತಿಗೆ ಶಬ್ದ ಜಾಲಂಗಳಿರದೆ ಶಿವಾಪೇಕ್ಷೆಯಿಂ ಶಿವೋಹಂ ಎಂದು ಉಚ್ಚರಿಸುತ್ತಿಹಳೆಂಬುದೀಗ ನಾಲಿಗೆ ಇಲ್ಲದ ಬಾಯಲ್ಲಿ ಜೋಗುಳವಾಡುತ್ತೈದಾಳೆ ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವ ಘಟಿಸಿದ ಶರಣ

ಪತಿಗೆ ದೇಹಭಾವ ನಾಸ್ತಿಯಾಗಿ ಮಾಯಾಪಾಶ ನಿವೃತ್ತಿಯಾಯಿತ್ತೆಂ ಬುದೀಗ ತೊಟ್ಟಿಲಿಲ್ಲದ ನೇಣು ಹೊರತೆಯಾಗಿ ಎಂಬ ಶಬ್ದಕ್ಕರ್ಥ. ಆ ಮಾಯಾಪಾಶ ನಾಸ್ತಿಯಾಗಲು ಶರಣನು ತನ್ನ ಆಚಾರಾಂಗದ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿದನೆಂಬುದೀಗ ಗಂಟೆ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಸರ್ವಾಚಾರ ಸಂಪತ್ತಿನಲ್ಲಿ ಸ್ವಾನುಭಾವ ಸೂತ್ರವ ಸಂಬಂಧಿಸಿಕೊಂಡಿರ್ಪ ಶರಣಂಗೆ ಮನೋವರ್ತನೆ ಇಲ್ಲದೆ ಆ ಪರ ಬ್ರಹ್ಮದಲ್ಲಿ ಶಿವೋಹಂ ಶಿವೋಹಂ ಎನುತಿರ್ದನೆಂಬುದೀಗ ಮಗುವಿಲ್ಲದೆ ಶಿಶು ಆಳುತ್ತಿದೆ ಎಂಬ ಶಬ್ದಕ್ಕರ್ಥ. ಆ ಶಿವೋಹಂ ಎನುತಿರ್ದ ಶರ ಣನೆಂಬ ಶಿಶುವಿಂಗೆ ಸಂಸಾರ ವಿಷಯ ರಸವ ತುಂಬಿಕೊಂಡಿರ್ಪ ಘಟ ಸ್ವರೂಪಿನ ಸ್ಥಾನವಿಲ್ಲದೆ ಜ್ಞಾನಾಮೃತ ರಸವನೇ ಸ್ವೀಕರಿಸುತ್ತಿ ಹುದೆಂಬುದೀಗ ಅವಕ್ಕೆ ಮೊಲೆ ಇಲ್ಲದ ಹಾಲು ಬೇಕು. ಸದಾಶಿವ ಮೂರ್ತಿ ಲಿಂಗವನರಿತಲ್ಲದಾಗದು ಎಂಬ ಶಬ್ದಕ್ಕರ್ಥ.

೧೫. ಸುಖದುಃಖದ ನಡುವೆ ಒಂದ ತಿರುಕದ ಕೂಸು ಹುಟ್ಟಿ ಹಾಲನೊಲ್ಲದೆ ಮೂರು ಕೂಳು ಬೇಡುತ್ತಿದೆ. ಕೂಳು ಕುಡಿವುದಕ್ಕೆ ಮೊದಲೆ ಗಂಜಿಯು ಕುಡಿದು ಕೂಸು ಹೇಳದೇ ಹೋಯಿತ್ತು ಸದಾ ಶಿವಮೂರ್ತಿಲಿಂಗವನರಿದು.

ಟೀಕು: – ದೇಹಾತ್ಮರ ಮಧ್ಯದಲ್ಲಿ ನಾನಾ ದುಶ್ಚರಿತವನುಳ್ಳ ಮನಸ್ಸು ಹುಟ್ಟಿತ್ತೆಂಬುದೀಗ ಸುಖದುಃಖದ ನಡುವೆ ತಿರುಕದ ಕೂಸು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ದೇಹಾತ್ಮರ ಮಧ್ಯದಲ್ಲಿ ಹುಟ್ಟಿದ ಮನಸ್ಸು ಜ್ಞಾನಾಮೃತ ರಸವನಿಚ್ಛಿಸಿತ್ತೆಂಬುದೀಗ ಹಾಲನೊಲ್ಲದೆ ಎಂಬ ಶಬ್ದ ಕ್ಕರ್ಥ. ಆ ಸುಜ್ಞಾನ ನಷ್ಟವಾದ ಮನಸ್ಸು ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮತ್ರಯಂಗಳ ಭಿನ್ನಾಪೇಕ್ಷೆಯಿಂದ ಇಚ್ಛಿಸುತ್ತಿಹ್ಪ ದೆಂಬುದೀಗ ಮೂರು ಕೂಳು ಬೇಡುತ್ತಿದೆ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ಜ್ಞಾನಾಗ್ನಿ ಪ್ರಭಾವಿಸಲು ಆ ಜ್ಞಾನಾಗ್ನಿಯ ಪ್ರಕಾ ಶದಿಂ ಕರ್ಮತ್ರಯಂಗಳು ಸಮರಸಪಾಕವಾದಾಕ್ಷಣವೆಂಬುದೀಗ ಕೂಳು ಕುಡಿವುದಕ್ಕೆ ಮೊದಲೆ ಎಂಬ ಶಬ್ದಕ್ಕರ್ಥ. ಆಕರ್ಮತ್ರಯಂಗಳು ಜ್ಞಾನಾ ಗ್ನಿಯಲ್ಲಿ ದಗ್ಧವಾಗಲು ಆ ಮನಸ್ಸು ಚಿದಮೃತ ರಸವನವಗ್ರಹಿಸಿ ಪತಿಹಾ

ಘನಲಿಂಗದಲ್ಲಿ ನಿಷ್ಪತ್ತಿಯಾದಲ್ಲಿ ಶಬ್ದಜಾಲವಳಿದು ಹೋಯಿತ್ತೆಂಬು ದೀಗ ಗಂಜಿಯು ಕುಡಿದು ಕೂಸು ಹೇಳದೆ ಹೋಯಿತ್ತು ಸದಾಶಿವ ಮೂರ್ತಿ ಲಿಂಗವನರಿವ ಎಂಬ ಶಬ್ದಕ್ಕರ್ಥ.

೧೬. ಹುತ್ತದೊಳಗಣ ಉಡು ಹೊಳೆಯೊಳಗಣ ಮೊಸಳೆಯ ನುಂಗಿತ್ತು. ನುಂಗಿ ಹೋಗುವಾಗ ಅಂಗನೆ ಎಂಬ ಹೆಂಗುಸು ಉಡುವ ಕಂಡು ತಾ ಹೊತ್ತಿರ್ದ ಕೊಡನ ಕೂಡಿ ಮಂಡೆಯ ಮೇಲಿರಿಸಲಾಗಿ ತಾ ಸತ್ತು ಕೊಡನೊಡೆದು ಆ ಉಡುವಡಗಿತ್ತು, ಹಿಡಿಯಲಿಲ್ಲ, ಬಿಡಲಿಲ್ಲ, ಬೇರೊಂದಡಿ ಇಡಲಿಲ್ಲ ಸದಾಶಿವಮೂರ್ತಿ ಲಿಂಗವನರಿತಲ್ಲಿ.

ಟೀಕು.— ನವದ್ವಾರಯುಕ್ತವಾದ ದೇಹದಲ್ಲಿ ಸೂಕ್ಷ್ಮವಾಗಿರ್ಪ ಸುಜ್ಞಾನ ಪ್ರಕಾಶವೆಂಬುದೀಗ ಹುತ್ತದೊಳಗಣ ಉಡು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಪ್ರಕಾಶವು ಸಂಸಾರ ವಿಷಯ ಜಲಪ್ರವಾಹದಲ್ಲಿ ಕ್ರೀಡಿಸುತ್ತಿರ್ಪ ಮಾಯೆಯನವಗ್ರಹಿಸಿತ್ತೆಂಬುದೀಗ ಹೊಳೆಯೊಳಗಣ ಮೊಸಳೆಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯೆಯನವ ಗ್ರಹಿಸಿ ನಿವೃತ್ತಿ ಮಾರ್ಗದಿಂ ಪರಶಿವತತ್ವದತ್ತಲೆಯ್ದುತ್ತಿರಲು ಎಂಬು ದೀಗ ನುಂಗಿಹೋಗುವಾಗ ಎಂಬ ಶಬ್ದಕ್ಕರ್ಥ. ಅಂತು ಮೋಕ್ಷಮಾರ್ಗ ವಿಡಿದೈದಿಹ ಚಿಚ್ಛಕ್ತಿ ಸ್ವರೂಪವಾದ ಶರಣಸತಿಯು ಆ ಸುಜ್ಞಾನ ಪ್ರಕಾಶವ ಪ್ರತ್ಯಕ್ಷ ಕಂಡು ತನ್ನಲ್ಲಿರ್ಪ ಚಿದ್ಭಾಂಡದೊಳಗೆ ಸಾಹಿತ್ಯವ ಮಾಡಿ ಕೊಂಡಳೆಂಬುದೀಗ ಅಂಗನೆ ಎಂಬ ಹೆಂಗಸು ಉಡುವ ಕಂಡು ತಾ ಹೊತ್ತಿರ್ದ ಕೊಡನ ಕೂಡಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನೊಳಕೊಂಡಿರ್ಪ ಚಿದ್ಭಾಂಡದ ಜ್ಞಾನಸ್ವರೂಪವಾದ ಪರಬ್ರಹ್ಮದಲ್ಲಿ ಸಂಬಂಧಿಸಿದಳೆಂಬುದೀಗ ಮಂಡೆಯ ಮೇಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶರಣ ಸತಿಯು ಚಿದ್ಘನಲಿಂಗದಿಂ ಸಮರಸ ಭಾವದಿಂ ನಿಷ್ಪತ್ತಿಯಾಗಲು ಆ ಚಿದ್ಭಾಂಡವು ವಿಕ್ರಮಿಸಿ ಆ ಸುಜ್ಞಾನ ಪ್ರಕಾಶವು ನಿರಾಳ ಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ ತಾ ಸತ್ತು ಕೊಡನೊಡೆದು ಉಡುವಡಗಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನಿಷ್ಪತ್ತಿಯಾದ ಶರಣನು ಪರವಸ್ತುವನಾಹ್ವಾನ ವಿಸರ್ಜನಕ್ಕೆ ತರಲಿಲ್ಲವೆಂಬುದೀಗ ಹಿಡಿಯಲಿಲ್ಲವೆಂಬುದೀಗ ಹಿಡಿಯಲಿಲ್ಲ ಬಿಡಲಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನು ಎರಡಿಟ್ಟು - ಭಿನ್ನಕ್ರಿಯೆಯನಾ

ಚರಿಸಲಿಲ್ಲವೆಂಬುದೀಗ ಜೇರೊಂದು ಅಡಿ ಇಡಲಿಲ್ಲ ಸದಾಶಿವಮೂರ್ತಿ ಲಿಂಗವನರಿತಲ್ಲಿ ಎಂಬ ಶಬ್ದಕ್ಕರ್ಥ.

೧೭. ಹುತ್ತದೊಳಗಿನ ಹಾವ ಹದ್ದಿನ ಹೊಟ್ಟೆಯೊಳಗಣ ತತ್ತಿ ನುಂಗಿತ್ತು. ಗಿಡುಗನ ಉಡು ನುಂಗಿ ಹೊಡೆವವನ ದಡೆ ನುಂಗಿತ್ತು. ಹಾವಿನ ಹದ್ದಿನ ತತ್ತಿಯು ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ. ಸದಾಶಿವಮೂರ್ತಿಲಿಂಗವು ಬಚ್ಚ ಬಯಲಾಯಿತ್ತು.

ಟೀಕು:— ನವದ್ವಾರ ಯುಕ್ತವಾದ ದೇಹದಲ್ಲಿರ್ಪ ಶಂಕಾವಿಷ ಸಂಬಂಧಿಯಾದ ಜೀವನೆಂಬುದೀಗ ಹುತ್ತದೊಳಗಣ ಹಾವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಪರಮಾತ್ಮನ ಅಂತರಂಗದಲ್ಲಿರ್ಪ ಸ್ವಯಜ್ಞಾನವ ಗ್ರಹಿಸಿತ್ತೆಂಬುದೀಗ ಹದ್ದಿನ ಹೊಟ್ಟೆಯೊಳಗಣ ತತ್ತಿ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಪ್ರಕಾಶವ ಗ್ರಹಿಸಲು ಸಕಲ ಪ್ರಪಂಚಿಗೆ ಲಂಘಿಸುತ್ತಿರ್ಪ ಮಾಯೆಯನು ಸೂಕ್ಷ್ಮವಾದ ಚಿತ್ಪ್ರಕಾಶವು ಗ್ರಹಿಸಿತ್ತೆಂಬುದೀಗ ಗಿಡುಗನ ಉಡು ನುಂಗಿ ಎಂಬ ಶಬ್ದಕ್ಕರ್ಥ. ಅಂತು ಚಿತ್ಪ್ರಕಾಶವ ಗ್ರಹಿಸಲು ಸಕಲ ಕರಣಂಗಳ ನಿವೃತ್ತಿಯ ಮಾಡುತ್ತಿರ್ದ ಶರಣನ ಶಿವಭಾವವ ಗ್ರಹಿಸಿತ್ತೆಂಬುದೀಗ ಹೊಡೆವವನ ದಡೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಜೀವನ ಪರಮಾತ್ಮ ಸ್ವಯಜ್ಞಾನವ ಮಾಯೆಯ ಸೂಕ್ಷ್ಮವಾದ ಚಿತ್ಪ್ರಕಾಶವ ಸಕಲ ಕರಣಂಗಳ ನಿವೃತ್ತಿ ಮಾಡುತ್ತಿರ್ದ ಶರಣನ ಶಿವಾನುಭಾವ ಭಿನ್ನಾಪೇಕ್ಷೆಯಿಂದ ಸೂಕ್ಷ್ಮವಾದ ಪರಿಪೂರ್ಣ ಜ್ಞಾನವೇ ಆ ಸಮೂಹವನವಗ್ರಹಿಸಿ ಪರಶಿವ ತತ್ವದಲ್ಲಿ ನಿರ್ವಯಲಾಯಿತ್ತೆಂಬುದೀಗ ಹಾವಿನ ಹದ್ದಿನ ತತ್ತಿಯ ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ ಸದಾಶಿವಮೂರ್ತಿಲಿಂಗವು ಬಚ್ಚ ಬಯಲಾಯಿತ್ತು.

೧೮. ಕೊಟ್ಟೆ ಕೂಗಿತ್ತು. ಹಾಲುವಕ್ಕಿಯ ಬಳಿಯಿತ್ತು. ಹಂಗ ಕಟ್ಟಿತ್ತು. ಅವನ ಅವಳ ಮದುವೆ ನಿಂದಿತ್ತು. ಇವನಿಗಾಯಿತ್ತು. ತಂದ ಮರುದಿನಕ್ಕೆ ಸತ್ತವಳು ಮದವಳಿಗ ಮುಂಡೆಯ ಮೇಲೆ ಸೀರೆಯ ಹಾಕಿಕೊಂಡು ಕೆಟ್ಟೆ ಕೆಟ್ಟೆನೆಂದು ಹೋಗುತ್ತಿರ್ದನು ಸದಾಶಿವಮೂರ್ತಿ ಲಿಂಗದಲ್ಲಿಗೆ.

ಟೀಕು:— ಅಂತರಂಗದಲ್ಲಿ ಚಿತ್ಪ್ರಣವ ಜ್ಞಾನ ಉದಯವಾಗಿ ಶಿವೋಹಂ ಶಿವೋಹಂ ಎನುತ್ತಿದ್ದಿತೆಂಬುದೀಗ ಕೊಟ್ಟ ಕೂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವವಳವಡಲು ಅಂತರಂಗದಲ್ಲಿರ್ದ ತೈಜಸನು ಸಮಸ್ತ ಪ್ರಪಂಚ ಸುಜ್ಞಾನಮುಖದಿಂ ನಿವೃತ್ತಿಮಾಡಿತ್ತೆಂಬುದೀಗ ಹಾಲುವಕ್ಕಿ ಬಳಿಯಿತ್ತೆಂಬ ಶಬ್ದಕ್ಕರ್ಥ. ಆ ಪ್ರಪಂಚು ನಾಸ್ತಿಯಾಗಲು ಸಂಕಲ್ಪರೂಪವಾದ ಪೂರ್ವಕ್ರಿಯಾ ಚರಿತ್ರೆಯ ಬಿಟ್ಟು ಉತ್ತರವಾದ ಜ್ಞಾನದಲೆಯ್ದುತ್ತ ಮನಸ್ಸೆಂಬುದೀಗ ಹಂಗ ಕಟ್ಟಿತ್ತು ಎಂಬ ಶಬ್ದಕ್ಕರ್ಥ. ಶಿವಜ್ಞಾನೋದಯವಾದಲ್ಲಿ ಜೀವನು ಮಾಯೆಯಲ್ಲಿ ಕೂಡಿ ಸಕಲ ವಿಷಯಂಗಳ ಭೋಗಿಸಬೇಕೆಂಬ ಅದೇ ನಿವೃತ್ತಿಯಾಯಿತ್ತೆಂಬುದೀಗ ಅವನ ಅವಳ ಮದುವೆ ನಿಂದಿತ್ತು ಎಂಬ ಶಬ್ದಕ್ಕರ್ಥ. ಆ ಮಾಯಾ ಸಂಭ್ರಮವಳಿಯಲು ಜೀವಭಾವ ಭ್ರಾಂತಳಿದು ಸಜ್ಜೀವ ಸ್ವರೂಪನಾದ ಶರಣನು ನಿರ್ಮಾಯ ಸ್ವರೂಪವಾದ ಜ್ಞಾನ ಶಕ್ತಿಯಲ್ಲಿ ಸಮರಸ ಸಂಯೋಗವ ಮಾಡುತ್ತಿರ್ದನೆಂಬುದೀಗ ಇವನಿಗಾಯಿತ್ತೆಂಬ ಶಬ್ದಕ್ಕರ್ಥ. ಶರಣನ ಮಾರ್ಗ ಕ್ರಿಯಲ್ಲಿ ಸಂಬಂಧವಾದ ಜ್ಞಾನಶಕ್ತಿಯ ಮೀರಿದ ಕ್ರಿಯೆಯನೊಳಕೊಂಡಿರ್ಪ ಪ್ರಾಣಲಿಂಗದಲ್ಲಿ ನಿಷ್ಪತ್ತಿಯಾದಳೆಂಬುದೀಗ ತಂದ ಮರುದಿನಕ್ಕೆ ಸತ್ತವಳು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯು ನಿಷ್ಪತ್ತಿಯಾಗಲು ಅಷ್ಟದಳ ಕಮಲಂಗಳಳಿದ ಚಿತ್ಸ್ವರೂಪನಾದ ಶರಣನು ಜ್ಞಾನಸ್ವರೂಪವಾದ ಪರಶಿವತತ್ವದಲ್ಲಿ ತನ್ನ ಜ್ಞಾನಾಂಬರವನೇಕೀಕರಿಸಿ ತಾನೆಂಬ ಭಾವ ಮಹಾಘನ ಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಮದವಳಿಗ ಮಂಡೆಯ ಮೇಲೆ ಸೀರೆಯ ಹಾಕಿಕೊಂಡು ಕೆಟ್ಟೆ ಕೆಟ್ಟೆನೆಂದು ಹೋಗುತ್ತಿರ್ದನು ಸದಾಶಿವಮೂರ್ತಿಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

೧೯. ಹುಲ್ಲು ಕೆಂಡವ ಮುಟ್ಟಿ ಹತ್ತದ ಪರಿಯ ನೋಡಾ. ಹಸಿದ ಸರ್ಪನ ಹೆಡೆಯ ನೆಳಲಲ್ಲಿ ಮಂಡೂಕ ನಿಂದ ತೆರ ನೋಡಾ. ಜೀವ ಪರಮನಲ್ಲಿ ಬಂದು ನಿಂದು ಒಂದಾಗದ ಸಂದೇಹವ ನೋಡಾ. ಇಂತೀ ಸಂದನರಿದಲ್ಲದೆ ಅಂಗ ಲಿಂಗ ಪ್ರಾಣ ಪರಮನೊಂದಾಗಲಿಲ್ಲ ಸದಾಶಿವಮೂರ್ತಿಲಿಂಗನವರಿವುದಕ್ಕೆ

ಟೀಕು:— ವಿಷಯ ಪ್ರಪಂಚದಲ್ಲಿ ಕೂಡಿರ್ದಾತ್ಮನು ಚಿದಗ್ನಿ ಸ್ವರೂಪವಾದ ಇಷ್ಟಲಿಂಗವ ಭಿನ್ನವಿಟ್ಟು ಅಂಗದಲ್ಲಿ ಧರಿಸಿ ಎಂಬುದೀಗ

ಹುಲ್ಲು ಕೆಂಡವ ಮುಟ್ಟೆ ಎಂಬ ಶಬ್ದಕ್ಕರ್ಥ. ಆ ಲಿಂಗಕ್ಕೆ ಭಿನ್ನ ಕ್ರಿಯೆಮಾಡಿ ಭಿನ್ನಭಾವಿಯಾಗಿ ಹೋದನಲ್ಲದೆ ಆ ಲಿಂಗದಲ್ಲಿ ಸಮರಸಭಾವ ಘಟಿಸಿದುದಿಲ್ಲವೆಂಬುದೀಗ ಹತ್ತದ ಸರಿಯ ನೋಡಾ ಎಂಬ ಶಬ್ದಕ್ಕರ್ಥ. ಆ ಶಂಕಾ ವಿಷಯ ಸಂಬಂಧಿಯಪ್ಪ ಜೀವಾತ್ಮನು ತೃಷೆಯಲ್ಲಿರ್ದನೆಂಬುದೀಗ ಹಸಿದ ಸರ್ಪನ ಎಂಬ ಶಬ್ದಕ್ಕರ್ಥ ಆ ಜೀವನ ಇಂದ್ರಿಯಗಳೆಂಬ ಶಿರಸ್ಸಿನಲ್ಲಿ ಅಜ್ಞಾನ ಮಾಯಾ ಛಾಯೆ ಇರುತ್ತಿಹುದೆಂಬುದೀಗ ಹೆಡೆಯ ನೆಳಲಲ್ಲಿ ಎಂಬ ಶಬ್ದಕ್ಕರ್ಥ. ಆ ಅಜ್ಞಾನ ಮಾಯಾ ಛಾಯೆಯ ಮಧ್ಯದಲ್ಲಿ ಪರಮ ಶಾಂತಿಯ ಬಂಧು ಅಡಗಿರುತ್ತಿಹವೆಂಬುದೀಗ ಮಂಡೂಕ ನಿಂದ ತೆರನ ನೋಡಾ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಅಡಗಿದ ಕಾರಣ ಆ ಜೀವನು ಪರಮಾತ್ಮನಲ್ಲಿದ್ದರ್ೂ ಸಮರಸ ಘಟಿಸಿದುದಿಲ್ಲ ಎಂಬುದೀಗ ಜೀವ ಪರಮನಲ್ಲಿ ಬಂದು ನಿಂದು ಒಂದಾಗದ ಸಂದೇಹವ ನೋಡಾ ಎಂಬ ಶಬ್ದಕ್ಕರ್ಥ. ಆ ಎರಡಿಟ್ಟು ಮಾಡುವ ಭಿನ್ನ ಕ್ರಿಯಾಚಾರವ ಳಿದು ಅಭಿನ್ನಕ್ರಿಯಾಜ್ಞಾನವಳವಟ್ಟ ಶರಣಂಗೆ ಲಿಂಗಾಂಗ ಸಂಬಂಧ ಘಟಿಸಿ ಜೀವ ಪರಮಾತ್ಮನಲ್ಲಿ ಏಕಾರ್ಥವಹುದಲ್ಲದೆ ಈ ಭೇದವನರಿಯದೆ ಇರ್ಪ ಭಿನ್ನಜ್ಞಾನಿಗಳಿಗೆ ಅಸಾಧ್ಯವೆಂಬುದೀಗ ಇಂತೀ ಸಂದನರಿದಲ್ಲದೆ ಅಂಗಲಿಂಗ ಪ್ರಾಣಪರಮನೊಂದಾಗಲಿಲ್ಲ ಸದಾಶಿವಮೂರ್ತಿಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೨೦. ಮೂರು ಲೋಕವನೆಲ್ಲವ ಗಾಳಿಯಲ್ಲಿ ತೂರಿಬಂದ ಗುಂಗುರ, ನುಂಗಿತ್ತು. ಮೂರು ಲೋಕದ ರಾಯರು ಕೂಡಿ ಆ ಗುಂಗುರ ಕೊಂದೆ ಹೆನೆಂದಡೆ ಆರಿಗೂ ಅಸಾಧ್ಯ. ಆ ಗುಂಗುರು ಒಡಲಲ್ಲಿ ಕತ್ತರಿ ವಾಣಿ ಕಾಲನಲ್ಲಿ ಖಂಡೆಯ ಅಂಡದಲ್ಲಿ ಕೋಟಿಕೋಟಿ ಪಿಂಡವೆಲ್ಲವು ಅಸಿಯ ಬಳಗ ಅದು ಕೊಂದು ನಿಂದವಂಗಲ್ಲದೆ ಸದಾಶಿವಮೂರ್ತಿ ಲಿಂಗನ ಬೆಳಗು ದೊರಕೊಳ್ಳದು ಎಂಬ ಶಬ್ದಕ್ಕರ್ಥ.

ಟೀಕು:—ಸ್ವರ್ಗ ಮರ್ತ್ಯ ಪಾತಾಳದಲ್ಲಿರ್ಪ ದೇವ ದಾನವ ಮಾನವನೆಲ್ಲರನು ಪ್ರಾಣವಾಯು ವಿಕಾರದಿಂ ಸಂಚರಿಸುತ್ತಿರ್ದ ಸೂಕ್ಷ್ಮವಾದ ಮಾಯೆಯೀ ಅವಗ್ರಹಿಸಿದಳೆಂಬುದೀಗ ಮೂರು ಲೋಕವನೆಲ್ಲವ ಗಾಳಿಯಲ್ಲಿ ತೂರಿಬಂದ ಗುಂಗುರು ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ತನುತ್ರಯ ಸಂಬಂಧಿಗಳಾದ ದ್ವೈತಾದ್ವೈತ ಯೋಗ ಮಾರ್ಗಿಗಳಿಗೆ ಆ

ಮಾಯೆಯ ಸಂಹರಿಸಿಹೆನೆಂದೊಡೆ ಅಸಾಧ್ಯವೆಂಬುದೀಗ ಮೂರು ಲೋಕದ ರಾಯರು ಕೂಡಿ ಆ ಗುಂಗುರ ಕೊಂದಿಹೆನೆಂದೊಡೆ ಆವರಿಗೂ ಅಸಾಧ್ಯವೆಂಬ ಶಬ್ದ ಕ್ಕರ್ಥ. ಅಂತಪ್ಪ ಮಾಯೆಯನು ಭಿನ್ನಾಪೇಕ್ಷೆಯಲ್ಲಿ ಸೋಂಕಿದವರ ಕಡಿದು ಕತ್ತರಿಸುವ ಅತಿ ವಿಷಾದಕವಪ್ಪ ಸಂಸಾರ ವಿಷಯ ರಸ ತುಂಬಿಹುದೆಂಬುದೀಗ ಆ ಗುಂಗುರು ಬಾಯಲ್ಲಿ ಕತ್ತರಿವಾಣಿ ಎಂಬ ಶಬ್ದ ಕ್ಕರ್ಥ. ಆ ಮಾಯೆಯು ದುಶ್ಚರಿತ್ರವೆಂಬ ಚರಣದಲ್ಲಿ ಖಂಡಿತ ಜ್ಞಾನವೆಂಬ ಶಸ್ತ್ರವಿರುತ್ತಿಹುದೆಂಬುದೀಗ ಕಾಲನಲ್ಲಿ ಖಂಡೆಯವೆಂಬ ಶಬ್ದ ಕ್ಕರ್ಥ. ಉತ್ಪತ್ತಿಗೆ ಕಾರಣವಾದ ತನುವೆಲ್ಲ ಅಜ್ಞಾನಮಯವಾಗಿಹುದೆಂಬುದೀಗ ಅಂಡದಲ್ಲಿ ಕಾಳಕೂಟವೆಂಬ ಶಬ್ದ ಕ್ಕರ್ಥ. ಆ ಮಾಯೆಯು ಸೂಕ್ಷ್ಮದೇಹದಲ್ಲಿ ಸಕಲ ಕರಣಂಗಳೆಲ್ಲ ಅಜ್ಞಾನಸಂಬಂಧಿಗಳಾಗಿಹುದೆಂಬುದೀಗ ಪಿಂಡವೆಲ್ಲ ಅಸಿಯ ಬಳಗವೆಂಬ ಶಬ್ದ ಕ್ಕರ್ಥ. ಸುಜ್ಞಾನೋದಯವಾಗಿ ಸಕಲ ಮಾಯಾ ಪ್ರಪಂಚ ನಿವೃತ್ತಿ ಮಾಡಿದಲ್ಲದೆ ಚಿದ್ಘನ ಲಿಂಗದ ಚಿತ್ ಪ್ರಕಾಶ ದೊರೆಕೊಳ್ಳದೆಂಬುದೀಗ ಅದು ಕೊಂದು ನಿಂದ ವಂಗಲ್ಲದೆ ಸದಾಶಿವಮೂರ್ತಿ ಲಿಂಗದ ಬೆಳಗು ದೊರೆಕೊಳ್ಳದು ಎಂಬ ಶಬ್ದ ಕ್ಕರ್ಥ.

೨೧. ಎರಳೆಯ ಕೊಂಬಿನ ಸುಳಿಕೆಯ ಬಳಸಿನಲ್ಲಿ ಅರುಹಿರಿಯರೆಲ್ಲರು ಬಳಸಿ ಆಡುತ್ತೈದಾರೆ. ಎರಳೆ ಸತ್ತು ಕೋಡಳಿದು ಕೊಂಬಿನ ಸುಳುಹು ನೇರಿತವಾಗಿ ಬಳಸುವ ಅರುಹಿರಿಯರೆಲ್ಲರು ಒಬ್ಬುಳಿತವಾಗಿ ಸುಳುಹು ನಿಂದಾಗವೇ ಸದಾಶಿವಮೂರ್ತಿ ಲಿಂಗದ ಅಂಗದಲ್ಲಿ ಲೀಯವಾಯಿತ್ತು.

ಟೀಕು:— ಜೀವಾತ್ಮದೆಂಬುದೀಗ ಎರಳೆಯೆಂಬ ಶಬ್ದ ಕ್ಕರ್ಥ. ಅಂತಪ್ಪ ಜೀವಂಗೆ ಅಹಂಕಾರ ಮಮಕಾರಗಳೇ ಕೋಡುಗಳಾಗಿಹುದೆಬುದಿಗ ಎರಳೆಯ ಕೊಂಬಿನ ಎಂಬ ಶಬ್ದ ಕ್ಕರ್ಥ. ಅಂತಪ್ಪ ಅಹಂಕಾರ ಮಮಕಾರಂಗಳ ಸಂಕಲ್ಪ ಮಾರ್ಗವಿಡಿದು ಮಾಯಾ ಪ್ರಪಂಚಿನ ತಿರುಹುಮುರುವಿನಲ್ಲಿ ನಾ ಬಲ್ಲೆ ಬಲ್ಲಿದರೆಂಬ ಅದ್ವೈತ ಜ್ಞಾನಿಗಳೆಲ್ಲರು ಮಾಯಾಪ್ರಪಂಚಿನಲ್ಲಿ ವರ್ತಿಸುತ್ತಿಹರೆಂಬುದೀಗ ಸುಳಿಕೆಯ ಬಳಸಿನಲ್ಲಿ ಅರುಹಿರಿಯರೆಲ್ಲರು ಬಳಸಿಯಾಡುತ್ತೈದಾರೆ ಎಂಬ ಶಬ್ದಕ್ಕರ್ಥ. ಇಂತು ಪ್ರಪಂಚಿನಲ್ಲಿ ಕೂಡಿ ಸಂಭವಕ್ಕೆ ಬರುತ್ತಿದ್ದಾರ

ಪಂಚಮದಲ್ಲಿ ರೇವಣಸಿದ್ಧ ಮರುಳಸಿದ್ಧ ಏಕೋರಾಮ ಪಂಡಿತಾರಾಧ್ಯ ಮೊದಲಾದ ಶರಣಗೆ ನಿಜ ಪ್ರಾಣಲಿಂಗಸ್ಥಲಕ್ಕೆ ಕಾರಣವಾದ ಜಂಗಮ ಲಿಂಗಾನುಭಾವವ ಬೋಧಿಸಿ ನೂರೆಂಟು ಸಕೀಲ ಮೊದಲಾದ ಸಮಸ್ತ ಸಕೀಲವನರುಪಿ ತತ್ವ ಪಂಚೀಕರಣ, ಲಿಂಗ ಪಂಚೀಕರಣ, ಮಂತ್ರ ಪಂಚೀಕರಣ ಬಸವೋದ್ಧರಣೆ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಬಯಲ ಸಮಾಧಿಯ ಪಥವ ತೋರಿದರು ನೋಡಾ.

ಷಷ್ಠಮದಲ್ಲಿ ಸದಾಶಿವಾಯ ದೇವರು, ಷಡಕ್ಷರಾಂಕ, ಗಣದಾಸಿ ವೀರಣ್ಣಗಳು, ಹಡಪಪ್ಪ ಮೊದಲಾದ ಶರಣಗೆ ನಿಜಪ್ರಸಾದಿ ಸ್ಥಲಕ್ಕೆ ಕಾರಣವಾದ ಶಿವಲಿಂಗಾನುಭಾವವ ಬೋಧಿಸಿ ೬೬ ಸಕಿಲ ಮೊದಲಾದ ಸಮಸ್ತ ಸಕಿಲವನರುಪಿ ನವಚಕ್ರ, ಅಂಗಷಡಕ್ಷರ, ಲಿಂಗಷಡಕ್ಷರ, ಪಂಚ ವರ್ಣ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಗೋಳಕ ಸಮಾಧಿಯ ಪಥವ ತೋರಿದರು ನೋಡಾ.

ಸಪ್ತಮದಲ್ಲಿ ಪಂಚಾಕ್ಷರಿ ಕಲಿಗಣನಾಥೊಡೆಯರು ಚೀಲುಮೆ ಅಗ್ಗಣಿಯ ಬತ್ತರು ಮೇಲು ಅವತವ ಭಕ್ತರು ಸಮೋತವಾರ ಅಚ್ಚಪ್ರಸಾದಿ ನಿಚ್ಚಪ್ರಸಾದಿ ಸಮಯಪ್ರಸಾದಿ ಮೊದಲಾದ ಶರಣರ್ಗೆ ಸದ್ವಿಂಮಾಹೇಶ್ವರ ಸ್ಥಲಕ್ಕೆ ಕಾರಣವಾದ ಗುರುಲಿಂಗಾನುಭಾವವ ಬೋಧಿಸಿ ೬೬ ಸಕೀಲು ಮೊದಲಾದ ೧೦೮ ಸಕೀಲು ಕಡೆಯಾಗಿ ಸಮಸ್ತ ಸಕೀಲವನರುಪಿ, ಮೂಲ ಷಡಕ್ಷರಿ, ಕಾಯಾರ್ಪಣ ೧೮ ತರದರ್ಪಣ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಗೋಮುಖ ಸಮಾಧಿಯ ಪಥವ ತೋರಿದರು ನೋಡಾ.

ಅಷ್ಟಮದಲ್ಲಿ ಒರತೆ ಸೋಮಣ್ಣಯ್ಯ ಚಿಕ್ಕಮಾದಯ್ಯಗಳು, ಕನ್ನರಿ ರೇಮಯ್ಯನು ರಾಘವಾಂಕ ಮೊದಲಾದ ಶರಣಗೆ ಸದ್ಭಕ್ತಿ ಸ್ಥಲಕ್ಕೆ ಕಾರಣವಾದ ಆಚಾರ ಲಿಂಗಾನುಭಾವವ ಬೋಧಿಸಿ ಷಡ್ವಿಧ ಸಕೀಲು ಮೊದಲಾದ ಸಮಸ್ತ ಸಕೀಲವನರುಪಿ ೪೨ ತೆರದರ್ಪಣ ೬೬ ತೆರದರ್ಪಣ ೧೦೮ ತೆರದರ್ಪಣ ೩೬೬ ತೆರದರ್ಪಣ ಮೊದಲಾಗಿ ಚತುರ್ವಿಧ ಉದ್ಧರ

ಣೆಯ ಕಂಣಿಸಿ ಸಹಜ ಕ್ರಿಯಾ ಸಮಾಧಿಯ ಪಥವ ತೋರಿದರು ನೋಡಾ.

ಇಂತೀ ಅಷ್ಟವಿಧ ಸ್ಥಲ ಸಂಬಂಧದಿಂದ ಆಯಾಯ ಲಿಂಗಾಂಗ ಭಾವವ ಬೋಧಿಸಿ ಅಷ್ಟವಿಧ ಸಮಾಧಿಯ ಬೋಧಿಸಿದರು ನೋಡಾ. ಅದರ ವಿಚಾರವೆಂತೆಂದೊಡೆ.

೩೦೮ ಪಾದ ವ್ಯಾಪ್ತಿಕೆಯ ತೆಗೆದಂಥಾದ್ದೇ ಸಹಜ ಕ್ರಿಯಾ ಸಮಾಧಿ ಎನಿಸುವದು. ೨೯೬ ಪಾದ ವ್ಯಾಪ್ತಿಕೆಯ ತೆಗೆದಂಥಾದ್ದೇ ಗೋಮುಖ ಸಮಾಧಿ ಎನಿಸುವದು. ೨೯೦ ಪಾದ ವ್ಯಾಪ್ತಿಕೆಯ ತೆಗೆದಂಥಾದ್ದೇ ಗೋಳಕ ಸಮಾಧಿ ಎನಿಸುವದು. ಹರಗುರು ವಚನೋಕ್ತಿ ಪ್ರಮಾಣದಿಂದ ತಮ್ಮ ತಾವೇ ಅವಸಾನದ ವೇಳೆಯನರಿದು ನಿರಾಳಕತ್ವದಿಂದ ಸರ್ವಸಂಗ ಪರಿತ್ಯಾಗರಾಗಿ ದಿಗಂಬರ ಲೀಲೆಯ ಧರಿಸಿ ಪುಣ್ಯಾಂತರವಾದ ಏಕಾಂತ ವಾಸಕ್ಕೆ ಹೋಗಿ, ತೆಗ್ಗು ತೆವರು ಇಲ್ಲದಂಥ ಭೂಮಿಯಾದರೂ ಸರಿಯೇ, ಸಮತಳವಾದ ಭಂಡಿಯಾದರೂ ಸರಿಯೇ, ಸ್ವಯಂ ಹಿಟ್ಟಿನಿಂದಾದರೂ ಸ್ವಗೋಚರವಾದ ಮಳಲಾದರು ಬೇಹದಿಂದಾದರೂ ಸರಿಯೇ, ಗೋಳಕ ಸಮಾಧಿಯಾಕಾರವ ರಚಿಸಿ, ಅಯಾಯ ಸ್ಥಾನದಲ್ಲಿ ಪ್ರಣವವ ಸ್ಥಾಪಿಸಿ, ಅನಾದಿ ಪರಶಿವ ಲಿಂಗವ ಉಭಯತರ ಮಧ್ಯದಲ್ಲಿ ಬಾಸಣಿಸಿ ಅನಾದಿ ಮೂಲ ಪ್ರಣವ ಧ್ಯಾನದಿಂದ ಪ್ರಥಮ ಸೋಪಾನವಿಳಿದು ಹೋಗಿ ತ್ರಿಕೋಣೆಯ ಮಧ್ಯದಲ್ಲಿ ಪದ್ಮಾಸನವ ಬಲಿದು ಮೂರ್ತವ ಮಾಡಿ, ಅಂತರಂಗದಲ್ಲಿ ಬೆಳಗುವ ಜ್ಯೋತಿರ್ಲಿಂಗವ ಅನುಮಿಷ ಸ್ಥಾನಕ್ಕೆ ತಂದು ಮೂರ್ತವ ಮಾಡಿಸಿ ಕ್ಷೀರ ಕ್ಷೀರ ಬೆರೆದಂತೆ ಚಿದ್ಘನ ಸ್ವರೂಪವಾದ ಇಷ್ಟಲಿಂಗವು ನಿರಂಜನ ಜಂಗಮ ಸ್ವರೂಪವಾದ ಪ್ರಾಣಲಿಂಗದಲ್ಲಿ ಶಿಖಿ ಕರ್ಪೂರದ ಹಾಗೆ ಬಯಲಪ್ಪುದು, ಬಯಲು ಸಮಾಧಿ ಎನಿಸುವದು. ಇವು ನಾಲ್ಕು ಕ್ರಿಯಾಸ್ವರೂಪವಾದ ಸಮಾಧಿಗಳೆನಿಸುವವು ನೋಡಾ. ಅಷ್ಟತನುವಿನಲ್ಲಿ ೬೪ ತೆರದ ನಿರ್ಣಯವನರಿದಂಗವ ಮಾಡಿಕೊಂಡು ದ್ವಾದಶೇಂದ್ರಿಯಂಗಳಲ್ಲಿ ೧೪೪ ತೆರದ ಸರ್ವಾಚಾರ ಸಂಪತ್ತಿನ ಆಚಾರಂಗಳನು ಅರಿದು ಪ್ರಾಣವ ಮಾಡಿಕೊಂಡು ೧೮ ಕರಣ ಚಕ್ರಂಗಳಲ್ಲಿ ೧೨೪ ಚಕ್ರಂಗಳ ಸ್ವಸ್ವರೂಪ ನಿಲುಕಡೆಯ ತಿಳಿದು ಸ್ವಾನುಭಾವ ಸೂತ್ರದ ವಿಚಾರವನರಿದು, ಮೇಲಾದ ಜ್ಯೋತಿರ್ಮಂಡಲವ ಕಂಡು, ಆ ಮಂಡಲ

ದಲ್ಲಿ ಮೂರ್ತಿಗೊಂಡಿರುವ ನಿರಂಜನ ಜಂಗಮ ವಿರಾಣ್ಮೂರ್ತಿಯ ಇರವ ತಿಳಿದು ಆ ಮೂರ್ತಿಯೊಳಗೆ ಉರಿಯುಂಡ ಕರ್ಪೂರದಂತೆ ಅಂಗ ಪ್ರಾಣ ಭಾವ ಆತ್ಮಂಗಳೇನೂ ತೋರದೆ ಗುರುಲಿಂಗ ಜಂಗಮ ಭಕ್ತನೆಂಬ ನವ ಪ್ರಣವಂಗಳೇ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಶರಣನೆಂಬ ೧೪ ಪ್ರಣವಂಗಳೊಳಗೆ ಕೂಡಿ, ವಾಚಾತೀತ ಮನೋತೀತ ಭಾವಾತೀತ ವರ್ಣಾತೀತರಾದಂಥಾದ್ದೇ ನಿರ್ವಾಣ ಮೊದಲಾದ ನಿರವಯ ಪರ್ಯಂತ್ಯವಾದ ಚತುರ್ವಿಧ ಸಮಾಧಿ ಎನಿಸುವದು ನೋಡಾ, ಗುಹೇಶ್ವರ ಲಿಂಗಕ್ಕೆ ಕಾರುಣ್ಯ, ಶಾಂತ ಗಣಂಗಳೇ ಎಂದು ಪ್ರಭುಸ್ವಾಮಿಗಳು ಕಲ್ಯಾಣ ಪಟ್ಟಣದ ಅನುಭಾವ ಮಂಟಪದೊಳಗೆ ನಿರ್ಲಜ್ಜ ಶಾಂತ ಲಿಂಗೇಶ್ವರನ ಮುಖವಚನದಲ್ಲಿ ಸಕಲ ಪ್ರಮಥಗೆ ಬೋಧಿಸುತಿರ್ದರು ನೋಡಾ. ಅದೇ ಪ್ರಸಾದವ ಬಳಿವಿಡಿದು ಗುಮ್ಮಳಾಪುರದ ಪರಮಾರಾಧ್ಯರು ಆಚರಿಸಿ ಶೂನ್ಯವಾದರು ನೋಡಾ ಸಂಗನ ಬಸವೇಶ್ವರಾ.

---

## ಸಮಾಧಿ ಕ್ರಿಯೆ.

(೧) ಅಯ್ಯಾ ಇನ್ನು ವಿಭೂತಿ ವೀಳೆಯುವ ಸಮಾಧಿ ವಿಸ್ತಾರದ ನಿರ್ಣಯವ ಪೇಳುತಿರ್ದೆವು ನೋಡಾ. ಆ ವಿಚಾರವೆಂತೆಂದೊಡೆ ಹಿಂದೆ ಹೇಳಿದ ವಸ್ತು ನಿರವಯ ನಿಲುಕಡೆಯ ತನ್ನ ಸ್ವಾನುಭಾವದಿಂದರಿವ ಶರಣನು ತನ್ನವಸಾನ ಕಾಲದ ಎಚ್ಚರಿಕೆಯನರಿದು ತನ್ನಾಚಾರ ನಡೆ ನುಡಿಗೆ ಸಮ್ಮತವಹ ಗುರುವಚನಕ್ಕೆ ಒಪ್ಪಿಗೆಯಾದ ಆಪ್ತ ಪ್ರಮಥ ಗಣಾರಾಧ್ಯ ಭಕ್ತ ಮಾಹೇಶ್ವರರೊಡಗೂಡಿ ಅಭಿವಂದಿಸಿ ಶರಣುವೊಕ್ಕು ಕರುಣ ಕೃಪೆಯ ಬೆಸಗೊಂಡು ಆ ಗಣ ಸಮೂಹ ಮೂರ್ತಿಗಳು ದಯಾಂತಃಕರಣ ಹುಟ್ಟಿ ಗೋವು ಮಲಗುವಷ್ಟು ಧರಣಿಯು ನವಪಾದ ಉದ್ದ ಪಂಚಪಾದ ಅಗಲ ಗೋಮಯ ಗೋಮೂತ್ರ ಗೋಕ್ಷೀರ ಗೋದಧಿ ಗೋಘೃತ ಗೋರೋಜನವೆಂಬ ಷಡ್ದ್ರವ್ಯವ ಸದ್ಗುರುಲಿಂಗ ಜಂಗಮದ ವೃತ್ತ ಸ್ಥಾನ ತಾರಕಾಕೃತಿಯಿಂದ ಮಾಡಿದ ಧೂಳ ಪಾದೋದಕದೊಳಗೆ ಸಮ್ಮಿಶ್ರವ ಮಾಡಿ ಸಮ್ಮಾರ್ಜನೆ ಗೈದು ಧವಳವರ್ಣ ಮೊದಲಾದ ಪಂಚವರ್ಣದ

ಊರ ಮಧ್ಯದಲ್ಲಿ ಲಿಂಗ ಮುದ್ರಾಂಕಿತವ ದ ಮಠ ಮನೆಗಳಾದರೂ ಸರಿಯೇ ಆ ಭಕ್ತ ಮಾಹೇಶ್ವರರು ರಚಿಸಿದ ಪುಷ್ಪ ಪತ್ರಿ ನಂದನಗಳಲ್ಲಾದರು ಸರಿಯೇ, ಶಿವಾಧೀನವಾದ ಅರಣ್ಯ ಪರ್ವತಾಶ್ರಯ ನದೀತೀರದಲ್ಲಾದರೂ ಶೋಧನ ಉಪಾಧ್ಯಕ್ಷಿವಾಗಿ ಕ್ರಯ ವಿಕ್ರಯದಿಂದ ಒದಗಿಸಿದರೂ ಸರಿಯೆ, ಭಕ್ತಿ ಮುಖದಿಂದ ಬಂದರೂ ಸರಿಯೇ, ಆ ಸ್ಥಲಕ್ಕೆ ಲಿಂಗ ಮುದ್ರಾಂಕಿತವ ಮಾಡಿ ಸಮಾಧಿಯ ರಚಿಸುವದೇ ಆಚರಣೆ ನೋಡಾ.

ಶಿವಾಧೀನವಾದ ಅರಣ್ಯಸ್ವರೂಪ ನಿರುಪಾಧಿ ಸ್ಥಲವಾದಡೆ ಭಕ್ತ ಮಾಹೇಶ್ವರರು ಕೂಡಿ ಒಂದಾಗಿ ಆ ಸ್ಥಲವ ವಿಚಾರಿಸಿ ಶರಣುವೊಕ್ಕು ಶೋಧಕತ್ವದಿಂದ ಪ್ರಮಾಣಿಸಿದಂಥ ಸ್ಥಲದಲ್ಲಿ ಸ್ವಯ ಚರ ರೂಪ ಜಂಗಮಮೂರ್ತಿಗಳ ಪಾದಾರ್ಚನೆಯಿಂದರ್ಚಿಸಿ ಶರಣುವೊಕ್ಕು ಸಮಾಧಿ ಗೃಹವ ರಚಿಸುವದಕ್ಕೆ ನಿರೂಪವ ಬೆಸಗೊಂಡು ಗುದ್ದಲಿಯ ಹಾಕುವದು.

ಆ ಮೇಲೆ ಸಮಾಧಿಯ ರಚಿಸಿ ಸಾರಣೆಯ ಮಾಡಿ ಧೂಳೋದಕ ಮೊದಲಾದ ಮಾರ್ಗಕ್ರಿಯಾ ಸಮ್ಮಾರ್ಜನೆಗಳ ಮಾಡಿ ಪಂಚವರ್ಣದ ಹಿಟ್ಟಿನಿಂದ ರಂಗವಲ್ಲಿಯಿಂ ಶೃಂಗರಿಸಿ ಆಗ್ನೇಯ ಸ್ಥಾನದಲ್ಲಿ ಲಿಂಗ ಮುದ್ರಾಂಕಿತವ ಮಾಡುವದೇ ಸಂಬಂಧ ನೋಡಾ.

ಇಂತೀ ಸಮಾಧಿಯ ಮಾಡುವಷ್ಟರೊಳಗೆ ಆ ಭಕ್ತ ಮಾಹೇಶ್ವರರೊಪ್ಪಿಗೆಯಿಂದ ವಿಭೂತಿ ವೀಳೆಯವಾದ ಶಿವಶರಣನು ನವವಿಧಲಿಂಗಂಗಳ ತನ್ನೊಳಗು ಮಾಡಿಕೊಂಡು ನಿರಂಜನ ಜಂಗಮವ ಬೆರಸುವ ವಿಚಾರವೆಂತೆಂದೊಡೆ:– ಪ್ರಥಮದಲ್ಲಿ ಪರಚೌಕ ಮಧ್ಯದ ಮಹಾನಾದ ವಿಭ್ರಮಾಣೆಯಾದುದೇ ನಿರಂಜನ ಲಿಂಗ ಬಯಲು ನೋಡಾ. ದ್ವಿತೀಯದಲ್ಲಿ ಮಂತ್ರ ಧ್ಯಾನದ ಉಲುಹಡಗುವದೇ ಶೂನ್ಯ ಲಿಂಗದ ಬಯಲು ನೋಡಾ. ತೃತೀಯದಲ್ಲಿ ಬ್ರಹ್ಮರಂಧ್ರ ಬಾರಿಸುವ ತಾಳ ನಿಲ್ಲುವದೇ ನಿಷ್ಕಲಲಿಂಗ ಬಯಲು ನೋಡಾ. ಚತುರ್ಥದಲ್ಲಿ ನೇತ್ರದ ಪ್ರತಿ ಬಿಂಬ ವಡಗುವದೇ ಮಹಾಲಿಂಗ ಬಯಲು ನೋಡಾ. ಪಂಚಮದಲ್ಲಿ ಷಾಮೋದಕ ಪ್ರಸಾದದಲ್ಲಿ ಸಂತೃಪ್ತಿಯಾದುದೇ ಪ್ರಸಾದಲಿಂಗ ಬಯಲು ನೋಡಾ.

ಷಷ್ಠಮದಲ್ಲಿ ಹೃದಯ ಕಮಲದಲ್ಲಿ ಚರಿಸುವ ಮೂಲ ಮಾರುತನ ಉಲುಹಡಗುವದೇ ಜಂಗಮಲಿಂಗದ ಬಯಲು ನೋಡಾ.

ಸಪ್ತಮದಲ್ಲಿ ಪಂಚಾಗ್ನಿಗಳ ಉಲುಹು ಅಡಗಿ ತಣ್ಣಗಾಗುವದೇ ಶಿವಲಿಂಗದ ಬಯಲು ನೋಡಾ.

ಅಷ್ಟಮದಲ್ಲಿ ದಶನಾಡಿಗಳು ಒಬ್ಬುಳಿಯಾಗಿ ಸುಷುಮ್ನನಾಗುವದೇ ಗುರುಲಿಂಗದ ಬಯಲು ನೋಡಾ. ಇಂತು ಶರಣನು ಸಾಕಾರವಾದ ಅಷ್ಟವಿಧ ಲಿಂಗಂಗಳ ತನ್ನೊಳಗು ಮಾಡಿಕೊಂಡು ತಾನು ಇಷ್ಟ ಮಹಾ ಲಿಂಗದ ಹೃತ್ಕಮಲದಲ್ಲಿ ಗೋಪ್ಯದಿಂದ ಮೂರ್ತಿಗೊಂಡಿಸುವದು.

ಆ ಸಮಯದಲ್ಲಿ ಸಾಕಾರವಾದ ಭಕ್ತ ಮಾಹೇಶ್ವರ ಶರಣು ಗಣಂಗಳೆಲ್ಲ ಈ ಶರಣನು ಲಿಂಗದಲ್ಲಿ ಬಯಲಾದನು ಎಂದು ಆ ಲಿಂಗ ಶರಣನ ಬಸಿಸಿನಲ್ಲಿ ಆಚ್ಛಾದಿಸಿಕೊಂಡಿರುವ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಕಂಥೆಯನು ಗುರುಲಿಂಗ ಜಂಗಮ ಪಾದೋದಕ ಮೊದಲಾಗಿ ಪಂಚಾಭಿಷೇಕಂಗಳಿಂದ ಸ್ನಾನವ ಮಾಡಿಸಿ ಕ್ರಿಯಾ ಚಿದ್ಭಸಿತವ ಸ್ನಾನ ಧೂಳ ಧಾರಣವ ಮಾಡಿಸಿ ಮಂಟಪವ ರಚಿಸಿ ಒಂದಾಸನದಲ್ಲಿ ಆಶ್ರಯದಿಂದ ಮೂರ್ತ ಮಾಡಿಸಿ ಶಿವಲಾಂಛನ ಧವಳ ಪಟ್ಟ ಪಟ್ಟಾವಳಿ ರುದ್ರಾಕ್ಷಿ ಮೌಕ್ತಿಕ ಪುಷ್ಪಹಾರ ಹೀರಾವಳಿ ಪರಿಮಳಂಗಳಿಂದ ಅಲಂಕರಿಸಿ ತಳಿರು ತೋರಣಗಳ ಧೂಪ ದೀಪಾರತಿ ನಾದ ಪೂಜೆ ಸ್ತೋತ್ರಗಳಿಂದ ಜಂಗಮ ಮೂರ್ತಿ ಮುಂದುಗೊಂಡು ಪುಷ್ಪಾಂಜಲಿಗಳಂ ಮಾಡಿ ಶರಣ ಗಣ ಭಕ್ತ ಮಾಹೇಶ್ವರರು ವೈಭವದಿಂದ ಆ ಸಮಾಧಿಯ ಸನ್ನಿಧಿಗೆ ತಂದು ಲಿಂಗೈಕ್ಯನಾದ ಶರಣನ ನಡೆ ನುಡಿಯಾಚರಣೆಯ ವೃತ್ತಾಂತವ ಉಚ್ಚರಿಸುವುದು.

ಮುಂದೆ ಪುಷ್ಪಾಂಜಲಿಯಂ ಮಾಡಿ ಅತಿ ಸಂತೋಷದಿಂದ ಸಮಾಧಿಗೆ ಪಾದೋದಕವ ಹಾಕಿ ಭಸ್ಮವ ತಳಿದು ಪುಷ್ಪ ಪತ್ರೆಗಳ ರಚಿಸಿ ಲಿಂಗೈಕ್ಯನಾದ ಶರಣನ ಸಮಾಧಿಯ ಮಧ್ಯ ಮಂಟಪದಲ್ಲಿ ಮೂರ್ತವ ಮಾಡಿಸಿ ಚೀರವ ತೊಡಿಸಿ ಸರ್ವಾಂಗಕ್ಕೆ ಪ್ರಣವ ಸಂಬಂಧವಾದ ತಗಡು ಸಂಬಂಧಿಸಿ ಪೂರ್ವದಂತೆ ಪುಷ್ಪಾಂಜಲಿಯಂ ಮಾಡಿ ಸುವಿಧಾನದಿಂದ ಗರ್ಭ ಗೃಹ ತ್ರಿಕೋಣೆಯಲ್ಲಿ ಪದ್ಮಾಸನದಿಂದ ಮೂರ್ತವ ಮಾಡಿಸಿ ಕಂಠ ಸ್ಥಾನ ಪರಿಯಂತರ ವಿಭೂತಿ ಪತ್ರೆ ಪುಷ್ಪಗಳ ಪವಿತ್ರತೆಯಿಂ ತುಂಬಿ ಮುಖ ಕಮಲವ ತೆರೆದು ಜಂಗಮ ಮೂರ್ತಿಗಳ ಪಾದವಿಡಿಸಿ ಅಷ್ಟ ವಿಧಾರ್ಚನೆ ಷೋಡಶೋಪಚಾರದಿಂದ ಅರ್ಚಿಸಿ ಮಹಾ ಹರ್ಷದಿಂದ

ನಿರವಯ ಶಾಂಭವ ಪುರಕ್ಕೆ ದಯಮಾಡಯ್ಯ ಎಂದು ಪುಷ್ಪಾಂಜಲಿಯಂ ಮಾಡಿ ಮುಖ ಕಮಲವ ಬಾಸಣಿಸಿ ಕವಾಟ ಬಂಧನವ ಮಾಡಿ ಮುಂದಣ ಸಮಾಧಿಗೆ ಮೃತ್ತಿಕೆಯ ಶೋಧಿಸಿ ತುಂಬುವದು. ಆ ಮೇಲೆ ಜಂಗಮದ ಪಾದವಿಡಿಸಿ ಪೂಜಿಸಿ ಉಘೇ ಉಘೇ ಎಂದು ಉಗ್ಘಡಿಸಿ ಸಮಾಪ್ತಿಯ ಮಾಡಿ ವಸ್ತ್ರ ಪಾವುಡಗಳ ಗಣಸಮೂಹಕ್ಕೆ ಸಮರ್ಪಿಸಿ ಆ ಸ್ಥಲವ ಸಾಕಾರಕ್ಕೆ ತಂದು ಗದ್ದುಗೆಯ ಮಾಡಿ ಭಸ್ಮ ಘುಟಿಕೆ ಹಾವುಗೆ ದಂಡಾಗ್ರವನಿಟ್ಟು ಪೂಜಿಸಲಾಗದು. ಅಥವಾ ಗುರುವಾಕ್ಯವ ಮೀರಿ ಪೂಜಿಸಿದವರಲ್ಲಿ ಗುರುತ್ವವಿಲ್ಲ. ಅವರ ಜಂಗಮವೆಂದು ತೀರ್ಥ ಪ್ರಸಾದವ ಕೊಳ್ಳಲಾಗದು ಕೂಡಲ ಗುಹೇಶ್ವರ ಲಿಂಗಕ್ಕೆ ಸಲ್ಲದ ಗೊತ್ತು ನೋಡಾ. ಶಾಂತಲಿಂಗ ಗಣಂಗಳೇ ಎಂದು ಪ್ರಭುಸ್ವಾಮಿಗಳು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮನ ಮುಖವಚನದಿಂದ ಸಕಲ ಪ್ರಮಥರ್ಗೆ ನಿರೂಪವಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

(೨) ಸಮಾಧಿ ಕ್ರಿಯದ ವಾಚ್ಯಃ— ಪಾಲ್ಕುರಿಕೆ ಸೋಮೇಶ್ವರನ ಮೊಗ್ಗೆ ಮಾಯಿದೇವಯ್ಯಗಳು ಚಿಕ್ಕ ಮಾದನು ಕದಿರರೇವಣ್ಣನು ಸಮಾಧಿ ಸೋಮಯ್ಯಗಳು ಅಜಗಣ್ಣನು ನಂಬಿಯಕ್ಕನು ರಾಘವಾಂಕನು ನಮಃಶಿವಾಯನ ಶಿಷ್ಯ ಹಿಮಗಿರೀಶ್ವರನು, ತಳ್ಳಪ್ಪಯ್ಯಗಳು ಇವರು ಮೊದಲಾದ ಶಿವಶರಣರು ಶಿವನು ಕರೆವೊಡೊಲ್ಲದೆ ಸಮಾಧಿ ಕ್ರಿಯೆಯಧಿಕವೆಂದು ಮೆರೆದರು ಧಾರುಣಿಯೊಳು. ಇನ್ನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿಗಳೆಂಬ ನಾಲ್ಕು ಜಾತಿಗಳೊಳು ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾದ ಶರಣರು ಲಿಂಗಾವಸಾನ ಕಾಲದೊಳು ಭಕ್ತಮಾಹೇಶ್ವರರ ಸಮೂಹಕ್ಕೆ ಬಂದು ಪೊಡೆಮಟ್ಟು ನಮಸ್ಕರಿಸಿ ದೇವಾ ನಿಮ್ಮ ಪಾದದೊಳು ಏಕಾರ್ಥವ ಮಾಡಿಕೊಳ್ಳಿ ಎಂದು ಬಿನ್ನೈಸಲು ಆ ಭಕ್ತನ ಬಿನ್ನಹವ ಲಾಲಿಸಿ ಕೇಳಿ ಅಲ್ಲಿ ಎಲ್ಲ ಭಕ್ತಮಾಹೇಶ್ವರರು ಆತರ ಸ್ಥಿತಿಗತಿಯ ಕೇಳಿ ಒಪ್ಪಿ ಒಡಂಬಟ್ಟು ಮುಹೂರ್ತವ ಮಾಡಿಸಿಕೊಂಡು ಇನ್ನು ಅತ್ಯಂತ ಸಂಭ್ರಮದಿಂದ ಮಂಟಪವ ಶೃಂಗರಿಸಿ ಅಲ್ಲಿ ಭೂಮಿಯ ಪಟ್ಸಮ್ಮಾರ್ಜನೆಯ ಮಾಡಿ ರಂಗವಲ್ಲಿಯನಿಕ್ಕಿ ಷಡಕ್ಷರ ಮಂತ್ರವ ಬರೆದು ಸಿತ ಬಾವಟ್ಟವ ಹಾಸಿ ಅದರ ಮೇಲೆ ಪೂರಣ ಸನ್ನರ್ಧನಂ ಮಾಡಿಗಿಸಿ ಭಕ್ತ ವನಿತೆಯರು ಕಳಶ ಕನ್ನಡಿವಿಡಿದು ಶೋಭನವ ಪಾಡುತ

ಕೆಲರು ಗದ್ಯ ಪದ್ಯಂಗಳನೋದುತ್ತ ಕೆಲರು ಶಿವಶರಣರ ಚಾರಿತ್ರವ ನೋದುತ್ತ
ಕೆಲರು ಪಂಚಾಕ್ಷರ ಪಾಠವ ನೋದುತ್ತ ಕೆಲರು ಜಯಘೋಷ ಗೈವುತ್ತ ಕೆಲರು
ಶಿವಭಕ್ತ ಮಾಹೇಶ್ವರರು ಚೆನ್ನಾಗಿ ಸಂಭ್ರಮ ಸನ್ನಾಹಸನೊಡನೆ ಬರುವರು —
"ಎಚ್ಚರವಿರ್ಲಿ ಶಿವನ ಪಾದದೊಳ್ತಾಗೆ ಹೋಗುವದಕ್ಕೆ ಸಮೀಪವಾದುದು
ಪಂಚಾಕ್ಷರಿಯನು ಬಿಡದೆ ಉಚ್ಚರಿಸು ಸಂಭ್ರಮ ಕಾಲದೊಳು. ಅನ್ಯ
ಚಿಂತನೆ ಸಲ್ಲದು. ಸಡಗರ ಬಿಡದು ಹೋಗುವ ಮಾರ್ಗದಂತೆ
ಕರೆದೊಯ್ಯುವನು? ಶಿವಧ್ಯಾನದಲ್ಲಿರು ನೀನು ಕೇಳು" ಎಂದ ಶಿಷ್ಯನು
ಎಡೆಬಿಡ್ಲಿ ಪಂಚಾಕ್ಷರಿಯನುಚ್ಚರಿಸಬೇಕು. ಅತ್ತರು ಆಪ್ತರಾದವರು
ಅವರಂಗೆ ನಿಚ್ಚಗ ಹೇಳುವರು. ಅವನು ಪಂಚಾಕ್ಷರಿಯನುಚ್ಚರಿಸುವನು.
ಮಾಹೇಶ್ವರರ್ಗೆ ಸತ್ಕಾರವ ಮಾಡುವದು ಆತನ ಕೈಯ್ಯಿಂದ ಪಂಚಾಕ್ಷ
ರಿಯ ಮಂತ್ರ ಘೋಷ ಸಹಿತ ಪ್ರಾಣವ ಬಿಡುವುದ.

ಪ್ರಾಣ ಬಿಟ್ಟಬಳಿಕ ಉಳಿದ ಮಾನವನಂತೆ ಸತ್ತವನಲ್ಲ. ಕೈಲಾ
ಸಕ್ಕೆ ಹೋದವನು. ಬಿಟ್ಟಬಳಿಕ ಆತನನು ಜಂಗಮರ ಪಾದೋದಕದಿಂದ
ತೊಳೆದು ವಿಭೂತಿ ರುದ್ರಾಕ್ಷಿ ವಸ್ತ್ರಾಭರಣಗಳನು ಜಂಗಮರ ಪಾದಕ್ಕೆ
ಹಾಕಿಸಿ ಧರಿಸಿ ಶೃಂಗರಿಸುತ್ತ ಈ ಭೂಮಿಯೊಳು ಲಿಂಗ ತನುವನು ಲಿಂಗ
ವೆಂದು ಪೂಜಿಸಿ ಭಜಿಸಬೇಕು ಆಪ್ತರುಗಳು.

ಇನ್ನು ಸಮಾಧಿಯ ತೆಗೆಯುವ ಸ್ಥಾನಂಗಳು ಆವವೆಂದಡೆ ವೀರಾ
ಗಮದೊಳು ಪೇಳ್ದಂತೆಂತೆಂದೊಡೆ, ತನ್ನ ಮನೆಯಲ್ಲಿ ಗೋವಿನ ಶಾಲಿ
ನಲ್ಲಿ ಕೆರೆಯ ಸಮೀಪದಲ್ಲಿ ನದಿಯ ತಟಾಕದಲ್ಲಿ ಗ್ರಾಮ ಮಧ್ಯದಲ್ಲಿ ಅರ
ಣ್ಯದಲ್ಲಿ ಬೆಟ್ಟದ ತಪ್ಪಲಲ್ಲಿ ತಟಾಕ ಪ್ರಾಂತದೊಳು ಪುಷ್ಪವಾಟಿಯೊಳು
ಶಿವಾಲಯ ಸಮೀಪದಲ್ಲಿ ಇಂತಪ್ಪ ಸ್ಥಾನಂಗಳಲ್ಲಿ ಸಮಾಧಿ ಕ್ರಿಯೆಗಳ
ಮಾಡುವುದು.

ಇನ್ನು ಐಕ್ಯವಾದ ಶಿವಮೂರ್ತಿಯ ಪಾದವನಲ್ಲದೆ ಮತ್ತೊಬ್ಬರ
ಪಾದದಳತೆಯ ಮಾಡಲಾಗದು. ಅದೆಂತೆಂದೊಡೆ ಒಂದು ಕಡ್ಡಿಯ ತೆಗೆ
ದುಕೊಂಡು ಹಿಮ್ಮಡಕ್ಕೆ ಉಂಗುಷ್ಟಕ್ಕೆ ಹೆಚ್ಚುಕಡಿಮೆಯಾಗದ ಹಾಗೆ
ಅಳೆದುಕೊಂಡು ೫ ಪಾದವುದ್ದ ಒಂದು ಕಡ್ಡಿಯಂ ತೆಗೆದುಕೊಂಡು ನಾಲ್ಕು
ದಿಕ್ಕಿನಲ್ಲಿ ಅಳೆದು ಚೌಕವ ಮಾಡುವದು. ಆ ಚೌಕದ ನಾಲ್ಕು ಮೂಲೆ
ಯನು ನೂಲ ಸೂತ್ರದಿಂದ ಆಗ್ನೇಯ ಮೂಲೆಯಿಂದ ವಾಯುವ್ಯ

R. N. B. 2554.

# ಶಿವಾನುಭವ

ಸಂಪುಟ ೨೬ ]                                        [ ಸಂಚಿಕೆ ೨



ಸಂಪಾದಕ.

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.



# ವಿಷಯಾನುಕ್ರಮಣಿಕೆ.





---


**ಶಿವಾನುಭವ ಮಾಸಪತ್ರಿಕೆ,**

**ವಿಜಾಪುರ.**

**ವಾರ್ಷಿಕ ಚಂದಾ ೫–೧೨–೦**

# ಶಿವಾನುಭವ

| ವರ್ಷ ೨೬ | ಫೇಬ್ರುವರಿ ೧೯೫೨ | ಸಂಚಿಕೆ ೨ |
| --- | --- | --- |

## ಲಿಂಗನಂತರ ಸಂಧ್ಯಾನ

(ಲೇಖಕರು:— ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ— ವಂಟಮುರಿ)

ಸಂಧ್ಯಾ ಕಾಲಗಳು ಮೂರು ಇರುತ್ತವೆ. ಅವುಗಳನ್ನು ತ್ರಿಸಂಧ್ಯೆ
ಎಂದು ಕರೆಯುವರು. ಅವು ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ
ಎಂದಿವೆ. ಲಿಂಗಪೂಜೆಯನ್ನು ಈ ತ್ರಿಸಂಧ್ಯೆಗಳಲ್ಲಿ ಮಾಡುವವರು ಸಹ
ಅನೇಕರುಂಟು. ಆಗ ಅವರು ಅಷ್ಟವಿಧಾನ ಷೋಡಶೋಪಚಾರ, ಆದಿ
ಗಳಿಂದ ಇಷ್ಟಲಿಂಗವನ್ನು ಪೂಜಿಸುವರು. ಆದರೆ ಭಕ್ತರು ಬರಿಯ
ಮೂರು ಕಾಲಗಳಲ್ಲೇ ಏಕೆ? ಸರ್ವಕಾಲವೂ ಲಿಂಗಪೂಜೆಯಲ್ಲಿಯೇ
ಇರುವರು, ಅತ್ಯಂತ ಹಿತಾವಹವೂ ಅವಶ್ಯವೂ ಇರುವದು. ಇದನ್ನು
ಕೇಳಿ, "ಹಾಗಾದರೆ, ಭಕ್ತರು ತಮ್ಮ ಕಾಯಕ ವೆಸಗಲಿಕ್ಕೂ ಪ್ರಪಂಚ
ಸಾಗಿಸಲಿಕ್ಕೂ ವೇಳೆ ಎಲ್ಲಿ ಉಳಿಯುವದು? ಆದಕಾರಣ "ಇದು ಅತಿ
ಶಯೋಕ್ತಿ" ಎಂದು ನುಡಿಯಬಹುದು. ಅಂತಹರಿಗೆ "ಲಿಂಗಪೂಜೆಯ
ರಹಸ್ಯವೇ ಗೊತ್ತಿಲ್ಲ" ಎಂದು ಬಹು ಕಷ್ಟದಿಂದ ನುಡಿಯಬೇಕಾಗುವದು.
ಯಾವಾಗಲೂ ಇಷ್ಟಲಿಂಗವನ್ನು ಕರದಲ್ಲಿಯೇ ಹಿಡಿದುಕೊಂಡು, ಮಾರ್ಜ
ನಾದಿ ವಿಧಿಗಳನ್ನು ನೆರವೇರಿಸುತ್ತಲೇ ಇರುವದು, ಲಿಂಗಪೂಜೆಯಲ್ಲಿ?
ಅದು ಕೇವಲ ತೋರಿಕೆಯ ಪೂಜೆಯು, ಅದನ್ನು ಏಕಕಾಲ (ಮಧ್ಯಾಹ್ನ)

ವನ್ನು (ಸತ್ಯ ಶರಣರನ್ನು) ಗದ್ದುಗೆಯಲ್ಲಿ ಕುಳ್ಳಿರಿಸಿ ಆತನನ್ನು ಪಡೆಕೊಳ್ಳುವ ಕಾಲದಲ್ಲಿ ಆತನ ಎದುರಿಗೆ ಪಡೆಕೊಳ್ಳುವವನು, ಕಾಲು ಜೋಡಿಸಿ ಕೈಮುಗಿದು ಶುದ್ಧ ಮನದಿಂದ ಉಚ್ಚರಿಸುವ ಸಂಧ್ಯಾನವಿದು! ಆಗ ಬಳಿಯಲ್ಲಿದ್ದವರೆಲ್ಲರೂ ಅದರಂತೆ ತಮ್ಮ ಮನದಲ್ಲಿ ನೆನೆಯಬೇಕು. ಇಲ್ಲವೆ ಒಳಿತಾಗಿ ಲಕ್ಷವಿಟ್ಟು ಕೇಳಬೇಕು. ಅದೇನೆಂದರೆ —

"ಹರಹರ, ಕಾಲಹರ, ಕರ್ಮಹರ, ದುರಿತಹರ, ಪಾಪವೆಲ್ಲಪರಿಹರ, ಅಯ್ಯಹಸಾದ, ಮಹಾಪ್ರಸಾದ, ಪೂರ್ವಜನ್ಮ, ನಿವಾರಣಂ, ದೀಕ್ಷಾಗುರು, ಶಿಕ್ಷಾಗುರು, (ಮೋಕ್ಷಗುರು) ಜ್ಞಾನಗುರು, ಗುರುವಿನ ಗುರು ಪರಮಗುರು, ಪರಮಾರಾಧನೆ ಮಹಾಮಂತ್ರ, ಅರುತಪ್ಪು ಮೂರು ಅಪರಾಧ ಕ್ಷಮಾಮಾಡು ಗುರುವೇ! ಶರಣು ಶರಣಾರ್ಥಿ ಗುರು ಪಾದ ಪದ್ಮಂಗಳಿಗೆ ತೀರ್ಥ ಪ್ರಸಾದ (ಕರುಣಾಮೃತ) ಪಡೆದುಕೊಳ್ಳಲಿಕ್ಕೆ ನಿರೋಪವೀವುದು."

**ಹರಹರ:**— ಹರಣಮಾಡು, ಹರಣಮಾಡು, ಬಿಡಿಸು, ಬಿಡಿಸು, ದೂರವಿಡು, ದೂರವಿಡು. ಎಂದು ಅತಿ ಹಂಬಲದಿಂದ ದ್ವಿರುಕ್ತಿರೂಪವಾಗಿ, ಬೇಡಿಕೊಳ್ಳಲಾಗಿದೆ. ಏನನ್ನು? ಕೆಳಗಿನ ೪ ಸಂಗತಿಗಳನ್ನು ಅವು:—

(೧) **ಕಾಲಹರ:**— ಯಮನ ಬಾಧೆಯನ್ನು (ಸಾವನ್ನು) ಬಿಡಿಸು, ಕಳೆದುಬಿಡು, ಹೀಗೆ ಬೇಡಿಕೊಂಡರೆ, "ಎಂದೆಂದೂ ದೇಹವನ್ನು ಬಿಡದಂತೆ ಮಾಡು" ಎಂದು ಬೇಡಿದಂತಲ್ಲ! ಅದು ಯಾರನ್ನೂ ಬಿಟ್ಟದ್ದಲ್ಲ "ಯದ್ದೃಷ್ಟಂ ತದ್ನಷ್ಟಂ" ಎಂಬುದು ಸಿದ್ಧಾಂತವು. ಹೀಗೆ ಇದ್ದುದೇ ಬರಿ ಕಷ್ಟವಾಗಿದೆ. ಹೊರದೇಹವು ನಾಶವಾದರೂ ಪ್ರಾಣರೂಪ ಧರಿಸಿದ ಅಂತರಾತ್ಮನು ಪರಮಾತ್ಮಸ್ವರೂಪನಾದುದರಿಂದ, ಆತನ ನಿಜತ್ವವನರಿತುಕೊಂಡು, "ತಾನು ಶಾಶ್ವತವಾಗಿ ಯಾವಾಗಲೂ ಇರತಕ್ಕ ವಸ್ತು" ವೆಂಬುವನ್ನು ಅರಿತುಕೊಳ್ಳುವಂತೆ ಮಾಡು (ತಾನಾರೆಂಬರಿವಾಗುವಂತೆ ಕರುಣಿಸು) ಎಂದು, ಪ್ರಾರ್ಥಿಸಿದಂತಾಯಿತು; ಎಂದು ತಿಳಿದುಕೊಳ್ಳಬೇಕು.

(೨) **ಕರ್ಮಹರ** — ಸತ್ಕರ್ಮ (ಪುಣ್ಯ) ದುಷ್ಕರ್ಮ (ಪಾಪ) ಗಳೆರಡೂ, ನಷ್ಟವಾಗದಿದ್ದರೆ ಕಾರ್ಮಿಕ ಮಲದ ಪೀಡೆಯು ತಪ್ಪಲಾರದು. ಅದುದರಿಂದ ಎರಡನ್ನೂ ನಾಶಮಾಡಲು ಬೇಡಿಕೊಳ್ಳಲಾಗಿದೆ.

ಪುಣ್ಯಕರ್ಮ ಮಾಡಿದರೂ ಸಹ ಅದರ ಫಳವು (ಪುಣ್ಯ ಭೋಗಿಸಲು ಪುನಃ ಜನ್ಮವೆತ್ತುವದು) ತನಗೆ ತಗಲದಂತೆ, ಉಪಾಯ ಯೋಜಿಸುವದು ಅವಶ್ಯವಿದೆ. ಅದಕ್ಕಾಗಿ ಭಗವದ್‌ಗೀತೆಯಲ್ಲಿ "ಸಕಾಮುವಾಗಿ ಕರ್ಮ ಮಾಡಬೇಡ, ನಿಷ್ಕಾಮುನಾಗಿ ವರ್ತಿಸು" ಎಂದು ಬೋಧಿಸಿದೆ. ಅದನ್ನೇ ಪ್ರಮಥರು ಹೆಚ್ಚು ಸ್ಪಷ್ಟವಾಗಿ, ತ್ರಿಪುಟಿಯೊಂದಾಗಿ ವರ್ತಿಸಲಿಕ್ಕೆ ಹೇಳಿದ್ದಾರೆ. ಅದು ಸಹಜ ಕಾರ್ಯವು ಇಲ್ಲವೆ ಲೀಲಾಮಾತ್ರ ವಾಪುದು,ಆಗುವದು. ಹೀಗೆ ಲೀಲೆ ಮಾಡುವದಕ್ಕಾಗಿಯೇ ಪರಮಾತ್ಮನು ಮುಂದಾಗಿರುವನೆಂಬುದನ್ನು ಸ್ಮರಿಸಬೇಕು.

(೩) **ದುರಿತ ಹರಃ**— ಒಂದುವೇಳೆ ಸತ್ಕರ್ಮವಿದ್ದರೆ ಇರಲಿ, ದುರಿತ ಇಲ್ಲವೆ ಕೆಡಕು ಕಾರ್ಯ (ಅನಿಷ್ಟ ಕ್ರಿಯೆ) ಇಲ್ಲದಂತೆ ಮಾಡು, ಎಂದು ಇಲ್ಲಿ ಬೇಡಲಾಗಿದೆ. ಅದು ಪಾಪ ರೂಪವು. ( ದುರ್+ಇತ= ದುರಿತ. )

(೪) **ಪಾಪವೆಲ್ಲ ಪರಿಹರಃ**— ಕೆಟ್ಟ ಕ್ರಿಯೆಗಳಲ್ಲಿ ನಾವು ಅನೇಕ ನಿರುಪದ್ರವಿ ಕೆಲಸಗಳನ್ನು ಎಣಿಸುತ್ತೇವೆ. ಉದಾಹರಣಾರ್ಥವಾಗಿ ಓಣಿಯ ಕಸಗೂಡಿಸುವದು, ಸತ್ತ ದನ ಎತ್ತಿ ಒಯ್ದು ಅವನ್ನು ಸುಲಿಯುವದು, ತೊಗಲಿನ ಸಾಮಾನು ಪಾದರಕ್ಷೆ ಮೊದಲಾದವನ್ನು ವಿರಚಿಸುವದು, ತಲೆ ಬೋಳಿಸುವದು, ಬಟ್ಟೆ ತೊಳೆಯುವದು ಎಣ್ಣೆ ತೆಗೆಯುವದು, ಮಲಮೂತ್ರ ಬಳಿಯುವದು, ಮುರಿ ತಿಕ್ಕುವದು ಅಡಿಗೆ ಮಾಡುವದು, ನೀರು ಹಾಕುವದು, ಮಣ್ಣಿನ ಪಾತ್ರೆ ಮಾಡುವದು ಇತ್ಯಾದಿಗಳು. ಇವೇನು ನಿಜವಾಗಿ ದುರಿತಗಳಲ್ಲ. (ಕೆಟ್ಟ ಕಾರ್ಯಗಳಲ್ಲ) ಅವಿಲ್ಲದಿದ್ದರೆ ನಮ್ಮ ಬಾಳುವೆ ಸಾಗದು. ಪ್ರಾಪಂಚಿಕ ಸುಖ ಲಭಿಸದು. ಇವನ್ನು ಮಾಡಲು ಆದಾವನೂ ಹಿಂಜರಿಯಕೂಡದು. ಅದರಿಂದ ಎಷ್ಟು ಮಾತ್ರವೂ ಕೊರತೆಯಿಲ್ಲ. ಆದುದರಿಂದ ಇಂತಹ ಕಾಯಕದಿಂದ ಮೇಲು ಕೀಳು ಉಂಟಾಗದು. ಅದು ಕೈಲಾಸವು. ಎಂದು ಪ್ರಮಥರು ಘೋಷಿ

ಸಿದ್ದಾರೆ. ಇವನ್ನು ಸ್ವೀಕರಿಸಿ ಬಳಿಕ ಪಾಪವು ಆದಾವುದರಿಂದಾಗು ವದು? ಎಂದು ಯೋಚಿಸಿದರೆ,- ಕೊಲೆ ಮಾಡುವದು, ಕಾಡುವದು, ಸುಳ್ಳಾಡುವದು, ಕಳವು ಮಾಡುವದು, ಪರಧನ-ಪರಸ್ತ್ರೀ ಅಪಹರಣ, ಮೋಸ, ವಂಚನೆ ಇತ್ಯಾದಿಗಳು. ಇವು ಮಾತ್ರ ಪಾಪ ಕೃತ್ಯಗಳು. ಇಂತಹವಾವುವನ್ನೂ ಮಾಡದಂತೆ ಅನುಗ್ರಹಿಸು ಎಂದು ಬೇಡಿಕೊಳ್ಳ ಲಾಗಿದೆ. "ಪಾಪಾಯ ಪರಪೀಡನಂ।" ಎಂದರಿಯಬೇಕೇ ಹೊರತು ಸಮಾಜಸೇವೆಯ ರೂಪವಾದ, ಅತ್ಯವಶ್ಯಕ ಕಾರ್ಯಗಳನ್ನು ಕೆಡಕೆಂದು ಭಾವಿಸಬಾರದು. ಇವು ಮೇಲೆ ಹೇಳಿದಂತೆ ಸಾಧಿಸಬೇಕಾದರೆ, ಅವಕ್ಕೆ ಉಪಾಯವೇನು? ಎಂದು ಕೇಳಿದರೆ—

**ಅಯ್ಯ ಹಸಾದಃ** — ಎಂದು ಉತ್ತರಿಸಿದ್ದಾರೆ. "ಆರ್ಯ ಪ್ರಸಾದ" ವೆಂಬುದರ ತದ್ಭವವೇ ಈ ಅಯ್ಯ ಹಸಾದವು. ಇದರ ಅರ್ಥವು ಶ್ರೇಷ್ಠರ ಕೃಪೆಯು, ಅನುಗ್ರಹವು, ಒಡನಾಟವು ಎಂದರಿಯಬೇಕು. ಇಲ್ಲಿ ಶ್ರೇಷ್ಠ ರೆಂದರೆ ಶರಣರೇ ಹೊರತು ಅನ್ಯರಲ್ಲ. "ಕುಲವೇನು? ಆವಂದಿರ ಕುಲ ವೇನು? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂದು ಜಗದಣ್ಣ ಬಸವಣ್ಣನವರೇ ಸಾರಿದ್ದಾರೆ. ಅದರಂತೆ ಶರಣರ ಮಹೇಶ್ವರ ಸ್ಥಳದಲ್ಲಿ "ಎಲ್ಲೆಲ್ಲಿಯೂ ನಿನ್ನನೋರ್ವನನೆ ಕಾಂಬ ಸತ್ಯಶರಣರವ ಅಯ್ಯಯ್ಯ" ಎಂಬೆನೆ? ಎಂದು ಕೂಡಲ ಸಂಗಮನನ್ನು ಕೇಳಿದ್ದಾರೆ. ಇದರಿಂದ "ಅಯ್ಯ" ಎಂಬವರು ಈಗಿನ ಬರಿಯ ಅಯ್ಯಾಚಾರ ಹೊಂದಿದವರಾರೂ ಅಲ್ಲ ವೆಂಬುವದು ಸ್ಪಷ್ಟವಾಗುವದು. ಈ ಸತ್ಯ ಶರಣರ ಮಾರ್ಗದಂತೆ ವರ್ತಿ ಸಿದರೆ ಅವೇನು ಪ್ರಾಪ್ತಿಸುವದು? ಎಂಬುದಕ್ಕೆ ಕೆಳಗಿನ ಉತ್ತರವದೆ.

**ಮಹಾ ಪ್ರಸಾದಃ** — ಅಂದರೆ ಮಹದ್ವಸ್ತುವಿನ ಪ್ರಾಪ್ತಿ ಅತ್ಯಂತ ಮಿಗಿಲಾದ ವಸ್ತುವೆಂದರೆ ಸಮ್ಯಜ್ಞಾನವು. "ನಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೆ" ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. "ಪ್ರಜ್ಞಾನಮ್ ಬ್ರಹ್ಮ" ಎಂದು ವೇದಾಂತಿಗಳು ನಿರ್ಧರಿಸಿರು ವರು. "ಆರು ನಾನೆಂದು ವಿಚಾರಿಸು" ಎಂದು ನಿಜಗುಣ ಶಿವಯೋಗಿ ಗಳು ಹೇಳಿದ್ದಾರೆ. ಇದನ್ನು ಹೊಂದುವದೇ ಮಹಾ ಪ್ರಸಾದವು.

**ಪೂರ್ವ ಜನ್ಮ ನಿವಾರಣ:**— ಅಂದರೆ ಹಿಂದಣ ಅಗಣಿತ ಜನ್ಮಗಳಲ್ಲಿ ಮಾಡಿ, ಭೋಗಿಸದೆ ನಿಂತ ಸಂಚಿತ ಕರ್ಮವು, ಈ ಮಹಾ ಪ್ರಸಾದದಿಂದ ನಿವಾರಣವಾಗುವದು. ಇಲ್ಲವೆ ಸುಟ್ಟು ಭಸ್ಮೀಭೂತವಾಗುವದು. ಇಂತಹರನ್ನು ಆಗಾಮಿ ಕರ್ಮವೂ ಸೋಂಕದು. ಪ್ರಾರಬ್ಧ ಕರ್ಮವನ್ನುಸಹ ವರ್ತಮಾನ ಜನ್ಮದಲ್ಲಿ ಭೋಗಿಸಿಯೇ ತೀರಿಸಲಾಯಿತು. ಹೀಗಾಗಿ ಮೋಕ್ಷ ಪಡೆಯಲಿಕ್ಕೆ ( ಲಿಂಗಾಂಗ ಸಾಮರಸ್ಯ ಹೊಂದಲಿಕ್ಕೆ ) ಭಕ್ತನು ಯೋಗ್ಯನಾಗುವನು. ಅವಾಗಲಿಕ್ಕೆ ಮೊತ್ತ ಮೊದಲು ಏನನಾಚರಿಸಬೇಕು ? ಎಂದು ಕೇಳಿದರೆ ಮುಂದಿನ ಉತ್ತರವಿದೆ.

**ದೀಕ್ಷಾ ಗುರು:**— ಗುರುವಿಗೆ ಶರಣು ಹೋಗಿ ಲಿಂಗದೀಕ್ಷೆಯನ್ನು ಹೊಂದಿ, ಭಕ್ತತ್ವವನ್ನು ವಹಿಸಬೇಕು. ಲಿಂಗ ( ಜ್ಞಾನ ) ಸಂಬಂಧವ ನಿತ್ಯ. ಅಜ್ಞಾನವನ್ನು ( ಮಲತ್ರಯವನ್ನು ) ನಾಶಮಾಡದಿದ್ದರೆ ಅದು ದೀಕ್ಷೆಯೇ ಅಲ್ಲ. ದೀಕ್ಷೆಯು ಕಲಿಸಲಿಕ್ಕೆ—

**ಶಿಕ್ಷಾ ಗುರು:**— ಗುರುವು ಶಿಷ್ಯಗೆ ( ಭಕ್ತನಿಗೆ ) ಶಿವಮಾರ್ಗದ ಎಲ್ಲ ಸಂಗತಿಗಳನ್ನು ಆ ಮೂಲಾಗ್ರವಾಗಿ ಶಿಕ್ಷಣ ರೂಪದಿಂದ ತಿಳಿಸಿ ಕೊಡಬೇಕು. ಇಂತಹ ಶಿಕ್ಷಾಗುರುವು ತಾನು ಮೊದಲು, ಶಿವಮಾರ್ಗದ ಎಲ್ಲ ವಿಷಯಗಳನ್ನು ಸರಿಯಾಗಿಯೂ ನಿಃಸಂದೇಹವಾಗಿಯೂ ಅರಿತವನಿರಬೇಕು. ಮುಂದೆ ಆ ಗುರುವು—

**ಜ್ಞಾನಗುರು:**— ವಾಗಿ ಪ್ರಕೃಷ್ಟವಾದ ಜ್ಞಾನದ ( ತಾನು ಯಾರು ಎಂಬುವದನ್ನು ತಿಳಿಸುವ ಮಹಾ ಜ್ಞಾನದ ) ಉಪದೇಶವನ್ನು " ತತ್ವಮಸಿ" ಎಂಬ ಮಹಾ ಮಂತ್ರ ದ್ವಾರದಿಂದ ಬೋಧಿಸುವನು. ಅವರ ಪಾರಾಯಣ ಮನನಾದಿಗಳಿಂದ ಭಕ್ತನು ತನ್ನ ಹಾಗೂ ಜಗತ್ತಿನ ನಿಜತ್ವವನ್ನೂ ಶಿವನಾರೆಂಬುವದನ್ನೂ ನಿಃಸಂದೇಹವಾಗಿ ಅರಿತುಕೊಳ್ಳುವನು. ಹೀಗಾಗಿ ಆತನಿಗೆ ಸಹಜವಾಗಿಯೇ ಲಿಂಗಾಂಗ ಸಾಮರಸ್ಯವು ಪ್ರಾಪ್ತವಾಗಿ, ಎಲ್ಲೆಲ್ಲಿಯೂ ತಾನೇ ತಾನಾಗಿಬಿಡುವನು.

ಹೀಗಾಗಲಿಕ್ಕೆ ಈ ಗುರುತ್ರಯರ ಗುರು ( ಗುರುವಿನಗುರು ) ಪರಮ ಗುರುವೆನಿಸಿದ ಪರಮರ ( ಬಸವಾದಿ ಪ್ರಮಥರ ) ಆರಾಧನೆಯೇ ಮಹಾ ಮಂತ್ರ ( ಮಿಗಿಲಾದ ಮೂಲ ಮಂತ್ರವು ) ಎಂದು ದಿಡದಿಂದ ನಂಬಬೇಕು. ಏಕೆಂದರೆ–

**ಗುರುವಿನ ಗುರು ಪರಮ ಗುರುಃ—** ಗುರುವಿಗೆ ಗುರುತ್ವ ವನ್ನುಂಟುಮಾಡಿಕೊಡುವ ವಸ್ತುವು " ಪರಮ ಗುರು " ವೆಂಬುದು ಸ್ಪಷ್ಟವದೆ. ಅದು ಸರ್ವ ಜ್ಞಾನವೇ ವಿನಾ ಬೇರೊಂದಲ್ಲ. ಇಂತಹ ಪರಮ ಗುರುವಿನ ಪ್ರಾಪ್ತಿಗೆ ಅದಾವುದನ್ನು ಬೆಂಬಲ ಮಾಡಿಕೊಳ್ಳು ವದು ಅವಶ್ಯನಿದೆ; ಎಂದು ಕೇಳಿದರೆ—

**ಪರಮ ಆರಾಧನೆ ಮಹಾಮಂತ್ರಃ–** ಪರಮರ ( ಪ್ರಮಥರ ) ಆರಾಧನೆಯೇ ( ನಡೆಯೇ ) ಅದಕ್ಕೆ ಮಹಾ ಮಂತ್ರವಾಗಿದೆ ಎಂದು ಉತ್ತರಿ ಸಿದ್ದಾರೆ. ಪರಮರೆಂದರೆ ಬಸವಾದಿ ಪ್ರಭುದೇವಾಂತ ಸರ್ವ ಪ್ರಮಥ ಪುಂಗವರು ಇವರೆಲ್ಲರು ಇಷ್ಟ-ಪ್ರಾಣ-ಭಾವಗಳೆಂಬ ಸಕಲ ಲಿಂಗಗಳ ಹಾಗು ನಿಷ್ಕಲ ನಿಃಶೂನ್ಯ ನಿರಂಜನಗಳೆಂಬ ಶೂನ್ಯ ಲಿಂಗಗಳ ಬಗೆಗೆ ಬಹು ಸೂಕ್ಷ್ಮ ರೀತಿಯಿಂದ ಆಳವಾಗಿ ಅರೆದಾಟ ನಡಿಸಿ ಒಂದು ನಿಶ್ಚಿತ ನಿರ್ಧಾರಣೆಗೆ ಬಂದಿದ್ದಾರೆ. ಅದು ನಮಗಷ್ಟೇ ಏಕೆ, ಇಡೀ ಜಗತ್ತಿಗೂ ಕೂಡ ಆದರ್ಶಪ್ರಾಯವಾದ ಮಹಾ ತತ್ವಜ್ಞಾನವಾಗಿದೆ.

ಇದರ ಮುಂದೆ ಕೆಲವು ಕಡೆ, ಒಂದು ಸಣ್ಣ ಬಾಲವನ್ನು ಜೋಡಿಸಿದ್ದುದು ಕಂಡುಬರುತ್ತದೆ. ಅದನ್ನು ನಾನು ಈ ಹುಕ್ಕೇರಿ ನಾಡಿಗೆ ಬಂದಮೇಲೆ ಕೇಳಿದೆನು. ಮೇಲಿನವುಗಳಷ್ಟು ಅದು ಮಹತ್ವದ್ದಲ್ಲದಿದ್ದರೂ ಅದನ್ನು ಸಹ ಇಲ್ಲಿ ವಿವರಿಸುವದು, ಸೂಕ್ತವಾಗಿ ತೋರುತ್ತದೆ. ಅದು " ಆರು ತಪ್ಪು ಮೂರು ಅಪರಾಧಕ್ಷಮಾ ಮಾಡು " ಗುರುವೇ ಎಂದು ಅಂಗ ಲಾಚಿ ಬೇಡಿಕೊಳ್ಳುತ್ತಲೇ ದ. ಶಿ. ಸಾ. ನ. ಹಾಕುವರು. ಇದು ಶುದ್ಧ ತಿಳಿಗೇಡಿತನವು. ಸುಮ್ಮನಿರಲಿಕ್ಕೆ ಆ ಗುರುವಿನದೇನು ಹೋಗುವದು. " ನಬ್ರೂಯಾತ್ ಸತ್ಯಮ ಪ್ರಿಯಂ " ಎಂದು ಭಾವಿಸಿ ಹೆಚ್ಚಿಗೇನೂ ಹಸಿಗೆ ಹಚ್ಚದೆ ಆತನು ಇರಬಹುದು. ಆದರೆ ಭಕ್ತರಾದ ನಾವು ಮಾತ್ರ

ಸುಮ್ಮನೆ ಕಣ್ಣು ಮುಚ್ಚಬೇಕೇ? ಹಾಗಾದರೆ ನಮ್ಮ ಜನ್ಮವೇ ವ್ಯರ್ಥವಾಗುವದು. ಆದುದರಿಂದ ನಾವೇ ಹೆಚ್ಚು ಸಾವಧಾನವಾಗಿ ನಮ್ಮ ನಿಜವಾದ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳತಕ್ಕದ್ದು.

**ಆರು ತಪ್ಪು:**— ತಪ್ಪುಗಳು ಬಹುಶಃ ಎಲ್ಲರಿಂದಲೂ ಆಗೇ ಆಗುತ್ತವೆ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ, ಈ ಅರಿಷಡ್ವರ್ಗವೇ ಅವು ಅವನ್ನು ಎಲ್ಲರೂ ದೂರಿರಿಸುವದು ಬಲು ಇಷ್ಟವು. ಆದರೊಳಗೇ ಲಿಂಗಧಾರಿಗಳಾದವರು "ತಾವು ವೀರರು" ಎನ್ನಿಸಿಕೊಳ್ಳುವದರಿಂದ, ಅದನ್ನು ಮೊದಲು ನಾಶಗೊಳಿಸತಕ್ಕದು. ಅವರಂತೆಯೇ ಈ ಗುಣಗಳನ್ನು ಭವಿಗಳೆಂದು ಕರೆದು ಭವಿಸಂಗ ಬಿಡಲಿಕ್ಕೆ ನಮಗೆ ಹೆಚ್ಚಾಗಿಯೇ ಉಪದೇಶಿಸಿರುವರು. ಇಷ್ಟಲಿಂಗ ಪೂಜೆಯ ಗುಟ್ಟೇ ಇದು. "ಭವಿಸಂಗ ಬಿಡದನ್ನಕ, ಭಕ್ತನೆಂತೆಂಬೆ?" ಎಂದು ಅಣ್ಣನವರು ವಚನಿಸಿರುವರು. ಆದಕಾರಣ ಶಕ್ಯವಾದ ಪ್ರಯತ್ನಗಳನ್ನೆಲ್ಲ ಮಾಡಿ, ಇವನ್ನು ವೀರಶೈವರು ಕಳೆದುಕೊಳ್ಳಲಿಕ್ಕೇಬೇಕು. ಹಾಗಾಗದಿದ್ದರೆ ಅವರು ಲಿಂಗಾಂಗ ಸಾಮರಸ್ಯದ ಒಣ ಹರಟಿಕೊಚ್ಚುವದು ತೀರ ನಿರರ್ಥಕವು.

**ಮೂರು ಅಪರಾಧ:**— ಮೂರು ದೇಹಗಳಲ್ಲಿ ಮೂರು ಲಿಂಗಗಳನ್ನು ಧರಿಸಿಕೊಂಡು ಪೂಜಿಸುವದು ನಮ್ಮ ಶಿವಭಕ್ತರ ಪರಮ ಕರ್ತವ್ಯವು. ಆದರೆ ಅನೇಕರು ಹೊರಗೆ ದೇಹದಮೇಲೆ ಬರಿಯ ಇಷ್ಟಲಿಂಗವೊಂದನ್ನೇ ಧರಿಸಿಕೊಂಡು ಪೂಜಿಸುವರೇ ಹೊರತು ಉಳಿದೆರಡು ಲಿಂಗಗಳ ನೆನಪನ್ನೇ ಬಹುಶಃ ಮಾಡುವದಿಲ್ಲ. ಇದಲ್ಲದೆ ಆ ಇಷ್ಟಲಿಂಗದ ಪೂಜೆಯನಾದರೂ ಸಾಗ್ರವಾಗಿ ಸಾಗುವುದೆನ್ನಲಿಕ್ಕೂ ಬರುವದಿಲ್ಲ. ಅದನ್ನೂ ಕೂಡ ಹಾಗೂ ಹೀಗೂ ಮಾಡುವವರೇ ಸಮಾಜದಲ್ಲಿ ತುಂಬಿಕೊಂಡಿದ್ದಾರೆ. ಈಗಂತೂ ಬರಿಯ ಸ್ಥೂಲ ವೇಷದಲ್ಲಿ ಸಹ ಇಷ್ಟಲಿಂಗ ಧರಿಸದೆ ಇರುವವರು ಸಹ ಶಿಕ್ಷಿತರಲ್ಲಿ ಕೂಡ ಹೇರಳವಾಗಿ ಸಿಕ್ಕುವರು. ಇಂತಹ ವಿಷಮ ಸ್ಥಿತಿಯಲ್ಲಿ ಪ್ರಾಣಲಿಂಗ ಭಾವಲಿಂಗಗಳ ಪೂಜೆಯ ಸುದ್ದಿಯನ್ನು ಸಹ ಎತ್ತುವದು ದುಸ್ತರವಾಗಿರುವದು. ಇನ್ನು ಲಿಂಗಾಂಗ ಸಾಮರಸ್ಯವು ಎತ್ತೋ! ಎಲ್ಲಿಯೋ! ಏನೋ! ದೂರೇ ಉಳಿದುಬಿಟ್ಟಿತು

ಆದರೆ ಅದು ಎಂದೆಂದೂ ತ್ಯಜಿಸಿ ಮರೆತುಬಿಡತಕ್ಕ ವಿಷಯವಲ್ಲೆಂಬು ದನ್ನು ಎಲ್ಲರೂ ಒಳಿತಾಗಿ ಲಕ್ಷದಲ್ಲಿಡಬೇಕು. "ಇಳಿಯುತ್ತ ಹೋದಂತೆ ತಿಳಿಯುತ್ತ ಹೋಗುವರು; ಎಂದು ಗಾದೆಯಿದೆ. ತರುಣರ ತಲೆಗೇರಿದ ಪ್ರಾಯದ ( ಪ್ರಾಪಂಚಿಕ ) ಮಬ್ಬು, ಇಳಿವಯದಲ್ಲಿ ಇಲ್ಲದಹಾಗಾಗಲು ಅವರು ಆಗ ಕಣ್ದೆರೆವರು; ಬಾಯ್ಬಿಡುವರು.

ಹೀಗೆ ವ್ಯರ್ಥವಾಗಿ ಗುರುವಿನ ಮುಂದೆ ಅಡ್ಡಬಿದ್ದು ಹಲುಬಿಕೊಳ್ಳು ವದು ವ್ಯರ್ಥವು. ನಿಜವಾದ ಗುರುವು (ಅರಿವು) ತನ್ನಲ್ಲಿಯೇ ಇರು ವನು. ಆ ಜ್ಞಾನಕ್ಕೆಯೇ ಶುದ್ಧ ಭಾವದಿಂದ ಶರಣುಹೋಗಿ, ಅಂತಃ ಕರಣ ಪೂರ್ವಕವಾಗಿ ದೃಢನಿಶ್ಚಯದಿಂದ ಯತ್ನಿಸಬೇಕು. ಮೇಲಿಂದ ಮೇಲೆ ತಾನೇ ಮೇಲ್ವಿಚಾರಣೆ ಮಾಡಿ ತಿದ್ದಿಕೊಳ್ಳಬೇಕು. ಯೋಗ್ಯ ರಾದ ಶರಣರ ಅನುಕರಣ ಮಾಡಬೇಕು. ಹೀಗೆ ತಾನೇ ದುಡಿದು ಇಷ್ಟವನ್ನು ಪ್ರಾಪ್ತಿಸಿಕೊಳ್ಳಲಿಕ್ಕೆ ನಾವು ಕಲಿಯಬೇಕು. ಇಂತು ತನ್ನಿಂದಾ ಗುವದನ್ನು ತಾನು ಮಾಡದೆ, ಸುಮ್ಮ ಸುಮ್ಮನೆ ಬಯಸಿದರೆ ಅನಾಯಾಸ ವಾಗಿ ಯಾವದೂ ಸಾಧ್ಯವಾಗದು. ಈ ಹೇಡಿತನವು ವೀರರಿಗೆ ತಿಲಮಾತ್ರವೂ ಶೋಭಿಸಲಾರದು.

ಇಂತಹ ಮಹತ್ವದ ಸಂಧ್ಯಾನದ ನಿತ್ಯ ಕ್ರಮವು ಈಗ ಬಳಿಕೆ ಯಲ್ಲಿ ಅಪರೂಪವಾಗಿದೆಯಷ್ಟೇ! ಅದರ ಮುಖ್ಯ ಕಾರಣಗಳು ಹೀಗೆ ಇರುವವು—

(೧) ಪಾದೋದಕ ಪಡೆದುಕೊಳ್ಳಲಿಕ್ಕೆ ಯೋಗ್ಯರಾದ ಗುರು ಜಂಗಮರು ಈಗಿನ ಕಾಲದಲ್ಲಿ ದೊರೆಯುವದೇ ದುರ್ಲಭವಾಗಿದೆ. ಎಲ್ಲರ ಮನಸ್ಸು ಹೊನ್ನು ಹೆಣ್ಣು ಮಣ್ಣುಗಳತ್ತಲೇ ಆಕರ್ಷಿಸಲ್ಪಟ್ಟಿದೆ. ಈ ಮೂರಕ್ಕೆ ಒಳಗಾದವರ ಪಾದೋದಕ ನಿಷಿದ್ಧವೆಂದು ಶ್ರೀ ಸಿದ್ಧರಾಮೇ ಶ್ವರ ದೇವರ ವಚನವು ಘೋಷಿಸುತ್ತದೆ. ಅಲ್ಲದೆ "ಕೊಂಡವರ ಭವ ಹಿಂಗದು, ಕೊಟ್ಟವರಿಗೆ ನರಕ ತಪ್ಪದು" ಎಂತಲೂ ಅವರು ಎಚ್ಚರಿ ಸಿರುವರು.

(೨) ಈಗಂತೂ ವಿದ್ಯಾ ಪ್ರಸಾರದ ಕಾಲವು. ಮುಗ್ಧ ಭಕ್ತಿ ಯಿಂದ ನಡೆಯುವವರು ಕಡಿಮೆಯಾಗಿದ್ದಾರೆ.

(೩) ಸಮಾಜದಲ್ಲಿ ಈಗ ದಾರಿದ್ರ್ಯವು ಹೆಚ್ಚಾಗಿ ಸಾಮ್ರಾಜ್ಯ ವಾಳುತ್ತಿರುವದರಿಂದ, ಪ್ರಸಾದಿಕ್ಕೆ ಜಂಗಮನನ್ನು ಕರೆಯುವದು ಭಾರ ವಾಗಿಬಿಟ್ಟಿದೆ. ತಮ್ಮ ಹೊಟ್ಟೆಗೇ ಸಾಕಷ್ಟು ಧಾನ್ಯ ದೊರೆಯುವದು ಕಠಿಣವಾಗಿಬಿಟ್ಟಿದೆ. ಅನುಕೂಲವಿದ್ದವರು ಕೂಡ ಮೊದಲಿನೆರಡು ಕಾರಣ ಗಳ ಮೂಲಕ ಉದಾಸೀನರಾಗಿಯೇ ಇರುವರು.

ಇಂದಿಗೆ ಸುಮಾರು ಐದಾರು ವರ್ಷಗಳ ಹಿಂದೆ ಪಾದೋದಕದ ವಿಷಯವಾಗಿ, ಶಿವಾನುಭವ ಮಾಸಿಕದಲ್ಲಿಯೇ ದೀರ್ಘವಾದ ವಿವಾದವು ನಡೆದದ್ದನ್ನು ವಾಚಕರು ಸ್ಮರಣೆಯಲ್ಲಿಟ್ಟಿರಬಹುದು. ಕೆಳಗಿನ ಪದ್ಯಗಳು ಅದನ್ನನುಲಕ್ಷಿಸಿಯೇ ವಿರಚಿತವಾಗಿವೆ. (ಅವು ಸಂವರ್ಧಿನಿ ಎಂಬ ನೂತನಷಟ್ಪ ದಿಯಲ್ಲಿರುವವು. ಭಾಮಿನಿ ಷಟ್ಪದಿಯಲ್ಲಿ ಮೂರು ನಾಲ್ಕು೩-೪ ಮಾತ್ರೆಯ ಗಣಗಳಿದ್ದಂತೆ ಇದರಲ್ಲಿ ಮೂರು ಐದು ೩ | ೫ ಮಾತ್ರೆಯ ಗಣಗಳು ಇರುತ್ತವೆ. ಇದನ್ನಾದರೂ ಭಾಮಿನಿಯಂತೆಯೇ ತ್ರಿತಾಳದಲ್ಲಿ ಅನ್ನಬೇಕು.)

## ಸಂವರ್ಧಿನಿ ಷಟ್ಪದಿ

೧ ಗಂಗೆಯು ಮಂಡಿಸಿದ ಮಹಾ ಪಾದ |
ಶುದ್ಧ ಚಿದ್ರೂಪವದು ಸುಭಕ್ತ ಗಣ |
ದುದ್ಧರಣಕೆ ಸಹೃದಯತೆಯಂ ಪೊಂದಲಿಳಿದುದೀ ತೀರ್ಥವು ||
ಇದ್ದ ಕರಲಿಂಗ ತನ್ನ ಜೀವಾತ್ಮ |
ಒದ್ದವದ ಕೆರೆದುಕೊಳ್ವುದಾ ತೀರ್ಥ |
ಬುದ್ಧಿಯುತ ಶುದ್ಧ ವೀರಶೈವರಿಗೆ ಶಾಸ್ತ್ರ ಸಮ್ಮತವವಿರೆ ||

೨ ಪಾದಪಡಿಸಿಕೊಳ್ಳಲ್ ನಿಮಿತ್ತ ಮಾ- |
ತ್ರೋದಯಕೆ ಬಂದ ವ್ಯಕ್ತಿಗಂ ಬಿಡದೆ |
ಸಾಧಿಸುವದುಂಟು. ಸ್ವಂತ ಜನ್ಮ ಸಾಫಲ್ಯಮಂ ಸ್ಮರಿಸದು ||
ಮೋದದಿಂ ತನ್ನ ಲಿಂಗ ಕೆರೆದು ತೀ- |
ರ್ಥೋದಮಂ ಸ್ವೀಕರಿಪುದು ಭಕ್ತಿಯಿಂ |
ಪಾದ ತನ್ನದಲ್ಲಿದು ಮಹಾಲಿಂಗವೆಂದವಂ ತಿಳಿವುದು ||

---

# ಅವಸ್ಥೆಗಳು.

( ಲೇಖಕರು:- ಶ್ರೀಯುತ ಸಿ. ನಾ. ಮಹಾಂತಣ್ಣವರ ಹೊನೂರ )

…………●…………

ಮಾನವನ ಜನನದಿಂದ ಮರಣಾಂತ್ಯದ ವರೆಗೆ ಮನನಮುಟ್ಟಿ ವಿಚಾರಿಸಿದರೆ, ಶರೀರದ ಸ್ಥಿತಿ, ಮನಸ್ಸಿನ ಪರಿಸ್ಥಿತಿ, ಆತ್ಮನಗತಿ, ಜ್ಞಾನದ ಪರಿಮಿತಿಗಳಿಂದ: ಶೈಶವ, ಬಾಲ್ಯ, ಕೌಮಾರ, ತಾರುಣ್ಯ, ಪ್ರೌಢ, ಪೂರ್ಣತ್ವ, ವಾರ್ಧಿಕ್ಯಾವಸ್ಥೆಗಳೆಂದು ಸರ್ವಸಾಮಾನ್ಯವಾಗಿ ಕಂಡುಬರುವದು. ಶೈಶಾವಸ್ಥೆಯಿಂದ ಪ್ರೌಢಾವಸ್ಥೆಯ ವರೆಗೆ ಸೃಷ್ಟಿಯ ನೈಸರ್ಗಿಕ ಸಾಮಾಜಿಕದ ಸಂಸರ್ಗ, ಶಿಕ್ಷಣದ ಗುರಿಗಳಿಗನುಸಾರವಾಗಿ "ಅಭ್ಯಾಸ ಸಾರಿಣಿ ವಿದ್ಯಾ, ಬುದ್ಧಿಃಕರ್ಮಾನುಸಾರಿಣಿ, ಎಂಬ ಅನುಭವೋಕ್ತಿಯಂತೆ ತನುಮನ ಭಾವಗಳು ವಿಕಸಿತವಾಗಿ ಪೂರ್ಣಾವಸ್ಥೆಯೊಳು ಪಾದವಿಟ್ಟು ಪೊಡವಿಯೊಳು ಪ್ರಭುವಿನಿಂದ ಪಾದಸೇವಕನ ವರೆಗೆ ಯಾವದೊಂದು ಕಾಯಕದೊಳು ಕಾಯುವನು. ಸವಿಸುತ್ತ ಸರಿದೋರಿದ 'ವಿಷಯಗಳನ್ನು ಸವಿಯುತ್ತ ಪ್ರಪಂಚದ ಪರಮಾವಧಿಯು ಮುಟ್ಟಮುಟ್ಟಿ ಅವರ ಆಗು ಹೋಗುಗಳನರಿದು ಮೃಗಜಲೋಪಾದಿಯ ಸುಖದುಃಖಗಳನನುಭವಿಸಿ, ಪ್ರಪಂಚದೊಳಿದ್ದು ಪಾರಮಾರ್ಥಿಕ ನಿಜಪ್ರಕಾಶದೊಳು ನಿಲ್ಲುವ ಮಾರ್ಗವನು ಶೋಧಿಸಿ, ಅಂಥ ಅನುಭಾವಿಗಳ ಸಂಗದಿಂದ ಸಂಸಾರದೊಳು ಹ್ಯೇಯವುಳ್ಳವನಾಗಿ ನಿಜ ಜ್ಞಾನ ಸಂಪಾದಿಸಲು ಸನ್ನದ್ಧನಾಗಿ !ಜೀವನ ಕಾಲಕ ಪರಿಸ್ಥಿತಿಗಳಾದ ಜಾಗ್ರತ್, ಸ್ವಪ್ನ ಸುಷುಪ್ತಿಗಳ ವಿಚಾರಮಾಡಲುದ್ಯುಕ್ತನಾಗುವನು.

ಮಾನವಕೋಟಿಯಲ್ಲಿ ಜಾಣನಾದವನು ತನ್ನ ಬುದ್ಧಿಯಿಂದ ಅಷ್ಟೈಶ್ವರ್ಯ ಸಂಪತ್ತಿನ ಸಂಭೋಗಿಯಾಗಿ ಸಂಸಾರ ಯಾತ್ರೆಯನ್ನು ಸಾನಂದದಿಂದ ಮುಗಿಸಿ ಶರೀರದಿಂದ ಮುಕ್ತಾಯವಾಗುವದನ್ನೂ, ಹೀನನಾದವನು ತನ್ನ ಜನ್ಮವನ್ನು ದಾರಿದ್ರ್ಯಾವಸ್ಥೆಯಲ್ಲಿ ದುಮುದುಮುಕಿ, ದುಃಖಾನುಭಾವಿಯಾಗಿ ದುಃಖದಿಂದಲೇ ತನ್ನ ದೇಹವನ್ನು ದಗ್ಧಗೊಳಿಸುವದನ್ನೂ,

ಮಧ್ಯಮ ವರ್ಗದ ಮಾನವನು ಸುಖ ದುಃಖಗಳೆರಡರಲ್ಲಿ ತೇಲುತ್ತ ಮುಳುಗುತ್ತ ಮಾನುಷ ಶರೀರವನ್ನು ಮಣ್ಣುಗೂಡಿಸುವದನ್ನೂ ನೋಡುತ್ತ ತನ್ನ ಸ್ಥಿತಿಯನ್ನು ಪರಿಶೀಲಿಸುತ್ತಿರಲು, ಮಾನವನು ಜಾಣನಿರಲಿ ಕೋಣನಿರಲಿ ತನ್ನ ಸಂಚಿತಾದಿ ಕರ್ಮಾನುಸಾರವಾಗಿ ಪ್ರಪಂಚವನು ಸುಖಮಯವಾಗಿಯೂ ಇಲ್ಲವೆ ದುಃಖಮಯವಾಗಿಯೂ ಅಥವಾ ಸುಖದುಃಖಮಯವಾಗಿಯೂ ತನ್ನ ಪ್ರಾರಬ್ಧ ಕರ್ಮವನನುಭವಿಸುತ್ತ ಆಯುಷ್ಯ ಕಳೆಯುವನೆಂಬುದು ಅರಿತ ಸಂಗತಿಯು.

ಶರೀರದ ಸ್ಥಿತಿಗಳನ್ನು ನೋಡಲು ಶೈಶವಾವಸ್ಥೆಯಲ್ಲಿ ಕೂಸು ಮೊದಲು ಸ್ಪರ್ಶಜ್ಞಾನದಿಂದ ತಾಯಿಯ ಹಾಲನ್ನು ಕುಡಿದು, ತನ್ನ ದೇಹಕ್ಕೆ ಸರಿಯಾದ ಸಮಶೀತೋಷ್ಣತೆಯ ಹವೆಯುಳ್ಳ ಇಮಾರತಿಯಲ್ಲಿದ್ದು ನಿರೋಗಿಯಾದ ತಾಯಿಯ ಹಾಲು ಸರಿಯಾದ ವೇಳೆಯಲ್ಲಿ ಸಾಕಷ್ಟು ಸಿಗುತ್ತಿದ್ದು ಹೊಟ್ಟೆ ನೆತ್ತಿಗೆ ಯಾವತರದ ಕೊರತೆಯಿರದಿದ್ದರೆ ಆ ಕೂಸು ಅಳದೆ, ಆನಂದದೊಳಿರುವದನ್ನೂ ಅಲ್ಪಕಾಲ ವೇಳೆಯಲ್ಲಿ ಹೆಚ್ಚು ವೇಳೆಯನ್ನು ನಿದ್ರಾವಸ್ಥೆಯಲ್ಲಿ ಕಳೆಯುವದನ್ನೂ ಮಲಗಿದಾಗ ತನ್ನೊಳಗೆ ತಾನೇ ನಗುವದನ್ನೂ ನೋಡಲು, ಈ ಅವಸ್ಥೆಯು ಸುಷುಪ್ತಾವಸ್ಥೆಯೆಂದು ಮನವರಿಕೆಯಾಗುವದು. ಯಾಕಂದರೆ ಆ ಕೂಸಿಗೆ ಬಾಹ್ಯ ಜಗತ್ತಿನ ಅರಿವೇ ಇರುವದಿಲ್ಲ. ಅದು ಎಚ್ಚರದಿಂದಿರುವಾಗ ಕಣ್ಣುತೆರೆಯುವದು, ಕೈಕಾಲು ಜಾಡಿಸುವದು, ಸೀನುವದು, ಒಮ್ಮೊಮ್ಮೆ ಕಕ್ಕುವದು, ಬಿಕ್ಕುವದು, ಮಲಮೂತ್ರ ಬಿಡುವದು, ಅಳುವದು, ನಗುವದು, ನಿದ್ದೆಬರಹತ್ತಿದಾಗ ತೂಗಿದರೆ ಆನಂದ ಸ್ವರಗೈಯುತ್ತ ಮಲಗುವದು, ಇದುವೇ ಜಾಗೃತಾವಸ್ಥೆಯು. ಮಲಗಿದಾಗ ಒಮ್ಮೊಮ್ಮೆ ಚಿಟ್ಟನೆ ಚೀರುವದು ಇಲ್ಲವೆ ತೊದಲ್ನುಡಿಗಳಿಂದ ಬಡಬಡಿಸುವದು ಈ ಸ್ಥಿತಿಯನ್ನರಿತ ತಾಯಿತಂದೆಗಳು ಕೂಸಿಗೆ ಕನಸುಬಿದ್ದಿರಬೇಕೆಂದು ಊಹಿಸುವರು.

ಶೈಶವಾವಸ್ಥೆಯನ್ನು ದಾಟಿ ಕೌಮಾರಾವಸ್ಥೆಯಲ್ಲಿ ಕಾಲಿಡಲು ತರತರದ ಪದಾರ್ಥಗಳನ್ನು ನೋಡಿ ನಲಿಯುವದು. ಒಮ್ಮೆ ಅಂಗಾತ ಒಮ್ಮೆ ಡಬ್ಬು ಬೀಳುತ್ತ ಏಳುತ್ತ ಹೊಟ್ಟೆ ಹೊಸೆಯುತ್ತ ಆಟದ ಸಾಮಾನುಗಳನ್ನು ಹಿಡಿಯುತ್ತ ಬಾಯಲ್ಲಿ ಹಾಕುತ್ತ ತನ್ನ ವಿನೋದಕ್ಕೆ ಒದಗದ ಸಾಮಾನು ಸಿಗದಿರಲು ಅಳುತ್ತ, ಸಿಕ್ಕಾಗ ಹಿಗ್ಗುತ್ತ ಮುಗ್ಗುತ್ತ

ನುಗ್ಗುತ್ತ ತನ್ನ ಕೌಮಾರಾವಸ್ಥೆಯು ಕಳೆದು, ಬಾಲ್ಯಾವಸ್ಥೆಗೆ ಬರಲು ಸೃಷ್ಟಿಯ ಸೊಬಗವ ನೋಡುತ್ತ, ಅವುಗಳ ಆಕೃತಿ ಬಣ್ಣಗಳ ಜ್ಞಾನಂಗಳೊಳು ಸುಳಿಯುತ್ತ ಸ್ಪಷ್ಟವಾಗಿ ಮಾತಾಡಹತ್ತಿ ಬಾಲಕನೆನಿಸಿ ತನ್ನ ಸುತ್ತಲಿನ ಪದಾರ್ಥಗಳ ಜ್ಞಾನವನ್ನೂ, ಅಕ್ಷರ ಜ್ಞಾನವನ್ನೂ ಸಾಮಾಜಿಕ ಜ್ಞಾನವನ್ನೂ ಸ್ಥೂಲ ಮಾನದಿಂದ ಮಾಡಿಕೊಳ್ಳುತ್ತ ತಾರುಣ್ಯಾವಸ್ಥೆಗೆ ಬರುವಷ್ಟರಲ್ಲಿ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣವನ್ನು ಪಡೆಯುತ್ತ ತಾರುಣ್ಯಾವಸ್ಥೆಯ ಅಂತ್ಯಾವಧಿಯಲ್ಲಿ ಉಚ್ಚ ಶಿಕ್ಷಣ ಪಡೆದು ಯಾವದೊಂದು ಕಾಯಕವ ಹಿಡಿದು ಆ ಕಾಯಕದ ಅನುಭವ ತೆಗೆಯುಕೊಳ್ಳುತ್ತ ತನ್ನ ಪ್ರೌಢಾವಸ್ಥೆಗೆ ಸರಿಯಾದ ತಾರುಣ್ಯಾವಸ್ಥೆಯನ್ನತಿಗಳೆದ ಪ್ರೌಢಿಯು ಕೈ ಹಿಡಿದು ಗೃಹಸ್ಥಾಶ್ರಮಿಯಾಗಿ ಆತ್ಮೋನ್ನತಿಯನ್ನು ಅನುಸರಿಸುತ್ತ ಸಮಾಜದಲ್ಲಿ ತಾನೊಂದು ಘಟಕನೆನಿಸಿ, ಸಮಾಜೋನ್ನತಿಯು ದೇಶೋನ್ನತಿಯ ಸಲುವಾಗಿ ತನುಮನ ಧನಗಳನ್ನು ಸವಿಸುತ್ತ ಇರುತ್ತಿರಲು ದೇವ ಕೃಪೆಯಿಂದ ಮಕ್ಕಳನ್ನು ಹಡೆದು, ಆ ಮಕ್ಕಳು ದೊಡ್ಡವರಾಗಿ ತನ್ನಂತೆ ಪ್ರೌಢಾವಸ್ಥೆಗೆ ಬರುವ ಅವಧಿಯೊಳಗೆ ತನ್ನ ಪ್ರಪಂಚದ ಪೂರ್ಣಾವಸ್ಥೆ ಕೊನೆಗಂಡಿತೆಂದು ಮುಪ್ಪಾವಸ್ಥೆಗೆ ಮುಂದಾಗಿ, ವಿಚಾರ ಪರಂಪರೆಗಾಗಲಿ ಶಿವಜೀವ ಐಕ್ಯಕ್ಕಾಗಲಿ ತಾನು ಹಿಡಿದ ಪ್ರವೃತ್ತಿ ಮಾರ್ಗದಕಡೆಗಾಗಲಿ, ಅಥವಾ ಪ್ರವೃತ್ತಿ ನಿವೃತ್ತಿ ಮಾರ್ಗದಕಡೆಗಾಗಲಿ ಹೊರಳುವನು.

ಈ ಶರೀರ ವಿಕೃತಿಗಳವಸ್ಥೆಗಳಂತೆ ಅಜ್ಞಾನ, ಜ್ಞಾನ, ಸುಜ್ಞಾನ ಮಹಾ ಜ್ಞಾನಗಳನ್ನನುಸರಿಸಿ, ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷ ಜ್ಞಾನ, ಅಪರೋಕ್ಷ ಜ್ಞಾನ, ಶೋಕ ನಿವೃತ್ತಿ ನಿರಹಂಕುಶವೃತ್ತಿಗಳೆಂದು ಸಪ್ತಾವಸ್ಥೆಗಳನ್ನು ವೇದಾಂತಗಳು ಹೇಳುವವು. ಮೂಲ ಮಾಯೆಯೇ ಅಜ್ಞಾನ. ಮಲತ್ರಯಗಳ ಮುಸುಕಿನಿಂದ ಹಗ್ಗಕ್ಕೆ ಹಾವೆಂಬ ಭಾವನೆಯೇ ಆವರಣ, ಆ ಅಜ್ಞಾನಾವರಣದ ಅತಿಗಾಢಾಂಧಕಾರವೇ ವಿಕ್ಷೇಪವು. ಆಚಾರಾನುಭವಗಳಿಂದ ಉಂಟಾಗತಕ್ಕ ಜ್ಞಾನವು ಪರೋಕ್ಷ ಜ್ಞಾನವು. ಮಾನವನ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಅಗೋಚರವಾದ ನಿಜ ಜ್ಞಾನವೇ ಅಪರೋಕ್ಷ ಜ್ಞಾನವು. ಇಂಥ ಅಪರೋಕ್ಷ ಜ್ಞಾನದಿಂದ ಜೀವಾತ್ಮನಿಗೆ ಆಗುವ ಶೋಕವನ್ನು ನಿವಾರಣೆ ಮಾಡಿಕೊಳ್ಳುವ ಜ್ಞಾನವೇ ಶೋಕ ನಿವೃತ್ತಿ ಜ್ಞಾನವು. ಶೋಕ ನಿವೃತ್ತಿಗುಂಟಾಗುವ ನಿಜ ಪರಮನ ಸಹಜ ಜ್ಞಾನವೇ ನಿರಂಕುಶವೃತ್ತಿಯು.

ಪ್ರವೃತ್ತಿ ಮಾರ್ಗಾನುಯಾಯಿಯಾಗಲಿ ಅಥವಾ ನಿವೃತ್ತಿ ಮಾರ್ಗಾನುಗಾಮಿಯಾಗಲಿ ಇಲ್ಲವೆ ಪ್ರವೃತ್ತಿ ನಿವೃತ್ತಿ ಮಾರ್ಗಾನುಯಾಯಿಯಾಗಲಿ ಜಾಗೃತ್, ಸ್ವಪ್ನ, ಸುಷುಪ್ತ್ಯವಸ್ಥೆಗಳನ್ನನುಸರಿಸುವರೆಂಬುದು ಸ್ವಯಂ ಸಿದ್ಧವಾದ ಪ್ರಕೃತಿ ಧರ್ಮವು. ಹಾಗು ಜೀವಾತ್ಮ, ಅಂತರಾತ್ಮ, ಪರಮಾತ್ಮಗಳ ಅಂಗಗಳಾದ ಸ್ಥೂಲ್ಯಂಗ, ಅಪ್ಪಾಂಗ, ತೇಜಾಂಗಗಳ ಸ್ಥಿತಿಯು. ಇಪ್ಪತ್ತೈದು ತತ್ವಗಳಿಂದಾದ ಶರೀರವು ಜಾಗೃತಾವಸ್ಥೆಯಲ್ಲಿದ್ದಾಗ ಕಣ್ಣಿನಿಂದ ನೋಡಿ ಎಲ್ಲ ಪದಾರ್ಥಗಳ ಜ್ಞಾನವನ್ನು ಮಾಡಿಕೊಳ್ಳುವದರಿಂದ ಆಗ ಆತ್ಮನು ಜೀವಾತ್ಮನಾಗಿ ವಿಶ್ವನೆಂಬ ಅಭಿಧಾನವನ್ನು ತಾಳುವನು. ಆತನ ಸ್ಥಾನವು ಕಣ್ಣು. ಈ ಜಾಗೃದಾವಸ್ಥೆಯಲ್ಲಿಯೇ ಮಹಾ ಜ್ಞಾನಿಗಳು ಅಂತರಾತ್ಮನ ಹಾಗು ಪರಮಾತ್ಮನ ಸಹಾಯದಿಂದ ಸರ್ವಾತ್ಮನ ಜ್ಞಾನವನ್ನು ಮಾಡಿಕೊಳ್ಳಬಹುದು. ನಿದ್ರಾವಸ್ಥೆಯೊಳು ಅಂದರೆ ಪೂರ್ಣ ನಿದ್ರೆಯಿಲ್ಲದ ಪೂರ್ಣ ಜಾಗ್ರತೆಯಿಲ್ಲದ ಸ್ಥಿತಿಯಲ್ಲಿ ೧೭ ತತ್ವಗಳಿಂದೊಡಗೂಡಿದ ಅಂತರಾತ್ಮನ ಸ್ಥಿತಿಯಲ್ಲಿಯೇ ಸ್ವಪ್ನಾವಸ್ಥೆಯು. ಆಗ ಆತ್ಮನು ತೈಜಸನೆಂಬ ಅಭಿಧಾನವುಳ್ಳವನಾಗುವನು. ಆವನ ಸ್ಥಾನವು ಕಂಠಸ್ಥಾನವು. ಈ ತೈಜಸನು ಎಚ್ಚರಾದರೆ ಜಾಗೃದಾವಸ್ಥೆಯನ್ನೂ ಪೂರ್ಣ ನಿದ್ರಾಭರಿತನಾದರೆ ಸುಷುಪ್ತ್ಯವಸ್ಥೆಯಲ್ಲಿದ್ದಾಗ ಶರೀರದ ಎಲ್ಲ ತತ್ವಗಳು ಪ್ರಬುದ್ಧವಾಗಿ ಪ್ರಕೃತಿ, ಪ್ರಾಣ, ವಾಯುಗಳು ಮಾತ್ರ ತೋರಿಬರುವವು. ಆಗ ಪರಮಾತ್ಮನು ಹೃದಯಸ್ಥಾನದಲ್ಲಿದ್ದು ತನ್ನೊಳಗೆ ತಾನೇ ಏಕಾಕಾರನಾಗಿ ಪ್ರಾಜ್ಞನೆನಿಸಿ ಗಾಢ ನಿದ್ರೆಯೊಳು ಮುಳುಗಿಸಂತಿದ್ದು ಸುಷುಪ್ತ್ಯಾವಸ್ಥೆಯೊಳು ಸುಳಿವಿಲ್ಲದ ಉಳಿಮೆಯು ತಳೆಯುವನು- ಈ ಪ್ರಾಜ್ಞನ ಸ್ಥಾನವು ಹೃದಯ.

" ಅಜ್ಞಾನದಿಂದಲೂ ಬುದ್ಧಿಯಿಂದಲೂ ಸ್ಥೂಲ ಶರೀರದಿಂದಲೂ ವಿಶಿಷ್ಟನಾಗಿ ಜಾಗೃದವಸ್ಥೆಯುಳ್ಳ ಜೀವನು ವಿಶ್ವನು.

ಆ ಜೀವನೇ ಸ್ಥೂಲ ಶರೀರದ ಅಭಿಮಾನರಹಿತನಾಗಿ ಬುದ್ಧಿ ಮತ್ತು ಅಜ್ಞಾನವೆಂಬ ಉಪಾಧಿಯುಳ್ಳವನಾಗಿ ಸ್ವಪ್ನಾವಸ್ಥೆಯ ಅಭಿಮಾನದಿಂದ ತೈಜಸನೆನಿಸಿಕೊಳ್ಳುವನು.

ಪುನಃ ಅದೇ ಜೀವನು ಸ್ಥೂಲ ಸೂಕ್ಷ್ಮ ಶರೀರಗಳ ಅಭಿಮಾನದಿಂದ ರಹಿತನಾಗಿ, ಅಂತಃಕರಣ ಸಂಸ್ಕಾರದಿಂದೊಡಗೂಡಿದ ಅಜ್ಞಾ

ನೋಪಾಧಿಯುಳ್ಳವನಾಗಿ ಸುಷುಪ್ತ್ಯಾವಸ್ಥೆಯ ಅಭಿಮಾನದಿಂದ ಪ್ರಾಜ್ಞನೆಂಬ ಹೆಸರುಳ್ಳವನಾಗುವನೆಂದು ವೇದಾಂತಿಗಳ ನಂಬಿಗೆಯು.

ನಮ್ಮ ಶಿವಶರಣರು ಈ ಮೂರವಸ್ಥೆಗಳನ್ನತಿಗಳೆಗ ಪರಿಯೆಂತೆಂದೊಡೆ:—

"ಇಷ್ಟಲಿಂಗ ಪ್ರಾಣಲಿಂಗವೆನುತಿಪ್ಪರು। ಇಷ್ಟಲಿಂಗದ ಪ್ರಾಣಲಿಂಗದ ಸುದ್ದಿಯನಾರುಬಲ್ಲರಯ್ಯ। ಇಷ್ಟಲಿಂಗವನರಿವಡೆ ಅರಿಷ್ಟವ ಪರಿಹರಿಸ ಬೇಕು ನೋಡಾ। ಪ್ರಾಣಲಿಂಗವನರಿವಡೆ ಪ್ರಪಂಚನಾಸ್ತಿಯಾಗಿರಬೇಕು ನೋಡಾ। ಇಷ್ಟ ಪ್ರಾಣಗಳೊಂದೇಯೆಂದರಿದು ಒಡವೆರಿಸಿದ ಬಳಿಕ। ಜಾಗ್ರತ್ ಸ್ವಪ್ನ ಸುಷುಪ್ತ್ಯಾವಸ್ಥೆಗಳಲ್ಲಿ ಲಿಂಗವಲ್ಲದೆ ಮತ್ತೇನನು ತೋರ ಲಾಗದು ನೋಡಾ। ಆ ಮಹಾತ್ಮನ ಸರ್ವಾಂಗ ಪ್ರಾಣಲಿಂಗ ಮೂರ್ತಿ ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ"

ನಿಜಗುಣ ಶಿವಯೋಗಿಗಳು ವಿಶ್ವದ ಬಾಹ್ಯಾಂತರಗಳನ್ನರಿತು ಲಿಂಗ ರೂಪಾದ ವಿಶ್ವಾಂತರ್ಯಾಮಿಯು ಬೆರೆಯುವ ಸಾಧನವನ್ನು ಮಾಡಿ ಮಾಡಿ ಈ ಮೂರವಸ್ಥೆಗಳ ಪರಿಣಾಮಗಳಾದ, ವಿಶ್ವ ತೈಜಸ ಪ್ರಾಜ್ಞಗಳ ಕಳೆಗ ಳಾದ ಮೂರು ನೋಟಗಳೊಳಗಿಹ ವಿಶ್ವನಾಥನ ಕಣ್ಣುಗಳ ಕೃಪಾ ದೃಷ್ಟಿಯು ಶಿವಾಂಶಿಕನಾದ ತನ್ನಲ್ಲಿದ್ದ ಮೂರು ದೃಷ್ಟಿಗಳಲ್ಲಿ ಬೆರೆತು ಬೇರಾಗದಂತೆ ಮಾಡುವ ಕುರಿತು ಹಾಡಿದ್ದನ್ನು ನೋಡಿದರೆ ಜ್ಞಾನ ದೃಷ್ಟಿ ಯಿಂದ ವಿಶ್ವದ ಜ್ಞಾನವು ಪೂರ್ಣವಾಗಿ ವಿಶ್ವದಲ್ಲಿ ತೋರುವ ತರತರದ ಪದಾರ್ಥಗಳಲ್ಲಿ ಮೋಹವೂ, ಆಯಾ ಪದಾರ್ಥಗಳ ನಾಮರೂಪ ಕ್ರಿಯೆ ಗಳನ್ನು ಕಿತ್ತೊಗೆದು ವಿಶ್ವಾಂತರ್ಯಾಮಿಯು ದಿವ್ಯ ರೂಪವನ್ನು ನೋಡಲು ಅಡ್ಡಿ ಮಾಡುವ ಮಲತ್ರಯಗಳ ಕಲುಷವೂ, ಆ ದಿವ್ಯ ರೂಪಾದ ದಿವ್ಯ ಲಿಂಗಾನಂದಕ್ಕೆ ಅಡ್ಡಬರುವ ಅಂತ:ಕರಣಗಳ ಜೀವಭಾವದ ದುಃಖಾ ಬ್ಧಿಯ ತೆರೆಗಳೂ ದೂರಾಗುವ ಜ್ಞಾನದೃಷ್ಟಿ (ನಿಡುಗಣ್ಣು) ಯಿಂದ ಮೋಹವೂ, ಚಿತಿಸೂರ್ಯನೆಂಬ ದಿವ್ಯ ದೃಷ್ಟಿ (ಬಲಗಣ್ಣು) ಯಿಂದ ಕಲುಷವೂ ಚಿತ್‌ಕರಣಂಗಳೆಂಬ ಚಿಚ್ಚಂದ್ರ ದೃಷ್ಟಿ (ಎಡಗಣ್ಣು) ಯಿಂದ ದುಃಖಾಬ್ಧಿಯೂ ನಾಶವಾಗಲೆಂದು ತಮ್ಮ ಮೂರವಸ್ಥೆಗಳನ್ನು ಮುರಿಯುವ ಭಾವವು ಎಷ್ಟು ಗೂಢವಾಗಿ ಪ್ರೌಢತೆಯನ್ನು ಹೊಂದಿರು ವದೆಂಬವನ್ನು ಆಳವಾಗಿ ವಿಚಾರಿಸುವವರಿಗೆ ಕಂಡುಬರುವದು.

ನೋಡಲಾಗದೆ ದೇವಾ ನೋಡಲಾಗದೆ । ಕೂಡೆ ನಿನ್ನದಿಟ್ಟಿ
ಮೂರು ನಾಡೆ ಲೇಸುನೂಡಲಿನ್ನ ॥ ಪಲ್ಲವಿ ॥
ಮಿಸುಕಲೀಯದೆನ್ನ ಮೋಹ । ವಿಸರವೆಂಬ ವನವನುರುಹಿ ॥
ಭಸಿತವೆನಿಸಿ ರುದ್ರ ನಿನ್ನ । ನೊಸಲ ವಹ್ನಿ ನೇತ್ರದಿಂದ ॥ ೧ ॥

ಕಲುಷ ತಿಮಿರಮುಸುಕಿ ಮುಗಿದು । ನಲಿಯುವೆನ್ನಹೃದಯನಳಿನ ॥
ವಲರೆ ದಿವ್ಯ ರೂಪು ನಿನ್ನ । ಜಲದ ಭಾನು ನಯನದಿಂದ ॥ ೨ ॥

ಕರಣಕುಲ ಚಕೋರಿ ತಣಿಯೆ । ಹರುಷ ಶರಧಿ ಮೀರಲೆನ್ನ ॥
ವರದ ಶಂಭುಲಿಂಗ ನಿನ್ನ ವಾಮ ದುರು ಸುಧಾಕ್ಷಿಯಿಂದ ॥ ೩ ॥

ಕಾಲ ಕರ್ಮ ಮೋಹದಿಂದೊದಗುವ ಈ ಮೂರವಸ್ಥೆಗಳನ್ನು ಮುರಿದು ಮುದಾದ ಜ್ಞಾನಿಗಳಲ್ಲಿ ಜ್ಞಾನಸಂಜನಿತವಾದ ತೂರ್ಯ, ತೂರ್ಯಾವಸ್ಥೆಗಳೆಂಬ ಇನ್ನೆರಡು ಅವಸ್ಥೆಗಳು ಈ ಅವಸ್ಥೆಗಳನ್ನು ಮಹಾ ಜ್ಞಾನವು ಮೈಗೊಂಡ ಮಹಾ ಜ್ಞಾನಿಗಳಲ್ಲಿ ಕಾಣಬಹುದು. ಆದರೂ ಅಜ್ಞರ ಜೀವನಗಳಲ್ಲಿ ಅವುಗಳ ಛಾಯಾಂಶವು ಸ್ವಲ್ಪ ವೇಳೆಯಲ್ಲಿ ತೋರಿ ಅಡಗಬಹುದು. ಅವು ಜ್ಞಾನ ಜನಿತನಲ್ಲ. ಒಬ್ಬ ಮನುಷ್ಯನು ತನ್ನ ಅರ್ಧಾಂಗಿಯ ಅನುಭವಿಸುವ ದುರ್ಜೀವಿಯನ್ನು ಕಂಡರೆ ನಿಸ್ಸಂಗಿಯಾಗಿ ತೂರ್ಯಾಸ್ಥಿತಿಯುಳ್ಳವನಾಗಿ ಆ ದುರ್ಜೀವಿಯ ರುಂಡವನ್ನು ಹಾರಿಸಲು ಪ್ರವರ್ತನಾದಾಗಿನ ಸ್ಥಿತಿಯೇ ತೂರ್ಯವು. ಆದರೆ ಆ ದುರ್ಜೀವಿಯು ಸಮಯಕ್ಕೆ ಸಿಗದಿದ್ದರೆ ಹೌಹಾರಿ ಖಡ್ಗವನ್ನೊಗೆದು, ಅರಿವುದಪ್ಪಿ ನೆಲಕ್ಕೊರಗಿ ಪಿತ್ತವು ತಲೆಗೇರಿದವನಂತೆ, ಭ್ರಮಣ ಪಿತ್ತ ವಿಕಾರಿಯಂತೆ ತೋರುವ ಸ್ಥಿತಿಯೇ ತೂರ್ಯಾತೀತಾವಸ್ಥೆಯ ಸ್ಥಿತಿಯು ಬಾಹ್ಯನೋಟವೆಂದು ಹೇಳಬಹುದು. ಈ ಅವಸ್ಥೆಗಳು ಅಜ್ಞಾನಾವಸ್ಥೆಯ ಅತಿರೇಕಗಳು. ಅವಸ್ಥೆಗಳು ಜ್ಞಾನಿಗಳಲ್ಲಿ ಇರುವವೆಂಬದು ಶ್ರೀ ಬಾಲಲೀಲಾ ಮಹಾಂತದೇವರಲ್ಲಿಯೂ, ಎಮ್ಮಿಗನೂರ ಜಡಿಯಪ್ಪನಲ್ಲಿಯೂ, ನಾಗಲಿಂಗಪ್ಪನವರಲ್ಲಿಯೂ ಶುಕಮುನಿಗಳಲ್ಲಿಯೂ ನೋಡಿದ ಮಹನೀಯರು ಮನಗಂಡಿದ್ದಾರೆ. ಹಾಗು ಶ್ರೀ ನಿಜಗುಣಶಿವಯೋಗಿಗಳಾದರೂ ಪೂರ್ಣಜ್ಞಾನಿಗಳ ಅವಸ್ಥೆಯು ಬಾಲ್ಯ, ಬಧಿರ, ಉನ್ಮತ್ತ, ಪಿಶಾಚಿ, ಈ ನಾಲ್ಕರೊಳು ಯಾವದೊಂದವಸ್ಥೆಯಲ್ಲಿ ತೋರುವದೆಂದು ಹೇಳಿದ್ದಾರೆ.

ಈ ಪಂಚಾವಸ್ಥೆಯೊಳು ನಿಂತು ಸಂತಸಂಗೊಂಡ ಶಿವಶರಣರ ಅಂತರದೊಳಗಷ್ಟು ಅಲಿದಾಡಿ ನಲಿದು ನೋಡುವ.

"ಜಾಗ್ರ, ಸ್ವಪ್ನ, ಸುಷುಪ್ತಿ ಇಂತಿವು ಅವಸ್ಥಾತ್ರಯಂಗಳು. ಇವಕ್ಕೆ ವಿವರಃ— ಎಚ್ಚತ್ತಿಹುದೇ ಜಾಗ್ರ. ಅಲ್ಲಿ ಕನಸುಕಾಂಬುದೇ ಸ್ವಪ್ನ. ಅಲ್ಲಿ ಮೈಮರೆದಿಹುದೇ ಸುಷುಪ್ತಿ. ಇಂತಿವು ಅವಸ್ಥಾತ್ರಯಂಗಳ ಭೇದ. ಶ್ಲೋಕ॥ ದ್ವಿಪಂಚಮ ವಿಶಿತ್ ಸತ್ವಂ ಚತುಃಷಷ್ಟಿರ್ಜಸ್ತಥಾ। ಏಕಾಶೀತಿ ತಮಶ್ಚೈವ ದೋಷತ್ರಯಮಿದಂ ಶೃಣು. ॥

ಆತ್ಮನು ಇಪ್ಪತ್ತೈದು ತತ್ವ ಸಮಷ್ಟಿಯಾಗಿ ನಿಂದು ಸ್ಥೂಲ ತನುವಿನ ಮರವೆಯೊಡನೆ ಕೂಡಿಕೊಂಡು ಎಚ್ಚರವುಳ್ಳಾತನಾಗಿ ಬಹಿರಂಗದ ದೃಶ್ಯವಾದ ಸಕಲೇಂದ್ರಿಯಗಳ ವ್ಯಾಪಾರದೊಡನೆ ಕೂಡಿ ಚರಿಸುವದೆಂಬುದೀಗ ಜಾಗ್ರಾವಸ್ಥೆ ಎನಿಸುವದು. ಹದಿನೇಳು ತತ್ವ ಸಮಷ್ಟಿಯಾಗಿ ನಿಂದು ಸ್ಥೂಲ ತನುವಿನ ಮರವೆ ಸೂಕ್ಷ್ಮ ತನುವಿನೊಡನೆ ಕೂಡಿಕೊಂಡು ದೃಶ್ಯಾದೃಶ್ಯವಾದ ಕಲ್ಪಿತರೂಪಿನ ಕಾಣಿಕೆಯಾಗಿಪ್ಪ ಸುಖ ದುಃಖ ಮೋಹ ರೂಪವಾದ ಸ್ವಪ್ನಗಳ ಕಾಣುವುದೇ ಸ್ವಪ್ನಾವಸ್ಥೆ. ಪ್ರಾಣ ವಾಯು ಪ್ರಕೃತಿ ಎಂಬ ಮೂರು ತತ್ವ ಸಮಷ್ಟಿಯಾಗಿ ನಿಂದು, ಸ್ಥೂಲ ತನುವಿನ ಮರವೆ, ಸೂಕ್ಷ್ಮತನುವಿನ ಅರಿವು, ಏನೂ ಇಲ್ಲದೆ ಚರಣಾಯುಧನು ಪರಿದು ಮೇಯುತ್ತಿರ್ಪ ಮರಿಗಳೆಲ್ಲವನು ತನ್ನ ಪಕ್ಕದ ಮರೆಯಲ್ಲಿ ಅಡಗಿಸಿಕೊಂಡು ತಾನೊಂದೆಡೆಯಲ್ಲಿ ನಿದ್ರೆಗೆಯ್ಯುವಂತೆ ಬಾಹ್ಯಾಭ್ಯಂತರದ ಸಂಬಂಧವಾದ ಸಕಲ ತತ್ವಗಳನು ತನ್ನಲ್ಲಿಯೇ ಅಡಗಿಸಿಕೊಂಡು ತಾನಾನಾಯಾನಂದ ಭೋಗದಲ್ಲಿ ಪರವಶವನೈದುವಂತಹದ್ದೇ ಸುಷುಪ್ತಾವಸ್ಥೆಯೆನಿಸಿಕೊಂಡಿತು.

ಜಾಗ್ರದೊಳಗೆ ನಾಲ್ಕರೊಳೊಂದು ಪಾಲು ಸುಷುಪ್ತಿ. ಸುಷುಪ್ತಿಯಲ್ಲಿ ನಾಲ್ಕರಲ್ಲೊಂದು ಪಾಲು ಸ್ವಪ್ನವು. ಅದೆಂತೆಂದೊಡೆಃ— ಚಂದ್ರ ಸೂರ್ಯರಿಲ್ಲದ ದಿನಂಗಳೇ ಸುಷುಪ್ತಿ ಕಾಲಪ್ರಮಾಣವೂ, ಆ ಕತ್ತಲೆಯಲ್ಲಿದ್ದ ನಕ್ಷತ್ರಗಳ ಪ್ರಕಾಶವೇ ಸ್ವಪ್ನಪ್ರಮಾಣವೂ ಆಗಿ ನಾಲ್ಕರಲ್ಲೊಂದು ಪಾಲನ್ನು ಕತ್ತಲೆಯು ಜಯಿಸುತ್ತಿರ್ಪುದು. ಜಾಗ್ರತ್ ಸ್ವರೂ

ಪರಾವ ಚಂದ್ರ ಸೂರ್ಯರು ನಕ್ಷತ್ರಮಾರ್ಗವನ್ನನುಸರಿಸಿ ತಿರುಗುತ್ತಿರ್ಪಂತೆ, ಜೀವನು ಜಾಗ್ರದಲ್ಲಿ ಸ್ವಪ್ನಮಾರ್ಗವನ್ನನುಸರಿಸಿ ತಿರುಗುತ್ತಿರ್ಪುದರಿಂ ಜಾಗ್ರದೊಳಗಿನ ಸ್ವಪ್ನವೇ ನಿರಾಕಾರವು. ಸುಷುಪ್ತಿಯೊಳಗಣ ಸ್ವಪ್ನವೇ ಸಾಕಾರವು. ನಿರಾಕಾರ ಸ್ವಪ್ನದಲ್ಲಿ ಮನಸ್ಸು ಸಾಕಾರವಾಗಿ ತಿರುಗುತ್ತಿರ್ಪುದು. ಸಾಕಾರ ಸ್ವಪ್ನದಲ್ಲಿ ಶರೀರಾಕಾರವಾಗಿ ತಿರುಗುತ್ತಿರ್ಪುದ. ಸ್ವಪ್ನವಿಲ್ಲದ ಜಾಗ್ರಸುಷುಪ್ತಿಗಳೇ ಕಾಲಾತೀತವಾಗಿ ಪರಮಾನಂದರೂಪವಾಗಿ ಒಂದಕ್ಕೊಂದು ಹೊಂದದೇ ಇರವು. ಅವೇ ಶಿವಶಕ್ತಿರೂಪಗಳು. ತದ್ವಿಯೋಗದಲ್ಲಿ ಬೀಜವೊಡೆದು ಮೂಡಿ ಪ್ರಕಾಶಿಸುವ ವೃಕ್ಷದಂತಿರ್ಪುದೇ ತೂರ್ಯಾವಸ್ಥೆಯು. ಅಂತಪ್ಪ ಜಾಗ್ರ, ಸ್ವಪ್ನ ಸುಷುಪ್ತಿಗಳನಳಿದ ತೂರ್ಯವೇ ನಿಜವು. ನಿಜವೇ ತಾನು. ತನ್ನಂ ತಾನರಿವುದೇ ಮೋಕ್ಷವು. ಕಾಣಾ ಘನದೊಡ್ಡ ದೇಶಿಕಾರ್ಯ ಗುರು ಪ್ರಭುವೇ.

ಪ. ಶಾ. ಭಾಗ ೨

ಈಸಲಿಕ್ಕೆ ಬಾರದ ಒಬ್ಬಾನೊಬ್ಬ ಮನುಷ್ಯನು ಕಾಲುಜಾರಿ ಕಡಕೊಂಡು ಆಳವಾದ ನೀರುಳ್ಳ ಬಾವಿಯಲ್ಲಿ ಬಿದ್ದು ಮುಳುಮುಳುಗಿ ಏಳುವದನ್ನು ಈಸಬಲ್ಲ ಧೀರನಾದ ಪುರುಷನು ನೋಡಿ ತನ್ನಂಗದ ವಸ್ತ್ರಗಳನ್ನು ತೆಗೆದುಹಾಕಿ ಜಿಗಿಯುವಷ್ಟರಲ್ಲಿ ಈಸಬಾರದ ಮನುಷ್ಯನ ಬಾಯಿಂದ ಮೂಗಿನಿಂದ ನೀರುಹೊಕ್ಕು ಮುಳುಗೇ ಬಿಟ್ಟನು. ಬಳಿಕ ಆಳವಾದ ನೀರಿನ ತಳಕ್ಕೆ ಸಿಕ್ಕವನ ಕಾಲು ಹಿಡಿದು ಎಳೆದು ತೀವ್ರವಾಗಿ ಮೇಲಕ್ಕೆ ತರುವಷ್ಟರಲ್ಲಿ ಬಾವಿಯ ಮೇಲಿದ್ದ ಜನರು ಉಸುರಿಲ್ಲದ ನಿಶ್ಚೇತನನನ್ನು ಹೊರಗೆ ಹೊತ್ತುಕೊಂಡು ಬಂದು ಅಂಗಾತ ಮಲಗಿಸಿ, ಹೊಟ್ಟೆಯ ಒತ್ತಿ ನೀರು ತೆಗೆದು ಸುತ್ತುಮುತ್ತು ಮುಕುರಿದ ಜನರನ್ನು ಹಿಂದಕ್ಕೆ ಸರಿಸಿ ಕೈವಸ್ತ್ರದಿಂದ ಗಾಳಿಯ ಬೀಸುತ್ತ ಅಂಗಾಲು ನೆತ್ತಿಗಳನ್ನು ತಿಕ್ಕುತ್ತ ಎವೆವೆರಡು ಬುಜವೆರಡು ಅರಳುವಂತೆ ಕೈಗಳನ್ನು ಮೇಲೆ ಕೆಳಗೆ ಮಾಡುತ್ತ ಇರಲು, ಸತ್ತವನಂತೆ ಬಿದ್ದ ನಿಶ್ಚೇತನವುಳ್ಳ ಜೀವಿಯು ಹ್ ವ್ಯಂಜನಗೂಡಿದ ಅಕಾರದೊಡನೆ ಹ, ಎಂದು ಉಸುರುಬಿಟ್ಟು ಹಂಸ ಸ್ವರವು ಆರಂಭವಾಗಿ ಕಣ್ಣುತೆರೆದು ನೋಡಿ ಮಾತಾಡಲನುವಾದನು. ಮನಪವನ ಪ್ರಾಣಗಳು ಆತ್ಮನಲ್ಲಿ ಒಡಗೂಡಿದ ನಿಶ್ಚೇತನದ ಜೀವಿಯು ಸಚೇತನಾತ್ಮಕನಾಗಿ ನಿಂದ ಪರಿಯನ್ನು ವಿಚಾರಿಸಲು—

ಪ್ರಾಣನಿಗೆ ಬೇಕಾದ ಬರಹೋಗುವ ವಾಯುವು ಕಟ್ಟಾಗಿ ಮೂದೆಲಿದ್ದ ಶರೀರದೊಳಗಿನ ವಾಯುಗಳ ಶಕ್ತಿ ಇರುವವರೆಗೆ ಪ್ರಾಣವಿಡಿದ ಜೀವಾತ್ಮನು ಶರೀರವನ್ನು ಬಿಟ್ಟು ಹೋಗುವದರೊಳಗೆ ಕೀಲಿ ಕೊಟ್ಟ ಗಡಿಯಾರವು ಒಮ್ಮೆಲೇ ನಿಂತರೆ ಅಗಳಾಡಿಸಿದರೆ ಪುನಃ ಚಾಲೂ ಆಗುವಂತೆ, ಉರಿಉರಿದು ಬೆಂಕಿ ಆರಿ ಕಿಡಿಯೊಂದು ಉಳಿದಾಗ ಒಣಹುಲ್ಲು ಹೊಚ್ಚಿ ಊದಲು ಹೊತ್ತುವಂತೆ ಗಾಳಿ ಬೀಸಿದಕೂಡಲೆ ಜೀವಾತ್ಮನು ಚೇತರಿಸಿ ಕಣ್ಣು ತೆರೆದು ಮಾತಾಡಹತ್ತಿದಾಗ ಕಣ್ಣೊಳಗಿನ ಪ್ರಕಾಶ ಕಂಠದೊಳಗಿನ ನಾದ, ಹೃದಯದೊಳಗಿನ ಪ್ರಾಣಗಳು ವಿಕಸಿತವಾಗಿ ವಿರಾಜಿಸಿದವು. ಇಲ್ಲಿ ಹೃದಯಾಕಾಶವೇ ಬಿಂದು, ನೇತ್ರ ಪ್ರಕಾಶವೇ ಪವನ ನಾಣ್ಯವನ್ನು ಹೋಲುವ ಪವನ, ಕಂಠಸ್ಥಾನದಿಂದುದ್ಭವಿಸಿದ ವರ್ಣಗಳ ವಿಕಾಸವೇ ವಾಯು ( ಮನ ) ಈ ಪ್ರಾಣ, ಪವನ, ಮನಗಳ ಆಗುಹೋಗುಗಳನ್ನರಿತ ಶಿವಶರಣೆಯಾದ ಶ್ರೀ ಹಡಪದ ಲಿಂಗಮ್ಮನು " ಸಾಸಿರ ದಳ ಕಮಲವೆಂದರೆ ಸೂಸಿಕೊಂಡಿರುವ ಮನ. ಪವನವೆಂದರೆ ಎಲ್ಲೆಡೆಯಲ್ಲಿ ಸೂಸಿಆಡುವಂಥಾದ್ದು. ಬಿಂದುವೆಂದರೆ ಆಗುಮಾಡುವಂಥಾದ್ದು. ಈ ಮನ ಪವನ ಬಿಂದು ಮೂರನು ಒಡಗೂಡಿ ನೋಡಲು ಪರಂಜ್ಯೋತಿ ಪ್ರಕಾಶವಾದಂಥ ಬೆಳಗೆ ಎನ್ನ ಕಂಗಳ ಮುಂದೆ ನಿಂದಿತ್ತು. ಆ ಮಹಾ ಬೆಳಗನೆ ಕಂಗಳಲ್ಲಿ ಹೆರೆಹಿಂಗದೆ ನೋಡಿದರೆ ಎನ್ನಂಗದ ಹವಣ ಹೊರಗೆ ಪರಿಪೂರ್ಣವಾಗಿಪ್ಪಿತ್ತು. ಕಾಣಾ ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣ ನಿಮ್ಮ ಪಾದ ಕರುಣದಿಂದ " ಇದುವೇ ಶಿವಶರಣರ ತೂರ್ಯಾತೀತಾವಸ್ಥೆ, ಮಹಾ ಜ್ಞಾನದ ಪ್ರಕಾಶ, ಘನಲಿಂಗದ ಸಂಗ, ನೂರೊಂದು ಸ್ಥಲದ ಸಕೀಲ.

ವಚನಃ– ಮರವೆಯ ಮನೆಯೊಳು ಅರಿವೆಂಬ ದೀಪವಹಚ್ಚಿ ಗುರು
ಗದ್ದುಗೆಯಹಾಸಿ, ಗುರುವರನ ಬರಮಾಡಿ ಮೂರ್ತಂಗೊಳಿಸಿ
ಚರಣ ಕಮಲವ ತೊಳೆದು ಶಿರಮುಟ್ಟಿ ನಮಿಸಿ ಕ್ರಿಯಾ
ಚಾರವ ಕೈಕೊಂಡು ಕಡೆಗಾಣಿಸುತ್ತಿರಲು ಜಗವ
ನಾಚರಿಸಿದ ಅವಸ್ಥಾತ್ರಯಂಗಳು ಇಷ್ಟ ಪ್ರಾಣ ಭಾವ
ಲಿಂಗ ರೂಪಾದ ಗುರುಲಿಂಗ ಜಂಗಮಕ್ಕೆ ವಸ್ತ್ರಾಭರಣ
ವಾಗಿರ್ದವೆಂದ ನಮ್ಮ ಸಿದ್ಧೇಶ್ವರಾ ॥ ೧ ॥

ಸಿನೇಮಾದೊಳಗಿನ ಚಲಚ್ಚಿತ್ರಗಳು ಹಾಡಿದರೇನು ?
ಆಡಿದರೇನು? ಓಡಿದರೇನು? ನಡೆದರೇನು? ಮಾನವನಾಗ
ಬಲ್ಲವೇ? ಈ ಪರಿಯಂತೆ ನಿದ್ರೆಯೊಳಗಿನ ತೈಜಸ ಜೀವನ
ಕನಸೆಂದು ಹೇಳಿದ ನಮ್ಮ ಸಿದ್ಧೇಶ್ವರಾ ॥ ೨ ॥

ನಿಜ ಕ್ರಿಯಾಜ್ಞಾನಗಳು ಅರುಹಿನೊಳಗಲ್ಲದೆ ಮರವಿ
ನೊಳಗಾಗುವವೇ ಅರಿವು ಅರಿತರಿತು ಮರವೆಯೊಳ
ಗಾದಲ್ಲಿ ಸುಷುಪ್ತಾವಸ್ಥೆಯು ಪೋಲ್ವ ಜ್ಞಾನ ಶೂನ್ಯ
ಸ್ಥಲದ ಇರವೆಂದ ನಮ್ಮ ಸಿದ್ಧೇಶ್ವರಾ ॥ ೩ ॥

ಲಿಂಗಾಂಗಗಳ ನೋಟಗಳ ಕೂಟವು ನೇಟಾಗಿ ನಿಂತು
ಏಕಾಗಲು ದ್ವಂದ್ವವಿಲ್ಲದ ಏಕದಲದ ಬೀಜವು ಅಂಕುರಿಸಿ
ಮರವಾದ ಪರಿಯಂತೆ, ತುರೀಯವೆಂದರಿಯಂದ ನಮ್ಮ
ಸಿದ್ಧೇಶ್ವರಾ ॥ ೪ ॥

ಸಾಕಾರದ ಕನಸಿನ ಕೃತಿಯ ನಿರಾಕಾರದ ಮನಸಿನ
ಮತಿಯು ಅಮಿತನೊಳ್ಳು ನಿಲಿಸಿ ಮಿಲಿತನಾಗುವ ಕೃಪೆ
ದೋರಿ ಕಡಿಗಾಣಿಸಯ್ಯ ಎನ್ನ ಸಿದ್ಧೇಶ್ವರಾ ॥ ೫ ॥

ತಮ್ಮ ಶಿವಶರಣರ ಶಿಶು

# ದೇವರ ನಿಲುವು.

(ಲೇಖಕಃ— ಬ. ವ್ಹಿ. ಕತ್ತಿ, ಕಾದರವಳ್ಳಿ.)

ದೇವರು ಇಲ್ಲವೆಂದು ವಾದಿಸುವವರುಂಟು. ಅವರು ನಾಸ್ತಿಕರೆಂದೆನ್ನಿಸಿಕೊಳ್ಳುವರು. ದೇವರು ಇದ್ದಾನೆ. ಎಂದಿನಿಂದಲೂ ಇದ್ದಾನೆ. ಆತನಿಗೆ ಆದಿಯೂ ಇಲ್ಲ. ಅಂತ್ಯವೂ ಇಲ್ಲ. ಜಗತ್ತು ಆತನಿಂದ ನಿರ್ಮಿತವಾಗಿದೆ. ಆತನೇ ನಿಯಾಮಕನು. ನಾವು ಮಾಡುವ ಕೆಲಸಕ್ಕೆ ನಮ್ಮ ಮೆದುಳು ಕರ್ತೃವಾದಂತೆ ಜಗತ್ತಿಗೊಬ್ಬ ಕರ್ತೃ ಇದ್ದಾನೆ. ಆತನೇ ದೇವರು. 'ಕೋಗಿಲೆಯ ಕಂಠದಲ್ಲಿ ಮಧುರ ಸ್ವರವನ್ನೂ, ಕಲ್ಲಲ್ಲಿರುವ ಕಪ್ಪೆಗೆ ಆಹಾರವನ್ನೂ ಇತ್ತವರಾರು?' ಎಂಬುದು ದೇವರ ಇರುವಿಕೆಗೆ ಸಾಕ್ಷಿಯಾಗಿದೆ. ಅದೊಂದು ಶಕ್ತಿಯಾಗಿದೆಯೆಂದು ವಾದಿಸಬಹುದು. ಆ ಶಕ್ತಿಯೇ ದೇವರೆಂದು ಹೇಳಿದರೆ ವಾದ ಮುಂದುವರಿಯಲಾರದು.

ದೇವರು ಸರ್ವವ್ಯಾಪಿಯು. ಆತನಿಲ್ಲದ ತಾಣವಿಲ್ಲ. ಅಖಂಡ ಭೂಮಂಡಲವನ್ನು ವ್ಯಾಪಿಸಿದ್ದಾನೆ. ದೇವನ ರೂಪವು ಭಾವಿಸಿದಂತೆ ಇರುವದು. ಅಂದರೆ ಆಕಾರಿಯೂ ಅಹುದು. ನಿರಾಕಾರಿಯೂ ಅಹುದು. ರಾಗರಹಿತ, ತೇಜೋವ್ಯಕ್ತಿ. ಪಾಪರಹಿತನು. ಜಗತ್ತಿನ ಹುಟ್ಟು ಸಾವುಗಳಿಗೆ ಅದರಂತೆ ಇರುವಿಕೆಗೂ ಅವನೇ ಕಾರಣಪುರುಷನು. ಸರ್ವಜ್ಞನು. ಈ ಸಕಲ ಜಗತ್ತನ್ನು ಅಕ್ಕಮಹಾದೇವಿಯ ಅಮೃತವಾಣಿಯಂತೆ, 'ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲ ಪ್ರಪಂಚವನು' ಅನ್ನಲೂ ಬಹುದು. ಕಾರಣ ಬೇರೆಯಾಗಿಯೂ ಇದೆಯೆಂದು ಭಾವಿಸಲೂ ಬರುವದು, ನಿರ್ಧಾರ ಮಾಡಲು ಬರುವಂತಿಲ್ಲ. ಮಹೇಶನ ಅಂತರಂಗದ ನೆಲೆಯನ್ನರಿಯಲು ಯಾರಿಗೆ ತಾನೆ ಸಾಧ್ಯ? ಆತನ ನೆಲೆಯರಿಯಲು ಭಗೀರಥ ಪ್ರಯತ್ನವೂ ನಿಷ್ಫಲವಾಗದಿರದು. ಹೀಗೆನ್ನುವಲ್ಲಿ ಈ ಬರವಣಿಗೆಯ ಉದ್ದೇಶವನ್ನು ಹಿಂದಿನಿಂದ ಅರಿಯಬಹುದು.

ಅಂಗಲಿಂಗಗಳು ಒಂದೇ. ಅವುಗಳಲ್ಲಿ ತುಸು ಅಂತರವಿದೆ. ಆ ಅಂತರ ಕಡಿಮೆಯಾಗಿ ಏನೂ ಇಲ್ಲದಂತಾಗಲು ಲಿಂಗಾಂಗಸಮರಸವು ನೆಲೆಯೂ

ರುವದು. ಅಜ್ಞಾನ, ಮಾಯೆಗಳು ಆ ಅಂತರಕ್ಕೆ ಕಾರಣಗಳಾಗಿರುತ್ತವೆ. ಅವು ಅಳಿದಾಕ್ಷಣ ಲಿಂಗಾಂಗಗಳು ಒಂದೆಂಬ ಭಾವನೆ ಮೂಡಿಬರುವದು. ಮಾನವನನ್ನು ಮಾಯೆಯು ಆವರಿಸಿಕೊಂಡಿದೆ. ಅದರ ಹಿಡಿತದಲ್ಲಿ ಆತನು ಸಿಲುಕಿರುತ್ತಾನೆ. ಆದ್ದರಿಂದ ಆವನು ಬೇರೆ ಪುರುಷನೆಂಬ ಭಾವನೆ ಉತ್ಪನ್ನವಾಗಿರುವದು. ಅಜ್ಞಾನವೆಂಬ ಅಂಧಃಕ್ಕಾರವು ಅವನ ಮೇಲೆ ಪ್ರಭಾವ ಬೀರಿರುತ್ತದೆ. ಅದನ್ನು ತಡೆಯಲು ಮಾನವನು ಯತ್ನಿಸಬೇಕು.

ಮನವು ಮರ್ಕಟವು. ಅದರ ಚಂಚಲತೆ ಅತಿ ವೇಗವುಳ್ಳದ್ದು. 'ಮನವೆಂಬ ಮರ್ಕಟನ ನಿಮ್ಮ ನೆನವೆಂಬ ಪಾಶದಲ್ಲಿ ಕಟ್ಟಿ ಎನ್ನನುಳಿಕೊಳ್ಳಾ ಅಖಂಡೇಶ್ವರಾ' ಎಂದು ಷಣ್ಮುಖ ಶಿವಯೋಗಿಗಳು ಹೇಳಿದ್ದಾರೆ 'ಮನ ಏವ ಮನುಷ್ಯಾಣಾಂ ಬಂಧಮುಕ್ತಯೋಃ' ಎಂದು ಮನುಸ್ಮೃತಿಯು ತಿಳಿಯಪಡಿಸುತ್ತದೆ. 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವದೆನ್ನ ಮನವು' ಎಂದು ಬಸವಣ್ಣನವರು ಪ್ರತಿಪಾದಿಸಿದ್ದಾರೆ. ಹೀಗೆ ಅನೇಕ ಶಿವಶರಣರು ಮನದ ಚಂಚಲತೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಮನವು ಬಂಧನೆಗೂ, ಬಿಡುಗಡೆಗೂ, ಕಾರಣವೆಂದಮೇಲೆ ಅದನ್ನು ಸ್ವಾಧೀನ ಮಾಡಿಕೊಳ್ಳುವದು ಅತ್ಯಗತ್ಯವು.

ಮನಸ್ಸನ್ನು ಸ್ವಾಧೀನ ಪಡಿಸಿಕೊಳ್ಳಲು ಅನೇಕಾನೇಕ ದಾರಿಗಳುಂಟು. ತಪಸ್ಸು, ಉಪವಾಸ, ವನವಾಸ, ವ್ರತ, ಇತ್ಯಾದಿ. ಅವೆಲ್ಲಕ್ಕಿಂತಲೂ ಹಗುರಾದ ದಾರಿಮಂತ್ರವು. 'ಮನಃ ತ್ರಾಯತೆ ಇತಿ ಮಂತ್ರಃ' ಎಂಬ ಮೇಲೆ ಇದೊಂದು ದಾರಿಯೆಂದು ಮನಗಾಣಬಹುದು. ಧ್ಯಾನದಿಂದಲೂ ಮನಸ್ವಾಧೀನತೆ ಲಭಿಸುವದು. ಪರಮಭಕ್ತಿಯಿಂದ ದೇವನನ್ನು ಭಜಿಸುವದು ಇಲ್ಲವೆ ನೆನೆಯುವದು ಧ್ಯಾನವೆನಿಸುವದು. ಹೀಗೆ ಬೇಕಾದ ಮಾರ್ಗದಿಂದ ಮನವನ್ನು ಜಯಿಸಬಹುದು. ಪೂಜೆಯಿಂದಲೂ ಸಾಧ್ಯ. ಚಂಚಲವಾದ ಮನಸ್ಸನ್ನು ಅಧೀನಪಡಿಸಿಕೊಳ್ಳುವದು ಕಷ್ಟವೆಂದು ಕಂಡು ಬಂದರೂ ಮೇಲೆ ಹೇಳಿದ ಮಾರ್ಗಗಳಿಂದ ಕಷ್ಟತೆಯು ಕಡಿಮೆಯಾಗುವದು.

ಸುಖವು ಪ್ರತಿಯೊಬ್ಬ ಮಾನವನ ಆಕರ್ಷಣೀಯವಾದ ವಸ್ತು ಎಲ್ಲರೂ ಅದಕಾಗಿ ಸರ್ವಕರ್ಮಗಳನ್ನು ಮಾಡುತ್ತಾರೆ. ಹಗಲಿರುಳು

ಹೆಣಗಾಡುತ್ತಾರೆ. ಸುಖವು ಹಣದಲ್ಲಿದೆಯೆಂದು ಕೆಲವರ ಅಭಿಪ್ರಾಯ. ಸುಖವು ತೃಪ್ತಿಯಲ್ಲಡಗಿದೆಂಬುದು ಎಲ್ಲರಿಗೂ ಒಪ್ಪತಕ್ಕ ಮಾತು. ಅದೇನೇ ಇರಲಿ. ಸುಖಕ್ಕಾಗಿ ಎಲ್ಲರೂ ಪ್ರಯತ್ನಿಸುತ್ತಾರೆ. ಅವರು ಅದನ್ನು ಹುಡುಕುವದು ಜಗದ ವಸ್ತುಗಳಿಂದ ಆ ವಸ್ತುಗಳು ನಶ್ವರವಾದವುಗಳು. ಅವುಗಳಿಂದೊದಗಿದ ಸುಖವೂ ಕ್ಷಣಿಕವಾದದ್ದು.. ನಿತ್ಯ ಸುಖವು ಬೇರೊಂದು ವಸ್ತುವಿನಿಂದ ದೊರಕಲು ಸಾಧ್ಯ. ಅದು ಪರಮವಾದ ಸುಖ ಶಾಶ್ವತ ವಾದದ್ದು. ಅಂಥ ಸುಖವನ್ನು ಪಡೆಯಲು, ಅದು ಅಡಗಿರುವ ಸ್ಥಾನ ವನ್ನು ಹುಡುಕಲು ಇಚ್ಛಿಸುವಿರಾ?

ಪರಮಸುಖವು ಪರಮಾತ್ಮನಲ್ಲಡಗಿದೆ. ಅವನು ಅದನ್ನು ಕೊಡ ಬಲ್ಲನು, ಪ್ರಪಂಚವು ನಾಶವಾಗುವಂತಹದು. ಸಂಸಾರವೆಂಬುದು ಸಂತೆ. ಅಲ್ಲಿ ನೆರೆದವರೆಲ್ಲರೂ ಸಂಜೆಗೆ ಮನೆಗೆ ಹೋಗುವರು. ಸಂಸಾರವು ನೀರಿನ ಮೇಲಿರುವ ಗುಳ್ಳೆಯಂತಿದೆ. ಕ್ಷಣಾರ್ಧದಲ್ಲಿ ಒಡೆದು ಹೋಗಿ ಕಾಣ ದಂತಾಗುವದು. ಮಾನವನು ಪ್ರಪಂಚದ ಸಕಲ ಕಷ್ಟವನ್ನು ಸಹಿಸಿ, ಸಹಿಸಿ ಬೇಸರಪಡುತ್ತಾನೆ. ಆಗ್ಗೆ ಅವನಿಗೆ ಜಿಗುಪ್ಸೆ ಉಂಟಾಗುತ್ತದೆ. ಶರೀರವು ನಾಶವಾಗುವಂತಹದು. ಅದನ್ನು ಬೆಳಸುವದರಿಂದ ಏನೂ ಪ್ರಯೋಜನವಿಲ್ಲ. ಆದರೂ ಅದು ಒಂದು ಕೆಲಸಕ್ಕೆ ಸಹಾಯಕಾರಿಯಾ ಗಿರುತ್ತದೆಂಬುದನ್ನು ಮರೆಯಕೂಡದು. ಅನೇಕ ಜನ್ಮಗಳನ್ನೆತ್ತಿ ಕಡೆಗೆ ಮಾನವ ಜನ್ಮವು ಪ್ರಾಪ್ತವಾಗಿದೆ. ಆದಾದರೂ ಹಿಂದೆ ಎತ್ತಿದ ಜನ್ಮ ಗಳಂತೆ ತುಸು ನಿಮಿಷುಗಳಿದ್ದು.

ಶರೀರವು ಸ್ಥಿರವಾದುದಲ್ಲ. ಪಂಚಭೂತಗಳಿಂದಾದದ್ದು. ಜಗತು ಸಹ ಮಿಥ್ಯವಾದದ್ದು. ಒಮ್ಮೆಲೆ ಹೀಗಂದರೆ ನೀವು ಒಪ್ಪಲಿಕ್ಕಿಲ್ಲ. ನೀವು ಅದರಿಂದ ಸುಖವನ್ನು ದೊರಕಿಸುತ್ತಿದ್ದರೂ ನಿಜ. ತೋರಿಕೆಗೆ ಶಾಶ್ವತ ವೆಂದು ತೋರುತ್ತದೆ. ಸ್ವಪ್ನಾವಸ್ಥೆಯಲ್ಲಿ ನಾವು ಕಾಣುವದನ್ನು ಆಗ ನಿಜವೆಂದು ನಂಬುತ್ತೇವೆ. ಜಾಗೃತಾವಸ್ಥೆಯಲ್ಲಿ ಸ್ವಪ್ನವು ಮಿಥ್ಯವಾದ ದ್ದೆಂತು ಮನಗಾಣುತ್ತೇವೆ. ಕತ್ತಲು ಸಮಯದಲ್ಲಿ ಹಗ್ಗವನ್ನು ನೋಡಿ ಸರ್ಪವೆಂದು ಭಾವಿಸುತ್ತೇವೆ. ನಿಜಸಂಗತಿ ತಿಳಿದನಂತರ ಅದು ಸರ್ಪ ವಲ್ಲವೆಂತಲೂ, ಹಗ್ಗವೆಂತಲೂ ತಿಳಿದುಬರುತ್ತದೆ. ಅದರಂತೆ ಜಗತ್ತಿ

ನಲ್ಲಿ ಇರುವ ವರೆಗೆ, ಅಜ್ಞಾನವು ಆವರಿಸಿಕೊಂಡಿರುವ ವರೆಗೆ, ಮಾಯೆಯು ಮುಸುಕಿರುವ ವರೆಗೆ ಅದು ಸತ್ಯವೆಂದು ಕಾಣುತ್ತದೆ. ಅವೆಲ್ಲ ಬಯಲಾದ ಮೇಲೆ ನಿಜಸಂಗತಿ ಗೋಚರಿಸುವದು.

ಅನಿತ್ಯವಾದ ಶರೀರದಿಂದ ನಿತ್ಯವಾದ ಸುಖವನ್ನು ದೊರಕಿಸುವದೆಂತು? ಭಯಪಡುವ ಕಾರಣವಿಲ್ಲ. ಅಸಾಧ್ಯತೆಯನ್ನು ಸಾಧ್ಯತೆಯನ್ನಾಗಿ ಪರಿಣಮಿಸುವ ವಿಧಾನಗಳೂ ಉಂಟು. ಶರಣರು ಅನುಭವಿಕರು, ಅನುಸರಿಸಿದ ದಾರಿಗಳು ಉಂಟು. ಅವುಗಳೊಡನೆ ಸಾಗಿದರೆ ಸಾಧ್ಯವಾಗುವದು. ಆ ದಾರಿಯೊಡನೆ ಕರಪಿಡಿದು ಕರೆದುಕೊಂಡು ಹೋಗುವ ಗುರು ಇದ್ದಾನೆ. ನಿತ್ಯ ಸುಖಪಡೆಯಲು ಇಚ್ಛಿಸಿದವರಿಗೆ ಅವನು ಸಿಕ್ಕದೆ ಹೋಗಲಾರ. ಖಂಡಿತವಾಗಿಯೂ ಸಿಕ್ಕುವನು. ಅವನು ನಿಜವಾಗಿಯೂ ನಿಮಗೆ ಬೇಕಾದುದನ್ನು ದಯಪಾಲಿಸಬಲ್ಲನು. ನೀವು ಯೋಗ್ಯ ಪಾತ್ರವಿದ್ದರಾಯಿತು. ಹೃದಯವನ್ನು ತೆರೆದಿಡಿರಿ. ಬೇರೆ ಭಾವಗಳಿಗೆ ಅವಕಾಶವನ್ನು ಕಲ್ಪಿಸದಿರಿ. ಪರೀಕ್ಷಿಸಿ ಗುರುವು ನಿಮಗೆ ಇಚ್ಛಿಸಿದುದನ್ನು ಕ್ಷಣಾರ್ಧದಲ್ಲಿಯೇ ಕೊಡುವನು.

ಅನೇಕರು ಅನೇಕ ವಿಧದಿಂದ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಅದಕ್ಕಾಗಿ ಕೆಲವರು ಕಾನನ ಸೇರುವರು. ಅವರನ್ನು ಜರಿಯಬಾರದು. ಅವರು ಕಾನನಕೆ ಹೋಗುವ ಕಾರಣವು ಸುಕಾರಣವಾಗಿರುತ್ತದೆ. ಜಗತ್ತಿನ ಜನರ ಜಂಜಾಟದ ಬಲೆಗೆ ಸಿಲುಕಬಾರದೆಂಬ ಉದ್ದೇಶದಿಂದ ಹಾಗೆ ಮಾಡುತ್ತಾರೆ. ಪ್ರಪಂಚದಲ್ಲಿಯೇ ಇದ್ದು ಕಾರ್ಯಸಾಧಿಸುವದು ಕಠಿಣ. ಆದರೂ ಕಠಿಣವಲ್ಲ. ಕಮಲವು ಕೆಸರಿನಲ್ಲಿದ್ದರೂ ಅದಕ್ಕೆ ಕೆಸರು ಹತ್ತುವದಿಲ್ಲವಷ್ಟೆ! ಹಾಗೆ ನಿಜವನ್ನು ಸಾಧಿಸುವ ಸಾಧಕನು ಜಗದ ವ್ಯಾಪಾರದಿಂದ ನಿರ್ಲಿಪ್ತನಿರುತ್ತಾನೆ. ಯಾವ ದಾರಿಯಾದರೂ ಒಂದೇ ಸ್ಥಳಕ್ಕೆ ಒಯ್ದು ಮುಟ್ಟಿಸುವದರಿಂದ ಅವುಗಳ ಬಗೆಗೆ ವಿಶೇಷ ವಿವರಿಸುವದು ಅಗತ್ಯವಿಲ್ಲ.

ಘನಸುಖ ಪಡೆಯಲು ಅರ್ಹತೆಯು ಅವಶ್ಯವೆಂದು ಹಿಂದೆ ಹೇಳಿದೆಯಷ್ಟೆ. ಅದೇ ಅಂತರಂಗ ಶುದ್ಧಿ. ಹೃದಯ ನಿರ್ಮಲವಾಗಿರಬೇಕು. ಮಲಿನತೆ ಇದ್ದರೆ ಅದನ್ನು ಹೋಗಲಾಡಿಸಬೇಕು. ಹೊಲವನ್ನು ನೇಗಿಲು ಹೂಡಿ ಹೊಡೆದು ಸ್ವಚ್ಛ ಮಾಡುವಂತೆ ಹೃದಯ ಹೊಲವನ್ನು ಸ್ವಚ್ಛ

ಮಾಡಬೇಕು. ಹೊಲದಲ್ಲಿ ಕರಿಕೆ ಇರುವಂತೆ ಇಲ್ಲಿರುವ ಭ್ರಾಂತಿ ಬೇರನ್ನು ಕಿತ್ತೊಗೆಯಬೇಕು. ಹೃದಯ ಪರಿಶುದ್ಧವಾಗಿಬೇಕು. ಹೇಯಭಾವನೆಗಳಿಂದ ಹೃದಯವನ್ನು ದೂರದಲ್ಲಿಡಬೇಕು. ಇಂಥ ಹೃದಯದಿಂದ ಪರಮಾತ್ಮನನ್ನು ನೆನೆದರೆ ಕಾರ್ಯ ಸಿದ್ಧಿಯಾಗುವದರಲ್ಲಿ ಸಂದೇಹವೇನು? ಬಹಿರ್ಶುದ್ಧಿಯು ಅವಶ್ಯವು. ಅದು ಸಾಧ್ಯವಿಲ್ಲದ ಪಕ್ಷಕ್ಕೆ ಅಂತರ್ಶುದ್ಧಿಯಂತೂ ಅತ್ಯವಶ್ಯ.

ಮನಸ್ಸಿನಲ್ಲಿ ತಾಪಸಪ್ರವೃತ್ತಿಯು ನೆಲೆಗೊಳ್ಳಬೇಕು. ಅದು ಹೃದಯ ಪರಿಶುದ್ಧತೆಯ ಕುರುಹು. ಒಂದು ಊರಿಗೆ ಹಲವು ದಾರಿಗಳಿರುವಂತೆ ಶಿವನ ಸಾನ್ನಿಧ್ಯ ಸೇರಲು ಹಲವು ದಾರಿಗಳಿವೆ. ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗ ಇತ್ಯಾದಿ. ಕರ್ಮವೆಂದರೆ ದಾನಧರ್ಮ ಮಾಡುವದು, ಸತ್ಕ್ರಿಯೆ ಸತ್ಕರ್ಮಗಳನ್ನು ಮಾಡುವದು, ಪರೋಪಕಾರ ಮಾಡುವದು, ನಿಯಮ ನಿತ್ಯಾದಿಗಳನ್ನು ಆಚರಿಸುವದು. ಭಕ್ತಿಮಾರ್ಗವೆಂದರೆ ಈಶನನ್ನು ಭಕ್ತಿ, ನಯ ವಿಶ್ವಾಸಗಳಿಂದ ಪೂಜೆ, ಭಜನೆ, ಕೀರ್ತನೆ ಮಾಡುವದು. ಜ್ಞಾನಮಾರ್ಗವೆಂದರೆ ಜ್ಞಾನದ ಸಹಾಯದಿಂದ ಮುಂದುವರಿದು ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳುವದು. ಇವುಗಳಲ್ಲಿ ಜ್ಞಾನಮಾರ್ಗವು ಸುಲಭವಾದದ್ದಾಗಿದೆ.

ಆತ್ಮವು ಶಾಶ್ವತವಾದದ್ದು. ಅಮರವಾದದ್ದು. ಅದು ದೇವರ ಒಂದು ಅಣುವೆಂದು ಹೇಳಬಹುದು. ಆತ್ಮವು ದೇವರು. ಅದು ಪ್ರತಿಯೊಬ್ಬನಲ್ಲಿ ಇರುತ್ತದೆ. ಆತ್ಮವು ಪ್ರತಿಯೊಬ್ಬನಲ್ಲಿ ಇದ್ದರೂ ಆತನು ದುಷ್ಟ ಕ್ರಿಯೆಗಳನ್ನೆಸಗುವನೆಂದು ಪ್ರಶ್ನಿಸಬಹುದು. ಆದರೆ ಅವಕ್ಕೆಲ್ಲ ಮನಸ್ಸು ಕಾರಣವಾಗಿರುತ್ತದೆ. 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ' ವೆಂಬ ಅಕ್ಕನ ಹೇಳಿಕೆಯಿಂದ ಈ ಸಂಶಯವನ್ನು ನಿವಾರಿಸಿಕೊಳ್ಳಬಹುದು. ಆತ್ಮನು ಎಲ್ಲ ಕರ್ಮಗಳಿಂದ ದೂರ ಇರುತ್ತಾನೆ. ಸ್ವಯಂ ತೇಜಃ ಪುಂಜನಾಗಿದ್ದಾನೆ. ದೇಹವು ನಶಿಸಿದರೂ ಆತ್ಮ ಅಮರನು. ದೇಹಕ್ಕೂ, ಆತ್ಮಕ್ಕೂ ಬಹಳ ಅಂತರವಿದೆ. ನಿತ್ಯಾನಿತ್ಯಗಳೇ ಆ ಭೇದಗಳೆಂದು ಹೇಳಬಹುದು.

ಈ ವರೆಗೆ ನಿತ್ಯ ಸುಖ, ಪರಮಸುಖ, ನಶ್ವರವಲ್ಲದ ಸುಖವೆಂದು ಹೇಳುತ್ತಬಂದಿದೆ. ಆ ಸುಖವೇ ಮುಕ್ತಿ. ಜನನ ಮರಣಗಳಿಲ್ಲದ್ದೇ

ಮುಕ್ತಿ ಎನಿಸುವನು. ಮುಕ್ತಿಯನ್ನು ಪಡೆದವರಿಗೆ ಬಂಧನವಿಲ್ಲ. ಅದೇ ಪರಮಾನಂದ. ಕ್ಷಣಿಕ ಸುಖದಾಶೆಯನ್ನು ಬಿಟ್ಟು ನಿತ್ಯ ಸುಖ ಪಡೆಯಲು ಪ್ರಯತ್ನಿಸಬೇಕು. ಅಶಾಶ್ವತ ದೇಹದ ನಿಲುಮೆಯನ್ನು ನಿರೀಕ್ಷಿಸಿದರೆ ಪರಮಾನಂದದ ನೆನಹು ಗೋಚರಿಸುವದು. ಮುಕ್ತಿಯನ್ನು ದೊರಕಿಸಲು ಸನ್ಯಾಸಿಯಾಗಲೇಬೇಕೆಂಬ ಬಂಧನೆ ಇಲ್ಲ. ಪ್ರಪಂಚದಲ್ಲಿಯೇ ಇದ್ದು ಪರಮಾರ್ಥ ಸಾಧಿಸಿಕೊಂಡ ಜನರು ನಮಗೆ ಹೇರಳವಾಗಿ ಸಿಕ್ಕುತ್ತಾರೆ. ಶಾಶ್ವತ ಸುಖಪ್ರಾಪ್ತಿಗೋಸುಗ ಅಶಾಶ್ವತ ಸುಖವನ್ನು ತೊರೆಯಲು ಜನರು ಸಿದ್ಧರಾಗಬೇಕು. ಸಿದ್ಧಿ ಪಡಿಯಬೇಕು.

---

# ವೀರಶೈವ ಸಮಾಜದ ಏಳ್ಗೆ.

(ಲೇ.—ಬಿ. ಎಸ್ ಜಮಖಂಡಿ, ಗುಳೇದಗುಡ್ಡ.)

ವೀರಶೈವ ಸಮಾಜವು ಒಳ್ಳೇ ತತ್ವಗಳಿಂದಲೂ ಪರಮ ಪವಿತ್ರದಿಂದಲೂ ಉದಾತ್ತ ಧ್ಯೇಯ ಧೋರಣೆಗಳಿಂದಲೂ, ಸೌಂದರ್ಯ ಸಾಹಸದಿಂದಲೂ ಶಾಂತಿಸಮಾಗಮದಿಂದಲೂ ಕೂಡಿದುದೆಂದು ಶ್ರೀ ಬಸವೇಶ್ವರರು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಹಾಗೆ ಕಾರ್ಯರೂಪಕ್ಕೆ ತಂದು ಅದರ ಮಹತಿಯನ್ನು ಸರ್ವಜಮಾಜ ಜನಗಳಿಗೆಲ್ಲ ತಿಳುಹಿದ್ದಾರೆ. ಅಂಥ ವೀರಶೈವ ಸಮಾಜದ ಉದಾತ್ತ ತತ್ವಗಳನ್ನು ಈಗ ನಮ್ಮ ಜನ ಮೂಲೆಗುಂಪಾಗಿ ಮಾಡಹತ್ತಿದ್ದಾರೆ. ಯಾಕಂದರೆ ಅದರ ಅಂತರಂಗದ ಮರ್ಮವನ್ನರಿತು ಕೊಳ್ಳದಷ್ಟು ಬುದ್ಧಿಶಾಲಿಗಳಾದ ಜನವು ಅವರ ವಿಚಾರಕೆ ಹೋಗದೆ ಕಡೆಗಣಿಸುತಿರುವದೇ ಕಾರಣ. ಇನ್ನು ಹಲವರು ಶ್ರೀ ಬಸವೇಶ್ವರರ ಧ್ಯೇಯಧೋರಣೆಗಳು ಬೇರೆ ಇವೆ. ಅಂದರೆ ಅವರು ಬರೀ ವೀರಶೈವ ಸಮಾಜವು ಬೆಳೆದು ಮುಂದಕ್ಕೆ ಬರಲೆಂಬ ಉದ್ದೇಶದಿಂದ ಅದರ ವಿಷಯಕ್ಕೆ ವಚನಗಳನ್ನು ಬರೆದು ವೀರಶೈವ ಸಮಾಜದತ್ತ ಜನರ ಮನಸೆಳೆಯುತ್ತಿದ್ದಂಥವರೆಂದು ತಪ್ಪು ಅರ್ಥಮಾಡಿಕೊಂಡವರೂ ಇದ್ದಾರೆ. ಅಂತಹವರು ಆ ನಮ್ಮ ಶ್ರೀ ಬಸವೇಶ್ವರರು ಹೇಳಿದ ಒಂದೇ

ಒಂದು ವಚನದ ಮರ್ಮವನ್ನು ಸರಿಯಾಗಿ ಅರಿತುದಾದರೆ ಅವರ ಸದುದ್ದೇಶದ ಮರ್ಮವು ಆಗ ತಾನೆ ಹೊಳೆಯದಿರಲಾರದು. ಅದಾವುದೆಂದರೆ:—

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇ
ನೆಂಬೆ ? ಸರ್ವರೂ ಸದ್ಭಕ್ತರೆಂಬೆ. ಅವರಲ್ಲಿ ಕುಲವನೋಡ
ದೆ ಆಚಾರವ ನೋಡಿ ಅವರಿಗೆ ಬೇಕಾದ ಹೆಣ್ಣು ಕೊಟ್ಟು
ತನಗೆ ಬೇಕಾದುವ ತೆಗೆದು ಕೊಂಬುದು."

ಎಂದು ಅವರು ಸರಿಯಾಗಿ ಹೇಳುತ್ತಿರುವಾಗ ಸಂಕುಚಿತ ಮನದಿಂದ ಅರ್ಥಮಾಡಿಕೊಂಡು ಜನಸಾಮಾನ್ಯರಲ್ಲಿ ಪಸರಿಸುತ್ತ ಸಾಗಿರುವದೇ ಈ ವೀರಶೈವ ಸಮಾಜವು ಹಿಂದುಳಿದಿದೆ. ಹೀಗೆ ಅರಿತುಕೊಳ್ಳುವವರು ಮಹಾನುಭಾವ ಶ್ರೀ ಬಸವೇಶ್ವರರನ್ನೇ ಹೀಯಾಳಿಸಿದಂತಾಗುತ್ತದಲ್ಲದೆ ಅವರ ಉದಾತ್ತ ವಚನಗಳನ್ನು ಹೀಯಾಳಿಸಿದಂತಾಗುತದೆಂಬುದನ್ನು ಅರಿತುಕೊಂಡರೆ ಸಾಕು. ಈಗ ಯಾವದೇ ಒಂದು ಸಮಾಜದ ಸರ್ವ ಕಾರ್ಯಗಳು ಸುಸಂಘಟಿತ ರೀತಿಯಲ್ಲಿ ಸಾಗಬೇಕಾದರೆ ಆಯಾ ಸಮಾಜದಲ್ಲಿ ಏಕರೂಪಕತೆ ಎಷ್ಟು ಅವಶ್ಯಕವಿದೆ ಎಂಬುದನ್ನು ವಿಚಾರಮಾಡಬೇಕು. ಈ ತರಹದ ಏಕರೂಪತೆ ತಾಳಮೇಳವಿಲ್ಲದ ಸಮಾಜವು ಯಾವಕಾಲಕ್ಕಾದರೂ ಏಳ್ಗೆಯನ್ನು ಹೊಂದಬಹುದೇ ? ಉಚ್ಚ ಶಿಕ್ಷಣಪಡೆದವರು, ನಾನು ಬ್ರಾಹ್ಮಣ, ನಾನು ಲಿಂಗಾಯತ, ನಾನು ವೀರ ಕ್ಷತ್ರಿಯ ಹೀಗೆ ನಾವು ಶ್ರೇಷ್ಠ ತಾವು ಶ್ರೇಷ್ಠ ಎಂಬ ಅನಿಷ್ಟವಾದ ವಿವಾದಗಳಲ್ಲಿಯೇ ಕಾಲವ್ಯಯ ಮಾಡಹತ್ತಿರುವರೇ ವಿನಾ ಆ ಪುಣ್ಯಶಾಲಿಗಳ ಉದಾತ್ತ ತತ್ವ ನಿಯುಕ್ತ ವಚನಗಳ ಅಂತರಂಗದ ಮರ್ಮವನ್ನು ಸರಿಯಾಗಿ ಅರಿಯದೆ ಟೀಕಿಸುತ್ತ ಸಾಗಿರುವ ಈ ತರಹದ ಜನತೆಗೆ ಯಾವ ಶಬ್ದಗಳಿಂದ ನುಡಿಯಲಿ. ಹೀಗಿರಲು ಸಮಾಜದಲ್ಲಿ ಏಕರೂಪವೆಂಬದು ಉಂಟಾಗುವದಾದರು ಯಾವ ಆಧಾರಗಳಮೇಲಿಂದ ? ಆದರ ಕಾರ್ಯಗಳಾವದೂ ಸುಸಂಘಟಿತವಾಗಿ ಸಾಗುವದಾದರೂ ಯಾವ ನಂಬುಗೆಯ ಮಾತುಗಳಿಂದ ?

ಈ ನಮ್ಮ ವೀರಶೈವ ಧರ್ಮದಲ್ಲಿ ಉಚ್ಚ ನೀಚಗಳೆಂಬ ಭೇದ ಭಾವನೆಗಳು ಮೂಲತಃ ಇಲ್ಲ. ಈತ್ತೀಚಿಗೆ ಹಲವು ಪಂಗಡಗಳಿಂದ ಉದ್ರೇಕಗೊಂಡಿವೆ. ಪಂಗಡಗಳು ಒಂದೊಂದು ಕಾಯಕದಿಂದ ಪಂಗಡ ಹೊಂದಿವೆ ವಿನಃ ಮತ್ತಾವದರಿಂದಲ್ಲ. ಶ್ರೀ ಮಹಾತ್ಮಾ ಬಸವೇಶ್ವರರು ಉದ್ಯೋಗದೊಳಗಿನ ಮೇಲುಕೀಳುಗಳೆಂಬ ಭಾವನೆಗಳನ್ನು ಅಳಿದು ಲಿಂಗ ವಂತನು ಯಾವ ಉದ್ಯೋಗವನ್ನಾದರೂ ಮಾಡಬಹುದೆಂದು ಬೋಧಿ ಸಿದರು. ಹಾಗೆ ಲಿಂಗಾಂಗಿಗಳು ತಮ್ಮ ತಮ್ಮ ಇಚ್ಛೆಯ ಪ್ರಕಾರ ಉದ್ಯೋಗಗಳನ್ನು ಕೈಕೊಳ್ಳಲಿ. ಈ ಉದ್ಯೋಗಗಳ ಮುಖಾಂತರ ಪಂಗಡಗಳು ಉದ್ಭವಿಸಿವೆ ವಿನಃ ಮೂಲತಾ ಇದ್ದವುಗಳಲ್ಲವೆಂಬುದನ್ನು ಅವರು ಅರಿತಿರಲು ಸಾಕು.

ಇನ್ನು ಶ್ರೀ ಬಸವೇಶ್ವರರು ಇನ್ನೊಂದೆಡೆ ಹೀಗೆ ಹೇಳಿದ್ದಾರೆ. "ಆವ ಕುಲದವನಾದಡೇನು? ಶಿವಲಿಂಗವಿದ್ದವನೇ ಕುಲಜನು" ಎಂದೂ "ಲಿಂಗದೇವನ ಪೂಜಿಸಿ ಕುಲವನರಸುವರೆ" ಎಂದೂ ಹೀಗೆ ಅನೇಕ ರೀತಿಗಳಿಂದ ಲೋಕಕ್ಕೆಲ್ಲ ಬೋಧಿಸಿ, ಲೋಕೋದ್ಧಾರವನ್ನು ಮಾಡಿ ದವರಿರುತ್ತಾರೆ. ಅವರು ಒಟ್ಟಿನಲ್ಲಿ ಹೇಳುವದೆಂದರೆ ಯಾವ ಜಾತಿ ಪಂಥ ದವರೇ ಆಗಲಿ, ಲಿಂಗ ಧರಿಸಿ ಸದಾಚಾರ ಸಂಪನ್ನರಾಗಿದ್ದಾರೆ ಅವರ ಶ್ರೇಷ್ಠರೆಂದು ಬೋಧಿಸಿರುವರು. ಅದಕ್ಕಾಗಿ "ಎಂಥವನಾದಡೇನು ಲಿಂಗ ಮುಟ್ಟದವನೇ ಕೀಳು ಜಾತಿ ಕುಲವಹುದು ತಪ್ಪದು ಲಿಂಗ ಮುಟ್ಟ ಲೊಡನೆ" ಎಂದು ಅವರು ಸಾರಿ ಜನಸಾಮಾನ್ಯರೆದುರಿನಲ್ಲಿ ತಮ್ಮ ಉದಾತ್ತ ವಚನಗಳ ರೂಪದಲ್ಲಿಟ್ಟು ಮಾರ್ಗ ತೋರಿಸುತ್ತಿರುವಾಗ ಅವು ಗಳನ್ನು ಸರಿಯಾಗಿ ಪರಾಮರ್ಶಿಸದೆ ಜಾತಿ ಪಂಥಗಳೆಂಬ ವೈಷಮ್ಯ ವನ್ನು ಹುಟ್ಟಿಸಿ ಕೀಳು ಮೇಲೆಂಬ ವಾದ ವಿವಾದಗಳಲ್ಲಿ ವ್ಯರ್ಥ ಕಾಲ ಹರಣ ಮಾಡುತ್ತಿರುವ ಮೂರ್ತಿಗಳು ಈ ನಮ್ಮ ಜಗದ್ವಂದ್ಯ ಪರಮ ಪವಿತ್ರ ಮಹಾನುಭಾವ ಶ್ರೀ ಬಸವೇಶ್ವರರ ಉದ್ಧಾರ ತತ್ವ ಸುಮಾರ್ಗ ವಚನಗಳ ತತ್ವಾಂಶವನ್ನು ಅರಿತುಕೊಂಡು ಸದ್ಧರ್ಮವಾದ ವೀರಶೈವ ಸಮಾಜವನ್ನು ಈಗಲಾದರೂ ಬೆಳಕಿಗೆ ತಂದುದಾದರೆ ಆ ಮಹಾತ್ಮಾ ಶ್ರೀ ಬಸವೇಶ್ವರರು ಜಗದ ಜನರನ್ನು ಕತ್ತಲೆಯಿಂದ ಬೆಳಕಿಗೆ ತರಲು ಆವ ತಹಹದಿಂದ ಕಷ್ಟನಷ್ಟಗಳನು ಸಹಿಸಿ ಅಮರರಾಗಿರುವರೋ ಅವ

ರಿಗೆ ನಾವು ಅದಕ್ಕಾಗಿ ಇಂದು ಪ್ರತಿಫಲವನ್ನು ನೀಡಿದಂತಾಗುತ್ತದಲ್ಲದೆ ಅವರ ಕೀರ್ತಿಯನ್ನೂ ಅಮರವಾಗಿ ಉಳಿಸಿ ಮುಂದಿನ ಜಗದ ಜೀವನಕ್ಕೆ ಮಾರ್ಗವನ್ನು ಹಾಕಿಕೊಟ್ಟಂತಾಗುತ್ತದೆಂಬುದನ್ನು ನಮ್ಮ ಜನತೆಯು ಈಗ ಲಾದರೂ ಅರಿತುಕೊಂಡು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವರಾಗಿ ನನ್ನ ಹಿರಿಯಾಸೆ.

---

## ಮಹಾಕವಿ ಷಡಕ್ಷರಿ ದೇವನ ಜಯಂತಿ.

ಶ್ರೀ. ಮ. ಮಲ್ಲಪ್ಪ. ಜ್ಞಾನಮಂದಿರ ಹಲಗೂರ

++○++

" ಎಲ್ಲಿಯೋ ಸೇರಿಹೋಗಿರುವಲ್ಲಿಯೇ ನನ್ನ ಬಾಳೆಲ್ಲವೂ ಸೇರಿ ಹೋಗಿದೆ. ಇಹಲೋಕದಲ್ಲಿ ಇಲ್ಲದಿದ್ದರೂ ಅವರೂ ನನ್ನ ಹತ್ತಿರದಲ್ಲಿಯೇ ಸತತವೂ ಇರುತ್ತಾರೆ. ದಿನವೂ ಅವರು ನನಲ್ಲಿಗೆ ಬೇಜಾರಿಲ್ಲದೆ ಬರುತ್ತಿದ್ದಾರೆ. ಪ್ರತಿ ದಿವಸವೂ ನನ್ನ ಸಂಗಡ ಮಾತನಾಡುತ್ತಿದ್ದಾರೆ. ತತ್ಫಲವಾಗಿ ನನಗೆ ಆನಂದ ದುಃಖಾದಿ ಜೀವನಾನುಭವವು ಅಂಗೈನಲ್ಲಿನ ನೆಲ್ಲಿಕಾಯಿಯಾಗಿರುತ್ತದೆ. ಅವರಲ್ಲಿನ ಸನ್ಮಾರ್ಗವೂ ಸದ್ಸೇವೆಯೂ ಸತ್ಕ್ರಿಯೆಯೂ ನನಗೆ ಲಭಿಸಿ ಭವಿಷ್ಯ ದೇವತೆಯ ದರ್ಶನವು ಸುಲಭ ಸಾಧ್ಯವಾದೀತು! ಅವರಂತಹ ಜೀವನ ಗೆಳೆಯರನ್ನು ಮತ್ತೆ ಯಾರನ್ನೂ ಕಾಣೆ! ಅವರು ಯಾರೆನ್ನುವಿರಾ? ಮಣ್ಣಿನಲ್ಲಿ ಮರೆಯಾದ ಹಿರಿಯರನೇಕರು ಅನುಭವ ಚಿತ್ತರಾಗಿ ಬರೆದಿಟ್ಟಿರುವ ಮಹಾಗ್ರಂಥಗಳು "ಎಂದು ಹಿರಿಯ ಅನುಭವಿಗಳೊಬ್ಬರು ಅಪ್ಪಣೆ ಕೊಡಿಸಿರುವಲ್ಲಿ ಮಹಾ ಗ್ರಂಥದ ಬೆಲೆಯು ಯಾರಿಗೆ ತಾನೇ ಅರಿವಾಗದು. ದೇಹಕ್ಕಾಗಲೀ, ಮನಸ್ಸಿಗಾಗಲೀ ಸಮಾಜಕ್ಕಾಗಲೀ, ಹೊಸ ಹೊಸ ಸಂಸ್ಕಾರಗಳನ್ನು ಮಹಾ ಗ್ರಂಥಗಳು ಕೊಡುವವು. ಸಂಸ್ಕಾರಗಳನ್ನು ಕೊಟ್ಟಂತೆ ಚಿನ್ನವು ಹೆಚ್ಚು ಹೊಳೆಯುವದು. ವಜ್ರವು ಹೆಚ್ಚು ಕಾಂತಿಮಯವಾಗುವದು. ಫಲ ಪುಷ್ಪವು ಹೆಚ್ಚು ಹೆಚ್ಚಾಗಿ ರಸವತ್ತಾಗುವುದು. ಭಸ್ಮಗಳು ಹೆಚ್ಚು ವೀರ್ಯವತ್ತಾ

ಗುವುವು. ಸಂಸ್ಕಾರ ವಿಹೀನವಾದ ವಸ್ತುವು ವ್ಯವಹಾರಕ್ಕೆ ಅಪ್ರಯೋಜಕವಾಗುವುದು. ಅಂತೆಯೇ ದೇಹಕ್ಕೂ ಮನಸ್ಸಿಗೂ ಸಂಸ್ಕಾರಗಳನ್ನು ಕೊಟ್ಟರೆ ಅವುಕೂಡ ಹೆಚ್ಚು ತೇಜಃಪುಂಜವಾಗುವುವು. ಹೆಚ್ಚು ಕಾರ್ಯಕ್ಷಮವಾಗುವುವು. ಸಂಸ್ಕೃತಿಯ ತತ್ವಗಳನ್ನು ಅರಿಯದ, ಅವುಗಳ ಇಂಗಿತವನ್ನು ಕಂಡು ಹಿಡಿಯದ ಯಾರೂ ಕೂಡ ಆತ್ಮೋದ್ಧಾರವನ್ನು ಮಾಡಿಕೊಳ್ಳಲಾರರು. ಆತ್ಮೋದ್ಧಾರವಿಲ್ಲದಿದ್ದರೆ ಸಮಾಜೋದ್ಧಾರವು ಆಗಲಾರದು. ನಮ್ಮ ನಾಡಿನಲ್ಲಿ ಅನೇಕ ಹಿರಿಯರೂ, ಅಪರೋಕ್ಷ ಜ್ಞಾನಿಗಳೂ, ಪಂಡಿತರೂ ಹಲವು ವಿಧದ ಶ್ರೇಷ್ಠ ಸಂಸ್ಕಾರಗಳನ್ನು ತಮ್ಮ ತಮ್ಮ ಕ್ರಿಯೆಯ ಮೂಲಕ ಜನತೆಗೆ ನೀಡಿರುವರು. ಶಾಲಿವಾಹನ ಶಕೆ ೧೬ ಶತಮಾನದ ಮಧ್ಯಭಾಗದ ಸುಮಾರಿನಲ್ಲಿ ನಮ್ಮ ಸಿರಿಗನ್ನಡನಾಡಿನಲ್ಲಿ ಮಹಾ ವಿಭೂತಿಯೊಬ್ಬನೇ ಮೈಸೂರ ದೇಶದ ಮಳವಳ್ಳಿ ತಾಲ್ಲೋಕಿನ ಧನುಗೂರಿನಲ್ಲಿ ಈ ಕ್ರಿಯೆಯನ್ನು ಮಾಡಿದನು. ಆತನೇ ಮಹಾಕವಿ ಷಡಕ್ಷರನು.

ನಮ್ಮ ನಾಡಿನ ಮತ್ತು ನುಡಿಯ ಮೇಲೆ 'ತನ್ನ ವಿಶಿಷ್ಟ ಮುದ್ರೆಯನ್ನು ಷಡಕ್ಷರ ದೇವನು ಒತ್ತಿರುವನು. ಮಹಾಪುರುಷರ ಉದಯವು ಜಗತ್ತಿನಲ್ಲಿ ವ್ಯರ್ಥವಾಗುವದಿಲ್ಲವು. ತನ್ನ ಕಾಲದ ಪರಿಸ್ಥಿತಿಯನ್ನು ಸಂಪೂರ್ಣಜ್ಞಾನದಿಂದರಿತ ಷಡಕ್ಷರ ದೇವನು ಬಹುತರ ಜನ್ಮಕೋಟಿಗಳೊಳಾರ್ಜಿಸಿದ ಉತ್ತಮ ಪುಣ್ಯವೇಳ್ಗೆಯಿಂ ಎಳವರೆಯದೊಳ್ ತನ್ನಕೈಸಾರ್ದ ಅಮೋಘವೂ, ಅಮೌಲ್ಯವೂ ಆದ ಕವಿತಾಶಕ್ತಿಯನ್ನು ಸತ್ಪಾತ್ರದಲ್ಲಿ ವಿನಿಯೋಗ ಮಾಡಲಿಚ್ಛಿಸಿ, ತನ್ನಲ್ಲಿ ಅಪೂರ್ವ ಪ್ರತಿಭೆಯು ಚಿಮ್ಮಿ ಹರಿದಾಗ, ಭಾವ ಪ್ರಚೋದನೆಯಾದಾಗ ಜೀವನವು ಆಹ್ಲಾದಗೊಂಡಾಗ ರಾಗಸಹಿತವಾದಾಗ, ವಿವಿಧ ಪ್ರಕೃತಿ ಸನ್ನಿವೇಶಗಳು ಪ್ರೇರಕವಾದಾಗ ಬಲಿತ ಶ್ರದ್ಧೆಯಿಂದ ವೇದಶಾಸ್ತ್ರ ಪುರಾಣೇತಿಹಾಸಗಳ ಆಧಾರವಾಕ್ಯಗಳನ್ನು ಭದ್ರಪಡಿಸಿದ ...... ...... ಉತ್ತಮ ಜನಾನಂದಾಬ್ಧಿರಾಕಾ ಸುಧಾ । ಕರನುದ್ಯಕ್ಕೆ ವಿತಾಲತಾರ್ಜಿತಯಶಃ ಪುಷ್ಪೋದಯಂ ಸ್ವಾಂಬಶಂ । ಕರಪಾದಾಬ್ಜ ಮಧುವ್ರತಂ ಸುಕವಿ ವೃಂದ ಸ್ತೋತ್ರಪಾತ್ರಂ ಷಡಕ್ಷರ ದೇವಂ ಸರಸ ಪ್ರಬಂಧ ಸುಭಗಾಂ ಭೋಜಪ್ರಭಾವಲ್ಲಭಂ ॥ ಮನುಜರನ್ನು ದೈವತ್ವಕ್ಕೇರಿಸಲು ಅನುಕೂಲ ವಾಗುವಂಥಹ ಮಹಾ

ಕೃತಿಗಳನ್ನು ಷಡಕ್ಷರ ದೇವನು ಸೃಜಿಸಿದನು. ಸಕಲ ಶ್ರೇಷ್ಠ ಕಲಾ ಕೃತಿಗಳು ಸ್ವಾನವೀಯತೆಯ ಭಾವನಾ ಪ್ರಕಾಶಗಳು ಎಂಬ ಗಯಟೆಯ ನುಡಿಯನ್ನು ಗಮನಿಸಿ ಈ ಕೃತಿಗಳಲ್ಲಿನ ಮಾರ್ಗವನ್ನು ಅನುಸರಿಸಿದರೆ ಮಾನಜರ ಬಾಳಿಗೆ ಶಾಂತಿಯು ಬಂದಂತೆಯೇ ಸರಿಯು. ವಿಶ್ವಕಲ್ಯಾಣ ಕ್ರಿಯೆಮಾಡಿ ಶುದ್ಧ ಜ್ಞಾನಾಮೃತವು ಪ್ರವಹಿಸುವಂತೆ ಪರಿಶೋಭಿಸು ತ್ತಿವೆ. ಈತನ ನಿತ್ಯ ಚೇತನವಾದ ವಚನಗಳು. ಮಹಾಕವಿಯ ಕಲಾ ಸೌಂದರ್ಯವನ್ನು ಅರ್ಥಮಾಡಿಕೊಳ್ಳುವುದೆಂದರೆ ಚಿತ್ತ ಕ್ಲೇಶಕರವಾದ ಕಷ್ಟಸಾಧ್ಯವಾದ ಕೆಲಸವು. ಅಂತೆಯೇ ಅರಿಯಲು ನಮ್ಮ ನಾಗರಿ ಕತೆಯ ಲಕ್ಷಣಗಳಲ್ಲಿ ಸಹಾನುಭೂತಿಯನ್ನೂ ದೇವರಲ್ಲಿ ನಂಬಿಕೆಯನ್ನೂ ಇಡಬೇಕು. ಕವಿಯ ಮನೋಗತಾಭಿಪ್ರಾಯವನ್ನು ಊಹಿಸಿಕೊಂಡು ಆ ಹಾದಿಯನ್ನೇ ಸಾಧ್ಯವಾದ ಮಟ್ಟಿಗೂ ಅನುಸರಿಸಬೇಕು. ಇದು ನಮಗೆ ಸರ್ವಸಾಮಾನ್ಯವು ಅಪರಿಚಿತ ವಾತಾವರಣಗಳನ್ನು ಕಳಚಿ ಕಾವ್ಯ ಹೃದಯವನ್ನು ಹೊಕ್ಕು ತಲ್ಲೀನರಾದರೆ ಅಲ್ಲಿನ ಪಾತ್ರಗಳು ನಮ್ಮವೆಂದೂ ನಮಗೆ ಸನ್ನಿವೇಶಗಳು ಅಪರಿಚಿತವಲ್ಲವೆಂದು ಭಾಸವಾಗದೆ ಇರದು. ಉತ್ತಮ ಕಾವ್ಯಗಳು ನಮ್ಮ ಅಭಿರುಚಿಯ ಕೆಡದಂತೆ ಕಾಪಾಡುವ ಸಾಮ ಗ್ರಿಗಳಂತೆ ಯಾಥಾರ್ಥ್ಯ ಅನ್ವೇಷಣೆಯ ದೃಷ್ಟಿಯಲ್ಲಿ.

ಷಡಕ್ಷರ ಮಹಾಕವಿಯ ಕೆಲವು ಸನ್ನಿವೇಶಗಳು ಸಹಜ ಸುಂದರ ವಾಗಿಯೂ. ಸತ್ಯಪರಿಪೂರ್ಣವಾಗಿಯೂ ಚಿತ್ರಿತವಾಗಿವೆ. ಪಾತ್ರಗಳ ವರ್ತನೆಯು ಪ್ರಕೃತಿಯ ಸಂಗಡ ಬೆರೆತಿದೆ. ಷಡಕ್ಷರನ ಕವಿತಾ ಪ್ರತಿ ಭೆಯು ಅಸಮಾನ್ಯವಾದುದು. ಈತನ ವಸ್ತುರಚನಾನೈಪುಣ್ಯವೂ ವರ್ಣ ನಾಪ್ರೌಢಿಮೆಯೂ, ಕಾವ್ಯದ ಸೌಂದರ್ಯಕ್ಕೆ ಕೊರತೆ ಬಾರದಂತೆ ವರ್ಣ ನಾಭಂಗಗಳನ್ನು ಹೋಂದಿಸಿಕೊಂಡಿರುವ ಚಾಕಚಕ್ಯತೆಯೂ, ಪಾತ್ರಗಳಿಗೆ ಜೀವಕಳೆಯನ್ನು ತುಂಬಿ ಅವು ಜೀವಗೊಂಡು ಇದುರಿಗೆ ನಿಲ್ಲುವಂತೆ ಮಾಡುವ ಕಲ್ಪನಾ ಶಕ್ತಿಯೂ, ಆ ಔಚಿತ್ಯಗಳಿಗೆ ಜಾಗಕೊಡದ ಕಲಾ ಭಿಜ್ಞತೆಯೂ, ರಸ ನಿಷ್ಪತ್ತಿಯಲ್ಲಿ ಪ್ರದರ್ಶಿಸಿರುವ ಅಸಾಧಾರಣ ಪ್ರತಿ ಭೆಯೂ, ಅಲ್ಪಸಂಖ್ಯಾಕ ಪದಗಳಿಂದ ಸಂಪೂರ್ಣಾಭಿಪ್ರಾಯವನ್ನು ವ್ಯಕ್ತ ಪಡಿಸುವ ಶಕ್ತಿಯೂ, ಹೃದಯ ವೀಣೆಯು ಮಿಡಿದು ನುಡಿವಂತೆ ಮಾಡುವ ಸುಕುಮಾರ ಭಾವಗಳನ್ನು ರಸಾನುಗುಣವಾಗಿ ರಚಿಸಬಲ್ಲ ಪಾಂಡಿತ್ಯವೂ

ವಿಸ್ತಾರ ಶಬ್ದ ಕೋಶವೂ, ಶೈಲಿಯ ಮಾಧುರ್ಯವೂ, ಸಣಿಯ ಬಿಗಿಯೂ ಈತನನ್ನು ಮಹಾಕವಿಯನ್ನಾಗಿ ಮಾಡಿದೆ. ಕರ್ನಾಟಕ ಚಂಪೂಕಾರರಾದ ನಾಗವರ್ಮ ನಾಗಚಂದ್ರ ನೇಮಿಚಂದ್ರ ರುದ್ರಭಟ್ಟ, ಅಗ್ಗಳಾದಿಗಳನ್ನು ಈತನು ಹಿಂದುಳಿಸಿದ್ದಾನೆ. ಇದರಿಂದಲೇ ವೆಂಗನಸುಧೀಪಂಡಿತನು ಈತನನ್ನು

"ನಿಖಿಲ ಕಲಾ ಕಲಾಪ ಜ್ಞಾನ ಸಮಧಿಗತ ನೈಪುಣೀ ಸಮೇಧಿತ ಬಹುವಿಧ ಮಧುರ ಕವಿತಾ ವಿಶಾರದಃ, ಶಾರದ ಸುಧಾಕರ ಚಂದ್ರಿಕಾ ವಿನಿರ್ಮಲ ಚಿತ್ತಃ, ಚಿತ್ತಜಾರಾತಿ ಕೃಪಾಮೃತ ರಸಸೇಚನ ಪರಿಷ್ಕೃತ ಸಂಸ್ಕೃತಿ ಜನಿಕ ಸಂತಾಪಃ, ತಾಪಸಜನ ಮಾನ್ಯ ಪುಣ್ಯ ಚರಿತ್ರಃ ಸಕಲ ಸುಧೀ ಸಮೂಹ ಶ್ಲಾಘನೀಯ ಸರಸ ಸದ್ವಚೋ ವಿಸ್ತರವಿನ್ಯಾಸ ವಿಲಾಸ ಚಾತುರೀ ಧುರೀಣಃ ಕೋವಿದ ಮಹಾಕವಿ ಷಡಕ್ಷರ ದೇವ ನಾಮಾಃ" ಎಂದಿರುವುದು ಈತನ ಶಬ್ದ ಸಂಪತ್ತು, ಪ್ರತಿಭೆ, ರಚನಾ ಕೌಶಲ್ಯ, ವರ್ಣನಾ ಪ್ರೌಢಿಮೆ, ರಸೋತ್ಪಾದನ ಶಕ್ತಿ, ಶಾಸ್ತ್ರಚಿಂತನೆ, ಕಥಾ ಸಂವಿಧಾನತೆ ಯಾದಿಯು ನಮಗೆ ಅರಿವಾಗಬೇಕಾದರೆ ನಾವು ಸಹೃದಯರಾಗಬೇಕು. ತಲ್ಲೀನತೆಯಿಂದ ಷಡಕ್ಷರನ ಕಾವ್ಯೋದ್ಯಾನ ವನ ವಿಹಾರ ಮಾಡಿದರೆ ಅಂದು ನಮಗೆ ದೊರಕುವ ಆನಂದಾನುಭವವು ಚಿರಂತನೀಯವಾದದ್ದು. ಆದಿಕವಿ ವಾಲ್ಮೀಕಿಯ ಮುಂದೆ ಕುಮಾರ ವಾಲ್ಮೀಕಿಯೂ, ಮುನಿ ವ್ಯಾಸರ ಮುಂದುಗಡೆ ಕುಮಾರವ್ಯಾಸನೂ, ಸತ್ವಸಾಹಿತಿ ಭವಭೂತಿಯ ಸಮಜೋಡಾಗಿ ಕ್ರಾಂತಿಕಾರ ರಾಘವಾಂಕನೂ, ಗದ್ಯ ಮಹಾ ಕವಿ ಬಾಣನಿಗೆ ಸರಿಜೋಡಾಗಿ ಮಹಾ ಕವಿ ಷಡಕ್ಷರದೇವನೂ ಇರುವುದು ಕನ್ನಡಿಗರ ಪುಣ್ಯ ಪುನೀತನೇ ಸರಿಯು. ಕಾವ್ಯ ಭಕ್ತರಿಗೆ ನೃಪತುಂಗನ ಸಂದೇಶ.

ಅಧಿಕೃತ ಸತ್ಪುರುಷಾರ್ಥ ।
ಪ್ರಧಾನ ಧರ್ಮಾರ್ಥ ಕಾಮ ಮೋಕ್ಷಂಗಳವಾ ।
ಬುಧಜನ ವಿವಕ್ತ ಕಾವ್ಯ ।
ಪ್ರಧಾನಾರ್ಥಂಗಳಖಿಳ ಭುವನ ಹಿತಂಗಳ್ ॥

ನಾವು ಈತನ ಕಾವ್ಯಗಳನ್ನೋದುತ್ತ ಹೋದಂತೆ ಈತನ ಮಹಾ ಶಕ್ತಿಯನ್ನು ಕಂಡು ಆನಂದಾಶ್ಚರ್ಯ ವಿಭಾವವಾಗುತ್ತದೆ. ಕವಿಗೆ ಕಾವ್ಯವು ನಿಸರ್ಗದ ರನ್ನಗನ್ನಡಿಯು ಎಂದಿದ್ದಾನೆ. ವಿಲಿಯಂ ಶೇಕಸ್ಪಿಯರ್ ನಿಸರ್ಗ ಸೌಂದರ್ಯವನ್ನು ವರ್ಣಿಸುವ ಷಡಕ್ಷರನ ಬುದ್ಧಿಶಕ್ತಿಯು ಅಪಾರವೇ ಸರಿಯು. ರಸಾತ್ಮಕಂ ವಾಕ್ಯಂ ಕಾವ್ಯಂ ಎಂಬುದನ್ನು ಈತನು ನೆನಪಿಗೆ ತರಿಸುತ್ತಾನೆ. ಈ ತೆರನ ಕಾವ್ಯದಿಂದಲೇ ವಾಚಕರಿಗೆ ಕಾವ್ಯಾನಂದವು ದೊರಕುವುದು. ಕಾವ್ಯಾನಂದವು ಎಲ್ಲವಕ್ಕಿಂತಲೂ ಹಿರಿಯ ಚಿರ ಆಸ್ತಿಯೆಂದರೆ ತಪ್ಪೇನಾಗಲಾರದು. ಕಾವ್ಯಾನಂದಾನುಭವವು ಕಬ್ಬದ ಕಾಳರಿಂ ಕನಕ ಸ್ನಾನಮಾಡಿಸಿಕೊಳ್ಳಬಲ್ಲ ಕವಿಪುಂಗವರ ಹೃದಯವನ್ನು ಹೊಕ್ಕರೆ ಮಾತ್ರ ಸಾಧ್ಯ. ಇಂತಹ ಚಿರ ಆಸ್ತಿಯನ್ನು ನೀಡಿದ ಮಹಾ ಕವಿಯನ್ನು ನೆನೆಯುವುದು ಪ್ರತಿಯೊಬ್ಬರ ಕರ್ತವ್ಯವು. ಯಾವ ರಾಷ್ಟ್ರದ ಜನಾಂಗಕ್ಕೆ ತಮ್ಮ ಹಿಂದಣವರ ಶ್ರೇಷ್ಠ ಕೃತಿಗಳಲ್ಲಿ ಅಭಿಲಾಷೆ ಇರುವದಿಲ್ಲವೋ? ಅಂತಹವರು ತಮ್ಮ ವಂಶಸ್ಥರಿಗೆ ತಮ್ಮ ವಿಷಯಾಭಿಲಾಷೆಯುಂಟಾಗುವಂತಹ ಯಾವುದಾದರೊಂದು ಸ್ಮರಣೀಯ ಕ್ರಿಯೆಯನ್ನು ಮಾಡಲು ಬಲ್ಲಿದರಾಗರು ಎಂದು ಮೆಕಾಲೆ ನುಡಿದಿರುವುದನ್ನು ಗಮನಿಸುವುದು ಲೇಸು. ಷಡಕ್ಷರ ದೇವನ ರಾಜಶೇಖರ ವಿಳಾಸದಲ್ಲಿನ ತಿರುಕೊಳನಾಚಿಯ ಪ್ರಲಾಪ ಶಬರ ಶಂಕರ ವಿಲಾಸದ ಕಿರಾತಾರ್ಜುನ ಸಂವಾದ, ವೃಷಭೇಂದ್ರ ವಿಜಯದ ಕೋಳೂರು ಕೊಡಗೂಸು ಮುಂತಾದ ಉಪಕಥೆಗಳು, ಕವಿಕರ್ಣ ರಸಾಯನದ ಚೋಳರಾಜನ ಶಿವ ಭಕ್ತಿ, ಇವುಗಳನ್ನು ಓದುವಾಗ ನಾವು ನಿಜವಾದ ಕಾವ್ಯಾನಂದವನ್ನು ಅನುಭವಿಸಬಹುದು. ಜೀವನ ಸುಗಮತೆಗೆ ಅನುಕೂಲ ಸಾಮಗ್ರಿಗಳನ್ನು ತನ್ನ ಕಾವ್ಯಗಳ ಮೂಲಕ ಷಡಕ್ಷರನು ಜನತೆಗೆ ನೀಡಿ ಹೋಗಿರುವನು. ಈ ಬಗೆಯ ದೈವಿಕ ವ್ಯಕ್ತಿಯ ಜಯಂತಿಯು ಪ್ರತಿಯೊಬ್ಬ ಕನ್ನಡಿಗನಿಗೂ ಅತ್ಯಗತ್ಯವು. ಇದು ಜನತೆಯ ಕೃತಜ್ಞತಾ ಸೂಚಕ ಕ್ರಿಯೆಯೊಂದು. ಕೃತಜ್ಞತೆಯಿಲ್ಲದ ಮನುಜನ ಬಾಳು ಹೋಳು ಸೀಳಾಗಿರುತ್ತದೆ. ನಿಜವಾಗಿಯೂ ಮನುಜನ ಬಾಳು ಪುಣ್ಯ ಪುನೀತವಾಗಬೇಕಾದರೆ ಮಹಾ ಪುರುಷರ ಜಯಂತಿಯಿಂದಲೇ ಸಾಧ್ಯವಾಗುತ್ತದೆ. ಜನತೆಯ ಸಂತೋಷಕ್ಕೂ, ಆತ್ಮೋನ್ನತಿಗೂ ಮಹಾ ಕವಿಯ ಜಯಂತಿಯು ಅನುಕೂಲವಾಗಿ ಆತನ ಕರ್ಮಕ್ಕೆ ತಲೆಬಾಗಿ ಕೈಮುಗಿಯುವಂತಾಗುತ್ತದೆ.

ಕವಿಯ ಜೀವನ ವೃತ್ತಾಂತ ಯುಗಧರ್ಮ, ಗುಣಸ್ವಭಾವ, ಆಶೋತ್ತರಾದಿಗೂ ಮತ್ತು ಕವಿಯ ಕಾವ್ಯಕ್ಕೂ ಇರತಕ್ಕ ಸಂಬಂಧದ ತಿಳಿವು ಆಗಬೇಕು. ಕಾವ್ಯದ ಶೈಲಿ, ಅಲಂಕಾರ, ರಸ, ವರ್ಣನೆ, ಶಬ್ದಶಕ್ತಿ, ಛಂದೋಜ್ಞಾನ, ಕಥಾಮೂಲ, ಕಥಾವಸ್ತು, ಕಥಾಸೃಷ್ಟಿ— ಕಥಾಸಂವಿಧಾನ, ಪಾತ್ರಸೃಷ್ಟಿಯಾದಿ ಅಂಶಗಳ ಅರಿವು ಆಗಬೇಕು. ಕಾವ್ಯದಲ್ಲಿ ಕವಿಯು ಪರ್ಯಾಲೋಚಿಸಿರುವ ಜೀವನ ಸಮಸ್ಯೆ, ಆತನು ಬೋಧಿಸಿರತಕ್ಕ ಜೀವನ ತತ್ವಾದಿಯ ಪರಿಚಯವೂ ಆಗಬೇಕು. ಅಂದು ಕವಿಯ ಶಕ್ತಿಸಾಮರ್ಥ್ಯವು ಚೆನ್ನಾಗಿ ತಿಳಿದು ಆ ಕೃತಿಗಳು ನಮ್ಮ ಜೀವ ಗೆಳೆಯರಾಗುತ್ತವೆ. ಕಾವ್ಯದ ಗಾಂಭೀರ್ಯದಲ್ಲಿ ಪಂಪನೂ, ವೀರರಸ ನಿರೂಪದಲ್ಲಿ ರನ್ನನೂ, ಕರುಣರಸದಲ್ಲಿ ರಾಘವಾಂಕನೂ, ಭಕ್ತಿರಸದಲ್ಲಿ ಹರಿಹರನೂ, ಕಾವ್ಯಮಾಧುರ್ಯದಲ್ಲಿ ಲಕ್ಷ್ಮೀಶನೂ, ನೂತನ ಪಾತ್ರ ಸೃಷ್ಟಿಯಲ್ಲಿ ಕುಮಾರವ್ಯಾಸನೂ ಕೀರ್ತಿಗಳಿಸಿರುವಂತೆ ಶೃಂಗಾರಾದಿ ರಸನಿರೂಪಣೆಯಲ್ಲಿ ಷಡಕ್ಷರದೇವನು ಕೀರ್ತಿ ಲಕ್ಷ್ಮಿಯನ್ನು ವರಿಸಿದ್ದಾನೆ. ಅರ್ಥವು ಪರಿಪೂರ್ಣವಾಗುವಂತೆ, ಸೌಂದರ್ಯವು ಸೂರೆಯಾಗುವಂತೆ, ರಸವೊಸರುವಂತೆ, ಹೃದಯಂಗಮವಾಗುವಂತೆ ಕವಿಯು ಕಾವ್ಯವನ್ನು ರಚಿಸಿದ್ದಾನೆ. ಅಲೆಕ್ಸಾಂಡರ್ ವಾನ್ ಹಂಬೋಲ್ಡನು ಹೇಳಿರುವುದನ್ನು— The tenderness in the expression of feeling and the richness of creative fancy have assigned to this his lofty place among poets of all nations. ಇಲ್ಲಿ ನೆನಪಿಗೆ ತಂದರೆ ದೋಷವಾಗದು! ಇದು ಕಾಳಿದಾಸನ ವೈದರ್ಭೀ ಶೈಲಿಯನ್ನು ಅಡಕಗೊಂಡಿದೆ. ಈತನು ಎಂದರೆ ಷಡಕ್ಷರದೇವನು ಕನ್ನಡದಲ್ಲಿ ರಾಜಶೇಖರವಿಲಾಸ, ವೃಷಭೇಂದ್ರವಿಜಯ, ಶಬರಶಂಕರವಿಲಾಸ ಎಂಬ ಮಹಾಕಾವ್ಯಗಳನ್ನು ಚಂಪೂಶೈಲಿಯಲ್ಲಿಯೂ, ಸಂಸ್ಕೃತದಲ್ಲಿ ಕವಿಕರ್ಣರಸಾಯನ ಎಂಬ ಮಹಾಕಾವ್ಯವನ್ನೂ, ಭಕ್ತಾಧಿಕ್ಯ, ಶಿವಾಧಿಕ್ಯ, ಶಿವಸ್ತವಮಂಜರಿ, ವೀರಭದ್ರಗದ್ಯ, ವೀರಭದ್ರದಂಡಕ, ಸಿದ್ಧಲಿಂಗಸ್ತವ, ನೀಲಾಂಬಿಕಾಸ್ತೋತ್ರ, ಬಸವೇಶಾಷ್ಟಕಾದಿ ಗ್ರಂಥಗಳನ್ನೂ ಬರೆದಿರುತ್ತಾನೆ. ಈತನ ಭವ್ಯಚರಿತೆಗೆ ಸಾಧಕವಾದ ಈತನ ಗುರು ಚಿಕ್ಕವೀರದೇಶಿಕೇಂದ್ರನ ಗದ್ದುಗೆ, ಈತನ ತಪೋಭೂಮಿ, ಈತನ ಮಠ ಇವೆಲ್ಲವೂ ಮೈಸೂರು ದೇಶದ ಮಳವಳ್ಳಿ ತಾಲೂಕಿನ ಧನಗೂರಿನಲ್ಲಿದೆ. ಬನ್ನೂರು ಮಾರ್ಗವಾಗಿ ಮೈಸೂರು ಬೆಂಗಳೂರಿನ

ರಸ್ತೆಯಲ್ಲಿ ಹಲಸಹಳ್ಳಿ ಎಂಬ ಹೆಸರುಕಲ್ಲಿನ ಬಳಿಯಿಂದ ನೇರವಾಗಿ ದಕ್ಷಿಣಾಭಿಮುಖವಾಗಿ ಸುಮಾರು ಒಂದುವರೆ ಮೈಲು ದೂರಹೋದರೆ ಧನುಗೂರು ಸಿಕ್ಕುತ್ತದೆ. ಈತನ ಗದ್ದುಗೆಯು ಎಳಂದೂರಿನಲ್ಲಿದೆ. ಈತನು ಈ ನಾಡ ವೀರಶೈವಾಚಾರ್ಯರ ಗುರುಸಂಪ್ರದಾಯಕ್ಕೆ ಸೇರಿದ ಪಟ್ಟಾಧಿಕಾರಿಯು. ಈತನು ಎಳಂದೂರಿನ ಮುಮ್ಮಡಿರಾಜನ ಮನೆಗುರು.

ಶ್ರೀಮದ್ರೇಣುಕಾಚಾರ್ಯರ ಗುರುಸಂಪ್ರದಾಯಕ್ಕೆ ಸೇರಿದ ಧನುಗೂರು ಶ್ರೀಚಿಕ್ಕವೀರ ದೇಶಿಕೇಂದ್ರರ ಉಪದೇಶಾನುಗ್ರಹ, ಪಾಲ್ಕುರಿಕೆ ಸೋಮನಾಥ, ಹರಿಹರ, ಪದ್ಮರಸ, ಮಾಯಿದೇವ, ಜಕ್ಕಣಾರ್ಯ, ಮಲುಹಣ, ಶಿವಲೆಂಕಮಂಚಣ್ಣ ಮೊದಲಾದ ಪಂಡಿತೋತ್ತಮರ ಕಾವ್ಯ ಪರಿಚಯ, ಶಿವತತ್ವದ ಸಂಪೂರ್ಣ ದರ್ಶನ, ವೀರಭದ್ರೇಶ್ವರನ ಸ್ಫೂರ್ತಿ, ಮುದ್ದುಭೂಮಿಪ ಮತ್ತು ಚಿಕ್ಕದೇವರಾಯರಾದಿ ಅರಸುಗಳ ಪ್ರೋತ್ಸಾಹಗಳು ಈತನ ಉತ್ಸಾಹ ಶ್ರದ್ಧೆಗಳಿಗೆ ಬೆಂಬಲವಾದವು. ಈತನ ಕಾವ್ಯ ಜೀವಕ್ಕೆ ರಸಪೋಷಣೆಯನ್ನು ಮಾಡಿದವು. ಈತನಿಗೆ ಚಿಕ್ಕ ವಯಸ್ಸಿನಲ್ಲಿಯೇ ಕನ್ನಡ ಸಂಸ್ಕೃತಗಳೆರಡರಲ್ಲಿಯೂ ತಿಳಿವಿದ್ದಿತು. ಈತನು ಬಾಲ್ಯದಲ್ಲಿಯೇ ಸನ್ಯಾಸಿಯಾಗಿದ್ದನು.

ಎಳೆವರೆಯದೊಳಖಿಳಕಲಾ ।
ವಿಳಾಸಮಂ ಕಂಡು ಮೆಚ್ಚಿ ಬರೆ ಕವಿತಾ ಕೋ ।
ಮಳೆಯವಳ್ಗಿರ್ದೆಯಿತ್ತುಂ ಯತಿ ।
ತಿಲಕಂ ನೀನೆನಿಪುದಿಳೆಗಿದಚ್ಚರಿಯತ್ತಿ ॥

ಈತನು ಹನ್ನೊಂದನೆ ವಯಸ್ಸಿಗೆ ಕವಿತೆ ಬರೆಯುವ ಶಕ್ತನಾದನು.

ನೆರೆವೇಕಾದಶ ವರ್ಷದ ।
ಹರೆಯದೊಳಭವ ಪ್ರಸಾದಬಲದಿಂ ಕವಿತಾ ।
ಕರುಣಿ ಷಡಕ್ಷರದೇವನ ।
ನೆರವಲ್ಲದೆ ಮೆಱೆಯಿಸಿರ್ದರ್ಗಳರಿವನೆ ವಿಬುಧರ್ ॥

ಆಂಗ್ಲ ಸಾಹಿತ್ಯದಲ್ಲಿಯೂ ಪ್ರಖ್ಯಾತ ಪೋಪನು ತನಗೆ ಚಿಕ್ಕ ವಯಸ್ಸಿನಲ್ಲಿಯೇ ಕವಿತಾ ಶಕ್ತಿಯು ಬಂದಿತೆಂದು ಹೇಳಿದ್ದಾನೆ. ಸಂಸ್ಕಾರ

ಪುರುಷೋತ್ತಮರಿಗೆ ಕೇವಲ ಚಿಕ್ಕ ವಯಸ್ಸಿನಲ್ಲಿ ಈ ಬಗೆಯ ಶಕ್ತಿಯು ಪ್ರಾಪ್ತವಾಗದೆ ಇರದು !

ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮ ಪುಣ್ಯದೇಳ್ಗೆಯಿಂ ।
ಮಹಿಯೊಳಿಸತ್ಕವಿತ್ವದ ವಿಷನ್ಮಣಿ ಸಾರ್ಗುಮದೀಗುಮದ್ಭುತಾ ।
ವಹ ಸುಖಮಂ ಲಸತ್ಕವಿಗೆ ಸಾರ್ಚುಗುಮುಜ್ವಲ ಕೀರ್ತಿಯುಂ ಸದಾ ।
ಮಹಿತ ಪದಾರ್ಥಮಂ ಕುಡುಗು ಮೀಶ್ವರನೋಲ್ಮೆಯನುಂಟು
ಮಾಡುಗುಂ ॥

ಬಹು ಜನ್ಮ ಪುಣ್ಯಪರಿಪಾಕದಿಂದ ಕವಿತಾ ಶಕ್ತಿಯು ಬರುತ್ತದೆ. ಯೆನ್ನುವಲ್ಲಿ ಈತನು ಪರಮಶಿವಭಕ್ತನೆಂಬುದು ತಿಳಿಯುತ್ತದೆ. "ಅಗ್ಗದ ಸಕ್ಕಮಿರೆ ಕನ್ನಡ ಮುದಯಿಸಿ ರಂಜಿಸದೆ ಕರ್ಣಕಮನೀಯತೆಯಿಂ" ಎಂಬುವರಿಂದ ಈತನ ಕನ್ನಡಾಭಿಮಾನವು ತಿಳಿಯುಬರುತ್ತದೆ. "ರನ್ನ ಮೊಂದಂ ತಳೆದಹಿತ್ತಾ ಕಂಕೆ ಸರಿವಂದಪುದೇ, ಸತ್ಕವಿಯೊಳ್ ಸರಿವರ್ಪ ನಾವನೊ, ಕೊಟ್ಟಂಗೆ ಬಡತನಂ ಬಂದಪುದೆ, ಸತ್ವಶಾಲಿ ಪಗೆಗಂ ಮರೆ ಹೊಕ್ಕವನೀಯಲೊರ್ಪನೆ, ತನುಭವರಿಲ್ಲದ ಭಾಗ್ಯಮೆಂತುಮೇಂ ಮೆರೆದಪುದೇ, ಆರ್ಭಕವಾಡದಂಗಳಂ ಮಂಗಳಮೆ, ಆಪ್ತ ವಚನದಿಂ ಚಿಂತೆಗೌಷಧಂ ಪೆರತುಂಟೆ ಇಸ್ಟ್ಸನಿಳಿಯೊಳ್ ದೀರ್ಘಸೂತ್ರನೇಂ ಪಡೆದಪನೇ, ನೀತಿಸುರ ಮಹೀರುಹಮರಸ" ಇತ್ಯಾದಿ ಜಾಣ್ನುಡಿಗಳನ್ನು ಒದಿದರೆ ಸಾಕು, ಪುಳಕಿತರಾಗದೆ, ಆನಂದೋತ್ಸಾಹಿಗಳಾಗದೆ ಇರಲು ಸಾಧ್ಯವೇ? ಬದುಕಿನ ತಪಸ್ಸು ಫಲಪ್ರದವಾದುದನ್ನು ಕಂಡು ಕೃತಕೃತ್ಯನಾಗಿ, ಕವಿಗೋಷ್ಠಿಯಲ್ಲಿ ಅಗ್ರಪೂಜೆಗೊಂಡು ಅನುರನಾದ ದೈವಜೀವಿಯ ಜಯಂತಿಯು ನಮಗೆ ಬೇಕಿಲ್ಲವೇ? .

ಪ್ರತಿಯೊಬ್ಬ ಮನುಷ್ಯನೂ ತನ್ನ ಮುಂದಿನ ಪೀಳಿಗೆಗಾಗಿ ಒಂದಲ್ಲೊಂದು ಬಗೆಯಲ್ಲಿ ಏನಾದರಷ್ಟನ್ನು ಕೂಡಿಸಿಟ್ಟು ಹೋಗುವುದು ಹಿಂದಿನಿಂದಲೂ ಬಂದಿರುವ ರೂಢಿಯಾಗಿದೆ. ನಮ್ಮ ಹಿಂದಿನವರು ನಮಗೆ ಬಿಟ್ಟುಹೋದ ಜ್ಞಾನರಾಶಿಯೇ ಸಾಹಿತ್ಯವು. ಇದರಲ್ಲಿ ಹುದುಗಿರುವ ನಮ್ಮ ಬಾಳಿನ ಆಗುಹೋಗುಗಳನ್ನು ಅರಿಯುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಜನರ ಬದುಕನು ದಿನದಿನದ ಐಹಿಕ ಜೀವನದಿಂದಮೇಲೆ,

ದಿವ್ಯದತ್ತವನ ಸೆಳೆದು ಅಲ್ಲಿ ಅವರನ್ನು ತನ್ನ ಆನಂದಾಮೃತದಿಂದ ಸಂತವಿಸಿ, ಬಾಳಿನ ಗುರಿಗೆ ದಾರಿದರ್ಶಕವಾಗುವುದಕ್ಕೆ ನಿರ್ಮಾಣವಾಗುವ ಕೃತಿಯೇ ಕಾವ್ಯವು. ಇದು ಏಕಾಗ್ರತೆ, ಏಕಮುಖತೆ, ಐಕ್ಯತೆ, ರಾಗ ತೀಕ್ಷ್ಣತೆ, ಆದರ್ಶಪ್ರಿಯತೆ, ರಸಾವೇಶ, ಅನುರತ್ವ, ಮಹತ್ವಗಳ ಮಂಗಳಸಂಗಮವು. ತ್ರಿಕಾಲಾಬಾಧಿತ ಸತ್ಯಸೌಂದರ್ಯ ಸಂಪೂರ್ಣವಾದ ಕಾವ್ಯವು ದಿನದಿನಕ್ಕೂ ನವ್ಯಭವ್ಯವ್ಯವಾಗಿ ಹೊಳೆಯುತ್ತದೆ. ಜನತೆಯ ವಿಮರ್ಶೆ ವಿಚಕ್ಷಣೆಯು ಹಾಗೂ ಸಂಶಯ ಪರಿಹಾರದ ಪ್ರತಿಬಿಂಬಿಸುವ ಶಕ್ತಿಯೇ ಕವಿಯು ಹಳೆಯ ಜ್ಞಾನದ ಮೇಲೆ ನವೀನ ಮಹಲನ್ನು ಕಟ್ಟುವ ಜನತಾ ಶಿಲ್ಪಿಯೇ ಕವಿಯು. ಭಗವದ್ವಿಭೂತಿಯ ಆವಿರ್ಭಾವಗಳ ಬಗೆಯಲ್ಲಿ ಸಕಲ ದೇಶಗಳಲ್ಲಿಯೂ ಸರ್ವಸಾಧಾರಣವಾಗಿ ಸರ್ವರ ಆದರಕ್ಕೂ ವಿಶೇಷವಾಗಿ ಪಾತ್ರವಾಗಿರುವ ರಸಪರಿಪೂರ್ಣತೆಯೇ ಕವಿಯು.

> ಯದ್ಯದ್ವಿಭೂತಿ ಮತ್ಸತ್ವಂ ಶ್ರೀ ಮದೂರ್ಜಿತ ಮೇವವಾ ।
> ರಕ್ತವೇವಾಗಚ್ಛತ್ವಂ ಮಮತೇಜೋಂಶ ಸಂಭವಮ್ ॥

ಕವಿಯೊಬ್ಬ ವಿಭೂತಿ, ಯುಗಪುರುಷ ಈತನ ಕಾವ್ಯವು ಜನತೆ ಜಾಗೃತಿಕ ಕಾವ್ಯದ ಉದಯವು ಕವಿಯ ಮನಸ್ಸು. ಕವಿತಾ ಶಕ್ತಿಯ ರಸ ತೀರ್ಥವಿರುವ ಪುಷ್ಕರಿಣಿಯು. ಕವಿಯ ತಪಸ್ಸಿನ ಕಾವಿನಲ್ಲಿ ಬಗೆಬಗೆಯ ಅನುಭವಗಳು ಕಾದು ಕರಗಿ ಧ್ಯಾನ್ಯದ ಕಣ್ಣಿಗೆ ಕಣಿಸು ಪರಿಪೂರ್ಣವಾಗಿ ಕಾವ್ಯಪೂರವಾಗಲು ಸ್ವಯಂ ನಿಲ್ಲುತ್ತದೆ. ತತ್ಫಲವಾಗಿ ಸಿಗುವ ದರ್ಶನದ ಪ್ರದರ್ಶನಕ್ಕೆ ನಿಗ್ರಹ. ಸಂಯಮವು ಅತ್ಯಗತ್ಯವು. ಕಾವ್ಯದ ವಸ್ತು ಕವಿಗೆ ಯಾವದೋ ಒಂದು ಅತೀಂದ್ರಿಯ ಜಗತ್ತಿನಿಂದ ಕಲ್ಪನಾ ರೂಪದಿಂದ ಹೊಳೆಯುತ್ತದೆ ಎಂದು ಶ್ರೀ ಮಧುರ ಚೆನ್ನರು ಹೇಳಿರುವದನ್ನು ನೋಡಿದರೆ ಲೋಕಾನುಭವಗಳು ಬರಿಯ ಭೌತ ಕಾರಣಗಳಾದರೂ ಕವಿಯ ಚಿಂತನೆಗೆ ತಿಂಡಿ ತಿನಸಾಗಿರುತ್ತದೆ. ಲೋಕಾನುಭವಗಳ ಮೇಲಿನ ಒಂದು ಆಧ್ಯಾತ್ಮಿಕ ಚಿಂತನೆಯೇ ಕಾವ್ಯವು.

ಜನಾಂಗವನ್ನು ಸಾಹಿತ್ಯವು ಶೃತಪಡಿಸಿರುತ್ತದೆ ಎಂದಿದ್ದಾನೆ. ಹೆನ್ರಿ ಮಾರ್ತಿನಯು. ಆಯಾಯ ನಾಡಿನ ಜನಾಂಗದನೆಲೆಸೆಲೆ, ಕಲೆನಿಲೆಯು

ಸಾಹಿತ್ಯದಿಂದ ಸಾಂಗೋಪಾಂಗವಾಗಿ ಗೊತ್ತಾಗುತ್ತದೆ. ಯಾವುದೇ ದೇಶಕ್ಕೆ ಮಾನ ಮರ್ಯಾದೆಯು ಸಿಕ್ಕಿದ್ದರೆ ಅದರ ಸಾಹಿತ್ಯದಿಂದಲೇ ಎನ್ನಬೇಕಾಗುತ್ತದೆ. ಅದು ಕಾರಣದಿಂದಲೇ "ದೇಶದ ಬೆಲೆಯು ಮಿಗಿ ಮಿಗಿಲಾಗಿ ಭಾಷೆಯ ಬೆಲೆಯಿಂದ ದೊರಕುತ್ತದೆ" ಎಂದು ನಂಜೇಶನು ನುಡಿದಿರುವುದು ಗೊತ್ತಾಗಲಿ.

ಸುವರ್ಣ ಬದ್ಧಂ ಸ್ಫುರದರ್ಥ ರತ್ನಂ ।
ಸುವ್ಯಕ್ತ ಮಾಧುರ್ಯಗುಣ ಪ್ರಯುಕ್ತಂ ।
ಕೃತಂ ಸುಕಾವ್ಯಂಶ್ರವಣೋ ಚಿತಂಸ ।
ದ್ಬುಧೇಂದ್ರ ಕರ್ಣಾಭರಣಂನ ಕಂಸಾತ್ಯತ್ ॥

ಎಂದರೆ ಈ ಗ್ರಂಥರತ್ನವು ಉತ್ತಮವೂ, ಮನೋಹರವೂ ಆದ ಶಬ್ದ ಸಮುದಾಯ, ಸಮೀಚೀನವಾದ ಅರ್ಥಗೌರವ, ಮೇಲ್ಪಟ್ಟದ ಕಥಾಸಂ ಪತ್ತು ಇವುಗಳಿಂದ ಆವೃತವೂ, ಓಜೋಗುಣ ವಿಶಿಷ್ಟವೂ, ಸದ್ಗುಣಾಂ ಶಭರಿತವೂ, ಜನಜೀವನದಲ್ಲಿ ಶ್ರವಣಾರ್ಹವೂ ಆಗಿ ಪಂಡಿತರ ಶ್ರೋತ ಗಳಿಗೆ ಆಭರಣದಂತಿರುವುದೆಂದು ಕವಿ ಕರ್ಣರಸಾಯನದ ವಿಚಾರವಾಗಿ ನುಡಿದಿದ್ದಾನೆ. ಶಬರ ಶಂಕರ ವಿಲಾಸದ ವಿಚಾರವಾಗಿ ತನ್ನ ಕಾವ್ಯ ವುರಸಿಕರ ಮನಸ್ಸಿಗೆ "ಜೇಂಗೊಡದಂತೆ, ಕಂಬಿಗಳ ಇಂಚಿರದಂತೆ, ಇಂಗಡಲಂತೆ, ಮಾಮರದಂತೆ. ಪಯೋಜದಂತೆ, ಬೆಳದಿಂಗಳ ಸೊಂಪಿನಂತೆ, ನಲ್ಲಳ ನೋಟದಂತೆ ಆನಂದವನ್ನೀಯುತ್ತವೆ. ಎಂದಿದ್ದಾನೆ ಷಡಕ್ಷರ ದೇವನು. ಈತನ ಅಭಿಪ್ರಾಯದಲ್ಲಿ ಕಬ್ಬಿಗನು ಕಾವ್ಯವನ್ನು "ಮನೋಭವನಲರಂಬಿನಂತೆ ಹೇಳತಕ್ಕದ್ದಂತೆ ಉಭಯ ಕವಿತಾ ವಿಶಾರದ ಷಡಕ್ಷರ ದೇವನ ಕಾವ್ಯ ಗಳನ್ನು ಕವಿತೆಯ ಅಂಗಡಿ "ಎನ್ನುವದುಂಟು. ಕವನ ಕಲೆಯ ಗುಟ್ಟು ಗುರಿಗಳನ್ನೂ, ಕಾವ್ಯಾಂಗನೆಯ ಹಾವ ಭಾವ ಗಳನ್ನೂ, ಸಾಹಿತ್ಯದರೀತಿ ನೀತಿಗಳನ್ನೂ ಈತನು ಚನ್ನಾಗಿ ತಿಳಿದಿದ್ದನು. ಮಹಾ ಕಾವ್ಯಗಳಲ್ಲಿರಬೇಕಾದ ಮಾಧುರ್ಯವೂ, ಉಪಮೆಯ ಔದಾರ್ಯವೂ, ಉದಾತ್ತ ರೀತಿಯೂ, ಉಜ್ವಲ ವೃತ್ತಿಯೂ, ಉತ್ತಮ ರಸಾಲಂಕೃತಿಯೂ ಈತನ ಕಾವ್ಯದಲ್ಲಿ ಉದ್ಭವಿಸುತ್ತಿದೆ. ಈತನು ಸಂಸ್ಕೃತ ಜಗತ್ತಿನ ಕವಿಚಕ್ರ ಕಾಳಿದಾಸನಿಗೆಸರಿಸಾಟಿಯಾಗನೇ ?

ತ್ವ ಸೂರ್ಯ ಪ್ರಭವೋ ವಂಶಃ ।
ಕ್ವ ಚಾಲ್ಪ ವಿಷಯಾ ಮತಿಃ ।
ತಿರೇರ್ಷ ದುಸ್ತರಂಮೋಹಾ ।
ದುಡುಪೇ ನಾಸ್ಮಿ ಸಾಗರಂ ॥ ( ರಘುವಂಶ ೧-೨)
ಬ್ರಹ್ಮಾದಯೋನ ಪ್ರಭವಂತಿವಕ್ತುಂ ।
ಭವೈಕ ಭಕ್ತಸ್ಯ ಮಹಾಮಹತ್ವಂ ।
ಕಿಯಾನಹಂ ಭಕ್ತಿ ಶಾಕ್ತಥಾಪಿ ।
ಯಥಾಮತಿಸ್ತೋತುಮಿದಂವದಾಮಿ ॥ ( ಕವಿಕಣಶ ರಸಾಯನ ೧-೬೦ )

ಈತನ ಕಾವ್ಯಶ್ರೀಯಲ್ಲಿನ ಪ್ರೌಢ ಪಾಂಡಿತ್ಯ, ಉದಾತ್ತ ಕಲ್ಪನೆ ಅಭಿಮಾನ, ಆತ್ಮ ವಿಶ್ವಾಸ, ಮನೋವಿಲಾಸವು ಯಾರಿಗೆ ತಾನೇ ಪ್ರಿಯ ವಾಗದು. ಈತನ ಕಾವ್ಯ ರಸಾಸ್ವಾದನೆಯನ್ನು ರಸೂದಸತ್ವ ಮೇಷಾಂ' ಎಂಬ ರುದ್ರಟನ ಉತ್ಪತ್ತಿಯಂತೆ ಕೇವಲ ಹೃದಯದಿಂದಲೇ ಹೊಂದ ಬೇಕಾದುದಿದೆ. ಲೋಕದ ಭಾಗ್ಯವೇ ತೆರೆದಂತೆ ಸಿದ್ಧಕವಿ ಷಡಕ್ಷರ ದೇವನಿಂದ ಬಂದ ಕಲಾನುಭವ, ಸತ್ಯಾ ಸತ್ಯ ಪರೀಕ್ಷಣ ಪ್ರಯೋಗ, ಸ್ವಾತಂತ್ರ್ಯ ಕಲ್ಪನೆ, ಸಾಮಾಜಿಕ ವಿವೇಚನೆ, ತತ್ವ ಸಮೀಕ್ಷೆ, ಜಗ ದ್ಕಲ್ಯಾಣೇಚ್ಛೆಯು ಮಾನವನ ಜೀವನಕ್ಕೆ ಬೇಕಾಗಿಲ್ಲವೇ? ಸತ್ಯಕ್ಕೂ ಆತ್ಮನಿಷ್ಠೆಗೂ ಇದು ಸೇತುವೆಯಾತ್ತಿ. ಈ ಬಗೆಯ ಪುರುಷೋತ್ತಮನ ಕ್ರಿಯಾನಿಷ್ಠೆಯನ್ನು ಅನುಸರಿಸಲು ಈತನ ಜಯಂತಿಯನ್ನು ಪ್ರತಿವರ್ಷವೂ ತಪ್ಪದೆ ಪ್ರತಿಯೊಬ್ಬರೂ ಆಚರಿಸಲಿ. ಕವಿಚರಿತೆಕಾರರು "ಈತನು ಆಧುನಿಕ ಕವಿಯಾದರೂ ಇವನ ಶೈಲಿಯು ನಿರರ್ಗಳವಾಗಿಯೂ, ಮನೋಹರ ವಾಗಿಯೂ ಇರುವುದಲ್ಲದೆ ಇವನ ವರ್ಣನೆಗಳು ಚಮತ್ಕಾರವಾಗಿಯೂ ಇವೆ. ಮುಖ್ಯವಾಗಿ ಇವನ ಕಂದಗಳು ಬಹಳ ರಮಣೀಯವಾಗಿ ಇವೆ." ಎಂದೂ, ಕರ್ನಾಟಕ ಭಾಷಾ ರತ್ನ ಕರಿಬಸವ ಶಾಸ್ತ್ರಿಗಳು "ಷಡಕ್ಷರ ಕವಿಯ ಕೆಲವು ಪದ್ಯಗಳು ಪ್ರಾಚೀನರ ಉದ್ದಾಮ ಗ್ರಂಥಗಳ ಪದ್ಯಗಳಿಗೆ ಸಮಾನವಾದ ಶೈಲಿಯುಳ್ಳವುಗಳಾಗಿಯೂ, ಕೆಲವು ಪದ್ಯಗಳು ಪೂರ್ವ ಗ್ರಂಥಗಳ ಶೈಲಿಗಿಂತ ರಮಣೀಯ ಶೈಲಿಯುಳ್ಳವುಗಳಾಗಿಯೂ, ಲಲಿತವಾದ ಪದಬಂಧವುಳ್ಳವುಗಳಾಗಿಯೂ ಇವೆ. ಗದ್ಯಗಳು ಪುರಾತನ ಗ್ರಂಥಗಳ ಗದ್ಯಗಳಿಗಿಂತ ಶ್ರಾವ್ಯವಾಗಿಯೂ, ಓದುವುದಕ್ಕೆ ಸರಳವಾಗಿಯೂ ಇವೆ. ' ಈತನ ಗ್ರಂಥಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಶಬ್ದಗಳು

ಪ್ರಾಯಃ ಸಮಸವಾಗಿಯೇ ಪ್ರಯೋಗಿಸಲ್ಪಟ್ಟವೆ. ಈ ಕಾಲದಲ್ಲಿ ಚಂಪೂ ಪ್ರಬಂಧವನ್ನಾಗಲೀ, ಪದ್ಯ ಪ್ರಬಂಧವನ್ನಾಗಲೀ ರಚಿಸಲಪೇಕ್ಷೆಯುಳ್ಳವರು ರಾಜಸೇಖರ ವಿಳಾಸದ ಸರಣಿಯನ್ನು ಅನುಸರಿಸಿದರೆ ಅವರ ಗ್ರಂಥ ಶ್ಲಾಘನೀಯವಾಗುವುದು. ಕರ್ಣಾಟಕ ಭಾಷಾಭ್ಯಾಸಿಗಳು ಈ ಗ್ರಂಥವನ್ನು ಅರ್ಥವತ್ತಾಗಿ ಓದಿದರೆ ಉತ್ಪತ್ತಿಯುಂಟಾಗುವುದು " ಎಂದೂ ಶ್ರೀ ಅ. ನ. ಕೃಷ್ಣರಾಯರು " ಷಡಕ್ಷರಿ ದೇವ ತನ್ನ ಪ್ರೌಢಪಾಂಡಿತ್ಯ ಪ್ರತಿಭಾಮಯವಾದ ಕಾವ್ಯ ವೈಖರಿಯಿಂದ ನುಡಿಯೊಡತಿಯನ್ನು ಬಗೆಬಗೆಯಾಗಿ ಸಿಂಗರಿಸಿದ್ದಾನೆ. ಇವನು ಈಚಿನವನಾದರೂ ಇವನ ಕೃತಿಗಳಲ್ಲಿ ಪ್ರಾಚೀನ ಕವಿಗಳ ಧೋರಣೆ, ಬಿಕ್ಕಟ್ಟು, ರಸಪುಷ್ಟಿಗಳು ಮೂಡಿವೆ. ವೀರಶೈವ ಮಹಾ ಕವಿಗಳಲ್ಲಿ ಷಡಕ್ಷರಿಯನ್ನು ಕೊನೆಯವನೆಂದು ಪರಿಗಣಿಸಬಹುದು " ಎಂದೂ ಮಹಾ ಕವಿ ಷಡಕ್ಷರದೇವನ ವಿಚಾರವಾಗಿ ಹೇಳಿರುವುದು ಎಲ್ಲರ ಗಮನಕ್ಕೆ ಬರಲಿ. ಸಾಹಿತ್ಯಕ್ಕೆ ನಿಷ್ಕಾಮ ಬುದ್ಧಿಯಿಂದ ಸಲ್ಲಿಸಿರುವ ಈತನ ಸೇವೆಯು ನೆನೆಯತಕ್ಕಂತಿದೆ. ಪರಮೇಶ್ವರನು ಕೊಟ್ಟ ಪ್ರತಿಭೆ ಪಾಂಡಿತ್ಯವನ್ನು ನಿಷ್ಕಾಮ ಬುದ್ಧಿಯಿಂದ ಸತ್ಕಾವ್ಯಗಳ ನಿರ್ಮಾಣಕ್ಕೆ ವಿನಿಯೋಗಿಸಿ ಸಾಹಿತ್ಯದಲ್ಲಿ ಅದ್ಭುತ ಪ್ರಯೋಗವನ್ನು ಪ್ರದರ್ಶಿಸಿ ವಿದ್ವತ್ಕವಿಶಿರೋಮಣಿಯಾಗಿ ಬೆಳಗಿದ ಷಡಕ್ಷರದೇವನು ನಮಗೂ, ನಮ್ಮ ನಾಡಿಗೂ ಸತತವೂ ಅಭಿವಂದ್ಯನಾಗಿದ್ದಾನೆ. ಅಂತಹ ಉದ್ದಾಮ ಶೀಲನ ಉದಾರತೆಯು ಉಪರದ ಉದ್ಧಾರಕ್ಕಾಗಿ ಉಡುಗದೆ ನಮ್ಮೆಲ್ಲರ ಮನಸ್ಸಿನಲ್ಲಿ ಮೂಡಿ ಬೆಳೆಯಲಿ. ಮಹಾ ಕವಿಗಳ ಜನ್ಮಸ್ಥಳ ಹಾಗೂ ಸಮಾಧಿಯ ಸಂರಕ್ಷಣೆಯ ಹೊರೆಯನ್ನು ಹೊರುವುದು ಈ ಕವಿಯ ಜಯಂತಿಯ ದಿನದಲ್ಲಾದರೂ ಬರಲಿ. ಕವಿಯ ಕಾವ್ಯಗಳನ್ನು ಜನರಿಗೆ ಮಂದಟ್ಟಾಗುವಂತೆ ಗಮಕಿಗಳಿಂದ ಓದಿಸಬೇಕು. ಜನರೆಲ್ಲರ ಉಪಯೋಗಕ್ಕಾಗಿ ಈ ಕೃತಿಗಳ ಜನಪದಾವೃತ್ತಿಯ Popular Eolition ಪ್ರತಿಗಳೂ ಹೊರಬರಬೇಕು. ಕಥೆಗಾರರು, ನಾಟಕಕಾರರು ಇವುಗಳನ್ನು ಪ್ರಚಾರಪಡಿಸಬೇಕು. ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲಿಯೂ ಕವಿಯ ಜಯಂತಿಯು ಮಹಹಬ್ಬವಾಗಿ ಪರಿವರ್ತಿತವಾಗಬೇಕು. ಅಂದೇ ಮಹಾ ಕವಿಯ ಜಯಂತಿಯನ್ನು ಆಚರಿಸಿ ಧನ್ಯರಾಗಬಲ್ಲೆವು. ಕರ್ನಾಟಕ ಕವಿಚೂತ ವನವನ್ನು ಹಾಯ್ದು ಹೋಗಿ ಷಡಕ್ಷರಿಯ ದುರ್ಗವನ್ನು ಸೇರಿ ತಲುಪಿದ ಸಾಹಿತಿಯು ಪುಣ್ಯ ಪುರುಷಾರ್ಥವನ್ನು ಪಡೆದಂತೆಯೇ ಸರಿಯು.

---

# ಅಖಿಲ ಭಾರತ ಶಿವಾನುಭವ ಸಂಸ್ಥೆ ಧಾರವಾಡ.

## ಎಂಟನೆಯ ಅಧಿವೇಶನ ಧಾರವಾಡ.

ಇದರ ವತಿಯಿಂದ ತಾ॥ ೨೯-೧-೫೨ನೇ ದಿವಸ ಸ್ವಾಗತ ಸಂಘಾಧ್ಯಕ್ಷರಾದ

**ಶ್ರೀ. ಜಿ. ಎ. ಹಿರೇಮಠ,**

**ನಿವೃತ್ತ ಡೆಪುಟಿ ಕಲೆಕ್ಟರ, ಧಾರವಾಡ ಇವರು ಮಾಡಿದ**

**ಭಾ ಷ ಣ.**

—o—

ಈ ನಮ್ಮ ಸಮ್ಮೇಲನವು ಅಖಿಲಭಾರತ ಶಿವಾನುಭವ ಸಂಸ್ಥೆಯು ವತಿಯಿಂದ ನೆರೆಯಿಸಿದ ಎಂಟನೇಯದಾಗಿದೆ. ಈ ಸಂಸ್ಥೆಯು ೧೯೪೨ನೇ ಇಸ್ವಿಯಲ್ಲಿ ಸ್ಥಾಪನೆಯಾಗಿದೆ. ಹಿಂದಿನ ಸಮ್ಮೇಲನಗಳು ಹಿರೇಕೇರೂರ, ಹಂಸಭಾವಿ, ಮುಧೋಳ, ನವಲಗುಂದ ಮತ್ತು ಇದೇ ಧಾರವಾಡದಲ್ಲಿ ಜರುಗಿರುತ್ತವೆ. ಸಂಸ್ಥೆಯವರು ಸಮ್ಮೇಲನಗಳಿಂದಲ್ಲದೆ, ಪತ್ರಿಕೆಗಳ ಮುಖಾಂತರವಾಗಿಯೂ ಪ್ರಚಾರ ಕಾರ್ಯಮಾಡುತ್ತಲಿದ್ದಾರೆ. ಮೊದಲು ಕೈಪತ್ರಿಕೆಗಳನ್ನು ಹೊರಡಿಸಿದರು. ಅವಕ್ಕೆ ತಿಳುವಳಿಕೆ ಪತ್ರಿಕೆಯೆಂದು ಅಂದರು. ಪತ್ರಿಕೆ ಕಂಟ್ರೋಲ ನಂತ ಮೇಲೆ 'ಸಾವಧಾನ'ವೆಂಬ ಪಾಕ್ಷಿಕ ಪತ್ರಿಕೆಯನ್ನು ಹೊರಡಿಸಹತ್ತಿದ್ದಾರೆ ಶ್ರೀ ನಾಗಭೂಷಣ ಶಾಸ್ತ್ರಿಗಳು ಅದರ ಸಂಪಾದಕರು. ಅದನ್ನು ಬೆಳೆಯಿಸಬೇಕೆಂದು ನಮ್ಮ ನಿರಂಜನ ಮೂರ್ತಿಗಳು ಟೊಂಕಕಟ್ಟಿದ್ದಾರೆ. ಅವರು ಯಾರೆಂದರೆ: ಶ್ರೀ. ನಿ. ಪ್ರ- ನವಲಗುಂದ, ಗುಳೇದಗುಡ್ಡ, ಅಮೀನಗಡ, ಕರ್ಜಗಿ, ಅರಭಾವಿ, ನಂದಿವೇರಿ, ಹೊಸಹಳ್ಳಿ, ಹುಬ್ಬಳ್ಳಿ ರುದ್ರಾಕ್ಷಿಮಠ, ಯಕ್ಕುಂಡಿ, ಮೋಟಬರೋಣ, ಧಾರವಾಡ ಸ್ವಾಮಿಗಳು.

ಇಂಥ ಘನವಾದ ಸಹಾಯದಿಂದ ಪತ್ರಿಕೆಯು ಕ್ರಮೇಣ ಊರ್ಜಿತಾವಸ್ಥೆಯನ್ನು ಹೊಂದುವದರಲ್ಲಿ ಸಂಶಯವಿಲ್ಲ. ಎಷ್ಟೋ ದೇಣಿಗೆಗಳು ಬಂದಿವೆ. ಜಗದ್ಗುರು ಪೀಠದಿಂದ ಒಂದು ಸಾವಿರ ರೂಪಾಯಿ ಮಂಜೂರವಾಗಿದೆ. ಪತ್ರಿಕೆಗಾಗಿ ಶಿವಾನುಭವ ಬರಹಗಳು ಬರೆದು ಬರುವದು ಬೇಕಾಗಿದೆ. ಶಿವಾನುಭವಿಗಳು ತಮ್ಮ ಅನುಭವಗಳನ್ನು ಬರೆದು ಕಳಿಸಿ ಕೊಡಬೇಕೆಂದು ಸಂಸ್ಥೆಯ ವತಿಯಿಂದ ನಾನು ವಿನಂತಿಸಿಕೊಳ್ಳುತ್ತೇನೆ.

ಮತ ತತ್ವಗಳನ್ನು ಬರೆಯಿಸಿ ಪ್ರಚಾರ ಮಾಡುವ ಮತ್ತೊಂದ್ಕು ಕಾರ್ಯವದೆ. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳನ್ನು ಸಣ್ಣ ಗ್ರಂಥ ರೂಪದಲ್ಲಿ ಆಸ್ಥಾನ ವಿದ್ವಾನ್ ಸರ್ವದರ್ಶನ ತೀರ್ಥಪಂಡಿತ ಶ್ರೀ. ನಾಗೇಶ ಶಾಸ್ತ್ರಿಗಳು. ಬಳ್ಳಾರಿ ಇವರು ಬರೆದು ಕೊಟ್ಟಿದ್ದಾರೆ. ಅವುಗಳಲ್ಲೊಂದನ್ನು ಇದೇ ಸಮ್ಮೇಲನದಲ್ಲಿ ಪ್ರಸಿದ್ಧಿಸಲಾಗುವದು.

**ಶಿವಾನುಭವ ಮಂಟಪ.**

ಬಸವಣ್ಣನವರ ಕಾಲದಲ್ಲಿ ಶಿವಾನುಭವ ಮಂಟಪವು ಇದ್ದಿತು. ಆದರ ಕಾರ್ಯಕಲಾಪದ ರೂಪಗಳ ಒಂದು ಸಂಗ್ರಹವು ಶೂನ್ಯಸಂಪಾದನೆ ಗ್ರಂಥವಾಗಿದೆ. ಆ ಶಿವಾನುಭವ ಮಂಟಪದ ಛಾಯು ಈ ನವ್ಮ ಶಿವಾನುಭವ ಸಂಸ್ಥೆಯಾಗಿದೆ. ಆ ಪ್ರಸಿದ್ಧ ಮಂಟಪದ ನಿಲುವು ನಮ್ಮದಲ್ಲ. ಆದರೂ ನಮ್ಮ ಚಿಕ್ಕಪುಟ್ಟ ಅನುಭವಗಳಿಂದ ಮೊದಲು ಮಾಡಿ ಹೆಚ್ಚು ಹೆಚ್ಚಿನ ತರಗತಿಗೆ ಹೋಗಬಹುದೆಂಬದು ನಮ್ಮ ಮನದಾಸೆ.

**ಅನುಭವ.**

ಅನುಭವಗಳೆಂದರೇನು ನೋಡುವಾ. Intuition ಅಂದರೆ ಸಹಜ ಜ್ಞಾನ, ಅಂದರೆ ಪಂಚೇಂದ್ರಿಯಗಳಿಂದಲ್ಲದೆ ತಮ್ಮಿಂದತಾವೇ ಹೊಳೆಯುವ ಜ್ಞಾನಗಳೇ ಅನುಭವಗಳು. ಏನೇನೋ ನೆನಪು ಮಾಡಿಕೊಳ್ಳುತ್ತೇವೆ. ನೆನಪಾಗುವದಿಲ್ಲ. ನೆನಪು ಮಾಡಿ ಮಾಡಿ ಬೇಸತ್ತು ಬಿಟ್ಟು ಬಿಡುತ್ತೇವೆ. ಮರೆತುಹೋಗುತ್ತದೆ. ಕೆಲ ಹೊತ್ತಿನ ಮೇಲೆ ನಮಗೆ ಬೇಕಾದದು ತಟ್ಟನೆ ತನ್ನಿಂದ ತಾನೇ ಹೊಳೆಯುತ್ತದೆ ಇದು ನಮ್ಮೆಲ್ಲರ ಅನುಭವವು. ಬಿಕ್ಕಟ್ಟಿನ ಸಮಸ್ಯೆಗಳ ಚಿಂತನೆ ಮಾಡಿಯಾಗಲಿ ಕಠಿಣ ಪ್ರಸಂಗಗಳಲ್ಲಿ ದಾರಿತೋರದೆಯಾಗಲೀ ವಿಚಾರಮಾಡಿ ಮಾಡಿ ಮರೆತು ಬಿಟ್ಟರಲು ಕಾಲಾಂತರದಲ್ಲಿ ಸಮಸ್ಯೆಗಳ ಪರಿಹಾರವು ಪ್ರಸಂಗಗಳ ಉಪಾಯಗಳು ಫಕ್ಕನೆ ತೋಚುವವು. ಇವು ಕೆಲ ಕೆಲವರ ಅನುಭವಗಳು. ಗ್ರಾಹಾಮ ವಾಲೆಸ್ ಎಂಬವರು ಇವಕ್ಕೆ ನಾಲ್ಕು ಮಟ್ಟಗಳನ್ನು ಕಲ್ಪಿಸುತ್ತಾರೆ. ಸಮಸ್ಯೆ ಚಿಂತನೆ, ಮರೆತು ಕಳೆಯುವ ಕಾಲ, ಫಕ್ಕನೆ ಹೊಳೆಯುವ ಜ್ಞಾನ, ಅದನ್ನು ಕ್ರಿಯಾರೂಪದಲ್ಲಿ ಯೋಚಿಸುವ ಬಗೆ, ಎಂಬುದಾಗಿ ಈ ಮಟ್ಟಗಳನ್ನೇ ಪ್ರಭುದೇವರು ಲಿಂಗಾಂಗ ಸಾಮರಸ್ಯದಲ್ಲಿ ವ್ಯಕ್ತ ಮಾಡಿದ್ದಾರೆ. ಆದರೆ ಮರೆತು ಕಳೆಯುವ ಕಾಲಗಳು ಅವರಲ್ಲಿ ಒಂದಲ್ಲದೆ ಹೆಚ್ಚಾಗಿ ತೋರಿಸಲ್ಪಟ್ಟವೆ. ಅವರು ಹೇಳುವದು.

ಏಕಂ ಏಕವಾದ ವಸ್ತುವ ಲೋಕ ಲೋಕಂಗಳರಿಯವು.
ಸ್ಥೂಲ ಸೂಕ್ಷ್ಮವೆನ್ನುತಿಪ್ಪರೆಲ್ಲರು
ಆತನೀತ ಬೇರೆ ಮತ್ತೊಬ್ಬನಾತನೆಂಬ ಭ್ರಮೆಯಲ್ಲಿ
ಭೂತದು ಕೆಲವು ಕಾಲ ಅದು ತೊಡೆದು ಹೋಯಿತ್ತು
ಬಳಿಕ ಶೂನ್ಯ ವರ್ತಿಸುತ್ತಿದ್ದಿತೊಂದು ಕೆಲವು ಕಾಲ
ಆದು ತೊಡೆದು ಹೊಯಿತ್ತು
ಬಳಿಕ ಕಾಳಾಂಧಕಾರ ವರ್ತಿಸುತ್ತಿದ್ದಿತೊಂದು ಕೆಲವು ಕಾಲ
ಅದು ತೊಡೆದು ಹೊಯಿತ್ತು
ಬಳಿಕ ಮಹಾಪ್ರಕಾಶದ ಮಹಾ ಬೆಳಗು
ಇಂತಹ ಕಾಲಂಗಳು ಈ ಪರಿಯೂ ತಿರುಗಿ
ಬರುತ್ತಿಹವು ಕಾಣಿರೆ..............
ಗುಹೇಶ್ವರಲಿಂಗ, ನಿರಂಜನ, ನಿರಾಳ ನಿರಾಮಯ.

ಇದರಲ್ಲಿ ವಿಶೇಷವೆಂದರೆ, ಚಿಂತನೆಗಳು ಶೂನ್ಯವಾಗಿ ಕಾಲಾಂತರದಲ್ಲಿ ಬೆಳಕು ಕಾಣುವದು. ಕಾಲಾಂತರವೇ ಇದರ ವಿಶೇಷ.

ಇನ್ನೊಂದು ಅನುಭವದ ಉದಾಹರಣೆಯನ್ನು ನಾವು ಚಂದ್ರಹಾಸನ ಕಥೆಯಲ್ಲಿ ಕಾಣುತ್ತೇವೆ. ಪರರಾಜರು ಕುಂತಳ ದೇಶದ ಮೇಲೆ ದಾಳಿಮಾಡಿ ಆ ರಾಜನನ್ನು ಸೋಲಿಸಿ ಅವನ ಚಿಕ್ಕ ಮಗು ಚಂದ್ರಹಾಸನನ್ನು ಕೊಲೆಗಡಕರ ಕೈಗೆ ಕೊಟ್ಟು ಅಡವಿಯಲ್ಲಿ ಕೊಂದು ಬರಹೇಳಿದರು. ಆದರೆ ಕೊಲೆಗಡಕರಿಗೆ ದಯೆಹುಟ್ಟಿ ಮಗುವನ್ನು ಕೊಲ್ಲಲಾರದೆ ಅಡವಿಯಲ್ಲಿ ಜೀವಂತ ಬಿಟ್ಟು, ಆ ಮಗುವಿಗೆ ಕೈಯೊಂದರಲ್ಲಿ ಆರು ಬೆರಳಿರಲು, ಆ ಆರನೇ ಬೆರಳನ್ನು ಕೊಯ್ದು ರಕ್ತದ ಗುರ್ತನ್ನು ತಂದು ತೋರಿಸಿ, ಕೊಂದೆವೆಂದು ಹೇಳಿಬಿಟ್ಟರು. ಅವರು ಕೊಲ್ಲದಿರುವದಕ್ಕೆ ಕಾರಣವೇನು? ಬುದ್ಧಿಯು ಕಾರಣವಲ್ಲ. ಯಾಕಂದರೆ ಅವರಲ್ಲಿ ಅವರ ಸ್ವಾರ್ಥವಿರಲಿಲ್ಲ. ಮನಸ್ಸು ಕಾರಣವಲ್ಲ ಯಾಕಂದರೆ ಅದು ಪಂಚೇಂದ್ರಿಯಗಳ ವಿಷಯವಾಗಿರಲಿಲ್ಲ. ಭಾವನೆ, ದಯಾಭಾವನೆ ಇದಕ್ಕೆ ಕಾರಣವೆಂದು ಹೇಳಬಹುದು. ಇಂಥ ದಯಾ ಭಾವನೆಗಳು ಜನರ ಅನುಭವದ ಮಾತು. ದಯೆ, ಕರುಣೆ ಮುಂತಾದ ಭಾವನೆಗಳಿಗೆ ಶಿವಾನುಭವ ಅನ್ನುತ್ತಾರೆ. ಕೊಲೆಗಡಕರ ಶಿವಾನುಭವವು ಅದು. ಶಿವನೇ ಅವರ ಭಾವದಲ್ಲಿ ಬಂದು ಅವರಿಗೆ ಕೊಲ್ಲಗೊಡಲಿಲ್ಲ.

ನಾವು ಏನೊಂದು ಕಾರ್ಯಮಾಡಲುದ್ಯುಕ್ತರಾದಾಗ ಪ್ರಸಂಗವ ಶಾತ್, ನಮ್ಮ ಮನಸ್ಸಿನಲ್ಲಿ ಒಂದು ಭಾವನೆಯು ಮೂಡಿ 'ಬೇಡ, ಮಾಡ ಬೇಡ' ಎಂದೆನಿಸುತ್ತದೆ. ಸಾಕ್ರೆಟೀಸನಿಗೆ ಹೀಗೆ ಆಗಿಂದಾಗ್ಗೆ 'ಬೇಡ' ಎಂದು ಹೇಳುವ ಮನೋದೇವತೆಯು ಇದ್ದಿತು. ಮಹಾತ್ಮ ಗಾಂಧಿ ಯವರಿಗೆ ಒಳಬೋಧ ಮಾಡುವ ಅಂತಃ ಪ್ರೇರಣೆ ಇದ್ದಿತು. ಯೋಗಿ ಗಳಿಗೆ, ಶಿವಪೂಜಾನಿರತರಿಗೆ ಇಂಥ ಭಾವನೆಗಳಿರುವದು ಸಹಜ. ಸೊಲ್ಲಾ ಪುರದ ಶರಣರು ಯಾವದೊಂದು ಬೇಡಾದ ಮಾತಿಗೆ "ಅಪ್ಪ ಬೇಡ ಅಂತಾನೆ" ಅಂತ ಹೇಳುತ್ತಿದ್ದರಂತೆ. ಅಂದರೆ ಯಾವಾಗಲೂ ಅವರ ಚಿತ್ತವು ಅಪ್ಪನಲ್ಲಿ ಇರುತ್ತಿದ್ದಿತು, ಬಸವಣ್ಣನವರೂ ಸದಾಕಾಲ ಕೂಡಲ ಸಂಗನ ಧ್ಯಾನದಲ್ಲಿ ನಿರತರಾಗಿದ್ದರು. 'ನಿಮ್ಮ ನಾಮಾಮೃತಣೆ ಇಲ್ಲದೆ ಉಗುಳು ನುಂಗಿದನಾದರೆ ನಿಮ್ಮಾಣೆ' ಎಂದು ಅಂದಿರುವರು. ಅವರ ವಚನಗಳು 'ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ' ಮುಂತಾಗಿ ಬಹುವಾಗಿ ನಿಷೇಧಾರ್ಥದಲ್ಲಿರುವದು ಕಂಡುಬರುತ್ತದೆ,

ಬೇಡ ಎಂಬ ಭಾವನೆಯಲ್ಲದೆ ಬೇರೆ ಬೇರೆ ತರದ ಸ್ಫೂರ್ತಿಜ್ಞಾನ ಗಳು ಜನರಿಗೆ ಇರುವದಾಗಿ ತೋರುತ್ತದೆ. ಕೆಲವರಿಗೆ ಕವಿತ್ವಮಾಡುವ ಸ್ಫೂರ್ತಿಯು ಇರುತ್ತದೆ. ಕಾಳಿದಾಸನೊಬ್ಬ ವರ ಕವಿಯು. ಕೆಲವರು ಹೊಸ ಹೊಸ ಶಾಸ್ತ್ರೀಯ ಶೋಧಗಳನ್ನು ಮಾಡಿದ್ದಾರೆ. ಜಕಣಾಚಾ ರ್ಯನ ಶಿಲ್ಪಕಲೆಯನ್ನು ನಾವು ನೋಡಿದ್ದೇವೆ. ಅವನೂ ಒಬ್ಬ ವರ ಶಿಲ್ಪಿಯೇ ಹೌದು.

ಬೇಡವೆಂಬ ಪ್ರೇರಣೆಗಳು ಮೊದಲುಮಟ್ಟದವು. ಇವು ನಮ್ಮ ಷಟ್ ಸ್ಥಲದಲ್ಲಿ ಪ್ರಾಣಲಿಂಗಿ ಸ್ಥಲದ ಅನುಭವಗಳಿರಬಹುದೆಂದು ತೋರುತ್ತದೆ. ಇನ್ನೂ ಮೇಲುತರದ ಪ್ರೇರಣೆಗಳೂ ಕಂಡುಬರುತ್ತವೆ. ಅವು ಶರಣಸ್ಥಲದವು. ಅವು ಪ್ರಸಾದರೂಪ. ಪರಾಶಕ್ತಿಯ ಸ್ವಾತಂತ್ರ್ಯ ರೂಪಗಳು. ಸಾಯಕಾ ಲಾಜಿಯಲ್ಲಿ ಸ್ವಯಂಸ್ಫೂರ್ತಿಗಳೆಂದು ಅನ್ನುತ್ತಾರೆ. ಇವಕ್ಕೂ ಮೇಲ್ಪಟ್ಟ ಪ್ರೇರಣೆಗಳು ದೇವಸಾಕ್ಷಾತ್ಕಾರವೆಂದು ಕಲ್ಪಿಸುವಾ. ಬಸವಣ್ಣನವರ ವಚನ ಗಳ ಮೇಲಿಂದ ಅವರಿಗೆ ಕೂಡಲಸಂಗನ ಪ್ರೇರಣೆ ಇದ್ದುದಾಗಿ ತೋರು ತ್ತದೆ. ಬಿಜ್ಜಳನ ಸಭೆಯಲ್ಲಿ ತಾಮ್ರಪಟವನ್ನೋದಿ ಸಿಂಹಾಸನದ ಅಡಿ ಯಲ್ಲಿ ನಿಧಿ ಇರುವದಾಗಿ ಹೇಳಿದ್ದು ಇಂಥದೊಂದು ಪ್ರೇರಣೆಯಾಗಿರ ಬೇಕಲ್ಲವೇ ?

ಯೋಗ, ಶಿವಯೋಗ, ಶಿವಪೂಜೆಗಳಿಗೆ ಈ ಪ್ರೇರಣೆಗಳೇ ಫಲಗಳು. ಆದರೆ ಈ ಪ್ರೇರಣೆಗಳು ನಂಬಲಿಕ್ಕೆ ತಕ್ಕವುಗಳೋ ಅಲ್ಲವೋ: ಎಂದು ತಿಳಿದುಕೊಳ್ಳುವದು ಅಗತ್ಯವದೆ. ಪ್ರೇರಣೆಗಳು ಒಮ್ಮೊಮ್ಮೆ ದುಷ್ಟಪ್ರೇರಣೆಗಳಿರಬಹುದು. ವಂಚನೆಗಳೂ ಇರಬಹುದು. ಆದಕ್ಕಾಗಿ ಸಾವಧ ಇರತಕ್ಕದ್ದು. ಜರ್ಮನಿಯ ಹಿಟ್ಲರನಿಗೆ ಪ್ರೇರಣೆಗಳಿದ್ದವು. ಅವನು ಮೊದಲಿಗೆ ತನ್ನ ಅಧಿಕಾರಿಗಳ ಸಲಹೆಗಳನ್ನು ಅಲ್ಲಗಳೆದು ತನ್ನ ಪ್ರೇರಣೆಯಂತೆ ವರ್ತಿಸಿ ಜಯಶೀಲನಾದನು. ಆದರೆ ಕಾಲಾಂತರದಲ್ಲಿ ಅವನ ಪ್ರೇರಣೆಗಳೇ ಅವನ ಮತ್ತು ಜರ್ಮನಿಯ ನಾಶಕ್ಕೆ ಕಾರಣವಾದವು. ಕೆಲವರು ದೇವಪ್ರೇರಣೆಯೆಂದು ಹೇಳಿ ದುಷ್ಟ ವ್ಯವಹಾರಗಳನ್ನು ಮಾಡುತ್ತಾರೆ. ಆದ್ದರಿಂದ ಪ್ರೇರಣೆಗಳನ್ನು ಪರೀಕ್ಷಿಸಿ ಅವುಗಳ ನಿಜವನ್ನು ಕಂಡುಕೊಳ್ಳುವದು ಅವಶ್ಯ. ತಾವೆಲ್ಲ ಶಿವಾನುಭವಿಗಳು. ಪರಸ್ಪರ ವಿಚಾರ ಮಾಡಿ ತಮ್ಮ ತಮ್ಮ ಅನುಭವಗಳ ನಿಜವನ್ನು ಕಂಡುಕೊಳ್ಳಬಹುದು. ಆದಕ್ಕಾಗಿ ಈ ನಮ್ಮ ಶಿವಾನುಭವ ಸಂಸ್ಥೆಯು.

ಪೂರ್ವಕಾಲದಲ್ಲಿ ದೇವರನ್ನು ಕಂಡುಕೊಳ್ಳುವವರು ಸನ್ಯಾಸಿಗಳಾಗಿ ಅರಣ್ಯವಾಸಮಾಡಿ ಯೋಗಾಭ್ಯಾಸದಿಂದ ದೇವ ಸಾಕ್ಷಾತ್ಕಾರ ಪಡೆಯುತ್ತಿದ್ದರು. ಕಾಲಾಂತರದಲ್ಲಿ ಸನ್ಯಾಸವು ವೈರಾಗ್ಯಕ್ಕೆ ಮಾರ್ಪಾಟಾಯಿತು. ಅರಣ್ಯ ವಾಸವು ವಿಷಯಭೋಗಗಳನ್ನು ತ್ಯಜಿಸಿ ಮಠ ಮಾನ್ಯಗಳ ವಸತಿಯಾಯಿತು. ಯೋಗಗಳು ಪೂಜಾ ಪಾರಾಯಣಗಳಾದವು. ಈ ಪ್ರಗತಿಯಲ್ಲಿ ನಮ್ಮ ಶರಣರು ಶಿವಯೋಗವನ್ನು ಕಲ್ಪಿಸಿ ಶಿವಪೂಜಾ ನಿರತರಾದರು. ಈಶ್ವರ ಪ್ರಣಿಧಾನವೇ ಇವೆಲ್ಲವುಗಳ ಇಂಗಿತವು. ಆದಕ್ಕಾಗಿ ಸನ್ಯಾಸವೂ ಅರಣ್ಯವಾಸವೂ ಅವಶ್ಯವೆನಿಸಲಿಲ್ಲ. ಭಗವದ್ಗೀತೆಯಲ್ಲಿ ಕರ್ಮಯೋಗಕ್ಕೆ ಸ್ಥಾನವನ್ನು ಕಲ್ಪಿಸಿ ನಿಷ್ಕಾಮ ಕರ್ಮವನ್ನು ಪ್ರತಿಪಾದಿಸಿದರು. ಯೋಗವಾಸಿಷ್ಟದಲ್ಲಿ ನಿಷ್ಕಾಮ ಕರ್ಮದ ವಿವೇಚನೆಯನ್ನು ಚೂಡಾಲಾ ಚೂಡಾಲೀ ಎಂಬ ಕಥೆಯಲ್ಲಿ ಹೇಳಿದ್ದಾರೆ. ನಿಷ್ಕಾಮ ಅಂದನೆ ವೈರಾಗ್ಯವೆಂಬರ್ಥದಲ್ಲಿ ಅದು ಇರುವದಾಗಿ ತೋರುತ್ತದೆ. ಅದಾದರೂ ಅರ್ಥಪೂರ್ಣವಾದುದಲ್ಲ. ನಿಷ್ಕಾಮ ಕರ್ಮ ಅಂದರೆ ಉದ್ದೇಶವಿಲ್ಲದ ಕರ್ಮ. ಇದು ವಿರೋಧಾಭಾಸ. ಕರ್ಮ ಅಂದರೆ ಉದ್ದೇಶ ಪೂರಿತವಾದುದು. ಉದ್ದೇಶವಿಲ್ಲದ ಕರ್ಮ ಹ್ಯಾಗಿರಬಹುದು ?

ಶ್ರೀ ಶಂಕರಾಚಾರ್ಯರು ಇದಕ್ಕೂ ಮುಂದೆ ಹೋಗಿ 'ಯದ್ ಯದ್ ಕರ್ಮ ಕರೋಮಿ ತದ್ ತದ್ ಅಖಿಲಮ್ ಶಂಭೋ ತವಾರಾಧನಮ್' ಎಂದು ಸ್ತುತಿಸಿದರು. ಶಂಕರಾಚಾರ್ಯರು ಲಾಕ್ಷಣಿಕವಾಗಿ (Symbolically) ಸನ್ಯಾಸಿಯಾದರೂ ಜನಗಳಕೂಡ ವರ್ತಿಸಿ ಧರ್ಮದ ಅವಗತಿಯನ್ನು ತಡೆದು ತತ್ವ ಪರಿಶೀಲನೆಮಾಡಿ ಜನಗಳಕೂಡ ವರ್ತಿಸಿ ಧರ್ಮದ ಅವಗತಿಯನ್ನು ತಡೆದು ತತ್ವ ಪರಿಶೀಲನೆಮಾಡಿ ಜನ ಹಿತಾರ್ಥ ಜೀವನವನ್ನು ಕಳೆದು ಹೆಸರುವಾಸಿಯಾದರು.

ನಮ್ಮ ಅಣ್ಣ ಬಸವಣ್ಣನವರು ಇದಕ್ಕೆ ಮುಂದುವರಿದರು. ಬಸವಣ್ಣನವರು ಸಂನ್ಯಾಸಿಯಲ್ಲ. ಅಗದೀ ಪ್ರಾಪಂಚಿಕರು. ಅರಣ್ಯವಾಸಿಗಳಲ್ಲ. ಜನಜಂಗುಳಿಯ ಮಧ್ಯ ಬಿಜ್ಜಳನ ಮಂತ್ರಿಗಳಾಗಿದ್ದವರು. ಅವರದು ನಿಷ್ಕಾಮ ಕರ್ಮವಲ್ಲ ಸಹಜಾಚರಣೆ. ಅವರು ತಮ್ಮ ಜೀವನದ ಉದ್ದೇಶವನ್ನು ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

ಹೊತ್ತಾರೆ ಎದ್ದು ಕಣ್ಣು ಹೊಸೆಯುತ್ತ ಎನ್ನೊಡಲಿಂಗೆ ಎನ್ನೊಡವೆಗೆ ಎನ್ನಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನಮನಕ್ಕೆ ಮನವೇ ಸಾಕ್ಷಿ. ಸಲೆ ಹೊಲೆಯರ ಮನೆಯ ಹೊಕ್ಕು ಕೈಕೂಲಿಯ ಮಾಡಿಯಾದರೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ತಲೆದಂಡ ಕೂಡಲ ಸಂಗನು ದೇವಾ.

ಬಸವಣ್ಣನವರ ಜೀವನವೆಲ್ಲವೂ ಒಂದು ಯೋಗವು. ಅವರು ಜೀವನ ಯೋಗಿಗಳು 'ಯದ್ ಯದ್ ಕರ್ಮ ಕರೋಮಿ ತದ್ ತದ್ ಅಖಿಲಂ ಶಂಭೋ ತವಾರಾಧನಮ್' ಎಂದು ಅನ್ನುವದರ ಬದಲು ಯಾವ ಯಾವದು ಕೂಡಲ ಸಂಗನ ಆರಾಧನೆಯೋ ಅದನ್ನೇ ಮಾತ್ರ ನನ್ನ ಜೀವನದ ದಾರಿಯನ್ನಾಗಿ ಮಾಡು ಎಂದು ಅನ್ನುತ್ತಿದ್ದಂತೆ ಭಾಸವಾಗುತ್ತದೆ. ಅವರ ಜೀವನ ದಾರಿಗಳನ್ನು ಅವರ ಇತಿಹಾಸ, ವಚನಗಳಲ್ಲಿ ಕಾಣಬಹುದು. ಉದಾಹರಣಾರ್ಥ.

ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ,
ಎನ್ನ ಕಣ್ಣೊಳಗೆ ಹರಿದಾಡು ಕೂಡಲಸಂಗ,
ನಿಚ್ಚಲುಂ ಶಿವರಾತ್ರಿಯ ಮಾಳ್ಪಚ್ಚರಿಯ ಭಾಷೆ,
ಭಕ್ತರನು ಅಚ್ಚ ಶಿವನೆಂದಿರ್ಪ ಭಾಷೆ,

ಏನು ವಂಚಿಸಿದ ಭಾಷೆ,
ಏನಾದೊಡೆ ಬಯಸಿದ ಒಕ್ಕಪೆಗಳ ಅಡಿ ಇಡದೆ ಈವುದು
ಅದು ಭಾಷೆ,

ನುಡಿದು ಹುಸಿಯದ ಭಾಷೆ.
ನುಡಿದ ಹಾಗೆ ತಾಂ ನಡೆಸುವನು ಭಾಷೆ,

ಬಸವಣ್ಣನವರಂತೆ ನಮಗೆ ನಡೆಯುವದಾಗದ ಮಾತು. ಆದರೂ ಅವರ ಜೀವನದ ದಾರಿಗಳ ಛಾಯವಾದರೂ ನಮ್ಮ ಮೇಲೆ ಬಿದ್ದರೆ ಅದೆಷ್ಟೋ ಪುಣ್ಯವಂತರು ನಾವು.

ನಮ್ಮಲ್ಲಿ ಅಧುನಿಕ ಜೀವನ ಯೋಗಿಗಳು ಆಗಿ ಹೋಗಿದ್ದಾರೆ. ಲಿಂಗೈಕ್ಯರಾದ ಡೆಪ್ಯೂಟಿ ಚನ್ನಬಸಪ್ಪನವರು, ಗಿಲಗಂಚಿ ಗುರುಸಿದ್ಧಪ್ಪನವರು, ಅರ್ಟಾಳ ರುದ್ರಗೌಡರು, ಶಿರಸಂಗಿ ಸರದೇಸಾಯರು ಇವರು ನಮ್ಮ ಜೀವನ ಯೋಗಿಗಳು. ನಮ್ಮ ವಿರಕ್ತ ವರ್ಗದಲ್ಲಿಯೂ ಜೀವನ ಯೋಗಿಗಳಾಗಿದ್ದಾರೆ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಆ ವರ್ಗಕ್ಕೂ ಮತ್ತು ನಮ್ಮ ಸಂಸ್ಕೃತಿಗೂ ಮಹದುಪಕಾರ್ಯ ಮಾಡಿದರು. ಚಿತ್ರದುರ್ಗದ ಗುರುಲಿಂಗ ಸ್ವಾಮಿಗಳು ವಿದ್ಯಾರ್ಥಿ ದಾಸೋಹವನ್ನು ಕಲ್ಪಿಸಿದರು. ಅದೇ ಮಾರ್ಗದಲ್ಲಿ ನಮ್ಮ ಶ್ರೀ ಮೃತ್ಯುಂಜಯ ಸ್ವಾಮಿಗಳು ನೆನಪಿಗೆ ಬರುತ್ತಾರೆ. ಅಲ್ಲದೆ ಆ ಮಾರ್ಗದ ಮತ್ತೂ ಹಲವರು ಉಂಟು.

ಇದಿರು ಹಳಿಯಲು ಬೇಡ. ಇದಿರು ಹೊಗಳಲು ಬೇಡ.

ಎಂಬುದಾಗಿ ಇಷ್ಟಕ್ಕೆ ನಿಲ್ಲಿಸುತ್ತೇನೆ.

ರಾವಬಹಾದ್ದೂರ ಹಳಕಟ್ಟಿಯವರು ವಚನಗಳನ್ನು ಮುದ್ರಿಸಿ ನಮಗೆ ತೋರಿಸಿದ್ದು ಸಾಮಾನ್ಯ ಕೆಲಸವಲ್ಲ. ಕೆ. ಎಲ್. ಈ. ಸೊಸಾಯಿಟಿ ವಿದ್ಯಾ ಸಂಸ್ಥೆಯ ಆಜೀವ ಸಭಾಸದರು ಮಾಡಿದ ಸ್ವಾರ್ಥತ್ಯಾಗವು ಹೊಸದೊಂದು ತರದ ಜೀವನ ಯೋಗವು. ಅವರಲ್ಲೊಬ್ಬರು ನಮ್ಮ ಬಸವನಾಳ ಶಿವಲಿಂಗಪ್ಪನವರು. ಮೊನ್ನೆ ಮೊನ್ನೆ ನಮ್ಮಲ್ಲಿಂದ ಯುನಿವ್ಹರ್ಸಿಟಿ ಮೀಟಿಂಗದಲ್ಲಿ ಕೂತವರು ಎದ್ದು ಹೋದರು. ದೇವರು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೊಡಲಿ. ಇಂಥ ಜೀವನ ಮಾರ್ಗಗಳನ್ನು ನೆನೆದು ಅವುಗಳ ಅನುಭವಗಳೇನೆಂಬದನ್ನು ಪರ್ಯಾಲೋಚಿಸುವದು ನಮ್ಮ ಈ ಸಮ್ಮೇಲನಗಳ ಒಂದು ಕಾರ್ಯವೆಂದು ಅನಿಸುತ್ತದೆ.

ಇನ್ನೊಮ್ಮೆ ತಮ್ಮೆಲ್ಲರಿಗೆ ಸ್ವಾಗತವನ್ನು ಬಯಸುತ್ತೇನೆ.

---

# ಕಾಯಕವೇ ಕೈಲಾಸ.

ಜೋಳಿಗಾಂವ ಶಿವಯೋಗಾಶ್ರಮದಲ್ಲಿ ಶ್ರೀ ಶಿವಯೋಗಿಗಳು ಬಂಥನಾಳ ಅವರ ಪ್ರಸಾದವಾಣಿಯಿಂದ "ಬಸವಶಿಖಾಮಣಿ ಪುರಾಣ" ನಡೆದಾಗ್ಗೆ ಅದರ ಮೇಲೆ ಕೊಟ್ಟ ಶ್ರೀಗಳವರ ಉಪನ್ಯಾಸ ಸಂಗ್ರಹ.

( ಲೇ:- ಶ್ರೀ ಹಿಮಶಿ ಗುರೂಜಿ ಶಾಲಾ ಜೋಳಿಗಾಂವ ತಾ|| ಇಂಡಿ )

---

ಮಾನವನಿಗೆ ಅನ್ನಬೇಕಿದ್ದರೂ ದುಡಿಯಬೇಕು. ಅರಿವು (ಜ್ಞಾನ) ಬೇಕಿದ್ದರೂ ದುಡಿಯಬೇಕು. ಒಟ್ಟಿನಲ್ಲಿ ದುಡಿಯಬೇಕು. ದುಡಿತವಿಲ್ಲದಿರೆ ಮಾಂತ್ರಿಕ ಜಗತ್ತಿನ ಸುಜ್ಞಾನತ್ವಕ್ಕೂ ಯಾಂತ್ರಿಕ ಯುಗದ ವಿಜ್ಞಾನತ್ವಕ್ಕೂ ಸ್ಥಾನವಿಲ್ಲ. ಅನ್ನ, ಜ್ಞಾನ ( ಸುಜ್ಞಾನ, ವಿಜ್ಞಾನ ) ವಿಲ್ಲದಿರೆ ಜಗತ್ತು ಬಾಳದು, ಬದುಕದು. ಸುಜ್ಞಾನ, ವಿಜ್ಞಾನಗಳ ಸಮನ್ವಯೀಕರಣದಿಂದಲೇ ಇಂದಿನ ಜಗತ್ತಂತೂ ಸೂರ್ಕಡಿ ಪ್ರಗತಿಮುಖಿಯಾಗಿದೆ. ತನ್ನಿಂದಲೇ ಜರಗುವ ಮಹಾಕಾರ್ಯ ನೋಡಿ ತಾನೇ ಬೆರಳು ಕಚ್ಚಿಕೊಳ್ಳುತಿದಾನೆ. ತಾನು ಮಾಡಿದ್ದೇ ತನ್ನ ಬುದ್ಧಿಮತ್ತೆ ಮೀರಿದಂತಾಗಿ ಅಚ್ಚರಿಯನ್ನುಂಟು ಮಾಡಲಿದೆ. ಇದು ದುಡಿತದ ಪ್ರತಿಭಾವಂತ ಪ್ರತೀಕ.

ಮಾನವನು ಯಾವದೊಂದು ಕಾಯಕದಲ್ಲಿರಬೇಕು. ಅದು ಆತನ ಕಾಯದ ಗುಣಧರ್ಮ. ನೀರು, ನೆಲ, ಗಾಳಿ, ಬೆಂಕಿ ಹಾಗು ಆಕಾಶ ಪಂಚ ಭೂತಗಳು ಪ್ರತ್ಯೇಕವಿದ್ದಾಗ ಅವುಗಳ ಗುಣಧರ್ಮವೇ ನೈಜವಾಗಿ "ಕಾಯಕ". ಈ ಪಂಚ ತತ್ವಯುಕ್ತ ಕಾಯವು ಕಾಯಕವನ್ನು ಅಲ್ಲಗಳೆಯಲು ಹೇಗೆ ಬಂದೀತು ?

ಮಾನವನು ಪ್ರಾಣ ಪ್ರಿಯನು. ಪ್ರಾಣವು ಅನ್ನದಿಂದ ಬದುಕಬೇಕಾಗಿದೆ. ಅನ್ನವು ದುಡಿತದಿಂದ ದೊರೆಯಬೇಕಾಗಿದೆ. ಹಾಗು ಮಾನವನು ಉಳಿದ ಪ್ರಾಣಿಗಿಂತ ಶ್ರೇಷ್ಠನೆನ್ನಿಸಿಕೊಳ್ಳಲು "ಮಾತು" ವೊಂದು ಅಧಿಕವಾಗಿದೆ. ಈತನಲ್ಲಿ ಇದರಿಂದಾಗಿ ಜ್ಞಾನವೊಂದು ಹೆಚ್ಚಿಗಿದೆ ಮಾನ

ವನಿಗೆ. ಈ ಜ್ಞಾನವನ್ನು ಅಭಿವೃದ್ಧಿಗೊಳಿಸಿಕೊಳ್ಳುವದಕ್ಕಾಗಿ ಮತ್ತು ಅನ್ನಸಂಪಾದನೆಗಾಗಿ ಕಾಯಧಾರಿಗೆ ಕಾಯಕ ಅಗತ್ಯ. ಈ ಸಂಗತಿ ಅಲ್ಲಗಳೆಯಲು ಬರುವಂತಿಲ್ಲ.

ಪಶು- ಪಕ್ಷಿ ಕ್ರಿಮಿ-ಕೀಟಕಾದಿ ಜೀವ ಜಂತುಗಳಿಗೆಲ್ಲ ಅನ್ನಬೇಕು. ತಮ್ಮ-ತಮ್ಮ ಅನ್ನ ಸಂಗ್ರಹಕ್ಕಾಗಿ ಯಾರಿಗೂ ಕೇಳದೆ ಯಾರಿಂದಲೂ ಹೇಳಿಸಿಕೊಳ್ಳದೆ ದುಡಿತವೇ ಪ್ರಾಣವೆಂದು ಬಗೆದು ಅನ್ನಸಂಗ್ರಹ ಮಾಡುತ್ತಲಿವೆ. ಮೂಕ ಜೀವಿಗಳು ಕಾಯಕಕ್ಕಿಷ್ಟು ಮಹತ್ವಕೊಟ್ಟು ನಡೆವಾಗ ಮಾತಿನ ( ಜ್ಞಾನ ) ಮಲ್ಲನಾದ ಮಾನವನು ಅಲ್ಲಗಳೆಯುವದು ಹೇಗೆ? ಸರ್ವ ಪ್ರಾಣಿಗಳಲ್ಲಿ ಶ್ರೇಷ್ಠನೆನಿಸಿಕೊಂಡ ಮಾನವನಿಗೆ "ಕಾಯಕದ" ಬೋಧೆಯೆಂದರೆ ತೀರ ಲಾಂಛನಾಸ್ಪದವಾಗಲಿಕ್ಕಿಲ್ಲವಷ್ಟೇ? 'ಬೆಳಗು ಇದ್ದಲ್ಲಿ ಮುಳುಗು" ಹಾಗಿದ್ದಲ್ಲಿ ಬೋಧೆಯಿರಲಿ.

ಯಾವನು ತನ್ನನ್ನು ತಾನು ಆಶ್ರಯಿಸಿಕೊಂಡು ಬಾಳಬೇಕಾಗಿದೆ. ಇನ್ನೊಬ್ಬರಿಂದ ಬಾಳಲಸದಳ. ತಾನು ಗಳಿಸುವದರಲ್ಲಿ ಉಳಿದುದಾದರೆ ಬಳಿಯಿಸಬಹುದು. ಕೆಲವರು ಮಾತ್ರ ಹೀಗೆ ಬಳಿಸುತವರು ಉದಿಸಿದಲ್ಲಿ ಕೊಳುವವರು ಕೊಂಬವರು ನಿರುದ್ಯೋಗಿಯಾಗಬೇಕೆಂತಲ್ಲ. ಆಪದ್ಧನವಿರಲಿ, ಸ್ವೀಕರಿಸುವದಿರಲಿ ಅದರಿಂದ ಸ್ವಕೀಯ ಜೀವನ ಸಾಗಿಸಕೂಡದ. ಹಾಗೂ ಅದರಿಂದಾಗಿಯೂ ಸಾಗದು. ಕೂತು ಉಂಡರೆ ಕುಡಿಕೆ ಹೊನ್ನು ಸಾಲದು. ತತ್ಕಾರಣ ದುಡಿತವು ಅವಶ್ಯ ಹಾಗು ಅಗತ್ಯ.

ಎಲ್ಲಿ ಬಲವಾದ ದುಡಿತಬೇಕಾಗಿದೆಯೋ ಅಲ್ಲಿ, ಆಲಸ್ಯವೊಂದು ಮಹಾ ರೋಗವಾಗಿ ಗಂಟುಬೀಳುತ್ತದೆ. ಈ ಆಲಸ್ಯರೋಗ ಪ್ರಾಪ್ತವಾದವನು ಕಾಯಕದಿಂದ ಮೊದಲು ಮುಕ್ತ. ಬಳಿಕ ಕೆಲದಿನಗಳ ಮೇಲೆ ನಿಶ್ಚಯವಾಗಿ ಕಾಯಕದಿಂದ ಕೂಡಾ ಮುಕ್ತನಾಗಬಲ್ಲ.

"ಆಲಸ್ಯಂಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ"

ಮನುಷ್ಯನಿಗೆ ಆಲಸ್ಯವು ಮಹಾ ಶತ್ರುವಾಗಿ ಮನೆಮಾಡಿಕೊಂಡು ಕೂಡ್ರುವದು ಶರೀರದಲ್ಲಿ. ಇದನ್ನು ಜಯಿಸಿದವನ ಬಾಳು ಹಾಳು ಹಾಗು ಕೇಳು.

ದುಡಿತವು ಕೈಬಿಡದ ಕೆಳೆಯನಂತಿರಬೇಕು.
ಕೆಲಸದ ಬದಲಾವಣೆಯೇ ವಿಶ್ರಾಂತಿಯಾಗಿರಬೇಕು.
ಇಂತು ಲಕ್ಷಣಗಳು ಮಾನವಗಿರಲು ಸಾಕು.

ಪೃಥ್ವಿಯ ಗತಿಗೆ, ಸೂರ್ಯ ಚಂದ್ರರ ಕಾಂತಿಯ ಕೊಡುಗೆಗೆ, ಗಾಳಿ ಮಳೆಗಳ ಸುಗತಿಗೆ, ಹಾಗು ಶರೀರದಲ್ಲಿಯ ಅಂಗಾಂಗಗಳ ಚಲನೆ ಪುಪ್ಪುಸಗಳ ಶ್ವಾಸೋಚ್ಛ್ವಾಸನ, ರಕ್ತಾಶಯದ ಸ್ಫುರಣಾದಿಗಳಿಗೆಲ್ಲಿಹ ವಿಶ್ರಾಂತಿ ? ಸೃಷ್ಟಿಯಲ್ಲಿಯ ಕಂಡೂ ಕಾಣದೆಯೋ ಬಂದು ನಿಸರ್ಗದತ್ತವಾಗಲೆಯಿದೆ. ಆ ಗತಿಯು ನಿರ್ಗತಿಕವಾದಲ್ಲಿ ಜಗತ್ಪ್ರಳಯ. ಹಾಗೆ ಮಾನವನ ಕಾಯಕದ ಗತಿಗೆ ಆಲಸ್ಯದ ಹೊಡೆತವಾಗಿ ಅಥವಾ ಬೇರೊಂದು ಕಾರಣದಿಂದ ತಡೆಯಾದರೆ ಜೀವನ ಸಾರ ನಿಶ್ಚಿತ.

ಕಾಯಕದಿಂದಲೇ ಅಶನ।ಕಾಯಕದಿಂದಲೇ ವಸನ।
ಕಾಯಕದಿಂದಲೇ ಭುವನ।ಕಾಯಕದಿಂದಲೇ ಶಿಕ್ಷಣ।
ಕಾಯಕದಿಂದಲೇ ಜ್ಞಾನ। ಕಾಯಕದಿಂದಲೇ ಮಾನ
ಕಾಯಕದಿಂದಲೇ ಭಕುತಿ।ಕಾಯಕದಿಂದಲೇ ಮುಕುತಿ
ಕಾಯಕದಿಂದಲೇ ರಾಷ್ಟ್ರ।ಕಾಯಕದಿಂದಲೇ ಜಗದಿ ಶ್ರೇಷ್ಠ
ಕಾಯಕದಿಂದಲೇ ಈಶ । ಕಾಯಕವೇ ಕೈಲಾಸ

ಕಾಯಕವೇ ಕೈಲಾಸವೆಂದು ಸಾರಿ ನಡೆದು ಮಹಾನುಭಾವಿಯಾದ
ಬಸವಣ್ಣ

ಖಾದಿಯೇ ಸ್ವರ್ಗಧಾಮ ಹಾದಿಯೆಂದು ಸಾರಿನಡೆದು ಮಹಾತ್ಮನಾದ
ಮೋಹನದಾಸ

ಕರ್ಮದಿಂದಲೇ ಮುಕ್ತಿಯೆಂದು ಸಾರಿತು ಭಗವದ್ಗೀತೆ.
ಸತ್ಯತಪೋದಮಃ ಕರ್ಮೇತಿ ಪ್ರತಿಷ್ಠಾವೇದಾಃ ಸರ್ವಾಂಗಾನಿ
ಸತ್ಯಮಾಯತನಮ್॥ ಕೇ ಉಪನಿಷತ್ತು

ಯಜ್ಞದಾನ ತಪಃ ಕರ್ಮ ನತ್ಯಾಜ್ಯಂ ಕಾರ್ಯಮೇವತತ್ ॥
ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್॥ ಭ. ಗೀ

ಎರಡನೆಯದಾಗಿ ಜೀವವಿರುವತನಕ ಕೆಲವು ಕ್ರಿಯೆಗಳನ್ನು ಮಾಡಲೇ ಬೇಕಾಗುವದು. ಆಯಾ ಇಂದ್ರಿಯಗಳು ತಮ್ಮ ತಮ್ಮ ಕಾರ್ಯ ಮಾಡುತ್ತಲೇ ಇರುತ್ತಿವೆ.

ಕಂಗಳೇಕೆ ನೋಡಬೇಡವೆಂದರೆ ಮಾಣವು
ಶ್ರೋತ್ರಂಗಳೇಕೆ ಆಲಿಸಬೇಡವೆಂದರೆ ಮಾಣವು
ನಾಸಿಕವೇಕೆ ವಾಸಿಸಬೇಡವೆಂದರೆ ಮಾಣದು
ತ್ವಕ್ಕೇಕೆ ಸೋಂಕಬೇಡವೆಂದರೆ ಮಾಣದು ||

ಕ್ರಿಯಾಮಥನವಿಲ್ಲದೆ ಕಾಣಬಂದುವೇ । ಇಕ್ಷುವಿನೊಳಗಣ ಮಧುರ?
ಕ್ರಿಯಾಮಥನವಿಲ್ಲದೆ ಕಾಣಬಂದುವೇ । ತಿಲದೊಳಗಣ ತೈಲ
ಕ್ರಿಯಾಮಥನವಿಲ್ಲದೆ ಕಾಣಬಂದುವೇ । ಕಾಷ್ಠದೊಳಗಣ ಅಗ್ನಿ
ಕ್ರಿಯಾಮಥನವಿಲ್ಲದೆ ಕಾಣಬಂದುವೇ । ಕ್ಷೀರದೊಳಗಣ ತುಪ್ಪ ||

ತೊಟ್ಟು ಬಿಡದನ್ನಕ್ಕ ಮುತ್ತಾಬುತದಾಸೆ ಬೇಕು
ಮರ್ತ್ಯದ ಹಂಗುಳ್ಳನ್ನಕ್ಕ ಸತ್ಯಶರಣರ ನಿತ್ಯಜಂ
ಗಮ ಸೇವೆ ಕೃತ್ಯವಿರಬೇಕು ಅಮರೇಶ್ವರ ಲಿಂಗವ
ನರಿವುದಕೆ

ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೊ
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೊ
ಬೇಯವೆ ಅಶನವನುಂಬ ಠಾವಾವುದು ಕಪಿಲಸಿದ್ಧ ||

ಕೈಯಲ್ಲಿ ಹಿಡಿದು ಕಾಂಬುದು ಕರ್ಮದ ಪೂಜೆಯಲ್ಲವೇ ?
ಮನದಲ್ಲಿ ನೆನೆದು ಮಾಡುವದೆಲ್ಲವು ಕಾಯದ ಕರ್ಮವಲ್ಲವೇ
ಭಾವದ ಶುದ್ಧವನರಿವ ಪರಿ ಇನ್ನು ಆವುದು ಕಪಿಲಸಿದ್ಧಮಲ್ಲಿಕಾರ್ಜುನ

ಪ್ರಾಪಂಚಿಕರಾಗಲಿ, ಪಾರಮಾರ್ಥಿಗಳಾಗಲಿ ಕಾಯಕವು ಬೇಕು. ಅನ್ನುವ ಬಗ್ಗೆ ಬೇರೆ ಹೇಳಬೇಕಾದುದು ಉಳಿಯಲಿಲ್ಲ.

ಕಾಯಕದೆ ನಾಡಿನಾ
ನಾಯಕನು ತಾನಪ್ಪ ||

ಕಾಯಕವು ಅಳಿಯೆ ಜತೆಯುಲಿ ಸೊಬಗಳಿದ
ನಾಯ ಪರಿಯುಪ್ಪ ಸರ್ವೇಶ

ಕಾಯಕವು ಬೇಕು ಕಾಯಕದ ಮಹತಿ ಇಷ್ಟಿದೆ, ಅಷ್ಟಿದೆ ಎಂದು ಹೇಳುವದು ಸಾಕು. ಆದರೂ ಇನ್ನೊಂದು ಮಾತು

ಏಳುವಾ ಹೊಗೆಯಂತೆ ।
ಮೇಲು ಮೇಲಕೆ ಸಾಗಿ ॥
ಮೇಲು ಮೇಲನ್ನೆಸಾಧಿಪುದುದ್ಯೋಗ ।
ಶೀಲರಾಧ್ಯೇಯ ಸರ್ವೇಶ

ಸುಶೀಲರಾದವರು ಉದ್ಯೋಗದಿಂದಲೇ ತಮ್ಮ ಉನ್ನತಿಯನ್ನು ಸಾಧಿಸಿಕೊಂಡವರಾಗಿರುತ್ತಾರೆ. ಉದ್ಯೋಗದ ಹೊರತು ಅನ್ಯಥಾ ಗತಿಯಿಲ್ಲ. ಆದರೂ ನಿರುದ್ಯೋಗದಿಂದ ಕೆಡುವವರ ಸಂಖ್ಯೆ ಹೆಚ್ಚಿಗಿದೆ. ಪುನರ್ತತ್ಕಾರಣ—

ಬಲುಕೋಪ ಆತುರವು ।
ಆಲಸಿಕೆ ಅನಭ್ಯಾಸ ॥
ಚಲಚಿತ್ತ ಉಪೇಕ್ಷೆಗಳದೆಸೆಯಿಂದ ।
ಕೆಲಸ ಹೊಲಸಕ್ಕು, ಸರ್ವೇಶ

ಆಲಸ್ಯ, ಕೋಪಾತುರ, ದುಡಿತದನಭ್ಯಾಸ, ಮನಶ್ಚಾಂಚಲ್ಯಗಳಿಂದ ಕೆಲಸ ಕೀಳಾಗಿ ಹೋಗುವದು ಕೀಳವಾದದ್ದನ್ನು ಮಾಡಲಾರ.

ಮ| ಗಾಂಧೀಜಿಯುವರು "ಕೆಲಸ ಕೀಳಲ್ಲ" ವೆಂಬ ತತ್ವವನ್ನು ಭಂಗೀಕಾರ್ಯ ಮಾಡಿ ಅಳವಡಿಸಿಕೊಂಡು ಬೋಧಿಸಿದರು ಜಗಕೆ. ಈ ತತ್ವದಿಂದಲೆ ಪಾಶ್ಚಿಮಾತ್ಯರಾಷ್ಟ್ರಗಳು ಅಧಿಕಾಧಿಕ ಸುಖ-ಸಂಪನ್ನ ರಾಷ್ಟ್ರಗಳಾಗಿವೆ.

ಕಾಯಕದಲ್ಲಿ ವಿಶಾಲವಾದ ಸೃಷ್ಟಿ ಇರಬೇಕೆನ್ನುವ ಕುರಿತು ಮ ಗಾಂಧೀಜಿಯುವರು ಸತ್ಯಾಹಿಂಸೆಗಳಿಂದ ಯುಕ್ತವಾದ ದುಡಿತದ ಫಲ ವಿರಬೇಕು. ಇದನ್ನೇ ಗೀತೆಯು —

" ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ " ಎಂದು ಸಾರಿತು. ಇದನ್ನೇ ಮಹಾತ್ಮಾ ಬಸವೇಶ್ವರನು-

ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ
ಕೈಕೂಲಿ ಮಾಡಿಯಾದರೆ ಟ ಸಿವ್ಮ, ಶರಣರ ನಿಲುವಿಂಗೆ
ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ
ತಲೆದಂಡ ತಲೆದಂಡ ಎಂದು ಸಾರಿದರು.

ಇದಕ್ಕೂ ಮುಂದಿನ ಮೆಟ್ಟಿಲದಲ್ಲಿ —

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆ
ನೆನ್ನದಿರಾ ಲಿಂಗಕ್ಕೆ ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುವದು ಮನದಲ್ಲಿ ಹೊಳೆಯದಿದ್ದರೆ
ಬೇಡಿದುದನೀವ ನಮ್ಮ ಕೂಡಲಸಂಗಮದೇವಾ.

ಕಾಯಕವನ್ನು ದಾಸೋಹಕ್ಕೆ ಹೊಂದಿಸಿ ವಿಶಾಲ ದೃಷ್ಟಿ ಇಟ್ಟು ನಿಷ್ಕಾಮನಾ ಭಾವನೆಯಿಂದ ಮಾಡುವದು ಮಾಡುವದಕ್ಕಾಗಿಯೇ ವಿನಹ ಅನ್ಯರಿಗಾಗಿ ಅಲ್ಲ, ತನಗಾಗಿಯೂ ಅಲ್ಲವೆಂದೆಂದರು.

ಕಾಯಕದಲ್ಲಿಯ ಶಿವಶರಣರ ದೃಷ್ಟಿಯಂತಹ, ದೃಷ್ಟಿ ಜಗದಲ್ಲಿ ಅಂದೂ-ಇಂದೂ-ಮುಂದೂ ಯಾವ ರಾಷ್ಟ್ರದಲ್ಲಿಯೂ, ಸಮಾಜದಲ್ಲಿಯೂ ಕಾಣಲಿಲ್ಲ – ಕಾಣಲೂ ಶಕ್ಯವಿಲ್ಲ.

ಅನ್ಯರಿಗೆ ಕಾಡಿಸಿ ಪೀಡಿಸಿ ನೊಂದಿಸಿ
ಬೆಂದಿಸಿ ತಂದು ದಾಸೋಹನ ನಡಿಸಿದರೆ
ಚೆನ್ನಯ್ಯನೊಪ್ಪಲಾರ ॥

ಕಾಯಕದಲ್ಲಿ ಎಂತಹ ನ್ಯಾಯ ನಿಷ್ಠುರತನವಿತ್ತು. ಪ್ರಾಪಂಚಿಕನಿರಲಿ ಪಾರಮಾರ್ಥಿಯಿರಲಿ, ಭೋಗಿಯಿರಲಿ, ಜೋಗಿಯಿರಲಿ ವಿಶಾಲ ದೃಷ್ಟಿಯ ಕಾಯಕವಾಗಬೇಕು.

" ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತನು"

ಕಾರೆಯು ಸೊಪ್ಪಾದರೂ ಕಾಯಕದಿಂದ ಬಂದುದಾದರೆ ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದನರ್ಪಿತವೆಂಬ ಎಚ್ಚರಿಕೆಯನ್ನು ಜೋಗಿಗಳಿಗೂ ಕೊಡುತ್ತಲಿದ್ದರು.

• ಕಾಯಕದಲ್ಲಿ ನಿರತನಾದೊಡೆ ಗುರುದರ್ಶನವಾದರೂ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗುಹರಿಯಬೇಕು. "ಕಾಯಕವೇ ಕೈಲಾಸ" ವಾದ ಕಾರಣ ಅಮಳೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು"

ದುಡಿತ ದುಡ್ಡಿನ ತಾಯ್ತಂದೆ
ದುಡಿತ ಧೈರ್ಯದ ಬಂಧುಬಳಗ
ದುಡಿತ ದೇಹದ ಶಿಕ್ಷಕ
ದುಡಿತ ದೇಹದ ರಕ್ಷಕ
ದುಡಿತ ದೇಶೋನ್ನತಿಯ ಮಂತ್ರ
ದುಡಿತ ಜೀವನ ಯಂತ್ರ
ದುಡಿದ ಮನುಜಗೆ ಊಟ ಅಮೃತದ ಕೂಟ
ದುಡಿಯದಿರೆ ಮನುಜಗೆ ಊಟ ಮಹಾ ಕಾಳಕೂಟ

—ತತ್ಕಾರಣ—

—× ಕಾಯಕವೇ ಕೈಲಾಸ ×—

---

# ಮಠ ಪತಿ.

(ಲೇಖಕಃ—ಗುರುಮೂರ್ತಿ ಕಾರ್ತಿಕೇಯ ಶಾಸ್ತ್ರಿ ಗದ್ದುಗೆ ಮಠ ಕಲಬುರ್ಗಿ)

ಕನ್ನಡ ಸಾಹಿತ್ಯದಲ್ಲಿ ವಿರೂಪಾಕ್ಷ ಪಂಡಿತ, ಚಾಮರಸ, ಸಿದ್ಧನಂಜೇಶ, ರಾಘವಾಂಕ, ಹರಿಹರ, ಹರೀಶ್ವರ, ಕೇಶಿರಾಜ, ಗುಬ್ಬಿಯ ಮಲ್ಲಹಣ ಮಾಯಿದೇವ ಇವರು ಮಹತ್ತರ ಕಾವ್ಯಗಳನ್ನು ರಚಿಸಿ ಪ್ರಸಿದ್ಧರಾಗಿದ್ದಾರೆ. ಅದೇ ಪ್ರಕಾರ ಅಂಬಲಿಗಿ ಗುರುಚನ್ನಮಲ್ಲೇಶನು ದೀಪದ ಕಲಿಯರ ಕಾವ್ಯ. ಮತ್ತು ಮಠಪತಿ ವಾರ್ಧಿಕ ಹೀಗೆ ಎರಡು ಕಾವ್ಯಗಳನ್ನು ಕನ್ನಡದಲ್ಲಿ ರಚಿಸಿದ್ದಾನೆ. ಗುರುಚನ್ನಮಲ್ಲೇಶನು ಬಸವ ಕಲ್ಯಾಣ ಪಟ್ಟಣದ ಶಾನಭೋಗ ಮನೆತನದವನು. ಇವನು ಜ್ಯೋತಿಷ ಶಾಸ್ತ್ರದಲ್ಲಿ ಸಹ ಪಂಡಿತನಿದ್ದಹಾಗೆ ಪ್ರತೀತಿ ಇದೆ. ಅವನು ರಚಿಸಿದ ಗ್ರಂಥಗಳಿಂದ ಅವನು ಸಂಸ್ಕೃತ ಮತ್ತು ಕನ್ನಡದಲ್ಲಿ ಪಂಡಿತನಾಗಿದ್ದನೆಂದು ಕಂಡುಬರುತ್ತದೆ.

ಇವನು ಕಲ್ಯಾಣವನ್ನು ಬಿಟ್ಟು ಅಂಬಳಿಗೆ ಗ್ರಾಮಕ್ಕೆ ಬಂದು ಅಲ್ಲಿ ವಾಸ ಮಾಡುತ್ತಿದ್ದನು. ಈಗಲೂ ಇವನ ಸಮಾಧಿಯು ಇದೇ ಗ್ರಾಮದಲ್ಲಿ ಇದೆ. ಇವನ ವಂಶಜರೂ ಇನ್ನೂ ಅಂಬಳಿಗೆಯಲ್ಲಿ ಇದ್ದಾರೆ. ಕಲಬುರ್ಗಿ ಕಾರ್ತಿಕೇಯ ಮನೆತನದವರು ಇವರ ವಂಶಜರಾಗಿದ್ದಾರೆಂದು ಜನರು ಹೇಳುವದುಂಟು.

ಗುರು ಚನ್ನಮಲ್ಲೇಶನ ಕಾಲ ಪ್ರಭುಲಿಂಗಲೀಲೆಯ ಮುನ್ನುಡಿಯಲ್ಲಿ ಬರೆದಂತೆ ಕ್ರಿ. ಶ. ೧೭೦೦ ಇದೆ.

ವೀರಶೈವ ಮತದಲ್ಲಿ ಮಠಸ್ಥ, ಮಠಪತಿ, ಸ್ಥಾವರ, ಗಣಾಚಾರಿ ಮತ್ತು ಗುರು ಎಂತಲೂ ಗುರುವರ್ಗದೊಳಗೆ ನಡೆದುಬಂದ ಸಾಂಪ್ರದಾಯವಿದೆ.

ಮಠಪತಿಗಳು ಕೀಳು ಎಂದು ಕೆಲವರು ಈಗಲೂ ವಾದಿಸುವದನ್ನು ಕೇಳುತ್ತೇವೆ. ಇದು ಏಕೆ, ಎಂದು ವಿಚಾರಿಸಿದಲ್ಲಿ ಅವರು ಶವಕ್ಕೆ ಭಸ್ಮ ಧರಿಸುತ್ತಾರೆ- ಮತ್ತು ಅವರಿಗೆ ಅಯ್ಯಾಚಾರವಿರುವದಿಲ್ಲ, ಇವರಿಗೆ ಶಿಷ್ಯ

ರಿರುವದಿಲ್ಲ ಎಂದು ವಾದಿಸುವದುಂಟು. ಆದರೆ ಇದು ತಪ್ಪು ತಿಳಿವಳಿಕೆಯು. ನಾವದಿಗಿ ದೇವಪ್ಪಯ್ಯನವರು, ಸೊನ್ನಲಾಪುರದ ನಾಲ್ವತ್ತಿನಾಡ ಶರಣರು ಮಠಪತಿಗಳಲ್ಲವೇ ? ಅವರಿಗೆ ಅಯ್ಯಾಚಾರವಾಗಿದ್ದಿತ . ಆದರೆ ಅವರು ಮಹಾತ್ಮರು, ಅವರು ತಮ್ಮ ಮಹಾತ್ಮೆಯಿಂದ ಮುಂದಾದರಿದ್ದಾರೆ ಎಂದು ಹೇಳುವದುಂಟು.

ಆದರೆ ಹೀಪದ ಕಲಿ ಗ್ರಂಥಕರ್ತೃಗಳಾದ ಗುರು ಚನ್ನಮಲ್ಲೇಶರು ಮಠಪತಿ ವಾರ್ಧಿಕ ಬರೆದದ್ದು ಅದನ್ನು ನೋಡಬೇಕು. ಅದರಲ್ಲಿಯು ಶ್ಲೋಕಗಳು ಅಶುದ್ಧವಾಗಿವೆ. ಆದರೂ ಅವುಗಳನ್ನು ನಾನು ಕೆಳಗೆ ಉದಹರಿಸುತ್ತೇನೆ.

ಶ್ರೀ ಗುರುವೆ ನಿಷ್ಕಳಂಕನೆ ನಿಜಸುರತರುವೇ ಶ್ರೀ ಗುರುವೇ ಪರ ಮಾಮೃತ ಸಂಜೀವನದಂತಿರುವೆ. ಶ್ರೀ ಗುರುವೆ ಪರಕೆ ಪರ ಅಪರಮಿತ ನಿರಾಳಾಕಾರವೆ ಶ್ರೀ ಗುರುವೆ ತ್ರಾಹಿ ತ್ರಾಹಿ ॥ ೧ ॥

ಶ್ರೀ ಗುರುವೆ ಶಶಿ ನೋಟ ಪಶುಪತಿಯೆ ಪರಬ್ರಹ್ಮ ಶ್ರೀ ಗುರುವೆ ಜ್ಞಾನ ಕೋವಿದ ತ್ರಿಪುರ ಸಂಹರನೆ ಶ್ರೀ ಗುರುವೆ ಸಕಲ ಜನಕರ್ತ ಪರಸ್ಥಲವಾಸ ಶ್ರೀ ಗುರುವೆ ರಕ್ಷಿಸು ರಕ್ಷಿಸೆಮ್ಮನು ॥ ೨ ॥

ಎಲೆ ದೇವ ಮಾಯಾಕಾರನೇ ಪರಂಜ್ಯೋತಿಯೇ ಬಲು ಹಮ್ಮಿನವರ ಇಳುಹಿದಿ ನಿಮ್ಮಬಲುಮೆ ಇಲ್ಲದ ಬಲಿಯ ಬಂಧನಕ್ಕೊಳಗುಮಾಡಿದೆ ಚೆಲುವ ಕಾಮನ ಭಸ್ಮಮಾಡಿದೆ ಮಲಹರನೆ ಅವರಿಗೇನಾಯ್ತು ಅವಸ್ಥೆಗಳು ॥೩॥

ಮಠಪತಿಯ ಮೂಲ ಭೇದದ ಕೀಲನರಿಯೆ। ಮಠಪತಿಯು ಭವಿಯು ಮಲದೇಹ ಸೂತಕವ ಕಳೆವನು । ಮಠಪತಿಯು ಬೇಕೆಂದ ಬಸವ ದಂಡೇಶ ॥ ೪ ॥

ನಾಲ್ಕು ವೇದ ಆರು ಶಾಸ್ತ್ರವಖಿಳ ಪುರಾಣದೊಳು ಮಠಾಧಿಪತಿ ಶಬ್ದ ಮಂತ್ರಗಳೊಳು ಲಿಪ್ತವಾಗಿಹುದು ಮಠಗತಿಯ ನಾಮ. ಇದನರಿಯದೆ ಜರಿದವನೆ ಮೂಢ ॥ ೫ ॥

ನೆಲೆಗೊಂಡ ಜೀವ ಉತ್ಪತ್ತಿ ಸ್ಥಿತಿಲಯದೊಳಗೆ ಬಲಿಸಿ ಬೀಜವ ಬಿತ್ತಿ, ಪರುಷ ಸೋಂಕಲು ಭಕ್ತಸ್ಥಲ ಪಂಚ ಮೂರ್ತಿಗಳು ಅಧಿಕೆಂಬ ಬಿರಿದುಂಟು ಇದರ ಹೊಲಬನರಿಯದವನೆ ದ್ರೋಹಿ ॥ ೬ ॥

ಈ ಪ್ರಕಾರ ಚನ್ನ ಮಲ್ಲೇಶನು ತನ್ನ ವಾರ್ಧಿಕದಲ್ಲಿ ಬರೆದಿದ್ದಾನೆ. ಚನ್ನ ಮಲ್ಲೇಶನ ಕೂಡ ವಾದಿಸಿದ ಮೇಲೆಯೇ ಈ ವಾರ್ಧಿಕವನ್ನು ಅವನು ಬರೆದನೆಂದು ನಾವು ಹೇಳಬಹುದು. ಚನ್ನ ಮಲ್ಲೇಶನು ಮಠಪತಿ ತನವನ್ನು ಸಂಪಾದಿಸಿದ ಬಳಿಕ ಶಿಷ್ಯರು ಅವನಿಗೆ ಮಠ ಮಾಡಿಕೊಟ್ಟಂತೆ ಕಾಣುತ್ತದೆ.

ಮಠಪತಿ ಎಂದರೆ ಮಠಗಳ ಕಾಲಾಳು ಎಂದು ಭಾವಿಸುವದು ಯುಕ್ತವಲ್ಲ. ಮಠಗಳ ಪತಿ ಸ್ವಾಮಿ ಎಂದು ಚನ್ನ ಮಲ್ಲೇಶನು ಸಿದ್ಧ ಮಾಡಿದ್ದಾನೆ.

ನಾನು ಕಲಬುರ್ಗಿ ಜಿಲ್ಲೆಯಲ್ಲಿದ್ದು ಕೋಳೂರು ಗ್ರಾಮಕ್ಕೆ ಹೋದಾಗ್ಗೆ ಮಠಪತಿಗೆ ಹೆಚ್ಚಿನ ಸ್ಥಾನವು ಇದ್ದುದು ಕಂಡುಬಂದಿತು.

ವಾಚಕರು ಈ ಲೇಖವನ್ನು ನೋಡಿ, ಮಠಾಧಿಕಾರಿ, ಮಠಪತಿ ಸ್ಥಾವರ, ಗಣಾಚಾರಿ, ಗುರು ಇವರು ಪಂಚಮುಖ ಪರಮಾತ್ಮನಂತಿದ್ದಾರೆಂದು ಭಾವಿಸುವುದು.

---

ತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು ಜೀವಭಾವ ನಿವೃತ್ತಿಯಾಯಿತ್ತೆಂಬುದೀಗ ಎರಳೆ ಸತ್ತು ಎಂಬ ಶಬ್ದಕ್ಕರ್ಥ. ಅಂತು ಜೀವಭಾವವಳಿಯಲು ಅಹಂಕಾರ ಮಮಕಾರಗಳು ನಷ್ಟವಾಯಿತ್ತೆಂಬುದೀಗ ಕೋಡಳಿದು ಎಂಬ ಶಬ್ದಕ್ಕರ್ಥ. ಅಹಂಕಾರವೇದಲ್ಲಿ ಸಂಕಲ್ಪ ಮಾರ್ಗವಿಡಿದಿರ್ದ ಸಕಲ ಮಾಯಾ ಪ್ರಪಂಚಿನ ತಿರುವು ಮುರುವುಗಳೆಲ್ಲ ನಿವೃತ್ತಿಯ ಮುಖವಿಂಗೆ ಸಮಾನವಾದವೆಂಬುದೀಗ ಕೊಂಬಿನ ನುಲುಹು ನೇರಿತವಾಗಿ ಎಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿ ಚರಿಯುತ್ತಿರ್ದ ಅದ್ವೈತಜ್ಞಾನಿಗಳೆಲ್ಲರು ಶಿವಜ್ಞಾನೋದಯವಾದಲ್ಲಿ ತನ್ನ ನಿಜವ ತಿಳಿದು ಶ್ರೀಗುರುಕಾರುಣ್ಯಮಂ ಪಡೆದು ನಿವೃತ್ತಿ ಮಾರ್ಗವನೆಯ್ದುತ್ತಿಹರೆಂಬುದೀಗ ಬಳಸುವ ಅರುಹಿರಿಯರೆಲ್ಲರು ಒಬ್ಬುಳಿತವಾಗಿ ಎಂಬ ಶಬ್ದಕ್ಕರ್ಥ. ಅಂತು ನಿವೃತ್ತಿ ಮಾರ್ಗವನೆಯ್ದಲು ಸಕಲ ಪ್ರಪಂಚಿನ ವರ್ತನೆಗಳೆಲ್ಲ ಅಳಿದು ಮಹಾಘನಲಿಂಗದ ಚಿತ್ಪ್ರಭಾಂಗದಲ್ಲಿ ಏಕಾರ್ಥವಾದರೆಂಬುದೀಗ ಸುಳುಹು ನಿಂದಾಗಲೆ ಸದಾಶಿವ ಮೂರ್ತಿಲಿಂಗದ ಅಂಗದಲ್ಲಿ ಲೀಯವಾಯಿತ್ತು ಎಂಬ ಶಬ್ದಕ್ಕರ್ಥ.

---

## (೪) ಷಟ್‌ಸ್ಥಲಗಳು.

**ವಿವರಣೆ:**— ಕೆಳಗಿನ ವಚನದಲ್ಲಿ ವಚನಕಾರನು ಷಟ್‌ಸ್ಥಲಗಳ ಸ್ವರೂಪವನ್ನು ವಿವರಿಸಿದ್ದಾನೆ. ಈ ಸ್ವರೂಪವನ್ನು ಅವನು ಇಲ್ಲಿ ನೈತಿಕ ದೃಷ್ಟಿಯಿಂದ ವಿವೇಚಿಸಿದ್ದಾನೆ. ಹೀಗೆ ವರ್ತಿಸದೆ ಇದ್ದ ಜಂಗಮರನ್ನು ಅವನು ಈ ವಚನದ ಕಡೆಯಲ್ಲಿ ಟೀಕಿಸಿದ್ದಾನೆ.

### ವಚನಗಳು.

೨೨. ಅಯ್ಯಾ ಇದ್ದುದ ವಂಚನೆ ಮಾಡದೆ ಇಲ್ಲದುದ ಕಡನ ಮಾಡದೆ ಪರರ ಕಾಡಿ ಬೇಡಿ ತಂದು ದಾಸೋಹವ ಮಾಡದೆ, ತನ್ನ ಬೇಡಿದವರಿಗೆ ಇಲ್ಲೆನ್ನದಿಹುದೇ ಭಕ್ತಸ್ಥಲ. ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಮೊದಲಾದ ಸಕಲ ಸಂಸಾರ ವಿಷಯದಲ್ಲಿ ಮನ ಮಗ್ನವಾಗದಿಹುದೇ

ಮಹೇಶ್ವರಸ್ಥಲ. ಲಾಂಛನವ ಧರಿಸಿ ಕಾಂಚನಕ್ಕೆ ಕೈಯ್ಯೊಡ್ಡಿ ಬೇಡುವ ಪಂಚ ಮಹಾಪಾತಕರಲ್ಲಿ ಪಾದೋದಕ ಪ್ರಸಾದವ ತೆಗೆದುಕೊಳ್ಳದಿಹುದೇ ಪ್ರಸಾದಿಸ್ಥಲ. ತನ್ನ ತಾನರಿಯದ ಭಿನ್ನಜ್ಞಾನ ಕ್ರಿಯಿಂದಾಚರಿಸುವ ನರಗುರುಗಳಿಗೆ ನಮಸ್ಕರಿಸದೆ ಪರಲೋಕದ ಫಲಪದವಿಗಿಚ್ಛೈಸದಿಹುದೇ ಪ್ರಾಣಲಿಂಗಿಸ್ಥಲ. ಇಹಲೋಕದ ಜಡ ಸಂಸಾರಿಗಳ ಸಂಗವ ಜರಿದು ಗುರುಲಿಂಗಜಂಗಮ ಮೂಲವಾದ ಬಾಹ್ಯಕ್ರಿಗಳ ಮರೆದು ಜನನಮರಣಂಗಳಿಲ್ಲದಿಹುದೇ ಶರಣಸ್ಥಲ. ಅರಿಷಡ್ವರ್ಗಂಗಳ ತೊರೆಯದ ಷಡ್ವಿಧ ಲಿಂಗಾಂಗಸಮರಸವನರಿಯದ ಮಂಗಹೊಲೆ ಮಾಡಿಗರ ಸಂಗವ ತೊರೆದು ನಾನಿದಿರೆಂಬುವನರಿಯದೆ ಇಹುದೇ ಐಕ್ಯಸ್ಥಲ. ತಾನಾಗಿ ಕೊಟ್ಟರೆ ಹಿಡಿವುದೇ ಮಧ್ಯಮ ಗುರುಸ್ಥಲ. ಕೊಟ್ಟರೂ ಹಿಡಿಯದಿಹುದೇ ಪರಮ ವಿರಕ್ತಿಸ್ಥಲ. ಕಾಡಿ ಬೇಡುವದೇ ಕಿರಾತಸ್ಥಲ. ಇಂತೀ ನವವಿಧಸ್ಥಲವ ಹರಗುರುವಾಕ್ಯ ಪುರಾತನರ ವಚನ ಪ್ರಮಾಣದಿಂದ ವಿಚಾರಿಸಿ, ಪುರಾತನರ ಕವಳಿಕೆಗೆ ಯೋಗ್ಯವಾದ ಸ್ಥಲವನಂಗಂಗೊಂಡ ಪರಿಣಾಮಿ, ನಿರುಪಾಧಿ, ಪರಿಪೂರ್ಣ, ಎಂಬ ತ್ರಿವಿಧ ಜಂಗಮಲಿಂಗದ ತೀರ್ಥಪ್ರಸಾದವನಂಗೀಕರಿಸಿ, ಪುರಾತನರ ಕಳವಳಿಕೆಗೆ ಅಯೋಗ್ಯವಾದ ಸ್ವಯ, ಚರ, ಪರವೆಂಬ ತ್ರಿವಿಧ ಗುರುಗಳಲ್ಲಿ ತೀರ್ಥ ಪ್ರಸಾದವನುಳಿದಾಚರಿಸುವದು ನಿರ್ವಯಲ ಪದವನೈದುವದು ಬಸವಾದಿ ಪ್ರಮಥರಿಗಲ್ಲದೆ, ಭಿನ್ನ ಜ್ಞಾನಿಗಳಿಗೆಲ್ಲಿಯದೋ ಸದಾಶಿವಮೂರ್ತಿ ಲಿಂಗವೇ ?

## (೫) ಭಕ್ತಸ್ಥಲ.

**ವಿವರಣೆ:—** ನೈತಿಕಾಚಾರಣೆಯೇ ಭಕ್ತಸ್ಥಲದ ಮುಖ್ಯ ಲಕ್ಷಣವಾಗಿರುತ್ತದೆ. ಈ ಸ್ಥಲವಲ್ಲಿ ವಚನಕಾರರು ನೀತಿಯಿಂದ ನಡೆಯಬೇಕೆಂದು ಅನೇಕ ಬಗೆಯಾಗಿ ಹೇಳುವದುಂಟು. ವರ್ತನೆ ಶುದ್ಧವಾಗಿರಬೇಕು, ಮನಸ್ಸನ್ನು ಬಿಗಿಹಿಡಿಯಬೇಕು, ಮಾಯೆಗೆ ಬಲೆ ಬೀಳಬಾರದು, ನೀತಿಯಿಂದ ವರ್ತಿಸುವದರಿಂದಲೇ ಜ್ಞಾನವು ಪ್ರಾಪ್ತವಾಗುತ್ತದೆ,

ಜಂಗಮರ ಕೂಡ ನೀತಿಯಿಂದ ವರ್ತಿಸಬೇಕು ಎಂದು ಮೊದಲಾಗಿ ಈ ಸ್ಥಲದಲ್ಲಿ ಅವರು ಯಾವಾಗಲೂ ಒತ್ತಿ ಹೇಳುವದುಂಟು. ಅರು ವಿನ ಮಾರನು ಕೆಳಗಿನ ವಚನಗಳಲ್ಲಿ ಈ ವಿಷಯುವನ್ನೇ ಹೇಳಿರುವನು.

## ವಚನಗಳು.

೨೩. ಕನ್ನಡಿಯಲ್ಲಿ ಕಪ್ಪು ಹುಟ್ಟಿದಾಗ ಕಪ್ಪ ಕಳೆದಲ್ಲದೆ ಒಪ್ಪವ ಕಾಣಬಾರದು. ತನ್ನ ಭಾವಶುದ್ಧಕ್ಕೆ ದರ್ಪಣದೊಪ್ಪವನರಸಬೇಕು. ಎನ್ನ ಮನದ ಕಪಟ ನಿಮ್ಮ್ಮಯು ಚಿತ್ತಶುದ್ಧವನರಸಬೇಕು. ನಿಮ್ಮ್ಮಯು ನಿರ್ಮಲ ಎನ್ನಯು ಮಲದೇಹವ ತೊಳೆಯಬೇಕು. ಅರುವಿನ ಮಾರನ ಬಿನ್ನಹ. ಸದಾಶಿವಮೂರ್ತಿ ಲಿಂಗಕ್ಕೆ ತೆರಪಿಲ್ಲದ ಭಾವ.

೨೪. ಕಾಯದ ಕಕ್ಕುಲಿತೆಗಾಗಿ ಜೀವಿಗಳ ಬಾಗಿಲವ ಕಾವಂಗೆ, ಈ ಷಣತ್ರಯಕ್ಕಾಗಿ ಭವದುಃಖಿಗಳ ಬಾಗಿಲಲ್ಲಿ ನಿಂದು ವೇಳೆಯ ಕಾವಂಗೆ ಬ್ರಹ್ಮದ ಮಾತೇಕೆ? ಅದು ನಾಣ್ನುಡಿಗೊಳಗಾಗು, ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೨೫. ಒಂದಾಶೆಯ ಕುರಿತು ಸರ್ವಮಾತಿಂಗೊಡಲಾಯಿತ್ತು. ಒಂದಾಶೆಯನರಿತು ನಿಂದಡೆ ಈಶ ಮೂರ್ತಿ ತಾನಾಗಿಪ್ಪ. ಇಂತೀ ಉಭಯದಾಶೆಯಲ್ಲಿ ಗಾಸಿಯಾಗುತ್ತ ಮಾತಿನ ಮಾಲೆ ಬೇಡ. ಆಶೆಯ ಪಾಶ ಹರಿದು ಈಷಣತ್ರಯವ ಕಿತ್ತು ನಿಜಾತನಾಗಿರ್ದಲ್ಲಿ ಸದಾ ಶಿವಮೂರ್ತಿಲಿಂಗವು ತಾನೇ.

೨೬. ಭಕ್ತಿಹೀನನರಿದು | ಭಕ್ತಿಯ ಮಾಡುವಲ್ಲಿ ಗುರುಲಿಂಗ ಜಂಗಮದ ಇರವ ಸಂಪಾದಿಸಲಿಲ್ಲ. ಭಕ್ತಿಯುಳ್ಳವನರಿದು ಭಕ್ತಿಯ ಮಾಡು ವಲ್ಲಿ ಗುರುವಿನಲ್ಲಿ ಗುಣವನರಸಬೇಕು. ಲಿಂಗದಲ್ಲಿ ಲಕ್ಷಣವನರಸಬೇಕು. ಜಂಗಮದಲ್ಲಿ ವಿರಕ್ತಿಯನರಸಬೇಕು. ಅದೆಂತೆಂದೊಡೆ, ಇಂತೀ ತ್ರಿವಿ ಧವು ತನ್ನಯ ಪ್ರಾಣವಾದ ಕಾರಣ. ಪರುಷ ಶುದ್ಧವಾಗಿಯಲ್ಲದೆ ಲೋಹದ

ಕುಲವ ಕೆಡಿಸಲರಿಯದು. ತಾ ಹಿಡಿದು ಆರಾಧಿಸುವ ವಸ್ತು ಶುದ್ಧವಾಗಿಯಲ್ಲದೆ ಪೂಜಿಸುವ ಭಕ್ತನ ಚಿತ್ತ ಶುದ್ಧವಾಗಲರಿಯದು. ಸದಾಶಿವ ಮೂರ್ತಿ ಲಿಂಗ ಶುದ್ಧನಲ್ಲದೆ ಎನ್ನಂಗ ಶುದ್ಧವಲ್ಲ.

೨೭. ಬಚ್ಚಿಟ್ಟ ಬಯಕೆಯನೊಡೆದು ಬೇಡಿದಡೆ ಕೊಡದಿರ್ದಡೆ ಸ್ವಾಮಿದ್ರೋಹವಲ್ಲವೇ ? ಅಟ್ಟಡಿಗೆಯ ಪತಿಗೆ ಇಕ್ಕದೆ ಸತಿಯುಂಡಡೆ ನೆಟ್ಟನೆ ಕೇಡೆಯಲ್ಲವೇ? ಕೊಟ್ಟಾತನೊಡವೆಯ ಬೇಡಿದಡೆ ಕಟ್ಟಿ ಹೋಹನ ಕಷ್ಟ ಜೀವಿಗೇಕೆ ತ್ರಿವಿಧಭಕ್ತಿ, ಸಜ್ಜನಯುಕ್ತಿ ? ಇಂತೀ ಸಜ್ಜನ ಕಳ್ಳರ ಬಲ್ಲನಾಗಿ, ಸದಾಶಿವ ಮೂರ್ತಿಲಿಂಗವು ಬಲ್ಲನು.

೨೮. ಸಕಲವನರಿದಡೆ ಮಲತ್ರಯ ನಾಸ್ತಿಯಾಗಿರಬೇಕು. ಅರಿ[illegible] ನಿಂದುದಕ್ಕೆ ಮುಖ್ಯ. ಮೃತ್ತಿಕೆಯ ಕೂಡಿದ ಜಲವಾರದಿದ್ದಡೆ ಪಂಕ ದೋರುವಂತೆ, ಏನನರಿತು ನುಡಿದಡೂ ಕುಲ ಛಲ ಮಲ ನಾಸ್ತಿಯಾಗಿರಬೇಕು ಸದಾಶಿವ ಮೂರ್ತಿ ಲಿಂಗವನರಿವುದಕ್ಕೆ.

೨೯. ಮೊನೆ ತಪ್ಪಿದಲಗಿನ ಘನವೇನನೂ ಮಾಡದು. ಅರಿವು ಹೀನವಾದಲ್ಲಿ ಕ್ರಿಯೆ ಹರವರಿ ಏನನೂ ಮಾಡದು. ವರ್ತನ ಶುದ್ಧವಿಲ್ಲದ ಲಾಂಛನದುತ್ಕೃಷ್ಟತೆ ಏನನೂ ಮಾಡದು. ತ್ರಿಕರಣ ಶುದ್ಧವಿಲ್ಲದ ಮಾಟ ದ್ರವ್ಯದ ಕೇಡು ಭಕ್ತಿಗೆ ಹಾನಿ. ಇಂತೀ ಗುಣಾದಿಗುಣಂಗಳಲ್ಲಿ ಅರಿಯಬೇಕು. ಸದಾಶಿವ ಮೂರ್ತಿ ಲಿಂಗವನರಿಯಬೇಕು.

೩೦. ನಿಕ್ಷೇಪವ ನಿಕ್ಷೇಪಿಸುವಲ್ಲಿ ಮತ್ತಾರು ಅರಿಯಬೇಕೆಂಬುದಿಲ್ಲ ಶಿವಪ್ರಸಂಗವನೊಂದ ನುಡಿಯಲಾಗದು. ಮೀರಿ ನುಡಿದನಾದಡೆ ಸದಾಶಿವಮೂರ್ತಿ ಲಿಂಗಕ್ಕೆ ದೂರ.

೩೧. ಆನುವನರಿವನ್ನಕ್ಕಾಚರಣೆ. ಪುಣ್ಯವನರಿವನ್ನಕ್ಕ ಪೂಜೆ. ಶರೀರವುಳ್ಳನ್ನಕ್ಕ ಸುಖದುಃಖ. ಸಂತೋಷಿಸಬೇಕು. ತೆಪ್ಪದಲ್ಲಿ ನಿಂದ ಹೊಳೆಯ ದಾಂಟುವನಂತೆ ಕ್ರಿಯಾಶುದ್ಧವಾದಲ್ಲಿ ಜ್ಞಾನದ ಗೊತ್ತು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೩೨. ಬ್ರಹ್ಮಂಗೆ ಸರಸ್ವತಿಯಾಗಿ ಕಾಡಿತ್ತು ಮಾಯೆ. ವಿಷ್ಣುವಿಂಗೆ ಲಕ್ಷ್ಮಿಯಾಗಿ ಕಾಡಿತ್ತು ಮಾಯೆ. ರುದ್ರಂಗೆ ಉಮಾದೇವಿಯಾಗಿ

ಕಾಡಿತ್ತು ಮಾಯೆ. ಎನಗೆ ನಿಮ್ಮನರಿವ ಬಯಕೆ ಭಾವ ಮಾಯೆಯಾಗಿ ಕಾಡುತ್ತಿದೆ. ನೀ ನಾ ಉಳ್ಳನ್ನಕ್ಕ ಉಭಯವು ಮಾಯವಾಗಿದೆ. ಸದಾಶಿವಮೂರ್ತಿಲಿಂಗವು ನಾ ನೀನೆಂಬು ೯ ಮಾಯೆ.

೩೩. ಕಾರ್ಗೋರಗನ ಹೆಡೆಯ ಮಧ್ಯದೊಳೊಂದು ಕೊಳು ಸಿಕ್ಕ ಹೆಣ್ಣು ಕಾಲುಮೇಲಾಗಿ ತಲೆ ಕೆಳಗಾಗಿ ಅರುಹರನೆಲ್ಲರ ತನ್ನ ಕಾಲ ಸಂದಿಯಲ್ಲಿರಿಸಿ ಭಾಳಾಂಬಕನ ಲೀಲೆಯ ಹೊತ್ತಾಡುವರನೆಲ್ಲರ ತನ್ನ ಶುಕ್ಲದ ಪದರಿನಲಿ ಬೈಚಿಟ್ಟು ಇದ್ದಾಳೆ. ಆ ಹೊಲೆಯ ಹರಿದಲ್ಲದಾಗದು ಗದಾಶಿವಮೂರ್ತಿ ಲಿಂಗವನರಿವುದಕ್ಕೆ.

೩೪. ಮತಿಯಿಂದ ಕಾಂಬುದು ಚಿತ್ತದ ಹಂಗು. ಪೂಜೆಯಿಂದ ಕಾಂಬುದು ಪುಣ್ಯದ ಹಂಗು. ಉಭಯವನಳಿದು ಕಾಂಬುದಕ್ಕೆ ಚಿತ್ತವೆಂಬುದಕ್ಕೆ ಗೊತ್ತಿಲ್ಲ. ಏನು ಏನು ಬಾರದು. ಸದಾಶಿವಮೂರ್ತಿ ಲಿಂಗವನರಿವುದಕ್ಕೆ ಠಾವ ಹೇಳಾ.

೩೫. ಭಕ್ತ ಗುರುಚರವ ನುಡಿವಲ್ಲಿ ನೋವುಂಟೇ ಅಯ್ಯ? ಪುರುಷ ಕಳ್ಳನಾದಲ್ಲಿ ಸತಿಗೆ ಸೆರೆಯುಂಟಲ್ಲವೆ ಸೂಳೆಯ ಮಿಂಡ ಸತ್ತರೆ ಅವಳನಾರು ಸೆರೆಯ ತೆಗೆವರುಂಟೇ ಅಯ್ಯ? ಸಜ್ಜನ ಸದ್ಭಕ್ತನೆಂದಡೂ ಸದಾಶಿವಮೂರ್ತಿ ಲಿಂಗಕ್ಕೆ ಒಳಗು.

೩೬. ಯತಿಗು ಗುಣದ್ವೇಷ, ಶಾಸ್ತ್ರ ಗುಣದ್ವೇಷ, ಆಚಾರ ಗುಣದ್ವೇಷ- ಸಮತೆ ಶಾಂತಿ ಗುಣದಲ್ಲಿ ನಿಂದ ವಿರಕ್ತಿ ಗುಣದ್ವೇಷ. ಇಂತೀ ದ್ವೇಷಮಂ ಬಿಟ್ಟು ಸ್ವಯಂಭುವಾಗಿ ನಿಂದುದ ಸದಾಶಿವಮೂರ್ತಿ ಲಿಂಗವು ತಾನೇ.

೩೭. ಶಿವಭಕ್ತನಾಗಿ ಮುಂದೆ ಬಂದು ಶಿವಜಂಗಮವಾಗಿ ಕರ್ತುರೂಪ ತಾಳಿ ಹಿಂದುಳಿದ ಬಂದ ಉಭಯವು ಒಂದಾಗಿ ಜಗಹಿತಾರ್ಥವಾಗಿ ಬಂದಂದು ಸದಾಶಿವಮೂರ್ತಿ ಲಿಂಗವು ತಾನೆ.

---

## (೬) ಮಹೇಶಸ್ಥಲ.

**ವಿವರಣೆ:—** ಧೈರ್ಯ ಸ್ಥೈರ್ಯಾದಿಗಳುಳ್ಳವನೇ ಮಹೇಶ್ವರನು. ಅವನಲ್ಲಿ ಸಂದೇಹವೆಂಬುದಿಲ್ಲ. ಭಾಷೆಗೆ ತಪ್ಪನು. ಅತ್ಯಂತ ನೇಮಸ್ಥನಾಗಿರುವನು. ದೃಢಚಿತ್ತವುಳ್ಳವನಾಗಿರುವನು.

### ವಚನಗಳು.

೩೮. ಕುಂಭಕ್ಕೆ ಜಲವ ತುಂಬುವಲ್ಲಿ ಶೋಧಿಸಿದಲ್ಲದೆ ಶುದ್ಧವಿಲ್ಲ. ತಾ ಭುಂಜಿಸುವ ದ್ರವ್ಯಕ್ಕೆ ಕಲ್ಲು, ಕಡ್ಡಿ, ಮುಳ್ಳು ಮೊದಲಾಗಿ ಶೋಧಿಸಿಕೊಂಡಲ್ಲದೆ ಶುದ್ಧವಿಲ್ಲ. ಕಂಡುಕೊಳಬಹುದೇ ? ಇಂತಿದನರಿದು ಸಂದೇಹದಲ್ಲಿ ಮಾಡುವ ಭಕ್ತಿ ಅಂಧಕ ಕಣ್ಣು ಹೊಸೆವಂತಾಯಿತ್ತು. ಸಂದೇಹವ ಬಿಟ್ಟಲ್ಲಿ ಅದು ನಿಸ್ಸಂಗ, ಸದಾಶಿವಮೂರ್ತಿ ಲಿಂಗದ ಸಂಗ.

೩೯. ಕ್ಷೀರಕ್ಕೆ ವಾರಿಯುಲ್ಲರತಲ್ಲದೆ ಮಧುರ ಗುಣವಿಲ್ಲ. ಶರೀರ ವಿಡಿದಿದ್ದ ಲಿಂಗಕ್ಕೆ ಆಸೆಯುರತು ರೋಷ ಹಿಂಗಿ ಈಷಣತ್ರಯವನರಿದು ಈಶನ ವೇಷದ ಭಾಷೆಗೆ ತಪ್ಪದಿಪ್ಪುದು ಗುರುಚರಮತ ಸದಾಶಿವಮೂರ್ತಿಲಿಂಗವನರಿವುದಕ್ಕೆ.

೪೦. ಮುನ್ನವೇ ಮೂರ ಹರಿದು, ಗುರು ಚರ ತಾನಾಗಿ ಬಂದಲ್ಲಿ ಇನ್ನು ಮೂರರಾಶೆ ಏಕೆ ? ಆವ ಜೀವಿಯೂ ತಮ್ಮ ಮಲವ ತಾವು ಮುಟ್ಟವಾಗಿ ಬಿಟ್ಟುದ ಹಿಡಿವ ಮಿಟ್ಟೆಯ ಭಂಡರನೊಪ್ಪ. ಸದಾಶಿವಮೂರ್ತಿಲಿಂಗವು ನಿರ್ಧರವಿಲ್ಲದವರನೊಲ್ಲ.

೪೧. ಅರಿವಾಗ ಆ ತನುವಿನಲ್ಲಿದ್ದೇ ಅರಿಯಿತ್ತು. ಮರೆವಾಗ ಆ ತನುವಿನಲ್ಲಿದ್ದೇ ಮರೆಯಿತ್ತು. ಅರಿವು ಮರವೆ ಎರಡಾಯಿತ್ತು. ಉಭಯವ ತಾನಳಿದ ಘಟ ಒಂದಾಯಿತ್ತು. ಇಂತೀ ಭೇದ ವಿಷದ ಬೇರಿನಂತೆ. ಸಂಚಾರದೊಳಗಾದುದು ವಿಷಮಯವಾಯಿತ್ತು. ಗೋಪ್ಯಕ್ಕೊಳಗಾದುದು ಅಮೃತಮಯವಾಯಿತ್ತು. ಇಂತೀ ಸಂಚಾರವುಳ್ಳನ್ನಕ್ಕ ಸಂಚಿತಕರ್ಮ. ಸಂಚಾರ ನಿಲೆ ಸದಾಶಿವಮೂರ್ತಿ ಲಿಂಗವು ತಾನೇ.

೪೨. ಎನ್ನ ಮಡದಿ ಹಾಲ ಕಾಸುವಾಗ ಹಾಲಿನ ಕುಡಿಕೆಯಲ್ಲಿ ಹಾವು ಬಿದ್ದು ಸತ್ತಿತ್ತು. ಎನ್ನ ಭಾಷೆ ಕೆಟ್ಟಿತ್ತು. ಮಡದಿಯು ಬಿಡ

ಬಾರದು. ಹಾಲ ಚೆಲ್ಲಬಾರದು. ಹಾವಿನ ವಿಷ ಹಾಲಿನಲ್ಲಿಯೇ ಸೋರಿತ್ತು. ಅದಕ್ಕಿನ್ನಾವುದು ತೆರ ? ಕ್ರಿಯೆಹಿಯು ಬಿಡಬಾರದು. ಗುರು ಹಿಂಗಾಶ್ರಯವಿಲ್ಲ. ಅರಿವನಾರಿದಿನೆನೆಂದಡೆ ಪ್ರಪಂಚಕ್ಕೆ ಒಡಲಾಯಿತ್ತು. ಹುಲಿ ಬಾಯಿ ಹಾವಿನ ಹೆಡೆಯನಿಕ್ಕಿದ ತೆರ ಎನಗಾಯಿತ್ತು. ಈ ಸಂದೇಹವ ಬಿಡಿಸು ಸದಾಶಿವಮೂರ್ತಿಲಿಂಗವೇ ನಿಮ್ಮ ಧರ್ಮ.

೪೩. ವೇದಪಾಠಕ ಶಾಸ್ತ್ರವಿತ್ತು. ಪುರಾಣ ಬಹು ಶ್ರುತಿವಂತ ವಾಚಕಾಡಂಬರ. ಭೇದಕ ಸಂಸ್ಕೃತ, ಪ್ರಾಕೃತ, ಅಪಭ್ರಂಶ ದೇಶಿಕವು ಈ ಮೊದಲಾದ ವಾಚಕ ಚಾರ್ವಾಕ ಮುಖಂಗಳಿಂದ ಹೋರುವ ಮಾಯಾ ವಾದದ ತೆರನಲ್ಲ. ಮೂಲಿಕಾಸಿದ್ಧಿ, ರಸಸಿದ್ಧಿ, ಅಂಜನಸಿದ್ಧಿ, ಅದೃಶ್ಯ ಕರಣ, ಕಾಯಸಿದ್ಧಿ ಇಂತೀ ಕುಟಿಲಂಗಳಿಗತಿರೇಕ ಅಗೋಚರ ಅಪ್ರ ಮಾಣ. ಅಂಗಲಿಂಗ ಸಂಬಂಧವಾದ ಶರಣನಿರವು ಎಂತೆಂದೊಡೆ, ಅನಿಲ ಮುಟ್ಟದ ಕಂಪಿನಂತೆ, ಶ್ರುತಿ ಮುಟ್ಟದ ಶಬ್ದಿಯಂತೆ, ಕೈ ಮುಟ್ಟದ ಗತಿಯಂತೆ, ನೆಯಿ ಮುಟ್ಟದ ದುಗ್ಧದಂತೆ, ಪವನ ಮುಟ್ಟದ ಪರ್ಣದಂತೆ, ಭಾವ ಭ್ರಮೆಯೊಳಗಿರ್ದು ಇಲ್ಲದ ಶರಣನ ಇರವು ಸದಾಶಿವಮೂರ್ತಿ ಲಿಂಗದಿರವು ತಾನೇ.

೪೪. ಕುರಿಯೊಡೆಯು ಹಲವರ ನಡುವೆ ನಿಂದರೆ ತನ್ನೊಡೆಯುನ ನರಿವಂತೆ ಸಕಲೇಂದ್ರಿಯ ಬಹು ದುಃಖದಲ್ಲಿದ್ದರೂ ತತ್ತತ್ ಕಾಲಾ ರ್ಚನೆ ಸೇವು ಕೃತ್ಯ ತಪ್ಪದೆ ಮಾಡಬೇಕು. ಇದು ನಿಶ್ಚಯದಿರವು ಸದಾಶಿವ ಮೂರ್ತಿಲಿಂಗವನರಿವುದಕ್ಕೆ.

೪೫. ಉಂಟೆಂಬ ದೃಢವಿಲ್ಲೆಂಬ ಸಂದೇಹ ತನ್ನಲ್ಲಿ ತೋರಿ ಅಳಿವುತ್ತಿಪ್ಪ ಭೇದವನರಿತಂಗೆ ಕಾಲತ್ರಯು ನಾಸ್ತಿ ಸದಾಶಿವ ಮೂರ್ತಿ ಲಿಂಗವನರಿತಡೆ.

೪೬. ಹರಿವ ಹಾವಿಂಗೆ ಕಾಲ ಕೊಟ್ಟು, ಉರಿವ ಕಿಚ್ಚಿಂಗೆ ಕೈಯ್ಯ ನಿಕ್ಕಿ, ಅರಿವಾಯುಧಕ್ಕೆ ಕೊರಳ ಕೊಟ್ಟು, ಮತ್ತೆಂತೋ ಅರುಹಿರಿಯು ರಾದಿರಿ ? ಮುಂದಕ್ಕಾತನನರಿಯ ಬಲ್ಲಡೆ ಹರಿವ ಚಿತ್ತವ ನಿಲಿಸಿ, ಕುದಿವ ಆಶೆಯು ಕೆಡಿಸಿ, ಸರ್ವ ವ್ಯಾಪಾರವೆಂಬ ಗೊತ್ತಿಗೆ ಚಿತ್ತವನಿಕ್ಕದೆ, ನಿಶ್ಚಯು ವಾಗಿ ನಿಂದುದು. ಅತನಿರವೇ ಸದಾಶಿವ ಮೂರ್ತಿಲಿಂಗವು ತಾನೇ.

೪೭. ಉಂಟಲ್ಲೆಂಬುದನರಿತು ನುಡಿವದು ಕ್ರಿಯೆಯೋ, ನಿಃಕ್ರಿಯೆಯೋ ? ಇವೆಲ್ಲವನರಿತು ನುಡಿಗಳು ಘಟದೊಳಗಣ ಮಾತಲ್ಲವೇ ? ಅದು ಮಾಯಾವಾದದಿರಗು. ಭಾವ ಕಾಯದಲ್ಲಿ ಸಿಕ್ಕ ಸಕಲವನೊಡಗೂಡಿ ಭೋಗಂಗಳನುಣುತ ತಾನಲ್ಲವೆಂಬ ಮಾಯಾವ ದಿಗಳ ಮಾತು ಕನ್ನದ ಬಾಯಲ್ಲಿ ಸಿಕ್ಕಿದ ಕಳ್ಳನ ಬಾಯುಲಿಯಂತೆ ಬಲ್ಲವರು ಮಚ್ಚುವರೇ ? ಶರೀರವುಳ್ಳನ್ನಕ್ಕ ಪ್ರಾಣಯುಕ್ತನಾಗಬೇಕು. ಇದೇ ನಿಶ್ಚಯು ಸದಾಶಿವ ಮೂರ್ತಿಲಿಂಗವನರಿವುದಕ್ಕೆ.

---

## (೭) ಪ್ರಸಾದಿಸ್ಥಲ.

**ವಿವರಣೆಃ—** ಮನುಷ್ಯನು ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸಿ ಉಪಭೋಗಿಸಬೇಕು. ಇದರಿಂದ ಅವನ ಕರ್ಮಗಳು ಕೆಡುವುವು. ಅವನು ಲೋಕದಲ್ಲಿ ಇದ್ದರೂ ಇಲ್ಲದಂತೆ ಇರುತ್ತಾನೆ.

**ವಚನಗಳು.**

೪೮. ಕಾಳಿಯ ಕಣ್ಣು ಕಿತ್ತು ಏಡಿಯು ಸರ್ವಾಂಗವ ಸೀಳಿ ಅಚ್ಚ ಬೆಳ್ಳಗೆಯು ಹಾಲ ಸಿಕ್ಕಯುಲ್ಲ ತಗೆದು ತೃಪ್ತಿಯಾಗಿ ಕೊಳಬಲ್ಲಡೆ ಆತನೇ ಸದಾಶಿವ ಮೂರ್ತಿಲಿಂಗವು.

**ಟೀಕುಃ—** ಶಿವಜ್ಞಾನೋದಯವಾದ ಶರಣನು ಅಜ್ಞಾನ ಸ್ವರೂಪಿಣಿಯಾದ ಮಾಯೆಯು ಭಿನ್ನಜ್ಞಾನವ ನಿವೃತ್ತಿಯು ಮಾಡಿದನೆಂಬುದೀಗ ಕಾಳಿಯ ಕಣ್ಣು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಬಂಧವಾದ ಖಂಡಿತ ಜ್ಞಾನವಳಿಯಲು ನಾನು ದುಶ್ಚರಿತ್ರವನುಳ್ಳ ಮನಸ್ಸಿನ ಪ್ರಕೃತಿಭಾವವ ನಿವೃತ್ತಿಯು ಮಾಡಿದನೆಂಬುದೀಗ ಏಡಿಯು ಸರ್ವಾಂಗವ ಸೀಳಿ ಎಂಬ ಶಬ್ದಕ್ಕರ್ಥ. ಅಂತು ಮನವಳಿಯಲು ಮಲತ್ರಯಂಗಳು ಹೊದ್ದದೆ ನಿರ್ಮಲಸ್ವರೂಪವಾದ ಜ್ಞಾನಶಕ್ತಿಯು ಮಧ್ಯದಲ್ಲಿರ್ಪ ಪರಮಾಮೃತ ರಸವನು ಸ್ವಾನುಭಾವ ಉಪಾಯ ತಂತ್ರದಿಂ ಕರೆಮುಕೊಂಡು

BOOK-POST.

R. N. B. 2554

ಶ್ರೀ ರಾ॥ ರಾ॥

*From*
Shivanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಪಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ. ೨ ಮನೆ ನಂ. [illegible] ದಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಕಟಿಸಿದರು.

# ಶಿವಾನುಭವ

ಸಂಪುಟ ೨೩ [ ಸಂಚಿಕೆ ೩

ಸಂಪಾದಕ.

ಫ. ಗು. ಹಳಕಟ್ಟಿ,
ಬಿ.ಎ. ಎಲ್. ಎಲ್. ಬಿ.



ವಾ. ಚಂ. ೫-೧೨-೦ ] ವಿಜಾಪುರ [ ಮಾರ್ಚ ೧೯೫೩

# ವಿಷಯಾನುಕ್ರಮಣಿಕೆ.



---


**ಶಿವಾನುಭವ ಮಾಸಪತ್ರಿಕೆ,**

**ವಿಜಾಪುರ.**

**ವಾರ್ಷಿಕ ಚಂದಾ ೫—೧೨—೦**

# ಶಿವಾನುಭವ

ವರ್ಷ ೨೬ | ಮಾರ್ಚ ೧೯೫೨ | ಸಂಚಿಕೆ ೩

## ನಿರ್ಲಜ್ಜ ಶಾಂತಯ್ಯ

ನಿರ್ಲಜ್ಜ ಶಾಂತಯ್ಯನು ಪರಮ ವಿರಕ್ತನು. ಅವನು ವಿರಕ್ತಾಶ್ರಮವನ್ನು ಹೊಂದಿದವನಾಗಿದ್ದನು. ಅವನು ಬಸವೇಶ್ವರನ ಕಾಲದಲ್ಲಿದ್ದು ಶಿವಾನುಭವ ಗೋಷ್ಠಿಯಲ್ಲಿ ಯಾವಾಗಲೂ ಅಂಗವಹಿಸಿ ಕಾರ್ಯ ಮಾಡುತ್ತಿದ್ದನು. ವೀರಶೈವ ಮಹಾನುಭಾವರಲ್ಲಿ ಚನ್ನ ಬಸವೇಶ್ವರನು ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಅವನು ಷಟ್‌ಸ್ಥಲ ಪಾರಂಗತನಾಗಿ ಅದರ ಆಚರಣೆಗಳನ್ನು ಎಲ್ಲರಿಗೂ ಬೋಧಿಸುವವನಾಗಿದ್ದಾನೆ. ಅವನು ತನ್ನ ವಿಚಾರಗಳನ್ನು ಯಾವ ರೀತಿಯಾಗಿ ಬೋಧಿಸುತ್ತ ಇದ್ದನೆಂಬುದು ಸಂಗನ ಬಸವೇಶ್ವರನ ವಚನಗಳಲ್ಲಿ ವಿವರಿಸಿದೆ. ಅದರಲ್ಲಿ ಹೇಳಿದ್ದೇನೆಂದರೆ:— ಅವನು ಮೊದಲು ತನ್ನ ಉಕ್ತಿಗಳನ್ನು ಮೊದಲು ನಿರ್ಲಜ್ಜ ಶಾಂತಯ್ಯನಿಗೆ ಹೇಳುವನು, ಆಮೇಲೆ ಶಾಂತಯ್ಯನು ಉಳಿದ ಪ್ರಮಥರಿಗೆ ಬೋಧಿಸುವನು, ಆಮೇಲೆ ಪ್ರಮಥರು ಅವುಗಳನ್ನು ನಾಡಿನಲ್ಲಿ ಎಲ್ಲ ಕಡೆಗೂ ಪ್ರಸಾರಮಾಡುವರು. ಈ ಸಂಗತಿಯ ಬಗ್ಗೆ ಸಂಗನಬಸವೇಶ್ವರನ ವಚನಗಳಲ್ಲಿ ಹೇಳಿರುವದು ಹೇಗೆಂದರೆ:—

"ಮಹಾ ಪ್ರಭುವು ಲಿಂಗಾಂಗಕ್ಕೆ ಭಿನ್ನವಿಲ್ಲದೆ ಹಸ್ತ ಮಸ್ತಕ ಸಂಯೋಗ ಮಾಡಿ ವೇಧಾ ಮಂತ್ರ ಕ್ರಿಯಾದೀಕ್ಷೆಯನಿತ್ತು ಇಪ್ಪತ್ತೊಂದು ತೆರದ ವಿಚಾರವನರುಪಿ, ನೂರೊಂದುಸ್ಥಲದಾಚರಣೆ ಇನ್ನೂರು ಹದಿನಾರು ಸ್ಥಲದ ಸಂಬಂಧವ ತೋರಿ ಸರ್ವಾಚಾರ ಸಂಪತ್ತಿನ ಸ್ವರೂಪ ನಿಲುಕಡೆಯ ತೋರಿಸಿ ಸಾಕಾರ ನಿರಾಕಾರದ ನಿಜದ ನಿಲುಕಡೆಯನರುಹಿ ನಿಜ ಶಿವಯೋಗದ ನಿರ್ವಯಲವ ಕಾಣಿಸಿ ಸತ್ತು ಚಿತ್ತಾ

ನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ತಾನೆಂದರು ಪಿದರು ನೋಡಾ. ಇಂತು ಚನ್ನ ಬಸವೇಶ್ವರ ಸ್ವಾಮಿಗಳು ಬೆಸಗೊಂಡು ತಮ್ಮ ಚಿದಂಗ ಸ್ವರೂಪರಾದ ಚಿದ್ಘನ ಶರಣ ನಿರ್ಲಜ್ಜ ಶಾಂತಯ್ಯ ನೆಂಬ ಶಿವಶರಣನ ಮುಖದಲ್ಲಿ ಮೋಳಿಗಯ್ಯ ಮೊದಲಾದ ಸಕಲ ಪ್ರಮಥರ್ಗೆ ಬೋಧಿಸಿದರು ನೋಡಾ " ಎಂದು ಈ ವಚನದಲ್ಲಿ ಹೇಳಿರು ತ್ತದೆ. ಇದರಮೇಲಿಂದ ನಿರ್ಲಜ್ಜ ಶಾಂತಯ್ಯನು ಚನ್ನ ಬಸವೇಶ್ವರನಿಗೆ ಸಹಾಯಕನಾಗಿ ವಚನ ವಾಙ್ಮಯದ ರಚನೆಯ ಕಾರ್ಯದಲ್ಲಿ ಮಹತ್ವದ ಭಾಗವನ್ನು ವಹಿಸಿದ್ದನೆಂದು ತಿಳಿದುಬರುತ್ತದೆ. ಇವನ ಚರಿತ್ರೆಯು ಅತ್ಯಂತ ಬೋಧಪ್ರದವಾಗಿರುತ್ತದೆ.

ನಿರ್ಲಜ್ಜ ಶಾಂತಯ್ಯನು ತನ್ನ ಪೂರ್ವಾಶ್ರಯದಲ್ಲಿ ಭಕ್ತಾಚಾರ ದಲ್ಲಿದ್ದು ತರುವಾಯ ಜಂಗಮ ಸ್ಥಲವನ್ನು ಹೊಂದಿ ಅದರಂತೆ ಆಚರಿ ಸುವವನಾಗಿದ್ದನು. ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಗುರುಲಿಂಗ ಜಂಗಮ ಗಳು ತನ್ನಲ್ಲಿಯೇ ಇರುತ್ತವೆ. ಅವುಗಳ ರೀತಿಗಳನ್ನು ತಿಳಿದು ಆಚರಿಸಿ ದಲ್ಲಿ ಷಟ್‌ಸ್ಥಲದ ಅಂತ್ಯ ಸ್ಥಲಗಳಲ್ಲಿರುವ ಜಂಗಮ ಲಿಂಗ, ಪ್ರಸಾದ ಲಿಂಗ ಮತ್ತು ಮಹಾಲಿಂಗ ಇವುಗಳ ಮೇಲಿನ ಮೂರು ಚಕ್ರಗಳಲ್ಲಿ ಲಿಂಗವು ಪ್ರಕಾಶಿಸಹತ್ತುವವು. ಅವುಗಳನ್ನು ಸಾಧಿಸಿದಲ್ಲಿ ಅವುಗಳಮೇಲಿ ರುವ ಲಿಂಗಗಳಾದ ನಿಷ್ಕಲ ಲಿಂಗ, ಶೂನ್ಯ ಲಿಂಗ, ಇವುಗಳನ್ನು ಹೊಂದಿ ಕಡೆಗೆ ಪಶ್ಚಿಮ ಚಕ್ರದಲ್ಲಿ ಬಯಲೊಳಗೆ ಬಯಲಾಗಿ ಹೋಗುವರು. ಇದೇ ಸಾಮರಸ್ಯ ಅಥವಾ ಶಿವಜೀವೈಕ್ಯವೆಂದೆನಿಸಿಕೊಳ್ಳುತ್ತದೆ. ಆದ್ದರಿಂದ ನಿರ್ಲಜ್ಜ ಶಾಂತಯ್ಯನು ಈ ಪ್ರಕಾರ ಜಂಗಮ ಸ್ಥಲವನ್ನು ಹೊಂದಿ ಆಚರಿಸುತ್ತ ಇದ್ದನು.

ಆದರೆ ಅವನು ಬಹಳ ಬಡವನಾಗಿದ್ದನು. ಅವನಿಗೆ ತಿನ್ನಲಿಕ್ಕೆ ಅನ್ನವಿಲ್ಲ, ಹೊದೆಯಲಿಕ್ಕೆ ಬಟ್ಟೆ ಇಲ್ಲ. ಆದರೂ ಅವನು ಯಾರನ್ನೂ ತಲೆಬಾಗಿ ಬೇಡಲಿಲ್ಲ. ಅವನಿಗೆ ಇದ್ದ ಒಬ್ಬ ತಂದೆಯು ತೀರಿಕೊಂಡನು. ಈ ಸ್ಥಿತಿಯಲ್ಲಿ ಅವನು ದೇಶಾಂತರಕ್ಕೆ ಹೊರಟನು. ಇದು ಪುರಾತನ ಕಾಲದಲ್ಲಿ ಜಂಗಮ ವರ್ಗದವರಲ್ಲಿದ್ದ ಪದ್ಧತಿಯಾಗಿತ್ತು. ಆದರೆ ಅವನು ತನ್ನ ಪ್ರವಾಸದಲ್ಲಿ ಯಾರಿಗೂ ಭಿಕ್ಷೆಬೇಡನು. ಭಕ್ತರು ಕರೆದರೆ ಅವರಲ್ಲಿ ಭೋಜನಕ್ಕೆ ಹೋಗುವನು. ಕರೆಯದಿದ್ದರೆ ಉಪವಾಸವಿರುವನು. ಅವನ

ಈ ವೃತ್ತಿಯನ್ನು ಭಕ್ತರು ನೋಡಿ ಅವನನ್ನು ಯಾವಾಗಲು ತಮ್ಮಲ್ಲಿ ಭೋಜನಕ್ಕೆ ಕರೆಯುವರು.

ಈ ಪ್ರಕಾರ ಶಾಂತಯ್ಯನು ತನ್ನ ಕಾಯಕವನ್ನು ನಡಿಸುತ್ತ ಕೊರಡಾರ ಎಂಬ ಪುರಕ್ಕೆ ಬಂದನು. ಅಲ್ಲಿ ಒಬ್ಬ ಜಂಗಮನು ಕೋರಾನ್ನವನ್ನು ತಂದು ದಾಸೋಹ ಕಾರ್ಯಗಳನ್ನು ನಡಿಸುತ್ತಿದ್ದನು. ಅವನು ಶಾಂತಯ್ಯನ ನಿರೀಕ್ಷಾ ವೃತ್ತಿಯನ್ನು ನೋಡಿ ಸಂತೋಷಪಟ್ಟು ಅವನನ್ನು ತನ್ನ ಮಠಕ್ಕೆ ಅಧಿಕಾರಿಯನ್ನಾಗಿ ಮಾಡಬೇಕೆಂದು ಬಯಸಿದನು. ಆಗ ಅವನು ಶಾಂತಯ್ಯನನ್ನು ತನ್ನ ಮಠಕ್ಕೆ ಕರೆದುಕೊಂಡು ಹೋಗಿ ಅವನಿಗೆ ನೀನು ನನ್ನ ಮಗಳನ್ನು ಮದುವೆಯಾದರೆ ಈ ಮಠ ದೊಂದಿಗೆ ನನ್ನ ಭಾಗ್ಯವನ್ನೆಲ್ಲ ನಿನಗೆ ಕೊಡುವೆನೆಂದು ಹೇಳಿ ಅವನನ್ನು ಲಗ್ನಕ್ಕೆ ಒಡಂಬಡಿಸಿದನು. ಮತ್ತು ಲಗ್ನ ಕಾರ್ಯವನ್ನೂ ಮುಗಿಸಿದನು.

ಪುರಾತನ ಕಾಲದಲ್ಲಿ ಶಿವಶರಣರು ತಮಗೆ ಬೇಕಾದರೆ ಲಗ್ನ ಮಾಡಿಕೊಳ್ಳಬಹುದು. ಅಥವಾ ಬಿಟ್ಟುಬಿಡಬಹುದು. ಹೀಗೆ ಇದ್ದು ಈ ಬಗ್ಗೆ ಯಾವ ನಿರ್ಬಂಧವೂ ಇರಲಿಲ್ಲ. ಸ್ತ್ರೀಯರೂ ಕೂಡ ಅದರಂತೆಯೇ ಲಗ್ನಮಾಡಿಕೊಳ್ಳಬಹುದು ಅಥವಾ ಬಿಡಬಹುದು. ಇದು ಅವರ ಇಚ್ಛೆಯ ಮೇಲೆ ಇದ್ದಿತು. ಆದ್ದರಿಂದ ಅನೇಕ ಸ್ತ್ರೀಯರು ಲಗ್ನವಾಗುವುದನ್ನು ಬಿಟ್ಟದ್ದುಂಟು. ಅಥವಾ ಲಗ್ನವಾಗಿ ಪ್ರಪಂಚವನ್ನು ನಡಿಸುತ್ತ ಬಂದವರೂ ಇದ್ದಾರೆ. ಆದರೆ ಇವರೆಲ್ಲರೂ ಶರಣೆಯರೆಂದು ಎನಿಸಿಕೊಂಡಿದ್ದಾರೆ. ಇವರಲ್ಲಿ ಅನೇಕರು ವಚನಕಾರರು ಸಹ ಆಗಿದ್ದಾರೆ.

ಶಾಂತಯ್ಯನ ಲಗ್ನವು ಮುಗಿದಬಳಿಕ ಅವನ ಮಾವನು ಭಕ್ತರನ್ನೆಲ್ಲ ಮಠದಲ್ಲಿ ಬರಮಾಡಿಕೊಂಡು ಅವರಿಗೆ ನನ್ನ ಅಳಿಯನಿಗೆ ನಾನು ಮುನ್ನಾಡಿದಂತೆ ನನ್ನ ಭಾಗ್ಯವನ್ನೆಲ್ಲ ಕೊಡುವೆನು ಎಂದು ನುಡಿದು ತನ್ನ ದಂಡಕೋಲು ಜೋಳಿಗೆಯನ್ನು ತಂದು, ಅಳಿಯನ ಮುಂದಿಟ್ಟು ಅಡ್ಡಬಿದ್ದು ಇವುಗಳನ್ನು ನೀನು ಕೈಕೊಳ್ಳು ಎಂದು ಅವನಿಗೆ ನುಡಿದು ತನ್ನ ಬದುಕಿನ ವಿವರವನ್ನು ಹೇಳಿದನು. ಅದು ಏನೆಂದರೆ, ಹೊರಸು ಒಂದು, ಹರಿವಾಣಗಳೆರಡು, ಜೋಳ ಒಂದು ಮಣವು, ಕಡಲೆ ಕಾಲುಮಣ, ಹರಕುಚಾಪೆ ಒಂದು, ಅಳೆಯುವ ಬಳ್ಳ (ಸೇರು) ಒಂದು, ಮೊರ

ಒಂದು, ಗಡಿಗೆಗಳು ಮೂರು, ಹುಟ್ಟು ಒಂದು, ಹುಲ್ಲಿನಿಂದು ಹೊರೆ, ಕಟ್ಟಿಗೆ ಎರಡು ಮಣ, ಉಪ್ಪು ಐದು ಸೇರು, ಒಂದು ಕುಂಟು ಗೋವು, ಇವೇ ನನ್ನ ಭಾಗ್ಯ ನಿನಗೆ ಸಲ್ಲಲಿ ಎಂದು ಶಾಂತಯ್ಯನಿಗೆ ಹೇಳಿ ಶರಣು ಮಾಡಿದನು.

ಶಾಂತಯ್ಯನಾದರು ಈ ಭಾಗ್ಯವು ತನಗೆ ಗುರು ನಿರೂಪದಿಂದ ಬಂದುದು, ಇದು ಗುರು ಕೊಟ್ಟ ಕಾಯಕವು ಎಂದು ಭಾವಿಸಿ ಎಷ್ಟು ಮಾತ್ರವೂ ಅಸಮಾಧಾನಪಡಲಿಲ್ಲ. ಶ್ರೀಮಂತಿಕೆಯು ಮತ್ತು ವೈಭವದ ಮಠವು ತನಗೆ ದೊರಕಲಿಲ್ಲವಲ್ಲಾ ಎಂದು ಅವನು ದುಃಖಿಸಲಿಲ್ಲ. ಅಥವಾ ಈಗಿನವರಂತೆ ತನಗೆ ಇಂತಿಷ್ಟು ವರದಕ್ಷಿಣೆ ಬರಬೇಕೆಂದು ಯಾರಕೂಡವೂ ಮಾತನಾಡಿರಲಿಲ್ಲ. ಅವನು ಕೇವಲ ಶಿವಾನುಭವಿಯು. ನಿರಿಚ್ಛೆಯುಳ್ಳವನು. ಆದ್ದರಿಂದ ತನಗೆ ಹೆಚ್ಚಿನ ಭಾಗ್ಯವು ಬರಲಿಲ್ಲ ವೆಂದು ಎಷ್ಟು ಮಾತ್ರವೂ ವ್ಯಸನಪಡಲಿಲ್ಲ.

ಶಾಂತಯ್ಯನು ಈ ಪ್ರಕಾರ ಒಂದು ಮಠದ ಅಧಿಕಾರಿಯಾಗಿ ತನ್ನ ದಾಸೋಹ ಕಾರ್ಯಗಳನ್ನು ನಡಿಸಹತ್ತಿದನು. ಪುರಾತನ ಕಾಲದಲ್ಲಿ ದಾಸೋಹ ಮಠಗಳಲ್ಲಿ ಶಿವಾನುಭವದ ರೀತಿ ನೀತಿಗಳನ್ನು ತಿಳಿಯಲಪೇಕ್ಷಿಸುವ ಶಿಷ್ಯ ವರ್ಗವು ಯಾವಾಗಲೂ ಇರುತ್ತಿತ್ತು. ಅದರ ವ್ಯವಸ್ಥೆಗಾಗಿ ಮಠಾಧಿಪತಿಯು ಗ್ರಾಮದಲ್ಲಿ ಕೋರಾನ್ನವನ್ನು ಎತ್ತುವನು. ಇಲ್ಲವೆ ಗ್ರಾಮದಲ್ಲಿರುವ ಭಕ್ತರು ತಾವಾಗಿಯೇ ಮಠಕ್ಕೆ ಬಂದು ಆಹಾರ ದ್ರವ್ಯಗಳನ್ನು ಕೊಡುವರು. ಒಂದುವೇಳೆ ಮಠದಲ್ಲಿರುವ ಶಿಷ್ಯರ ಸಂಖ್ಯೆಯು ಬಹಳ ದೊಡ್ಡದಾಗಿದ್ದರೆ ಗ್ರಾಮದಲ್ಲಿರುವ ಕೆಲ ಒಬ್ಬನು ಒಂದು ಬಂಡಿಯನ್ನು ಮಾಡಿಕೊಂಡು ಸುತ್ತಲಿನ ಗ್ರಾಮಗಳಿಗೆ ಹೋಗಿ ಅನ್ನ ಸಂಗ್ರಹ ಮಾಡಿ ಮಠಕ್ಕೆ ಒಪ್ಪಿಸುವನು. ಈ ಪದ್ಧತಿಯು ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯ ಸುಮಾರು ಒಂದು ನೂರು ವರ್ಷಗಳ ವರೆಗೂ ನಡಿಯುತ್ತ ಬಂದಿತೆಂದು ತೋರುತ್ತದೆ.

ಆದರೆ ಈ ಪದ್ಧತಿಯು ಮುಂದೆ ತಪ್ಪಿ ಹೋದಂತೆ ತೋರುತ್ತದೆ ಮಠಗಳಲ್ಲಿ ಶಿವಾನುಭವದ ಅಭ್ಯಾಸ ಮಾಡದೇ ಇದ್ದವರೂ ಕೂಡ ಇರುವರು. ಮಠಾಧಿಕಾರಿಗಳಾದವರು ದಾಸೋಹ ಮಠವೆಂದು ಸುತ್ತಲಿನ ಗ್ರಾಮಗಳಲ್ಲಿ ಧಾನ್ಯವನ್ನು ಎತ್ತುವರು. ಮತ್ತು ಅವುಗಳನ್ನು

ಸ್ವಾರ್ಥಕ್ಕಾಗಿ ಉಪಯೋಗಿಸುವರು. ಈ ರೀತಿಯು ಈಗಲೂ ಕೂಡ ಇರುವದು ಕಂಡುಬರುತ್ತದೆ.

ನಿರ್ಲಜ್ಜ ಶಾಂತಯ್ಯನೂ ಅವನಿಗೆ ಹೆಣ್ಣು ಕೊಟ್ಟ ಮಾವನೂ ದಾಸೋಹ ಮಠದಲ್ಲಿದ್ದು ಶ್ರೀಮಂತಿಕೆಯನ್ನು ಹೊಂದಬಹುದಾಗಿತ್ತು. ಆದರೆ ಆ ಉಭಯತರು ಬಡವರಾಗಿಯೇ ಕಡೆಯವರೆಗೆ ಉಳಿದರು. ಶಾಂತಯ್ಯನ ಚರಿತ್ರೆಯಲ್ಲಿ ಹೇಳಿರುವದೇನೆಂದರೆ:—

"ಶಾಂತಯ್ಯನು ನಿತ್ಯವೂ ಕೋರಾನ್ನವನ್ನು ತಂದು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು. ಮಠದಲ್ಲಿರುವವರಿಗೆ ಶಿವಾನುಭವ ಸದ್ಗೋಷ್ಠಿಗಳನ್ನು ಹೇಳುವನು. ಅವನು ಆಶಾರಹಿತನಾಗಿ ತನಗೆ ಸಾಕಾಗುವಷ್ಟೇ ಧಾನ್ಯವನ್ನು ಭಕ್ತರಲ್ಲಿ ಎತ್ತುವನು. ಆದನ್ನು ಹೆಚ್ಚಿಗೆ ಸಂಗ್ರಹಿಸಲು ಬಯಸನು" ಈ ಪ್ರಕಾರ ಅವನು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು.

ಶಿವನು ಅವನ ಶ್ರೇಷ್ಠವೃತ್ತಿಯನ್ನು ತಿಳಿದವನಾಗಿ ಅವನಿಗೆ ಮೆಚ್ಚಿ, ಅವನ ಗುಣಗಳು ಜನರಲ್ಲಿ ಹೆಚ್ಚಿಗೆ ಪ್ರಕಾಶಹೊಂದಬೇಕೆಂದು ಬಯಸಿ ಒಂದು ಉಪಾಯವನ್ನು ಯೋಚಿಸಿ ಜಂಗಮ ರೂಪ ಧಾರಣಮಾಡಿ ಶಾಂತಯ್ಯನಿದ್ದ ಗ್ರಾಮಕ್ಕೆ ಬಂದು ಅವನ ಮಠದ ಬಾಗಿಲಲ್ಲಿ ಬಂದು ನಿಂತನು.

ಆ ದಿವಸ ಉಗ್ರವಾದ ಚಳಿಯು ಬಿದ್ದಿತ್ತು. ಶಾಂತಯ್ಯನು ಕೋರಾನ್ನವನ್ನು ತರಲು ಹೊರಗೆ ಹೋಗಿದ್ದನು. ಒಳಗೆ ಅವನ ಹೆಂಡತಿಯೊಬ್ಬಳು ಮಾತ್ರ ಇದ್ದಳು. ಜಂಗಮನು ಅವಳನ್ನು ಹೊರಕ್ಕೆ ಕರೆದು ಅವಳಿಗೆ— ನನ್ನ ಸೀತಕ್ಕೆ ವಸನಬೇಕಾಗಿದೆ. ಚಳಿಯಿಂದ ನಡುಗುತ್ತಿದ್ದೇನೆ. ಒಂದನ್ನು ಕೊಡು ಎಂದು ಕೇಳಿದನು. ಆದರೆ ಮಠದಲ್ಲಿ ಅರಿವೆಯ ಚಿಂದಿಯು ಸಹ ಇರಲಿಲ್ಲ. ಅವಳು ಉಟ್ಟ ಸೀರೆ ಮತ್ತು ಶಾಂತಯ್ಯನು ಉಟ್ಟ ಧೋತ್ರ ಇವುಗಳ ಹೊರ್ತು ಯಾವ ವಸನವೂ ಅವರಲ್ಲಿರಲಿಲ್ಲ. ಆದರೆ ಸತಿಪತಿಗಳು ದಾಸೋಹ ನಡಿಸಲೇಬೇಕೆಂಬ ಕಾಯಕವನ್ನು ಇಟ್ಟುಕೊಂಡದ್ದರಿಂದ ಆ ಸತಿಯು ತಾನು ಉಟ್ಟಿದ್ದ ಅರ್ಧ

ಮೊಳದ ಸೀರೆಯೊಳಗೆ ಅರ್ಧವನ್ನು ಹರಿದು ಆ ಜಂಗಮನ ಕಯ್ಯಲ್ಲಿ ಕೊಟ್ಟಳು. ಆದರೆ ಅವನು— ಇಷ್ಟು ನನಗೆ ಸಾಕಾಗುವದಿಲ್ಲೆಂದು ನುಡಿ ದನು. ಆಗ ಅವಳು ತನ್ನ ಮೈಮೇಲೆ ಉಳಿದ ಮೂರು ಮೊಳದ ಸೀರೆಯಲ್ಲಿ ಪುನಃ ಅರ್ಧವನ್ನು ಹರಿದು ಆ ಜಂಗಮನ ಮುಂದಿಟ್ಟಳು. ಆದರೂ ಅವನು ಇಷ್ಟು ಸಹ ತನಗೆ ಸಾಲದೆಂದು ಅದನ್ನೂ ತನಗೆ ಮೊದಲು ಕೊಟ್ಟ ಅರಿವೆಯ ತುಣುಕನ್ನೂ ಮನೆಯಲ್ಲಿಯೇ ಇಟ್ಟು ಬೀದಿಗೆ ಬಂದು ಹೊರಟು ಹೋಗಹತ್ತಿದನು.

ಆಗ ಆ ಸತಿಯು ಸೀರೆಯ ಬಟ್ಟೆಯ ಆ ಎರಡೂ ತುಣುಕುಗಳನ್ನು ಎಡದ ಕಯ್ಯಲ್ಲಿ ಹಿಡಿದುಕೊಂಡು ಮನೆಯ ಹೊರಗೆ ಬಂದು— ಇವುಗಳನ್ನು ದಯಮಾಡಿ ತೆಗೆದುಕೊಳ್ಳಿ, ಎಂದೆನ್ನುತ್ತ ಆ ಜಂಗಮನ ಹಿಂದೆ ಬೆಳಿಯಲ್ಲಿ ಬರಹತ್ತಿದಳು. ಅದನ್ನು ನೋಡಿ ಪುರಜನರು ಅವಳ ದಾನಗುಣವನ್ನು ಕಂಡು ಬೆರಗಾದರು.

ಅಷ್ಟರಲ್ಲಿ ಶಾಂತಯ್ಯನು ಕೋರಾನ್ನವನ್ನು ತೆಗೆದುಕೊಂಡು ಮನೆಯ ಹಾದೀ ಹಿಡಿದು ಬರುತ್ತಿರಲು, ಅವನು ಇದಿರಿಗೆ ಬರುತ್ತಿರುವ ತನ್ನ ಸತಿಯನ್ನು ಕಂಡು, ಇದೇನೆಂದು ಅವಳಿಗೆ ಕೇಳಿದನು. ಅವಳು ನಡೆದ ಎಲ್ಲ ಸಂಗತಿಗಳನ್ನು ಅವನಿಗೆ ತಿಳಿಸಲು ಅವನು ಅವಳಿಗೆ— ಹೌದು, ನೀನು ಕೊಟ್ಟ ಉಡಿಗೆಯು ಈ ಜಂಗಮನಿಗೆ ಸಾಲದು. ಆದ್ದರಿಂದ ನನ್ನುಡಿಗೆಯನ್ನೂ ಅವನಿಗೆ ಕೊಟ್ಟು ಅವನ ಶೀತದ ಬಾಧೆಯನ್ನು ದೂರ ಮಾಡಬೇಕೆಂದು ತಾನುಟ್ಟ ಮೂರು ಮೊಳದ ಇಡೀ ಧೋತ್ರವನ್ನೇ ಕಳೆದು ಜಂಗಮನ ಕೈಯ್ಯಲ್ಲಿ ಕೊಟ್ಟು, ತಾನು ದಿಗಂಬರಿಯಾದನು. ಪುರಜನರು ಸತಿಪತಿಗಳೀರ್ವರ ಈ ಅಲೌಕಿಕ ನಿರಿಚ್ಛಾವೃತ್ತಿಯನ್ನು ಕಂಡು ಬೆರಗಾದರು. ಆಗ ಆ ಜಂಗಮನು ಅಲ್ಲಿಯೇ ಅಂತರ್ಧಾನನಾದನು. ಅಂದಿನಿಂದ ಶಾಂತಯ್ಯನು ದಿಗಂಬರಿಯಾಗಿಯೇ ಜನರಲ್ಲಿರಹತ್ತಿದನು.

ಈ ಕಾಲದಲ್ಲಿ ದೇಶದಲ್ಲಿ ಜೈನ ಸಂಸ್ಕೃತಿಯು ಇನ್ನೂ ಪ್ರಬಲವಾಗಿದ್ದರಿಂದ ಅನೇಕ ದಿಗಂಬರಿಗಳು ಜನರ ದೃಷ್ಟಿಗೆ ಬೀಳುತ್ತಿರಬೇಕು. ಆದ್ದರಿಂದ ಶಾಂತಯ್ಯನ ಈ ವೃತ್ತಿಯು ಜನರಿಗೆ ಅಷ್ಟು ವಿರೋಧವೆ

ನಿರಲಿಕ್ಕಿಲ್ಲ ಆದರೆ ಅವನು ಇದರಲ್ಲಿ ಲಜ್ಜೆಯನ್ನು ಬಿಡಬೇಕಾಗಿ ಬಂದದರಿಂದ ಜನರು ಅವನನ್ನು 'ನಿರ್ಲಜ್ಜ ಶಾಂತಯ್ಯ' ನೆಂಬ ಹೆಸರಿನಿಂದ ಕರೆಯುತ್ತಿದರು.

ಸಿದ್ಧರಾಮೇಶ್ವರ ಲಿಂಗ ನಿರ್ಲಜ್ಜ ಶಾಂತಯ್ಯನು ಶಿವಾನುಭವ ಮಂಟಪದಲ್ಲಿ ಪ್ರಭುದೇವ, ಚನ್ನಬಸವೇಶ್ವರ, ಇವರೊಡನೆ ಇದ್ದು ಉಚ್ಚ ಸ್ಥಾನವನ್ನು ಹೊಂದಿದವನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವನು ಅತ್ಯಂತ ಬಡತನ ಸ್ಥಿತಿಯಲ್ಲಿದ್ದ ಮಠಾಧಿಪತಿಯು. ಆದರೆ ಶ್ರೀಮತ್ತರ ಗತಿಯು ಶಿವಾನುಭವಿಯಾಗಿ ಶಿವಾನುಭವದ ಜ್ಞಾನವನ್ನು ಪ್ರಸಾರ ಮಾಡಿದ್ದಾನೆ. ಅವನು ಅತ್ಯಂತ ನಿರಾಶಿಕನು. ಆದ್ದರಿಂದ ತನ್ನ ದಾಸೋಹವನ್ನು ನಡಿಸುವಲ್ಲಿ ದಿಗಂಬರತ್ವವನ್ನು ಸಹ ಹೊಂದಲು ಹೆದರಲಿಲ್ಲ. ಇವನು ವಚನಗಳನ್ನು ರಚಿಸಿರಬಹುದೆಂದು ನಮಗೆ ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಅವನು ಕಲ್ಯಾಣಪಟ್ಟಣವಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಗೆ 'ನಿರ್ಲಜ್ಜೇಶ್ವರ ಲಿಂಗ' ಎಂಬ ಹೆಸರು ಪ್ರಾಪ್ತವಾಗಿತ್ತು.

---

# ಅನುಭಾವ.

ಷಟ್‌ಸ್ಥಲ ಶಾಸ್ತ್ರದಲ್ಲಿ ವಿಶೇಷಾರ್ಥವುಳ್ಳ ಶಬ್ದಗಳು ಅಸಂಖ್ಯಾತವಾಗಿರುತ್ತವೆ. "ಶಿವಾನುಭವ ಶಬ್ದ ಕೋಶ"ದಲ್ಲಿ ಬಂದಿರುವ ಶಬ್ದಗಳ ಸಂಖ್ಯೆಯು ಒಂದು ಸಾವಿರಕ್ಕಿಂತಲೂ ಹೆಚ್ಚಿಗಿರುವದು ಕಂಡು ಬಂದಿರುತ್ತದೆ. ಅವುಗಳ ವಿವಿಧ ಅರ್ಥಗಳನ್ನು ಈ ಗ್ರಂಥದಲ್ಲಿ ನಾವು ಕಾಣಬಹುದಾಗಿದೆ. ಈ ಶಾಸ್ತ್ರದಲ್ಲಿ ಒಂದೇ ಒಂದು ಶಬ್ದಕ್ಕೆ ಸ್ಥಲಾನುಸಾರವಾಗಿ ಅನೇಕಾರ್ಥಗಳಿರುತ್ತವೆ. ಈ ಸ್ಥಲಗಳು ಒಂದರಿಂದ ಇನ್ನೂರುಹದಿನಾರರ ವರೆಗೆ ಮಾತ್ರವಲ್ಲ, ಒಮ್ಮೊಮ್ಮೆ ೭೦೧ರ ವರೆಗೂ ಇರುತ್ತವೆ. ಈ ಪ್ರತಿಯೊಂದು ಸ್ಥಲಕ್ಕೆ ವಿಶಿಷ್ಟಾರ್ಥಗಳಿರುತ್ತದೆ. ಇವುಗಳ ವಿವರಣೆಗಳನ್ನು ಶಬ್ದಗಳಲ್ಲಿ ಹೇಳುವದು ಅಶಕ್ಯವಾಗಿರುತ್ತದೆ. ಆದರೆ ಸಂದರ್ಭಕ್ಕನುಸರಿಸಿ

ಅವುಗಳ ಭಾವವನ್ನು ವಾಚಕರು ಕಂಡುಹಿಡಿಯ ಬಹುದಾಗಿದೆ. ಈ ಭಾವಕ್ಕನು ಸರಿಸಿಯೇ ಅವುಗಳ ಅರ್ಥವೇನೆಂಬುದನ್ನು ನಾವು ತಿಳಿದುಕೊಳ್ಳತಕ್ಕದ್ದು.

ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ, ಎಂಬ ಮೂರು ಶರೀರಗಳಿರುತ್ತವೆ- ಸ್ಥೂಲದಲ್ಲಿ ಹೇಳಿದ ಭಾವವನ್ನು ಸೂಕ್ಷ್ಮದಲ್ಲಿ ಅರಿತುಕೊಳ್ಳಬೇಕು. ಹೀಗೆಅರಿತುಕೊಂಡು ಅದರಲ್ಲಿ ಪರಿಣಾಮ ಹೊಂದಬೇಕು. ಇದು ಷಟ್ಸ್ಥಲದ ವಿವರವು. ಇದನ್ನು ಷಟ್ಸ್ಥಲಜ್ಞನು ಅರಿತುಕೊಂಡು ಆಚರಿಸಬೇಕು. ಇಂಥ ಆಚರಣೆಯು ಷಟ್ಸ್ಥಲದ ತಿರುಳನ್ನು ಅರಿತವನಿಗೆ ಸಾಧ್ಯವಿರುತ್ತದೆ.

'ಅನುಭಾವ' ಈ ಶಬ್ದವು ಷಟ್ಸ್ಥಲ ಶಾಸ್ತ್ರದಲ್ಲಿ ಬಹಳ ಮಹತ್ವದ್ದಾಗಿದೆ. ಈಶಬ್ದವು ಅನುಭಾವ, ಶಿವಾನುಭವ, ಶಿವಾನುಭವ ಮಂಟಪ, ಶಿವಜ್ಞಾನಿ, ಈ ಮೊದಲಾದವುಗಳಲ್ಲಿ ಬರುತ್ತದೆ. ವಚನಗಳಲ್ಲಿ ಈಶಬ್ದವು ಆಗಿಂದ್ದಾಗ್ಗೆ ಬರುತ್ತಿದ್ದು ಯಾವನು ಷಟ್ಸ್ಥಲದ ರೀತಿಗಳನ್ನು ತಿಳಿದುಕೊಂಡಿರುತ್ತಾನೋ ಅವನು ಸ್ಥೂಲವಾಗಿ 'ಅನುಭಾವಿ' ಎಂದು ಹೇಳಲ್ಪಡುತ್ತಾನೆ. ಆದರೆ ಶಿವಶರಣರಲ್ಲಿ ಇಂಥ ಬಾಹ್ಯ ಜ್ಞಾನಕ್ಕೆ ಮಹತ್ವವಿಲ್ಲ. ಅದನ್ನು ಅವನು ತಿಳಿಯುವದಲ್ಲದೆ ಅದರಂತೆ ಆಚರಿಸಿ ಮನದಲ್ಲಿ ದೃಢಪಡಿಸಿಕೊಂಡಲ್ಲಿ ಅವನು ಹೆಚ್ಚಿನ ಮೆಟ್ಟಲನ್ನು ಹೊಂದಿದವನಾಗುತ್ತಾನೆ ಈ ಸ್ಥಿತಿಯಲ್ಲಿ ಅವನ ಅಂತರಂಗದ ಆಚರಣೆಯಲ್ಲಿ ಉನ್ನತವಾದ ಪರಿಸ್ಥಿತಿಯು ಉಂಟಾಗುತ್ತದೆ. ಆಗ ಅವನಿಗೆ ಶಿವಯೋಗವು ಪ್ರಾಪ್ತವಾಯಿತೆಂದು ವಚನಕಾರರು ಹೇಳುವದುಂಟು.

ಈ ಯೋಗದ ಆಚರಣೆಯು ಪ್ರಸಾದಿ ಮತ್ತು ಪ್ರಾಣಲಿಂಗಿಯ ಸ್ಥಲಗಳಲ್ಲಿ ಪ್ರಕಟವಾಗಹತ್ತುತ್ತದೆ. ಆಗ ಈ 'ಅನುಭಾವ' ಶಬ್ದದ ವಿವರಣೆಗಳು ಬೇರೆ ವಿಧವಾಗಿ ಹೇಳಲ್ಪಡುತ್ತವೆ. ಅವು ಅಂತರಂಗದ ಜ್ಞಾನಗಳಾಗಿವೆ. ಈ ಎರಡು ಶರೀರಗಳಿಗೆ ಮೆಲ್ಪಟ್ಟು ಕಾರಣಶರೀರವಿರುತ್ತದೆ. ಈ ಶರೀರವನ್ನು ಮುಟ್ಟಿದ ಅನುಭವವನ್ನು ಶಬ್ದಗಳಲ್ಲಿ ವರ್ಣಿಸುವದು ಶಕ್ಯವಿರುವದಿಲ್ಲ. ಇದನ್ನು ಆತ್ಮನಲ್ಲಿಯೇ ಅರಿಯಬೇಕು. ಅದು ಶಬ್ದದ ಆಚೆಗೆ ಇರುತ್ತದೆ ಅದು ಭಾವ ಗಮ್ಯವು ಹೀಗೆ 'ಅನುಭಾವ' ಇದರ ರೀತಿಗಳು

ಆಯಾಯ ಶರೀರಗಳಿಗೆ ಅನುಸಾರವಾಗಿ ಬೇರೆ ಬೇರೆ ತೆರನಾಗಿ ಹೇಳಲ್ಪಡುದುಂಟು. ಅವು ಬೇರೆ ಬೇರೆಯಾಗಿ ತೋರಿದರೂ ಮೂಲದಲ್ಲಿ ಅವುಗಳ ಭಾವವು ಒಂದೇ ಇರುತ್ತದೆ.

ಷಣ್ಮುಖಸ್ವಾಮಿಗಳು ವಚನಕಾರರಲ್ಲಿ ಅಗ್ರಸ್ಥಾನವನ್ನು ಹೊಂದಿದುತ್ತಾರೆ. ಅವರ ಅಂತರಂಗಿಕ ವಿಚಾರಗಳು ಬಹು ಮಿಗಿಲಾದವುಗಳು. ಅವರು ಪ್ರಾಣಲಿಂಗಿಸ್ಥಲದ ರೀತಿಗಳನ್ನು ಬಹುಚನ್ನಾಗಿ ಬಲ್ಲವರೆಂಬುದು ಅವರ ವಚನಗಳಿಂದ ತಿಳಿದುಬರುತ್ತದೆ.

ಬಸವೇಶ್ವರನು 'ಅನುಭಾವ' ಈ ವಿಷಯುವನ್ನು ಕುರಿತು ತನ್ನ ವಚನಗಳಲ್ಲಿ ಹೇಳಿರುತ್ತಾನೆ. ಆದರೆ ಅವು ಬಾಹ್ಯಕ್ರಿಯೆಗಳಿಗೆ ಸಂಬಂಧಿಸಿರುತ್ತವೆ. ಆದರೆ ಷಣ್ಮುಖಸ್ವಾಮಿಗಳ ವಿವರಣೆಗಳು ಈ ಅರ್ಥದಕಿಂತಲೂ ಬಹು ಮುಂದೆ ಸೂಕ್ಷ್ಮದಲ್ಲಿ ಹೊಗಿರುತ್ತವೆ. ಇದು ಹೇಗೆಂಬುದನ್ನು ಅವರ ಕೆಳಗಿನ ವಚನಗಳಲ್ಲಿ ನಾವು ಕಾಣಬಹುದು.

ಈ ವಚನಗಳಲ್ಲಿ ಷಣ್ಮುಖಸ್ವಾಮಿಗಳು ಶಿವಾನುಭವವೆಂದರೇನೆಂಬುದನ್ನು ಬಹು ಚನ್ನಾಗಿ ನಿರ್ದೇಶಿಸಿದ್ದಾರೆ. ಅವುಗಳನ್ನು ವಾಚಕರು ಚನ್ನಾಗಿ ವಿಮರ್ಶೆ ಮಾಡಿಕೊಳ್ಳಬೇಕೆಂದು ನಮ್ಮ ಸವಿನಯ ವಿಜ್ಞಾಪನೆ ಇದೆ. ಈ ಎಲ್ಲ ವಚನಗಳ ಅರ್ಥವು ಬಹು ಸ್ಪಷ್ಟವಾಗಿದೆ. ಇವುಗಳನ್ನು ಆಚರಣೆಯಲ್ಲಿ ತರುವದು ಶಿವಾನುಭವಿಗಳ ಕಾರ್ಯವಾಗಿದೆ.

## ವಚನಗಳು.

### ಪ್ರಕೃತಿ ಗುಣಗಳನ್ನು ನಷ್ಟಮಾಡುವುದು.

ಅನುಭಾವ ಅನುಭಾವವೆಂದು ನುಡಿವುತಿಪ್ಪರೆಲ್ಲರು
ಅನುಭಾವದ ಕೀಲವನಾರು ಅರಿಯರಲ್ಲ
ಅನುಭಾವವೆಂದಡೆ
ಅಂತರಂಗದ ಹೃದಯಕಮಳದ ಅಷ್ಟದಳಗಳ ಮೆಟ್ಟಿ

ಚರಿಸುವ ಜೀವ ಹಂಸನ ಕೊಂದು
ಇಂದ್ರ ದಿಕ್ಕಿನ ಎಸಳದಲ್ಲಿ ತೋರುವ ಭಿನ್ನ ಭಕ್ತಿಯನಳಿದು
ಅಗ್ನಿ ದಿಕ್ಕಿನ ಎಸಳಲ್ಲಿ ತೋರುವ ಜಡನಿದ್ರೆಯ ಮರ್ದಿಸಿ
ಯಮ ದಿಕ್ಕಿನ ಎಸಳಲ್ಲಿ ತೋರುವ ವ್ಯಸನವಿಕಾರವ ಮಸುಳಿಸಿ
ನೈಋತ್ಯ ದಿಕ್ಕಿನ ಎಸಳಲ್ಲಿ ತೋರುವ ಪಾಪದ ದುಷ್ಕೃತಿಯ ಪಲ್ಲಟಿಸಿ
ವರುಣ ದಿಕ್ಕಿನ ಎಸಳಲ್ಲಿ ತೋರುವ ಮಂದಗಮನವ ಪರಿಹರಿಸಿ
ವಾಯುವ್ಯ ದಿಕ್ಕಿನ ಎಸಳಲ್ಲಿ ತೋರುವ ದುಷ್ಟಾಚಾರವ ದೂರಮಾಡಿ
ಕುಬೇರ ದಿಕ್ಕಿನ ಎಸಳಲ್ಲಿ ತೋರುವ ದ್ರವ್ಯಾಪೇಕ್ಷೆಯ ಧಿಕ್ಕರಿಸಿ
ಈಶಾನ್ಯ ದಿಕ್ಕಿನ ಎಸಳಲ್ಲಿ ತೋರುವ ವನಿತಾದಿ
ವಿಷಯ ಪ್ರಪಂಚುಗಳ ಈಡಾಡಿ ನೂಕಿ
ಇಂತೀ ಅಷ್ಟಮದಂಗಳ ಹಿಡಿದು ತೋರುವ
ಪ್ರಕೃತಿಗುಣಂಗಳ ನಷ್ಟಮಾಡಿ
ನಟ್ಟ ನಡು ಚೌದಳ ಮಧ್ಯದಲ್ಲಿಪ್ಪ ಪರಬ್ರಹ್ಮವ ನೆಟ್ಟನೆ ಕೂಡಿ
ಅಷ್ಟಾವಧಾನಿಯಾಗಿ ಅಚಲಿತ ಜ್ಞಾನದಲ್ಲಿ ಸುಳಿಯಬಲ್ಲಡೆ
ಆತನೆ ನಿಜಾನುಭಾವಿ ಆತನೆ ನಿತ್ಯಮುಕ್ತನು ಆತನೆ ನಿರ್ಭೇದ್ಯನು

ಇಂತೀ ಭೇದವನರಿಯದೆ ಮಾತುಕಲಿತ ಭೂತನಂತೆ
ಆ ಮಾತು ಈ ಮಾತು ಹೊಸಮಾತುಗಳ ಕಲಿತು
ಕಂಡಕಂಡಲ್ಲಿ ನಿಂದನಿಂದಲ್ಲಿ ಮುಂದುವರಿದು ಹರಟೆಗುಟ್ಟುವ
ಒಣ ಹರಟೆಗಾರರ ಶಿವಾನುಭಾವಿಗಳೆಂತೆಂಬೆನಯ್ಯ ಅಖಂಡೇಶ್ವರಾ ?

## ಲಿಂಗವನ್ನು ತನು ಮನ ಜೀವನಲ್ಲಿ ಏಕಾಕಾರವಮಾಡುವದು

ತನುವಿನ ಮಧ್ಯದಲ್ಲಿ ಹೊಳೆದ ಇಷ್ಟಲಿಂಗದಲ್ಲಿ
ತನುವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಮನದ ಮಧ್ಯದಲ್ಲಿ ಹೊಳೆದ ಪ್ರಾಣಲಿಂಗದಲ್ಲಿ
ಮನವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಜೀವದ ಮಧ್ಯದಲ್ಲಿ ಹೊಳೆದ ಭಾವಲಿಂಗದಲ್ಲಿ
ಜೀವವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು

ಇಂತೀ ಅನುಭವದ ಅನುವನರಿಯದೆ
ತನುವಿನ ಕೈಯಲ್ಲಿ ಘನಲಿಂಗವ ಹಿಡಿದಡೇನು
ಅದು ಹುಟ್ಟುಗುರುಡನ ಕೈಯ್ಯ ಕನ್ನಡಿಯಂತೆ.

## ಪ್ರಾಣಲಿಂಗಿಯ ಸ್ಥಿತಿ.

ಅನುಭಾವಿಯಾದಡೆ ತಿರುಳು ಕರಗಿದ ಹುರಿದ ಬೀಜದಂತಿರಬೇಕು.
ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು
ಅನುಭಾವಿಯಾದಡೆ ದಗ್ಧ ಪಟದಂತಿರಬೇಕು
ಅನುಭಾವಿಯಾದಡೆ ದರ್ಪಣದೊಳಗಣ ಪ್ರತಿಬಿಂಬದಂತಿರಬೇಕು
ಅನುಭಾವಿಯಾದಡೆ ಕಡೆದಿಳುಹಿದ ಕಪ್ಪುರದ ಪುತ್ಥಳಿಯಂತಿರಬೇಕು
ಇಂತಪ್ಪ ಮಹಾನುಭಾವಿಗಳು ಆವ ಲೋಕದೊಳಗೂ
ಅಪೂರ್ವವಯ್ಯ ಅಖಂಡೇಶ್ವರಾ

ಲಿಂಗದ ನಡೆ ಲಿಂಗದ ನುಡಿ
ಲಿಂಗದ ನೋಟ ಲಿಂಗದ ಬೇಟ ಲಿಂಗದ ಕೂಟ
ಲಿಂಗದಲ್ಲಿ ಮನವಡಗಿರ್ದ ಲಿಂಗಾನುಭಾವಿಗಳ
ಸಂಗದಲ್ಲಿರಿಸಿ ಸಲುಹಯ್ಯ ಎನ್ನ ಅಖಂಡೇಶ್ವರಾ

## ಸರ್ವಾಂಗದಲ್ಲಿ ಸದಾಚಾರವನ್ನು ನೆಲೆಗೊಳಿಸುವುದು.

ಕಾಯಜೀವದ ಕೀಲವನರಿದು ಜನನ ಮರಣಂಗಳಾಯಾಸವಳಿದು
ಅಂಗ ಲಿಂಗದೊಳಗೆ ಏಕಾರ್ಥವ ಮಾಡುವ
ಭೇದವೆಂತೆಂದಡೆ

ಪಂಚಭೂತಂಗಳ ಪೂರ್ವಾಶ್ರಯುವನಳಿದು
ಪಂಚಕರಣಂಗಳ ಹಂಚುಹರಿಮಾಡಿ
ಕರ್ಮಬುದ್ಧೀಂದ್ರಿಯಗಳ ಮರ್ದಿಸಿ
ದಶವಾಯುಗಳ ಹಸಗೆಡಿಸಿ
ಕರಣಚತುಷ್ಟಯಂಗಳ ಕಾಲಮುರಿದು
ಪಂಚವಿಂಶತಿ ತತ್ವಂಗಳ ವಂಚನೆಯಳಿದು

ಹತ್ತುನಾಡಿಗಳ ಏಕೀಕರಿಸಿ
ಅಷ್ಟತನು ಅಷ್ಟಾತ್ಮಗಳ ನಷ್ಟಮಾಡಿ
ಅಂತರಂಗದ ಅಷ್ಟಮದಂಗಳ ಸಂಹರಿಸಿ
ಬಹಿರಂಗ ಅಷ್ಟಮದಂಗಳ ಬಾಯಬೊಣೆದು
ಅಷ್ಟಮೂರ್ತಿಮದಂಗಳ ಹುಟ್ಟುಗುಟ್ಟಿ
ಸಪ್ತಧಾತು ಸಪ್ತವ್ಯಸನಂಗಳ ಸಣ್ಣಿಸಿ
ಷಡೂರ್ಮಿ ಷಡ್ವರ್ಗಂಗಳ ಕೆಡೆಮೆಟ್ಟಿ
ಷಡ್ಭ್ರಮೆ ಷಡ್ಭಾವ ವಿಕಾರಂಗಳ ಗಂಟು ಸಡಲಿಸಿ
ಪಂಚಕೋಶ ಪಂಚಕ್ಲೇಶಂಗಳ ಪರಿಹರಿಸಿ
ಅಂಗ ಚತುಷ್ಟಯಂಗಳ ಶೃಂಗಾರವಳಿದು
ಗುಣತ್ರಯಂಗಳ ಗೂಡನುಚ್ಚಿ
ಅಹಂಕಾರತ್ರಯಂಗಳ ಶಂಕೆಗೊಳಗುಮಾಡಿ
ತಾಪತ್ರಯಂಗಳ ತಲ್ಲಣಗೊಳಿಸಿ
ತನುತ್ರಯಂಗಳ ತರಹರಮಾಡಿ
ಜೀವತ್ರಯಂಗಳ ಜೀರ್ಣೀಕರಿಸಿ
ಆತ್ಮತ್ರಯಂಗಳ ಧಾತುಗೆಡಿಸಿ
ಅವಸ್ಥಾತ್ರಯಂಗಳ ಅವಗುಣವಳಿದು
ತ್ರಿದೋಷಂಗಳ ಪಲ್ಲಟಗೊಳಿಸಿ
ಭಾವತ್ರಯಂಗಳ ಬಣ್ಣಗೆಡಿಸಿ
ದುರ್ಭಾವ ತ್ರಯಂಗಳ ದೂರಮಾಡಿ
ಮಲತ್ರಯಂಗಳ ಮರ್ದನಮಾಡಿ
ತ್ರಿಕರಣಂಗಳ ಛಿದ್ರಗೊಳಿಸಿ
ಪಂಚಾಗ್ನಿಗಳ ಸಂಚಲವನತಿಗಳೆದು
ಇಂತಿ ಅಂಗ ಪ್ರಕೃತಿ ಗುಣಗಳೆಲ್ಲ ನಷ್ಟವಾಗಿ
ಸರ್ವಾಂಗದಲ್ಲಿ ಸರ್ವಾಚಾರ ನೆಲೆಗೊಂಡು

### ಷಡ್ವಿಧ ಲಿಂಗವನ್ನು ಸಾಧಿಸುವುದು

ಬಹಿರಂಗದ ಮೇಲಿದ್ದ ಇಷ್ಟಲಿಂಗದಲ್ಲಿ
ಸೃಷ್ಟಿಕಾಭಾವವಿಂಬುಗೊಂಡು

ಅನಿಮಿಷದೃಷ್ಟಿ ಅಚಲಿತವಾಗಿ ಬಲಿದು
ಆ ಲಿಂಗವು ಅಂತರಂಗಕ್ಕೆ ವೇಧಿಸಿ
ಪ್ರಾಣಲಿಂಗವೆನಿಸಿಕೊಂಡು
ಷಡಾಧಾರಚಕ್ರಂಗಳಲ್ಲಿ
ಷಡ್ವಿಧ ಲಿಂಗವಾಗಿ ನೆಲೆಗೊಂಬುದು
ಆ ಷಡ್ವಿಧ ಲಿಂಗಕ್ಕೆ ಷಡಿಂದ್ರಿಯಗಳನೆ
ಷಡ್ವಿಧ ಮುಖಂಗಳೆನಿಸಿ
ಆ ಷಡ್ವಿಧ ಮುಖಂಗಳಿಗೆ ಷಡ್ವಿಧ ವಿಷಯಂಗಳನೆ
ಷಡ್ವಿಧ ದ್ರವ್ಯ ಪದಾರ್ಥವೆನಿಸಿ
ಆ ಪದಾರ್ಥಂಗಳು ಷಡ್ವಿಧ ಲಿಂಗಕ್ಕೆ
ಷಡ್ವಿಧ ಭಕ್ತಿಯಿಂದೆ ಸಮರ್ಪಿತವಾಗಲು
ಅಂಗವೆಂಬ ಕುರುಹು ಅಡಗಿ ಒಳಹೊರಗೆಲ್ಲ
ಮಹಾಘನಲಿಂಗದ ದಿವ್ಯ ಪ್ರಕಾಶವೆ
ತುಂಬಿ ತೊಳಗಿ ಬೆಳಗುತ್ತಿಪ್ಪುದು

## ಪಿಂಡ ಬ್ರಹ್ಮಾಂಡಗಳು ಏಕವಾಗುವುದು

ಇಂತಪ್ಪ ಘನಲಿಂಗದ ಬೆಳಗನೊಳಗೊಂಡಿಪ್ಪ
ಚಿದಂಗವೆ ಚಿತ್ಪಿಂಡವೆನಿಸಿತ್ತು
ಇಂತಪ್ಪ ಅತಿಸೂಕ್ಷ್ಮವಾದ ಚಿತ್ಪಿಂಡ ವಿಸ್ತಾರವನು
ಚಿದ್ಬ್ರಹ್ಮಾಂಡದ ಅತಿಬಾಹುಳ್ಯವನು
ಆ ಚಿತ್ಪಿಂಡದಲ್ಲಿ ವೇಧಿಸಿಕೊಂಡು
'ಪಿಂಡಬ್ರಹ್ಮಾಂಡಯೋರೈಕ್ಯಂ' ಎಂಬ ಶ್ರುತಿ ಪ್ರಮಾಣದಿಂದ
ಆ ಪಿಂಡಬ್ರಹ್ಮಾಂಡಗಳು ಒಂದೇ ಎಂದು ಕಂಡು
ಆ ಪಿಂಡಬ್ರಹ್ಮಾಂಡಗಳಿಗೆ ತಾನೇ ಆಧಾರವೆಂದು ತಿಳಿದು
ಆ ಪಿಂಡಬ್ರಹ್ಮಾಂಡಗಳ ತನ್ನ ಮನದ ಕೊನೆಯಲ್ಲಿ ಅಡಗಿಸಿ
ಆ ಮನವ ಭಾವದ ಕೊನೆಯಲ್ಲಿ ಅಡಗಿಸಿ
ಆ ಭಾವವ ಜ್ಞಾನದ ಕೊನೆಯಲ್ಲಿ ಅಡಗಿಸಿ
ಆ ಜ್ಞಾನವ ಮಹಾ ಜ್ಞಾನದಲ್ಲಿ ಅಡಗಿಸಿ

ಆ ಮಹಾ ಜ್ಞಾನವನು ಪರಾತ್ಪರವಾದ
ಪರಿಪೂರ್ಣ ಬ್ರಹ್ಮದಲ್ಲಿ ಅಡಗಿಸಿ
ಆ ಬ್ರಹ್ಮವೆ ತಾನಾದ ಶರಣಂಗೆ ದೇಹಭಾವವಿಲ್ಲ
ಆ ದೇಹಭಾವವಿಲ್ಲವಾಗಿ ಜೀವಭಾವವಿಲ್ಲ
ಆ ಜೀವಭಾವವಿಲ್ಲವಾಗಿ ಫಲಪದದ ಹಂಗಿಲ್ಲ
ಫಲಪದದ ಹಂಗಿಲ್ಲವಾಗಿ ಭವಬಂಧನಂಗಳು ಮುನ್ನವೆ ಇಲ್ಲ
ಭವಬಂಧನಂಗಳು ಇಲ್ಲವಾಗಿ
ಆ ಶರಣನು ತಾನು ಎಂತಿರ್ದಂತೆ ಪರಬ್ರಹ್ಮವೆ ಆಗಿ
ಆತನ ಹೃದಯಾಕಾಶವು ಬಚ್ಚಬರಿಯ ಬಯಲನೈದಿಪ್ಪುದು
ಇದು ಕಾರಣ
ಆ ಶರಣನು ದೇಹವಿದ್ದು ಸುಟ್ಟ ಸರವಿಯಂತೆ
ನಿರ್ದೇಹಿಯಾದ ಕಾರಣ
ಉಪಮಾತೀತ ವಾಙ್ಮನಕ್ಕಗೋಚರನಾಗಿಪ್ಪನಯ್ಯ
ಅಖಂಡೇಶ್ವರಾ

## ಪ್ರಾಣಲಿಂಗಿಯ ಇರವು

ಪರಾತ್ಪರವಸ್ತುವನೊಡಗೂಡಿದ ಪ್ರಾಣಲಿಂಗಿಯು
ಒಡಲ ಬೆಳಗಿನ ಗಡಣವೆಂತಿಪ್ಪುದೆಂದಡೆ
ಸ್ಫಟಿಕದ ಘಟದೊಳಗೆ ಜ್ಯೋತಿಯನಿರಿಸಿದಂತೆ
ಕತ್ತಲೆಯ ಮನೆಯಲ್ಲಿ ರತ್ನವ ಹರಹಿದಂತೆ
ರನ್ನದ ಗಿರಿಗೆ ರವಿಕೋಟಿ ಕಿರಣಂಗಳು ಮುಸುಕಿದಂತೆ
ಬೆಳಗು ಹಳಚಿದ ಮಹಾಬೆಳಗಿನೊಬ್ಬುಳಿಯನೊಳಕೊಂಡು
ಘನಗಂಭೀರವಾದ ಪ್ರಾಣಲಿಂಗಿಗಳ ಪಾದಕಮಲದಲ್ಲಿ
ಸರಮಲ ತುಂಬಿಯಾಗಿಹೆನಯ್ಯ ಅಖಂಡೇಶ್ವರಾ

ಚಿತ್ತ ನಿರ್ಮಲವಾದಾತ್ಮನು ಭಕ್ತಿಯಿಂದೆ
ಸತ್ಯಶರಣರಲ್ಲಿ ತತ್ತ್ವಾನುಭಾವವ ಬೆಸಗೊಂಡಡೆ
ನಿತ್ಯ ಶಿವಪದ ಘಟಿಸುವುದಯ್ಯ ಅಖಂಡೇಶ್ವರಾ

ಸರ್ವಜ್ಞನು ನೀನೆ ಅಯ್ಯ
ಸರ್ವೇಶ್ವರನು ನೀನೆ ಅಯ್ಯ
ಸರ್ವಾಂತರ್ಯಾಮಿ ನೀನೆ ಅಯ್ಯ
ಸರ್ವಗತನು ನೀನೆ ಅಯ್ಯ
ಸರ್ವಾತ್ಮನು ನೀನೆ ಅಯ್ಯ
ಸರ್ವಕಳಾಭರಿತನು ನೀನೆ ಅಯ್ಯ
ಸರ್ವಗುಣ ಸಂಪನ್ನನು ನೀನೆ ಅಯ್ಯ ಅಖಂಡೇಶ್ವರಾ

ಕುಂಭ ಸಹಸ್ರ ಉದಕದೊಳಗೆ
ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ
ಮತ್ತೆ ಹಲವರುಂಟೆ ಅಯ್ಯ
ಸಕಲ ದೇಹದೊಳಗೆ ಸಂಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ
ಮತ್ತಾರನು ಕಾಣೆನಯ್ಯ ಅಖಂಡೇಶ್ವರಾ

ವಿಶ್ವದೊಳಗೆಲ್ಲ ನೀನೆ ದೇವ
ವಿಶ್ವಭರಿತನು ನೀನೆ ದೇವ
ವಿಶ್ವರೂಪನು ನೀನೆ ದೇವ
ವಿಶ್ವಪತಿ ನೀನೆ ದೇವ
ವಿಶ್ವಾತೀತನು ನೀನೆ ದೇವ ಅಖಂಡೇಶ್ವರಾ

ಸಕಲ ವಿಸ್ತಾರದ ರೂಪು ನಿನ್ನೊಳಗಡಗಿಪ್ಪುದು
ನೀನೆನ್ನ ಮನದಲ್ಲಿ ಅಡಗಿಪ್ಪಿರಿ
ಅದೆಂತೆಂದಡೆ
ಕರಿ ಕಣ್ಣಾಲಿ ( ಕನ್ನಡಿ ) ಯೊಳಗಡಗಿದಂತೆ
ನೀನು ಭಕ್ತಜನಮನೋವಲ್ಲಭನಾದ ಕಾರಣ
ಎನ್ನ ಮನದ ಕೊನೆಯಲ್ಲಿ ಅಡಗಿದ್ದಿರಯ್ಯ ಅಖಂಡೇಶ್ವರಾ

ಪಶ್ಚಿಮದ ಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ
ಸುತ್ತಿ ಮುತ್ತಿದ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ

ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನ ಗೊತ್ತವೇ ತುಂಬಿಗುದ ಕಂಡೆ
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗಿ
ಹೊಚ್ಚ ಹೊಸ ಗಂಧ ದೆಸೆದೆಸೆಗೆ ಎಸೆದುದ ಕಂಡೆ
ಇಂತಿದರ ಕುಶಲವ ಕಂಡು ಬೆರಗಾದೆನಯ್ಯ ಅಖಂಡೇಶ್ವರಾ

---

# ನಿರ್ಮಲತ್ವ

( ಶ್ರೀ ಘನಮಠದಾರ್ಯರು ಕರ್ನಾಟಕದಲ್ಲಾದ ಮಹದ್ವಿಭೂತಿಗಳ ಲ್ಲೊಬ್ಬರಾಗಿದ್ದಾರೆ. ಅವರು ಪಾರಮಾರ್ಥ ವಿಷಯವನ್ನು ಬಲ್ಲರಷ್ಟೇ ಅಲ್ಲಿ ಅವರು ಲೌಕಿಕ ವಿಷಯಗಳನ್ನು ಸಹ ಬಲ್ಲವರಿದ್ದಾರೆ. ಲೌಕಿಕ ವಿಷಯಗಳ ಅವರ ವಿಚಾರಗಳು ಶ್ರೇಷ್ಠತರವಾದವುಗಳು. ಲೌಕಿಕದಲ್ಲಿ ಅವರು ಪ್ರಪಂಚವನ್ನು ಹೇಗೆ ನಡಿಸಬೇಕೆಂಬುದನ್ನು ಸಹ ಅವರು ವಿವೇಚಿಸಿದ್ದಾರೆ. ಅವರು ನಿರ್ಮಲತ್ವ ಅಥವಾ ಸ್ವಚ್ಛತೆ ಈ ವಿಷಯವನ್ನು ಕುರಿತು ಅನೇಕ ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ವಾಚಕರು ಅರಿಯುವದು ಅವಶ್ಯವೆಂದು ತೋರಿದ್ದರಿಂದ ಅವುಗಳನ್ನು ಇಲ್ಲಿ ಕೊಟ್ಟಿದ್ದೇನೆ. — ಸಂಪಾದಕ )

## ಲೌಕಿಕಾಚಾರದ ನಿರ್ಮಲತ್ವವು.

ಈ ಪ್ರಕರಣದಲ್ಲಿ ಮೊದಲು ಲೌಕಿಕಾಚಾರದ ವಿಷಯವಾಗಿರುವ ನಿರ್ಮಲತ್ವವನ್ನು ಹೇಳಬೇಕಾಗಿದೆ. ಹೇಗೆಂದರೆ ನಿರ್ಮಲತ್ವವು ಬ್ರಹ್ಮಾಂಡ ಪಿಂಡಾಂಡಗಳೆರಡರಲ್ಲಿಯೂ ಬೇಕಾಗಿದೆ. ಭೂಮಿಯಲ್ಲಿ ಬೆಳೆಯಲ್ಪಟ್ಟ ಸಕಲ ಸಸಿ ವೃಕ್ಷ ಲತಾದಿ ಸಮಸ್ತ ಫಲಪದಾರ್ಥವನೌಷಧಿಗಳಿಗೂ ಧಾನ್ಯಾದಿ ಸಕಲ ಪೈರುಗಳಿಗೂ ನಿರ್ಮಲತ್ವವಿದ್ದಹಾಗೆ ವಿಶೇಷ ಬೆಳೆಯಾಗುವವು. ಹಾಗೆ ಪಿಂಡೋದ್ಭವರಾದ ಸಕಲ ಪ್ರಾಣಿಗಳಿಗೂ ನಿರ್ಮಲತ್ವದಿಂದ ದೇಹಕ್ಕೆ ಆರೋಗ್ಯವಾಗುವದು. ಅದರಲ್ಲಿ ಮನುಷ್ಯರುಗಳಿಗಂತೂ ನಿರ್ಮಲತ್ವವು ಅತ್ಯಂತ ಹಿತವಾದದ್ದು.

ನಮ್ಮ ದೇಶವನ್ನಾಳುವ ವಿಲಾಯತಿ ಧೊರೆಗಳವರ ಮನೆಗಳನ್ನು ಅವರು ಮಲಗುವ ಹಾಸಿಕೆಗಳನ್ನು ಧರಿಸುವ ವಸ್ತ್ರಗಳನ್ನು ಕೂಡ್ರುವ ಸಿಂಹಾಸನಗಳನ್ನು ಮಂಚ ಖುರ್ಚಿ ಮೇಜು ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ. ಅವು ಎಷ್ಟು ಚನ್ನಾಗಿವೆ! ಮತ್ತು ಅವರು ವಿನೋದಾರ್ಥಕ್ಕಾಗಿ ಮಾಡಿಸಿರುವ ತೋಟಗಳನ್ನು ನೋಡಿದರೆ, ನಿರ್ಮಲ ತನದಿಂದ ಶೃಂಗಾರವಾಗಿ ಶೋಭೆಯಾಗಿ ಹೇಗೆ ರಂಜಿಸುತ್ತಿರುವವು! ಇವರು ನಡೆಯುವಲ್ಲಿ, ನುಡಿಯುವಲ್ಲಿ, ಹಾಗೂ ಇವರ ಸಕಲ ಕಾರ್ಯ ಗಳಲ್ಲಿ ನಿರ್ಮಲತನವೇ ಪ್ರಕಟವಾಗುವದಲ್ಲದೆ, ಮಲಿನವಣುಮಾತ್ರವೂ ತೋರದು. ಸಮಸ್ತ ಲೋಕಾಚಾರದ ಲೌಕಿಕರಾದ ಗೃಹಸ್ಥರೆಲ್ಲರೂ ಇವರನ್ನು ನೋಡಿ ನಿರ್ಮಲತ್ವವನ್ನು ಕಲಿಕುಕೊಳ್ಳಬೇಕು.

ನಮ್ಮ ದೇಶದ ಸ್ತ್ರೀಪುರುಷರಲ್ಲಿ ನಿರ್ಮಲರಾದ ಶುಚಿಗಳು ಬ್ರಾಹ್ಮಣ ಮತ್ತು ಲಿಂಗಾಯತರಲ್ಲಿ ಕೆಲವರುಂಟಲ್ಲದೆ, ಉಳಿದ ಧರ್ಮದ ಸ್ತ್ರೀಪುರುಷ ರೆಲ್ಲರೂ ಶುಚಿಗಳಲ್ಲವು. ಕೆಲವು ಚಿಕ್ಕ ಹಳ್ಳಿಗಳಲ್ಲಿ ಕೆಲವು ಪಾಮರರ ಗ್ರಾಮಗಳಲ್ಲಿ ಇರುವ ಮನೆಗಳು ಅಮಂಗಲರೂಪವಾಗಿದ್ದು ಆ ಸ್ತ್ರೀಯರು ಗಳ ಸಮೀಪದಲ್ಲಿ ನಿಲ್ಲಲಾಗದಂಥ ದುರ್ವಾಸನೆಯು ಇದ್ದು ಅವರ ಶರೀ ರವೂ ವಸ್ತ್ರಗಳೂ ಮಲಿನವಾಗಿ ಅವರ ವಾಕ್ಯದಲ್ಲಿ ಸ್ವಲ್ಪಾದರೂ ವಿನಯ ವಿಲ್ಲದೆ ಗಾಂಪರಾಗಿರುವದು. ಅದು ಅವರಿಗೆ ಅಭ್ಯಾಸವಾಗಿ ನಿರ್ಮಲತ್ವ ದಿಂದಿರುವದಕ್ಕೆ ಬೇಸರಪಡುತ್ತಾರೆ. ಅದರೊಳಗೆ ಈ ದಕ್ಷಾಲದ ತಾಪ ದಲ್ಲಂತೂ ನೋಡ ಕೂಡದ ಕುರೂಪಿಗಳಾಗಿದ್ದಾರೆ.

ಇದಲ್ಲದೆ ಕೆಲವು ಸ್ತ್ರೀಪುರುಷರು ಮೈಗಳ್ಳತನದಿಂದ ಆಲಸ್ಯತ್ವದ ಮುಗ್ಗಲತನದಿಂದ ತಮ್ಮ ಶರೀರದಲ್ಲಿ ಧರಿಸತಕ್ಕಂಥ ವಸ್ತ್ರಗಳನ್ನು ನಿತ್ಯ ವಲ್ಲೂ ತೊಳೆದು ನಿರ್ಮಲಮಾಡಲಾರದೆ, ಒಂದು ವರ್ಷದಲ್ಲಿ ನಾಲ್ಕಾರು ವೇಳೆ ತೊಳೆದರೆ ತೊಳೆಯುವರು, ಇಲ್ಲವಾದರೆ ಇಲ್ಲೇ ಇಲ್ಲ. ಇಂಥ ಮಲಿನ ವಸ್ತ್ರಗಳನ್ನು ಧರಿಸುವಲ್ಲಿ ಮೈಬೆವರಿನ ಮಲಿನತ್ವದಿಂದ ದುರ್ವಾ ಸನೆಯಾಗಿ ಆ ವಸ್ತ್ರಗಳಲ್ಲಿ ಕೂರಿಗಳೆಂಬ ಒಂದು ಪ್ರಕಾರದ ಚಿಕ್ಕ ಹುಳ ಗಳು ಹುಟ್ಟಿ ಜಾಡಿಸಿದರೆ, ಎಳ್ಳು ಉದುರಿದಹಾಗೆ ಉದುರುತ್ತಿದ್ದು ಯಾವಾಗಲೂ ಅವು ಅವರ ಶರೀರವನ್ನು ರಕ್ತಪಾನ ಮಾಡುತ್ತ ಹಗಲು

ರಾತ್ರಿಯಲ್ಲಿ ಉಪದ್ರವ ಕೊಟ್ಟರೂ ಕೆರಕೊಂಬುತ್ತ ತಿರುಗುವರಲ್ಲದೆ ವಸ್ತ್ರಗಳನ್ನು ತೊಳೆದು ನಿರ್ಮಲ ಮಾಡಿಕೊಳ್ಳಲಾರರು.

ವೈಗಳ್ಳರಾದ ಸ್ತ್ರೀಯರು ಸ್ವಚ್ಛವಾಗಿ ತಲೆಯ ಕೂದಲುಗಳಿಗೆ ಆಗಾಗ್ಗೆ ಎಣ್ಣೆಯನ್ನು ಹಚ್ಚಿ ಬಿಸಿನೀರಿನಿಂದ ಎಣ್ಣೆ ವಾಸನೆ ಹೋಗುವಂತೆ ಸೀಗೇಕಾಯಿ ಹುಳಿ ನೀರನ್ನು ಹಚ್ಚಿ ಜಳಜಳವಾಗುವಹಾಗೆ ತೊಳೆದು ನೀರು ಎರೆದುಕೊಳ್ಳಲಾರದೆ ಮಸ್ತಕವು ಮಲಿನವಾಗಿ ತಲೆಯು ಬೆವರಿನಿಂದ ಚಿಕ್ಕ ಹೇನುಗಳೆಂಬ ಹುಳಗಳು ಹಟ್ಟಿ ತಲೆಯನ್ನು ಕಚ್ಚುವದರಿಂದ ಕೆರೆದುಕೊಂಡು ಹುಣ್ಣು ಬಿದ್ದಾಗ್ಯಾದರೂ ಎರೆದುಕೊಳ್ಳಲಾರರು. ಮತ್ತು ಕೂರಿಗಳ ಉಪದ್ರವಕ್ಕಂತೂ ಅವರಿಗೆ ಲಕ್ಷ್ಯವೇ ಇಲ್ಲ.

ಮನೆಗಳ ವಿಷಯವಾಗಿ ಸ್ವಲ್ಪ ಹೇಳುತ್ತೇನೆ. ಹೇಗೆಂದರೆ ನಿತ್ಯದಲ್ಲಿ ಚನ್ನಾಗಿ ಕಸವನ್ನು ಹೊಡೆಯಲಾರದೆ ಮತ್ತು ಉಳಿದ ಕಸವನ್ನಾದರೂ ಮನೆಯಲ್ಲಿ ಒತ್ತಟ್ಟಿಗೆ ಒಂದು ಮೂಲೆಯಲ್ಲಿ ನೂಕುತ್ತಾರೇ ಹೊರತು ದೂರ ಒಯ್ದು ಹಾಕಲಾರರು. ಹೀಗೆ ಹತ್ತೆಂಟು ದಿವಸ ಮಾಡುವಷ್ಟರಲ್ಲಿ ಆ ಕಸದ ಮಲಿನದಲ್ಲಿ ಚಿಕ್ಕಾಡುಗಳೆಂಬ ಪಕ್ಕದ ಹುಳಗಳು ರಾಶಿರಾಶಿಯಾಗಿ ಹುಟ್ಟಿ ಮನೆಯಲ್ಲೆಲ್ಲ ತುಂಬಿಕೊಂಡು ವಸ್ತ್ರಗಳಲ್ಲಿ ಹೊಕ್ಕು ಹಗಲೂ ರಾತ್ರಿಯಲ್ಲಿ ಸಹ ಕಡಿದು ರಕ್ತಪಾನ ಮಾಡುತ್ತವೆ. ಈ ಹುಳಗಳು ಸಣ್ಣವಾದರೂ ಉಪದ್ರವ ಬಹಳ. ಅವು ಕೈಗೆ ಸಿಕ್ಕುವದಿಲ್ಲ. ಸಿಕ್ಕ ಕಾಲಕ್ಕಾದರೂ ಅವುಗಳ ಶರೀರಗಳು ಬಿರುಸಾಗಿರುವದರಿಂದ ಅವು ಬೇಗ ಸಾಯುವದಿಲ್ಲ.

ಕೆಲವು ಸ್ತ್ರೀಯರಿಗೆ ಅಡಿಗೆಯ ಮನೆಯ ಬಚ್ಚಲದಲ್ಲಿ ಮೂತ್ರ ಗೈಯ್ಯುವ ರೂಢಿ ಇರುವದರಿಂದ ಮೂತ್ರದ ದುರ್ವಾಸನೆಗೆ ಕುದುರೆಯ ಮೋತಿಯ ಹುಳುಗಳೆಂಬ ಆರು ಕಾಲಿನ ಉದ್ದವಾದ ಸೂಜಿಯಂಥ ಚುಂಚುಗಳುಳ್ಳ ಪಕ್ಕದ ಹುಳುಗಳು ಹುಟ್ಟಿ ಕಡಿಯಲಾರಂಭಿಸಿದರೆ, ಸರ್ವಾಂಗದಲ್ಲಿ ಸೂಜಿಯನ್ನು ಚುಚ್ಚಿದಂತಾಗುವದು. ಎಲ್ಲ ಹುಳುಗಳ ಉಪದ್ರವಕ್ಕಿಂತಲೂ ಈ ಹುಳಗಳ ಉಪದ್ರವವು ಬಹಳ.

ಮನೆಯ ಅಂಗಳಲ್ಲಿ ಮತ್ತು ಮನೆಯ ಸಮೀಪಕ್ಕೆ ಹೊಂದಿ ಹಿಂಭಾಗದ ಹಿತ್ತಲಗಳಲ್ಲಿ ಮಲವಿಸರ್ಜನೆ ಮಾಡುವದರಿಂದ ಅದರ ದುರ್ವಾ

ಸನೆಗೆ ಸೊಳ್ಳುಗಳೆಂಬ ಅತಿ ಸಣ್ಣ ಪಕ್ಕದ ಹುಳಗಳು ಹುಟ್ಟಿ ಮನೆಯಲ್ಲಿ ಸೇರಿಕೊಂಡಿದ್ದು ಕಣ್ಣು ತೆರೆದಾಕ್ಷಣಕ್ಕೆ ಕಣ್ಣಿಗೆ ಮುತ್ತಿಕೊಂಡು ಕಡಿಯುತ್ತವೆ.

ಇದಲ್ಲದೆ ವರ್ಷದಲ್ಲಿ ಒಂದೆರಡು ವೇಳೆಯಾದರೂ ಮನೆಯನ್ನು ಗೋಡೆಯನ್ನು ಸಾರಿಸಿ ನಿರ್ಮಲ ಮಾಡದೆ, ಮತ್ತು 'ಆಗಾಗ ದಾಗಲೆ ಗೋಡೆಯಮೇಲಿರುವ ಧೂಳವನ್ನು ಹೊಡೆಯದೆ ಇರುವದರಿಂದ ತ್ರಿಗುಣಿ ಎಂಬ ಹುಳಗಳು ಹುಟ್ಟುತ್ತವೆ. ಈ ಹುಳಗಳಿಗೆ ಮೂರು ಗುಣಗಳುಂಟು. ಮೂಗನ್ನು ಊರುವದು, ರಕ್ತವನ್ನು ಹೀರುವದು, ತೀವ್ರವೇ ಜಾರುವದು ಈ ಪ್ರಕಾರದ ಮೂರು ಗುಣಗಳಿರುವದರಿಂದ ಈ ಹುಳಗಳಿಗೆ ತ್ರಿಗುಣಿ ಎಂಬ ಹೆಸರಾಗಿದೆ. ಈ ಶಬ್ದ ಕೆಟ್ಟು ತಗಣಿ ಎನ್ನುತ್ತಾರೆ. ಮನೆಯಲ್ಲಿ ಇದೊಂದು ಇದ್ದರೆ, ದಿನ ಒಂದಕ್ಕೆ ಸಾವಿರ ಮಕ್ಕಳನ್ನು ಹಡೆಯುತ್ತದೆ. ಕೆಲವು ದಿವಸಕ್ಕೆ ಅವುಗಳು ಪ್ರಬಲವಾಗಿ ಗೋಡೆಗಳಲ್ಲಿ ಕಂಬದ ಬಿರುಕುಗಳಲ್ಲಿ ಧರಿಸುವ ವಸ್ತ್ರಗಳಲ್ಲಿ ಮಲಗುವ ಹಾಸಿಗೆಯಲ್ಲಿ ಮನೆಯ ಜಂತೆಗಳಲ್ಲಿ ಸಹ ಸೇರಿಕೊಂಡು ರಾತ್ರಿ ಹಗಲೂ ಕಡಿಯುತ್ತಿರುವವು. ರಾತ್ರಿಯಲ್ಲಿ ನಿದ್ರಾಸಮಯಕ್ಕೆ ಬಂದು ಶರೀರವನ್ನು ಮುತ್ತಿಕೊಂಡು ಕಡಿಯಲಾರಂಭಿಸಿದರೆ, ಶರೀರಕ್ಕೆ ಬೆಂಕಿ ಹಚ್ಚಿದಂತಾಗುವದು.

ಇವೆಲ್ಲದರಕ್ಕಿಂತ ಮಲಿನತ್ವದಿಂದ ಇನ್ನೊಂದು ದೊಡ್ಡ ಅನರ್ಥವುಂಟು. ಅದೇನಂದರೆ, ಮನೆಯ ಸಮೀಪದಲ್ಲಿ ತಿಪ್ಪೆಯನ್ನು ಹಾಕಿದ್ದರೆ, ಮತ್ತು ಬಚ್ಚಲದ ನೀರು ನಿಲ್ಲುವಹಾಗೆ ಮಾಡಿದ್ದರೆ, ಇವುಗಳ ದುರ್ವಾಸನೆಯು ಮೂಗಿನ ಶ್ವಾಸ ಮುಖದಿಂದ ಮಸ್ತಕದ ಮಿದುಳು ಕೆಟ್ಟು ಹೊಟ್ಟೆಯಲ್ಲಿ ನಾಭಿ ಸೂತ್ರ ನಾಡಿಗಿಳಿಯುತ್ತದೆ. ಇದರಿಂದ ಒಂದು ಪ್ರಕಾರದ ಹುಳಗಳು ಹುಟ್ಟುವವು. ಈ ರೋಗಕ್ಕೆ ಮಾರೀ ಉಪದ್ರವವೆನ್ನುತ್ತಾರೆ. ಈ ರೋಗವು ಊರೊಳಗೆ ಒಬ್ಬನಿಗೆ ಹುಟ್ಟಿದರೆ ಸಾಕು, ಅದು ಹಬ್ಬುತ್ತದೆ. ಅವನು ಮಲಮೂತ್ರ ವಿಸರ್ಜನೆ ಮಾಡಿದಲ್ಲಿ ಅಥವಾ ಅವನ ಬಾಯಿಯ ಮಾಂತಿಯಲ್ಲಿರುವ ಸೊಂಕು ತಾಕಿದರೆ ಸಾಕು, ಈ ರೋಗ ಹಬ್ಬುತ್ತದೆ. ಹೀಗಾಗಿ ಒಂದೊಂದು ದೊಡ್ಡ ಗ್ರಾಮದಲ್ಲಿ ಸಹ ಸ್ರಾವಧಿ ಜನರು ಮರಣಹೊಂದುತ್ತಾರೆ.

ಇವುಗಳೆಲ್ಲ ಮಲಿನದಿಂದಾದ ಅನರ್ಥಂಗಳು. ಇಷ್ಟು ಉಪದ್ರವಗಳು ಶರೀರಕ್ಕೆ ಇದ್ದಾಗ್ಯಾದರೂ ಜನರು ಅಜ್ಞಾನಿಗಳಾದ ಕಾರಣ ನಿರ್ಮಲ ರಾಗಿರಬೇಕೆಂಬ ಬುದ್ಧಿಯೂ ಹುಟ್ಟದೇ ಹೋಗುತ್ತದೆ.

ರಾಜರುಗಳು ಇವರ ಹೊಲಸುತನವನ್ನು ಲಕ್ಷಕ್ಕೆ ತಾರದೆ, ಇವು ಗಳಿಗೇನಾದರೂ ಉಪಾಯುಗಳನ್ನು ಮಾಡದೇ ಹೋದರೆ, ಜನರಿಗೆ ಎಂದಿಗೂ ಬುದ್ಧಿ ಬರುವದಿಲ್ಲ. ಇವರಿಗೆ ನಿರ್ಮಲತನದ ರುಚಿಯು ಹುಟ್ಟುವದಿಲ್ಲ.

ಇಷ್ಟು ಪ್ರಕಾರದ ಉಪದ್ರವವಾದ ಕಾಲಕ್ಕೂ ನಿರ್ಮಲತನದ ಸುಖವು ಮಲಿನತ್ವದ ದುಃಖವು ಇವರಿಗೆ ತಿಳಿಯದೆ ಹೋಯಿತು! ಇಂಥ ಮೂರ್ಖ ರನ್ನಾದರೂ ವಿವೇಕಕ್ಕೆ ತರುವ ವಿಷಯುವಲ್ಲಿ ನಮ್ಮ ರಾಜ ಪ್ರಭುಗಳು ಸಾಮರ್ಥ್ಯವುಳ್ಳವರಿದ್ದಾರೆ. ಅವರು ಲಕ್ಷಹಾಕದ ಕಾರಣ ಉಳಿದಿರುವದು. ಸ್ವಲ್ಪ ಲಕ್ಷಹಾಕಿದರೆ ಸಾಕು, ಅವರಿಗಿದೇನೂ ಆಶ್ಚರ್ಯವಲ್ಲ. ಹೀಗೆ ರಾಜರು ಬಲಾತ್ಕಾರದಿಂದಾದರೂ ಮಲಿನತ್ವದ ಜಾಡ್ಯ ಗುಣವನ್ನು ಬಿಡಿಸಿದರೆ ದೋಷವಿಲ್ಲ.

ಈ ನಿರ್ಮಲತನದ ವಿಷಯಕ್ಕೆ ಕಾಯದೆಯು ಬುಕ್ಕಿನಲ್ಲಿ ಒಂದು ಲ್ಯಕ್ಷನ್ನು ಮಾಡಿದರೆ, ಸಾಕು. ತತ್ಕಾಲಕ್ಕೆ ದೇಶವೆಲ್ಲ ನಿರ್ಮಲತನದಿಂದ ಸುಧಾರಿಸುವದಾಗಿ ಸರ್ವರಿಗೂ ಸುಖವಾಗುವದು.

ಶರೀರಾದಿ ಸಕಲ ವಸ್ತುಗಳನ್ನು ನಿರ್ಮಲ ಮಾಡುವದಕ್ಕೆ ಜಲವೇ ಮುಖ್ಯ ಸಾಧನವು. ಅದು ಕಾರಣ ಜಲವೆಂಬುದು ಜೀವನೋಪಾಯಕ್ಕೆ ಜೀವನವಾದ ಕಾರಣ ಜೀವನವೆಂಬ ನಾಮವು ಸಾರ್ಥಕವಾಗಿದೆ. ಈ ಜಲವೇ ಕೆಟ್ಟು ಅಪವಿತ್ರವಾಗಿ ಮಲಿನಾದಿ ದೋಷಗಳನ್ನು ಹೊಂದಿದರೆ, ವಿಷವಾಗಿ ಒಪ್ಪುತ್ತಿಹುದಾಗಿ ಕೋಶಕಾರನು ಜಲವನ್ನು ವರ್ಣಿಸಿದ್ದೇನಂದರೆ, "ನೀರಂ ಜೀವನಂ ವಿಷಂ ಕೀಲಾಲಂ ಅಮೃತಂ ಪಯಃ" ಎಂದು ಹೇಳಿ ದ್ದಾನೆ. ಇದಲ್ಲದೆ "ಜೀವನಂ ಸರ್ವ ಜಂತೂನಾಂ ಮಹಾದೇವ ಜಟಾನಿಧೇ" ಎಂದುಂಟಾಗಿ ಜಲವೇ ಜೀವನಕ್ಕೆ ಜೀವನ ಎಂದುದರಿಂದ ಬಲ್ಲವರು ಗ ಳೆಲ್ಲರು ನಿರ್ಮಲ ಜಲದಿಂದಲೇ ಸಕಲಭೋಗ ಪದಾರ್ಥಗಳನ್ನು ನಿರ್ಮಲ ಮಾಡಿ ಮತ್ತು ನಿರ್ಮಲ ಜಲದಿಂದಲೇ ಸ್ನಾನ ಪಾನಾದಿ ಪಾಕ ಪ್ರಯು

ಸ್ನಾನಗಳನ್ನು ಮಾಡಬೇಕು. ಅಪವಿತ್ರವಾದ ಮಲಿನ ಜಲವನ್ನೂ ದೋಷಾರೋಪಣ ಜಲವನ್ನೂ ಮುಟ್ಟಲಾಗದು. ಜಲವನ್ನು ಶೋಧಿಸಿದರೆ ಉದಕವೆನಿಸುವದು. ಸದಾಚಾರಿಗಳು ಶೋಧಿಸದೆ ಇದ್ದ ಜಲವನ್ನು ಯಾವ ಕೆಲಸಕ್ಕೂ ತೆಗೆದುಕೊಳ್ಳಬಾರದು.

"ಯಾವನ್ಮಾತ್ರ, ಮನಃಶ್ಶುದ್ಧಿಃ ತಾವಾತ್ ಶೌಚಂ ಸಮಾಚರೇತ್" ಇದು ಶ್ರುತ್ಯಾಚಾರವು. ಹೇಗೆಂದರೆ ಎಲ್ಲಿಯು ವರೆಗೆ ಮನಃ ಶುದ್ಧಿ ಹೊಂದುವದೋ ಅಲ್ಲಿಯ ವರೆಗೂ ಶುಚಿ ಮಾಡಬೇಕು. ಹೀಗೆ ಈ ಅರ್ಥವಿರುವದರಿಂದ ಕೆಲವರು ಫ್ರೆಂಚ ದೇಶದ ಸನ್ಯಾಸಿಗಳ ಬೋಧೆಯು ಸಂತತಿಯವರು ಲೋಕಾಚಾರದಂತೆ ಮಾಡಿ ಉಂಬುವದಾಗಿದೆ, ವೈಗಸೃತನದಿಂದ ಮತ್ತು ವಿಷಯ ವ್ಯಸನಾದಿಗಳ ಲಂಪಟತ್ವದಿಂದ ಸುರಾಪಾನ ಮಾಂಸಾಹಾರಾದಿಗಳ ರುಚಿಯಿಂದ ಬಯಲೇ ಬ್ರಹ್ಮವೆಂಬ ಉಭಯ ಭ್ರಷ್ಟತ್ವದ ಕೆಲವು ಮಾತುಗಳನ್ನು ಕಲಿತು ಶುಚಿಗಳಾದವರನ್ನು ಧಿಃಕ್ಕರಿಸುತ್ತ ಭಂಗಿ ದತ್ತೂರಿಯ ಅಮಲಿನಿಂದ ಪದಗಳನ್ನು ಹಾಡುತ್ತಾರೆ. ಹೇಗೆಂದರೆ "ಮುಟ್ಟೀ ಮುಟ್ಟೀ ಎಂದು ಮೂರು ಮಾರು ಹಾರುತೀದಿ. ಮುಟ್ಟಿನೊಳಗೆ ಹುಟ್ಟಿ ಬಂತ್ಯೋ ಪಿಕನಾಸಿ" ಎಂದು ಶ್ರುತ್ಯಾಚಾರ ಮತ್ತು ವೇದೋಕ್ತ ಧರ್ಮಾಚಾರಕ್ಕೆ ವಿರುದ್ಧವಾದ ಪದಗಳನ್ನು ಬಾಯಿಗೆ ಬಂದಂತೆ ಲಕ್ಷಣ ಹೀನವಾಗಿ ಕೂಗುತ್ತ ಬತ್ತಲೆ ಇರುತ್ತ ಶ್ವಪಚಾದಿಯಾಗಿ ಸರ್ವರಲ್ಲಿ ತಿರಿದುಂಬುತ್ತ ಬೋಕಿಯಲ್ಲಿ ಉಂಬುತ್ತ "ನಾವು ಅದ್ವೈತಿಗಳು ಆರೂಢರು ಬ್ರಹ್ಮಜ್ಞಾನಿಗಳು" ಎಂದು ಬಿಂಕದ ಮಾತುಗಳನ್ನಾಡುತ್ತ ತಿಪ್ಪೆಯಲ್ಲಿ ಅಮಲೇರಿ ಹೊರಳಾಡುತ್ತ ಜನರಿಗೆ ದುರ್ಬೋಧೆಯನ್ನು ಬೋಧಿಸುತ್ತ, "ತಾನು ಕೆಟ್ಟ ಕೋತಿ ವನವ ಕೆಡಿಸಿತ್ತು" ಎಂಬ ಗಾದೆಯಂತೆ ಅನಂತ ದುರ್ನಡತೆಗಳಿಂದ ನಡೆಯುತ್ತ ಶ್ರುತ್ಯಾಚಾರವುಳ್ಳ ಆಚಾರವಂತರಾದ ಶುಚಿಗಳನ್ನು ಧಿಃಕ್ಕಾರ ಮಾಡುತ್ತ ಶ್ವಪಚಾರಿಗಳಾದ ಮಾದಿಗರ ಅಭ್ಯಾಸದ ಕೆಲವು ಅದ್ವೈತಿಗಳು ಅನಾಚಾರಿಗಳಾಗಿ ವರ್ತಿಸುವರು.

ನಾನು ನೋಡುವವರಲ್ಲಿ ಇಂಥ ಆರೂಢರು ಅನೇಕರು ದೇದದಲ್ಲಿ ಹುಳಗಳು ಬಿದ್ದು ಒರಲಿ ಸತ್ತು ಹೋದರು. ಬನ್ನೂರೆಂಬ ಗ್ರಾಮದ ಪೇಟೆಯಲ್ಲಿ ಒಬ್ಬನು ದಿಗಂಬರನಾಗಿ ಬಂದು ಬೀದಿಯಲ್ಲಿ ಕೆಲವು ಹೊತ್ತು ಮಲಗಿದ್ದು ಆ ಮೇಲೆ ಎದ್ದು ಕುಳಿತು ಬಚ್ಚಲದ ನೀರ ಡೋಣಿಯಲ್ಲಿಯ

ನೀರನ್ನು ಬೊಗಸೆಯಲ್ಲಿ ತುಂಬಿ ಕುಡಿಯುತ್ತಿದ್ದನು. ಅಷ್ಟರಲ್ಲಿ ಒಬ್ಬ ಉತ್ತಮ ಸ್ತ್ರೀಯಳು ಕಂಡು “ ಆ ಉದಕ ನಾರುತ್ತದೆ. ಚರೋ ನೀರು ಹಾಕುವೆನು. ಆ ನೀರು ಕುಡಿಯಬೇಡ ” ಎಂದು ಹೇಳಿದಾಗ್ಯಾದ ೂ ಅದೇ ನೀರು ಕುಡಿಯು ಆ ಸ್ತ್ರೀಯಳಿಗುಂಟದ್ದೇನೆಂದರೆ, “ಇದು ಮಹಾ ಗಂಗಾ ಜಲವು. ನಾರುವದುಂಟೇ ? ನಿನ್ನ ಪೃಷ್ಠದಲ್ಲಿ ಬೆರಳಿಟ್ಟು, ನೋಡು ನಾರುತ್ತದೆ” ಎಂದನು. ಆಗ ಅಲ್ಲಿದ್ದವರೆಲ್ಲರೂ ಸುತ್ತಲೂ ನೆರೆದು ನೀನು ಎಲ್ಲಿಂದ ಬಂದಿ ಎಂದು ಕೇಳಲಾಗಿ ಮಾಣೇದ್ವಾರದಿಂದ ಬಂದೆನೆಂದು ಹೇಳಿ ಆ ಸ್ಥಳವನ್ನು ಬಿಟ್ಟು ಗುಡ್ಡಕ್ಕೆ ಹೋದನು. ಇಂಥವರಿಗೆ ಜ್ಞಾನಿಗಳೆನಬೇಕೋ ಅಜ್ಞಾನಿಗಳೆನಬೇಕೋ ನೀವೇ ನೋಡಿರಿ.

ಅದ್ವೈತಿಗಳೆಂದರೆ ಬಹಿರಂಗದ ಕ್ರಿಯೆಗಳಲ್ಲಿ ಅದ್ವೈತ ಉಂಟೇ ? “ ಅಂತರ್ಜ್ಞಾನ ಬಹಿಃ ಕ್ರಿಯಾ | ಏಕೋಃ ಭಾವ ಸಮಾಚರೇತ್ ” ಎಂದಲ್ಲಿ ಅಂತರಂಗದ ಜ್ಞಾನವನ್ನೇ ಬಹಿರಂಗದ ಕ್ರಿಯೆಯಲ್ಲಿ ಸವವಾಗಿ ಸರಿಗೊಳಿಸಬೇಕಾದರೆ, ಅಂಗವಿರುವವರೆಗೂ ಆಚಾರವಿರಬೇಕು. ಆ ಆಚಾರವು ಅನಾಚಾರವಾಗದೆ ಶ್ರುತಿಸಮ್ಮತವಾದ ಶ್ರುತ್ಯಾಚಾರವಾಗಬೇಕು. ಆಚಾರವಿಡಿದು ಜ್ಞಾನವನ್ನಾಶ್ರಯಿಸಬೇಕು. ಜ್ಞಾನವಿಡಿದು ಸದ್ಯೋನ್ಮುಕ್ತರಾಗಬೇಕು.

ಅದಲ್ಲದೆ “ ಮುನ್ನವೇ ಭಕ್ತಿಕ್ರಿಯೆಯಿಂದಂ | ನೆರೆ ಪರಿಶುದ್ಧವಾದ ಬುದ್ಧಿಯುಳ್ಳ ಸಮುನ್ನತ ಗುಣಗಣ ಸಂ | ಪನ್ನರ್ಗೆ ನಿಜಾರ್ಥ ಸಾಧ್ಯಮಿಂದರೋಳ್ ||” ಎಂದು ಪರಮಾರ್ಥ ಗೀತೆಯಲ್ಲಿ ಹೇಳಿದ್ದಾರೆ. ಮತ್ತು “ ಬಳಸದಿರದ್ವೈತವನು ಬಾಹ್ಯದಲಿ ನಿ | ನ್ನೊಳಗೇಕೋಭಾವನೆಯೊಡಗೂಡು || ತಿಳಿದು ಸಮಯ ನಿಷ್ಠೆ ವೇದವಿದ ಭಕ್ತಿಯನಗಲದಿಂದು ಬೆಸಸುವ | ಶ್ರೀಗುರು ವಚನೋಪದೇಶವ ನಾಲಿಸಿ | ದಾಗಳಹುದು ನರರಿಗೆ ಮುಕುತಿ ” ಎಂಬ ನಿಜಗುಣ ಶಿವಯೋಗಿಗಳು ಆಗಮ ಪ್ರಮಾಣವಾಗಿ ಹೇಳಿದ ಪದಗಳ ಅಭಿಪ್ರಾಯವನರಿಯದೆ, ಹಚ್ಚಟ ತಲೆಗೇರಿ ಕುಣಿದಾಡಿ ಕೂಗಿದರೆ, ಅದ್ವೈತಿಗಳಾಗಬಲ್ಲರೇ ? ಇದು ಅವಧೂತ ಮಾರ್ಗವಲ್ಲ. ಇನ್ನೊಂದು ಅಜ್ಞಾನ ಮಾರ್ಗ ಬೇರೆ ಇದೆ. ಇದು ಫ್ರೇಂಚ ದೇಶದ ಸನ್ಯಾಸಿಗಳ ಬೋಧೆಯು. ಇದು ವೇದ ಸಮ್ಮತವಲ್ಲ. ಆಗಮ ಸಮ್ಮತವಲ್ಲ. ಶ್ರುತಿ ಸಮ್ಮತವಾದ ಮಾರ್ಗವಲ್ಲಾದ ಕಾರಣ, ಈ ಮತದವರನ್ನು ನಂಬಬಾರದು. ಯಾಕೆಂದರೆ, “ಶ್ರುತಿ ವಿರಹಿತವಾದ ಮತವ ತಾನುಳಿವುದೆ ಚಂದಮಾಮ ” ಎಂದು ನಿಜಗುಣವಾಕ್ಯ ಉಂಟಾಗಿದೆ.

“ಜ್ಞಾನಿ ಸರ್ವತ್ರ ಲೋಚನಃ” ಎಂದುಂಟಾಗಿ ಜ್ಞಾನಿಯಾದರೆ ಸರ್ವಾಂಗ ನೇತ್ರವುಳ್ಳವರಂತೆ, ಜಾಗ್ರತರಾಗಿ ಲೋಕಾಪವಾದವನ್ನು ಹೊಂದದೆ, ಲೋಕಾಚಾರ ಪ್ರತ್ಯಾಚಾರ ಜ್ಞಾನಾಚಾರಕ್ಕೆ ವಿರುದ್ಧವಾಗಿ ನಡೆಯುವೆ. ನಡೆವಲ್ಲಿ ನುಡಿವಲ್ಲಿ ಕೊಡುವಲ್ಲಿ ಕೊಂಬಲ್ಲಿ ಪಾಕ ಪ್ರಯತ್ನಾದಿ ಸ್ನಾನ ಪಾನಂಗಳಲ್ಲಿ, ನಿರ್ಮಲತ್ವವನ್ನೇ ಪ್ರಕಟಿಸಬೇಕಲ್ಲದೆ, ದುರ್ನಡತೆಯಾಗಬಾರದು. ಮತ್ತು “ಸ್ವೇಚ್ಛಾಚಾರೋ ಗಣೇಶ್ವರಃ” ಎಂಬ ಪ್ರಮಾಣ ಉಂಟಾಗಿ ಮಹಾತ್ಮರು ಸ್ವೇಚ್ಛಾಚಾರಿಗಳಾದಾಗ್ಯದಾಗ್ಯೂ ನಿರ್ಮಲತ್ವವೇ ಬೇಕು. ಅನಾಚಾರಿಗಳಾಗಬಾರದು. ಸ್ವೇಚ್ಛಾಚಾರವಾದಾಗ್ಯೂ ಅದು ಆಗಮ ಪ್ರಮಾಣದಂತೆ, ಆದ್ಯರ ವಚನಕ್ಕನುಸಾರವಾಗಿ, ವೀರಮಾಹೇಶ್ವರಾಚಾರವಾಗಬೇಕು. ಆಗಮ ಸಮ್ಮತವಲ್ಲದ ಅನಾಚಾರವಾಗಬಾರದು.

ಆಚಾರಾದಿ ಸತ್ಕ್ರಿಯೆಗಳಿಗೆ ನಿರ್ಮಲ ಜಲವೇ ಪ್ರಾಮಾಣ್ಯವಾಗಿ ಮುಖ್ಯವಾಗಿ ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ಅದು ನಿರ್ಮಲವಿರಬೇಕು. ಹ್ಯಾಗೆಂದರೆ, ಬಾವಿಗಳ ಸಮೀಪದಲ್ಲಿ ತಿಪ್ಪೆಗಳಿರಬಾರದು. ಬಚ್ಚಲ ನೀರಹರಿಗಳಿರಬಾರದು. ಮತ್ತು ಮಲಮೂತ್ರ ವಿಸರ್ಜನೆ ಮಾಡಬಾರದು. ಮಳೆಯಾದಾಗ ಊರ ಮಲಿನವಾದ ನೀರು ಬಾವಿಯಲ್ಲಿ ಹೋಗಬಾರದು. ಬಾವಿಯ ಸಮೀಪದಲ್ಲಿ ಶವಗಳನ್ನು ಹೂಳಬಾರದು. ಬಾವಿಯಲ್ಲಿ ಮಲಿನ ವಸ್ತ್ರಗಳನ್ನು ತೊಳೆಯಬಾರದು. ಸಗಣೆಯಾದ ಕೈಕಾಲುಗಳನ್ನು ತೊಳೆಯಬಾರದು. ರೋಗೀಜನರ ವಸ್ತ್ರ ತೊಳೆಯಬಾರದು. ಮಲಮೂತ್ರ ವಿಸರ್ಜನೆ ಮಾಡಿದ ಬಟ್ಟೆಗಳನ್ನು ಕೌದಿಗಳನ್ನು ಹಾಗೂ ಋತುಮತಿ ಸ್ತ್ರೀಯರ ಬಟ್ಟೆಗಳನ್ನು ತೊಳೆಯಬಾರದು. ಇಂಥ ನಿರ್ಮಲತರದ ಭಾವಿ ಇದ್ದರೆ ಆ ಭಾವಿಯ ಉದಕವನ್ನು ಬಳಸಬೇಕು. ಇದನ್ನು ಪರೀಕ್ಷಿಸದೆ ಬಳಸಿದರೆ, ಜ್ಞಾನಿಗಳ ಜ್ಞಾನಾಚಾರಕ್ಕೂ ಭಂಗವು. ಲೋಕಾಚಾರದ ನಿರ್ಮಲತನಕ್ಕೂ ಭಂಗವಾಗಿ ಕಜ್ಜಿ ತಿಮಿರು ಕಸಲು ಗಜಕರ್ಣ ಇಂಥ ರೋಗಗಳು ಆಗುವವಲ್ಲದೆ ಶವಗಳನ್ನು ಹೂಳಿದ್ದಲ್ಲಿ ಮಳೆಗಾಲ ಸಮಯಕ್ಕೆ ಸಮಾಧಿಯ ನೀರು ಬಸಿದು ಬಾವಿಯಲ್ಲಿ ಬಂದರೆ ಗಿರಣಿ ಮೊದಲಾದ ರೋಗಗಳು ಹುಟ್ಟುತ್ತವೆ. ಅದು ಕಾರಣ ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ನಿರ್ಮಲವಾದ ಜಲವನ್ನೇ ಬಳಸಬೇಕಲ್ಲದೆ, ಅಪವಿತ್ರ ಜಲವನ್ನು ಬಳಸಲಾಗದು.

ಸೇದುವ ಬಾವಿಯಾದ ಕಾಲಕ್ಕಾದರೂ ಸಮೀಪದಲ್ಲಿ ಶವಗಳು ತಿಪ್ಪೆಗಳು ಬಚ್ಚಲ ಹರಿಗಳು ಇಲ್ಲದಂಥ ಸ್ಥಳದಲ್ಲಿ ಬಾವಿಯನ್ನು ತೆಗೀಬೇಕು. ಮತ್ತು ಹಳ್ಳ ಹೊಳೆಗಳಲ್ಲ ಹರಿಯುವ ನೀರನ್ನು ಬಳಸಬೇಕಾದರೆ ಮೊಳಕಾಲುದ್ದ ಹರಿಯುತ್ತಿದ್ದ ನೀರನ್ನು ತೆಗೆದುಕೊಂಡು ವಸ್ತ್ರ ಹಾಕಿ ಸೋಸಿಕೊಂಡು ಬಳಸಬೇಕು. ಅದಕ್ಕಿಂತಲೂ ಕಡಿಮೆಯಾಗಿ ಹರಿಯುತ್ತಿದ್ದರೆ, ಆ ಹರಿಯುವ ನೀರನ್ನು ಬಳಸಬಾರದು. ಒರತೆಯನ್ನು ತೋಡಿ ಒರತೆಯ ನೀರನ್ನು ಬಳಸಬೇಕು.

ಪಾಕ ಪ್ರಯತ್ನದ ಭಾಂಡಗಳಲ್ಲಿ ಮೃತ್ತಿಕಾ ಭಾಂಡೆಭಾಜನಗಳಿದ್ದರೆ, ಅವುಗಳೆಲ್ಲ ನಿರ್ಮಲವಿರಬೇಕು. ಆ ಮೃದ್ಭಾಂಡ ಭಾಜನಾದಿಗಳು ಶಬ್ದದೋಷ ಅಥವಾ ಸೋಂಕಿನ ದೋಷಗಳಿಂದ ಅಪವಿತ್ರವಾದರೆ, ಅವುಗಳನ್ನು ಬಿಸಾಟಬೇಕು. ಅಥವಾ ಜ್ಞಾನಾಚಾರಿಗಳಾದರೆ ಒಡೆದು ತುಕುಡಿಗಳನ್ನು ಮಾಡಿ ಭೂಮಿಯಲ್ಲಿ ಹೂಳಬೇಕು. ತಾಮ್ರ ಹಿತ್ತಾಳಿಯ ಭಾಂಡೆ ಭಾಜನಗಳಾದರೆ ಸುಟ್ಟು ಚನ್ನಾಗಿ ಬೆಳಗಿ ನಿರ್ಮಲ ಮಾಡಿ ತೆಗೆದುಕೊಳ್ಳಬೇಕು. ಕಂಚಿನ ಪಾತ್ರೆ ಬಟ್ಟಲು ಭಾಜನಗಳಿಗೆ ಅಪವಿತ್ರ ದೋಷ ಹೊಂದಿದರೆ ಅವುಗಳನ್ನು ಬಿಟ್ಟು ಬಿಡಬೇಕು. ಅವುಗಳಾತಕ್ಕೂ ಪ್ರಯೋಜನವಲ್ಲವು.

ಫಲ ಪದಾರ್ಥಗಳಲ್ಲಿ ಮಣ್ಣು ಹತ್ತಿದ ಗಡ್ಡೆಗೆಣಸು ಉಳ್ಳೇಗಡ್ಡಿ ಬಳ್ಳೊಳ್ಳಿ ಮೊದಲಾದ ಪದಾರ್ಥಗಳನ್ನು ತೊಳೆದು ತೆಗೆದುಕೊಳ್ಳಬೇಕು. ಹಾಗು ಹಣ್ಣು ಕಾಯಿಪಲ್ಲೆ ಪದಾರ್ಥಗಳನ್ನು ವೀಳ್ಯೆ ಅಡಿಕೆ ಕಪ್ಪು ಪತ್ರೆ ಪುಷ್ಪ ಮೊದಲಾದವುಗಳನ್ನು ತೊಳೆದು ತಕ್ಕೊಳ್ಳಬೇಕು.

ಪಾಕ ಶಾಲೆಯ ಮನೆಯನ್ನು ಒಲೆಗಳನ್ನು ಹಾಗೂ ಕ್ರಿಯಾ ಮಂದಿರವನ್ನು ವೇದ ಗೃಹವನ್ನು ಭೋಜನ ಶಾಲೆಯನ್ನು ನಿತ್ಯದಲ್ಲೂ ಸಾರಣೆ ಹಾಕಿ ಶುದ್ಧ ಮಾಡಬೇಕು. ಉಳಿದ ಮನೆಗಳನ್ನು ಎಂಟು ದಿವಸಕ್ಕೊಮ್ಮೆ ಸಾರಣೆ ಹಾಕಿದರೂ ಬರುತ್ತದೆ.

ಪಾಕ ಪ್ರಯತ್ನಾದಿಗಳನ್ನು ಮಾಡುವವರು ಸ್ನಾನ ಮಾಡಿ ಪಾಕ ಮಾಡಿರತೆ, ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ಸಮ್ಮತವಾಗಿ ಕೇವಲ

ನಿರ್ಮಲತ್ವವೆನಿಸುತ್ತದೆ. ಅಸು ಅಗದಿದ್ದರೆ, ಲೋಕಾಚಾರಿಗಳಾದವರು ಪಾಕ ಮಾಡಿದ ಮೇಲಾದರೂ ನಿತ್ಯ ಸ್ನಾನ ಮಾಡುವದು ನಿರ್ಮಲತ್ವವೆನಿಸುತ್ತದೆ.

ಪಾಕ ಮಾಡುವ ಸಮಯದಲ್ಲಿ ಬಾಯ ತೆರೆದಿಟ್ಟರೆ, ಉಗಿಯ ಶಾಕ ತಾಗಿ ಪ್ರಾಣಿಗಳು ಹತವಾಗಿ ಪಾಕದ ಭಾಂಡೆಯಲ್ಲಿ ಬೀಳುವವು. ಅದು ಕಾರಣ ಪಾಕ ಮಾಡುವ ಸಮಯದಲ್ಲಿ ಒಂದಾದರೂ ಪ್ರಾಣಹಿಂಸೆಯಾಗದಂತೆ ಅಪವಿತ್ರ ಸೋಂಕದಂತೆ ಬಹು ಎಚ್ಚರದಿಂದ ಪಾಕಮಾಡಬೇಕು.

ಪಾಕವಾದ ಮೇಲಾದರೂ ಯಾವ ಪ್ರಾಣಿಗಳು ಪದಾರ್ಥವನ್ನು ಮುಟ್ಟದಂತೆ, ಯಾವತ್ತೂ ಭಾಂಡೆಗಳ ಮೇಲೆ ವಸ್ತ್ರಗಳನ್ನು ಮುಚ್ಚಿ ಇಡಬೇಕು. ಭೋಜನ ಮಾಡತಕ್ಕ ಭಾಜನಗಳು ಹುಳಿ ಪದಾರ್ಥ ಕಿಲಬಾಗದಂತೆ ಚನ್ನಾಗಿ ಬೆಳಗಿ ತೊಳೆದು ಒರಸಿ ಝುಳಝುಳ ಮಾಡಿ ಇಡಬೇಕು.

ಧಾನ್ಯಾದಿ ಪದಾರ್ಥಗಳಿಗೆ ಮುಗ್ಗು ಹಾಯ್ದಿರಬಾರದು. ಬೆಳೆಯುವ ಸಮಯದಲ್ಲಿ ಶವದ ಹೊಗೆ ತಾಕಬಾರದು. ಚರ್ಮ ಪಾತ್ರೆಯೊಳಗೆ ತುಂಬಿದ ತೈಲ ಘೃತಗಳನ್ನು ಜ್ಞಾನಾಚಾರಿಗಳು ತೆಗೆದುಕೊಳ್ಳಲಾಗದು. ಯಾಕಂದರೆ ಶಿವನು ಭಕ್ತಹೃನ್ನಿಲಯನಾದ ಕಾರಣ ಭಕ್ತಾದಿಗಳ ಜಿಹ್ವಾದಿ ಇಂದ್ರಿಯ ಮುಖಂಗಳಿಂದ ಪ್ರಾಣೇಶ್ವರನಿಗೆ ನೈವೇದ್ಯವಾಗುತ್ತಿಹುದಾದ ಕಾರಣ ಲೋಕಾಚಾರದಲ್ಲಿ ಸದಾಚಾರಿಗಳು ಜ್ಞಾನಾಚಾರಿಗಳು ದೋಷಾರೋಪಣ ಮತ್ತು ಅಪವಿತ್ರ ಸೋಂಕಾದ ಪದಾರ್ಥಗಳನ್ನು ಮುಟ್ಟಲಾಗದು. ಯಾಕಂದರೆ " ಭಕ್ತಾ ಜಿಹ್ವಾಗ್ರತೋ ಲಿಂಗಂ। ಲಿಂಗಜಿಹ್ವಾಗ್ರತೋ ರುಚಿಃ ॥ ರುಚಿ ಜಿಹ್ವಾ ಪ್ರಸಾದೇನ । ಪ್ರಸಾದಂ ಪರಮಂ ಪದಂ ॥ ಎಂದಾಗಮ ಪ್ರಮಾಣ ಉಂಟು.

ಲೋಕಾಚಾರ ಜ್ಞಾನಾಚಾರದವರು ಯಾರಾದರಾಗಲಿ ತಾವು ಧರಿಸುವ ವಸ್ತ್ರಗಳನ್ನೂ ವಾಸ ಮಾಡುವ ಸ್ಥಳಗಳನ್ನೂ ಭೋಗ ಭುಕ್ತ್ಯಾದಿ ಸಕಲ ಸಾಮಗ್ರಿಗಳನ್ನೂ ಮಲಗುವ ಹಾಸಿಗೆಗಳನ್ನೂ ನಿರ್ಮಲ ಇಡಬೇಕಲ್ಲದೆ, ಒಂದಾದರೂ ಮಲಿನವಾಗಿರಬಾರದು. ಮಲಿನವಿದ್ದಲ್ಲಿ

ಸೌಖ್ಯವಿಲ್ಲ ಮತ್ತು ಜ್ಞಾನಾಚಾರಕ್ಕೆ ಕೊರತೆಯಾಗುವದು. ಮಲಿನವು ದಾರಿದ್ರ್ಯಕ್ಕೂ ರೋಗಕ್ಕೂ ಅಜ್ಞಾನಕ್ಕೂ ಆಸ್ಪದವಾಗಿದೆ. ಹೇಗೆಂದರೆ ಸೂರ್ಯನು ಹೋದಲ್ಲಿ ಕತ್ತಲೆಯು ಆಚ್ಛಾದಿಸಿದಂತೆ ಮಲಿನತ್ವವು ಅಜ್ಞಾನಕ್ಕೆ ಬೀಜವಾಗಿದೆ. ಲಾಂದ್ರದಲ್ಲಿ ದೀಪವು ನಿರ್ಮಲವಾಗಿ ಕಂಡಂತೆ ಬೋಕಿಯಲ್ಲಿ ನಿರ್ಮಲವಾಗಿ ಕಾಣುವದೇ ? ಹಾಗೆಯೇ ಲೋಕಾಚಾರ ವರ್ತನೆಯಲ್ಲಿ ಶುಚಿ ಅಶುಚಿ ಜ್ಞಾನ ಅಜ್ಞಾನ ಸುಬುದ್ಧಿ ದುರ್ಬುದ್ಧಿ ಯನ್ನು ತಿಳಿಯದಿದ್ದರೆ, ಮುಂದೆ ಜ್ಞಾನಾಚಾರದಲ್ಲಿ ಪ್ರವೀಣರಾಗು ವದೆಂತು ?

ನಿರ್ಮಲತ್ವವೆಂಬುದು ಬಹಿರಂಗದ ಸಕಲ ಕ್ರಿಯಾಚಾರದಲ್ಲಿಯೂ ಬೇಕು. ಅಂತರಂಗದ ಜ್ಞಾನಾಚಾರದಲ್ಲಿಯೂ ಅಗತ್ಯವಾಗಿ ಇರ ತಕ್ಕದ್ದು. ಅಂತರಂಗದ ಜ್ಞಾನಾಚಾರದಲ್ಲಿ ಸಕಲ ದುರ್ಗುಣಗಳೇ ಮಲಿನತ್ವವು. ಅವುಗಳಾವಾವವೆಂದರೆ, ಕಾಯಕದೋಷ ನಾಲ್ಕು, ವಾಚಕ ದೋಷ ನಾಲ್ಕು ಮತ್ತು ಮಾನಸದೋಷ ನಾಲ್ಕು, ಇಂತೀ ಹನ್ನೆ ರಡು ದೋಷಗಳಾದಿಯಾಗಿ ಅನಂತ ದುರ್ಗುಣಗಳು ತುಂಬಿ ದೇಹವು ಮಲಿನ ಹೊಂದಿರುವದು. ಅಂಥ ಮಲಿನ ಸ್ವರೂಪಿಗಳಾದವರ ಹೃದಯ ದಲ್ಲಿ ಪರಮೇಶ್ವರನು ಇಲ್ಲವೆಂದು ತಿಳಿಯತಕ್ಕದ್ದು. ಇದಕ್ಕೆ ಬಸವ ರಾಜದೇವರ ವಚನ ಸಾಕ್ಷಿಯುಂಟು. ಅವನ ಅಭಿಪ್ರಾಯದ ಆಧಾರದ ಮೇಲಿಂದ ಜಗತ್ಪರಿಪೂರ್ಣನೆಂಬ ಶ್ರುತಿ ವಾಕ್ಯಕ್ಕೆ ಭಂಗವಾದರಾಗಲಿ ದುರ್ಗುಣಿಗಳಾದವರ ಹೃದಯದಲ್ಲಿ ಪರಮೇಶ್ವರ ನಿಲ್ಲನೆಂದು ನಿರ್ಧರಿಸ ತಕ್ಕದ್ದು. " ಹೊಸ್ತಲಲ್ಲಿ ಹುಟ್ಟಿ ಮನೆಯ ಅಂಗಳದಲ್ಲಿ ಕಸವಿದ್ದರೆ, ಮನೆಯ ಯಜಮಾನನು ಈ ಮನೆಯೊಳಗಿಲ್ಲ " ಎಂಬುದೇ ನಿಶ್ಚಯ.

# ಕರುಣಿಸೈ ಎಲೆದೇವನೆ !

ನಿನ್ನ ನೆರವಿಲ್ಲದಾ ಪಾಮರನು–
ಕರುಣಿಸೈ– ಎಲೆದೇವನೇ !

ಮಾಡಿದಾ ಕರ್ಮವನು, ನಾ
ನೆಂಬ ಗರ್ವವನು, ತ್ರಿತಾಪಗಳನು,
ಪರಿಹರಿಸಿ ಕಾಪಾಡು
ಎಲೆದೇವನೇ !

ಗುರುವಿನ ಸೇವೆಯಲಿ,
ಆದ್ಯರಾ ವಚನದಲಿ,
ಲಿಂಗಪೂಜೆಯ ನಿಷ್ಠೆಯಲಿ–
ಮನವನನುಗೊಳಿಸು ಎಲೆದೇವನೇ !

ತತ್ವಮಸಿ ವಾಕ್ಯಾರ್ಥವನು,
ಷಡಕ್ಷರಿಯ ತಿರುಳನ್ನು
ಅಷ್ಟಾವರಣದ ಮಹಿಮೆಯನು;
ಅರುಹಿಕೃತಾರ್ಥನ ಮಾಡು–ಎಲೆಸ್ವಾಮಿಯೇ!

ಅರುಹಿನಾ ನೆಲೆಯನ್ನು
ಷಟ್‌ಸ್ಥಲದ ನಿರ್ಣಯವನು–
ಜ್ಯೋತಿ ಸ್ವರೂಪವನು–ಕರಪಿಡಿದು
ತೋರಿಸೈ–ಎಲೆಸ್ವಾಮಿಯೇ !

ಸತ್ಯ, ಶಾಂತಿಯನು, ಮೇಲ್
ದಯಧರ್ಮವನು–ನಯವಿನಯವನು,
ನಿನ್ನಲ್ಲಿ ಮಮತೆಯನು ನೆಲೆಗೊಳಿಸಿ
ಕಾಪಾಡು–ಎಲೆದೇವನೇ !

ಗುರುಶಿದ್ದ ಶಿವಾಚಾರ್ಯರು 'ನಿರಂಜನಾಲಯ'
ಗುರುವಿನಪುರಮಠ.

# ಲಿಂಗಪೂಜೆಯಲ್ಲಿ ಶಿವಯೋಗ.

ಲಿಂಗ ಪೂಜೆಯ ಉದ್ದೇಶವು ಷಟ್‌ಚಕ್ರಗಳಲ್ಲಿ ಲಿಂಗದ ಕಳೆಯನ್ನು ಪ್ರಕಟಗೊಳಿಸುವದೇ ಇರುತ್ತದೆ. ಇದಕ್ಕೆ ಶಿವಯೋಗವೆಂಬ ಹೆಸರು ಇದೆ. ಚಕ್ರಗಳಲ್ಲಿ ಲಿಂಗ ಪ್ರಕಾಶವು ಬೆಳಗಬೇಕಾದರೆ ಭಕ್ತನು ಕೆಲವೊಂದು ಕ್ರಮವನ್ನು ಅನುಸರಿಸಬೇಕಾಗುತ್ತದೆ. ಈ ಕ್ರಮವಾವುದೆಂಬುದನ್ನು ಕುರಿತು ವಚನಕಾರನು ಈ ಕೆಳಗಿನ ವಚನಗಳಲ್ಲಿ ಹೇಳಿದ್ದಾನೆ. ಇದರಲ್ಲಿ ಭಕ್ತಿ, ಸದಾಚಾರ, ನೀತಿ ನಡೆಗಳು ಇರುವವಲ್ಲದೆ, ಏಕಾಗ್ರಚಿತ್ತ, ಧ್ಯಾನ, ಮಂತ್ರಜಪ, ಮೊದಲಾದ ಕ್ರಿಯೆಗಳೂ ಕೂಡ ಬರುತ್ತವೆ. ಇವೆಲ್ಲವುಗಳ ಸಮ್ಮೇಲನವಿರದಿದ್ದರೆ ಅದು ಶಿವಯೋಗವೆನಿಸಲಾರದು. ಇಂಥವನು ಕೇವಲ ಹಠಯೋಗಿಯು. ಇವನು ದುಷ್ಟವಿಚಾರ ಆಚಾರಗಳಿಗೆ ಒಳಗಾಗಬಹುದು. ಆದ್ದರಿಂದ ಇವನಿಗೆ ಲಿಂಗಾಂಗ ಸಾಮರಸ್ಯವು ಉಂಟಾಗಲಾರದು. ಈ ಕಾರಣದ ಮೂಲಕ ಶಿವಶರಣರು ಈ ಮಾರ್ಗವನ್ನು ನಿರಾಕರಿಸಿ ಶಿವಯೋಗಾಚರಣೆಯನ್ನು ಬೋಧಿಸುತ್ತಾರೆ. ಷಟ್‌ಸ್ಥಲಜ್ಞಾನವು ಇದಕ್ಕೆ ಅವಶ್ಯವಾದುದು. ಈ ಮಾರ್ಗವನ್ನು ತಿಳಿಯಲು ಬಹು ಜನರು ಅಪೇಕ್ಷಿಸುವದರಿಂದ, ಇದಕ್ಕೆ ಸಂಬಂಧಿಸಿದ ಒಬ್ಬ ವಚನಕಾರನ ವಚನಗಳನ್ನು ಮಾತ್ರ ನಾವು ಕೆಳಗೆ ಕೊಟ್ಟಿರುತ್ತೇವೆ.

### ವಚನಗಳು.

ಅಯ್ಯಾ ಅಂಗಲಿಂಗ ಸಂಬಂಧದಿರವು, ಬೀಜವೊಡೆದು ಮೊಳೆದೋರುವಂತೆ, ಕುಸುಮ ಬಲಿದು ದೆಶೆದೆಶೆಗೆ ಪಸರಿಸುವಂತೆ, ಇಷ್ಟಲಿಂಗ ಪ್ರಾಣಲಿಂಗವೆಂದು ವಿಭೇದಿಸುವಲ್ಲಿ ಕುಸುಮದ ಗಿಡವಿಗೆ, ವಾಸನೆ ಉಂಟೇ ಕುಸುಮಕ್ಕಲ್ಲದೆ; ಅದು ಗಿಡುವಿಡಿದಾದ ಕುಸುಮವೆಂಬುದನರಿದು, ಗಿಡುವಿನ ಹೆಚ್ಚಿಗೆ, ಕುಸುಮದನಿಲ, ಸುಗಂಧದ ಬೆಳೆಯು, ಭಕ್ತಿಗೆ ಕ್ರಿಯವು, ಕ್ರಿಯೆಗೆ ಶ್ರದ್ಧೆ, ಶ್ರದ್ಧೆಗೆ ಪೂಜೆ, ಪೂಜೆಗೆ ವಿಶ್ವಾಸ, ವಿಶ್ವಾಸಕ್ಕೆ ವಸ್ತು ತನ್ಮಯವಾಗಿರ್ಪುದು. ಇದು ತೂರ್ಯ ಭಕ್ತಿಯ ಇರವು, ಎನ್ನ ನಿಃಕಳಂಕ ಚನ್ನಮಲ್ಲಿಕಾರ್ಜುನಲಿಂಗವು ಮೆಲ್ಲ ಮೆಲ್ಲನೆ ಕೂಡುವ ಕೂಟ, ಇಂತು ಪ್ರಮಥರ ರತಿಸಂಯೋಗದ ಕೂಟದ ಸುಖವಸುಖಿಸಿ, ಗುರುಲಿಂಗಜಂಗಮದ ಕರುಣಕಟಾಕ್ಷಿಯಿಂದ, ಮತ್ತಾ ಗುರುಲಿಂಗಜಂಗಮ

ಸ್ವರೂಪವಾಗಿ ನಿಜಾಚರಣೆಯಲ್ಲಿ ನಿಂದು, ಅಸತ್ಯವನುಳಿದು ಸುಸತ್ಯದಲ್ಲಿ ನಿಂದು, ಅನಾಚಾರವಳಿದು, ಶಿವಾಚಾರಸನ್ಮಾರ್ಗದಲ್ಲಿ ನಿಂದು, ಭವಿನಡೆ ನುಡಿಗಳ ಬಿಟ್ಟು ಭಕ್ತನ ನಡೆನುಡಿಯಲ್ಲಿ ನಿಂದು, ಅಯೋಗ್ಯವಾದ ಭೋಗವನುಳಿದು, ಯೋಗ್ಯವಾದ ಭೋಗದಲ್ಲಿ ನಿಂದು, ತನ್ನಾದಿಮಧ್ಯಾವ ಸಾನವ ತಿಳಿದು, ತನ್ನ ನಿಜಾಚರಣೆಯ ಲೀಲಾವಿನೋದದಿಂದ, ತನ್ನ ತಾನರ್ಚಿಸುವ ನಿಜನಿಲುಕಡೆಯ ವಿಚಾರವ ತಿಳಿದು, ನಾದ ನಾಳಂಗಳ ಬಲಿದು, ಪರಿಪೂರ್ಣ ಜ್ಯೋತಿರ್ಲಿಂಗಧ್ಯಾನದಲ್ಲಿ ನಿಂದು, ನಿಜಹೃದಯ ಚಿದ್ಭಾವದೃಕ್ಕಿನಿಂದ, ನವಲಿಂಗಗಳ ನಿರೀಕ್ಷಿಸಿ, ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ, ನಿರುಪಾಧಿಕ, ನಿಃಕಳಂಕ, ನಿರಾಲಂಬಹಸ್ತದಿಂದರ್ಚಿಸಿ, ಎರಡಳಿದು, ನಿರವಯ ಸಮಾಧಿಯಲ್ಲಿ ಕೂಡುವ ನಿಜದಿರವ ನೋಡಾ; ಸಂಗನಬಸವೇಶ್ವರಾ ॥ ೧ ॥

ಅಯ್ಯಾ ತಾರಕಾಕೃತಿಯ ನಕಾರ ಪ್ರಣವು, ವೇಣುನಾದ. ಆಧಾರ ಚಕ್ರ, ಪೀತವರ್ಣ, ಭಕ್ತಿಸ್ಥಲ ಸ್ಥೂಲತನು ಸುಚಿತ್ತ ಹಸ್ತ ಆಚಾರಲಿಂಗ ಘ್ರಾಣಮುಖ, ಶುದ್ಧಾಭಕ್ತಿ ಗಂಧಪದಾರ್ಥ, ಸುಗಂಧ ಪ್ರಸಾದ, ಬ್ರಹ್ಮ ಪೂಜಾರಿ, ಬ್ರಹ್ಮನಧಿದೇವತೆ, ಕರ್ಮಸಾದಾಖ್ಯ, ಸತ್ತು ಎಂಬ ಲಕ್ಷಣ, ಪರವೆಂಬ ಸಂಜ್ಞೆ, ಪೂರ್ವದಿಕ್ಕು ಋಗ್ವೇದ, ಪೃಥ್ವಿಅಂಗ, ಜೀವಾತ್ಮ ಕ್ರಿಯಾಶಕ್ತಿ, ನಿವೃತ್ತಿಕಲೆ; ಇಂತು ಇಪ್ಪತ್ತು ನಾಲ್ಕು ಸಕೀಲಂಗಳ ನೊಳ ಕೊಂಡು, ಎನ್ನಾಧಾರ ಚಕ್ರವೆಂಬ ಶ್ರೀಶೈಲ ಪರ್ವತ ಕ್ಷೇತ್ರದಲ್ಲಿ, ಮೂರ್ತಿ ಗೊಂಡಿರ್ಪ ಪಂಚಾಚಾರ ಸ್ವರೂಪವಾದ ಆಚಾರಲಿಂಗವೇ ಮಲ್ಲಿಕಾ ರ್ಜುನವೆಂದು ತನುತ್ರಯವ ಮಡಿಮಾಡಿ ಶಿವಾನಂದ ಜಲದಿಂ ಮಜ್ಜನ ವೆರೆದು ಪೃಥ್ವಿನಿವೃತ್ತಿಯಾದ ಗಂಧವ ಧರಿಸಿ, ಚಿತ್ತ ಸುಚಿತ್ತವಾದಕ್ಷತೆ ಯನಿಟ್ಟು ಅಲ್ಲಿಯ ಚತುರ್ದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯ ಪೀತ ವರ್ಣವಂ ಕರ್ಪೂರ ಜ್ಯೋತಿಯೆಂದು ಬೆಳಗಿ, ಅಲ್ಲಿಹ ಜಾಗ್ರಾವಸ್ಥೆ ಎಂಬ ನವೀನ ವಸ್ತ್ರವ ಹೊದಿಸಿ, ನಿಃಕಾಮ ವೆಂಬಾಭರಣವ ತೊಡಿಸಿ, ಸುಗಂಧವೆಂಬ ನೈವೇದ್ಯವನರ್ಪಿಸಿ ಶ್ರದ್ಧೆಯೆಂಬ ತಾಂಬೂಲವನಿತ್ತು, ಇಂತು ಪಂಚಾಚಾರ ಮೂರ್ತಿ ಆಚಾರಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ, ಕೋಟಿಸೂ ರ್ಯರ ಪ್ರಭೆಯಂತೆ ಬೆಳಗುವ ಆಚಾರಲಿಂಗವ ಕಂಗಳು ತುಂಬಿ ನೋಡಿ

ಮನದಲ್ಲಿ ಸಂತೋಷಗೊಂಡು ಆ ಆಚಾರಲಿಂಗ ಪೂಜೆ ಷಮಾಪ್ತಿ ಮಾಡಿ "ಓಂನಂಸಂನಂನಂನಂನಂ" ಎಂಬ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಲಿಂಗವೇ ತಾನೆಂದರಿದು ಕೂಡಿ ಎರಡಳಿದು, ನಿಬ್ಬೆರಗಿನಿಂದ ಆಚರಿಸಬಲ್ಲಾತನೇ ಶ್ರದ್ಧಾಭಕ್ತಿಯನುಳ್ಳ ಸದ್ಭಕ್ತ ನೋಡಾ ಸಂಗನ ಬಸವೇಶ್ವರಾ ॥ ೨॥

ಅಯ್ಯಾ ದಂಡಾಕೃತಿಯ ಮಕಾರ ಪ್ರಣವ ಘಂಟಾನಾದ ಸ್ವಾಧಿಷ್ಠಾನ ಚಕ್ರ ಶ್ವೇತ ವರ್ಣ ಮಹೇಶ್ವರ ಸ್ಥಲ, ಸೂಕ್ಷ್ಮತನು ಸುಬುದ್ಧಿ ಹಸ್ತ, ಗುರುಲಿಂಗ, ಜಿಹ್ವೆಮುಖ, ನೈಷ್ಠಿಕಾಭಕ್ತಿ ರಸಪದಾರ್ಥ ಸುರಸ ಪ್ರಸಾದ, ವಿಷ್ಣು ಪೂಜಾರಿ, ವಿಷ್ಣು ಅಧಿದೇವತೆ, ಕರ್ತೃಸಾದಾಖ್ಯ ಚಿತ್ತ ಎಂಬ ಲಕ್ಷಣ ಗೂಢವೆಂಬ ಸಂಜ್ಞೆ ಪಶ್ಚಿಮದಿಕ್ಕು ಯಜುರ್ವೇದ, ಅಷ್ಟಾಂಗ, ಅಂತರಾತ್ಮ ಜ್ಞಾನಶಕ್ತಿ ಪ್ರತಿಷ್ಠಾ ಕಲೆ ಇಂತು ೨೪ ಸಕೀಲಂಗಳ ನೊಳಕೊಂಡು ಎನ್ನ ಸ್ವಾಧಿಷ್ಟಾನ ಚಕ್ರವೆಂಬ ಸೇತುಬಂಧ ಕ್ಷೇತ್ರದಲ್ಲಿ ಮೂರ್ತಗೊಂಡಿರ್ಪ, ಮಂತ್ರ ಸ್ವರೂಪವಾದ ಗುರುಲಿಂಗವೇ, ರಾಮೇಶ್ವರ ಲಿಂಗವೆಂದು ತನುತ್ರಯವ ಮಡಿಮಾಡಿ ಪರಿಣಾಮವೆಂಬ ಜಲದಿಂದ ಮಜ್ಜನಕ್ಕೆರೆದು ಅಪ್ಪು ನಿವೃತ್ತಿಯಾದ ಗಂಧವಧರಿಸಿ, ಬುದ್ಧಿ ಸುಬುದ್ಧಿಯಾದಕ್ಷತೆಯನ್ನಿಟ್ಟು ಅಲ್ಲಿಹ ಷಡ್ಡಳಂಗಗಳನೇ ಪುಷ್ಪದ ಮಾಲೆಯೆಂದು ಧರಿಸಿ ಅಲ್ಲಿ ಕಮಲ ಸಪ್ತಾಸನೆಯ ಧೂಪ ಬೀಸಿ, ಅಲ್ಲಿಯ ಶ್ವೇತ ವರ್ಣವೇ ಕರ್ಪೂರ ಜ್ಯೋತಿಯೆಂದು ಬೆಳಗಿ, ಅಲ್ಲಿಹ ಸ್ವಪ್ನಾವಸ್ಥೆಯ, ನವೀನ ವಸ್ತ್ರವ ಹೊದಿಸಿ ನಿಃಕ್ರೋಧವೆಂಬಾಭರಣವ ತೊಡಿಸಿ ಸುರುಚಿಯೆಂಬ ನೈವೇದ್ಯವನರ್ಪಿಸಿ,ನೈಷ್ಠೆಯೆಂಬ ತಾಂಬೂಲವನಿತ್ತು ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಗುರುಲಿಂಗವನ್ನು ಕಂಗಳತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ಗುರುಲಿಂಗ ಪೂಜೆಯ ಷಮಾಪ್ತಿಯಂ ಮಾಡಿ "ಓಂ ಮಂ ಮಂ ಮಂ ಮಂ ಮಂ ಮಂ" ಎಂಬ ಮಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿಶ್ಚಿಂತದಿಂದ ಬೆರಸಬಲ್ಲಾತನೇ ನೈಷ್ಠಿಕಾಭಕ್ತಿಯುಳ್ಳ, ವೀರ ಮಹೇಶ್ವರ ನೋಡಾ; ಸಂಗನಬಸವೇಶ್ವರಾ- ॥ ೩ ॥

ಅಯ್ಯಾ ಕುಂಡಲಾಕೃತಿ ಶಿಕಾರಪ್ರಣವ, ಭೇರಿನಾದ, ಮಣಿಪೂರಕ ಚಕ್ರ, ಹರಿತವರ್ಣ, ಪ್ರಸಾದಿಸ್ಥಲ, ಕಾರಣತನು, ನಿರಹಂಕಾರ ಹಸ್ತ,

ಶಿವಲಿಂಗ, ನೇತ್ರಮುಖ, ಸಾವಧಾನ ಭಕ್ತಿ, ರೂಪು ಪದಾರ್ಥ, ಸುರೂಪು ಪ್ರಸಾದ, ರುದ್ರ ಪೂಜಾರಿ ರುದ್ರನಧಿದೇವತೆ ಮೂರ್ತಿ ಸಾದಾಖ್ಯ ಆನಂದ ವೆಂಬ ಲಕ್ಷಣ ಶರೀರಸ್ತು ಸಂಜ್ಞೆ ಉತ್ತರದಿಕ್ಕು, ಸಾಮವೇದ ಅಗ್ನಿಯೇ ಲಿಂಗ, ಪರಮಾತ್ಮ, ಇಚ್ಛಾಶಕ್ತಿ, ವಿದ್ಯಾಕಲೆ, ಇಂತು ೨೪ ಸಕೀಲಂಗಳ ನೊಳಕೊಂಡು, ಎನ್ನ ಮಣಿಪೂರಕ ಚಕ್ರವೆಂಬ ಪಂಪಾಕ್ಷೇತ್ರದಲ್ಲಿ, ಮೂರ್ತಿಗೊಂಡಿರ್ದ, ನಿರೀಕ್ಷಣ ಸ್ವರೂಪವಾದ, ಶಿವಲಿಂಗವೇ ವಿರುಪಾಕ್ಷ ಲಿಂಗವೆಂದು ಆತ್ಮತ್ರಯವ ಮಡಿಮಾಡಿ; ಪರಮಾನಂದವೆಂಬ ಜಲದಿಂದ ಮಜ್ಜನವೆರೆದು, ಅಗ್ನಿ ನಿವೃತ್ತಿಯಾದ ಗಂಧವ ಧರಿಸಿ, ಅಹಂಕಾರ ನಿರಹಂಕಾರವಾದಕ್ಷತೆಯನಿಟ್ಟು, ಅಲ್ಲಿಹ ದಶದಳಂಗಳನೇ ಪುಷ್ಪದಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಹರಿತ ವರ್ಣವೇ ಕರ್ಪುರದ ಜ್ಯೋತಿಯೆಂದು ಬೆಳಗಿ, ಸುಷುಪ್ತಾವಸ್ಥೆ ಎಂಬ ನವೀನ ವಸ್ತ್ರವ ಹೊದಿಸಿ, ನಿರ್ಲೋಭವೆಂಬಾಭರಣವ ತೊಡಿಸಿ, ಸುರೂಪು ಎಂಬ ನೈವೇದ್ಯವನರ್ಪಿಸಿ, ಸಾವಧಾನವೆಂಬ ತಾಂಬೂಲವನಿತ್ತು, ಇಂತೀ ಶಿವಲಿಂಗಕ್ಕೆ ಅಷ್ಟವಿಧಾರ್ಚನೆಮಾಡಿ, ಕೋಟಿ ಸೂರ್ಯಪ್ರಭೆ ಬೆಳಗುವ ಪರಶಿವಲಿಂಗವನು ಕಣ್ಣಾಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ಪರಶಿವಲಿಂಗದ ಪೂಜೆಯ ಸಮಾಪ್ತಿ ಮಾಡಿ " ಓಂ ಶಿಂ ಶಿಂ ಶಿಂ ಶಿಂ ಶಿಂ ಶಿಂ " ಎಂಬ ಶಿಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಪರ ಶಿವಲಿಂಗವೇ ತಾನೆಂದರಿದು ಕೂಡಿ ನಿಃಕಳಂಕನಾಗಿ ಆಚರಿಸಬಲ್ಲಾತನೇ ಸಾವಧಾನ ಭಕ್ತಿಯನುಳ್ಳ ಶಿವಪ್ರಸಾದಿ ನೋಡಾ ಸಂಗನಬಸವೇಶ್ವರಾ ॥ ೪ ॥

ಅಯ್ಯಾ ಅರ್ಧಚಂದ್ರಾಕೃತಿ ವಕಾರ ಪ್ರಣವು, ಮೇಘನಾದ ಅನಾಹತಚಕ್ರ, ಮಾಂಜಿಷ್ಠವರ್ಣ, ಪ್ರಾಣಲಿಂಗಿಸ್ಥಲ ನಿರ್ಮಲತನು, ಸುಮನಹಸ್ತ, ಜಂಗಮಲಿಂಗ, ತ್ವಗೆಂಬಮುಖ, ಅನುಭಾವಭಕ್ತಿ ಸ್ಪರ್ಶನ ಪದಾರ್ಥ ಸುಸ್ಪರ್ಶನಪ್ರಸಾದ, ಈಶ್ವರಪೂಜಾರಿ ಈಶ್ವರನಧಿದೇವತೆ ಅಮೂರ್ತಿ ಸಾದಾಖ್ಯ, ನಿತ್ಯವೆಂಬ ಲಕ್ಷಣ, ಲಿಂಗಕ್ಷೇತ್ರ ಸಂಜ್ಞೆ, ದಕ್ಷಿಣ ದಿಕ್ಕು, ಅಥರ್ವಣವೇದ, ವಾಯುವೇ ಅಂಗ, ನಿರ್ಮಲಾತ್ಮ ಆದಿಶಕ್ತಿ, ಶಾಂತಿಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಅನಾಹತ ಚಕ್ರವೆಂಬ, ಹಿಮವತ್ಕೇದಾರ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಯಜನ ಸ್ವರೂಪವಾದ, ಜಂಗಮಲಿಂಗವೇ ಹಿಮಗಿರೀಶ್ವರನೆಂದು ಪ್ರಾಣತ್ರಯವ

ಮಡಿಮಾಡಿ, ಶಾಂತಿ ಎಂಬ ಮಜ್ಜನಕ್ಕೆರದು ವಾಯು ನಿವೃತ್ತಿಯಾದ ಗಂಧವ ಧರಿಸಿ, ಮನಸುಮನವಾದಕ್ಷತೆಯನಿಟ್ಟು ಅಲ್ಲಿಹ ದ್ವಾದಶದ ಳಂಗಳನೇ ಪುಷ್ಪದ ಮಾಲೆಯೆಂದು, ಧರಿಸಿ, ಅಲ್ಲಿಹ ಕಮಲ ಸದ್ವಾಸ ನೆಯ ಧೂಪವ ಬೀಸಿ, ಅಲ್ಲಿಹ ಮಾಂಜಿಷ್ಟವರ್ಣವೇ ಕರ್ಪುರಜ್ಯೋತಿ ಎಂದು ಬೆಳಗಿ, ತೂರ್ಯಾವಸ್ಥೆಯೆಂಬ, ನವೀನ ವಸ್ತ್ರವ ಹೊದ್ದಿಸಿ ನಿರ್ಮೋಹವೆಂಬ ಆಭರಣವ ತೊಡಿಸಿ, ಸುಸ್ಪರ್ಶನವೆಂಬ ನೈವೇದ್ಯವ ನರ್ಪಿಸಿ, ಅನುಭಾವವೆಂಬ ತಾಂಬೂಲವನಿತ್ತು, ಇಂತೀ ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿಸೂರ್ಯರಂತೆ ಬೆಳಗುವ, ಜಂಗಮ ಲಿಂಗವನ್ನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ಜಂಗಮಲಿಂಗದ ಪೂಜೆಯಂ ಸಮಾಪ್ತಿ ಮಾಡಿ, " ಓಂ ವಾಂ ವಾಂ ವಾಂ ವಾಂ ವಾಂ ವಾಂ " ಎಂಬ ವಾಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ, ಆ ಜಂಗಮಲಿಂಗವೇ ತಾನೆಂದರಿದು, ಎರಡಳಿದು ನಿಃಪ್ರಪಂಚಿಯಾಗಿ, ಆಚ ರಿಸಬಲ್ಲಾತನೇ ಅನುಭಾವ ಭಕ್ತಿಯನುಳ್ಳ, ಘನಪ್ರಾಣಲಿಂಗಿ ನೋಡಾ; ಸಂಗನಬಸವೇಶ್ವರಾ ॥ ೫ ॥

ಅಯ್ಯಾ ದರ್ಪಣಾಕೃತಿ, ಯಕಾರಪ್ರಣವ, ಪ್ರಣಮನಾದ, ವಿಶುದ್ಧಿ ಚಕ್ರ, ಕಪೋತವರ್ಣ, ಶರಣಸ್ಥಲ, ಆನಂದತನು, ಸುಜ್ಞಾನಹಸ್ತ, ಶ್ರೋತ್ರಮುಖ, ಆನಂದ ಭಕ್ತಿ, ಶಬ್ದ ಪದಾರ್ಥ, ಸುಶಬ್ದ ಪ್ರಸಾದ, ಸದಾಶಿವ ಪೂಜಾರಿ, ಸದಾಶಿವನಧಿದೇವತೆ, ಶಿವಸಾದಾಖ್ಯ ಪರಿಪೂರ್ಣ ವೆಂಬ ಲಕ್ಷಣ, ಅನಾದಿವತ್ ಸಂಜ್ಞೆ, ಊರ್ಧ್ವದಿಕ್ಕು, ಅಜಪ ವೇದ, ಆಕಾಶವೇ ಅಂಗ, ಶುದ್ಧಾತ್ಮ, ಪರಶಕ್ತಿ, ಶಾಂತತೀತಕಲೆ, ಇಂತು ೨೪ ಸಕೀಲನೊಳಕೊಂಡು ಎನ್ನ ವಿಶುದ್ಧಿ ಚಕ್ರವೆಂಬ ವೈಮುಕ್ತಿ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಈಳನ ಸ್ವರೂಪವಾದ, ಪ್ರಸಾದಲಿಂಗವೇ ವಿಶ್ವನಾಥ ಲಿಂಗವೆಂದು ಭಾವತ್ರಯವ ಮಡಿಮಾಡಿ, ಕ್ಷಮೆ ಎಂಬ ಜಲದಿಂದ ಮಜ್ಜ ನಕ್ಕೆರೆದು ಗಗನ ನಿವೃತ್ತಿಯಾದ ಗಂಧವ ಧರಿಸಿ ಜ್ಞಾನ ಸುಜ್ಞಾನವಾ ದಕ್ಷತೆಯನಿಟ್ಟು, ಅಲ್ಲಿಹ ಷೋಡಶದಳಂಗಳನೇ ಪುಷ್ಪದ ಮಾಲೆಯ ಧರಿಸಿ ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಹ ಕಪೋತ ವರ್ಣವೇ ಕರ್ಪುರದ ಜ್ಯೋತಿಯೆಂದು ಬೆಳಗಿ, ಅಲ್ಲಿ ತೂರ್ಯಾತೀತಾವಸ್ಥೆಯೇ ನವೀನ ವಸ್ತ್ರವ ಹೊದಿಸಿ, ನಿರ್ಮದವೆಂಬಾಭರಣವ ತೊಡಿಸಿ, ಸುಶಬ್ದ ವೆಂಬ ನೈವೇದ್ಯವನರ್ಪಿಸಿ, ಆನಂದವೆಂಬ ತಾಂಬೂಲವನಿತ್ತು; ಇಂತೀ

ಮಡಿಮಾಡಿ, ಶಾಂತಿ ಎಂಬ ಮಜ್ಜನಕ್ಕೆರದು ವಾಯು ನಿವೃತ್ತಿಯಾದ ಗಂಧವ ಧರಿಸಿ, ಮನಸುಮನವಾದಕ್ಷತೆಯನಿಟ್ಟು ಅಲ್ಲಿಹ ದ್ವಾದಶದಳಂಗಳನೇ ಪುಷ್ಪದ ಮಾಲೆಯೆಂದು, ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಮಾಂಜಿಷ್ಟವರ್ಣವೇ ಕರ್ಪುರಜ್ಯೋತಿ ಎಂದು ಬೆಳಗಿ, ತೂರ್ಯಾವಸ್ಥೆಯೆಂಬ, ನವೀನ ವಸ್ತ್ರವ ಹೊದ್ದಿಸಿ. ನಿರ್ಮೋಹವೆಂಬ ಆಭರಣವ ತೊಡಿಸಿ, ಸುಸ್ಪರ್ಶನವೆಂಬ ನೈವೇದ್ಯವನರ್ಪಿಸಿ, ಅನುಭಾವವೆಂಬ ತಾಂಬೂಲವನಿತ್ತು, ಇಂತೀ ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿಸೂರ್ಯರಂತೆ ಬೆಳಗುವ, ಜಂಗಮಲಿಂಗವನ್ನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ಜಂಗಮಲಿಂಗದ ಪೂಜೆಯಂ ಸಮಾಪ್ತಿ ಮಾಡಿ, " ಓಂ ವಾಂ ವಾಂ ವಾಂ ವಾಂ ವಾಂ ವಾಂ " ಎಂಬ ವಾಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ, ಆ ಜಂಗಮಲಿಂಗವೇ ತಾನೆಂದರಿದು, ಎರಡಳಿದು ನಿಃಪ್ರಪಂಚಿಯಾಗಿ, ಆಚರಿಸಬಲ್ಲಾತನೇ ಅನುಭಾವ ಭಕ್ತಿಯನುಳ್ಳ, ಘನಪ್ರಾಣಲಿಂಗಿ ನೋಡಾ; ಸಂಗನಬಸವೇಶ್ವರಾ ॥ ೫ ॥

ಅಯ್ಯಾ ದರ್ಪಣಾಕೃತಿ, ಯಕಾರಪ್ರಣವು, ಪ್ರಣವುನಾದ, ವಿಶುದ್ಧಿ ಚಕ್ರ, ಕಪೋತವರ್ಣ, ಶರಣಸ್ಥಲ, ಆನಂದತನು, ಸುಜ್ಞಾನಹಸ್ತ, ಶ್ರೋತ್ರಮುಖ, ಆನಂದ ಭಕ್ತಿ, ಶಬ್ದ ಪದಾರ್ಥ, ಸುಶಬ್ದ ಪ್ರಸಾದ, ಸದಾಶಿವ ಪೂಜಾರಿ, ಸದಾಶಿವನಧಿದೇವತೆ, ಶಿವಸಾದಾಖ್ಯ ಪರಿಪೂರ್ಣವೆಂಬ ಲಕ್ಷಣ, ಅನಾದಿವತ್ ಸಂಜ್ಞೆ, ಊರ್ಧ್ವದಿಕ್ಕು, ಅಜಪ ವೇದ, ಆಕಾಶವೇ ಅಂಗ, ಶುದ್ಧಾತ್ಮ, ಪರಶಕ್ತಿ, ಶಾಂತತೀತಕಲೆ, ಇಂತು ೨೪ ಸಕೀಲನೊಳಕೊಂಡು ಎನ್ನ ವಿಶುದ್ಧಿ ಚಕ್ರವೆಂಬ ವೈಮುಕ್ತಿ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಈಳನ ಸ್ವರೂಪವಾದ, ಪ್ರಸಾದಲಿಂಗವೇ ವಿಶ್ವನಾಥಲಿಂಗವೆಂದು ಭಾವತ್ರಯುವ ಮಡಿಮಾಡಿ, ಕ್ಷಮೆ ಎಂಬ ಜಲದಿಂದ ಮಜ್ಜನಕ್ಕೆರೆದು ಗಗನ ನಿವೃತ್ತಿಯಾದ ಗಂಧವ ಧರಿಸಿ ಜ್ಞಾನ ಸುಜ್ಞಾನವಾದಕ್ಷತೆಯನಿಟ್ಟು, ಅಲ್ಲಿಹ ಷೋಡಶದಳಂಗಳನೇ ಪುಷ್ಪದ ಮಾಲೆಯ ಧರಿಸಿ ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಹ ಕಪೋತ ವರ್ಣವೇ ಕರ್ಪೂರದ ಜ್ಯೋತಿಯೆಂದು ಬೆಳಗಿ, ಅಲ್ಲಿ ತೂರ್ಯಾತೀತಾವಸ್ಥೆಯೇ ನವೀನ ವಸ್ತ್ರವ ಹೊದಿಸಿ, ನಿರ್ಮದವೆಂಬಾಭರಣವ ತೊಡಿಸಿ, ಸುಶಬ್ದವೆಂಬ ನೈವೇದ್ಯವನರ್ಪಿಸಿ, ಆನಂದವೆಂಬ ತಾಂಬೂಲವನಿತ್ತು; ಇಂತೀ

ಪ್ರಸಾದಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಪ್ರಸಾದಲಿಂಗವನ್ನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು; ಆ ಪ್ರಸಾದಲಿಂಗದ ಪೂಜೆ ಸಮಾಪ್ತಿ ಮಾಡಿ "ಓಂ ಯಂ ಯಂ ಯಂ ಯಂ ಯಂ ಯಂ" ಎಂಬ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ, ಆ ಪ್ರಸಾದಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿರ್ಮೋಹಿಯಾಗಿ; ಆಚರಿಸಬಲ್ಲಾತನೇ ಆನಂದ ಭಕ್ತಿಯು ನುಳ್ಳ ಶಿವಶರಣ ನೋಡಾ ಸಂಗನಬಸವೇಶ್ವರಾ ॥ ೬ ॥

ಆಯ್ಯಾ ಜ್ಯೋತಿರಾಕೃತಿ; ಓಂಕಾರ ಪ್ರಣವು; ಸಿಂಹನಾದ; ಅಜ್ಞಾಚಕ್ರ; ಮಾಣಿಕ್ಯ ವರ್ಣ ಐಕ್ಯಸ್ಥಲ; ಶುದ್ಧ ತನು; ಸದ್ಭಾವ ಹಸ್ತ; ಮಹಲಿಂಗ ಹೃದಯವೆಂಬ ಮುಖ; ಸಮರಸ ಭಕ್ತಿ; ತೃಪ್ತಿ ಪದಾರ್ಥ, ಸುತೃಪ್ತಿ ಪ್ರಸಾದ; ಮಹದೇವ ಪೂಜಾರಿ; ಮಹದೇವನಧಿದೇವತೆ; ಮಹಾ ಸಾದಾಖ್ಯ; ಅಖಂಡವೆಂಬ ಲಕ್ಷಣ, ಮಹವೆಂಬ ಸಂಜ್ಞೆ ಪಾತಾಳದಿಕ್ಕು; ಗಾಯತ್ರಿ ವೇದ; ಆತ್ಮನೇ ಅಂಗ; ಜ್ಞಾನಾತ್ಮ, ಚಿತ್‌ಶಕ್ತಿ; ಶಾಂತತೀ ತೋತ್ತರ ಕಲೆ, ಇಂತೀ ೨೪ ಸಕೀಲಂಗಳನೊಳಕೊಂಡು ಎನ್ನ ಆಜ್ಞಾ ಚಕ್ರವೆಂಬ ತ್ರಿಕೂಟ ಸಂಗಮ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಬೋಧಾ ಸ್ವರೂಪವಾದ ಮಹಲಿಂಗವೇ ಸಂಗಮೇಶ್ವರ ಲಿಂಗವೆಂದು; ಅವಸ್ಥಾ ತ್ರಯುವ ಮಡಿಮಾಡಿ; ಸಂತೋಷವೆಂಬ ಜಲದಿಂ ಮಜ್ಜನವೆರೆದು; ಆತ್ಮ ನಿವೃತ್ತಿಯಾದ ಗಂಧವ ಧರಿಸಿ; ಭಾವ ಸದ್ಭಾವವಾದಕ್ಷತೆಯನಿಟ್ಟು; ಅಲ್ಲಿಯ ದ್ವಿದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ; ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ; ಅಲ್ಲಿಯ ಮಾಣಿಕ್ಯ ವರ್ಣವೇ ಕರ್ಪುರ ಜ್ಯೋತಿಯೆಂದು ಬೆಳಗಿ; ಅಲ್ಲಿಯ ನಿರಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ; ನಿರ್ಮಲವೆಂಬಾಭರಣವ ತೊಡಿಸಿ ತೊಡಿಸಿ; ಸುತೃಪ್ತಿ ಎಂಬ ನೈವೇದ್ಯವನರ್ಪಿಸಿ; ಸಮರಸವೆಂಬ ತಾಂಬೂಲವನಿತ್ತು; ಇಂತು ಮಹ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ; ಕೋಟಿ ಸೂರ್ಯರ ಪ್ರಭೆ ಯಂತೆ ಬೆಳಗುವ ಮಹಲಿಂಗವ ಕಂಗಳತುಂಬ ನೋಡಿ; ಮನದಲ್ಲಿ ಸಂತೋಷಗೊಂಡು ಆ ಮಹಲಿಂಗದ ಪೂಜೆ ಸಮಾಪ್ತಿ ಮಾಡಿ "ಓಂ ಓಂ ಓಂ ಓಂ ಓಂ ಓಂ" ಎಂಬ ಓಂಕಾರ ಷಡ್ವಿಧ ಮಂತ್ರಗಳಿಂದ ನಮ ಸ್ಕರಿಸಿ; ಆ ಮಹಾಲಿಂಗವೇ ತಾನೆಂದರಿದು ಕೂಡಿ ಎರಡಳಿದು; ನಿತ್ಯ

ತೃಪ್ತನಾಗಾಚರಿಸಬಲ್ಲನನೇ ಸಮರಸ ಭಕ್ತಿಯುಳ್ಳ ಲಿಂಗೈಗ್ಯ ನೋಡಾ-
ಸಂಗನಬಸವೇಶ್ವರಾ ॥ ೭ ॥

ಅಯ್ಯಾ ನಿಃಕಲಾಕೃತಿ; ಬಕಾರ ಪ್ರಣವು, ಭ್ರಮರನಾದ; ಬ್ರಹ್ಮ ಚಕ್ರ, ಜ್ಯೋತಿವರ್ಣ, ನಿಃಕಳಂಕ ಸ್ಥಲ, ಚಿದ್ರೂಪ ತನು, ಸ್ವತಂತ್ರ ಹಸ್ತ, ನಿಃಕಳ ಲಿಂಗ, ಬ್ರಹ್ಮರಂಧ್ರ ಮುಖ, ಸದ್ಭಾವ ಭಕ್ತಿ. ಪರಮಾನಂದ ಪ್ರಸಾದ, ಶ್ರೀಗುರು ಪೂಜಾರಿ; ಶ್ರೀಗುರುವಧಿದೇವತೆ, ಅಗಮ್ಯವೆಂಬ ಲಕ್ಷಣ, ಅಪ್ರಮಾಣವೆಂಬ ಸಂಜ್ಞ, ಹೃತ್ಕಮಲ ದಿಕ್ಕು, ಧನುರ್ವೇದ, ಚಿತ್‌ಸೂರ್ಯನೇ ಅಂಗ ಮಹಾತ್ಮ, ಅನಾದಿಶಕ್ತಿ, ನಿರ್ವಂಚಕ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು; ಎನ್ನ ಬ್ರಹ್ಮರಂಧ್ರ ಚಕ್ರದ ರಜತಾದ್ರಿಯೆಂಬ ಕ್ಷೇತ್ರದಲ್ಲಿ; ಮೂರ್ತಗೊಂಡಿರ್ದ ಶಿವದೀಕ್ಷಾ ಸ್ವರೂಪಾದ; ನಿಃಕಳಲಿಂಗವೇ ರಜತೇಶ್ವರ ಲಿಂಗವೆಂದು; ಗುಣತ್ರಯವ ಮಡಿಮಾಡಿ; ಸ್ವತಂತ್ರವೆಂಬ ಜಲದಿಂ ಮಜ್ಜನವೆರೆದು; ಸೂರ್ಯ ನಿವೃತ್ತಿಯಾದ; ಗಂಧವ ಧರಿಸಿ; ಪರತಂತ್ರವಳಿದು ಸ್ವತಂತ್ರವಾದಕ್ಷತೆಯನಿಟ್ಟು; ಅಲ್ಲಿಯು ಸಹಸ್ರ ದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ; ಅಲ್ಲಿಯು ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯು ಜ್ಯೋತಿ ವರ್ಣದ ಜ್ಯೋತಿಯೆಂದು ಬೆಳಗಿ, ನಿಃಕಳಂಕ ಅವಸ್ಥೆಯೇ ನವೀನ ವಸ್ತ್ರವ ಹೊದ್ದಿಸಿ, ನಿರಾಭಾರವೆಂಬಾಭರಣವ ತೊಡಿಸಿ ಪರಮಾನಂದವೆಂಬ ತಾಂಬೂಲವನಿತ್ತು, ಇಂತು ನಿಃಕಳಲಿಂಗಕ್ಕೆ ಅಷ್ಟವಿಧಾರ್ಚನೆಯುಂ ಮಾಡಿ, ದಶಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ನಿಃಕಳಲಿಂಗವ ಕಂಗಳತುಂಬ ನೋಡಿ ಮನದಲ್ಲಿ ಸಂತೋಷಗೊಂಡು, ಆ ನಿಃಕಳಲಿಂಗದ ಪೂಜೆ ಸಮಾಪ್ತಿ ಮಾಡಿ; ಕ್ರಿಯಾ ಜಪವೆಂಬ ದ್ವಾದಶ ಪ್ರಣವ ಮಂತ್ರಗಳಿಂದ ನಮಸ್ಕರಿಸಿ ಆ ನಿಃಕಳ ಲಿಂಗವೇ ತಾನೆಂದರಿದು ಕೂಡಿ ಸ್ವತಂತ್ರನಾಗಿ, ಆಚರಿಸಬಲ್ಲಾತನೇ ಸದ್ಭಾವ ಭಕ್ತಿಯುಳ್ಳ ನಿಃಕಳಂಕ ನೋಡಾ ಸಂಗನಬಸವೇಶ್ವರಾ ॥ ೮ ॥

ಅಯ್ಯಾ ನಿಃಶೂನ್ಯಾಕೃತಿ, ಕ್ಷಕಾರ ಪ್ರಣವು, ದಿವ್ಯನಾದ, ಶಿಖಾ ಚಕ್ರ, ಮಾಣಿಕಜ್ಯೋತಿ ವರ್ಣ, ನಿರಾಲಂಬ ಸ್ಥಲ, ಚಿನ್ಮಯತನು, ನಿರಾಳ ಹಸ್ತ, ಶೂನ್ಯಲಿಂಗ, ಉನ್ಮನಿ ಮುಖ, ನಿರಹಂಕಾರ ಭಕ್ತಿ, ಪರಿಪೂರ್ಣ ಪದಾರ್ಥ; ಪರಿಪೂರ್ಣ ಪ್ರಸಂದ; ಪರಶಿವ ಪೂಜಾರಿ; ಪರಶಿವನಧಿ

ದೇವತೆ; ಅವಿರಳ ಸಾದಾಖ್ಯ; ಅಗಮ್ಯವೆಂಬ ಲಕ್ಷಣ, ನಿರ್ವಾಣವು ವೆಂಬ ಸಂಜ್ಞೆ, ಘೋಷ ದಿಕ್ಕು, ಮನೋರ್ಲಯವೇದ, ಚಿತ್ ಚಂದ್ರನೇ ಅಂಗ, ದಿವ್ಯಾತ್ಮ, ನಿಭ್ರಾಂತ ಶಕ್ತಿ, ಅನಂತ ಕಲೆ, ಇಂತು ೨೪ ಸಕೀ ಲಂಗಳನೊಳಕೊಂಡು, ಎನ್ನ ಶಿಖಾಚಕ್ರವೆಂಬ ಹೇಮಾದ್ರಿ ಪರ್ವತ ಕ್ಷೇತ್ರದಲ್ಲಿ; ಮೂರ್ತವಗೊಂಡಿರ್ದ ಶಿವಮಂತ್ರ ಶಿಕ್ಷಾಕರ್ತೃ ಸ್ವರೂಪವಾದ ಶೂನ್ಯ ಲಿಂಗವೇ ಹಿರಣ್ಯೇಶ್ವರ ಲಿಂಗವೆಂದು, ಕರಣತ್ರಯವ ಮಡಿವಾಡಿ; ಅನುಪಮವೆಂಬ ಜಲದಿಂ ಮಜ್ಜನವೆರೆದು, ಚಂದ್ರ ನಿವೃತ್ತಿಯಾದ ಗಂಧ ಧರಿಸಿ; ಅವಿರಳದಕ್ಷತೆಯನಿಟ್ಟು, ಅಲ್ಲಿಯ ತ್ರಿದಳಂಗಳನೇ ಪುಷ್ಪದ ಮಾಲೆ ಎಂದು ಧರಿಸಿ, ಕನುಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯ ಮಹಜ್ಯೋತಿ ವರ್ಣವೇ ಕರ್ಪೂರಜ್ಯೋತಿಯೆಂದು ಬೆಳಗಿ, ನಿಃಸಂಸಾರವ ಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ಸದಾನಂದವೆಂಬಾಭರಣವ ತೊಡಿಸಿ, ಪರಿಪೂರ್ಣವೆಂಬ ನೈವೇದ್ಯವನರ್ಪಿಸಿ, ನಿರಹಂಕಾರವೆಂಬ ತಾಂಬೂಲವನಿತ್ತು, ಇಂತೀ ಶೂನ್ಯ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಶತಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ, ಶೂನ್ಯ ಲಿಂಗ ವನು, ಕಂಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು ಆ ಶೂನ್ಯ ಲಿಂಗದ ಪೂಜೆಯಂ ಸಮಾಪ್ತಮಾಡಿ, ಜ್ಞಾನ ಜಪವೆಂಬ ದ್ವಾದಶ ಪ್ರಣಮ ಮಂತ್ರಗಳಿಂದ ನಮಸ್ಕರಿಸಿ, ಆ ಶೂನ್ಯ ಲಿಂಗವೇ ತಾನೆಂದ ರಿದು, ಕೂಡಿ ಎರಡಳಿದು ನಿಃಸಂಸಾರಿಯಾಗಿ, ಆಚರಿಸಬಲ್ಲಾತನೇ ನಿರಹಂಕಾರ ಭಕ್ತಿಯುಳ್ಳ ನಿಜಾತಂಗ ನೋಡಾ ಸಂಗನಬಸವೇಶ್ವರಾ ॥ ೯ ॥

ಅಯ್ಯಾ ನಿರಂಜನಾಕೃತಿ, ಹಕಾರ ಪ್ರಣಮ, ಮಹನಾದ, ಪಶ್ಚಿಮ ಮುಖ, ಅಪ್ರಮಾಣ ಭಕ್ತಿ, ಅವಿರಳ ಪದಾರ್ಥ, ಅವಿರಳ ಪ್ರಸಾದ, ಪರಮೇಶ್ವರ ಪೂಜಾರಿ, ಪರಮೇಶ್ವರನಧಿದೇವತೆ, ನಿಶ್ಚಲ ಸಾದಾಖ್ಯ, ನಿರ್ವಂಚಕವೆಂಬ ಲಕ್ಷಣ, ಅವಿರಳವೆಂಬ ಸಂಜ್ಞೆ, ನಿರಾಳ ದಿಕ್ಕು, ಅಗಮ್ಯ ವೇದ, ಶಿವಯೋಗಿಯೇ ಅಂಗ, ಚಿನ್ಮಯಾತ್ಮ, ನಿರಾವಯ ಶಕ್ತಿ, ಅನಂತ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಪಶ್ಚಿಮ ಚಕ್ರವೆಂಬ, ಮಹಂ ಮೇರು ಪರ್ವತಕ್ಷೇತ್ರದಲ್ಲಿ, ಮೂರ್ತಗೊಂ ಡಿರ್ದ, ನಿಜಮೋಕ್ಷವಾದ ನಿರಂಜನ ಲಿಂಗವೇ ಶಾಂಭವ ಮೂರ್ತಿಲಿಂಗ ವೆಂದು, ಹಂಸತ್ರಯವ ಮಡಿಮಾಡಿ, ನಿರ್ಭಾವವೆಂಬ ಜಲದಿಂ ಮಜ್ಜ

ನೆರೆದು, ನಿರ್ಜಾತನೆಂಬ ಗಂಧವ ಧರಿಸಿ, ನಿರ್ಜಡವೆಂಬಕ್ಷತೆಯನಿಟ್ಟು, ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯಂ ಧರಿಸಿ, ನಿರ್ಲಜ್ಜವೆಂಬ ಧೂಪವ ಬೀಸಿ, ಸಾಲಂಬವೆಂಬ ಜ್ಯೋತಿಯ ಬೆಳಗಿ, ನಿರವಯವೆಂಬ ವಸ್ತ್ರವ ಹೊದಿಸಿ, ನಿಸ್ಪೃಹವೆಂಬ ಆಭರಣವತೊಡಿಸಿ, ನಿರಾಳವೆಂಬ ನೈವೇದ್ಯವ ನರ್ಪಿಸಿ, ನಿರ್ವಾಣವೆಂಬ ತಾಂಬೂಲವನಿತ್ತು, ಇಂತು ನಿರಂಜನ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಸಹಸ್ರಕೋಟಿ ಸೂರ್ಯರಂತೆ ಬೆಳಗುವ, ನಿರಂಜನ ಲಿಂಗವನು ಕಂಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ನಿರಂಜನ ಜಂಗಮದ ಪೂಜೆ ಸಮಾಪ್ತಿಯಂ ಮಾಡಿ, ಮಹಜ್ಞಾನ ಜಪವೆಂಬ ದ್ವಾದಶಪ್ರಣವ ಮಂತ್ರಗಳಿಂದ ನಮಸ್ಕರಿಸಿ, ಆ ನಿರಂಜನ ಲಿಂಗವೇ ತಾನೆಂದರಿದು ಕೂಡಿಯರಡಳಿದು, ನಿಜಾಂತರ್ಯಾಮಿಯಾಗಿ, ಆಚರಿಸಬಲ್ಲಾತನೇ ಅಪ್ರಮಾಣ ಭಕ್ತಿಯನುಳ್ಳ, ನಿಜಮೋಕ್ಷಸ್ವರೂಪನೋಡಾ ಸಂಗನಬಸವೇಶ್ವರಾ ॥ ೧೦ ॥

ಅಯ್ಯಾ ತಾರಕಾಕೃತಿ ಮೊದಲಾದ ನವಾಕೃತಿಗಳು ನಕಾರ ಪ್ರಣವ ಮೊದಲಾಗಿ ನವಪ್ರಣವಂಗಳು ಭ್ರಮರನಾದ ಮೊದಲಾದ ನವನಾದಗಳು, ಆಧಾರ ಚಕ್ರ ಮೊದಲಾದ, ನವ ಚಕ್ರಗಳು, ಪೀತವರ್ಣ ಮೊದಲಾದ ನವವರ್ಣಗಳು, ಭಕ್ತಿಸ್ಥಲ ಮೊದಲಾದ ನವಸ್ಥಲಗಳು ಸ್ಥೂಲತನು ಮೊದಲಾದ ನವತನುಗಳು ಸುಚಿತ್ತಹಸ್ತ ಮೊದಲಾದ ನವಹಸ್ತಗಳು, ಆಚಾರಲಿಂಗ ಮೊದಲಾದ ನವಲಿಂಗಗಳು, ಘ್ರಾಣಮುಖ ಮೊದಲಾದ ನವಮುಖಗಳು ಶ್ರದ್ಧಾ ಭಕ್ತಿ ಮೊದಲಾದ ನವಭಕ್ತಿಗಳು, ಗಂಧಪದಾರ್ಥ ಮೊದಲಾದ ನವಪದಾರ್ಥಗಳು, ಸುಗಂಧಪ್ರಸಾದ ಮೊದಲಾದ ನವಪ್ರಸಾದಗಳು, ಬ್ರಹ್ಮಪೂಜಾರಿ ಮೊದಲಾದ ನವಪೂಜಾರಿಗಳು, ಬ್ರಹ್ಮನಧಿದೇವತೆ ಮೊದಲಾದ ನವ ಅಧಿದೇವತೆಗಳು, ಕರ್ಮಸಾದಾಖ್ಯ ಮೊದಲಾದ ನವಸಾದಾಖ್ಯಗಳು, ಸತ್ತುಲಕ್ಷಣ ಮೊದಲಾದ ನವಲಕ್ಷಣಗಳು, ಪರವೆಂಬ ಸಂಜ್ಞೆ ಮೊದಲಾದ ನವಸಂಜ್ಞೆಗಳು, ಪೂರ್ವದಿಕ್ಕು ಮೊದಲಾದ ನವದಿಕ್ಕುಗಳು, ಋಗ್ವೇದ ಮೊದಲಾದ ನವವೇದಗಳು, ಚಿತ್ಪೃಥ್ವಿ ಮೊದಲಾದ ನವಅಂಗಗಳು, ಜೀವಾತ್ಮ ಮೊದಲಾದ ನವ ಆತ್ಮರು, ಕ್ರಿಯಾಶಕ್ತಿ ಮೊದಲಾದ ನವಶಕ್ತಿಯರು, ನಿವೃತ್ತಿಕಲೆಮೊದಲಾದ ನವಕಲೆಗಳು ಇಂತು ೨೪ ಸಕೀಲಂಗಳು, ನವವಿಧತೆ ದಿಂದ

೨೧೬ ಸಕೀಲಂಗಳು ಸಮಸ್ತ ಕ್ಷೇತ್ರವನೋಳಕೊಂಡು ನಿನ್ನ ಅಣುಚಕ್ರವೆಂಬ ಪರವು ಕೈಲಾಸ ಚಿದಾಕಾಶ ಮಂಡಲದ ವರಚೌಕ ಮಂಟಪದ ನವರತ್ನಖಚಿತ ಶೂನ್ಯಸಿಂಹಾಸನ ಪೀಠದಲ್ಲಿ ಮೂರ್ತಿಗೊಂಡಿರ್ದ ಪರಾತ್ಪರ ನಿಜ ಜಂಗಮ ಲಿಂಗ ಸ್ವರೂಪ ಸರ್ವ ಚೈತನ್ಯಾಧಾರ ಅಣುಲಿಂಗ ಜಂಗಮವೇ ಪರತತ್ವ ನಿಃಕಲಪರಬ್ರಹ್ಮಮೂರ್ತಿ ಲಿಂಗಜಂಗಮಪ್ರಸಾದವೆಂದು ತನುತ್ರಯ ಮನತ್ರಯ ಭಾವತ್ರಯ ಪ್ರಾಣತ್ರಯ ಗುಣತ್ರಯ ಅವಸ್ಥಾತ್ರಯ ತತ್ವತ್ರಯ ಕರಣತ್ರಯ ಹಂಸತ್ರಯಂಗಳ ಪೂರ್ಣ ಮಡಿಮಾಡಿ ನಿರ್ನಾಮವೆಂಬ ಜಲದಿಂ ಮಜ್ಜನಕ್ಕೆರದು ನಿಃಕಾರಣವೆಂಬ ಗಂಧವಧರಿಸಿ ನಿಃಸಂಗವೆಂಬಕ್ಷತೆಯನಿಟ್ಟು ಪರಿಪೂರ್ಣವೆಂಬ ಪುಷ್ಪದ ಮಾಲೆಯಂಧರಿಸಿ ನಿರುಪಾಧಿಕವೆಂಬ ಧೂಪವಬೀಸಿ ನಿಃಕಳೆಯೆಂಬ ಜ್ಯೋತಿಯಬೆಳಗಿ ನಿರಾಳವೆಂಬ ವಸ್ತ್ರವಹೊದಿಸಿ ಪರವು ನಿಜಾಭರಣವ ತೊಡಿಸಿ ನಿಃಶೂನ್ಯವೆಂಬ ನೈವೇದ್ಯವನರ್ಪಿಸಿ ನಿರಾವಯವೆಂಬ ತಾಂಬೂಲವನಿತ್ತು ಇಂತು ಅಣುಲಿಂಗ ಜಂಗಮ ಪ್ರಸಾದಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಅನಂತಕೋಟಿ ಸೂರ್ಯ ಚಂದ್ರಾಗ್ನಿಪ್ರಭೆಯಂತೆ ಬೆಳಗುವ ಗ ಣಲಿಂಗ ಜಂಗಮ ಪ್ರಸಾದವನ್ನೇ ಅನಿಮಿಷ ದೃಷ್ಟಿಯಿಂ ನಿರೀಕ್ಷಿಸಿ ಉನ್ಮನಾಗ್ರದಲ್ಲಿ ಸಂತೋಷಗೊಂಡು ಆ ಅಣುಲಿಂಗ ಜಂಗಮ ಪ್ರಸಾದ ಪೂಜೆಸಮಾಪ್ತಿಯಂ ಮಾಡಿ ಅನಂತಕೋಟಿ ಮಹಮಂತ್ರಗಳಿಂದ ನಮಸ್ಕರಿಸಿ ಆ ಅಣುಲಿಂಗ ಜಂಗಮ ಪ್ರಸಾದವೇ ತಾನೆಂದರಿದು ಎರಕತ್ವದಿಂ ನಿಶ್ಚಲಚಿತ್ತದೋಳ್ಕೂಡಿ ಉಭಯವಳಿದು ಇಹಪರಂಗಳ ಹೊದ್ದದೆ ಕನ್ನಡಿಯ ಪ್ರತಿಬಿಂಬದಂತೆ ಸರ್ವಸಂಗ ಪರಿತ್ಯಾಗತ್ವದಿಂದ ನಿಜಾಚರಣೆಯಲ್ಲಿ ಆಚರಿಸಬಲ್ಲಾತನೇ ದಶವಿಧ ಲಿಂಗ ಜಂಗಮ ಸಂಗ ಭಕ್ತಪ್ರಸಾದುಳ್ಳ ಅನಾದಿ ಅಖಂಡ ಚಿಜ್ಯೋತಿ ಸದ್ಭಕ್ತ ಜಂಗಮ ನೋಡಾ ಸಂಗನ ಬಸವೇಶ್ವರಾ. ॥ ೧೧ ॥

ಅಯ್ಯಾ ಇಂತು ಬೆಳಗುವ ನಿಜವಸ್ತುವ, ಅಂಗಲಿಂಗವೆಂಬ ಪ್ರತಿದೋರಸೆ, ತನ್ನ ನಿಜಚಿದ್ಬೆಳಗ ತಾನೇ ನೋಡಿ, ಕೂಡಿ ಅರ್ಚಿಸುವ ವಿಚಾರವೆಂತೆಂದಡೆಃ— ಅಯ್ಯಾ ಬಿಳಿಯ ಮುಗಿಲಿನ ಕರಿಯ ನಕ್ಷತ್ರದಲ್ಲಿ, ಉರಿಯ ಅಂಕುರ ಉಂಟು. ಒಂದೆರಡೊಂಭತ್ತು ಉರಿಯುತ್ತಿದೆ. ಹೊಸತಲ ಜ್ಯೋತಿಯಂತೆ; ಒಳಹೊರಗೆ ಬೆಳಗುತ್ತಿದೆ. ಅದು ನೋಡಿ

ದರೆ ಘನ, ನೋಡದಿರ್ದಡೆ ಸಹಜ, ಈ ಭೇದವ ಗುಹೇಶ್ವರ ಲಿಂಗದಲ್ಲಿ ಚನ್ನ ಬಸವಣ್ಣನೇ ಬಲ್ಲ. ಬೆಸಗೊಂಬ ಬಾರೋ ಸಿದ್ಧರಾಮಯ್ಯ, ಎಂದು ಶೂನ್ಯ ಸಿಂಹಾಸನದಲ್ಲಿ ಪ್ರಭುಸ್ವಾಮಿಗಳು ನಿರೂಪವಂ ಕೊಡುತಿರ್ದರು ನೋಡಯ್ಯ. ನೀಲಮಣಿ ಮಧ್ಯ ಸ್ಥಾನದಲ್ಲಿ, ಕಾರಮೇಘ ಮಿಂಚಿನ ಪ್ರಕಾಶವಾಗಿ; ಚಿದಾಕಾರ ಸ್ವರೂಪಿನಿಂದ; ಪೀತವರ್ಣ ಮೊದಲಾಗಿ ಅನಂತ ಸ್ವರೂಪವಾಗಿ, ಅತ್ಯಂತವಾದ ಅಣುರೂಪವಾಗಿ; ಅನಂತ ಪ್ರಕಾರ ಕಾಣಲ್ಪಡುವದು ನಿಜಶಿವಯೋಗ ಲಿಂಗಧ್ಯಾನಿಗಳಿಗೆ. ಅನಾದಿ ಮೂಲ ಪ್ರಣವು ಸ್ವರೂಪದಿಂದ, ಮುಖಕಮಲದ ಮೇಲೆ ಕಾಣಲ್ಪಡುವದು ನೋಡಾ; ಅದೆಂತೆಂದೊಡೆ:— ಮುಖಮಧ್ಯದಲ್ಲಿ ನೇತ್ರ; ನೇತ್ರ ಮಧ್ಯದಲ್ಲಿ ಮನ, ಮನದ ಮಧ್ಯದಲ್ಲಿ ತಾನೇ ತಾನಲ್ಲದೆ ಮತ್ತೊಂದು ಸಾಧಕವಿಲ್ಲದೆ; ನಿಜತಾರಕ ಬ್ರಹ್ಮ ಶಾಂಭವ ಮೂರ್ತಿ ನೋಡಾ; ಅಯ್ಯಾ ನಿಜಶಿವಯೋಗಿಯ ನೋಟವೇ ಕೂಟ. ಕೂಟವೇ ಪ್ರಾಣ; ಪ್ರಾಣವೇ ಲಿಂಗಾಂಗ ಸಮರಸ ಪರಿಪೂರ್ಣ ಪರಬ್ರಹ್ಮವು ತಾನೇ ನೋಡಾ; ಈ ನಿಜವಸ್ತು ನೆಲಸಿರ್ಪ ನೇತ್ರವೇ ಗುಹ್ಯಕ್ಕೆ ಗುಹ್ಯ; ಗೋಪ್ಯಕ್ಕೆ ಗೋಪ್ಯ, ರಹಸ್ಯಕ್ಕೆ ರಹಸ್ಯ; ನೋಟಕ್ಕೆ ನೋಟ; ಕೂಟಕ್ಕೆ ಕೂಟ; ಬೇಟಕ್ಕೆ ಬೇಟ ಅದೆಂತೆಂದೊಡೆ:—

**ಲಿಂಗಸ್ಯಸಾಯುಕಂ ನೇತ್ರ ಚಕ್ಷುಂ ಲಿಂಗಸ್ಯ ಚಾಕ್ಷುಸಿ ।**

ಎಂದುದಾಗಿ ಗುರುಕಟಾಕ್ಷೆಯಿಂದ; ಇಷ್ಟ ಪ್ರಾಣ ಭಾವಲಿಂಗ ಸಂಬಂಧವಾದ; ಮಹಾಘನ ಚಕ್ಷುವೇ ಗುಹೇಶ್ವರ ಲಿಂಗಕ್ಕೆ ಮಹಪ್ರಸಾದ ನೋಡಾ ಸಿದ್ಧರಾಮಯ್ಯ ಎಂದು ಪ್ರಭುಸ್ವಾಮಿಗಳು ನಿರೂಪವಂ ಕೊಡುತ್ತಿರ್ದರು ನೋಡಾ; ಸಂಗನಬಸವೇಶ್ವರಾ. ॥ ೧೨ ॥

---

## ಆರು ಲೇಸು ?

—x—

೧ ಕೆಲನಿಮಿಷದೀ ಜಗದ,
ಜಂಜಾಟದಲಿ ಸಿಲುಕಿ,
ಜರ್ಜರಿತನಾಗದಿಹ,
ಮಾನವ ನಿನಗಿನ್ನಾರು ಲೇಸು ?

೨ ಕ್ಷಣಿಕ ಸುಖ ತೊರೆದು,
ಪರಮ ಸುಖ ಪಡೆದು,
ನಿರತ ನಿತ್ಯಾತ್ಮನಲಿ,
ನಿಂದ ಮಾನವಗಾರು ಲೇಸು ?

೩ ಬಂದುದಕೆ ಕಾರಣವು,
ಬಂದವನು ತಾನಾರು ?
ಎಂಬುದನು ಅರಿತ,
ಅನುಭಾವಿಗಿನ್ನಾರು ಲೇಸು ?

೪ ಲೇಸು ಲೇಸನೆ ಮಾಡಿ,
ಹೇಸಿ ಸಂಸಾರದಲಿ,
ಸಿಲುಕದಿಹ ನರಗೆ,
ಬೇರೆ ನರನಿನ್ನಾರು ಲೇಸು ?

೫ ಪ್ರಪಂಚದಲಿ ಇದ್ದು,
ಪರಮಾರ್ಥ ಸಾಧಿಸಿದ,
ಪರಮ ಸಾಧಕಗೆ,
ಪರಸಾಧಕರಾರು ಲೇಸು ?

## ಶಿವಾನುಭವ

೬ ಅಂಗ ಲಿಂಗಗಳರಿವ,
ಅಂಗದಲೆ ಅರಿತು,
ಲಿಂಗದಲಿ ಬೆರೆತ,
ಶರಣಂಗೆ ಇನ್ನಾರು ಲೇಸು?

೭ ಹಗಲಿರುಳು ಹರನಾಮ,
ನಿಷ್ಕಾಮ ಭಕ್ತಿಯಲಿ,
ನಿತ್ಯದಿ ನೆಲಿಸುತಿಹ,
ನರಗೆ ಪರರಾರ್‍ು ಲೇಸು ?

೮ ನರನಂತೆ ಜನಿಸಿ,
ಹರನಂತೆ ನೆಲಿಸಿ,
ಸರ್ವರಿಗೆ ಹರಿಸಿ,
ಹರನಾದಂಗಿನ್ನಾರು ಲೇಸು ?

— ಬಿ. ವ್ಹಿ. ಕತ್ತಿ. ಕಾದರವಳ್ಳಿ ( ಜಿ.ಬೆಳಗಾಂವ )

# ಶಿವಶರಣರ ಚರಿತ್ರೆಗಳು.

## ಭಾಗ ೪.

---

### ಕಿನ್ನರಿ ಬ್ರಹ್ಮಯ್ಯ.

ದಕ್ಷಿಣ ದೇಶದಲ್ಲಿ ಪೂಡೂರೆಂಬ ಗ್ರಾಮವಿರುತ್ತದೆ. ಅಲ್ಲಿ ಕಿನ್ನರೀ ಬ್ರಹ್ಮಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನ ತಾಯಿಯ ಹೆಸರು ಕಲಿದೇವಿ. ತಂದೆಯ ಹೆಸರು ನಮಗೆ ಇನ್ನೂ ತಿಳಿದಿರುವದಿಲ್ಲ. ಅವನು ಕುಲದಿಂದ ಅಕ್ಕಸಾಲಿಗನಾಗಿದ್ದನು. ಅವನು ಚಿನ್ನಬೆಳ್ಳಿ ಮೊದಲಾದ ಬೆಲೆಯುಳ್ಳ ಧಾತುಗಳಿಂದ ಆಭರಣಗಳನ್ನು ಮಾಡುವಲ್ಲಿ ನಿಷ್ಣಾತನಾಗಿದ್ದನು. ಈ ಉದ್ಯೋಗದಿಂದ ಅವನು ಸಿರಿವಂತನೂ ಆಗಿದ್ದನು. ಆದರೆ ಅವನು ಕೇವಲ ಶಿವಭಕ್ತಿಯುಳ್ಳವನಾದ್ದರಿಂದ ಅವನು ದಿನಾಲು ತನ್ನ ಗ್ರಾಮದಲ್ಲಿದ್ದ ಶಿವಾಲಯಕ್ಕೆ ಹೋಗಿ ಅಲ್ಲಿ ಕಿನ್ನರಿಯನ್ನು ನುಡಿಸುತ್ತ ದೇವರ ಪ್ರಾರ್ಥನೆಯನ್ನು ಮಾಡುವನು. ಇದರಿಂದ ಅವನು ದೇವರಿಗೆ ಪ್ರಿಯನಾಗಿ ದೇವರಿಂದ ದಿನಾಲು ೧೧ ಹಣ ದ್ರವ್ಯವನ್ನು ಪಡೆಯುತ್ತಿದ್ದನು. ಪರಮ ಶಿವಭಕ್ತನಾದ ನಂಬೆಣ್ಣನೂ ಕೂಡ ಇದೇ ರೀತಿಯಾಗಿ ದೇವರಿಂದ ಕಾಣಿಕೆಯಾಗಿ ಹಣವನ್ನು ಸಂಪಾದನೆಮಾಡಿ ತನ್ನ ಸ್ತ್ರೀಯಳಿಗೆ ಅದನ್ನು ಕೊಡುತ್ತಿದ್ದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಆದರೆ ಕಿನ್ನರಿ ಬ್ರಹ್ಮಯ್ಯನು ತನಗೆ ದೊರೆದ ಇಂಥ ಹಣವನ್ನು ತಾನು ಸೇವಿಸದೆ ದಾಸೋಹಕ್ಕಾಗಿ ಉಪಯೋಗಿಸುವನು. ಅವನು ಅಕ್ಕಸಾಲಿಗನಾಗಿದ್ದರೂ ಅವನು ಕಿನ್ನರಿಯನ್ನು ನುಡಿಸಿ ದೇವರನ್ನು ಮೆಚ್ಚಿಸಿದವನಾದ್ದರಿಂದ ಜನರು ಅವನನ್ನು 'ಕಿನ್ನರೀ ಬ್ರಹ್ಮಯ್ಯ' ನೆಂದು ಕರೆಯುತ್ತಿದ್ದರು. ಅವನು ಮುಂದಾದರೂ ಇದೇ ಹೆಸರಿನಿಂದ ಪ್ರಸಿದ್ಧನಾದನು.

ಕಿನ್ನರೀ ಬ್ರಹ್ಮಯ್ಯನ ಕೀರ್ತಿಯು ಇದರಿಂದ ಎಲ್ಲ ಕಡೆಗೂ ಹಬ್ಬಿತು. ಇದು ಕಲ್ಯಾಣಪಟ್ಟಣವಲ್ಲಿದ್ದ ಬಸವೇಶ್ವರನಿಗೂ ತಿಳಿದುಬಂದಿತು. ಅವನು ಕಿನ್ನರೀ ಬ್ರಹ್ಮಯ್ಯನನ್ನು ಎಂದು ನೋಡುವೆನೋ ಎಂಬುದನ್ನೇ ಯಾವಾ

ಗಳೂ ಚಿಂತಿಸುತ್ತಿದ್ದನು. ಹಾಗೆಯೇ ಬಸವೇಶ್ವರನ ಕೀರ್ತಿ ನಾಲ್ಕೆಡೆಗಳಲೂ ದೇಶದ ತುಂಬೆಲ್ಲ ಹಬ್ಬಿದ್ದರಿಂದ ಕಿನ್ನರೀ ಬ್ರಹ್ಮಯ್ಯನಾದರೂ ಅವನನ್ನು ಕಾಣಬೇಕೆಂದು ಕಲ್ಯಾಣಪಟ್ಟಣಕ್ಕೆ ಬರುವವನಾದನು. ಅವನು ಮೊದಲು ತ್ರಿಪುರಾಂತಕ ದೇವಾಲಯಕ್ಕೆ ಬಂದು ಅಲ್ಲಿಯ ತ್ರಿಪುರಾಂತಕೇಶ್ವರನನ್ನು ತನ್ನ ಕಿನ್ನರಿಯ ಮೂಲಕ ದಿನಾಲು ಭಜಿಸಲು ಪ್ರಾರಂಭಿಸಿದನು. ಆಗ ಆ ಲಿಂಗವು ಅವನಿಗೆ ೧೧ ಹಣ ದ್ರವ್ಯವನ್ನು ದಯಪಾಲಿಸಿತು. ಆದರೆ ಕಿನ್ನರೀ ಬ್ರಹ್ಮಯ್ಯನು ಅದರ ಮೇಲೆ ಉಪಜೀವಿಸದೆ ತನ್ನ ಅಕ್ಕಸಾಲಿಗ ಉದ್ಯೋಗವನ್ನು ಕಲ್ಯಾಣ ಪಟ್ಟಣದಲ್ಲಿ ನಡಿಸುತ್ತ ಅದರಿಂದ ಬಂದ ಕೂಲಿಯಿಂದಲೇ ತನ್ನ ನಿರ್ವಾಹಸಾಗಿಸುತ್ತ ಗುರುಲಿಂಗಜಂಗಮ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು.

ಹೀಗೆ ಅವನು ಕಲ್ಯಾಣ ಪಟ್ಟಣದಲ್ಲಿ ದಾಸೋಹವನ್ನು ನಡಿಸುತ್ತಿದ್ದುದನ್ನು ಬಸವೇಶ್ವರನು ಕೇಳಿ ಅವನನ್ನು ಅಗಿಂದಾಗ್ಗೆ ಕಂಡು ಆದರಿಸುವನು. ಕಿನ್ನರಯ್ಯನು ಶಿವಾನುಭವ ಮಂಟಪದಲ್ಲಿ ಸೇರ್ಪಡೆಯಾಗಿ ಅಲ್ಲಿ ತನ್ನ ಅನುಭಾವವನ್ನು ವಚನಗಳ ಮೂಲಕ ಶಿವಶರಣರೊಡನೆ ಹೇಳುವವನಾದನು. "ತ್ರಿಪುರಾಂತಕ ಲಿಂಗ" ಎಂಬುದೇ ಅವನ ವಚನಗಳ ಮುದ್ರಿಕೆಯಾಗಿತ್ತು. ಈ ಮುದ್ರಿಕೆಯುಳ್ಳ ಅವನ ಐದು ವಚನಗಳು ಮಾತ್ರ ನಮಗೆ ದೊರಕಿರುತ್ತವೆ. ಅವನು ಇನ್ನೂ ಅನೇಕ ವಚನಗಳನ್ನು ರಚಿಸಿರಬಹುದೆಂದು ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿರುವದಿಲ್ಲ.

ಹೀಗೆ ಕಿನ್ನರೀ ಬ್ರಹ್ಮಯ್ಯನು ಪರಮಾತ್ಮನನ್ನು ಭಜಿಸುತ್ತ ತನ್ನ ಅಕ್ಕಸಾಲಿಗ ಉದ್ಯೋಗವನ್ನು ನಡಿಸುತ್ತ ಕಲ್ಯಾಣ ಪಟ್ಟಣದಲ್ಲಿರಲು ಅವನು ಒಂದು ದಿವಸ ತ್ರಿಪುರಾಂತಕೇಶ್ವರನ ದೇವಾಲಯದಲ್ಲಿದ್ದಾಗ ಒಂದು ಕುರಿಯು ತನ್ನನ್ನು ಒಯ್ಯುತ್ತಿದ್ದವನ ಕಯ್ಯಿಂದ ಕೊಸರಿಕೊಂಡು ಓಡಿಬಂದು ಆ ದೇವಾಲಯವನ್ನು ಪ್ರವೇಶಿಸಿತು. ಅಲ್ಲಿ ಸಮೀಪದಲ್ಲಿ ಕುಳಿತಿದ್ದ ಕಿನ್ನರೀ ಬ್ರಹ್ಮಯ್ಯನು ಈ ಕುರಿಯು ತನ್ನ ಮೊರೆ ಹೊಕ್ಕಿತೆಂದು ತಿಳಿದು ಅದನ್ನು ಕಾಯಬೇಕೆಂಬ ಅಭಿಲಾಷೆಯುಳ್ಳವನಾಗಿ ಅದಕ್ಕೆ ಲಿಂಗಮುದ್ರೆಯನ್ನು ಒತ್ತಿದನು.

ಆ ಕುರಿಯನ್ನು ಹುಡುಕುತ್ತ ಬರುತ್ತಿದ್ದ ಒಬ್ಬ ವಿಟನು ದೇವಾಲಯಕ್ಕೆಯೇ ಬಂದು— ಈ ಕುರಿಯು ನನ್ನದು ಇದನ್ನು ನನ್ನ ಸ್ತ್ರೀಯ

ಳಿಗೆ ಒಯ್ಯಬೇಕಾಗಿದೆ. ಇದನ್ನು ತೆಗೆದುಕೊಂಡು ಹೋಗುವೆನೆಂದು ಅದನ್ನು ಬಲಾತ್ಕಾರದಿಂದ ಜಗ್ಗಿ ಎಳೆಯುತ್ತಿದನು. ಆಗ ಕಿನ್ನರಯ್ಯನು-ಇದರ ಬೆಲೆಯನ್ನು ನಾನು ಕೊಡುವೆನು. ಇದನ್ನು ಬಿಡೆಂದು ಎಷ್ಟು ಹೇಳಿದರೂ ಆ ವಿಟನು ಕೇಳಲಿಲ್ಲ. ಒಂದು ಸಾವಿರ ಹೊನ್ನು ಕೊಡುವೆನೆಂದು ಹೇಳಿದರೂ ಅವನು ಕೇಳಲಿಲ್ಲ. ಇದಕ್ಕೆ ಲಿಂಗಮುದ್ರೆ ಇದೆ, ಇದು ದೇವರ ಪಶು-ಎಂದು ಹೇಳಿದರೂ ಕೇಳಲಿಲ್ಲ. ಆ ವಿಟನು ಅದನ್ನು ಜಗ್ಗಿ ಎಳೆದೊಯ್ಯಹತ್ತಿದನು. ಕಿನ್ನರೀ ಬ್ರಹ್ಮಯ್ಯನು ಅದನ್ನು ನೋಡಿ ಕುಪಿತನಾಗಿ ತನ್ನ ಕತ್ತಿಯಿಂದ ಆ ವಿಟನನ್ನು ಹೊಡೆದು ಕೊಂದು ಹಾಕಿದನು.

ಬ್ರಹ್ಮಯ್ಯನು ಹೀಗೆ ಅವನನ್ನು ಕೊಂದುಹಾಕಿದ ವಾರ್ತೆಯು ಬಿಜ್ಜಳನಿಗೆ ತಿಳಿಯಿತು. ಆಗ ಅವನು ಬಸವೇಶ್ವರನಿಗೆ— ಇದು ಅನ್ಯಾಯವು. ಭಕ್ತರಾದವರು ಹೀಗೆ ಮನುಷ್ಯವಧೆ ಮಾಡಬೇಕೇ ಎಂದು ಕೇಳಲು ಬಸವೇಶ್ವರನು ನಿಜಸ್ಥಿತಿಯನ್ನು ಅಲ್ಲಿಗೆ ಹೋಗಿ ಅರಿತುಕೊಳ್ಳುವಾ ಎಂದು ನುಡಿಯಲು ಉಭಯತರು ತ್ರಿಪುರಾಂತಕ ದೇವಾಲಯಕ್ಕೆ ಬಂದರು. ಆಗ ಅವರು ನಡೆದ ಸಂಗತಿಗಳನ್ನು ತಿಳಿದು—ಇದರಲ್ಲಿ ಯಾರ ತಪ್ಪು ಇದೆ ಎಂದು ಬಿಜ್ಜಳನು ಲಿಂಗಕ್ಕೆಯೇ ಕೇಳಲು ಇದರಲ್ಲಿ ವಿಟನ ತಪ್ಪು ಇದೆ, ಕಿನ್ನರಯ್ಯನ ತಪ್ಪಿತನಲ್ಲ ಎಂಬ ಶಬ್ದಗಳು ಅದರೊಳಗಿಂದ ಹೊರಟವು. ಈ ಅದ್ಭುತವನ್ನು ನೋಡಿ ಎಲ್ಲರೂ ಬೆರಗಾದರು. ಶಿವಶರಣರು ತಪ್ಪು ನಡೆಯುವವರಲ್ಲ ಎಂದು ಬಿಜ್ಜಳನು ನುಡಿಯುತ್ತ ಕಿನ್ನರಿ ಬ್ರಹ್ಮಯ್ಯನಿಗೆ ವಂದಿಸಿದನು. ಆಗ ಕಿನ್ನರಯ್ಯನು ತಾನು ಸಿರವನರಿದ ವಿಟನಿಗೆ ಪ್ರಾಣದಾನ ಮಾಡಲು ಪರಮಾತ್ಮನಿಗೆ ಬೇಡಿಕೊಳ್ಳಲು ಅವನು ಚೇತರಿಸಿಕೊಂಡು ಎದ್ದು ಕುಳಿತನು. ಬಿಜ್ಜಳನು ಅದನ್ನು ನೋಡಿ ಭಕ್ತರನ್ನು ಹೊಗಳುತ್ತ ತನ್ನರಮನೆಗೆ ಬಂದನು.

ಇತ್ತ ಕಿನ್ನರಯ್ಯನು ಕಲ್ಯಾಣ ಪಟ್ಟಣದಲ್ಲಿ ತನ್ನ ಅಕ್ಕಸಾಲಿಗ ಉದ್ಯೋಗವನ್ನು ನಡಿಸುತ್ತ ಬಂದನು. ಇದರಿಂದ ಅವನು ಧನವಂತನೆಂದು ಖ್ಯಾತಿಯನ್ನು ಹೊಂದಿದನು. ಆಗ ಬಹು ಜನ ಬಡಬಗ್ಗರೂ ಜಂಗಮರೂ ಅವನಲ್ಲಿಗೆ ಬಂದು ಅವನಿಂದ ಸಹಾಯವನ್ನು ಹೊಂದುವವ

ರಾದರು. ಕಿನ್ನರಯ್ಯನಾದರೂ ಯಾರಿಗೂ ಇಲ್ಲೆನ್ನದೆ ದಾನಧರ್ಮ ಮಾಡುವಲ್ಲಿ ಪ್ರಸಿದ್ಧಿಯನ್ನು ಹೊಂದಿದನು. ಈ ಸಂಗತಿಯು ಕಲಕೇತ ಬೊಮ್ಮಯ್ಯನ ಚರಿತ್ರೆಯನ್ನು (೧) ನೋಡಿದಲ್ಲಿ ದೃಢಪಡುವದು. ಕಿನ್ನರಯ್ಯನ ಈ ಉದಾರ ವೃತ್ತಿಯನ್ನು ಬಹು ಜನರು ನೋಡಿ ಅವನಂತೆಯೇ ವರ್ತಿಸುವವರಾದರು.

ಆದರೆ ಸದ್ಗುಣಗಳಿದ್ದಲ್ಲಿ ಮಾತ್ಸರ್ಯ ಗುಣವಾದರೂ ಹೆರವರಲ್ಲಿ ಅಂಕುರಿಸಿ ಅದು ಕಾರ್ಯಕ್ಕೆ ಅಡ್ಡಿಯನ್ನುಂಟುಮಾಡುತ್ತದೆ. ಇದು ಕಿನ್ನರಯ್ಯನ ವಿಷಯದಲ್ಲಾದರೂ ಕಂಡುಬಂದಿತು. ಅವನು ದುರಾಢ್ಯವನೆಂದು ವಿರೋಧಿಗಳು ತಿಳಿದು ಅವನ ವಿಷಯವಾಗಿ ತಪ್ಪು ಕಲ್ಪನೆಗಳನ್ನುಂಟು ಮಾಡಲು ಹಿಂದಾಗಲಿಲ್ಲ. ಒಂದು ದಿನ ಬಿಜ್ಜಳನು ಕಿನ್ನರಯ್ಯನು ಅಕ್ಕಸಾಲಿಗ ಉದ್ಯೋಗ ಮಾಡುವವನೆಂಬುದನ್ನು ತಿಳಿದು ಅವನು ೧೦ ಸಾವಿರ ವರಹ ಬೆಲೆಯುಳ್ಳ ಬಂಗಾರವನ್ನು ಬಸವೇಶ್ವರನ ಕಯ್ಯಲ್ಲಿ ಕೊಟ್ಟು ಅವರಿಂದ ಕಿನ್ನರಯ್ಯನ ಕಡೆಯಿಂದ ಆಭರಣಗಳನ್ನು ಮಾಡಿಸೆಂದು ಆಜ್ಞಾಪಿಸಿದನು. ಆಗ ಆ ಚಿನ್ನವನ್ನು ಬಸವೇಶ್ವರನು ಕಿನ್ನರಯ್ಯನ ಕಡೆಗೆ ಕೊಡಲು ಅವನು ಆಭರಣಗಳನ್ನು ಮಾಡಲು ಉದ್ಯೋಗಿಸಿದನು. ಆಗ ಎಂದಿನಂತೆ ಒಬ್ಬ ಬಡ ಜಂಗಮನು ಬಂದು ತನಗೆ ಚಿನ್ನವನ್ನು ಕೊಡಲು ಕೇಳಲು ಕಿನ್ನರಯ್ಯನು ಜಂಗಮ ಪ್ರೇಮಿಯಾದ್ದರಿಂದ ಅವನಿಗೆ ಕೆಲವು ಚಿನ್ನವನ್ನು ತಂದುಕೊಟ್ಟನು. ಹೀಗೆಯೇ ಅನೇಕ ಜಂಗಮರು ಚಿನ್ನವನ್ನು ಬೇಡಹತ್ತಲು ಅವರಿಗೂ ಕೊಟ್ಟನು. ಇದರಿಂದ ಬಹು ಜನರು ಬಿಜ್ಜಳನ ಬಂಗಾರವನ್ನು ಕಿನ್ನರಯ್ಯನು ಹೀಗೆ ದುರುಪಯೋಗ ಮಾಡುತ್ತಿರುವನೆಂದು ಅಪಪ್ರಚಾರ ಮಾಡಹತ್ತಿದರು. ಆದರೆ ಕಿನ್ನರಯ್ಯನು ತಾನು ಮಾಡತಕ್ಕ ಆಭರಣಗಳನ್ನು ಮಾಡಿ ಬಸವನಿಗೆ ತೋರಿಸಲಾಗಿ ಅವನು ಅವುಗಳನ್ನು ತೂಕ ಮಾಡಲು ತಾನು ಮೊದಲಿಗೆ ಕೊಟ್ಟಷ್ಟೇ ಚಿನ್ನವು ಅವುಗಳಲ್ಲಿದ್ದುದು ಕಂಡುಬಂದಿತು. ಆಮೇಲೆ ಆ ಆಭರಣಗಳನ್ನು ಬಿಜ್ಜಳನಿಗೆ ತೋರಿಸಲಾಗಿ ಅವನು ಅವುಗಳ ತೂಕ ಮಾಡಲು ಅದು ಸರಿಯಾಗಿರುವದು ಕಂಡುಬಂದಿತು. ಕಿನ್ನರಯ್ಯನು ಬಸವೇಶ್ವರನಿಗೆ ಪ್ರಾಣದ ಸ್ನೇಹಿತನಾಗಿದ್ದನು. ರಾಜಧಾನಿ

(೧) ಶಿವಶರಣರ ಚರಿತ್ರೆಗಳು ಭಾಗ ೨-ಪುಟ ೭೫ ನೋಡಿರಿ.

ಯುಲ್ಲೆಲ್ಲ ಬಸವೇಶ್ವರನ ವಿರೋಧಿಗಳು ಅಸಂಖ್ಯವಾಗಿದ್ದು ಅವರು ಈ ತೆರದ ದೋಷವನ್ನು ಕಲ್ಪಿಸಿ ಬಿಜ್ಜಳನ ಕಿವಿವರೆಗೂ ಒಯ್ದಿದ್ದರು. ಆಗ ಬಿಜ್ಜಳನು ಕಿನ್ನರಯ್ಯನು ಸದ್ಗುಣಿಯು ಮತ್ತು ಸದಾಚಾರಿಯು ಎಂದು ತಿಳಿದು ಅವನನ್ನು ಹೊಗಳುವವನಾದನು.

ಶಿವಶರಣರು ಲಿಂಗಾರ್ಪಣ ಭಾವದಿಂದ ಆಚರಣೆ ಮಾಡಬೇಕೆಂದು ಅವರ ತತ್ವವಿರುತ್ತದೆ. ಆದ್ದರಿಂದ ಅವರು ತಮ್ಮ ತತ್ವಜ್ಞಾನ ವಿವಂರ್ಶೆ ಯಲ್ಲಿ, ಇಂದ್ರಿಯ ಭೋಗಗಳಲ್ಲಿ ಅಥವಾ ಇನ್ನಿತರ ಕಾರ್ಯಗಳಲ್ಲಿ ಈ ಭಾವವನ್ನಿಟ್ಟುಕೊಂಡೇ ಆಚರಿಸುತ್ತಾರೆ. ಇಂಥ ಆಚರಣೆಗಳು ಪುನೀತ ವಾಗಿರುತ್ತವೆ. ಈ ವಿಧದ ವಿಚಾರಗಳ ಮೂಲಕ ಶಿವಶರಣರು ಯಾವದು ಯೋಗ್ಯವೋ ಅದನ್ನೇ ಕಂಡುಹಿಡಿದು ಅವನ್ನು ಲಿಂಗಾರ್ಪಣ ಭಾವದಿಂದ ಸೇವಿಸುವದುಂಟು. ಅವರು ಕೆಲವೊಂದು ಕೃತಿಯು ಯೋಗ್ಯವೋ ಅಯೋಗ್ಯವೋ ಎಂಬುದನ್ನು ಅವರು ತಮ್ಮ ಅನುಭವ ಅಥವಾ ಅನ್ಯ ಭಾವದಿಂದ ನಿರ್ಧರಿಸುತ್ತಾರೆ. ಈ ತೆರದ ಘಟನೆಗಳು ಕಿನ್ನರಿ ಬೊಮ್ಮಯ್ಯನ ಚರಿತ್ರೆಯಲ್ಲಿ ಕಂಡುಬರುತ್ತವೆ.

ಬಳ್ಳೊಳ್ಳಿಯು ಆಯುರ್ವೇದದಲ್ಲಿಯೂ ರೂಢಿಯಲ್ಲಿಯೂ ಒಂದು ಮಹತ್ವದ ಆಹಾರ ಪದಾರ್ಥವಾಗಿದೆ. ಕಿನ್ನರಿ ಬೊಮ್ಮಯ್ಯನು ಇದನ್ನು ತನ್ನ ಆಹಾರದಲ್ಲಿ ಉಪಯೋಗಿಸುವ ರೂಢಿಯು ಅವನಿಗೆ ಇದ್ದಿತು. ಬಸ ವೇಶ್ವರನಿಗೆ ಈ ಸಂಗತಿಯು ತಿಳಿದುಬರಲು ಅವನು ಇದು ನಿಷಿದ್ಧ ಪದಾರ್ಥವೆಂತಲೂ ಅದನ್ನು ಸೇವಿಸಬಾರದೆಂತಲೂ ಕಿನ್ನರೀ ಬೊಮ್ಮಯ್ಯ ನಿಗೆ ತಿಳಿಸಿದನು. ಹೀಗೆ ತಿಳಿಸಲಾಗಿ ಕಿನ್ನರಯ್ಯನಿಗೆ ಕೋಪ ಬಂದು ಅವನು ಕಲ್ಯಾಣ ಪಟ್ಟಣವನ್ನು ಬಿಟ್ಟು ಒಂದು ಗಾವುದ ದೂರವಿರುವ ಒಂದು ಹಳ್ಳಿಗೆ ಹೋಗಿ ಒಬ್ಬ ಭಕ್ತನ ಮನೆಯಲ್ಲಿ ಇರಹತ್ತಿದನು. ಆಗ ಶಿವಶರಣರು ಬಸವೇಶ್ವರನಿಗೆ ಕಿನ್ನರಿ ಬೊಮ್ಮಯ್ಯನು ತನ್ನ ಲಿಂಗಕ್ಕೆ ಯಾವುದು ಹಿತವಾದುದೋ ಅದನ್ನೇ ಮಾಡುತ್ತಿದ್ದಾನೆ. ಆದರೆ ನೀವು ಆದರಲ್ಲಿ ಅವನನ್ನು ಜರಿದದ್ದರಿಂದ ಅವನು ಮುನಿದು ಹೋಗಿ ದ್ದಾನೆಂದು ಅವನಿಗೆ ತಿಳಿಸಿದರು. ಬಸವೇಶ್ವರನು ಇದನ್ನು ತಿಳಿದು ತನ್ನಿಂದ ತಪ್ಪಾಯಿತೆಂದು ಪಶ್ಚಾತ್ತಾಪಗೊಂಡನು. ಆಗ ಅವನು ಬಂಡಿ ತುಂಬ ಉಳ್ಳಿಯನ್ನು ತರಿಸಿ ಆದರ ಸರಗಳಿಂದ ಆನೆ ಕುದರೆಗಳನ್ನು

ಸಹ ಶೃಂಗರಿಸಿ ಕಿನ್ನರಿ ಬೊಮ್ಮಯ್ಯನಿದ್ದಲ್ಲಿಗೆ ಹೋಗಿ ಅವನಿಗೆ ನನ್ನಿಂದ ತಪ್ಪಾಯಿತೆಂದು ಕ್ಷಮೆ ಬೇಡಿಕೊಂಡನು. ಆಗ ಕಿನ್ನರಿ ಬೊಮ್ಮಯ್ಯನ ಕೋಪವು ಅಡಗಿತು. ಮತ್ತು ಬಸವೇಶ್ವರನೊಂದಿಗೆ ಕಲ್ಯಾಣ ಪಟ್ಟಣಕ್ಕೆ ಬಂದು ಇರಹತ್ತಿದನು.

ಬಸವೇಶ್ವರನ ಕಾಲದಲ್ಲಿ ಶಿವಶರಣರಲ್ಲಿ ಶಿವಾನುಭವದ ತತ್ವಗಳ ಬಗ್ಗೆ ಮೇಲಿಂದ ಮೇಲೆ ವಿಚಾರ ವಿನಿಮಯಗಳೂ ಚರ್ಚೆಗಳೂ ನಡೆಯುತ್ತಿದ್ದವು. ಉದಾಹರಣಾರ್ಥವಾಗಿ ಭಕ್ತರು ಯಾವ ಬಗೆಯ ಯೋಗಾಭ್ಯಾಸ ಮಾಡತಕ್ಕದ್ದು, ಇಷ್ಟಲಿಂಗದ ಸ್ವರೂಪವೇನು, ಜಂಗಮನು ಇದ್ದ ಬಳಿಕ ಲಿಂಗದ ಅವಶ್ಯಕತೆಯು ಇದೆಯೋ ಹೇಗೆ, ಸ್ಥಾವರ ದೇವತೆಗಳನ್ನು ಪೂಜಿಸುವದಾದರೆ ಯಾವ ಭಾವದಿಂದ ಪೂಜಿಸಬೇಕು, ಇವೇ ಮೊದಲಾದ ವಿಷಯಗಳ ಬಗ್ಗೆ ವಾದ ವಿವಾದಗಳು ಜರಗುತ್ತಿದ್ದವು. ನಾವು ನುಲಿಯ ಚಂದಯ್ಯ, ಢಕ್ಕೆಯ ಬೊಮ್ಮಯ್ಯ, ಸಿದ್ಧರಾಮಯ್ಯ ಇವರ ಚರಿತ್ರೆಗಳನ್ನು ನೋಡಿದಲ್ಲಿ ಇವರ ನಿಜಸ್ಥಿತಿಯು ತಿಳಿದು ಬರುತ್ತದೆ.

ಸ್ಥಾವರ ಲಿಂಗ ಮತ್ತು ಇಷ್ಟಲಿಂಗ ಇವುಗಳ ಬಗ್ಗೆ ಕೆಲವೊಂದು ಪ್ರಸಂಗದಲ್ಲಿ ನಡೆದ ವಿವಾದಗಳು ವಿಶೇಷವಾಗಿ ಕಿನ್ನರಿ ಬೊಮ್ಮಯ್ಯನ ಚರಿತ್ರೆಯಲ್ಲಿ ಕಂಡುಬರುತ್ತವೆ. ಒಂದುದಿವಸ ಮೋಳಿಗೆ ಮಾರಯ್ಯನ ಸಮಯಾಚಾರದ ದೇವರು ತ್ರಿಪುರಾಂತಕ ದೇವಸ್ಥಾನಕ್ಕೆ ಬಂದಿರಲು ಕಿನ್ನರಯ್ಯನು ಅವನನ್ನು ನೋಡಿ ದೇವರಮೇಲಿದ್ದ ವಸ್ತ್ರವನ್ನು ತೆಗೆದುಕೊಂಡು ಇದು ಪವಿತ್ರವಾದುದೆಂದು ಹೇಳಿ ಅವನಿಗೆ ಕೊಟ್ಟನು. ಆಗ ಅವನು ಆ ವಸ್ತ್ರವನ್ನು ತನ್ನ ಸೆಜ್ಜೆಗೆ ಉಪಯೋಗಿಸಿಕೊಟ್ಟನು. ಆಗ ಮೋಳಿಗೆ ಮಾರಯ್ಯನ ಹೆಂಡತಿ ಮಹಾದೇವಿಯಮ್ಮನು ಇದನ್ನು ತಿಳಿದು ಈ ವಸ್ತ್ರವು ಸ್ಥಾವರಲಿಂಗದ್ದು, ಕಿನ್ನರಿ ಬೊಮ್ಮಯ್ಯನು ಸ್ಥಾವರವನ್ನು ಭಜಿಸುತ್ತ ಹಣ ಸಂಪಾದನೆ ಮಾಡುತ್ತಾನೆ. ಹೀಗೆ ಮಾಡುವವನು ಭಕ್ತರಿಗೆ ಸಲ್ಲದೆಂದು ಆ ಬಟ್ಟೆಯನ್ನು ಅವಳು ಕಿನ್ನರಿ ಬೊಮ್ಮಯ್ಯನಿಗೆ ತಿರುಗಿ ಕಳಿಸಿದಳು. ಆಗ ಕಿನ್ನರಿ ಬೊಮ್ಮಯ್ಯನು ಸ್ಥಾವರ, ಜಂಗಮ ಇದರ ರೀತಿಯು ಮಹಾದೇವಿಯಮ್ಮನಿಗೆ ತಿಳಿಯದು. ಭಕ್ತಿಯ ಉಚ್ಚ ಸ್ಥಾನದಲ್ಲಿ ಸ್ಥಾವರ ಮತ್ತು ಜಂಗಮ ಇವು ಭಿನ್ನತೆ ಇಲ್ಲ, ಇವುಗಳಲ್ಲಿ ಒಂದೇ ಎಂದು ತಿಳಿಯಬೇಕು. ಎಂದು ಹೇಳಿ ಕಿನ್ನರಯ್ಯನು ತನ್ನ ಇಷ್ಟಲಿಂಗದ ಮುಂದೆ

ಕಿನ್ನರಿಯನ್ನು ನುಡಿಸುತ್ತ ಪರಮಾತ್ಮನನ್ನು ಪ್ರಾರ್ಥಿಸಹತ್ತಲು ಆ ಇಷ್ಟ ಲಿಂಗದೊಳಗಿಂದಲೇ ೧೧ ಹಣದ ನಿಧಿಯು ಹೊರಕ್ಕೆ ಬಂದು ಇವನ ಕೈಯ್ಯಲ್ಲಿ ಬಂದು ಬಿದ್ದಿತು. ಅದನ್ನು ಅವನು ಆ ಸಮಯಾಚಾರದ ದೇವರಿಗೆ ತೋರಿಸಿ ಇದನ್ನು ಮೋಳಿಗೆ ಮಾರಯ್ಯನ ಹೆಂಡತಿಯಾದ ಮಹಾದೇವಿಯಮ್ಮನಿಗೆ ತಿಳಿಸು ಎಂದು ಹೇಳಿ ಕಳಿಸಿದನು.

ಷಟ್‌ಸ್ಥಲ ಶಾಸ್ತ್ರದಲ್ಲಿ ಇಷ್ಟಪ್ರಾಣ ಭಾವಲಿಂಗ ಗಳೆಂದು ಲಿಂಗವು ಮೂರು ವಿಧವಾಗಿದೆಂದು ಹೇಳಲ್ಪಟ್ಟಿದೆ. ಅವು ಅನುಕ್ರಮವಾಗಿ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಶರೀರಗಳಿಗೆ ಸಂಬಂಧಿಸಿರುತ್ತದೆ. ಈ ಮೂರು ಶರೀರಗಳಲ್ಲಿ ಮೇಳವಿದ್ದಾಗಲೇ ಮನುಷ್ಯನಿಂದ ಕ್ರಿಯೆಗಳು ಸರಾಗವಾಗಿ ನಡಿಯುತ್ತವೆ. ಈ ಶರೀರಗಳು ಒಂದನ್ನೊಂದು ಬಿಟ್ಟು ವ್ಯವಹರಿಸಲಾರವು. ಶಿವಶರಣರಲ್ಲಿ ಕೆಲವರು ಸ್ಥೂಲಶರೀರದಲ್ಲಿ ಇಷ್ಟ ಲಿಂಗವನ್ನು ಸಾಧಿಸಿ ಭಕ್ತಮಹೇಶ್ವರ ಸ್ಥಲದಲ್ಲಿ ಇರುತ್ತಾರೆ. ಬೇರೆಕೆಲವರು ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗವನ್ನುಸಾಧಿಸಿ ಪ್ರಸಾದಿ ಮತ್ತುಪ್ರಾಣಲಿಂಗಿ ಸ್ಥಲದಲ್ಲಿ ಇರುತ್ತಾರೆ.ಬೇರೆ ಕೆಲವರು ಕಾರಣ ಶರೀರದಲ್ಲಿ ಭಾವಲಿಂಗವನ್ನು ಸಾಧಿಸಿ ಶರಣ ಐಕ್ಯ ಸ್ಥಲದಲ್ಲಿದ್ದವರೂ ಇರುತ್ತಾರೆ. ಬಸವೇಶ್ವರನ ಕಾಲದಲ್ಲಿ ಹೀಗೆ ಆಯಾ ಸ್ಥಲಗಳನ್ನು ಸಾಧಿಸಿದ ಶಿವಶರಣರು ಶಿವಾನುಭವ ಮಂಟಪದಲ್ಲಿದ್ದರು. ಈ ಶಿವಶರಣರಲ್ಲಿ ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಸೋದರ ಕೇತಯ್ಯ, ಮತ್ತು ಕಿನ್ನರಿ ಬ್ರಹ್ಮಯ್ಯ, ಈ ಐದು ಜನರು ಮಾತ್ರ ಷಟ್‌ಸ್ಥಲ ಜ್ಞಾನಿಗಳಾಗಿ ಆಚರಿಸುತ್ತ ಕೇವಲ ಸರಸ್ಪರತ್ವದಿಂದ ನಡೆಯುತ್ತಿದ್ದರು. ಈ ಐದರ ಪ್ರಾಣವು ಸಹ ಏಕ ರೂಪತೆಯನ್ನು ಹೊಂದಿದ್ದಾಗಿತ್ತು.

ಒಂದುದಿನ ಕೇತಯ್ಯನು ಮರಣ ಹೊಂದಲು ಮಡಿವಾಳ ಮಾಚಿದೇವನು ಅವನ ಜೀವವನ್ನು ಆತ್ಮ ಶಕ್ತಿಯಿಂದ ಹಿಂದುರಿಗಿಸಿ ತರಲು ಸಮರ್ಥನಾದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಇದೇ ಪ್ರಕಾರ ಕಿನ್ನರಯ್ಯನ ವಿಷಯವಾಗಿಯೂ ಒಂದು ಘಟನೆಯು ಉಂಟಾಯಿತೆಂದು ಅವನ ಚರಿತ್ರೆಯಲ್ಲಿ ಹೇಳಿದೆ.

ಒಂದಾನೊಂದು ದಿವಸ ಕಿನ್ನರಿ ಬೊಮ್ಮಯ್ಯನ ಪ್ರಾಣವನ್ನು ಶಿವನು ತನ್ನ ಸ್ಥಾನಕ್ಕೆ ಬರಮಾಡಿಕೊಂಡನು. ಆಗ ಅವನ ಬಾಹ್ಯ ದೇಹವು

ಸತ್ತಂತೆ ನೆಲಕ್ಕೆ ಬಿದ್ದಿತು. ಬಸವೇಶ್ವರನಿಗೆ ಇದು ಗೊತ್ತಾಗಲು ಅವನು ಕಿನ್ನರಯ್ಯನು ಸತ್ತನೆಂದು ಭಾವಿಸಿ ಅವನ ಶರೀರವಿದ್ದ ಸ್ಥಳಕ್ಕೆ ಬಂದು ಬಹಳ ಶೋಕಮಾಡಹತ್ತಿದನು. ಮಡಿವಾಳ ಮಾಚಿದೇವನಿಗೆ ಇದು ತಿಳಿದುಬರಲು ಅವನು ಅಲ್ಲಿಗೆ ಬಂದು ನೋಡಲಾಗಿ ಕಿನ್ನರೀ ಬೊಮ್ಮಯ್ಯನ ಪ್ರಾಣವು ದೇಹವನ್ನು ತಾತ್ಪೂರ್ತಿಕವಾಗಿ ಬಿಟ್ಟುಹೋಗಿದೆ, ಅವನು ಶಿವನ ಸನ್ನಿಧಿಯಲ್ಲಿ ಇದ್ದಾನೆ ಎಂದು ಅವನಿಗೆ ಭಾಸವಾಯಿತು. ಆಗ ಮಾಚಿದೇವನು ಕಿನ್ನರಿ ಬೊಮ್ಮಯ್ಯನನ್ನು ಉದ್ದೇಶಿಸಿ ಭಕ್ತ ಶ್ರೇಷ್ಠನಾದ ಬಸವನು ನಿನ್ನನ್ನು ಬಿಟ್ಟು ಅಗಲಲಾರನು. ನೀನು ಮರ್ತ್ಯಕ್ಕೆ ಹೊರಟು ಬರಬೇಕೆಂದು ಘೋಷಿಸಿದನು. ಅವನು ಮಾಡಿದ ಈ ಘೋಷಣೆಯು ಕಿನ್ನರಯ್ಯನಿಗೂ ಶಿವನಿಗೂ ತಿಳಿಯಲಾಗಿ ಕಿನ್ನರಯ್ಯನ ಪ್ರಾಣವು ಮರ್ತ್ಯಕ್ಕೆ ಹಿಂದುರಿಗಿ ಬಂದು ಕಿನ್ನರಯ್ಯನ ದೇಹವನ್ನು ಪ್ರವೇಶಿಸಲಾಗಿ ಅವನು ಚೇತರಿಸಿಕೊಂಡು ಎದ್ದನು. ಈ ಘಟನೆಯಿಂದ ಕಿನ್ನರಯ್ಯ ಮತ್ತು ಬಸವೇಶ್ವರ ಈ ಉಭಯತರ ಪ್ರಾಣಗಳು ಎಷ್ಟು ಗಾಢವಾಗಿ ನಿಗಡಿತವಾಗಿದ್ದವೆಂಬುದು ಎಲ್ಲರಿಗೂ ತಿಳಿದು ಅವರು ಆಶ್ಚರ್ಯ ಪಟ್ಟರು.

ಶಿವಶರಣರೆಲ್ಲರೂ ಕೂಡಿಕೊಂಡು ಅಷ್ಟಾವರಣಗಳನ್ನು ತಮ್ಮ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳಲ್ಲಿ ಸಾಧಿಸಿದ್ದರ ಪರಿಣಾಮವು ಇದಾಗಿರುತ್ತದೆ.

ಈ ಪ್ರಕಾರ ಕಿನ್ನರಯ್ಯನು ಬಸವೇಶ್ವರನ ಕೇವಲ ಗೆಳೆಯನಾಗಿ ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತ ಇರಲು ಹರಳಯ್ಯ ಮಧುವಯ್ಯಗಳ ಬಗ್ಗೆ ದೊಡ್ಡ ಕೋಲಾಹಲವು ರಾಜಧಾನಿಯಲ್ಲಿ ಉಂಟಾಯಿತು. ಇವರಲ್ಲಿ ಒಬ್ಬನು ಮಚ್ಚಿಗಾರನು, ಮತ್ತೊಬ್ಬನು ಬ್ರಾಹ್ಮಣನು. ಮಧುವಯ್ಯನು ರಾಜನಲ್ಲಿ ಮುಖ್ಯಾಧಿಕಾರಿಯಾಗಿ ಕೆಲಸಮಾಡುತ್ತಿದ್ದನು. ಇವರೀರ್ವರ ಮಕ್ಕಳಲ್ಲಿ ಲಗ್ನವಾಗಲು ದೇಶದಲ್ಲಿ ಇದೊಂದು ಅನಾಹುತವಾಯಿತೆಂದು ಜನರಲ್ಲಿ ಕ್ಷೋಭೆಯುಂಟಾಯಿತು. ಇವರೀರ್ವರು ದೊಡ್ಡ ಪಾಪಕೃತ್ಯವನ್ನು ಮಾಡಿದರೆಂದು ಜನರು ತಿಳಿದರು. ಅರಸನಾದ ಬಿಜ್ಜಳನು ಜನರ ಅಭಿಪ್ರಾಯವನ್ನು ಪುರಸ್ಕರಿಸಿ ಇವರಿಬ್ಬರನ್ನು ಹಿಂಸೆಪಡಿಸಿ ಅವರನ್ನು ಘಾತಿಸಿದನು. ಇದಕ್ಕೋಸ್ಕರ ಶಿವಶರಣರು ಬಸವೇಶ್ವರನೊಡನೆ ಕಲ್ಯಾಣವನ್ನು ಬಿಟ್ಟು ಕಪ್ಪಡಿ ಸಂಗಮ ಸ್ಥಾನವಕಡೆಗೆ ತೆರಳಿದರು.

ಸರ್ವಾಂಗದಲ್ಲಿ ಧರಿಸಿ ಆ ಲಿಂಗಮುಖ ಪ್ರಸನ್ನ ಪ್ರಸಾದವ ಸ್ವೀಕರಿಸ ಬಲ್ಲಾತನೇ ಪರಶಿವ ಸ್ವರೂಪನೆಂಬುದೀಗ ಅಚ್ಚ ಬೆಳ್ಳಗೆಯ ಹಾಲ ನಿಶ್ಚಯದಲ್ಲಿ ತೆರೆಗು ಸೃಷ್ಟಿಯಾಗಿ ಕೊಳಬಲ್ಲಡೆ ಆತನೇ ಸದಾಶಿವ ಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೪೯. ಬಂಟ ಹೊಡೆಯನೊಡನೆಯುಂಡಲ್ಲಿ ದಾಸತನವಳಿಯಿತ್ತು. ನೀ ಮರೆದು ಮಲಗಿರ್ದು ಸ್ವಪ್ನವ ಕಾಂಬಲ್ಲಿ ಲಿಂಗದ ಕೂಟವೆಲ್ಲಿದ್ದಿತ್ತು? ನೀ ಸ್ತ್ರೀ ಸಂಭೋಗವ ಮಾಡುವಲ್ಲಿ ಲಿಂಗ ನಿನ್ನಲ್ಲಿ ಸಹಗೂಡಿದ್ದ ಠಾವಾವುದು? ಸಾಕು. ಅರ್ಥಿಕಾರರ ಹೊತ್ತುಹೋಕನ ಅರ್ಪಿತಲಿಂಗ ವಂಗದಿಂದ ಹಿಂಗಿದಾಗಲೇ, ಸ್ವಪ್ನದ ಅರ್ಪಿತ. ಮರವೆಯ ಮುಟ್ಟದ ಅರ್ಪಿತವಿದು. ನಿಶ್ಚಯವಲ್ಲ. ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೫೦. ಲಿಂಗಕ್ಕೆ ಸಹಭೋಜನವಾದಲ್ಲಿ ಕೂರ್ಮನ ಶಿಶುವಿನ ಸ್ನೇಹದಂತಿರಬೇಕು. ಅಯಃ ಕಾಂತದ ಶಿಲೆಯ ಲೋಹದಂತಿರಬೇಕು. ಶಶಿಶಿಲೆಯಂತೆ ಒಸರುವ ಅರ್ಪಿತ ಕೂಡುವ ಕೂಟ ಭ್ರಮರ ಚಂಪಕ ದಂತೆ ಒಡಗೂಡಿ ಲಿಂಗವ ಎಡತೆರಹಿಲ್ಲದ ಸಹಭೋಜನ ಕೊಡುವ ತನ್ನಡಿಗೆ ಕಡೆನಡು ಮೊದಲಿಲ್ಲದೆರಗುವ. ಆತ ಸದಾಶಿವಮೂರ್ತಿ ಲಿಂಗವು ತಾನೇ.

೫೧. ಲಿಂಗದೊಡನೆ ಸಹಭೋಜನವ ಮಾಡುವ ಸಾಧಕರೆಲ್ಲರು ನೀವು ಕೇಳಿರೋ! ಲಿಂಗವೇ ಕರ್ತೃವಾಗಿ ನೀವೇ ಭೃತ್ಯರಾಗಿದ್ದಲ್ಲಿ ಲಿಂಗ ದೊಡನೆ ಸಹಭೋಜನವ ಮಾಡಲಾಗದು. ಅದೇಕೆಂದಡೆ, ಲಿಂಗವು ಅಮಲ ಸ್ವರೂಪವು. ನೀನು ಮಲದೇಹಿ. ನಿನಗೆ ಪ್ರಪಂಚು, ಲಿಂಗವು ನಿಃಪ್ರಪಂಚು. ನೀನು ಅಂಗಿ, ಲಿಂಗವು ನಿರಂಗಿ. ಅಂತಹ ಲಿಂಗಕ್ಕೂ ನಿನಗೂ ಸಹಭೋಜನವೆಂತುಟಯ್ಯ!? ಜಾಗ್ರದಲ್ಲಿ ತೋರಿ ಸ್ವಪ್ನದಲ್ಲಿ ಕಂಡುದ ಲಿಂಗಕ್ಕರ್ಪಿಸಿ ಸಹಭೋಜನವ ಮಾಡುವ ಪರಿ ಎಂತೋ? ಸಾಕು ಕುಟಿಲದ ಊಟ. ಸದಾಶಿವಮೂರ್ತಿಲಿಂಗವ ಮುಟ್ಟದ ಅರ್ಪಿತ ವದೇಕೆ? ಕೇಳಿರಣ್ಣಾ! ನರಕಕ್ಕೆ ಭಾಜನರಪ್ಪರಲ್ಲವೆ?

## (೮) ಪ್ರಾಣಲಿಂಗಿಸ್ಥಲ.

**ವಿವರಣೆ:—** ಈ ಸ್ಥಲದಲ್ಲಿ ಇಷ್ಟ, ಪ್ರಾಣ ಭಾವಲಿಂಗಗಳ ವಿಚಾರಗಳಲ್ಲಿ ಅವುಗಳ ಪರಸ್ಪರ ಸಂಬಂಧಗಳೂ ಹೇಳಲ್ಪಟ್ಟಿವೆ. ವಚನಕಾರನು ಇಲ್ಲಿ ಅನೇಕ ಬೆಡಗಿನ ವಚನಗಳನ್ನು ಉಪಯೋಗಿಸಿ ಈ ವಿಷಯಗಳನ್ನು ತಿಳಿಸಲು ಯತ್ನಿಸಿದ್ದಾನೆ. ಈ ಮೂರು ಲಿಂಗಗಳು ಮನುಷ್ಯನಲ್ಲಿ ಹೇಗೆ ಪ್ರಕಟವಾಗುತ್ತವೆ, ಅವುಗಳ ಪರಿಣಾಮಗಳು ಆಯಾ ಶರೀರಗಳ ಮೇಲೆ ಹೇಗೆ ಉಂಟಾಗುತ್ತವೆ, ಜ್ಞಾನ ಕ್ರಿಯೆಗಳ ಸಂಬಂಧವೇನು, ಮಾಯೆಯನ್ನು ಹೇಗೆ ದೂರ ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಬೆಡಗುಗಳ ಮೂಲಕ ವಚನಕಾರನು ಬಹು ಮಾರ್ಮಿಕ ರೀತಿಯಿಂದ ವಿವೇಚಿಸಿದ್ದಾನೆ.

### ವಚನಗಳು.

೫೨. ಜೇನುತುಪ್ಪನ ಹೊತ್ತು ಮಾರುವವಳ ಮಡಿಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ. ಒಂದು ತುಂಬಿ ಇದ್ದಿತ್ತು. ಒಂದು ತುಂಬಿ ಹಾರಿತ್ತು. ಒಂದು ತುಂಬಿ ಸತ್ತಿತ್ತು. ಮೂರು ತುಂಬಿಯಿಂದವ ಕಂಡುದಿಲ್ಲ. ಮಡಿಕೆ ಒಡೆಯಿತ್ತು. ತುಪ್ಪ ಉಕ್ಕಿತ್ತು. ಹೊತ್ತವ ಸತ್ತ. ಇದೇನು ಕೃತ್ರಿಮವೆಂದು ಕೇಳಬನ್ನಿ ಸದಾಶಿವಮೂರ್ತಿಲಿಂಗವ.

ಟೀಕು:— ಪರಮಾಮೃತ ಸ್ವರೂಪವಾದ ಸುಜ್ಞಾನವನ್ನು ತನ್ನ ಸರ್ವಾಂಗದಲ್ಲಿ ಧರಿಸಿಕೊಂಡು ಎಂಬುದೀಗ ಜೇನುತುಪ್ಪನ ಹೊತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ತನ್ನ ಉಪಾವಸ್ಥೆಯ ಮಾಡುತ್ತಿರ್ದ ಮೋಕ್ಷಾಪೇಕ್ಷಗಳಾದ ಭಕ್ತಜನಂಗಳಿಗೆ ಪರಮಾಮೃತ ಸ್ವರೂಪವಾದ ಸುಜ್ಞಾನ ಬೋಧೆಯ ಬೋಧಿಸುತ್ತಿಹನು. ಚಿತ್ಶಕ್ತಿ ಸ್ವರೂಪವಾದ ಶ್ರೀಗುರುವೆಂಬುದೀಗ ಮಾರುವವಳೆಂಬ ಶಬ್ದಕ್ಕರ್ಥ. ಆ ಶ್ರೀಗುರು ಸಂಬಂಧವಾಗಿಹುದೆಂಬುದೀಗ ಮಡಿಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ ಎಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಸತ್ಕ್ರಿಯಾಚಾರದಲ್ಲಿರುತ್ತಿಹುದೆಂಬುದೀಗ ಒಂದು ತುಂಬಿ ಇದ್ದಿತ್ತು ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪವಾದ ಪ್ರಾಣಲಿಂಗವು ಶರಣನ ನಿಜಾಂತರಂಗಕ್ಕೆ ವೇಧಿಸಿತ್ತೆಂಬುದೀಗ ಒಂದು ತುಂಬಿ ಹಾರಿತ್ತು ಎಂಬ ಶಬ್ದಕ್ಕರ್ಥ. ಆನಂದ ಸ್ವರೂಪವಾದ ತೃಪ್ತಿ ಲಿಂಗವು ಶರಣನ

ಭಾವದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಒಂದು ತುಂಬಿ ಸತ್ತಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗವು ಶರಣನ ತ್ರಿವಿಧಾಂಗವನವಗ್ರಹಿಸಿ ನಿಷ್ಪತ್ತಿಯಾದ ಬಳಿಕ ಇದಿರಿಟ್ಟು ಕಾಣಲಿಲ್ಲವೆಂಬುದೀಗ ಮೂರು ತುಂಬಿ ಯೊಂದವ ಕಂಡುದಿಲ್ಲ ಎಂಬ ಶಬ್ದಕ್ಕರ್ಥ. ಅಂತು ನಿಷ್ಪತ್ತಿಯಾಗಲು ಆ ಚಿದ್ಭಾಂಡದಲ್ಲಿ ಏಕಾರ್ಥವಾಯಿತ್ತೆಂಬುದೀಗ ಮಡಕೆ ಒಡೆಯಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವು ಲಿಂಗದಲ್ಲಿ ನಿಷ್ಪತ್ತಿಯಾಗಲು ಆ ಪರಮಾಮೃತ ರಸ ಶರಣನ ಬಾಹ್ಯಾಭ್ಯಂತರಂಗದಲ್ಲಿ ಪರಿಪೂರ್ಣ ವಾಗಿ ಸೂಸುತ್ತಿಹುದೆಂಬುದೀಗ ತುಪ್ಪ ಉಕ್ಕಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವ ಧರಿಸಿಕೊಂಡಿರ್ಪ ಜ್ಞಾನಗುರು ಶರಣನ ನಿಜಾಂತ ರಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಹೊತ್ತವ ಸತ್ತ, ಇದೇನು ಕೃತ್ರಿಮ ವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ

೫೩. ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ, ಮೂರು ಕಣ್ಣ ಕಂಡೆನು. ಒಂದು ಧರೆಯ ಕಣ್ಣು, ಒಂದು ಸಿರಿಯ ಕಣ್ಣು, ಒಂದು ಉರಿಯ ಕಣ್ಣು. ಉರಿ ಸಿರಿಯ ನುಂಗಿ, ಸಿರಿ ಧರೆಸಿರಿಯ ನುಂಗಿ, ಧರೆಯ ಅರ ಹಿರಿಯರು ನುಂಗಿ, ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಿಸಬೇಕು.

ಟೀಕು:— ದೇಹ ಸಂಬಂಧಿಯಾದಾತ್ಮಂಗೆ 'ಸುಜ್ಞಾನ ದೃಷ್ಟಿ ನಷ ವಾಯಿತ್ತೆಂಬುದೀಗ ಕಣ್ಣಿಲ್ಲದ ಕುರುಡನೆಂಬ ಶಬ್ದಕ್ಕರ್ಥ. ಅಂತಪಾ ತ್ಮಂಗೆ ಶಿವಕೃಪೆಯಿಂ ಸದ್ವಿವೇಕ ಜ್ಞಾನ ತಲೆದೋರಿ ಶ್ರೀಗುರುಕಾರು ಣ್ಯದಿಂ ತ್ರಿವಿಧಲಿಂಗ ಭಾವಿಸಿತ್ತೆಂಬುದೀಗ ಕನ್ನಡಿಯ ನೋಡಿ ಮೂರು ಕಣ್ಣ ಕಂಡೆನೆಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಶರಣನ ಸ್ಥೂಲಾಂಗದಲ್ಲಿ ಸಂಬಂಧವಾಗಿಹುವೆಂಬುದೀಗ ಒಂದು ಧರೆಯ ಕಣ್ಣು ಎಂಬ ಶಬ್ದಕ್ಕರ್ಥ. ಸುಜ್ಞಾನಸ್ವರೂಪವಾದ ಪ್ರಾಣಲಿಂಗವು ಶರಣನ ಸೂಕ್ಷ್ಮಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಸಿರಯ ಕಣ್ಣು ಎಂಬ ಶಬ್ದಕ್ಕರ್ಥ. ಚಿದಗ್ನಿಸ್ವರೂಪವಾದ ಭಾವಲಿಂಗವು ಶರಣನ ಕಾರಣಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಉರಿಯ ಕಣ್ಣು ಎಂಬ ಶಬ್ದಕ್ಕರ್ಥ. ಆ ಚಿದಗ್ನಿಸ್ವರೂಪವಾದ ಭಾವಲಿಂಗವು ಶರಣನ ಸ್ವರೂಪವಾದ ಪ್ರಾಣಲಿಂಗವನವಗ್ರಹಿಸಿ ಲೀಯವಾಯಿತ್ತೆಂಬುದೀಗ ಉರಿ ಸಿರಿಯ ನುಂಗಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನಸ್ವರೂಪವಾದ ಪ್ರಾಣ

ಲಿಂಗವು ಸದ್ರೂಪವಾದ ಇಷ್ಟಲಿಂಗವನನವಗ್ರಹಿಸಿ ಲೀಯವಾಯಿತ್ತೆಂಬುದೀಗ ಸಿರಿ ಧರೆಯು ನುಂಗಿ ಎಂಬ ಶಬ್ದಕ್ಕರ್ಥ. ಆ ಶರಣನ ಆಚಾರಲಿಂಗದಲ್ಲಿ ಸಂಬಂಧವಾದ ಸತ್ಕ್ರಿಯಾಲಿಂಗವು ತ್ರಿವಿಧಲಿಂಗಾನುಭಾವಿಗಳ ಸರ್ವಾಂಗವನನವಗ್ರಹಿಸಿ ನಿಷ್ಪತ್ತಿಯಾಯಿತ್ತೆಂಬುದೀಗ ಧರೆಯು ಅರುಹಿರಿಯರು ನುಂಗಿ ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಿಸಬೇಕು ಎಂಬ ಶಬ್ದಕ್ಕರ್ಥ.

೫೪. ಒಂದು ಹರಿವ ಹಾವು, ಒಂದು ಧನಿ ಸರಕ್ಕೆ ನಿಂತ ಹಾವು, ಒಂದು ಉರಿವ ಹಾವು, ಈ ಮೂವರ ನಡುವೆ ನಿಂತು ಆಡುವ ಕೋಡಗದಿರವು ಇಂದೆಂದೊಡೆ ಹರಿವ ಹಾವ ಮೆಟ್ಟಿ, ನಿಂದ ಹಾವ ಕೈಯ್ಯಲ್ಲಿ ಹಿಡಿದು, ಉರಿವ ಹಾವ ಬಾಯಲ್ಲಿ ಕಚ್ಚಿ ಆಡುತ್ತಿರಲಾಗಿ, ಕೋಡಗದೊಡೆಯ ಬಂದು ನೋಡಿ ಕೋಲ ಹಿಡಿದು ಕುಟ್ಟೆ, ಮೂರು ಹಾವ ಬಿಟ್ಟು ಕುಟ್ಟಿದ ಕೋಲ ನುಂಗಿತ್ತು. ಆ ಕೋಲು ಕೋಡಗದ ಒಡಲೊಳಗೊಡೆದು, ಕೋಡಗ ಸತ್ತಿತ್ತು. ದಡಿ ಒಡೆಯನ ನುಂಗಿ ಒಡೆಯನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಒಚ್ಚಬಯಲಾಯಿತ್ತು.

ಟೀಕು:— ಸ್ಥೂಲತನುವಿನ ಜಾಗ್ರಾವಸ್ಥೆಯ ವ್ಯಾಪಾರದಲ್ಲಿ ಚರಿಸುತ್ತಿಹನು ವಿಶ್ವನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಶಬ್ದ ಜಾಲದೊಳಗಿರ್ದ ತೈಜಸನೆಂಬುದೀಗ ಒಂದು ಧನಿ ಸರಕ್ಕೆ ನಿಂತ ಹಾವು ಎಂಬ ಶಬ್ದಕ್ಕರ್ಥ. ತಾಪತ್ರಯದೊಳಗೆ ಸಿಲ್ಕಿ ಮರವೆಯಲ್ಲಿರುತ್ತಿಹನು ಪ್ರಾಜ್ಞನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳೊಳಗಾಗಿ ಸಿಲ್ಕಿಯೆಂಬುದೀಗ ಈ ಮೂವರ ನಡುವೆ ನಿಂದು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳೊಳಗೆ ಮನವು ಸಿಲ್ಕಿ ಪ್ರಪಂಚಿನಲ್ಲಿ ಚರಿಸುತ್ತಿಹುದೆಂಬುದೀಗ ಆಡುವ ಕೋಡಗದಿರವು ಎಂಬ ಶಬ್ದಕ್ಕರ್ಥ. ಇಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಲು ಶ್ರೀಗುರು ಕಾರುಣ್ಯದಿಂ ಜಾಗ್ರಾವಸ್ಥೆಯ ವ್ಯಾಪಾರವ ಕ್ರಿಯಾದೀಕ್ಷೆಯಿಂ ನಿವೃತ್ತಿಮಾಡಿ ಆ ವಿಶ್ವದಲ್ಲಿ ಇಷ್ಟಲಿಂಗ ಪ್ರತಿಷ್ಠೆಯ ಮಾಡಿದನೆಂಬುದೀಗ ಹರಿವ ಹಾವ ಮೆಟ್ಟಿ ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧವಾಗಲು ಸೂಕ್ಷ್ಮ ತನುವಿನ ಇಂದ್ರಿಯಂಗಳ ವರ್ತನೆಯಲ್ಲಿ ಚರಿಸುತ್ತಿಹ ತೈಜಸನ ದುರ್ಭಾವ ಹಸ್ತವ ಮಂತ್ರದೀಕ್ಷೆಯಿಂ ನಷ್ಟವಾಗಿ

ಸದ್ಭಾವ ನೆಲೆಗೊಂಡಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ ನಿಂತ ಠಾವ ಕೈಯಲ್ಲಿ ಹಿಡಿದು | ಎಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗ ಸಂಬಂಧವಾಗಲ್ಲ ತಾಪತ್ರಯಾಗ್ನಿಯಲ್ಲಿ ಬೇವುತ್ತಿರ್ದ ಪ್ರಾಜ್ಞನನು ವೇಧಾದೀಕ್ಷೆಯಿಂ ನಷ್ಟವ ಮಾಡಿ ಭಾವಲಿಂಗದ ಸಂಬಂಧವಾಗಲು ಚದ್ವಾರದಲ್ಲಿ ಅನುಗ್ರಹಿಸಿದನೆಂಬುದೀಗ ಉರಿವ ಹಾವ ಬಾಯಲ್ಲಿ ಕಚ್ಚಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಆಚರಿಸುತ್ತಿರಲಾಗಿ ಎಂಬುದೀಗ ಆಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಮನಕ್ಕೆ ಕರ್ತನಾದ ಶರಣ ಬಂದು ಅವಿರಳ ಜ್ಞಾನ ದೃಕ್ಕಿಸಿಂ ನೋಡಲೊಡನೆ ಕೋಲಿಂದೊಡೆ ಶಿವಭಾವ, ಆ ಶಿವಭಾವದಲ್ಲಿ ಒಡಿಯಲಾಗಿ | ಜೀವತ್ರಯಂಗಳ ವರ್ತನೆ ಬಿಟ್ಟು ಶಿವಭಾವನನವಗ್ರಹಿಸಿತ್ತೆಂಬುದೀಗ ಕೋಡಗದೊಡೆಯ ಬಂದು ನೋಡೆ ಕೋಲು ಹಿಡಿದು ಕುಟ್ಟೆ ಮೂರು ಹಾವು ಬಿಟ್ಟು ಕುಟ್ಟಿದ ಕೋಲ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವಭಾವವು ಮನೋಮಧ್ಯದಲ್ಲಿ ಸಮರಸವಾಯಿತ್ತೆಂಬುದೀಗ ಆ ಕೋಲು ಕೋಡಗದ ಒಡಲೊಳಗೊಡೆದು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ರೂಪವಾದ ಬ್ರಹ್ಮನೆಯಾಯಿತ್ತೆಂಬುದೀಗ ಕೋಡಗ ಸತ್ತಿತ್ತೆಂಬ ಶಬ್ದಕ್ಕರ್ಥ. ಅಂತು ಮನ ಲಿಂಗದಲ್ಲೇಕಾರ್ಥವಾಗಲು ಶರಣನ ಆ ಶಿವಭಾವವನನವಗ್ರಹಿಸಿತ್ತೆಂಬುದೀಗ ದಡಿ ಒಡೆಯನ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮನು ಆ ಶಿವಭಾವದಲ್ಲೇಕಾರ್ಥವಾದನೆಂಬುದೀಗ ಒಡೆಯನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಬಚ್ಚಬಯಲಾಯಿತ್ತು ಎಂಬ ಶಬ್ದಕ್ಕರ್ಥ.

೫೫. ಇಷ್ಟಲಿಂಗ ಪ್ರಾಣಲಿಂಗವೆಂದು ಬೇರೊಂದು ಕಟ್ಟಣೆಯ ಮಾಡಬಹುದೇ ಅಯ್ಯ? ಬೀಜ ಒಡೆದು ಮೊಳೆ ತಲೆದೋರುವಂತೆ, ಬೀಜಕ್ಕೂ ಅಂಕುರಕ್ಕೂ ಭಿನ್ನಭಾವ ಉಂಟೇ ಅಯ್ಯ? ಇಷ್ಟಲಿಂಗದ ಕುರುಹಿನಲ್ಲಿ ಚಿತ್ತು ನಿಂದು ಮಿಕ್ಕ ಗುಣಂಗಳನರಿಯಬೇಕು ಇದೇ ನಿಶ್ಚಯ ಸದಾಶಿವಮೂರ್ತಿಲಿಂಗವು ತಾನೆ.

೫೬. ಅರಿವ ಮರೆನು ಪೂಜಿಸುವುದು ಸ್ಥಾವರಲಿಂಗಕ್ಕೆ ಸರಿ. ಅರಿಯದೆ ಮರೆಯದೆ ಕರಿಗೊಂಡ ನೆನಹು ಅದು ಪ್ರಾಣಲಿಂಗ ಸಂಬಂಧ. ಇಂತಿವರಲ್ಲಿ ಭೇದಂಗಳನರಿತು ಪರತತ್ವವ ಕೊಡುವ ಪರನು ಗುರುವಾಗಬೇಕು. ಸದಾಶಿವಮೂರ್ತಿಲಿಂಗ ತಾನಾಗಬೇಕು.

೫೭. ಕೋಡಗದ ಚೇಷ್ಟೆ ಉಡುಗಿ ಹಾವಿನ ಹಲ್ಲ ಮುರಿದು ಆಡಿಸುವ ಜೋಗಿಯ ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತು.

ಟೀಕು:— ಅಂತರಂಗದಲ್ಲಿ ಸುಜ್ಞಾನೋದಯವಾದ ಶರಣಂಗೆ ಮನೋವಿಕಾರವಳಿದು ಉನ್ಮನಿ ತತ್ವರೂಪವನೆಯ್ದಿತ್ತೆಂಬುದೀಗ ಕೋಡಗ ಚೇಷ್ಟೆ ಉಡುಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋವಿಕಾರ ನಷ್ಟವಾಗಲು ಜೀವನ ಸಂಕಲ್ಪ ವಿಕಲ್ಪಂಗಳೆಂಬ ದಂತ ಭಗ್ನವಾದವೆಂಬುದೀಗ ಹಾವಿನ ಹಲ್ಲ ಮುರಿದು ಎಂಬ ಶಬ್ದಕ್ಕರ್ಥ. ಆ ಎರಡನು ನಿವೃತ್ತಿ ಮುಖಕ್ಕೆ ತಂದು ಲಿಂಗದಲ್ಲಿ ಏಕಾರ್ಥವ ಮಾಡಿ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಜ್ಞಾನಕ್ರಿಯಿಂದಾಚರಿಸುತ್ತಿಹ ಶರಣನ ಸರ್ವಾಂಗವು ಲಿಂಗಮಯವಾಯಿತ್ತೆಂಬುದೀಗ ಆಡಿಸುವ ಜೋಗಿಯು ಎಂಬ ಶಬ್ದಕ್ಕರ್ಥ. ಆ ಸರ್ವಾಂಗಲಿಂಗ ಸಂಬಂಧಿಯಾದ ಶರಣನು ಮಹಾ ಘನ ಲಿಂಗದಲ್ಲಿ ನಿಷ್ಪತ್ತಿಯಾಗಲು ಉಭಯ ನಾಮವಳಿದು ನಿರ್ನಾಮ ಸ್ವರೂಪವಾಯಿತ್ತೆಂಬುದೀಗ ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೫೮. ಕೋಣೆಯೊಳಗಣ ಮಿಂಡ, ನಡುಮನೆಯೊಳಗಣ ಗಂಡ, ಇವರಿಬ್ಬರ ಒಡಗೂಡುವಳ ಚಂದವ ನೋಡಾ. ಕೈಯ್ಯಲ್ಲಿ ಕಣ್ಣು ಹುಟ್ಟಿ, ಬಾಯಲ್ಲಿ ಬಸಿರು ಹುಟ್ಟಿ, ಮೊಲೆತಲೆಯಲ್ಲಿ ಭಗ ಬೆನ್ನಿನಲ್ಲಿ ಈ ಹಾದರಗಿತ್ತಿಯಂದನ ಸದಾಶಿವಮೂರ್ತಿ ಲಿಂಗವೇ ಬಲ್ಲ.

ಟೀಕು:— ಶರಣನ ಸೂಕ್ಷ್ಮಾಂತರಂಗದಲ್ಲಿ ಸಂಬಂಧವಾಗಿರ್ಪ ಚಿದ್ರೂಪವಾದ ಪ್ರಾಣಲಿಂಗವೆಂಬುದೀಗ ಕೋಣೆಯೊಳಗಣ ಮಿಂಡನೆಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಆಚಾರಾಂಗದಲ್ಲಿ ಸಂಬಂಧವಾಗಿರ್ಪ ಸದ್ರೂಪವಾದ ಇಷ್ಟಲಿಂಗವೆಂಬುದೀಗ ನಡುಮನೆಯೊಳಗಣ ಗಂಡನೆಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಸ್ವರೂಪನಾದ ಶರಣ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನದಿಂ ಬೆರಿಸುತಿರ್ಪನೆಂಬುದೀಗ ಇವರಿಬ್ಬರ ಒಳಗೂಡುವವಳ ಚಂದವ ನೋಡಾ ಎಂಬ ಶಬ್ದಕ್ಕರ್ಥ ಅಂತು ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದ ಶರಣ ಸತಿಯು ಸದ್ಭಾವ ಹಸ್ತದಲ್ಲಿ ಜ್ಞಾನದೃಷ್ಟಿ ಪ್ರಭಾವಿಸಿತ್ತೆಂಬುದೀಗ ಕೈಯ್ಯಲ್ಲಿ ಕಣ್ಣು ಹುಟ್ಟಿ

ಎಂಬ ಶಬ್ದಕ್ಕರ್ಥ. ಆ ಶರಣನ ಶಿವಾಪೇಕ್ಷೆಯಲ್ಲಿ ಚಿದ್ಗರ್ಭದ ಚಿನ್ಮ ಯೋರಿತ್ತೆಂಬುದೀಗ ಬಾಯಲ್ಲಿ ಬಸಿರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಮೃತ ಕುಂಭ ಸ್ವರೂಪಿಸಂದೊಪ್ಪುತ್ತಿರ್ದ ಮಹಾಘನ ಲಿಂಗವು ಶರ ಣನ ಅಭಿನ್ನ ಸ್ವಜ್ಞಾನದಲ್ಲಿ ಸಂಬಂಧವಾಯಿತ್ತೆಂಬುದೀಗ ಮೊಲೆ ತಲೆ ಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣನ ಸತಿಯ ನಿಜ ಸುಷುಪ್ತಿ ಸ್ಥಾನವು ಸುಜ್ಞಾನವೆಂಬ ಅವರ ಭಾಗದಲ್ಲಿ ಸಂಬಂಧವಾಗಿರುತ್ತಿಹು ದೆಂಬುದೀಗ ಭಗ ಬೆನ್ನಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗಕ್ಕಂಗವಾಗಿರ್ಪ ಶರಣ ಸತಿಯು ತನ್ನ ನಿಜಾಂತರಂಗದ ಪ್ರಾಣಲಿಂಗದಲ್ಲಿ ಜ್ಞಾನಾಚಾರಣೆಯಿಂ ಚರಿಸುತ್ತಿಹಳೆಂಬುದೀಗ ಈ ಹಾದ ರಗಿತ್ತಿಯಂದವ ಸದಾಶಿವಮೂರ್ತಿಲಿಂಗವೇ ಬಲ್ಲನೆಂಬ ಶಬ್ದಕ್ಕರ್ಥ.

೫೯. ತಾವರೆಯ ನಾಳದ ತೆರಪಿನಲ್ಲಿ ಮೂರು ಲೋಕವನೊಳ ಕೊಂಡ ಗಾತ್ರದಾನೆ ಎಡತಾಕುತ್ತಿದೆ. ನಾಳ ಹರಿದು ಆನೆಯಂಗಕ್ಕೆ ನೋವಿಲ್ಲ. ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗವೆ.

ಟೀಕು:— ಹೃದಯ ಕಮಲದಲ್ಲಿರ್ಪ ಸುಜ್ಞಾನದ್ವಾರವೆಂಬುದೀಗ ತಾವರೆಯ ನಾಳದ ಎಂಬ ಶಬ್ದಕ್ಕರ್ಥ. ಆ ಸುಜ್ಞಾನದ್ವಾರದ ವಿಶಾಲ ತರದಲ್ಲಿ ಎಂಬುದೀಗ ತೆರಪಿನಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪ ನಾದ ಶರಣನ ತನುತ್ರಯಂಗಳನೊಳಕೊಂಡಿರ್ಪ ಚಿದಹಂಕಾರ ಸ್ವರೂಪ ವಾದ ಭಕ್ತಿಗಜವೆಂಬುದೀಗ ಮೂರು ಲೋಕವನೊಳಕೊಂಡ ಗಾತ್ರ ದಾನೆ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರವನೊಳಕೊಂಡಿರ್ಪ ಶರಣನು ಇಷ್ಟಪ್ರಾಣಲಿಂಗದಲ್ಲಿ ಸುಜ್ಞಾನ ಕ್ರಿಯೆವಿಡಿದು ಆಚರಿಸುತ್ತಿರ್ದ ನೆಂಬುದೀಗ ಎಡತಾಕುತ್ತಿದೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನ ದ್ವಾರಕ್ಕೆ ಕೇಡಿಲ್ಲವೆಂಬುದೀಗ ನಾಳ ಹರಿಯದು ಎಂಬ ಶಬ್ದಕ್ಕರ್ಥ. ಆ ಚಿದ ಹಂಕಾರವನೊಳಕೊಂಡಿರ್ಪ ಶರಣನಂಗಕ್ಕೆ ಸಂಸಾರವ್ಯಾಪ್ತಿಯ ದುಃಖವಿಲ್ಲ ವೆಂಬುದೀಗ ಆನೆಯಂಗಕ್ಕೆ ನೋವಿಲ್ಲ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪನಾದ ಶರಣನ ಚಿತ್ ಪ್ರಭಾಂಗಕ್ಕೆ ಸಂಸಾರ ಬಂಧನವಿಲ್ಲ ದಿರ್ಪುದು ಆಶ್ಚರ್ಯವೆಂಬುದೀಗ ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವೆ ಎಂಬ ಶಬ್ದಕ್ಕರ್ಥ.

೬೦. ಸೂಜಿಯು ದೊನೆಯಲ್ಲಿ ದಾರವೇರಿ ಹನ್ನಿಯ ಹಂಗ ಬಿಡಿಸಿತ್ತು. ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು. ಮನ ಕಂಡು ಕೈ ಸಂದೇಹವ ಬಿಡಿಸಿತ್ತು. ಮನ ಘನದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು.

ಟೀಕು:— ಚಿದ್ರೂಪನಾದ ಶರಣ ಶಿವಾನುಭಾವ ಸನ್ನಿಹಿತನಾದ ಮನಸ್ಸಿನಗ್ರದಲ್ಲಿ ಸ್ವಾನುಭಾವ ಸೂತ್ರವ ಪ್ರಯೋಗಿಸಿದನೆಂಬುದೀಗ ಸೂಜಿಯ ಮೊನೆಯಲ್ಲಿ ದಾರವೇರಿ ಎಂಬ ಶಬ್ದಕ್ಕರ್ಥ. ಆ ಶಿವಾನುಭಾವದಲ್ಲಿ ಸನ್ನಿಹಿತವಾದ ಸ್ವಾನುಭಾವ ಸೂತ್ರವು ಕ್ರಿಯೆಯಿಂದೊದಗುವ ಭಿನ್ನಫಲಪದಂಗಳ ನಿವೃತ್ತಿ ಮಾಡಿತ್ತೆಂಬುದೀಗ ಹನ್ನಿಯ ಹಂಗ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಭಿನ್ನಫಲಪದಂಗಳು ನಿವೃತ್ತಿಯಾಗಲು ಸಕಲ ವಿಷಯ ಭೋಗಂಗಳ ಜೀವನು ಭುಂಜಿಸುತ್ತಿಹುದನು ಶರಣ ಸುಜ್ಞಾನ ದೃಷ್ಟಿ ಕಂಡು ಆ ಭಿನ್ನಾಪೇಕ್ಷೆಯನ್ನು ನಷ್ಟವ ಮಾಡಿದನೆಂಬುದೀಗ ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಅಂತು ಭಿನ್ನಾಪೇಕ್ಷೆ ನಷ್ಟವಾಗಲು ತನ್ನ ನಿಜಾಂತರಂಗದಲ್ಲಿರ್ಪ ಪ್ರಾಣಲಿಂಗವನು ಮನ ಸುಜ್ಞಾನ ದೃಷ್ಟಿಯಿಂ ಕಂಡು ಅವಿರಳ ಸಂಬಂಧಿಯಾಗಲು ಕರಸ್ಥಲದಲ್ಲಿ ಇಷ್ಟಲಿಂಗಪಡಿಸಿ ಮಾಡುವ ಸತ್ಕ್ರಿಯಾಚಾರವೆಲ್ಲ ನಿಷ್ಪತ್ತಿಯಾದವೆಂಬುದೀಗ ಮನ ಕಂಡು ಕೈಯ್ಯ ಸಂದೇಹವ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಈ ಜ್ಞಾನಕ್ರಿಯೆಯನೊಳಕೊಂಡಿರ್ಪ ಮನಸ್ಸು ನಿಷ್ಕಲಪರಬ್ರಹ್ಮದಲ್ಲಿ ಸುಸ್ಥಿರವಾಗಿ ಸಮರಸವನೆಯ್ದಿತ್ತೆಂಬುದೀಗ ಮನ ಘನಲಿಂಗದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು ಎಂಬ ಶಬ್ದಕ್ಕರ್ಥ.

೬೧. ಹಾವಿನ ಹುತ್ತದಲ್ಲಿ ಹದ್ದು ತತ್ತಿಯನಿಕ್ಕಿ ಹಾವು ಹಸಿದ ತತ್ತಿಯ ಮುಟ್ಟದು ನೋಡಾ. ಹಾವಿನ ವಿವರ ಹದ್ದಿನ ಭೇದ ತತ್ತಿಯ ಗುಣ ಆವುದೆಂದರಿದಲ್ಲಿ ಜೀವ ಪರನು ಸ್ವಯಜ್ಞಾನ ಭೇದವನರಿಯಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ.

ಟೀಕು:— ಶಂಕಾ ವಿಷ ಸಂಬಂಧಿಯಾದ ಜೀವಂಗೆ ನವದ್ವಾರಯುಕ್ತವಾದ ದೇಹವೇ ಆಶ್ರಯವಾಯಿತ್ತೆಂಬುದೀಗ ಹಾವಿನ ಹುತ್ತದಲ್ಲಿ ಎಂಬ ಶಬ್ದಕ್ಕರ್ಥ. ಆ ನವದ್ವಾರಯುಕ್ತವಾದ ದೇಹದಲ್ಲಿ ಪರಮಾ

ಮೂಲಿಗೆ ಹಿಡಿದು ಎಂಟು ದಿಕ್ಕು ಪ್ರಮಾಣಿಸಿಕೊಂಡು ಎಂಟು ಪಾದ ಘಾತ ಒಂದುಪಾದ ವೇದಿಕೆಗೆ ನಿಲಿಸಿದಲ್ಲಿ ಒಂಬತ್ತುಪಾದ ಘಾತವಂ ನಿಲಿಸಿದಲ್ಲಿ ಕಡಿಮೆಯಾಗದ ಹಾಗೆ ಬೆಲ್ಲದಚ್ಚಿನೋಪಾದಿಯಂತೆ ಒಳಗೆ ಆಗುವದು.

ಇನ್ನು ಮುಂದೆ ಸೋಪಾನದ ಲಕ್ಷಣವಂ ಪೇಳ್ವೆನದು ಹೇಗೆಂದಡೆ:- ಬಡಗು ದಿಕ್ಕಿನ ಚೌಕದ ನಡುವೆ ಮಧ್ಯದಿಂದ ೫ ಪಾದ ಉತ್ತರ ದಕ್ಷಿಣ ವಾಗಿ ಅಳಿದು ಗುರುತವ ಮಾಡಿ ಮೂಡಲು ಪಡುವಲು ಎರಡು ಪಾದವ ಬಿಟ್ಟು ನಡುವೆ ಮೂರು ಪಾದವ ಅಳಿದು ಗುರುತವ ಮಾಡಿದಲ್ಲಿ ಸೋಪಾನ ದಾಕಾರವಹುದು. ಆ ಸೋಪಾನದ ನಾಲ್ಕು ಮೂಲಿಯನು ನೂಲ ಸೂತ್ರ ದಿಂದ ಪ್ರಮಾಣಿಸಿಕೊಂಡು ಕಡೆಯ ಸೋಪಾನ ಒಂದು ಪಾದ ಉದ್ದ ಘಾತವಿಡಿಸು ಒಂದು ಪಾದ ನಡುವಣ ಸೋಪಾನ ಎರಡು ಪಾದ ಘಾತ ಎರಡುಪಾದ ಉದ್ದ ಮೂರನೆಯ ಸೋಪಾನ ಮೂರು ಪಾದ ಘಾತ ಮೂರುಪಾದ ಉದ್ದ ನೀಳ ಉಳಿದದ್ದು ಮೂರುಪಾದ ಮೂರು ಸೋಪಾ ನಕ್ಕೆ ಮೂರು ತತ್ವಂಗಳ ಸಂಬಂಧಿಸಿ ಅಂತು ಸೋಪಾನದ ಗಣನೆ ನವ ಘಾತವು.

ಇನ್ನು ಸೋಪಾನದ ಮುಂದೆ ವೇದಿಕೆಯ ರಚಿಸುವುದು. ಅದೆಂ ತೆಂದೊಡೆ ಆ ಚೌಕದ ಮಧ್ಯದಲ್ಲಿ ಉತ್ತರ ದಕ್ಷಿಣ ಮೂರು ಪಾದವ ಅಳಿದು ಮೂಡಲು ಪಡುವಲು ಮೂರು ಪಾದವ ಅಳಿದು ಅಳಿದಲ್ಲಿ ಚೌಕವಹುದು. ಆ ಚೌಕದ ಮೂಲಿಯೇ ಆಗ್ನೇಯ ನೈಋತ್ಯ ವಾಯುವ್ಯ ಈಶಾನ್ಯ ಮೂಲಿಗೆ ಹಿಡಿವುದು. ಹಿಡಿದು ಅಳಿದ ಬಳಿಕ ದಕ್ಷಿಣ ದಿಕ್ಕಿನ ನಿಲುವಿನಲ್ಲಿ ಒಂದು ಪಾದ ಘಾತ, ಒಂದು ಪಾದವಿಡಿದು ಪಡುವಣ ದಿಕ್ಕಿ ನಲ್ಲಿ ನಿಲವು ಒಂದು ಪಾದ ಘಾತ ಒಂದು ಪಾದ ಅಡ್ಡ ನೀಳ ಉತ್ತರ ದಿಕ್ಕಿನಲ್ಲಿ ನಿಲವು ಒಂದು ಪಾದ ಘಾತ ಒಂದು ಪಾದ ಅಡ್ಡ ಪಾದ ನಿಡಿದು ಮೂಡಲ ದಿಕ್ಕಿನ ನಿಲವಿನಲ್ಲಿ ಒಂದು ಪಾದ ಘಾತ ಒಂದು ಪಾದ ಅಡ್ಡ ನಿಡಿದು ಇಂತು ನಾಲ್ಕು ದಿಕ್ಕಿನಲ್ಲಿ ಡೋಣಿಯಾಕಾರದಲ್ಲಿ ಅದಾದರೆ ನಾಲ್ಕು ಮೂಲಿ ಹುಟ್ಟಿ ಜಗಲಿ ಆಕಾರವಹುದು. ಅದು ವೇದಿಕೆ ಎನಿ ಸುವದು.

ಇನ್ನು ವೇದಿಕೆಯ ಮುಂದೆ ತ್ರಿಕೋಣೆಯ ರಚಿಸುವುದು ಅದೆಂತೆಂದೊಡೆ ಮೂಡಲ ದಿಕ್ಕು ಒಂದು ಪಾದವ ಬಿಟ್ಟು ಪಡುವಲ ದಿಕ್ಕು ಒಂದು ಪಾದವ ಬಿಟ್ಟು ನಡುವೆ ಮೂಡಲು ಪಡುವಲಾಗಿ ಮೂರು ಪಾದವ ಅಳೆದು ಗುರುತವ ಮಾಡಿ ಮೂರು ಪಾದವ ಘಾತವ ನಿಲಿಸಿ ಅದರ ಮೇಲೆ × × × ಆಕಾರವ ಬರೆದು ಒಳಗೆ ಮೂರು ಪಾದವ ಉತ್ತರ ದಕ್ಷಿಣವಾಗಿ ಚೌಕವಾಗುವ ಹಾಗೆ ಅಗಿದು ಆ ಚೌಕದ ನಾಲ್ಕು ಮೂಲಿಯ ನೂಲ ಸೂತ್ರದಿಂದ ಅಳೆದು ಪ್ರಮಾಣಿಸಿದಲ್ಲಿ ಅದು ತ್ರಿಕೋಣೆ ಎನಿಸುವದು.

ಇನ್ನು ವೇದಿಕೆಯ ಮೇಲೆ ಸಮ್ಮಾರ್ಜನೆಯ ಮಾಡಿ ಪಂಚವರ್ಣಿಗೆಯ ಹಿಟ್ಟಿನಲ್ಲಿ ಚನ್ನಾಗಿ ಎಲ್ಲರು ಅರಿವಂತೆ ಪಂಚ ಮುದ್ರೆಯಲ್ಲಿ ಲಿಖಿಸಿ ಆ ಪಂಚ ಮುದ್ರೆಯ ಕೋಣೆಗಳಲ್ಲಿ ಪಂಚಾಕ್ಷರವ ಬರೆದು ಮಧ್ಯದಲ್ಲಿ ಓಂಕಾರವ ಅಂಕಿಸಿ ಎಡಬಲದೊಳು ಪಂಚ ಬ್ರಹ್ಮ ಮಂತ್ರವ ಬರೆದು ಇನ್ನು ಮುಂದೆ ತ್ರಿಕೋಣೆಯಲ್ಲಿ ಪಂಚಲೋಹವನು ಪಂಚರತ್ನವನು ಸುವರ್ಣಮಯವಾದ ಚೂರ್ಣಂಗಳನಿಟ್ಟು ವಿಭೂತಿಯ ಪ್ರಸ್ತರೆರಡನ್ನು ಹರವುವುದು. ತಗಡಿನೊಳು ಲಿಂಗ ಮುದ್ರೆಗಳ ಬರೆದು ನಾಲ್ಕು ಮೂಲಿಗಳಲ್ಲಿ ಹತ್ತಿಸುವದು. ನಿರ್ಮಲತರದ ಏಕವರ್ಣವನಿಕ್ಕಿ ಇನ್ನು ಆ ಸಮಾಧಿಯ ಮೇಲೆ ಮೇಲು ಕಟ್ಟುಗಳ ಕಟ್ಟಿ ತರತರದೊಳು ನವೀನವಾದ ಮುಡಿವಾಳ ಹೊಂಬಾಳೆ ಕಣ್ಣು ಕಾಯಿಗಳು ಹೂವಿನ ಮಾಲೆಗಳು ಮೌಕ್ತಿಕದ ಗುಚ್ಛಗಳು ಪವಳದ ಗುಡಿಗಳು ಬೆಳ್ಳಿಯ ಜಲ್ಲಿಗಳನು ಪ್ರೀತಿಯಿಂದ ಅಲ್ಲಿಗಲ್ಲಿಗೆ ಕಟ್ಟಿ ಬಾಳೆಯ ಕಂಭಗಳ ಗೊನೆವೆರಸಿ ತಂದು ನಾಲ್ಕು ದಿಕ್ಕಿನಲ್ಲಿ ನಿಲಿಸಿ ಕಬ್ಬಿನ ಕೋಲುಗಳ ನಾಲ್ಕು ಮೂಲೆಯಲ್ಲಿ ಕಟ್ಟಿ ತೆಂಗಿನ ನೀರಗಳ ನಾಲ್ಕು ಮೂಲಿಗೆ ಎಸೆವಂತೆ ಕಟ್ಟಿ ಸಮಾಧಿಯ ಶೃಂಗರಿಸುವದು.

ಆ ಸಮಾಧಿಯ ಶೃಂಗಾರವ ಕೇಳಿದ ಬಳಿಕ ವಿಭೂತಿ ವೀಳೆಯವ ಮಾಡಿಸಿ ಸುವರ್ಣ ವಸ್ತ್ರಂಗಳ ಸಮರ್ಪಿಸಿ ಭಕ್ತಮಾಹೇಶ್ವರರು ಕೂಡಿ ಆ ಮಂಟಪದೊಳಗಣ ವಿಭೂತಿ ಹಸೆಯೊಳಗಣ ಶೃಂಗಾರವಾಗಿಪ್ಪ ಶಿವಮೂರ್ತಿಯ ಬಿಜಯಂಗೈಸಿ ತಂದು ಪುಷ್ಪಕದೊಳಗಿರಿಸಿ ಭಕ್ತ ಮಹೇಶ್ವರರು ಜಯ ಜಯ ಉಘೇ ಎಂಬ ರವದಿಂದ ವಾದ್ಯ ಘೋಷ ಸಂಭ್ರಮಾ

ದಿಂದ ಶಿವಭಕ್ತರೆತ್ತಿ ಹೊರುವುದು. ಆ ಪುಷ್ಪಕ ಸಮಾಧಿಯತ್ತಭಿಮುಖ ವಾಗಿ ನಡೆದು ಹೊಡೆವ ವಾದ್ಯಂಗಳಿಂದ ಛತ್ರ ಚಾಮರಗಳಿಂದ ಉಗ್ಘಡ ಣದ ಪುಷ್ಪಾಂಜಲಿಗಳಿಂದ ಮಡದಿಯರ ಸಂಭ್ರಮದಿಂದ ಆ ಸಮಾಧಿಯ ಸ್ಥಾನದೆಡೆಗೆ ಬಂದು ಪುಷ್ಪಕವ ನಿಳುಹುವದು.

ಆಗ ಗಣಂಗಳು ಅತಿ ಸಂಭ್ರಮದೊಳು ಭಕ್ತರೆಲ್ಲರು ಉಲ್ಹಾಸ ದಿಂದ ಇಳುಹುತ ಆ ಪುಷ್ಪಕದೊಳಗಿದ್ದವರ ತೆಗೆದುಕೊಂಡು ಸೋಪಾ ನಂಗಳಸಿಳಿದು ವೇದಿಕೆಯ ಮೇಲೆ ಹರುಷದಿಂದ ಮೂರ್ತಗೊಳಿಸಿ ಜಂಗ ಮದ ಪಾದೋದಕದಿಂದ ಮುಖದೊಳೆದು ವಿಭೂತಿಯು ಧರಿಸಿ ಶುಭ್ರ ವಸ್ತ್ರಾಭರಣ ಗಂಧಾಕ್ಷತೆ ಪುಷ್ಪ ಪರಿಮಳಂಗಳನ್ನು ಮಾಹೇಶ್ವರರು ಪಾದಕ್ಕರ್ಪಿಸಿ ಪೂಜೆಯು ಮಾಡಿ ಧೂಪವನೆಬ್ಬಿಸಿ ಆರತಿಯು ಬೆಳಗಿ ಆ ಶಿವಮೂರ್ತಿಯು ಆ ಜಗಲಿಯಿಂದ ಮೆಲ್ಲನೆ ತ್ರಿಕೋಣೆಯ ಸ್ಥಾನಕ್ಕೆ ತೆಗೆದು ಮೂರ್ತಿಗೊಳಿಸಿ ಜಂಗಮ ಪಾದ ತೀರ್ಥದಿಂದ ಮುಖದೊಳೆದ ಬಳಿಕ ವಿಭೂತಿ ಬಿಲ್ವಪತ್ರೆಯ ತುಂಬಿ ಪಂಚಾಕ್ಷರಿಯ ಮಂತ್ರವನುಚ್ಚ ರಿಸಿ ಆ ಸಮಾಧಿಯ ಬಾಗಿಲಕ್ಕೆ ಕದವನಿಕ್ಕಿ ನೆಲಸರಿಸಮಮಾಡಿ ಆ ಸಮಾ ಧಿಯ ಶಿವಾಲಯವ ತ್ರಿಕೋಣೆ ವಾಸವೇ ಗರ್ಭಗೃಹ ಅಲ್ಲಿ ಸ್ಥಾಪಿಸಿದ ಶಿವಶರಣನ ದೇಹವೇ ಲಿಂಗವೆಂದು ಕಲ್ಪಿಸಿ ಸಂಭ್ರಮದೊಳಗಣ ಪರ್ವ ಮಾಡಿ ಸುಖದಲ್ಲಿಪ್ಪುದು ಭಕ್ತಮಾಹೇಶ್ವರರು.

# ದೇಹಕ್ಕೆ ಮಂತ್ರ ಸಂಬಂಧ.

(೧) ಇನ್ನು ಸಪ್ತಸ್ಥಾನದಲ್ಲಿ ಸಪ್ತ ಪ್ರಣಮಂಗಳ ಸಂಬಂಧವ ಮಾಡುವುದು. ಜ್ಞಾನಿಗಳು ಸಮಾಧಿಕ್ರಿಯೆ ಸಂಬಂಧಿಸುವ ಪ್ರಣವಂಗಳು. ಊರ್ಧ್ವದಲ್ಲಿಯ ಪ್ರಣಮವು ಹಕಾರ ಓಂಕಾರ ಹಾಕಾರ ಸಕಾರ ಈ ನಾಲ್ಕು. ಹಾ, ಓಂ, ಹಾ, ಸ, ಈ ನಾಲ್ಕು ವಾಮ ಭಾಗದ ಪ್ರಣಮವು, ಅ ಓಂ ನಮಃ ಶಿವಾಯ ಈ ಏಳು ದಕ್ಷಿಣ ಭಾಗದ ಪ್ರಣವು. ಅ ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೌಂ ಹ್ರಃ ಈ ಏಳು ಮುಂದೆಸೆಯ ಪ್ರಣಮವು. ಉ ಬಸವ ಉ ಬಸವ ಈ ಎಂಟು ಹಿಂದೆಸೆಯ ಪ್ರಣಮವು. ಮ ಅ ಉ ಮ ಮ ಅ ಉ ಮ ಈ ಎಂಟು ವಾಮ ಕರ್ಣದ ಪ್ರಣಮವು × × × ದಕ್ಷಿಣ ಕರ್ಣದ ಪ್ರಣಮವು. ಬ ಒಂದು ಮುಖದಲ್ಲಿಯ ಪ್ರಣಮವು. ಓಂ ಒಂದು ವಾಮ ಭುಜದ ಪ್ರಣಮವು ಮತ್ತು ದಕ್ಷಿಣ ಭುಜದ ಪ್ರಣಮವು, ನಾಂ ನಾಂ ಎರಡು ಹೃದಯದ ಪ್ರಣಮವು, ಶೀಂ ಶೀಂ ಎರಡು ವಾಮಪಾರ್ಶ್ವದ ಪ್ರಣಮವು, ಮ ಒಂದು ದಕ್ಷಿಣ ಪಾರ್ಶ್ವದ ಪ್ರಣಮವು. ಉ ಒಂದು ವಾಮ ಜಾನುವಿನ ಪ್ರಣಮವು. ಅ ಓಂ ನಮಃ ಶಿವಾಯ ಈ ಏಳು ದಕ್ಷಿಣ ಜಾನುವಿನ ಪ್ರಣಮವು. ಓಂ ಹಾಂ ಹ್ರೀಂ ಹ್ರೂಂ ಹ್ರೇಂ ಹ್ರೌಂ ಹ್ರಃ ಈ ಏಳು ವಾಮ ಪಾದದ ಪ್ರಣಮವು. ಯ ಯ ಎರಡು ದಕ್ಷಿಣ ಪಾದದ ಪ್ರಣಮವು. ವ ವ ವಾಮ ವಾಮ ಕಡಪದ ಪ್ರಣಮವು. ಯ ಒಂದು ದಕ್ಷಿಣ ಕಡಪದ ಪಣಮವು. ವ ಒಂದು ಆಧಾರ ಸ್ಥಾನದ ಪ್ರಣಮವು. ಅ ಒಂದು × × × ಸ್ಥಾನದ ಪ್ರಣಮಂಗಳ ಸಂಬಂಧಿಸುವುದು ಜ್ಞಾನಿಗಳು ತಗಡು ೩೪ ಲಿಂಗ ತಗಡು ೪ ಜಮೆ ೩೮ ಇದು ಪ್ರಥಮದ ಪ್ರಣಮವು.

ಶ್ರೀ ಗುರು ಬಸವಲಿಂಗಾಯನಮಃ-ಪ್ರತ್ಯೇಕ ಪ್ರಣಮದ ಸಂಬಂಧವು. ಊರ್ಧ್ವದ ಪ್ರಣಮವು. ಓಂ ಹಾ ಎರಡು ವಾಮ ಭಾಗದ ಪ್ರಣಮವು. ಅ ಓಂ ನಮಃ ಶಿವಾಯ ಏಳು ದಕ್ಷಿಣ ಭಾಗದ ಪ್ರಣಮವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರಃ ಏಳು ಮುಂದೆಸೆಯ ಪ್ರಣಮವು. ಉ ಬಸವ ನಾಲ್ಕು ಹಿಂದೆಸೆಯ ಪ್ರಣಮವು. ಮ ಅ ಉ ವ ನಾಲ್ಕು ವಾಮ ಭುಜದ ಪ್ರಣಮವು. ಮ ಒಂದು ದಕ್ಷಿಣ ಭುಜದ

ಪ್ರಣಮವು. ನ ಒಂದು ಹೃದಯದ ಪ್ರಣಮವು. ಶಿ ಒಂದು ವಾಮ ಪಾದದ ಪ್ರಣಮವು- ಯ ಒಂದು ದಕ್ಷಿಣ ಪಾದದ ಪ್ರಣಮವು.. ವ ಒಂದು ಇದು ದಶ ಸ್ಥಾನದ ಪ್ರಣಮಂಗಳ ಸಂಬಂಧಿಸುವುದು ಜ್ಞಾನಿಗಳು ಇದು ದ್ವಿತೀಯದ ಪ್ರಣಮವು. ತಗಡು ೧೫ ಲಿಂಗ ತಗಡು ೪ ಜಮೆ ೧೯ ॥ ೨ ॥

ಇನ್ನು ತೃತೀಯದ ಪ್ರಣಮದ ಸಂಬಂಧವು. ಮೂರ್ಧ್ನಿಯ ಪ್ರಣಮವು. ಹ ಒಂದು ಮುಂದೆಸೆಯ ಪ್ರಣಮವು. ಬ ಬಸವ ನಾಲ್ಕು ಹಿಂದೆಸೆಯ ಪ್ರಣವುವು. ಮ ಅ ಉ ಮ ನಾಲ್ಕು ವಾಮ ಜಾನುವಿನ ಪ್ರಣಮವು. ಅ ಓಂ ನಮಃ ಶಿವಾಯ ಏಳು ದಕ್ಷಿಣ ಜಾನುವಿನ ಪ್ರಣಮವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರಃ ಏಳು ವಾಮ ಪಾದದ ಪ್ರಣಮವು. ಯ ಒಂದು ದಕ್ಷಿಣ ಪಾದದ ಪ್ರಣಮವು. ೮೧ ಇಂತೀ ಸಪ್ತ ಸ್ಥಾನಂಗಳ ಪ್ರಣಮವು ಸಂಬಂಧಿಸುವುದು ಜ್ಞಾನಿಗಳು ತಗಡು ೭ ಲಿಂಗ ತಗಡು ೪ ಜಮೆ ೧೧. ॥ ೩ ॥

(೨) ಅಕಾರವೇ ಎಡದಕಡೆಯಲ್ಲಿ ಸಂಬಂಧ. ಉಕಾರವೇ ಮುಂದೆಸೆಯಲ್ಲಿ ಸಂಬಂಧ. ಮಕಾರವೇ ಬೆನ್ನಿನಲ್ಲಿ ಸಂಬಂಧ. ಓಂಕಾರವೇ ಬಲದಲ್ಲಿ ಸಂಬಂಧ. ಹಕಾರವೇ ಮಸ್ತಕದಲ್ಲಿ ಸಂಬಂಧ. ಇಂತಿವು ಪಂಚ ಪ್ರಣಮ ಸಂಬಂಧ.

ಬಸವ ಎಂಬ ಮೂರಕ್ಷರವೇ ಮುಂದೆಸೆಯಲ್ಲಿ ಸಂಬಂಧ. ಅ ಉ ಮ ಎಂಬ ಮೂರು ಅಕ್ಷರಂಗಳು ಹಿಂದೆಸೆಯಲ್ಲಿ ಸಂಬಂಧ. ಓಂ ನಮಃ ಶಿವಾಯ ಎಂಬ ಆರು ಅಕ್ಷರಂಗಳು ಎಡದಲ್ಲಿ ಸಂಬಂಧ. ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರ: ಎಂಬ ಆರು ಅಕ್ಷರಂಗಳು ಬಲದಲ್ಲಿ ಸಂಬಂಧ ಓಂಕಾರವೇ ಊರ್ಧ್ವದಲ್ಲಿ ಸಂಬಂಧ. ನಕಾರವೇ ಬಲದ ಭುಜದಲ್ಲಿ ಸಂಬಂಧ. ಮಕಾರವೇ ಎಡದ ಭುಜದಲ್ಲಿ ಸಂಬಂಧ. ಶಿಕಾರವೇ ಹೃದಯದಲ್ಲಿ ಸಂಬಂಧ. ವಕಾರವೇ ಬಲದ ತೊಡೆಯಲ್ಲಿ ಸಂಬಂಧ. ಯಕಾರವೇ ಎಡದ ತೊಡೆಯಲ್ಲಿ ಸಂಬಂಧವು.

---

# ಮರಣ.

(೧) ಗುರುವಿನಿಂದ ಉಪದೇಶವ ಹಡೆದ ಶಿಷ್ಯಂಗೆ ಭಾವ ವಾವುದಯ್ಯಾ ಎಂದರೆ, ಸದ್ಗುರು ಸಂಬಂಧವೇ ಲಿಂಗದಲ್ಲಿ ಐಕ್ಯವಾದರೆಂದು ಭಾವಿಸುವುದಯ್ಯ. ಲೋಕದವರಂತೆ ಸತ್ತರು ಕೆಟ್ಟರು ಎಂದು ಬರಿಯ ನುಡಿಯ ನುಡಿದರೆ ಅಘೋರ ನರಕ ತಪ್ಪದು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

(೨) ಗುರುವು ಅಳಿದನು ಉಳಿದನು ಎಂದೆಂಬಿರಿ, ಗುರು ಅಳಿದ ಜಗ ಉಳಿಯ ಬಲ್ಲುದೇ ? ಸ್ಥಾವರಂ ಜಂಗಮಾಧಾರಂ ನಿರ್ಮಳ ಸ್ಥಿರಮೇವಚ ॥ ಜಗದ್ವಂದಿತ ಪಾದಾಯ ತಸ್ಮೈ ನಮಃ ॥ ಎಂದುದಾಗಿ ಗುರು ಅಳಿವನು ಅಲ್ಲ, ಉಳಿವನು ಅಲ್ಲ, ನಿಮ್ಮ ಭ್ರಾಂತಿ. ಅಳಿದನು ಉಳಿದನು ಎಂದು ಕೂರ್ತು ಕೇಳುವಿರಿ. ಇದು ಅಲ್ಲ. ಈ ವಿಕಾರಾದಿ ಮುಳುಗಿದವನ ಶಿಷ್ಯನೆಂದೆಂಬೆನೆ ? ಇನ್ನೇನಯ್ಯ ? ಗುರು ಸತ್ತನೆಂದು ಬಸಿರು ಹೊಯ್ದುಕೊಂಡು ಬಾಯಿ ಬಡೆದುಕೊಂಡು ಅಳುವ ದುಃಖ ಜೀವಿಗಳಿಗೆ ಗುರುವಿಲ್ಲ, ಗುರುವಿಲ್ಲವಾಗಿ ಜಂಗಮವಿಲ್ಲವಯ್ಯ. ಜಂಗಮ ವಿಲ್ಲವಾಗಿ ಪಾದೋದಕ ಪ್ರಸಾದವಿಲ್ಲ. ಈ ತ್ರಿವಿಧವಿಲ್ಲವಾಗಿ ಮುಕ್ತಿ ಎಂಬುದು ಎಂದಿಗೂ ಇಲ್ಲವಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೩) ಅರಿವರತು ಮರಹುಗೆಟ್ಟು ತನ್ನಲ್ಲಿ ತಾನೇ ಸನ್ನಿಹಿತನಾದಂಗೆ ದುಃಖಿಸುವದೇ ಹೇಳಾ ? ಒಡಲಿಲ್ಲದಾತಂಗೆ ಎಡೆಯಲೊಂದು ಅಳಿವುಂ ಟೆಂದು ಹೇಳುವ ಮಾತು ಭ್ರಾಂತು ನೋಡಾ. ಎರಡಿಲ್ಲದ ಐಕ್ಯಂಗೆ ಒಳಹೊರಗಿಲ್ಲ ನೋಡಾ ಗುಹೇಶ್ವರನ ಶರಣ ಅಜಗಣ್ಣಂಗೆ.

(೪) ಅನುಮಿಷ ದೇವರು ನಿಜವನೈದಲು ಅನುತಾಪಿಸುತ್ತಿರ್ದ ಪ್ರಭುದೇವರು ತನ್ನ ತಾ ಸಂತೈಸಿಕೊಂಡು ತಿಳಿದು ನೋಡಿ ಆ ಗುರು ವಿನ ಚೈತನ್ಯ ಲಿಂಗದಲ್ಲಿ ಅಡಗಿತ್ತು. ಆ ಲಿಂಗವೆನ್ನ ಕರಸ್ಥಲದಲ್ಲಿ ಬಂದಿತ್ತು. ಅದು ಕಾರಣ ಈ ಶ್ರೀ ಗುರು ಎನ್ನ ಕರಸ್ಥಲದಲ್ಲಿ ಸಂಪೂ ರ್ಣವಾಗಿ ನೆಲೆಗೊಂಡನಲ್ಲದೆ ಅನ್ಯಭಾವ ವಿಷಯದಿಂದ ಅಳಿದುದಿಲ್ಲವೆಂದು ನಿಶ್ಚಯಿಸಿಕೊಂಡ ಪ್ರಸ್ಥಾವದ ವಚನಃ– ಆಹಾ ಮನವೇ ಮರೆದೆಯಲ್ಲಾ

ನಿನ್ನ ಪೂರ್ವಾ ಪರವ. ಘನ ಮಹಾದೇವಾ ಗಿ ಆ ಮನ ಲಿಂಗದೊಳಡಗಿ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಬಳಿಕ ಅಳಿಯಿತ್ತು ಅಗಲಿತ್ತು ಎಂಬ ಭಾವ ಭ್ರಾಂತು ಇದೇನೊ ? ಜನನವಿಲ್ಲದ ಘನಕ್ಕೆ ಮರಣ ಉಂಟೇ ? ತೆರಹಿಲ್ಲದ ನಿಜವು ತನ್ನಲ್ಲಿ ತಾನು ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋರದೆಂಬ ಅಜ್ಞಾನವಿದೇನೋ ? ಜನನವಿಲ್ಲದ ನೀ ನಾನು ಎಂಬುದು ಮಾದು, ತಾನೆಯಾಗಿ ಸಾಧ್ಯವಾಯಿತ್ತು ಇದನೇನೆಂಬೆ ಗುಹೇಶ್ವರಾ ?

( ೫ ) ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಸಾವೆಂಬದು ಸ್ವಯವಲ್ಲ. ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ, ಆ ಲಿಂಗದಲ್ಲಿ ಎಲ್ಲಿದೆ ಬೇರೆ ಮತ್ತೊಂದೆಡೆಯುಂಟೇ ಕೂಡಲ ಸಂಗಮ ದೇವಾ.

( ೬ ) ಮುಟ್ಟಿತ್ತು, ಕೆಟ್ಟಿತ್ತು ಎಂದರೆ ಇನ್ನರಸುವುದಾವಾವು ದಯ್ಯಾ ? ತನುವ ಮರೆದರೆ ನೆನಹಿನೊಳಗದೆ ನೋಡಾ, ಹಾವು ಹೊರೆ ಗಳೆದರೆ ವಿಷ ನಾಶವಪ್ಪುದೇ ? ಶರಣನು ಕಾಯವೆಂಬ ಕಂಥೆಯ ಕಳೆದರೆ ಮೃತವಹನೇ ? ಅರಿವು ಲಿಂಗದಲ್ಲಿ ಪ್ರತಿಷ್ಠೆಯಾಗಿ ನಿರ್ಲೇಪನಾಗಿ ಮಹಾ ಲಿಂಗ ಕಲ್ಲೇಶ್ವರನಲ್ಲಿ ಲೀಯವಾದ ಶರಣ.

( ೭ ) ಕಾಯವಿರಿಸಿ ಕೈಲಾಸಕ್ಕೆ ಹೋದೆಹೆನೆಂಬುದು ಕ್ರಮವಲ್ಲ. ಘನಲಿಂಗ ಕರಸ್ಥಳದೊಳಗಿಪ್ಪ ಅನುವನರಿಯದೆ ಇಲ್ಲಿಗೆ ಕರ್ಮ, ಅಲ್ಲಿಗೆ ನಿಃಕರ್ಮವೇ ? ಹೇಮದ ಮಾಟದ ಒಳಹೊರಗಿನಂತೆ ಮರ್ತ್ಯ ಕೈಲಾಸ ವೆಂಬ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ. ಈ ಗುಣ ಸದಮಲ ಭಕ್ತನ ಯುಕ್ತಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನನಿಕ್ಕಿದ ಗೊತ್ತು.

( ೮ ) ಸಾಲೋಕ್ಯವೆಂದೇನೋ ಅಂಗದ ಮೇಲೆ ಲಿಂಗ ಸಂಬಂಧ ವಾಗಿರುತ್ತಿರಲು ? ಸಾಮೀಪ್ಯವೆಂದೇನೋ ಗುರುಲಿಂಗ ಜಂಗಮದ ದಾಸೋ ಹದ ಸನ್ನಿಧಿಯೊಳಿರುತ್ತಿರಲು ? ಸಾರೂಪ್ಯವೆಂದೇನೋ ಅನವರತ ಅರ್ಚನೆ ಯೊಳಿರುತ್ತಿರಲು ? ಸಾಯುಜ್ಯವೆಂದೇನೋ ಚತುರ್ದಶ ಭುವನವನೊಳ ಕೊಂಡ ಮಹಾ ಘನವ ಮನ ನೆನೆವುತ್ತಿರಲು ? ಇಂತೀ ಚತುರ್ವಿಧ ಪದ ವೆಂಬುದೇನೋ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ನಿಮ್ಮನೀದ ಶರಣಂಗೆ. ?

( ೯ ) ಲಿಂಗವಂತಂಗೆ ಲಿಂಗವು ಮಾಡಿದ ಪದವಿಯನು ಲಿಂಗವಂತರೇ ಬಲ್ಲರು. ಕೇವಲ ಸಾಕ್ಷಾತ್ ಪರವಸ್ತುವನು ಕರಸ್ಥಲಕ್ಕೆ ಬಿಜಯಂಗೈಸಿ ಕೊಟ್ಟನಾಗಿ ಸಾಲೋಕ್ಯ ಪದ. ಅಂಗದ ಮೇಲೆ ನಿರಂತರ ಪೂಜೆಗೊಳ್ಳುತ್ತಿಹವಾಗಿ ಸಾಮೀಪ್ಯ ಪದ. ಸದ್ಭಕ್ತಿ ರೂಪನ ಮಾಡಿದನಾಗಿ ಸಾರೂಪ್ಯ ಪದ. ಪ್ರಾಣಲಿಂಗವ ಮಾಡಿ ಅವಿನಾಭಾವವ ಮಾಡಿದನಾಗಿ ಸಾಯುಜ್ಯಪದ. ಲಿಂಗಮಧ್ಯೇ ಶರಣ, ಶರಣ ಮಧ್ಯೆಲಿಂಗವೆಂದುದಾಗಿ ಸರ್ವ ಭೋಗಂಗಳು ಸಹವಾಗಿ ಭೋಗಿಸಿ ಪ್ರಸಾದವಸಕ್ಕಿ ಸಲಹಿದನು. ಸದ್ಯೋನ್ಮುಕ್ತನಾದೆನು. ಸರ್ವಾಂಗವು ಲಿಂಗವು ಈ ತಾತ್ಪರ್ಯದ ಮರ್ಮವ ಲೋಕದ ಜಡರೆತ್ತ ಬಲ್ಲರು? ಬಲ್ಲಡೆ ಲಿಂಗಾನುಭಾವಿಗಳು ಬಲ್ಲರಯ್ಯ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

---

## ಲಿಂಗಾಂಗಿಯ ಶರೀರವನ್ನು ದಹಿಸಕೂಡದು

(೧) ಮಹಾಲಿಂಗವಂ ಗುರುವು ತಂದಿದಿರಿಟ್ಟಲ್ಲಿ ಸ್ಫಟಿಕ ಭಾಂಡವಲ್ಲೊಳಗಿರ್ಪ ವಸ್ತುವೇ ಹೊರಗೆ, ಹೊರಗಿರ್ಪ ವಸ್ತುವೇ ಒಳಗೆ ತೋರಿ ಆ ಭಾಂಡವು ತನ್ನ ನಿಜಗುಣವಳಿದು ವಸ್ತುವಿನ ಗುಣರೂಪವಾಗಿ ತೋರ್ಪಂದದಿ ಇಷ್ಟ ಪ್ರಾಣಂಗಳೇಕವಾದಲ್ಲಿ ಶರೀರವು ತನ್ನ ಮುನ್ನಿನ ಗುಣವಳಿದು ಅಗ್ನಿಸ್ವರೂಪವಾದ ಇಷ್ಟಲಿಂಗದಲ್ಲಿ ಐಕ್ಯವಾದುದರಿಂ ದಹನಕ್ಕ ಯೋಗ್ಯವಾಯಿತ್ತು. ನಿರಾಕಾರವಾದ ಪ್ರಾಣವು ಈಶಾನ ಸ್ವರೂಪವಾದ ಪ್ರಾಣಲಿಂಗದಲ್ಲಿ ಲೀನವಾದುದರಿಂ ಕರ್ಮ ಸಂಸ್ಕಾರ ಯೋಗ್ಯಮಲ್ಲದೂಯಿತ್ತು. ಅದದರಿಂದ ಶಿವಭಕ್ತನಿಗೆ ದಹನ ಸಂಸ್ಕಾರ ಮಿಲ್ಲವಾಯಿತ್ತು. ಇಂತಪ್ಪ ಸಾಕಾರ ನಿರಾಕಾರ ಶಿವಶಕ್ತಿ ಸ್ವರೂಪುಗಳೆಲ್ಲವೂ ಭಾವದಲ್ಲೊಂದೇ ಆಗಿ ಪರಿಪೂರ್ಣ ತೃಪ್ತಿಯಲ್ಲಿ ನಿಜ ಸ್ವಭಾವವಾಯಿತ್ತು ಕಾಣಾ ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ.

# ಶಿವಾನುಭವ

ಸಂಪುಟ ೨೬ [ ಸಂಚಿಕೆ ೧



ಸಂಪಾದಕ.

ಫ. ಗು. ಹಳಕಟ್ಟಿ,

ಬಿ.ಎ. ಎಲ್. ಎಲ್. ಬಿ.



ವಾ. ಚಂ. ೫-೧೨-೦ ] ವಿಜಾಪುರ. [ ಮಾರ್ಚ ೧೯೫೨

# ವಿಷಯಾನುಕ್ರಮಣಿಕೆ.




ಶಿವಾನುಭವ ಮಾಸಪತ್ರಿಕೆ,

ವಿಜಾಪುರ.

ವಾರ್ಷಿಕ ಚಂದಾ ೫—೧೨—೦

# ಶಿವಾನುಭವ

ವರ್ಷ ೨೬ | ಮಾರ್ಚ ೧೯೫೨ | ಸಂಚಿಕೆ ೩

## ನಿರ್ಲಜ್ಜ ಶಾಂತಯ್ಯ

ನಿರ್ಲಜ್ಜ ಶಾಂತಯ್ಯನು ಪರಸು ವಿರಕ್ತನು. ಅವನು ವಿರಕ್ತಾಶ್ರಮವನ್ನು ಹೊಂದಿದವನಾಗಿದ್ದನು. ಅವನು ಬಸವೇಶ್ವರನ ಕಾಲದಲ್ಲಿದ್ದು ಶಿವಾನುಭವ ಗೋಷ್ಠಿಯಲ್ಲಿ ಯಾವಾಗಲೂ ಅಂಗವಹಿಸಿ ಕಾರ್ಯ ಮಾಡುತ್ತಿದ್ದನು. ವೀರಶೈವ ಮಹಾನುಭಾವರಲ್ಲಿ ಚನ್ನ ಬಸವೇಶ್ವರನು ಉಚ್ಚಸ್ಥಾನವನ್ನು ಹೊಂದಿದ್ದಾನೆ. ಅವನು ಷಟ್‌ಸ್ಥಲ ಪಾರಂಗತನಾಗಿ ಅದರ ಆಚರಣೆಗಳನ್ನು ಎಲ್ಲರಿಗೂ ಬೋಧಿಸುವವನಾಗಿದ್ದಾನೆ. ಅವನು ತನ್ನ ವಿಚಾರಗಳನ್ನು ಯಾವ ರೀತಿಯಾಗಿ ಬೋಧಿಸುತ್ತ ಇದ್ದನೆಂಬುದು ಸಂಗನ ಬಸವೇಶ್ವರನ ವಚನಗಳಲ್ಲಿ ವಿವರಿಸಿದೆ. ಅದರಲ್ಲಿ ಹೇಳಿದ್ದೇನೆಂದರೆ:— ಅವನು ಮೊದಲು ತನ್ನ ಉಕ್ತಿಗಳನ್ನು ಮೊದಲು ನಿರ್ಲಜ್ಜ ಶಾಂತಯ್ಯನಿಗೆ ಹೇಳುವನು, ಆಮೇಲೆ ಶಾಂತಯ್ಯನು ಉಳಿದ ಪ್ರಮಥರಿಗೆ ಬೋಧಿಸುವನು, ಆಮೇಲೆ ಪ್ರಮಥರು ಅವುಗಳನ್ನು ನಾಡಿನಲ್ಲಿ ಎಲ್ಲ ಕಡೆಗೂ ಪ್ರಸಾರಮಾಡುವರು. ಈ ಸಂಗತಿಯ ಬಗ್ಗೆ ಸಂಗನಬಸವೇಶ್ವರನ ವಚನಗಳಲ್ಲಿ ಹೇಳಿರುವದು ಹೇಗೆಂದರೆ:—

"ಮಹಾ ಪ್ರಭುವು ಲಿಂಗಾಂಗಕ್ಕೆ ಭಿನ್ನವಿಲ್ಲದೆ ಹಸ್ತ ಮಸ್ತಕ ಸಂಯೋಗ ಮಾಡಿ ವೇಧಾ ಮಂತ್ರ ಕ್ರಿಯಾದೀಕ್ಷೆಯನಿತ್ತು ಇಪ್ಪತ್ತೊಂದು ತೆರದ ವಿಚಾರವನರುಪಿ, ನೂರೊಂದುಸ್ಥಲದಾಚರಣೆ ಇನ್ನೂರು ಹದಿನಾರು ಸ್ಥಲದ ಸಂಬಂಧವ ತೋರಿ ಸರ್ವಾಚಾರ ಸಂಪತ್ತಿನ ಸ್ವರೂಪ ನಿಲುಕಡೆಯ ತೋರಿಸಿ ಸಾಕಾರ ನಿರಾಕಾರದ ನಿಜದ ನಿಲುಕಡೆಯನರುಹಿ ನಿಜ ಶಿವಯೋಗದ ನಿರ್ವಯಲವ ಕರುಣಿಸಿ ಸತ್ತು ಚಿತ್ತಾ

ನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ತಾನೆಂದರು ಪಿದರು ನೋಡಾ. ಇಂತು ಚನ್ನ ಬಸವೇಶ್ವರ ಸ್ವಾಮಿಗಳು ಬೆಸಗೊಂಡು ತಮ್ಮ ಚಿದಂಗ ಸ್ವರೂಪರಾದ ಚಿದ್ಘನ ಶರಣ ನಿರ್ಲಜ್ಜ ಶಾಂತಯ್ಯ ನೆಂಬ ಶಿವಶರಣನ ಮುಖದಲ್ಲಿ ಮೋಳಿಗಯ್ಯ ಮೊದಲಾದ ಸಕಲ ಪ್ರಮಥರ್ಗೆ ಬೋಧಿಸಿದರು ನೋಡಾ" ಎಂದು ಈ ವಚನದಲ್ಲಿ ಹೇಳಿದೆ ತ್ತದೆ. ಇದರಮೇಲಿಂದ ನಿರ್ಲಜ್ಜ ಶಾಂತಯ್ಯನು ಚನ್ನ ಬಸವೇಶ್ವರನಿಗೆ ಸಹಾಯಕನಾಗಿ ವಚನ ವಾಙ್ಮಯದ ರಚನೆಯ ಕಾರ್ಯದಲ್ಲಿ ಮಹತ್ವದ ಭಾಗವನ್ನು ವಹಿಸಿದ್ದನೆಂದು ತಿಳಿದುಬರುತ್ತದೆ. ಇವನ ಚರಿತ್ರೆಯು ಅತ್ಯಂತ ಬೋಧಪ್ರದವಾಗಿರುತ್ತದೆ.

ನಿರ್ಲಜ್ಜ ಶಾಂತಯ್ಯನು ತನ್ನ ಪೂರ್ವಾಶ್ರಯದಲ್ಲಿ ಭಕ್ತಾಚಾರ ದಲ್ಲಿದ್ದು ತರುವಾಯ ಜಂಗಮ ಸ್ಥಲವನ್ನು ಹೊಂದಿ ಅದರಂತೆ ಆಚರಿ ಸುವವನಾಗಿದ್ದನು. ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಗುರುಲಿಂಗ ಜಂಗಮ ಗಳು ತನ್ನಲ್ಲಿಯೇ ಇರುತ್ತವೆ. ಅವುಗಳ ರೀತಿಗಳನ್ನು ತಿಳಿದು ಆಚರಿಸಿ ದಲ್ಲಿ ಷಟ್‌ಸ್ಥಲದ ಅಂತ್ಯ ಸ್ಥಲಗಳಾಗಿರುವ ಜಂಗಮ ಲಿಂಗ, ಪ್ರಸಾದ ಲಿಂಗ ಮತ್ತು ಮಹಾಲಿಂಗ ಇವುಗಳ ಮೇಲಿನ ಮೂರು ಚಕ್ರಗಳಲ್ಲಿ ಲಿಂಗವು ಪ್ರಕಾಶಿಸಹತ್ತುವವು. ಅವುಗಳನ್ನು ಸಾಧಿಸಿದಲ್ಲಿ ಅವುಗಳ ಮೇಲಿರುವ ಲಿಂಗಗಳಾದ ನಿಷ್ಕಲ ಲಿಂಗ, ಶೂನ್ಯ ಲಿಂಗ, ಇವುಗಳನ್ನು ಹೊಂದಿ ಕಡೆಗೆ ಪಶ್ಚಿಮ ಚಕ್ರದಲ್ಲಿ ಬಯಲೊಳಗೆ ಬಯಲಾಗಿ ಹೋಗುವರು. ಇದೇ ಸಾಮರಸ್ಯ ಅಥವಾ ಶಿವಜೀವೈಕ್ಯವೆಂದೆನಿಸಿಕೊಳ್ಳುತ್ತದೆ. ಆದ್ದರಿಂದ ನಿರ್ಲಜ್ಜ ಶಾಂತಯ್ಯನು ಈ ಪ್ರಕಾರ ಜಂಗಮ ಸ್ಥಲವನ್ನು ಹೊಂದಿ ಆಚರಿಸುತ್ತ ಇದ್ದನು.

ಆದರೆ ಅವನು ಬಹಳ ಬಡವನಾಗಿದ್ದನು. ಅವನಿಗೆ ತಿನ್ನಲಿಕ್ಕೆ ಅನ್ನವಿಲ್ಲ, ಹೊದೆಯಲಿಕ್ಕೆ ಬಟ್ಟೆ ಇಲ್ಲ. ಆದರೂ ಅವನು ಯಾರನ್ನೂ ತಲೆಬಾಗಿ ಬೇಡಲಿಲ್ಲ. ಅವನಿಗೆ ಇದ್ದ ಒಬ್ಬ ತಂದೆಯು ತೀರಿಕೊಂಡನು. ಈ ಸ್ಥಿತಿಯಲ್ಲಿ ಅವನು ದೇಶಾಂತರಕ್ಕೆ ಹೊರಟನು. ಇದು ಪುರಾತನ ಕಾಲದಲ್ಲಿ ಜಂಗಮ ವರ್ಗದವರಲ್ಲಿದ್ದ ಪದ್ಧತಿಯಾಗಿತ್ತು. ಆದರೆ ಅವನು ತನ್ನ ಪ್ರವಾಸದಲ್ಲಿ ಯಾರಿಗೂ ಭಿಕ್ಷೆಬೇಡನು. ಭಕ್ತರು ಕರೆದರೆ ಅವರಲ್ಲಿ ಭೋಜನಕ್ಕೆ ಹೋಗುವನು. ಕರೆಯದಿದ್ದರೆ ಉಪವಾಸವಿರುವನು. ಅವನ

ಈ ವೃತ್ತಿಯನ್ನು ಭಕ್ತರು ನೋಡಿ ಅವನನ್ನು ಯಾವಾಗಲು ತಮ್ಮಲ್ಲಿ ಭೋಜನಕ್ಕೆ ಕರೆಯುವರು.

ಈ ಪ್ರಕಾರ ಶಾಂತಯ್ಯನು ತನ್ನ ಕಾಯಕವನ್ನು ನಡಿಸುತ್ತ ಕೊರವಾರ ಎಂಬ ಪುರಕ್ಕೆ ಬಂದನು. ಅಲ್ಲಿ ಒಬ್ಬ ಜಂಗಮನು ಕೋರಾನ್ನವನ್ನು ತಂದು ದಾಸೋಹ ಕಾರ್ಯಗಳನ್ನು ನಡಿಸುತ್ತಿದ್ದನು. ಅವನು ಶಾಂತಯ್ಯನ ನಿರೀಕ್ಷ್ಯಾ ವೃತ್ತಿಯನ್ನು ನೋಡಿ ಸಂತೋಷಪಟ್ಟು ಅವನನ್ನು ತನ್ನ ಮಠಕ್ಕೆ ಅಧಿಕಾರಿಯನ್ನಾಗಿ ಮಾಡಬೇಕೆಂದು ಬಯಸಿದನು.

ಆಗ ಅವನು ಶಾಂತಯ್ಯನನು ತನ್ನ ಮಠಕ್ಕೆ ಕರೆಸುಕೊಂಡು ಹೋಗಿ ಅವನಿಗೆ ನೀನು ನನ್ನ ಮಗಳನ್ನು ಮದುವೆಯಾದರೆ ಈ ಮಠದೊಂದಿಗೆ ನನ್ನ ಭಾಗ್ಯವನ್ನೆಲ್ಲ ನಿನಗೆ ಕೊಡುವೆನೆಂದು ಹೇಳಿ ಅವನನ್ನು ಲಗ್ನಕ್ಕೆ ಒಡಂಬಡಿಸಿದನು. ಮತ್ತು ಲಗ್ನ ಕಾರ್ಯವನ್ನೂ ಮುಗಿಸಿದನು.

ಪುರಾತನ ಕಾಲದಲ್ಲಿ ಶಿವಶರಣರು ತಮಗೆ ಬೇಕಾದರೆ ಲಗ್ನ ಮಾಡಿಕೊಳ್ಳಬಹುದು ಅಥವಾ ಬಿಟ್ಟುಬಿಡಬಹುದು. ಹೀಗೆ ಇದ್ದು ಈ ಬಗ್ಗೆ ಯಾವ ನಿರ್ಬಂಧವೂ ಇರಲಿಲ್ಲ. ಸ್ತ್ರೀಯರೂ ಕೂಡ ಅದರಂತೆಯೇ ಲಗ್ನಮಾಡಿಕೊಳ್ಳಬಹುದು ಅಥವಾ ಬಿಡಬಹುದು. ಇದು ಅವರ ಇಚ್ಛೆಯ ಮೇಲೆ ಇದ್ದಿತು. ಆದ್ದರಿಂದ ಅನೇಕ ಸ್ತ್ರೀಯರು ಲಗ್ನವಾಗುವುದನ್ನು ಬಿಟ್ಟದ್ದುಂಟು. ಅಥವಾ ಲಗ್ನವಾಗಿ ಪ್ರಪಂಚವನ್ನು ನಡಿಸುತ್ತ ಬಂದವರೂ ಇದ್ದಾರೆ. ಆದರೆ ಇವರೆಲ್ಲರೂ ಶರಣೆಯರೆಂದು ಎನಿಸಿಕೊಂಡಿದ್ದಾರೆ. ಇವರಲ್ಲಿ ಅನೇಕರು ವಚನಕಾರರು ಸಹ ಆಗಿದ್ದಾರೆ.

ಶಾಂತಯ್ಯನ ಲಗ್ನವು ಮುಗಿದಬಳಿಕ ಅವನ ಮಾವನು ಭಕ್ತರನ್ನೆಲ್ಲ ಮಠದಲ್ಲಿ ಬರಮಾಡಿಕೊಂಡು ಅವರಿಗೆ ನನ್ನ ಅಳಿಯನಿಗೆ ನಾನು ಮುನ್ನಾಡಿದಂತೆ ನನ್ನ ಭಾಗ್ಯವನ್ನೆಲ್ಲ ಕೊಡುವೆನು ಎಂದು ನುಡಿದು ತನ್ನ ದಂಡಕೋಲು ಜೋಳಿಗೆಯನ್ನು ತಂದು, ಅಳಿಯನ ಮುಂದಿಟ್ಟು, ಅಡ್ಡಬಿದ್ದು ಇವುಗಳನ್ನು ನೀನು ಕೈಕೊಳ್ಳು ಎಂದು ಅವನಿಗೆ ನುಡಿದು ತನ್ನ ಬದುಕಿನ ವಿವರವನ್ನು ಹೇಳಿದನು. ಅದು ಏನೆಂದರೆ, ಹೊರಸು ಒಂದು, ಹರಿವಾಣಗಳೆರಡು, ಜೋಳ ಒಂದು ಮಣವು, ಕಡಲೆ ಕಾಲುಮಣ, ಕರಕುಚಾಪ ಒಂದು, ಅಳೆಯುವ ಬಳ್ಳ (ಸೇರು) ಒಂದು, ಮೊರ

ಒಂದು, ಗಡಿಗೆಗಳು ಮೂರು, ಹುಟ್ಟಿ ಒಂದು, ಹುಲ್ಲೊಂದು ಹೊರೆ, ಕಟ್ಟಿಗೆ ಎರಡು ಮಣ, ಉಪ್ಪು ಐದು ಸೇರು, ಒಂದು ಕುಂಟು ಗೋವು, ಇವೇ ತನ್ನ ಭಾಗ್ಯ ನಿನಗೆ ಸಲ್ಲಲಿ ಎಂದು ಶಾಂತಯ್ಯನಿಗೆ ಹೇಳಿ ಶರಣು ಮಾಡಿದನು.

ಶಾಂತಯ್ಯನಾದರು ಈ ಭಾಗ್ಯವು ತನಗೆ ಗುರು ನಿರೂಪದಿಂದ ಬಂದುದು, ಇದು ಗುರು ಕೊಟ್ಟ ಪ್ರಸಾದವು ಎಂದು ಭಾವಿಸಿ ಎಷ್ಟು ಮಾತ್ರವೂ ಅಸಮಾಧಾನಪಡಲಿಲ್ಲ. ಶ್ರೀಮಂತಿಕೆಯು ಮತ್ತು ವೈಭವದ ಮಠವು ತನಗೆ ದೊರಕಲಿಲ್ಲವಲ್ಲಾ ಎಂದು ಅವನು ದುಃಖಿಸಲಿಲ್ಲ. ಅಥವಾ ಈಗಿನವರಂತೆ ತನಗೆ ಇಂತಿಷ್ಟು ವರದಕ್ಷಿಣೆ ಬರಬೇಕೆಂದು ಯಾರಕೂಡವೂ ಮಾತನಾಡಿರಲಿಲ್ಲ. ಅವನು ಕೇವಲ ಶಿವಾನುಭವಿಯು. ನಿರಿಚ್ಛೆಯುಳ್ಳವನು. ಆದ್ದರಿಂದ ತನಗೆ ಹೆಚ್ಚಿನ ಭಾಗ್ಯವು ಬರಲಿಲ್ಲ ವೆಂದು ಎಷ್ಟು ಮಾತ್ರವೂ ವ್ಯಸನಪಡಲಿಲ್ಲ.

ಶಾಂತಯ್ಯನು ಈ ಪ್ರಕಾರ ಒಂದು ಮಠದ ಅಧಿಕಾರಿಯಾಗಿ ತನ್ನ ದಾಸೋಹ ಕಾರ್ಯಗಳನ್ನು ನಡಿಸಹತ್ತಿದನು. ಪುರಾತನ ಕಾಲದಲ್ಲಿ ದಾಸೋಹ ಮಠಗಳಲ್ಲಿ ಶಿವಾನುಭವದ ರೀತಿ ನೀತಿಗಳನ್ನು ತಿಳಿಯಲಪೇಕ್ಷಿಸುವ ಶಿಷ್ಯ ವರ್ಗವು ಯಾವಾಗಲೂ ಇರುತ್ತಿತ್ತು. ಅದರ ವ್ಯವಸ್ಥೆಗಾಗಿ ಮಠಾಧಿಪತಿಯು ಗ್ರಾಮದಲ್ಲಿ ಕೋರಾನ್ನವನ್ನು ಎತ್ತುವನು. ಇಲ್ಲವೆ ಗ್ರಾಮದಲ್ಲಿರುವ ಭಕ್ತರು ತಾವಾಗಿಯೇ ಮಠಕ್ಕೆ ಬಂದು ಆಹಾರ ದ್ರವ್ಯಗಳನ್ನು ಕೊಡುವರು. ಒಂದುವೇಳೆ ಮಠದಲ್ಲಿರುವ ಶಿಷ್ಯರ ಸಂಖ್ಯೆಯು ಬಹಳ ದೊಡ್ಡದಾಗಿದ್ದರೆ ಗ್ರಾಮದಲ್ಲಿರುವ ಕೆಲ ಒಬ್ಬನು ಒಂದು ಬಂಡಿಯನ್ನು ಮಾಡಿಕೊಂಡು ಸುತ್ತಲಿನ ಗ್ರಾಮಗಳಿಗೆ ಹೋಗಿ ಅನ್ನ ಸಂಗ್ರಹ ಮಾಡಿ ಮಠಕ್ಕೆ ಒಪ್ಪಿಸುವನು. ಈ ಪದ್ಧತಿಯು ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯ ಸುಮಾರು ಒಂದು ನೂರು ವರ್ಷಗಳ ವರೆಗೂ ನಡಿಯುತ್ತ ಬಂದಿತೆಂದು ತೋರುತ್ತದೆ.

ಆದರೆ ಈ ಪದ್ಧತಿಯು ಮುಂದೆ ತಪ್ಪಿ ಹೋದಂತೆ ತೋರುತ್ತದೆ ಮಠಗಳಲ್ಲಿ ಶಿವಾನುಭವದ ಅಭ್ಯಾಸ ಮಾಡದೇ ಇದ್ದವರೂ ಕೂಡ ಇರುವರು. ಮಠಾಧಿಕಾರಿಗಳಾದವರು ದಾಸೋಹ ಮಠವೆಂದು ಸುತ್ತಲಿನ ಗ್ರಾಮಗಳಲ್ಲಿ ಧಾನ್ಯವನ್ನು ಎತ್ತುವರು. ಮತ್ತು ಅವುಗಳನ್ನು

ಸ್ವಾರ್ಥಕ್ಕಾಗಿ ಉಪಯೋಗಿಸುವರು. ಈ ರೀತಿಯು ಈಗಲೂ ಕೂಡ ಇರುವದು ಕಂಡುಬರುತ್ತದೆ.

ನಿರ್ಲಜ್ಜ ಶಾಂತಯ್ಯನೂ ಅವನಿಗೆ ಹೆಣ್ಣು ಕೊಟ್ಟ ಮಾವನೂ ದಾಸೋಹ ಮಠದಲ್ಲಿದ್ದು ಶ್ರೀಮಂತಿಕೆಯನ್ನು ಹೊಂದಬಹುದಾಗಿತ್ತು. ಆದರೆ ಆ ಉಭಯತರು ಬಡವರಾಗಿಯೇ ಕಡೆಯವರೆಗೆ ಉಳಿದರು. ಶಾಂತಯ್ಯನ ಚರಿತ್ರೆಯಲ್ಲಿ ಹೇಳಿರುವದೇನೆಂದರೆ:—

“ಶಾಂತಯ್ಯನು ನಿತ್ಯವೂ ಕೋರಾನ್ನವನ್ನು ತಂದು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು. ಮಠದಲ್ಲಿರುವವರಿಗೆ ಶಿವಾನುಭವ ಸದ್ಗೋಷ್ಠಿಗಳನ್ನು ಹೇಳುವನು. ಅವನು ಆಶಾರಹಿತನಾಗಿ ತನಗೆ ಸಾಕಾಗುವಷ್ಟೇ ಧಾನ್ಯವನ್ನು ಭಕ್ತರಲ್ಲಿ ಎತ್ತುವನು. ಅದನ್ನು ಹೆಚ್ಚಿಗೆ ಸಂಗ್ರಹಿಸಲು ಬಯಸನು” ಈ ಪ್ರಕಾರ ಅವನು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು.

ಶಿವನು ಅವನ ಶ್ರೇಷ್ಠವೃತ್ತಿಯನ್ನು ತಿಳಿದವನಾಗಿ ಅವನಿಗೆ ಮೆಚ್ಚಿ, ಅವನ ಗುಣಗಳು ಜನರಲ್ಲಿ ಹೆಚ್ಚಿಗೆ ಪ್ರಕಾಶಹೊಂದಬೇಕೆಂದು ಬಯಸಿ ಒಂದು ಉಪಾಯವನ್ನು ಯೋಚಿಸಿ ಜಂಗಮ ರೂಪ ಧಾರಣಮಾಡಿ ಶಾಂತಯ್ಯನಿದ್ದ ಗ್ರಾಮಕ್ಕೆ ಬಂದು ಅವನ ಮಠದ ಬಾಗಿಲಲ್ಲಿ ಬಂದು ನಿಂತನು.

ಆ ದಿವಸ ಉಗ್ರವಾದ ಚಳಿಯು ಬಿದ್ದಿತ್ತು. ಶಾಂತಯ್ಯನು ಕೋರಾನ್ನವನ್ನು ತರಲು ಹೊರಗೆ ಹೋಗಿದ್ದನು. ಒಳಗೆ ಅವನ ಹೆಂಡತಿಯೊಬ್ಬಳು ಮಾತ್ರ ಇದ್ದಳು. ಜಂಗಮನು ಅವಳನ್ನು ಹೊರಕ್ಕೆ ಕರೆದು ಅವಳಿಗೆ— ನನ್ನ ಸೀತಕ್ಕೆ ವಸನಬೇಕಾಗಿದೆ. ಚಳಿಯಿಂದ ನಡಗುತ್ತಿದ್ದೇನೆ. ಒಂದನ್ನು ಕೊಡು ಎಂದು ಕೇಳಿದನು. ಆದರೆ ಮಠದಲ್ಲಿ ಅರಿವೆಯು ಚಿಂದಿಯು ಸಹ ಇರಲಿಲ್ಲ. ಅವಳು ಉಟ್ಟ ಸೀರೆ ಮತ್ತು ಶಾಂತಯ್ಯನು ಉಟ್ಟ ಧೋತ್ರ ಇವುಗಳ ಹೊರತು ಯಾವ ವಸನವೂ ಅವರಲ್ಲಿರಲಿಲ್ಲ. ಆದರೆ ಸತಿಪತಿಗಳು ದಾಸೋಹ ನಡಿಸಲೇಬೇಕೆಂಬ ಕಾಯಕವನ್ನು ಇಟ್ಟುಕೊಂಡದ್ದರಿಂದ ಆ ಸತಿಯು ತಾನು ಉಟ್ಟಿದ್ದ ಅರ್ಧ

ಮೊಳದ ಸೀರೆಯೊಳಗೆ ಅರ್ಧವನ್ನು ಹರಿದು ಆ ಜಂಗಮನ ಕಯ್ಯಲ್ಲಿ ಕೊಟ್ಟಳು. ಆದರೆ ಅವನು— ಇಷ್ಟು ನನಗೆ ಸಾಕಾಗುವದಿಲ್ಲೆಂದು ನುಡಿದನು. ಆಗ ಅವಳು ತನ್ನ ಮೈಮೇಲೆ ಉಳಿದ ಮೂರು ಮೊಳದ ಸೀರೆಯಲ್ಲಿ ಪುನಃ ಅರ್ಧವನ್ನು ಹರಿದು ಆ ಜಂಗಮನಿದಿರಿಗೆ ಇಟ್ಟಳು. ಆದರೂ ಆವನು ಇಷ್ಟು ಸಹ ತನಗೆ ಸಾಲದೆಂದು ಅದನ್ನೂ ತನಗೆ ಮೊದಲು ಕೊಟ್ಟ ಅರಿವೆಯ ತುಣುಕನ್ನು ಮನೆಯಲ್ಲಿಯೇ ಇಟ್ಟು ಬೀದಿಗೆ ಬಂದು ಹೊರಟು ಹೋಗಹತ್ತಿದನು.

ಆಗ ಆ ಸತಿಯು ಸೀಳಿದ ಬಟ್ಟೆಯ ಆ ಎರಡೂ ತುಣುಕುಗಳನ್ನು ಎಡದ ಕಯ್ಯಲ್ಲಿ ಹಿಡಿದುಕೊಂಡು ಮನೆಯ ಹೊರಗೆ ಬಂದು— ಇವುಗಳನ್ನು ದಯವಿಟ್ಟು ತೆಗದುಕೊಳ್ಳಿ, ಎಂದೆನ್ನುತ್ತ ಆ ಜಂಗಮನ ಹಿಂದೆ ಬೀದಿಯಲ್ಲಿ ಬರಹತ್ತಿದಳು. ಅದನ್ನು ನೋಡಿ ಪುರಜನರು ಅವಳ ದಾನಗುಣವನ್ನು ಕಂಡು ಬೆರಗಾದರು.

ಅಷ್ಟರಲ್ಲಿ ಶಾಂತಯ್ಯನು ಕೋರಾನ್ನವನ್ನು ತೆಗೆದುಕೊಂಡು ಮನೆಯ ಹಾದೀ ಹಿಡಿದು ಬರುತ್ತಿರಲು, ಅವನು ಇದಿರಿಗೆ ಬರುತ್ತಿರುವ ತನ್ನ ಸತಿಯನ್ನು ಕಂಡು, ಇದೇನೆಂದು ಅವಳಿಗೆ ಕೇಳಿದನು. ಅವಳು ನಡೆದ ಎಲ್ಲ ಸಂಗತಿಗಳನ್ನು ಅವನಿಗೆ ತಿಳಿಸಲು ಅವನು ಅವಳಿಗೆ— ಹೌದು, ನೀನು ಕೊಟ್ಟ ಉಡಿಗೆಯು ಈ ಜಂಗಮನಿಗೆ ಸಾಲದು. ಅದ್ದರಿಂದ ನನ್ನುಡಿಗೆಯನ್ನೂ ಅವನಿಗೆ ಕೊಟ್ಟು ಅವನ ಸೀತದ ಬಾಧೆಯನ್ನು ದೂರ ಮಾಡುವೆನೆಂದು ತಾನುಟ್ಟ ಮೂರು ಮೊಳದ ಇಡೀ ಧೋತ್ರವನ್ನೇ ಕಳೆದು ಜಂಗಮನ ಕೈಯ್ಯಲ್ಲಿ ಕೊಟ್ಟು, ತಾನು ದಿಗಂಬರಿಯಾದನು. ಪುರಜನರು ಸತಿಪತಿಗಳೀರ್ವರ ಈ ಅಲೌಕಿಕ ನಿರಿಚ್ಛಾವೃತ್ತಿಯನ್ನು ಕಂಡು ಬೆರಗಾದರು. ಆಗ ಆ ಜಂಗಮನು ಅಲ್ಲಿಯೇ ಅಂತರ್ಧಾನನಾದನು. ಅಂದಿನಿಂದ ಶಾಂತಯ್ಯನು ದಿಗಂಬರಿಯಾಗಿಯೇ ಜನರಲ್ಲಿರಹತ್ತಿದನು.

ಈ ಕಾಲದಲ್ಲಿ ದೇಶದಲ್ಲಿ ಜೈನ ಸಂಸ್ಕೃತಿಯು ಇನ್ನೂ ಪ್ರಬಲವಾಗಿದ್ದರಿಂದ ಅನೇಕ ದಿಗಂಬರಿಗಳು ಜನರ ದೃಷ್ಟಿಗೆ ಬೀಳುತ್ತಿರಬೇಕು. ಆದ್ದರಿಂದ ಶಾಂತಯ್ಯನ ಈ ವೃತ್ತಿಯು ಜನರಿಗೆ ಅಷ್ಟು ವಿರೋಧಿ

ನಿಸಿರಲಿಕ್ಕಿಲ್ಲ. ಆದರೆ ಅವನು ಇದರಲ್ಲಿ ಲಜ್ಜೆಯನ್ನು ಬಿಡಬೇಕಾಗಿ ಬಂದುದರಿಂದ ಜನರು ಅವನನ್ನು ' ನಿರ್ಲಜ್ಜ ಶಾಂತಯ್ಯ ' ನೆಂಬ ಹೆಸರಿನಿಂದ ಕರೆಯುತ್ತಿದರು.

ಇದರ ಮೇಲಿಂದ ನಿರ್ಲಜ್ಜ ಶಾಂತಯ್ಯನು ಶಿವಾನುಭವ ಮಂಟಪದಲ್ಲಿ ಪ್ರಭುದೇವ, ಚನ್ನಬಸವೇಶ್ವರ, ಇವರೊಡನೆ ಇದ್ದು ಉಚ್ಚಸ್ಥಾನವನ್ನು ಹೊಂದಿದವನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವನು ಅತ್ಯಂತ ಬಡತನ ಸ್ಥಿತಿಯಲ್ಲಿದ್ದ ಮಠಾಧಿಪತಿಯು. ಆದರೆ ಶ್ರೇಷ್ಠತರ ಗತಿಯ ಶಿವಾನುಭವಿಯಾಗಿ ಶಿವಾನುಭವದ ಜ್ಞಾನವನ್ನು ಪ್ರಸಾರ ಮಾಡಿದ್ದಾನೆ. ಅವನು ಅತ್ಯಂತ ನಿರಾಶಿಕನು. ಆದ್ದರಿಂದ ತನ್ನ ದಾಸೋಹವನ್ನು ನಡಿಸುವಲ್ಲಿ ದಿಗಂಬರತ್ವವನ್ನು ಸಹ ಹೊಂದಲು ಹೆದರಲಿಲ್ಲ. ಇವನು ವಚನಗಳನ್ನು ರಚಿಸಿರಬಹುದೆಂದು ನಮಗೆ ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಅವನು ಕಲ್ಯಾಣಪಟ್ಟಣವಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಗೆ ' ನಿರ್ಲಜ್ಜೇಶ್ವರ ಲಿಂಗ ' ಎಂಬ ಹೆಸರು ಪ್ರಾಪ್ತವಾಗಿತ್ತು.

---

# ಅನುಭಾವ.

ಷಟ್‌ಸ್ಥಲ ಶಾಸ್ತ್ರದಲ್ಲಿ ವಿಶೇಷಾರ್ಥವುಳ್ಳ ಶಬ್ದಗಳು ಅಸಂಖ್ಯಾತವಾಗಿರುತ್ತವೆ. " ಶಿವಾನುಭವ ಶಬ್ದ ಕೋಶ"ದಲ್ಲಿ ಬಂದಿರುವ ಶಬ್ದಗಳ ಸಂಖ್ಯೆಯು ಒಂದು ಸಾವಿರಕ್ಕಿಂತಲೂ ಹೆಚ್ಚಿಗಿರುವದು ಕಂಡು ಬಂದಿರುತ್ತದೆ. ಅವುಗಳ ವಿವಿಧ ಅರ್ಥಗಳನ್ನು ಈ ಗ್ರಂಥದಲ್ಲಿ ನಾವು ಕಾಣಬಹುದಾಗಿದೆ. ಈ ಶಾಸ್ತ್ರದಲ್ಲಿ ಒಂದೇ ಒಂದು ಶಬ್ದಕ್ಕೆ ಸ್ಥಲಾನುಸಾರವಾಗಿ ಅನೇಕಾರ್ಥಗಳಿರುತ್ತವೆ. ಈ ಸ್ಥಲಗಳು ಒಂದರಿಂದ ಇನ್ನೂರುಹದಿನಾರರ ವರೆಗೆ ಮಾತ್ರವಲ್ಲ, ಒಮ್ಮೊಮ್ಮೆ ೭೦೮ರ ವರೆಗೂ ಇರುತ್ತವೆ. ಈ ಪ್ರತಿಯೊಂದು ಸ್ಥಲಕ್ಕೆ ವಿಶಿಷ್ಟಾರ್ಥಗಳಿರುತ್ತದೆ. ಇವುಗಳ ವಿವರಣೆಗಳನ್ನು ಶಬ್ದಗಳಲ್ಲಿ ಹೇಳುವದು ಅಶಕ್ಯವಾಗಿರುತ್ತದೆ. ಆದರೆ ಸಂದರ್ಭಕ್ಕನುಸರಿಸಿ

ಅವುಗಳ ಭಾವವನ್ನು ವಾಚಕರು ಕಂಡುಹಿಡಿಯ ಬಹುದಾಗಿದೆ. ಈ ಭಾವಕ್ಕನು ಸರಿಸಿಯೇ ಅವುಗಳ ಅರ್ಥವೇನೆಂಬುದನ್ನು ನಾವು ತಿಳಿದುಕೊಳ್ಳತಕ್ಕದ್ದು.

ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ, ಎಂಬ ಮೂರು ಶರೀರಗಳಿರುತ್ತವೆ. ಸ್ಥೂಲದಲ್ಲಿ ಹೇಳಿದ ಭಾವವನ್ನು ಸೂಕ್ಷ್ಮದಲ್ಲಿ ಅರಿತುಕೊಳ್ಳಬೇಕು. ಹೀಗೆಅರಿತುಕೊಂಡು ಅದರಲ್ಲಿ ಪರಿಣಾಮ ಹೊಂದಬೇಕು. ಇದು ಷಟ್‌ಸ್ಥಲದ ವಿವರವು. ಇದನ್ನು ಷಟ್‌ಸ್ಥಲಜ್ಞನು ಅರಿತುಕೊಂಡು ಆಚರಿಸಬೇಕು. ಇಂಥ ಆಚರಣೆಯು ಷಟ್‌ಸ್ಥಲದ ತಿರುಳನ್ನು ಅರಿತವನಿಗೆ ಸಾಧ್ಯವಿರುತ್ತದೆ.

'ಅನುಭಾವ' ಈ ಶಬ್ದವು ಷಟ್‌ಸ್ಥಲ ಶಾಸ್ತ್ರದಲ್ಲಿ ಬಹಳ ಮಹತ್ವದ್ದಾಗಿದೆ. ಈಶಬ್ದವು ಅನುಭಾವ, ಶಿವಾನುಭವ, ಶಿವಾನುಭವ ಮಂಟಪ, ಶಿವಜ್ಞಾನಿ, ಈ ಮೊದಲಾದವುಗಳಲ್ಲಿ ಬರುತ್ತದೆ. ವಚನಗಳಲ್ಲಿ ಈಶಬ್ದವು ಆಗಿಂದ್ದಾಗ್ಗೆ ಬರುತ್ತಿದ್ದು ಯಾವನು ಷಟ್‌ಸ್ಥಲದ ರೀತಿಗಳನ್ನು ತಿಳಿದುಕೊಂಡಿರುತ್ತಾನೋ ಅವನು ಸ್ಥೂಲವಾಗಿ 'ಅನುಭಾವಿ' ಎಂದು ಹೇಳಲ್ಪಡುತ್ತಾನೆ. ಆದರೆ ಶಿವಶರಣರಲ್ಲಿ ಇಂಥ ಬಾಹ್ಯ ಜ್ಞಾನಕ್ಕೆ ಮಹತ್ವವಿಲ್ಲ. ಅದನ್ನು ಅವನು ತಿಳಿಯುವದಲ್ಲದೆ ಅದರಂತೆ ಆಚರಿಸಿ ಮನದಲ್ಲಿ ದೃಢಪಡಿಸಿಕೊಂಡಲ್ಲಿ ಅವನು ಹೆಚ್ಚಿನ ಮೆಟ್ಟಿಲನ್ನು ಕಂಡವನಾಗುತ್ತಾನೆ ಈ ಸ್ಥಿತಿಯಲ್ಲಿ ಅವನ ಅಂತರಂಗದ ಆಚರಣೆಯಲ್ಲಿ ಉನ್ನತವಾದ ಪರಿಸ್ಥಿತಿಯು ಉಂಟಾಗುತ್ತದೆ. ಆಗ ಅವನಿಗೆ ಶಿವಯೋಗವು ಪ್ರಾಪ್ತವಾಯಿತೆಂದು ವಚನಕಾರರು ಹೇಳುವದುಂಟು.

ಈ ಯೋಗದ ಆಚರಣೆಯು ಪ್ರಸಾದಿ ಮತ್ತು ಪ್ರಾಣಲಿಂಗಿಯ ಸ್ಥಲಗಳಲ್ಲಿ ಪ್ರಕಟವಾಗಹತ್ತುತ್ತದೆ. ಆಗ ಈ 'ಅನುಭಾವ' ಶಬ್ದದ ವಿವರಣೆಗಳು ಬೇರೆ ವಿಧವಾಗಿ ಹೇಳಲ್ಪಡುತ್ತವೆ. ಅವು ಅಂತರಂಗದ ಜ್ಞಾನಗಳಾಗಿವೆ. ಈ ಎರಡು ಶರೀರಗಳಿಗೆ ಮೇಲ್ಪಟ್ಟು ಕಾರಣಶರೀರವಿರುತ್ತದೆ. ಈ ಶರೀರವನ್ನು ಮುಟ್ಟಿದ ಅನುಭವವನ್ನು ಶಬ್ದಗಳಲ್ಲಿ ವರ್ಣಿಸುವದು ಶಕ್ಯವಿರುವದಿಲ್ಲ. ಇದನ್ನು ಆತ್ಮನಲ್ಲಿಯೇ ಅರಿಯಬೇಕು. ಅದು ಶಬ್ದದ ಆಚೆಗೆ ಇರುತ್ತದೆ ಅದು ಭಾವ ಗಮ್ಯವು ಹೀಗೆ 'ಅನುಭಾವ' ಇದರ ರೀತಿಗಳು

ಆಯಾಯ ಶರೀರಗಳಿಗೆ ಅನುಸಾರವಾಗಿ ಬೇರೆ ಬೇರೆ ತೆರನಾಗಿ ಹೇಳಲ್ಪಡುವುಂಟು. ಅವು ಬೇರೆ ಬೇರೆಯಾಗಿ ತೋರಿದರೂ ಮೂಲದಲ್ಲಿ ಅವುಗಳ ಭಾವವು ಒಂದೇ ಇರುತ್ತದೆ.

ಷಣ್ಮುಖಸ್ವಾಮಿಗಳು ವಚನಕಾರರಲ್ಲಿ ಅಗ್ರಸ್ಥಾನವನ್ನು ಹೊಂದಿರುತ್ತಾರೆ. ಅವರ ಅಂತರಂಗಿಕ ವಿಚಾರಗಳು ಬಹು ಮಿಗಿಲಾದವುಗಳು. ಅವರು ಪ್ರಾಣಲಿಂಗಿಸ್ಥಲದ ರೀತಿಗಳನ್ನು ಬಹುಚನ್ನಾಗಿ ಬಲ್ಲವರೆಂಬುದು ಅವರ ವಚನಗಳಿಂದ ತಿಳಿದುಬರುತ್ತದೆ.

ಬಸವೇಶ್ವರನು 'ಅನುಭಾವ' ಈ ವಿಷಯವನ್ನು ಕುರಿತು ತನ್ನ ವಚನಗಳಲ್ಲಿ ಹೇಳಿರುತ್ತಾನೆ. ಆದರೆ ಅವು ಬಾಹ್ಯಕ್ರಿಯೆಗಳಿಗೆ ಸಂಬಂಧಿಸಿರುತ್ತವೆ. ಆದರೆ ಷಣ್ಮುಖಸ್ವಾಮಿಗಳ ವಿವರಣೆಗಳು ಈ ಅರ್ಥದಕಿಂತಲೂ ಬಹು ಮುಂದೆ ಸೂಕ್ಷ್ಮದಲ್ಲಿ ಹೊಗಿರುತ್ತವೆ. ಇದು ಹೇಗೆಂಬುದನ್ನು ಅವರ ಕೆಳಗಿನ ವಚನಗಳಲ್ಲಿ ನಾವು ಕಾಣಬಹುದು.

ಈ ವಚನಗಳಲ್ಲಿ ಷಣ್ಮುಖಸ್ವಾಮಿಗಳು ಶಿವಾನುಭವವೆಂದರೇನೆಂಬುದನ್ನು ಬಹು ಚನ್ನಾಗಿ ನಿರ್ದೇಶಿಸಿದ್ದಾರೆ. ಅವುಗಳನ್ನು ವಾಚಕರು ಚನ್ನಾಗಿ ವಿಮರ್ಶೆ ಮಾಡಿಕೊಳ್ಳಬೇಕೆಂದು ನಮ್ಮ ಸವಿನಯ ವಿಜ್ಞಾಪನೆ ಇದೆ. ಈ ಎಲ್ಲ ವಚನಗಳ ಅರ್ಥವು ಬಹು ಸ್ಪಷ್ಟವಾಗಿದೆ. ಇವುಗಳನ್ನು ಆಚರಣೆಯಲ್ಲಿ ತರುವದು ಶಿವಾನುಭವಿಗಳ ಕಾರ್ಯವಾಗಿದೆ.

## ವಚನಗಳು.

### ಪ್ರಕೃತಿ ಗುಣಗಳನ್ನು ನಷ್ಟಮಾಡುವುದು.

ಅನುಭಾವ ಅನುಭಾವವೆಂದು ನುಡಿವುತಿಪ್ಪರೆಲ್ಲರು
ಅನುಭಾವದ ಕೀಲವನಾರು ಅರಿಯರಲ್ಲ
ಅನುಭಾವವೆಂದಡೆ
ಅಂತರಂಗದ ಹೃದಯಕಮಳದ ಅಷ್ಟದಳಗಳ ಮೆಟ್ಟ

ಚರಿಸುವ ಜೀವ ಹಂಸನ ಕೊಂದು
ಇಂದ್ರ ದಿಕ್ಕಿನ ಎಸಳದಲ್ಲಿ ತೋರುವ ಭಿನ್ನ ಭಕ್ತಿಯನಳಿದು
ಅಗ್ನಿ ದಿಕ್ಕಿನ ಎಸಳಲ್ಲಿ ತೋರುವ ಜಡನಿದ್ರೆಯ ಮರ್ದಿಸಿ
ಯಮ ದಿಕ್ಕಿನ ಎಸಳಲ್ಲಿ ತೋರುವ ವ್ಯಸನವಿಕಾರವ ಮಸುಳಿಸಿ
ನೈಋತ್ಯ ದಿಕ್ಕಿನ ಎಸಳಲ್ಲಿ ತೋರುವ ಪಾಪದ ದುಷ್ಕೃತಿಯ ಪಲ್ಲಟಿಸಿ
ವರುಣ ದಿಕ್ಕಿನ ಎಸಳಲ್ಲಿ ತೋರುವ ಮಂದಗಮನವ ಪರಿಹರಿಸಿ
ವಾಯುವ್ಯ ದಿಕ್ಕಿನ ಎಸಳಲ್ಲಿ ತೋರುವ ದುಷ್ಟಾಚಾರವ ದೂರಮಾಡಿ
ಕುಬೇರ ದಿಕ್ಕಿನ ಎಸಳಲ್ಲಿ ತೋರುವ ದ್ರವ್ಯಾಪೇಕ್ಷೆಯ ಧಿಕ್ಕರಿಸಿ
ಈಶಾನ್ಯ ದಿಕ್ಕಿನ ಎಸಳಲ್ಲಿ ತೋರುವ ವನಿತಾದಿ
ವಿಷಯ ಪ್ರಪಂಚುಗಳ ಈಡಾಡಿ ನೂಕಿ
ಇಂತೀ ಅಷ್ಟಮದಂಗಳ ಹಿಡಿದು ತೋರುವ
ಪ್ರಕೃತಿಗುಣಂಗಳ ನಷ್ಟಮಾಡಿ
ನಟ್ಟ ನಡು ಚೌದಳ ಮಧ್ಯದಲ್ಲಿಪ್ಪ ಪರಬ್ರಹ್ಮನ ನೆಟ್ಟನೆ ಕೂಡಿ
ಅಷ್ಟಾವಧಾನಿಯಾಗಿ ಅಚಲಿತ ಜ್ಞಾನದಲ್ಲಿ ಸುಳಿಯಬಲ್ಲಡೆ
ಆತನೆ ನಿಜಾನುಭಾವಿ ಆತನೆ ನಿತ್ಯಮುಕ್ತನು ಆತನೆ ನಿರ್ಭೇದ್ಯನು

ಇಂತೀ ಭೇದವನರಿಯದೆ ಮಾತುಕಲಿತ ಭೂತನಂತೆ
ಆ ಮಾತು ಈ ಮಾತು ಹೊಸಮಾತುಗಳ ಕಲಿತು
ಕಂಡಕಂಡಲ್ಲಿ ನಿಂದನಿಂದಲ್ಲಿ ಮುಂದುವರಿದು ಹರಟೆಗುಟ್ಟುವ
ಒಣ ಹರಟೆಗಾರರ ಶಿವಾನುಭಾವಿಗಳೆಂತೆಂಬೆನಯ್ಯ ಅಖಂಡೇಶ್ವರಾ ?

## ಲಿಂಗವನ್ನು ತನುಮನ ಜೀವನಲ್ಲಿ ಏಕಾಕಾರವಮಾಡುವದು

ತನುವಿನ ಮಧ್ಯದಲ್ಲಿ ಹೊಳೆರ್ದ ಇಷ್ಟಲಿಂಗದಲ್ಲಿ
ತನುವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಮನದ ಮಧ್ಯದಲ್ಲಿ ಹೊಳೆರ್ದ ಪ್ರಾಣಲಿಂಗದಲ್ಲಿ
ಮನವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಜೀವದ ಮಧ್ಯದಲ್ಲಿ ಹೊಳೆರ್ದ ಭಾವಲಿಂಗದಲ್ಲಿ
ಜೀವವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು

ಇಂತೀ ಅನುಭವದ ಅನುವನರಿಯದೆ
ತನುವಿನ ಕೈಯಲ್ಲಿ ಘನಲಿಂಗವ ಹಿಡಿದಡೇನು
ಅದು ಹುಟ್ಟುಗು ಎಡನ ಕೈಯ್ಯ ಕನ್ನಡಿಯಂತೆ.

## ಪ್ರಾಣಲಿಂಗಿಯ ಸ್ಥಿತಿ.

ಅನುಭಾವಿಯಾದಡೆ ತಿರುಳು ಕರಗಿದ ಹುರಿದ ಬೀಜದಂತಿರಬೇಕು.
ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು
ಅನುಭಾವಿಯಾದಡೆ ದಗ್ಧ ಪಟದಂತಿರಬೇಕು
ಅನುಭಾವಿಯಾದಡೆ ದರ್ಪಣದೊಳಗಣ ಪ್ರತಿಬಿಂಬದಂತಿರಬೇಕು
ಅನುಭಾವಿಯಾದಡೆ ಕಡೆದಿಳುಹಿದ ಕಪ್ಪುರದ ಪುತ್ಥಳಿಯಂತಿರಬೇಕು
ಇಂತಪ್ಪ ವ ಹಾನುಭಾವಿಗಳು ಆವ ಲೋಕದೊಳಗೂ
ಅಪೂರ್ವವಯ್ಯ ಅಖಂಡೇಶ್ವರಾ

ಲಿಂಗದ ನಡೆ ಲಿಂಗದ ನುಡಿ
ಲಿಂಗದ ನೋಟ ಲಿಂಗದ ಬೇಟ ಲಿಂಗದ ಕೂಟ
ಲಿಂಗದಲ್ಲಿ ಮನವಡಗಿರ್ದ ಲಿಂಗಾನುಭಾವಿಗಳ
ಸಂಗದಲ್ಲಿರಿಸಿ ಸಲುಹಯ್ಯ ಎನ್ನ ಅಖಂಡೇಶ್ವರಾ

## ಸರ್ವಾಂಗದಲ್ಲಿ ಸರ್ವಾಚಾರವನ್ನು ನೆಲೆಗೊಳಿಸುವುದು.

ಕಾಯಜೀವದ ಕೀಲವನರಿದು ಜನನ ಮರಣಂಗಳಾಯಾಸವಳಿದು
ಅಂಗ ಲಿಂಗದೊಳಗೆ ಏಕಾರ್ಥವ ಮಾಡುವ
ಭೇದವೆಂತೆಂದಡೆ

ಪಂಚಭೂತಂಗಳ ಪೂರ್ವಾಶ್ರಯವನಳಿದು
ಪಂಚಕರಣಂಗಳ ಹಂಚುಹರಿಮಾಡಿ
ಕರ್ಮಬುದ್ಧೀಂದ್ರಿಯಂಗಳ ಮರ್ದಿಸಿ
ದಶವಾಯುಗಳ ಹಸಗೆಡಿಸಿ
ಕರಣಚತುಷ್ಟಯಂಗಳ ಕಾಲಮುರಿದು

ಹತ್ತುನಾಡಿಗಳ ಏಕೀಕರಿಸಿ
ಅಷ್ಟತನು ಅಷ್ಟಾತ್ಮಗಳ ನಷ್ಟಮಾಡಿ
ಅಂತರಂಗದ ಅಷ್ಟಮದಂಗಳ ಸಂಹರಿಸಿ
ಬಹಿರಂಗ ಅಷ್ಟಮದಂಗಳ ಬಾಯಟೊಣೆದು
ಅಷ್ಟಮೂರ್ತಿಮದಂಗಳ ಹಿಟ್ಟುಗುಟ್ಟಿ
ಸಪ್ತಧಾತು ಸಪ್ತವ್ಯಸನಂಗಳ ಸಣ್ಣಿಸಿ
ಷಡೂರ್ಮಿ ಷಡ್ವರ್ಗಂಗಳ ಕೆಡೆಮೆಟ್ಟಿ
ಷಡ್ಭ್ರಮೆ ಷಡ್ಭಾವ ವಿಕಾರಂಗಳ ಗಂಟು ಸಡಲಿಸಿ
ಪಂಚಕೋಶ ಪಂಚಕ್ಲೇಶಂಗಳ ಪರಿಹರಿಸಿ
ಅಂಗ ಚತುಷ್ಟಯಂಗಳ ಶೃಂಗಾರವಳಿದು
ಗುಣತ್ರಯಂಗಳ ಗೂಡನುಚ್ಚಿ
ಅಹಂಕಾರತ್ರಯಂಗಳ ಶಂಕೆಗೊಳಗುಮಾಡಿ
ತಾಪತ್ರಯಂಗಳ ತಲ್ಲಣಗೊಳಿಸಿ
ತನುತ್ರಯಂಗಳ ತರಹರಮಾಡಿ
ಜೀವತ್ರಯಂಗಳ ಜೀರ್ಣೀಕರಿಸಿ,
ಆತ್ಮತ್ರಯಂಗಳ ಧಾತುಗೆಡಿಸಿ
ಅವಸ್ಥಾತ್ರಯಂಗಳ ಅವಗುಣವಳಿದು
ತ್ರಿದೋಷಂಗಳ ಪಲ್ಲಟಗೊಳಿಸಿ
ಭಾವತ್ರಯಂಗಳ ಬಣ್ಣಗೆಡಿಸಿ
ಮಥಾವ ತ್ರಯಂಗಳ ದೂರಮಾಡಿ
ಮಲತ್ರಯಂಗಳ ಮರ್ದನಮಾಡಿ
ತ್ರಿಕರಣಂಗಳ ಛಿದ್ರಗೊಳಿಸಿ
ಪಂಚಾಗ್ನಿಗಳ ಸಂಚಲವನತಿಗಳೆದು
ಇಂತಿ ಅಂಗ ಪ್ರಕೃತಿ ಗುಣಗಳೆಲ್ಲ ನಷ್ಟವಾಗಿ
ಸರ್ವಾಂಗದಲ್ಲಿ ಸದಾಚಾರ ನೆಲೆಗೊಂಡು

## ಷಡ್ವಿಧ ಲಿಂಗವನ್ನು ಸಾಧಿಸುವುದು

ಬಹಿರಂಗದ ಮೇಲಿದ್ದ ಇಷ್ಟಲಿಂಗದಲ್ಲಿ
ಸೃಷ್ಟಿಕಾಭಾವವಿಂಬುಗೊಂಡು

ಅನಿಮಿಷದೃಷ್ಟಿ ಅಚಲಿತವಾಗಿ ಬಲಿದು
ಆ ಲಿಂಗವು ಅಂತರಂಗಕ್ಕೆ ವೇಧಿಸಿ
ಪ್ರಾಣಲಿಂಗವೆನಿಸಿಕೊಂಡು
ಷಡಾಧಾರಚಕ್ರಂಗಳಲ್ಲಿ
ಷಡ್ವಿಧ ಲಿಂಗವಾಗಿ ನೆಲೆಗೊಂಬುದು
ಆ ಷಡ್ವಿಧ ಲಿಂಗಕ್ಕೆ ಷಡಿಂದ್ರಿಯಗಳನೆ
ಷಡ್ವಿಧ ಮುಖಂಗಳೆನಿಸಿ
ಆ ಷಡ್ವಿಧ ಮುಖಂಗಳಿಗೆ ಷಡ್ವಿಧ ವಿಷಯಂಗಳನೆ
ಷಡ್ವಿಧ ದ್ರವ್ಯ ಪದಾರ್ಥವೆನಿಸಿ
ಆ ಪದಾರ್ಥಂಗಳು ಷಡ್ವಿಧ ಲಿಂಗಕ್ಕೆ
ಷಡ್ವಿಧ ಭಕ್ತಿಯಿಂದೈಕ್ಯಸಮರ್ಪಿತವಾಗಲು
ಅಂಗವೆಂಬ ಕುರುಹು ಅಡಗಿ ಒಳಹೊರಗೆಲ್ಲ
ಮಹಾಘನಲಿಂಗದ ದಿವ್ಯ ಪ್ರಕಾಶವೆ
ತುಂಬಿ ತೊಳಗಿ ಬೆಳಗುತ್ತಿಪ್ಪುದು

## ಪಿಂಡ ಬ್ರಹ್ಮಾಂಡಗಳು ಏಕವಾಗುವುದು

ಇಂತಪ್ಪ ಘನಲಿಂಗದ ಬೆಳಗನೊಳಗೊಂಡಿಪ್ಪ
ಚಿದಂಗವೆ ಚಿತ್ಪಿಂಡವೆನಿಸಿತ್ತು
ಇಂತಪ್ಪ ಅತಿಸೂಕ್ಷ್ಮವಾದ ಚಿತ್ಪಿಂಡ ವಿಸ್ತಾರವನು
ಚಿದ್ಬ್ರಹ್ಮಾಂಡದ ಅತಿಬಾಹುಲ್ಯವನು
ಆ ಚಿತ್ಪಿಂಡದಲ್ಲಿ ವೇಧಿಸಿಕೊಂಡು
'ಪಿಂಡಬ್ರಹ್ಮಾಂಡಯೋರೈಕ್ಯಂ' ಎಂಬ ಶ್ರುತಿ ಪ್ರಮಾಣದಿಂದ
ಆ ಪಿಂಡಬ್ರಹ್ಮಾಂಡಗಳು ಒಂದೇ ಎಂದು ಕಂಡು
ಆ ಪಿಂಡಬ್ರಹ್ಮಾಂಡಗಳಿಗೆ ತಾನೇ ಆಧಾರವೆಂದು ತಿಳಿದು
ಆ ಪಿಂಡಬ್ರಹ್ಮಾಂಡಗಳ ತನ್ನ ಮನದ ಕೊನೆಯಲ್ಲಿ ಅಡಗಿಸಿ
ಆ ಮನವ ಭಾವದ ಕೊನೆಯಲ್ಲಿ ಅಡಗಿಸಿ
ಆ ಭಾವವ ಜ್ಞಾನದ ಕೊನೆಯಲ್ಲಿ ಅಡಗಿಸಿ
ಆ ಜ್ಞಾನವ ಮಹಾ ಜ್ಞಾನದಲ್ಲಿ ಅಡಗಿಸಿ

ಆ ಮಹಾ ಜ್ಞಾನವನು ಪರಾತ್ಪರವಾದ
ಪರಿಪೂರ್ಣ ಬ್ರಹ್ಮದಲ್ಲಿ ಅಡಗಿಸಿ
ಆ ಬ್ರಹ್ಮವೆ ತಾನಾದ ಶರಣಂಗೆ ದೇಹಭಾವವಿಲ್ಲ
ಆ ದೇಹಭಾವವಿಲ್ಲವಾಗಿ ಜೀವಭಾವವಿಲ್ಲ
ಆ ಜೀವಭಾವವಿಲ್ಲವಾಗಿ ಫಲಪದದ ಹಂಗಿಲ್ಲ
ಫಲಪದದ ಹಂಗಿಲ್ಲವಾಗಿ ಭವಬಂಧನಂಗಳು ಮುನ್ನವೆ ಇಲ್ಲ
ಭವಬಂಧನಂಗಳು ಇಲ್ಲವಾಗಿ
ಆ ಶರಣನು ತಾನು ಎಂತಿರ್ದಂತೆ ಪರಬ್ರಹ್ಮವೆ ಆಗಿ
ಆತನ ಹೃದಯಾಕಾಶವು ಬಚ್ಚಬರಿಯ ಬಯಲನೈದಿಪ್ಪುದು
ಇದು ಕಾರಣ
ಆ ಶರಣನು ದೇಹವಿದ್ದು ಸುಟ್ಟ ಸರವಿಯಂತೆ
ನಿರ್ದೇಹಿಯಾದ ಕಾರಣ
ಉಪಮಾತೀತ ವಾಙ್ಮನಕ್ಕಗೋಚರನಾಗಿಪ್ಪನಯ್ಯ
ಅಖಂಡೇಶ್ವರಾ

## ಪ್ರಾಣಲಿಂಗಿಯ ಇರವು

ಪರಾತ್ಪರ ವಸ್ತುವನೊಡಗೂಡಿದ ಪ್ರಾಣಲಿಂಗಿಯು
ಒಡಲ ಬೆಳಗಿನ ಗಡಣವೆಂತಿಪ್ಪುದೆಂದಡೆ
ಸ್ಫಟಿಕದ ಘಟದೊಳಗೆ ಜ್ಯೋತಿಯನಿರಿಸಿದಂತೆ
ಕತ್ತಲೆಯ ಮನೆಯಲ್ಲಿ ರತ್ನವ ಹರಹಿದಂತೆ
ಸ್ವರ್ಣದ ಗಿರಿಗೆ ರವಿಕೋಟಿ ಕಿರಣಂಗಳು ಮುಸುಕಿದಂತೆ
ಬೆಳಗು ಹಳಚಿದ ಮಹಾಬೆಳಗಿನೊಬ್ಬುಳಿಯನೊಳಕೊಂಡು
ಘನಗಂಭೀರವಾದ ಪ್ರಾಣಲಿಂಗಿಗಳ ಪಾದಕಮಲವಲ್ಲಿ
ಸವಮುಲ ತುಂಬಿಯಾಗಿರ್ಪೆನಯ್ಯ ಅಖಂಡೇಶ್ವರಾ

ಚಿತ್ತ ನಿರ್ಮಲವಾದಾತ್ಮನು ಭಕ್ತಿಯಿಂದೆ
ಸತ್ಯಶರಣರಲ್ಲಿ ತತ್ತ್ವಾನುಭಾವವ ಬೆಸಗೊಂಡಡೆ
ನಿತ್ಯ ಶಿವಪದ ಘಟಿಸುವುದಯ್ಯ ಅಖಂಡೇಶ್ವರಾ

ಸರ್ವಜ್ಞನು ನೀನೆ ಅಯ್ಯ
ಸರ್ವೇಶ್ವರನು ನೀನೆ ಅಯ್ಯ
ಸರ್ವಾಂತರ್ಯಾಮಿ ನೀನೆ ಅಯ್ಯ
ಸರ್ವಗತನು ನೀನೆ ಅಯ್ಯ
ಸರ್ವಾತ್ಮನು ನೀನೆ ಅಯ್ಯ
ಸರ್ವಕಳಾಭರಿತನು ನೀನೆ ಅಯ್ಯ
ಸರ್ವಗುಣ ಸಂಪನ್ನನು ನೀನೆ ಅಯ್ಯ ಅಖಂಡೇಶ್ವರಾ

ಕುಂಭ ಸಹಸ್ರ ಉದಕದೊಳಗೆ
ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ
ಮತ್ತೆ ಹಲವರುಂಟೆ ಅಯ್ಯ
ಸಕಲ ದೇಹದೊಳಗೆ ಸಂಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ
ಮತ್ತಾರನು ಕಾಣೆನಯ್ಯ ಅಖಂಡೇಶ್ವರಾ

ವಿಶ್ವದೊಳಗೆಲ್ಲ ನೀನೆ ದೇವ
ವಿಶ್ವಭರಿತನು ನೀನೆ ದೇವ
ವಿಶ್ವರೂಪನು ನೀನೆ ದೇವ
ವಿಶ್ವಪತಿ ನೀನೆ ದೇವ
ವಿಶ್ವಾತೀತನು ನೀನೆ ದೇವ ಅಖಂಡೇಶ್ವರಾ

ಸಕಲ ವಿಸ್ತಾರದ ರೂಪು ನಿನ್ನೊಳಗಡಗಿಪ್ಪುದು
ನೀನೆನ್ನ ಮನದಲ್ಲಿ ಅಡಗಿಪ್ಪಿರಿ
ಅದೆಂತೆಂದಡೆ
ಕರಿ ಕಣ್ಣಾಲಿ ( ಕನ್ನಡಿ ) ಯೊಳಗಡಗಿದಂತೆ
ನೀನು ಭಕ್ತಜನಮನೋವಲ್ಲಭನಾದ ಕಾರಣ
ಎನ್ನ ಮನದ ಕೊನೆಯಲ್ಲಿ ಅಡಗಿದ್ದಿರಯ್ಯ ಅಖಂಡೇಶ್ವರಾ

ಪಶ್ಚಿಮದ ಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ
ಸುತ್ತಿ ಮುತ್ತಿದ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ

ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನ ಬೆಳ್ದಿಂಗಳ ತುಂಬಿರುವುದ ಕಂಡೆ
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗಿ
ಹೊಚ್ಚ ಹೊಸ ಗಂಧ ದೆಸೆದೆಸೆಗೆ ಎಸೆದುದ ಕಂಡೆ
ಇಂತಿವರ ಕುಶಲವ ಕಂಡು ಬೆರಗಾದೆನಯ್ಯ ಅಖಂಡೇಶ್ವರಾ

---

# ನಿರ್ಮಲತ್ವ

( ಶ್ರೀ ಘನಮಠದಾರ್ಯರು ಕರ್ನಾಟಕದಲ್ಲಾದ ಮಹದ್ವಿಭೂತಿಗಳಲ್ಲೊಬ್ಬರಾಗಿದ್ದಾರೆ. ಅವರು ಪಾರಮಾರ್ಥ ವಿಷಯವನ್ನು ಬಲ್ಲರಷ್ಟೇ ಅಲ್ಲಿ ಅವರು ಲೌಕಿಕ ವಿಷಯಗಳನ್ನು ಸಹ ಬಲ್ಲವರಿದ್ದಾರೆ. ಲೌಕಿಕ ವಿಷಯಗಳ ಅವರ ವಿಚಾರಗಳು ಶ್ರೇಷ್ಠತರವಾದವುಗಳು. ಲೌಕಿಕದಲ್ಲಿ ಅವರು ಪ್ರಪಂಚವನ್ನು ಹೇಗೆ ನಡಿಸಬೇಕೆಂಬುದನ್ನು ಸಹ ಅವರು ವಿವೇಚಿಸಿದ್ದಾರೆ. ಅವರು ನಿರ್ಮಲತ್ವ ಅಥವಾ ಸ್ವಚ್ಛತೆ ಈ ವಿಷಯವನ್ನು ಕುರಿತು ಅನೇಕ ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ವಾಚಕರು ಅರಿಯುವದು ಅವಶ್ಯವೆಂದು ತೋರಿದ್ದರಿಂದ ಅವುಗಳನ್ನು ಇಲ್ಲಿ ಕೊಟ್ಟಿದ್ದೇವೆ. — ಸಂಪಾದಕ )

## ಲೌಕಿಕಾಚಾರದ ನಿರ್ಮಲತ್ವವು.

ಈ ಪ್ರಕರಣದಲ್ಲಿ ಮೊದಲು ಲೌಕಿಕಾಚಾರದ ವಿಷಯವಾಗಿರುವ ನಿರ್ಮಲತ್ವವನ್ನು ಹೇಳಬೇಕಾಗಿದೆ. ಹೇಗೆಂದರೆ ನಿರ್ಮಲತ್ವವು ಬ್ರಹ್ಮಾಂಡ ಪಿಂಡಾಂಡಗಳೆರಡರಲ್ಲಿಯೂ ಬೇಕಾಗಿದೆ. ಭೂಮಿಯಲ್ಲಿ ಬೆಳೆಯಲ್ಪಟ್ಟ ಸಕಲ ಸಸಿ ವೃಕ್ಷ ಲತಾದಿ ಸಮಸ್ತ ಫಲಪದಾರ್ಥವನೌಷಧಿಗಳಿಗೂ ಧಾನ್ಯಾದಿ ಸಕಲ ಪೈರುಗಳಿಗೂ ನಿರ್ಮಲತ್ವವಿದ್ದಹಾಗೆ ವಿಶೇಷ ಬೆಳೆಯಾಗುವವು. ಹಾಗೆ ಪಿಂಡೋದ್ಭವರಾದ ಸಕಲ ಪ್ರಾಣಿಗಳಿಗೂ ನಿರ್ಮಲತ್ವದಿಂದ ದೇಹಕ್ಕೆ ಆರೋಗ್ಯವಾಗುವದು. ಅದರಲ್ಲಿ ಮನುಷ್ಯರುಗಳಿಗಂತೂ ನಿರ್ಮಲತ್ವವು ಅತ್ಯಂತ ಹಿತವಾದದ್ದು.

ನಮ್ಮ ದೇಶವನ್ನಾಳುವ ವಿಲಾಯತಿ ಧೊರೆಗಳವರ ಮನೆಗಳನ್ನು ಅವರು ಮಲಗುವ ಹಾಸಿಕೆಗಳನ್ನು ಧರಿಸುವ ವಸ್ತ್ರಗಳನ್ನು ಕೂಡ್ರುವ ಸಿಂಹಾಸನಗಳನ್ನು ಮಂಚ ಖುರ್ಚಿ ಮೇಜು ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ. ಅವು ಎಷ್ಟು ಚನ್ನಾಗಿವೆ! ಮತ್ತು ಅವರು ವಿನೋದಾರ್ಥಕ್ಕಾಗಿ ಮಾಡಿಸಿರುವ ತೋಟಗಳನ್ನು ನೋಡಿದರೆ, ನಿರ್ಮಲತನದಿಂದ ಶೃಂಗಾರವಾಗಿ ಶೋಭೆಯಾಗಿ ಹೇಗೆ ರಂಜಿಸುತ್ತಿರುವವು! ಇವರು ನಡೆಯುವಲ್ಲಿ, ನುಡಿಯುವಲ್ಲಿ, ಹಾಗೂ ಇವರ ಸಕಲ ಕಾರ್ಯಗಳಲ್ಲಿ ನಿರ್ಮಲತನವೇ ಪ್ರಕಟವಾಗುವದಲ್ಲದೆ, ಮಲಿನವಣುಮಾತ್ರವೂ ತೋರದು. ಸಮಸ್ತ ಲೋಕಾಚಾರದ ಲೌಕಿಕರಾದ ಗೃಹಸ್ಥರೆಲ್ಲರೂ ಇವರನ್ನು ನೋಡಿ ನಿರ್ಮಲತ್ವವನ್ನು ಕಲಿತುಕೊಳ್ಳಬೇಕು.

ನಮ್ಮ ದೇಶದ ಸ್ತ್ರೀಪುರುಷರಲ್ಲಿ ನಿರ್ಮಲರಾದ ಶುಚಿಗಳು ಬ್ರಾಹ್ಮಣ ಮತ್ತು ಲಿಂಗಾಯತರಲ್ಲಿ ಕೆಲವರುಂಟಲ್ಲದೆ, ಉಳಿದ ಧರ್ಮದ ಸ್ತ್ರೀಪುರುಷರೆಲ್ಲರೂ ಶುಚಿಗಳಲ್ಲವು. ಕೆಲವು ಚಿಕ್ಕ ಹಳ್ಳಿಗಳಲ್ಲಿ ಕೆಲವು ಪಾಮರರ ಗ್ರಾಮಗಳಲ್ಲಿ ಇರುವ ಮನೆಗಳು ಅಮಂಗಲರೂಪವಾಗಿದ್ದು ಆ ಸ್ತ್ರೀಯರುಗಳ ಸಮೀಪದಲ್ಲಿ ನಿಲ್ಲಲಾಗದಂಥ ದುರ್ವಾಸನೆಯು ಇದ್ದು ಅವರ ಶರೀರವೂ ವಸ್ತ್ರಗಳೂ ಮಲಿನವಾಗಿ ಅವರ ವಾಕ್ಯದಲ್ಲಿ ಸ್ವಲ್ಪಾದರೂ ವಿನಯವಿಲ್ಲದೆ ಗಾಂಪರಾಗಿರುವದು. ಅದು ಅವರಿಗೆ ಅಭ್ಯಾಸವಾಗಿ ನಿರ್ಮಲತ್ವದಿಂದಿರುವದಕ್ಕೆ ಬೇಸರಪಡುತ್ತಾರೆ. ಅದರೊಳಗೆ ಈ ದುಷ್ಕಾಲದ ತಾಪದಲ್ಲಂತೂ ನೋಡ ಕೂಡದ ಕುರೂಪಿಗಳಾಗಿದ್ದಾರೆ.

ಇದಲ್ಲದೆ ಕೆಲವು ಸ್ತ್ರೀಪುರುಷರು ಮೈಗಳ್ಳತನದಿಂದ ಆಲಸ್ಯತ್ವದ ಮುಗ್ಗಲತನದಿಂದ ತಮ್ಮ ಸರೀರದಲ್ಲಿ ಧರಿಸತಕ್ಕಂಥ ವಸ್ತ್ರಗಳನ್ನು ನಿತ್ಯದಲ್ಲೂ ತೊಳೆದು ನಿರ್ಮಲಮಾಡಲಾರದೆ, ಒಂದು ವರ್ಷದಲ್ಲಿ ನಾಲ್ಕಾರು ವೇಳೆ ತೊಳೆದರೆ ತೊಳೆಯುವರು, ಇಲ್ಲವಾದರೆ ಇಲ್ಲೇ ಇಲ್ಲ. ಇಂಥ ಮಲಿನ ವಸ್ತ್ರಗಳನ್ನು ಧರಿಸುವಲ್ಲಿ ಮೈಬೆವರಿನ ಮಲಿನತ್ವದಿಂದ ದುರ್ವಾಸನೆಯಾಗಿ ಆ ವಸ್ತ್ರಗಳಲ್ಲಿ ಕೂರಿಗಳೆಂಬ ಒಂದು ಪ್ರಕಾರದ ಚಿಕ್ಕ ಹುಳಗಳು ಹುಟ್ಟಿ ಜಾಡಿಸಿದರೆ, ಎಳ್ಳು ಉದುರಿದಹಾಗೆ ಉದುರುತ್ತಿದ್ದು ಯಾವಾಗಲೂ ಅವು ಅವರ ಶರೀರವನ್ನು ರಕ್ತಪಾನ ಮಾಡುತ್ತ ಹಗಲು

ರಾತ್ರಿಯಲ್ಲಿ ಉಪದ್ರವ ಕೊಟ್ಟರೂ ಕೆರಕೊಂಬುತ್ತ ತಿರುಗುವರಲ್ಲದೆ ವಸ್ತ್ರಗಳನ್ನು ತೊಳೆದು ನಿರ್ಮಲ ಮಾಡಿಕೊಳ್ಳಲಾರರು.

ವೈಗಳ್ಯರಾದ ಸ್ತ್ರೀಯರು ಸ್ವಚ್ಛವಾಗಿ ತಲೆಯ ಕೂದಲುಗಳಿಗೆ ಆಗಾಗ್ಗೆ ಎಣ್ಣೆಯನ್ನು ಹಚ್ಚಿ ಬಿಸಿನೀರಿನಿಂದ ಎಣ್ಣೆ ವಾಸನೆ ಹೋಗುವಂತೆ ಸೀಗೇಕಾಯಿ ಹುಳಿ ನೀರನ್ನು ಹಚ್ಚಿ ಜಳಜಳವಾಗುವಹಾಗೆ ತೊಳೆದು ನೀರು ಎರೆದುಕೊಳ್ಳಲಾರದೆ ಮಸ್ತಕವು ಮಲಿನವಾಗಿ ತಲೆಯ ಬೆವರಿನಿಂದ ಚಿಕ್ಕ ಹೇನುಗಳೆಂಬ ಹುಳಗಳು ಹುಟ್ಟಿ ತಲೆಯನ್ನು ಕಚ್ಚುವದರಿಂದ ಕೆರೆದುಕೊಂಡು ಹುಣ್ಣು ಬಿದ್ದಾಗ್ಯಾದರೂ ಎರೆದುಕೊಳ್ಳಲಾರರು. ಮತ್ತು ಕೂರಿಗಳ ಉಪದ್ರವಕ್ಕಂತೂ ಅವರಿಗೆ ಲಕ್ಷ್ಯೇ ಇಲ್ಲ.

ಮನೆಗಳ ವಿಷಯವಾಗಿ ಸ್ವಲ್ಪ ಹೇಳುತ್ತೇನೆ. ಹೇಗೆಂದರೆ ನಿತ್ಯದಲ್ಲಿ ಚನ್ನಾಗಿ ಕಸವನ್ನು ಹೊಡೆಯಲಾರದೆ ಮತ್ತು ಉಳಿದ ಕಸವನ್ನಾದರೂ ಮನೆಯಲ್ಲಿ ಒತ್ತಟ್ಟಿಗೆ ಒಂದು ಮೂಲೆಯಲ್ಲಿ ನೂಕುತ್ತಾರೇ ಹೊರತು ದೂರ ಒಯ್ದು ಹಾಕಲಾರರು. ಹೀಗೆ ಹತ್ತೆಂಟು ದಿವಸ ಮಾಡುವಷ್ಟರಲ್ಲಿ ಆ ಕಸದ ಮಲಿನದಲ್ಲಿ ಚಿಕ್ಕಾಡುಗಳೆಂಬ ಪಕ್ಕದ ಹುಳಗಳು ರಾಶಿರಾಶಿಯಾಗಿ ಹುಟ್ಟಿ ಮನೆಯಲ್ಲೆಲ್ಲ ತುಂಬಿಕೊಂಡು ವಸ್ತ್ರಗಳಲ್ಲಿ ಹೊಕ್ಕು ಹಗಲೂ ರಾತ್ರಿಯಲ್ಲಿ ಸಹ ಕಡಿದು ರಕ್ತಪಾನ ಮಾಡುತ್ತವೆ. ಈ ಹುಳಗಳು ಸಣ್ಣವಾದರೂ ಉಪದ್ರವ ಬಹಳ. ಅವು ಕೈಗೆ ಸಿಕ್ಕುವದಿಲ್ಲ. ಸಿಕ್ಕ ಕಾಲಕ್ಕಾದರೂ ಅವುಗಳ ಶರೀರಗಳು ಬಿರುಸಾಗಿರುವದರಿಂದ ಅವು ಬೇಗ ಸಾಯುವದಿಲ್ಲ.

ಕೆಲವು ಸ್ತ್ರೀಯರಿಗೆ ಅಡಿಗೆಯ ಮನೆಯ ಬಚ್ಚಲದಲ್ಲಿ ಮೂತ್ರ ಗೈಯ್ಯುವ ರೂಢಿ ಇರುವದರಿಂದ ಮೂತ್ರದ ದುರ್ವಾಸನೆಗೆ ಕುದುರೆಯ ಮೋತಿಯ ಹುಳುಗಳೆಂಬ ಆರು ಕಾಲಿನ ಉದ್ದವಾದ ಸೂಜಿಯಂಥ ಚುಂಚುಗಳುಳ್ಳ ಪಕ್ಕದ ಹುಳುಗಳು ಹುಟ್ಟಿ ಕಡಿಯಲಾರಂಭಿಸಿದರೆ, ಸರ್ವಾಂಗದಲ್ಲಿ ಸೂಜಿಯನ್ನು ಚುಚ್ಚಿದಂತಾಗುವದು. ಎಲ್ಲ ಹುಳುಗಳ ಉಪದ್ರವಕ್ಕಿಂತಲೂ ಈ ಹುಳಗಳ ಉಪದ್ರವವು ಬಹಳ.

ಮನೆಯ ಅಂಗಳಲ್ಲಿ ಮತ್ತು ಮನೆಯ ಸಮೀಪಕ್ಕೆ ಹೊಂದಿ ಹಿಂಭಾಗದ ಹಿತ್ತಲುಗಳಲ್ಲಿ ಮಲವಿಸರ್ಜನೆ ಮಾಡುವದರಿಂದ ಅದರ ದುರ್ವಾ

ಸನೆಗೆ ಸೊಳ್ಳೆಗಳೆಂಬ ಅತಿ ಸಣ್ಣ ಪಕ್ಕದ ಹುಳಗಳು ಹುಟ್ಟಿ ಮನೆಯಲ್ಲಿ ಸೇರಿಕೊಂಡಿದ್ದು ಕಣ್ಣು ತೆರೆದಃಕ್ಷಣಕ್ಕೆ ಕಣ್ಣಿಗೆ ಮುತ್ತಿಕೊಂಡು ಕಡಿಯುತ್ತವೆ.

ಇದಲ್ಲದೆ ವರ್ಷದಲ್ಲಿ ಒಂದೆರಡು ವೇಳೆಯಾದರೂ ಮನೆಯನ್ನು ಗೋಡೆಯನ್ನು ಸಾರಿಸಿ ನಿರ್ಮಲ ಮಾಡದೆ, ಮತ್ತು ಆಗಿಂದಾಗಲೆ ಗೋಡೆಯ ಮೇಲಿರುವ ಧೂಳವನ್ನು ಹೊಡೆಯದೆ ಇರುವದರಿಂದ ತ್ರಿಗುಣಿ ಎಂಬ ಹುಳಗಳು ಹುಟ್ಟುತ್ತವೆ. ಈ ಹುಳಗಳಿಗೆ ಮೂರು ಗುಣಗಳುಂಟು. ಮೂಗನ್ನು ಊರುವದು, ರಕ್ತವನ್ನು ಹೀರುವದು, ತೀವ್ರವೇ ಜಾರುವದು ಈ ಪ್ರಕಾರದ ಮೂರು ಗುಣಗಳಿರುವದರಿಂದ ಈ ಹುಳಗಳಿಗೆ ತ್ರಿಗುಣಿ ಎಂಬ ಹೆಸರಾಗಿದೆ. ಈ ಶಬ್ದ ಕೆಟ್ಟು ತಗಣಿ ಎನ್ನುತ್ತಾರೆ. ಮನೆಯಲ್ಲಿ ಇದೊಂದು ಇದ್ದರೆ, ದಿನ ಒಂದಕ್ಕೆ ಸಾವಿರ ಮಕ್ಕಳನ್ನು ಹಡೆಯುತ್ತದೆ. ಕೆಲವು ದಿವಸಕ್ಕೆ ಅವುಗಳು ಪ್ರಬಲವಾಗಿ ಗೋಡೆಗಳಲ್ಲಿ ಕಂಬದ ಬಿರುಕುಗಳಲ್ಲಿ ಧರಿಸುವ ವಸ್ತ್ರಗಳಲ್ಲಿ ಮಲಗುವ ಹಾಸಿಗೆಯಲ್ಲಿ ಮನೆಯ ಜಂತಗಳಲ್ಲಿ ಸಹ ಸೇರಿಕೊಂಡು ರಾತ್ರಿ ಹಗಲೂ ಕಡಿಯುತ್ತಿರುವವು. ರಾತ್ರಿಯಲ್ಲಿ ನಿದ್ರಾಸಮಯಕ್ಕೆ ಬಂದು ಶರೀರವನ್ನು ಮುತ್ತಿಕೊಂಡು ಕಡಿಯಲಾರಂಭಿಸಿದರೆ, ಶರೀರಕ್ಕೆ ಬೆಂಕಿ ಹಚ್ಚಿದಂತಾಗುವದು.

ಇವೆಲ್ಲದರಕ್ಕಿಂತ ಮಲಿನತ್ವದಿಂದ ಇನ್ನೊಂದು ದೊಡ್ಡ ಅನರ್ಥವುಂಟು. ಅದೇನಂದರೆ, ಮನೆಯ ಸಮೀಪದಲ್ಲಿ ತಿಪ್ಪೆಯನ್ನು ಹಾಕಿದ್ದರೆ, ಮತ್ತು ಬಚ್ಚಲದ ನೀರು ನಿಲ್ಲುವಹಾಗೆ ಮಾಡಿದ್ದರೆ, ಇವುಗಳ ದುರ್ವಾಸನೆಯು ಮೂಗಿನ ಶ್ವಾಸ ಮುಖದಿಂದ ಮಸ್ತಕದ ಮಿದುಳು ಕೆಟ್ಟು ಹೊಟ್ಟೆಯಲ್ಲಿ ನಾಭಿ ಸೂತ್ರ ನಾಡಿಗಿಳಿಯುತ್ತದೆ. ಇದರಿಂದ ಒಂದು ಪ್ರಕಾರದ ಹುಳಗಳು ಹುಟ್ಟುವವು. ಈ ರೋಗಕ್ಕೆ ಮಾರೀ ಉಪದ್ರವವೆನ್ನುತ್ತಾರೆ. ಈ ರೋಗವು ಊರೊಳಗೆ ಒಬ್ಬನಿಗೆ ಹುಟ್ಟಿದರೆ ಸಾಕು, ಅದು ಹಬ್ಬುತ್ತದೆ. ಅವನು ಮಲಮೂತ್ರ ವಿಸರ್ಜನೆ ಮಾಡಿದಲ್ಲಿ ಅಥವಾ ಅವನ ಬಾಯಿಯ ಮಾಂತಿಯಲ್ಲಿರುವ ಸೊಂಕು ತಾಕಿದರೆ ಸಾಕು, ಈ ರೋಗ ಹಬ್ಬುತ್ತದೆ. ಹೀಗಾಗಿ ಒಂದೊಂದು ದೊಡ್ಡ ಗ್ರಾಮದಲ್ಲಿ ಸಹ ಸ್ರಾವಧಿ ಜನರು ಮರಣಹೊಂದುತ್ತಾರೆ.

ಇವುಗಳೆಲ್ಲ ಮಲಿನದಿಂದಾದ ಅನರ್ಥಂಗಳು. ಇಷ್ಟು ಉಪದ್ರವಗಳು ಶರೀರಕ್ಕೆ ಇದ್ದಾಗ್ಯಾದರೂ ಜನರು ಅಜ್ಞಾನಿಗಳಾದ ಕಾರಣ ನಿರ್ಮಲರಾಗಿರಬೇಕೆಂಬ ಬುದ್ಧಿಯೂ ಹುಟ್ಟದೇ ಹೋಗುತ್ತದೆ.

ರಾಜರುಗಳು ಇವರ ಹೊಲಸುತನವನ್ನು ಲಕ್ಷಕ್ಕೆ ತಾರದೆ, ಇವುಗಳಿಗೇನಾದರೂ ಉಪಾಯುಗಳನ್ನು ಮಾಡದೇ ಹೋದರೆ, ಜನರಿಗೆ ಎಂದಿಗೂ ಬುದ್ಧಿ ಬರುವದಿಲ್ಲ. ಇವರಿಗೆ ನಿರ್ಮಲತನದ ರುಚಿಯು ಹುಟ್ಟುವದಿಲ್ಲ.

ಇಷ್ಟು ಪ್ರಕಾರದ ಉಪದ್ರವವಾದ ಕಾಲಕ್ಕೂ ನಿರ್ಮಲತನದ ಸುಖವು ಮಲಿನತ್ವದ ದುಃಖವು ಇವರಿಗೆ ತಿಳಿಯದೆ ಹೋಯಿತು! ಇಂಥ ಮೂರ್ಖರನ್ನಾದರೂ ವಿವೇಕಕ್ಕೆ ತರುವ ವಿಷಯದಲ್ಲಿ ನಮ್ಮ ರಾಜ ಪ್ರಭುಗಳು ಸಾಮರ್ಥ್ಯವುಳ್ಳವರಿದ್ದಾರೆ. ಅವರು ಲಕ್ಷಹಾಕದ ಕಾರಣ ಉಳಿದಿರುವದು. ಸ್ವಲ್ಪ ಲಕ್ಷಹಾಕಿದರೆ ಸಾಕು, ಅವರಿಗಿದೇನೂ ಆಶ್ಚರ್ಯವಲ್ಲ. ಹೀಗೆ ರಾಜರು ಬಲಾತ್ಕಾರದಿಂದಾದರೂ ಮಲಿನತ್ವದ ಜಾಡ್ಯ ಗುಣವನ್ನು ಬಿಡಿಸಿದರೆ ದೋಷವಿಲ್ಲ.

ಈ ನಿರ್ಮಲತನದ ವಿಷಯಕ್ಕೆ ಕಾಯಿದೆಯ ಬುಕ್ಕಿನಲ್ಲಿ ಒಂದು ಕ್ಯಾಕ್ಟನ್ನು ಮಾಡಿದರೆ ಸಾಕು. ತತ್ಕಾಲಕ್ಕೆ ದೇಶವೆಲ್ಲ ನಿರ್ಮಲತನದಿಂದ ಸುಧಾರಿಸುವದಾಗಿ ಸರ್ವರಿಗೂ ಸುಖವಾಗುವದು.

ಶರೀರಾದಿ ಸಕಲ ವಸ್ತುಗಳನ್ನು ನಿರ್ಮಲ ಮಾಡುವದಕ್ಕೆ ಜಲವೇ ಮುಖ್ಯ ಸಾಧನವು. ಅದು ಕಾರಣ ಜಲವೆಂಬುದು ಜೀವನೋಪಾಯಕ್ಕೆ ಜೀವನವಾದ ಕಾರಣ ಜೀವನವೆಂಬ ನಾಮವು ಸಾರ್ಥಕವಾಗಿದೆ. ಈ ಜಲವೇ ಕೆಟ್ಟು ಅಪವಿತ್ರವಾಗಿ ಮಲಿನಾದಿ ದೋಷಗಳನ್ನು ಹೊಂದಿದರೆ, ವಿಷವಾಗಿ ಒಪ್ಪುತ್ತಿಹುದಾಗಿ ಕೋಶಕಾರನು ಜಲವನ್ನು ವರ್ಣಿಸಿದ್ದೇನಂದರೆ, "ನೀರಂ ಜೀವನಂ ವಿಷಂ ಕೀಲಾಲಂ ಅಮೃತಂ ಪಯಃ" ಎಂದು ಹೇಳಿದ್ದಾನೆ. ಇದಲ್ಲದೆ "ಜೀವನಂ ಸರ್ವ ಜಂತೂನಾಂ ಮಹಾದೇವ ಜಟಾನಿಧೇ" ಎಂದುಂಟಾಗಿ ಜಲವೇ ಜೀವನಕ್ಕೆ ಜೀವನ ಎಂದುದರಿಂದ ಬಲ್ಲವರುಗಳೆಲ್ಲರು ನಿರ್ಮಲ ಜಲದಿಂದಲೇ ಸಕಲಭೋಗ ಪದಾರ್ಥಗಳನ್ನು ನಿರ್ಮಲ ಮಾಡಿ ಮತ್ತು ನಿರ್ಮಲ ಜಲದಿಂದಲೇ ಸ್ನಾನ ಪಾನಾದಿ ಪಾಕ ಪ್ರಯ

ತ್ನಂಗಳನ್ನು ಮಾಡಬೇಕು. ಅಪವಿತ್ರವಾದ ಮಲಿನ ಜಲವನ್ನೂ ದೋಷಾರೋಪಣ ಜಲವನ್ನೂ ಮುಟ್ಟಲಾಗದು. ಜಲವನ್ನು ಶೋಧಿಸಿದರೆ ಉದಕವೆನಿಸುವದು. ಸದಾಚಾರಿಗಳು ಶೋಧಿಸದೆ ಇದ್ದ ಜಲವನ್ನು ಯಾವ ಕೆಲಸಕ್ಕೂ ತೆಗೆದುಕೊಳ್ಳಬಾರದು.

"ಯಾವನ್ಮಾತ್ರ, ಮನಃಶ್ಶುದ್ಧಿಃ ತಾವಾತ್ ಶೌಚಂ ಸಮಾಚರೇತ್" ಇದು ಶ್ರುತ್ಯಾಚಾರವು. ಹೇಗಂದರೆ ಎಲ್ಲಿಯ ವರೆಗೆ ಮನಃ ಶುದ್ಧಿ ಹೊಂದುವದೋ ಅಲ್ಲಿಯ ವರೆಗೂ ಶುಚಿ ಮಾಡಬೇಕು. ಹೀಗೆ ಈ ಅರ್ಥವಿರುವದರಿಂದ ಕೆಲವರು ಫ್ರೆಂಚ ದೇಶದ ಸನ್ಯಾಸಿಗಳ ಬೋಧೆಯ ಸಂತತಿಯವರು ಲೋಕಾಚಾರದಂತೆ ಮಾಡಿ ಉಂಬುವದಾಗಿದೆ, ವೈಗಸ್ಪತನದಿಂದ ಮತ್ತು ವಿಷಯ ವ್ಯಸನಾದಿಗಳ ಲಂಪಟತ್ವದಿಂದ ಸುರಾಪಾನ ಮಾಂಸಾಹಾರಾದಿಗಳ ರುಚಿಯಿಂದ ಬಯಲೇ ಬ್ರಹ್ಮವೆಂಬ ಉಭಯ ಭ್ರಷ್ಟತ್ವದ ಕೆಲವು ಮಾತುಗಳನ್ನು ಕಲಿತು ಶುಚಿಗಳಾದವರನ್ನು ಧಿಃಕ್ಕರಿಸುತ್ತ ಭಂಗಿ ದತ್ತೂರಿಯ ಅಮಲಿನಿಂದ ಪದಗಳನ್ನು ಹಾಡುತ್ತಾರೆ. ಹೇಗೆಂದರೆ " ಮುಟ್ಟೀ ಮುಟ್ಟೀ ಎಂದು ಮೂರು ಮಾರು ಹಾರುತೀದಿ. ಮುಟ್ಟಿನೊಳಗೆ ಹುಟ್ಟಿ ಬಂತ್ಯೋ ಪಿಕನಾಸಿ" ಎಂದು ಶ್ರುತ್ಯಾಚಾರ ಮತು ವೇದೋಕ್ತ ಧರ್ಮಾಚಾರಕ್ಕೆ ವಿರುದ್ಧವಾದ ಪದಗಳನ್ನು ಬಾಯಿಗೆ ಬಂದಂತೆ ಲಕ್ಷಣ ಹೀನವಾಗಿ ಕೂಗುತ್ತ ಬತ್ತಲೆ ಇದ್ದು ಶ್ವಪಚಾದಿಯಾಗಿ ಸರ್ವರಲ್ಲಿ ತಿರಿದುಂಬುತ್ತ ಬೋಕಿಯಲ್ಲಿ ಉಂಬುತ್ತ "ನಾವು ಅದ್ವೈತಿಗಳು ಆರೂಢರು, ಬ್ರಹ್ಮಜ್ಞಾನಿಗಳು" ಎಂದು ಬಿಂಕದ ಮಾತುಗಳನ್ನಾಡುತ್ತ ತಿಪ್ಪೆಯಲ್ಲಿ ಅಮಲೇರಿ ಹೊರಳಾಡುತ್ತ ಜನರಿಗೆ ದುರ್ಬೋಧೆಯನ್ನು ಬೋಧಿಸುತ್ತ, " ತಾನು ಕೆಟ್ಟ ಕೋತಿ ವನವ ಕೆಡಿಸಿತ್ತು " ಎಂಬ ಗಾದೆಯಂತೆ ಅನಂತ ದುರ್ನಡತೆಗಳಿಂದ ನಡೆಯುತ್ತ ಶ್ರುತ್ಯಾಚಾರವುಳ್ಳ ಆಚಾರವಂತರಾದ ಶುಚಿಗಳನ್ನು ಧಿಃಕ್ಕಾರ ಮಾಡುತ್ತ ಶ್ವಪಚಾರಿಗಳಾದ ಮಾದಿಗರ ಅಭ್ಯಾಸದ ಕೆಲವು ಅದ್ವೈತಿಗಳು ಅನಾಚಾರಿಗಳಾಗಿ ವರ್ತಿಸುವರು.

ನಾನು ನೋಡುವವರಲ್ಲಿ ಇಂಥ ಆರೂಢರು ಅನೇಕರು ದೇದದಲ್ಲಿ ಹುಳಗಳು ಬಿದ್ದು ಒರಲಿ ಸತ್ತು ಹೋದರು. ಬನ್ನೂರೆಂಬ ಗ್ರಾಮದ ಪೇಟೆಯಲ್ಲಿ ಒಬ್ಬನು ದಿಗಂಬರನಾಗಿ ಬಂದು ಬೀದಿಯಲ್ಲಿ ಕೆಲವು ಹೊತ್ತು ಮಲಗಿದ್ದು ಆ ಮೇಲೆ ಎದ್ದು ಕುಳಿತು ಬಚ್ಚಲದ ನೀರ ಡೋಣಿಯಲ್ಲಿಯ

ನೀರನ್ನು ಬೊಗಸೆಯಲ್ಲಿ ತುಂಬಿ ಕುಡಿಯುತ್ತಿದ್ದನು. ಅಷ್ಟರಲ್ಲಿ ಒಬ್ಬ ಉತ್ತಮ ಸ್ತ್ರೀಯಳು ಕಂಡು “ಆ ಉದಕ ನಾರುತ್ತದೆ. ತಡೋ ನೀರು ಹಾಕುವೆನು. ಆ ನೀರು ಕುಡಿಯಬೇಕ” ಎಂದು ಹೇಳಿದಾಗ್ಯಾದರೂ ಅದೇ ನೀರು ಕುಡಿದು ಆ ಸ್ತ್ರೀಯಳಿಗೆಂದದ್ದೇನೆಂದರೆ, “ಇದು ಮಹಾ ಗಂಗಾ ಜಲವು. ನಾರುವದುಂಟೇ? ನಿನ್ನ ಪೃಷ್ಠದಲ್ಲಿ ಬೆರಳಿಟ್ಟು ನೋಡು ನಾರುತ್ತದೆ” ಎಂದನು. ಆಗ ಅಲ್ಲಿದ್ದವರೆಲ್ಲರೂ ಸುತ್ತಲೂ ನೆರೆದು ನೀನು ಎಲ್ಲಿಂದ ಬಂದಿ ಎಂದು ಕೇಳಲಾಗಿ ಮಾಣೀದ್ವಾರದಿಂದ ಬಂದೆನೆಂದು ಹೇಳಿ ಆ ಸ್ಥಳವನ್ನು ಬಿಟ್ಟು ಗುಡ್ಡಕ್ಕೆ ಹೋದನು. ಇಂಥವರಿಗೆ ಜ್ಞಾನಿಗಳೆನಬೇಕೋ ಅಜ್ಞಾನಿಗಳೆನಬೇಕೋ ನೀವೇ ನೋಡಿರಿ.

ಅದ್ವೈತಿಗಳೆಂದರೆ ಬಹಿರಂಗದ ಕ್ರಿಯೆಗಳಲ್ಲಿ ಅದ್ವೈತ ಉಂಟೇ? “ಅಂತರ್ಜ್ಞಾನ ಬಹಿಃ ಕ್ರಿಯಾ | ಏಕೀಭಾವ ಸಮಾಚರೇತ್” ಎಂಬಲ್ಲಿ ಅಂತರಂಗದ ಜ್ಞಾನವನ್ನೇ ಬಹಿರಂಗದ ಕ್ರಿಯೆಯಲ್ಲಿ ಸಮವಾಗಿ ಸರಿಗೊಳಿಸಬೇಕಾದರೆ, ಅಂಗವಿರುವವರೆಗೂ ಆಚಾರವಿರಬೇಕು. ಆ ಆಚಾರವು ಅನಾಚಾರವಾಗದೆ ಶ್ರುತಿಸಮ್ಮತವಾದ ಶ್ರುತ್ಯಾಚಾರವಾಗಬೇಕು. ಆಚಾರವಿಡಿದು ಜ್ಞಾನವನ್ನಾಶ್ರಯಿಸಬೇಕು. ಜ್ಞಾನವಿಡಿದು ಸದ್ಯೋನ್ಮುಕ್ತರಾಗಬೇಕು.

ಆದಲ್ಲದೆ “ಮುನ್ನವೇ ಭಕ್ತಿಕ್ರಿಯೆಯಿಂದಂ | ನೆರೆ ಪರಿಶುದ್ಧವಾದ ಬುದ್ಧಿಯನುಳ್ಳ ಸಮುನ್ನತ ಗುಣಗಣ ಸಂ | ಪನ್ನಗೆ ನಿಜಾರ್ಥ ಸಾಧ್ಯವಿದರೋಳ್ ||” ಎಂದು ಪರಮಾರ್ಥ ಗೀತೆಯಲ್ಲಿ ಹೇಳಿದ್ದಾರೆ. ಮತ್ತು “ಬಳಸದಿರದ್ವೈತವನು ಬಾಹ್ಯದಲಿ ನಿ | ನ್ನೊಳಗೇಕೋಭಾವನೆಯೊಡಗೂಡು || ತಿಳಿದು ಸಮಯ ನಿಷ್ಠೆ ವೇದವಿದ ಭಕ್ತಿಯನಗಲದಿರೆಂದು ಬೆಸಸುವ | ಶ್ರೀಗುರು ವಚನೋಪದೇಶವ ನಾಲಿಸಿ | ದಾಗಳಹುದು ನರರಿಗೆ ಮುಕುತಿ” ಎಂಬ ನಿಜಗುಣ ಶಿವಯೋಗಿಗಳು ಆಗಮ ಪ್ರಮಾಣವಾಗಿ ಹೇಳಿದ ಪದಗಳ ಅಭಿಪ್ರಾಯವನರಿಯದೆ, ಹುಚ್ಚು ತಲೆಗೇರಿ ಕುಣಿದಾಡಿ ಕೂಗಿದರೆ, ಅದ್ವೈತಿಗಳಾಗಬಲ್ಲರೇ? ಇದು ಅವಧೂತ ಮಾರ್ಗವಲ್ಲ. ಇದೊಂದು ಅಜ್ಞಾನ ಮಾರ್ಗ ಬೇರೆ ಇದೆ. ಇದು ಫ್ರೇಂಚ ದೇಶದ ಸನ್ಯಾಸಿಗಳ ಬೋಧೆಯು. ಇದು ವೇದ ಸಮ್ಮತವಲ್ಲ. ಆಗಮ ಸಮ್ಮತವಲ್ಲ. ಶ್ರುತಿ ಸಮ್ಮತವಾದ ಮಾರ್ಗವಲ್ಲಾದ ಕಾರಣ, ಈ ಮತದವರನ್ನು ನಂಬಬಾರದು. ಯಾಕೆಂದರೆ “ಶ್ರುತಿ ವಿರಹಿತವಾದ ಮತವ ತಾನುಳಿವುದೆ ಚಂದಮಾಮ” ಎಂದು ನಿಜಗುಣವಾಕ್ಯ ಉಂಟಾಗಿದೆ.

" ಜ್ಞಾನಿ ಸರ್ವತ್ರ ಲೋಚನಃ " ಎಂದುಂಟಾಗಿ ಜ್ಞಾನಿಯಾದವರೆ ಸರ್ವಾಂಗ ನೇತ್ರಉಳ್ಳವರಂತೆ, ಜಾಗ್ರತರಾಗಿ ಲೋಕಾಪವಾದವನ್ನು ಹೊಂದದೆ, ಲೋಕಾಚಾರ ಶ್ರುತ್ಯಾಚಾರ ಜ್ಞಾನಾಚಾರಕ್ಕೆ ವಿರುದ್ಧವಾಗಿ ನಡೆಯದೆ. ನಡೆವಲ್ಲಿ ನುಡಿವಲ್ಲಿ ಕೊಡುವಲ್ಲಿ ಕೊಂಬಲ್ಲಿ ಪಾಕ ಪ್ರಯತ್ನಾದಿ ಸ್ನಾನ ಪಾನಂಗಳಲ್ಲಿ, ನಿರ್ಮಲತ್ವವನ್ನೇ ಪ್ರಕಟಿಸಬೇಕಲ್ಲದೆ, ದುರ್ನಡತೆಯಾಗಬಾರದು. ಮತ್ತು "ಸ್ವೇಚ್ಛಾಚಾರೋ ಗಣೇಶ್ವರಃ" ಎಂಬ ಪ್ರಮಾಣ ಉಂಟಾಗಿ ಮಹಾತ್ಮರು ಸ್ವೇಚ್ಛಾಚಾರಿಗಳಾದಾಗ್ಯೂದರೂ ನಿರ್ಮಲತ್ವವೇ ಬೇಕು. ಅನಾಚಾರಿಗಳಾಗಬಾರದು. ಸ್ವೇಚ್ಛಾಚಾರವಾದಾಗ್ಯೂ ಅದು ಆಗಮ ಪ್ರಮಾಣದಂತೆ, ಆದ್ಯರ ವಚನಕ್ಕನುಸಾರವಾಗಿ, ವೀರಮಾಹೇಶ್ವರಾಚಾರವಾಗಬೇಕು. ಆಗಮ ಸಮ್ಮತವಲ್ಲದ ಅನಾಚಾರವಾಗಬಾರದು.

ಆಚಾರಾದಿ ಸತ್ಕ್ರಿಯೆಗಳಿಗೆ ನಿರ್ಮಲ ಜಲವೇ ಪ್ರಾಮಾಣ್ಯವಾಗಿ ಮುಖ್ಯವಾಗಿ ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ಅದು ನಿರ್ಮಲವಿರಬೇಕು. ಹ್ಯಾಗೆಂದರೆ, ಬಾವಿಗಳ ಸಮೀಪದಲ್ಲಿ ತಿಪ್ಪೆಗಳಿರಬಾರದು. ಬಚ್ಚಲ ನೀರಹರಿಗಳಿರಬಾರದು. ಮತ್ತು ಮಲಮೂತ್ರ ವಿಸರ್ಜನೆ ಮಾಡಬಾರದು. ಮಳೆಯಾದಾಗ ಊರ ಮಲಿನವಾದ ನೀರು ಬಾವಿಯಲ್ಲಿ ಹೊಗಬಾರದು. ಬಾವಿಯ ಸಮೀಪದಲ್ಲಿ ಶವಗಳನ್ನು ಹೂಳಬಾರದು. ಬಾವಿಯಲ್ಲಿ ಮಲಿನ ವಸ್ತ್ರಗಳನ್ನು ತೊಳೆಯಬಾರದು. ಸಗಣಿಯಾದ ಕೈಕಾಲುಗಳನ್ನು ತೊಳೆಯಬಾರದು. ರೋಗೀಜನರ ವಸ್ತ್ರ ತೊಳೆಯಬಾರೆದು. ಮಲಮೂತ್ರ ವಿಸರ್ಜನೆಯಾದ ಒಟ್ಟೆಗಳನ್ನು ಕೌದಿಗಳನ್ನು ಹಾಗೂ ಋತುಮತಿ ಸ್ತ್ರೀಯರ ಬಟ್ಟೆಗಳನ್ನು ತೊಳೆಯಬಾರದು. ಇಂಥ ನಿರ್ಮಲತರದ ಭಾವಿ ಇದ್ದರೆ ಆ ಭಾವಿಯ ಉದಕವನ್ನು ಬಳಸಬೇಕು. ಇದನ್ನು ಪರೀಕ್ಷಿಸದೆ ಬಳಸಿದರೆ, ಜ್ಞಾನಿಗಳ ಜ್ಞಾನಾಚಾರಕ್ಕೂ ಭಂಗವು. ಲೋಕಾಚಾರದ ನಿರ್ಮಲತನಕ್ಕೂ ಭಂಗವಾಗಿ ಕಜ್ಜಿ ತಿನುರು ಇಸಬು ಗಜಕರ್ಣ ಇಂಥ ರೋಗಗಳು ಆಗುವವಲ್ಲದೆ ಶವಗಳನ್ನು ಹೂಳಿದ್ದಲ್ಲಿ ಮಳಗಾಲ ಸಮಯಕ್ಕೆ ಸಮಾಧಿಯ ನೀರು ಬಸಿದು ಬಾವಿಯಲ್ಲಿ ಬಂದರೆ ಗಿರಣಿ ಮೊದಲಾದ ರೋಗಗಳು ಹುಟ್ಟುತ್ತವೆ. ಅದು ಕಾರಣ ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ನಿರ್ಮಲವಾದ ಜಲವನ್ನೇ ಬಳಸಬೇಕಲ್ಲದೆ, ಅಪವಿತ್ರ ಜಲವನ್ನು ಬಳಸಲಾಗದು.

ಸೇದುವ ಬಾವಿಯಾದ ಕಾಲಕ್ಕಾದರೂ ಸಮೀಪದಲ್ಲಿ ಶವಗಳು ತಿಪ್ಪೆಗಳು ಬಚ್ಚಲ ಹರಿಗಳು ಇಲ್ಲದಂಥ ಸ್ಥಳದಲ್ಲಿ ಬಾವಿಯನ್ನು ತೆಗೀಬೇಕು. ಮತ್ತು ಹಳ್ಳ ಹೊಳೆಗಳಲ್ಲಿ ಹರಿಯುವ ನೀರನ್ನು ಬಳಸಬೇಕಾದರೆ ಮೊಳಕಾಲುದ್ದ ಹರಿಯುತ್ತಿದ್ದ ನೀರನ್ನು ತೆಗೆದುಕೊಂಡು ವಸ್ತ್ರ ಹಾಕಿ ಸೋಸಿಕೊಂಡು ಬಳಸಬೇಕು. ಅದಕ್ಕಿಂತಲೂ ಕಡಿಮೆಯಾಗಿ ಹರಿಯುತ್ತಿದ್ದರೆ, ಆ ಹರಿಯುವ ನೀರನ್ನು ಬಳಸಬಾರದು. ಒರತೆಯನ್ನು ತೋಡಿ ಒರತೆಯ ನೀರನ್ನು ಬಳಸಬೇಕು.

ಪಾಕ ಪ್ರಯತ್ನದ ಭಾಂಡಗಳಲ್ಲಿ ಮೃತ್ತಿಕಾ ಭಾಂಡಭಾಜನಗಳಿದ್ದರೆ, ಅವುಗಳೆಲ್ಲ ನಿರ್ಮಲವಿರಬೇಕು. ಮೃತ್ಯದ್ಭಾಂಡ ಭಾಜನಾದಿಗಳು ಶಬ್ದ ದೋಷ ಅಥವಾ ಸೋಂಕಿನ ದೋಷಗಳಿಂದ ಅಪವಿತ್ರವಾದರೆ, ಅವುಗಳನ್ನು ಬಿಸಾಟಬೇಕು. ಅಥವಾ ಜ್ಞಾನಾಚಾರಿಗಳಾದರೆ ಒಡೆದು ತುಕುಡಿಗಳನ್ನು ಮಾಡಿ ಭೂಮಿಯಲ್ಲಿ ಹೂಳಬೇಕು. ತಾಮ್ರ ಹಿತ್ತಾಳಿಯ ಭಾಂಡೆ ಭಾಜನಗಳಾದರೆ ಸುಟ್ಟು ಚನ್ನಾಗಿ ಬೆಳಗಿ ನಿರ್ಮಲ ಮಾಡಿ ತೆಗೆದುಕೊಳ್ಳಬೇಕು. ಕಂಚಿನ ಪಾತ್ರೆ ಬಟ್ಟಲು ಭಾಜನಗಳಿಗೆ ಅಪವಿತ್ರ ದೋಷ ಹೊಂದಿದರೆ ಅವುಗಳನ್ನು ಬಿಟ್ಟು ಬಿಡಬೇಕು. ಅವುಗಳಾತಕ್ಕೂ ಪ್ರಯೋಜನವಲ್ಲವು.

ಫಲ ಪದಾರ್ಥಗಳಲ್ಲಿ ಮಣ್ಣು ಹತ್ತಿದ ಗಡ್ಡೆ ಗೆಣಸು ಉಳ್ಳೇಗಡ್ಡಿ ಬಳ್ಳೊಳ್ಳಿ ಮೊದಲಾದ ಪದಾರ್ಥಗಳನ್ನು ತೊಳೆದು ತೆಗೆದುಕೊಳ್ಳಬೇಕು. ಹಾಗು ಹಣ್ಣು ಕಾಯಿಸಲ್ಲೆ ಪದಾರ್ಥಗಳನ್ನು ವೀಳ್ಯ ಅಡಿಕೆ ಕಬ್ಬು ಪತ್ರೆ ಪುಷ್ಪ ಮೊದಲಾದವುಗಳನ್ನು ತೊಳೆದು ತಕ್ಕೊಳ್ಳಬೇಕು.

ಪಾಕ ಶಾಲೆಯ ಮನೆಯನ್ನು ಒಲೆಗಳನ್ನು ಹಾಗೂ ಕ್ರಿಯಾ ಮಂದಿರವನ್ನು ವೇದ ಗೃಹವನ್ನು ಭೋಜನ ಶಾಲೆಯನ್ನು ನಿತ್ಯದಲ್ಲೂ ಸಾರಣೆ ಹಾಕಿ ಶುದ್ಧ ಮಾಡಬೇಕು. ಉಳಿದ ಮನೆಗಳನ್ನು ಎಂಟು ದಿವಸಕ್ಕೊಮ್ಮೆ ಸಾರಣೆ ಹಾಕಿದರೂ ಬರುತ್ತದೆ.

ಪಾಕ ಪ್ರಯತ್ನಾದಿಗಳನ್ನು ಮಾಡುವವರು ಸ್ನಾನ ಮಾಡಿ ಪಾಕ ಮಾಡಿರತೆ, ಲೋಕಾಚಾರಕ್ಕೂ ಜ್ಞಾನಾಚಾರಕ್ಕೂ ಸಮ್ಮತವಾಗಿ ಕೇವಲ

ನಿರ್ಮಲತ್ವವೆನಿಸುತ್ತದೆ. ಅದು ಆಗದಿದ್ದರೆ, ಲೋಕಾಚಾರಿಗಳಾದವರು ಪಾಕ ಮಾಡಿದ ಮೇಲಾದರೂ ನಿತ್ಯ ಸ್ನಾನ ಮಾಡುವದು ನಿರ್ಮಲತ್ವವೆನಿಸುತ್ತದೆ.

ಪಾಕ ಮಾಡುವ ಸಮಯದಲ್ಲಿ ಬಾಯ ತೆರೆದಿಟ್ಟರೆ, ಉಗಿಯ ಶಾಕ ತಾಗಿ ಪ್ರಾಣಿಗಳು ಹತವಾಗಿ ಪಾಕದ ಭಾಂಡೆಯಲ್ಲಿ ಬೀಳುವವು. ಅದು ಕಾರಣ ಪಾಕ ಮಾಡುವ ಸಮಯದಲ್ಲಿ ಒಂದಾದರೂ ಪ್ರಾಣಹಿಂಸೆಯಾಗದಂತೆ ಅಪವಿತ್ರ ಸೋಂಕದಂತೆ ಬಹು ಎಚ್ಚರದಿಂದ ಪಾಕಮಾಡಬೇಕು.

ಪಾಕವಾದ ಮೇಲಾದರೂ ಯಾವ ಪ್ರಾಣಿಗಳು ಪದಾರ್ಥವನ್ನು ಮುಟ್ಟದಂತೆ, ಯಾವತ್ತೂ ಭಾಂಡೆಗಳ ಮೇಲೆ ವಸ್ತ್ರಗಳನ್ನು ಮುಚ್ಚಿ ಇಡಬೇಕು. ಭೋಜನ ಮಾಡತಕ್ಕ ಭಾಜನಗಳು ಹುಳಿ ಪದಾರ್ಥ ಕಿಲಬಾಗದಂತೆ ಚನ್ನಾಗಿ ಬೆಳಗಿ ತೊಳೆದು ಒರಸಿ ಝುಳಝುಳ ಮಾಡಿ ಇಡಬೇಕು.

ಧಾನ್ಯಾದಿ ಪದಾರ್ಥಗಳಿಗೆ ಮುಗ್ಗು ಹಾಯ್ದಿರಬಾರದು. ಬೆಳೆಯುವ ಸಮಯದಲ್ಲಿ ಶವದ ಹೊಗೆ ತಾಕಬಾರದು. ಚರ್ಮ ಪಾತ್ರೆಯೊಳಗೆ ತುಂಬಿದ ತೈಲ ಘೃತಗಳನ್ನು ಜ್ಞಾನಾಚಾರಿಗಳು ತೆಗೆದುಕೊಳ್ಳಲಾಗದು. ಯಾಕಂದರೆ ಶಿವನು ಭಕ್ತಹೃನ್ನಿಲಯನಾದ ಕಾರಣ ಭಕ್ತಾದಿಗಳ ಜಿಹ್ವಾದಿ ಇಂದ್ರಿಯ ಮುಖಂಗಳಿಂದ ಪ್ರಾಣೇಶ್ವರನಿಗೆ ನೈವೇದ್ಯವಾಗುತ್ತಿಹುದಾದ ಕಾರಣ ಲೋಕಾಚಾರದಲ್ಲಿ ಸದಾಚಾರಿಗಳು ಜ್ಞಾನಾಚಾರಿಗಳು ದೋಷಾರೋಪಣ ಮತ್ತು ಅಪವಿತ್ರ ಸೋಂಕಾದ ಪದಾರ್ಥಗಳನ್ನು ಮುಟ್ಟಲಾಗದು. ಯಾಕಂದರೆ " ಭಕ್ತಾ ಜಿಹ್ವಾಗ್ರತೋ ಲಿಂಗಂ। ಲಿಂಗಜಿಹ್ವಾಗ್ರತೋ ರುಚಿಃ ॥ ರುಚಿ ಜಿಹ್ವಾ ಪ್ರಸಾದೇನ । ಪ್ರಸಾದಂ ಪರಮಂ ಪದಂ ॥ ಎಂದಾಗಮ ಪ್ರಮಾಣ ಉಂಟು.

ಲೋಕಾಚಾರ ಜ್ಞಾನಾಚಾರದವರು ಯಾರಾದರಾಗಲಿ ತಾವು ಧರಿಸುವ ವಸ್ತ್ರಗಳನ್ನೂ ವಾಸ ಮಾಡುವ ಸ್ಥಳಗಳನ್ನೂ ಭೋಗ ಭುಕ್ತ್ಯಾದಿ ಸಕಲ ಸಾಮಗ್ರಿಗಳನ್ನೂ ಮಲಗುವ ಹಾಸಿಗೆಗಳನ್ನೂ ನಿರ್ಮಲವಿಡಬೇಕಲ್ಲದೆ, ಒಂದಾದರೂ ಮಲಿನವಾಗಿರಬಾರದು. ಮಲಿನವಿದ್ದಲ್ಲಿ

ಸೌಖ್ಯವಿಲ್ಲ ಮತ್ತು ಜ್ಞಾನಾಚಾರಕ್ಕೆ ಕೊರತೆಯಾಗುವದು. ಮಲಿನವು ದಾರಿದ್ರ್ಯಕ್ಕೂ ರೋಗಕ್ಕೂ ಅಜ್ಞಾನಕ್ಕೂ ಆಸ್ಪದವಾಗಿದೆ. ಹೇಗೆಂದರೆ ಸೂರ್ಯನು ಹೋದಲ್ಲಿ ಕತ್ತಲೆಯು ಆಚ್ಛಾದಿಸಿದಂತೆ ಮಲಿನತ್ವವು ಅಜ್ಞಾನಕ್ಕೆ ಬೀಜವಾಗಿದೆ. ಲಾಂದ್ರದಲ್ಲಿ ದೀಪವು ನಿರ್ಮಲವಾಗಿ ಕಂಡಂತೆ ಬೋಕಿಯಲ್ಲಿ ನಿರ್ಮಲವಾಗಿ ಕಾಣುವದೇ ? ಹಾಗೆಯೇ ಲೋಕಾಚಾರ ವರ್ತನೆಯಲ್ಲಿ ಶುಚಿ ಅಶುಚಿ ಜ್ಞಾನ ಅಜ್ಞಾನ ಸುಬುದ್ಧಿ ದುರ್ಬುದ್ಧಿ ಯನ್ನು ತಿಳಿಯದಿದ್ದರೆ, ಮುಂದೆ ಜ್ಞಾನಾಚಾರದಲ್ಲಿ ಪ್ರವೀಣರಾಗು ವದೆಂತು ?

ನಿರ್ಮಲತ್ವವೆಂಬುದು ಬಹಿರಂಗದ ಸಕಲ ಕ್ರಿಯಾಚಾರದಲ್ಲಿಯೂ ಬೇಕು. ಅಂತರಂಗದ ಜ್ಞಾನಾಚಾರದಲ್ಲಿಯೂ ಅಗತ್ಯವಾಗಿ ಇರ ತಕ್ಕದ್ದು. ಅಂತರಂಗದ ಜ್ಞಾನಾಚಾರದಲ್ಲಿ ಸಕಲ ದುರ್ಗುಣಗಳೇ ಮಲಿನತ್ವವು. ಅವುಗಳಾವಾವವೆಂದರೆ, ಕಾಯಕದೋಷ ನಾಲ್ಕು, ವಾಚಕ ದೋಷ ನಾಲ್ಕು ಮತ್ತು ಮಾನಸದೋಷ ನಾಲ್ಕು, ಇಂತೀ ಹನ್ನೆರಡು ದೋಷಗಳಾದಿಯಾಗಿ ಅನಂತ ದುರ್ಗುಣಗಳು ತುಂಬಿ ದೇಹವು ಮಲಿನ ಹೊಂದಿರುವದು. ಅಂಥ ಮಲಿನ ಸ್ವರೂಪಿಗಳಾದವರ ಹೃದಯ ದಲ್ಲಿ ಪರಮೇಶ್ವರನು ಇಲ್ಲವೆಂದು ತಿಳಿಯತಕ್ಕದ್ದು. ಇದಕ್ಕೆ ಬಸವ ರಾಜದೇವರ ವಚನ ಸಾಕ್ಷಿಯುಂಟು. ಅವನ ಅಭಿಪ್ರಾಯದ ಆಧಾರದ ಮೇಲಿಂದ ಜಗತ್ಪರಿಪೂರ್ಣನೆಂಬ ಶ್ರುತಿ ವಾಕ್ಯಕ್ಕೆ ಭಂಗವಾದರಾಗಲಿ ದುರ್ಗುಣಿಗಳಾದವರ ಹೃದಯದಲ್ಲಿ ಪರಮೇಶ್ವರ ನಿಲ್ಲನೆಂದು ನಿರ್ಧರಿಸ ತಕ್ಕದ್ದು. " ಹೊಸ್ತಿಲಲ್ಲಿ ಹುಟ್ಟೆ ಮನೆಯ ಅಂಗಳದಲ್ಲಿ ಕಸವಿದ್ದರೆ, ಮನೆಯ ಯಜಮಾನನು ಈ ಮನೆಯೊಳಗಿಲ್ಲ " ಎಂಬುದೇ ನಿಶ್ಚಯ.

# ಕರುಣಿಸೈ ಎಲೆದೇವನೆ !

ನಿನ್ನ ನೆರವಿಲ್ಲದಾ ಪಾಮರನು-
ಕರುಣಿಸೈ- ಎಲೆದೇವನೇ !

ಮಾಡಿದಾ ಕರ್ಮವನು, ನಾ
ನೆಂಬ ಗರ್ವವನು, ತ್ರಿತಾಪಗಳನು,
ಪರಿಹರಿಸಿ ಕಾಪಾಡು
ಎಲೆದೇವನೇ !

ಗುರುವಿನ ಸೇವೆಯಲಿ,
ಆದ್ಯರಾ ವಚನದಲಿ,
ಲಿಂಗಪೂಜೆಯ ನಿಷ್ಠೆಯಲಿ-
ಮನವನನುಗೊಳಿಸು ಎಲೆದೇವನೇ !

ತತ್ವಮಸಿ ವಾಕ್ಯಾರ್ಥವನು,
ಷಡಕ್ಷರಿಯ ತಿರುಳನ್ನು
ಅಷ್ಟಾವರಣದ ಮಹಿಮೆಯನು;
ಅರುಹಿ ಕೃತಾರ್ಥನ ಮಾಡು-ಎಲೆಸ್ವಾಮಿಯೇ!

ಅರುಹಿನಾ ನೆಲೆಯನ್ನು
ಷಟ್‌ಸ್ಥಲದ ನಿರ್ಣಯವನು-
ಜ್ಯೋತಿ ಸ್ವರೂಪವನು-ಕರಪಿಡಿದು
ತೋರಿಸೈ-ಎಲೆಸ್ವಾಮಿಯೇ !

ಸತ್ಯ, ಶಾಂತಿಯನು, ಮೇಲ್
ದಯಧರ್ಮವನು-ನಯವಿನಯವನು,
ನಿನ್ನಲ್ಲಿ ಮಮತೆಯನು ನೆಲೆಗೊಳಿಸಿ
ಕಾಪಾಡು-ಎಲೆದೇವನೇ !

ಗುರುಶಿದ್ದ ಶಿವಾಚಾರ್ಯರು 'ನಿರಂಜನಾಲಯ'
ಗುರುವಿನಪುರಮಠ.

# ಲಿಂಗಪೂಜೆಯಲ್ಲಿ ಶಿವಯೋಗ.

ಲಿಂಗ ಪೂಜೆಯ ಉದ್ದೇಶವು ಷಟ್‌ಚಕ್ರಗಳಲ್ಲಿ ಲಿಂಗದ ಕಳೆಯನ್ನು ಪ್ರಕಟಗೊಳಿಸುವದೇ ಇರುತ್ತದೆ. ಇದಕ್ಕೆ ಶಿವಯೋಗವೆಂಬ ಹೆಸರು ಇದೆ. ಚಕ್ರಗಳಲ್ಲಿ ಲಿಂಗ ಪ್ರಕಾಶವು ಬೆಳಗಬೇಕಾದರೆ ಭಕ್ತನು ಕೆಲವೊಂದು ಕ್ರಮವನ್ನು ಅನುಸರಿಸಬೇಕಾಗುತ್ತದೆ. ಈ ಕ್ರಮವಾವುದೆಂಬುದನ್ನು ಕುರಿತು ವಚನಕಾರನು ಈ ಕೆಳಗಿನ ವಚನಗಳಲ್ಲಿ ಹೇಳಿದ್ದಾನೆ. ಇದರಲ್ಲಿ ಭಕ್ತಿ, ಸದಾಚಾರ, ನೀತಿ ನಡೆಗಳು ಇವುಗಳಲ್ಲದೆ, ಏಕಾಗ್ರಚಿತ್ತ, ಧ್ಯಾನ, ಮಂತ್ರಜಪ, ಮೊದಲಾದ ಕ್ರಿಯೆಗಳೂ ಕೂಡ ಬರುತ್ತವೆ. ಇವೆಲ್ಲವುಗಳ ಸಮ್ಮೇಲನವಿರದಿದ್ದರೆ ಅದು ಶಿವಯೋಗವೆನಿಸಲಾರದು. ಇಂಥವನು ಕೇವಲ ಹಠಯೋಗಿಯು. ಇವನು ದುಷ್ಟವಿಚಾರ ಆಚಾರಗಳಿಗೆ ಒಳಗಾಗಬಹುದು. ಆದ್ದರಿಂದ ಇವನಿಗೆ ಲಿಂಗಾಂಗ ಸಾಮರಸ್ಯವು ಉಂಟಾಗಲಾರದು. ಈ ಕಾರಣದ ಮೂಲಕ ಶಿವಶರಣರು ಈ ಮಾರ್ಗವನ್ನು ನಿರಾಕರಿಸಿ ಶಿವಯೋಗಾಚರಣೆಯನ್ನು ಬೋಧಿಸುತ್ತಾರೆ. ಷಟ್‌ಸ್ಥಲಜ್ಞಾನವು ಇದಕ್ಕೆ ಅವಶ್ಯವಾದುದು. ಈ ಮಾರ್ಗವನ್ನು ತಿಳಿಯಲು ಬಹು ಜನರು ಅಪೇಕ್ಷಿಸುವದರಿಂದ, ಇದಕ್ಕೆ ಸಂಬಂಧಿಸಿದ ಒಬ್ಬ ವಚನಕಾರನ ವಚನಗಳನ್ನು ಮಾತ್ರ ನಾವು ಕೆಳಗೆ ಕೊಟ್ಟಿರುತ್ತೇವೆ.

## ವಚನಗಳು.

ಅಯ್ಯಾ ಅಂಗಲಿಂಗ ಸಂಬಂಧದಿರವು, ಬೀಜವೊಡೆದು ಮೊಳೆದೋರುವಂತೆ, ಕುಸುಮ ಬಲಿದು ದೆಸೆದೆಸೆಗೆ ಪಸರಿಸುವಂತೆ, ಇಷ್ಟಲಿಂಗ ಪ್ರಾಣಲಿಂಗವೆಂದು ವಿಭೇದಿಸುವಲ್ಲಿ ಕುಸುಮದ ಗಿಡವಿಗೆ, ವಾಸನೆ ಉಂಟೇ ಕುಸುಮಕ್ಕಲ್ಲದೆ; ಅದು ಗಿಡುವಿಡಿದಾದ ಕುಸುಮವೆಂಬುದನರಿದು, ಗಿಡುವಿನ ಹೆಚ್ಚಿಗೆ, ಕುಸುಮದನಿಲ, ಸುಗಂಧದ ಬೆಳೆಯು, ಭಕ್ತಿಗೆ ಕ್ರಿಯವು, ಕ್ರಿಯೆಗೆ ಶ್ರದ್ಧೆ, ಶ್ರದ್ಧೆಗೆ ಪೂಜೆ, ಪೂಜೆಗೆ ವಿಶ್ವಾಸ, ವಿಶ್ವಾಸಕ್ಕೆ ವಸ್ತು ತನ್ಮಯವಾಗಿರ್ಪುದು. ಇದು ತೂರ್ಯ ಭಕ್ತಿಯ ಇರವು, ಎನ್ನ ನಿಃಕಳಂಕ ಚನ್ನಮಲ್ಲಿಕಾರ್ಜುನಲಿಂಗವು ಮೆಲ್ಲ ಮೆಲ್ಲನೆ ಕೂಡುವ ಕೂಟ, ಇಂತು ಪ್ರಮಥರ ರತಿಸಂಯೋಗದ ಕೂಟದ ಸುಖವಸುಖಿಸಿ, ಗುರುಲಿಂಗಜಂಗಮದ ಕರುಣಕಟಾಕ್ಷಿಯಿಂದ, ಮತ್ತಾ ಗುರುಲಿಂಗಜಂಗಮ

ಸ್ವರೂಪವಾಗಿ ನಿಜಾಚರಣೆಯಲ್ಲಿ ನಿಂದು, ಅಸತ್ಯವನುಳಿದು ಸುಸತ್ಯದಲ್ಲಿ ನಿಂದು, ಅನಾಚಾರವಳಿದು, ಶಿವಾಚಾರಸನ್ಮಾರ್ಗದಲ್ಲಿ ನಿಂದು, ಭವಿನಡೆ ನುಡಿಗಳ ಬಿಟ್ಟು ಭಕ್ತನ ನಡೆನುಡಿಯಲ್ಲಿ ನಿಂದು, ಅಯೋಗ್ಯವಾದ ಭೋಗವನುಳಿದು, ಯೋಗ್ಯವಾದ ಭೋಗದಲ್ಲಿ ನಿಂದು, ತನ್ನಾದಿಮಧ್ಯಾವ ಸಾನವ ತಿಳಿದು, ತನ್ನ ನಿಜಾಚರಣೆಯ ಲೀಲಾವಿನೋದದಿಂದ, ತನ್ನ ತಾನರ್ಚಿಸುವ ನಿಜನಿಲುಕಡೆಯ ವಿಚಾರವ ತಿಳಿದು, ನಾದ ನಾಳಂಗಳ ಬಲಿದು, ಪರಿಪೂರ್ಣ ಜ್ಯೋತಿರ್ಲಿಂಗಧ್ಯಾನದಲ್ಲಿ ನಿಂದು, ನಿಜಹೃದಯ ಚಿದ್ಭಾವದೃಕ್ಕಿನಿಂದ, ನವಲಿಂಗಗಳ ನಿರೀಕ್ಷಿಸಿ, ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ, ನಿರುಪಾಧಿಕ, ನಿಃಕಳಂಕ, ನಿರಾಲಂಬಹಸ್ತದಿಂದರ್ಚಿಸಿ, ಎರಡಳಿದು, ನಿರವಯ ಸಮಾಧಿಯಲ್ಲಿ ಕೂಡುವ ನಿಜದಿರವ ನೋಡಾ; ಸಂಗನಬಸವೇಶ್ವರಾ ॥ ೧ ॥

ಅಯ್ಯಾ ತಾರಕಾಕೃತಿಯ ನಕಾರ ಪ್ರಣವು, ವೇಣುನಾದ. ಆಧಾರ ಚಕ್ರ, ಪೀತವರ್ಣ, ಭಕ್ತಿಸ್ಥಲ ಸ್ಥೂಲತನು ಸುಚಿತ್ತ ಹಸ್ತ ಆಚಾರಲಿಂಗ ಘ್ರಾಣಮುಖ, ಶುದ್ಧಾಭಕ್ತಿ ಗಂಧಪದಾರ್ಥ, ಸುಗಂಧ ಪ್ರಸಾದ, ಬ್ರಹ್ಮ ಪೂಜಾರಿ, ಬ್ರಹ್ಮನಧಿದೇವತೆ, ಕರ್ಮಸಾದಾಖ್ಯ, ಸತ್ತು ಎಂಬ ಲಕ್ಷಣ, ಪರವೆಂಬ ಸಂಜ್ಞೆ, ಪೂರ್ವದಿಕ್ಕು ಋಗ್ವೇದ, ಪೃಥ್ವಿಅಂಗ, ಜೀವಾತ್ಮ ಕ್ರಿಯಾಶಕ್ತಿ, ನಿವೃತ್ತಿಕಲೆ; ಇಂತು ಇಪ್ಪತ್ತು ನಾಲ್ಕು ಸಕೀಲಂಗಳ ನೊಳ ಕೊಂಡು, ಎನ್ನಾಧಾರ ಚಕ್ರವೆಂಬ ಶ್ರೀಶೈಲ ಪರ್ವತ ಕ್ಷೇತ್ರದಲ್ಲಿ, ಮೂರ್ತಿ ಗೊಂಡಿರ್ಪ ಪಂಚಾಚಾರ ಸ್ವರೂಪವಾದ ಆಚಾರಲಿಂಗವೇ ಮಲ್ಲಿಕಾ ರ್ಜುನವೆಂದು ತನುತ್ರಯುವ ಮಡಿಮಾಡಿ ಶಿವಾನಂದ ಜಲದಿಂ ಮಜ್ಜನ ವೆರೆದು ಪೃಥ್ವಿನಿವೃತ್ತಿಯಾದ ಗಂಧವ ಧರಿಸಿ, ಚಿತ್ತ ಸುಚಿತ್ತವಾದಕ್ಷತೆ ಯನಿಟ್ಟು ಅಲ್ಲಿಯು ಚತುರ್ದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯ ಪೀತ ವರ್ಣವಂ ಕರ್ಪುರ ಜ್ಯೋತಿಯೆಂದು ಬೆಳಗಿ, ಅಲ್ಲಿಹ ಜಾಗ್ರಾವಸ್ಥೆ ಎಂಬ ನವೀನ ವಸ್ತ್ರವ ಹೊದಿಸಿ, ನಿಃಕಾಮ ವೆಂಬಾಭರಣವ ತೊಡಿಸಿ, ಸುಗಂಧವೆಂಬ ನೈವೇದ್ಯವನರ್ಪಿಸಿ ಶ್ರದ್ಧೆಯೆಂಬ ತಾಂಬೂಲವನಿತ್ತು, ಇಂತು ಪಂಚಾಚಾರ ಮೂರ್ತಿ ಆಚಾರಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ, ಕೋಟಿಸೂ ರ್ಯರ ಪ್ರಭೆಯಂತೆ ಬೆಳಗುವ ಆಚಾರಲಿಂಗವ ಕಂಗಳು ತುಂಬಿ ನೋಡಿ

ಮನದಲ್ಲಿ ಸಂತೋಷಗೊಂಡು ಆ ಆಚಾರಲಿಂಗ ಪೂಜೆ ಸಮಾಪ್ತಿ ಮಾಡಿ "ಓಂನಂನಂನಂನಂನಂನಂ" ಎಂಬ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಲಿಂಗವೇ ತಾನೆಂದರಿದು ಕೂಡಿ ಎರಡಳಿದು, ನಿಬ್ಬೆರಗಿನಿಂದ ಆಚರಿಸಬಲ್ಲಾತನೇ ಶ್ರದ್ಧಾಭಕ್ತಿಯನುಳ್ಳ ಸದ್ಭಕ್ತ ನೋಡಾ ಸಂಗನಬಸವೇಶ್ವರಾ ॥ ೨॥

ಅಯ್ಯಾ ದಂಡಾಕೃತಿಯ ಮಕಾರ ಪ್ರಣವ ಘಂಟಾನಾದ ಸ್ವಾಧಿಷ್ಠಾನ ಚಕ್ರ ಶ್ವೇತ ವರ್ಣ ಮಹೇಶ್ವರ ಸ್ಥಲ, ಸೂಕ್ಷ್ಮತನು ಸುಬುದ್ಧಿ ಹಸ್ತ, ಗುರುಲಿಂಗ, ಜಿಹ್ವೆಮುಖ, ನೈಷ್ಠಿಕಾಭಕ್ತಿ ರಸಪದಾರ್ಥ ಸುರಸ ಪ್ರಸಾದ, ವಿಷ್ಣು ಪೂಜಾರಿ, ವಿಷ್ಣು ಅಧಿದೇವತೆ, ಕರ್ತೃಸಾದಾಖ್ಯ, ಚಿತ್ತ ಎಂಬ ಲಕ್ಷಣ ಗೂಢವೆಂಬ ಸಂಜ್ಞೆ ಪಶ್ಚಿಮದಿಕ್ಕು ಯಜುರ್ವೇದ, ಅಷ್ಟಾಂಗ, ಅಂತರಾತ್ಮ ಜ್ಞಾನಶಕ್ತಿ ಪ್ರತಿಷ್ಠಾ ಕಲೆ ಇಂತು ೨೪ ಸಕೀಲಂಗಳ ನೊಳಕೊಂಡು ಎನ್ನ ಸ್ವಾಧಿಷ್ಠಾನ ಚಕ್ರವೆಂಬ ಸೇತುಬಂಧ ಕ್ಷೇತ್ರದಲ್ಲಿ ಮೂರ್ತಗೊಂಡಿರ್ಪ, ಮಂತ್ರ ಸ್ವರೂಪವಾದ ಗುರುಲಿಂಗವೇ, ರಾಮೇಶ್ವರ ಲಿಂಗವೆಂದು ತನುತ್ರಯವ ಮಡಿಮಾಡಿ ಪರಿಣಾಮವೆಂಬ ಜಲದಿಂದ ಮಜ್ಜನಕ್ಕೆರೆದು ಅಪ್ಪು ನಿವೃತ್ತಿಯಾದ ಗಂಧವಧರಿಸಿ, ಬುದ್ಧಿ ಸುಬುದ್ಧಿಯಾದಕ್ಷತೆಯನ್ನಿಟ್ಟು ಅಲ್ಲಿಹ ಷಡ್ದಳಂಗಗಳನೇ ಪುಷ್ಪಪದ ಮಾಲೆಯೆಂದು ಧರಿಸಿ ಅಲ್ಲಿ ಕಮಲ ಸದ್ವಾಸನೆಯ ಧೂಪ ಬೀಸಿ, ಅಲ್ಲಿಯ ಶ್ವೇತ ವರ್ಣವೇ ಕರ್ಪೂರ ಜ್ಯೋತಿಯೆಂದು ಬೆಳಗಿ, ಅಲ್ಲಿಹ ಸ್ವಪ್ನಾವಸ್ಥೆಯ ನವೀನ ವಸ್ತ್ರವ ಹೊದಿಸಿ ನಿಃಕ್ರೋಧವೆಂಬಾಭರಣವ ತೊಡಿಸಿ ಸುರುಚಿಯೆಂಬ ನೈವೇದ್ಯವನರ್ಪಿಸಿ,ನೈಷ್ಠೆಯೆಂಬ ತಾಂಬೂಲವನಿತ್ತು ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಗುರುಲಿಂಗವನ್ನು ಕಂಗಳತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ಗುರುಲಿಂಗ ಪೂಜೆಯ ಸಮಾಪ್ತಿಯಂ ಮಾಡಿ "ಓಂ ಮಂ ಮಂ ಮಂ ಮಂ ಮಂ ಮಂ" ಎಂಬ ಮಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿಶ್ಚಿಂತದಿಂದ ಬೆರಸಬಲ್ಲಾತನೇ ನೈಷ್ಠಿಕಾಭಕ್ತಿಯುಳ್ಳ, ವೀರ ಮಹೇಶ್ವರ ನೋಡಾ; ಸಂಗನಬಸವೇಶ್ವರಾ- ॥ ೩ ॥

ಅಯ್ಯಾ ಕುಂಡಲಾಕೃತಿ ಶಿಕಾರಪ್ರಣವು, ಭೇರಿನಾದ, ಮಣಿಪೂರಕ ಚಕ್ರ, ಹರಿತವರ್ಣ, ಪ್ರಸಾದಿಸ್ಥಲ, ಕಾರಣತನು, ನಿರಹಂಕಾರ ಹಸ್ತ,

ಶಿವಲಿಂಗ, ನೇತ್ರಮುಖ, ಸಾವಧಾನ ಭಕ್ತಿ, ರೂಪು ಪದಾರ್ಥ, ಸುರೂಪು ಪ್ರಸಾದ, ರುದ್ರ ಪೂಜಾರಿ ರುದ್ರನಧಿದೇವತೆ ಮೂರ್ತಿ ಸಾದಾಖ್ಯ ಆನಂದ ವೆಂಬ ಲಕ್ಷಣ ಶರೀರಸ್ಥ ಸಂಜ್ಞೆ ಉತ್ತರದಿಕ್ಕು, ಸಾಮವೇದ ಅಗ್ನಿಯೇ ಲಿಂಗ, ಪರಮಾತ್ಮ, ಇಚ್ಛಾಶಕ್ತಿ, ವಿದ್ಯಾಕಲೆ, ಇಂತು ೨೪ ಸಕೀಲಂಗಳ ನೊಳಕೊಂಡು. ಎನ್ನ ಮಣಿಪೂರಕ ಚಕ್ರವೆಂಬ ಪಂಪಾಕ್ಷೇತ್ರದಲ್ಲಿ, ಮೂರ್ತಿಗೊಂಡಿರ್ದ, ನಿರೀಕ್ಷಣ ಸ್ವರೂಪವಾದ, ಶಿವಲಿಂಗವೇ ವಿರುಪಾಕ್ಷ ಲಿಂಗವೆಂದು ಆತ್ಮತ್ರಯವ ಮಡಿಮಾಡಿ; ಪರಮಾನಂದವೆಂಬ ಜಲದಿಂದ ಮಜ್ಜನವೆರೆದು, ಅಗ್ನಿ ನಿವೃತ್ತಿಯಾದ ಗಂಧವ ಧರಿಸಿ, ಅಹಂಕಾರ ನಿರಹಂಕಾರವಾದಕ್ಷತೆಯನಿಟ್ಟು, ಅಲ್ಲಿಹ ದಶದಳಂಗಳನೇ ಪುಷ್ಪದಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಹರಿತ ವರ್ಣವೇ ಕರ್ಪುರದ ಜ್ಯೋತಿಯೆಂದು ಬೆಳಗಿ, ಸುಷುಪ್ತಾವಸ್ಥೆ ಎಂಬ ನವೀನ ವಸ್ತ್ರವ ಹೊದಿಸಿ, ನಿರ್ಲೋಭವೆಂಬಾಭರಣವ ತೊಡಿಸಿ, ಸುರೂಪು ಎಂಬ ನೈವೇದ್ಯವನರ್ಪಿಸಿ, ಸಾವಧಾನವೆಂಬ ತಾಂಬೂಲವನಿತ್ತು, ಇಂತೀ ಶಿವಲಿಂಗಕ್ಕೆ ಅಷ್ಟವಿಧಾರ್ಚನೆಮಾಡಿ, ಕೋಟಿ ಸೂರ್ಯಪ್ರಭೆ ಬೆಳಗುವ ಪರಶಿವಲಿಂಗವನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ಪರಶಿವಲಿಂಗದ ಪೂಜೆಯ ಸಮಾಪ್ತಿ ಮಾಡಿ " ಓಂ ಶಿಂ ಶಿಂ ಶಿಂ ಶಿಂ ಶಿಂ ಶಿಂ " ಎಂಬ ಶಿಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಪರ ಶಿವಲಿಂಗವೇ ತಾನೆಂದರಿದು ಕೂಡಿ ನಿಃಕಳಂಕನಾಗಿ ಆಚರಿಸಬಲ್ಲಾತನೇ ಸಾವಧಾನ ಭಕ್ತಿಯನುಳ್ಳ ಶಿವಪ್ರಸಾದಿ ನೋಡಾ ಸಂಗನಬಸವೇಶ್ವರಾ ॥ ೪ ॥

ಅಯ್ಯಾ ಅರ್ಧಚಂದ್ರಾಕೃತಿ ವಕಾರ ಪ್ರಣವು, ಮೇಘನಾದ ಅನಾಹತಚಕ್ರ, ಮಾಂಜಿಷ್ಟವರ್ಣ, ಪ್ರಾಣಲಿಂಗಿಸ್ಥಲ ನಿರ್ಮಲತನು, ಸುಮನಹಸ್ತ, ಜಂಗಮಲಿಂಗ, ತ್ವಗೆಂಬಮುಖ, ಅನುಭಾವಭಕ್ತಿ ಸ್ಪರ್ಶನ ಪದಾರ್ಥ. ಸುಸ್ಪರ್ಶನಪ್ರಸಾದ, ಈಶ್ವರಪೂಜಾರಿ ಈಶ್ವರನಧಿದೇವತೆ ಅಮೂರ್ತಿ ಸಾದಾಖ್ಯ, ನಿತ್ಯವೆಂಬ ಲಕ್ಷಣ, ಲಿಂಗಕ್ಷೇತ್ರ ಸಂಜ್ಞೆ, ದಕ್ಷಿಣ ದಿಕ್ಕು, ಅಥರ್ವಣವೇದ, ವಾಯುವೇ ಅಂಗ, ನಿರ್ಮಲಾತ್ಮ, ಆದಿಶಕ್ತಿ, ಶಾಂತಿಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಅನಾಹತ ಚಕ್ರವೆಂಬ, ಹಿಮವತ್ಕೇದಾರ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಯಜನ ಸ್ವರೂಪವಾದ, ಜಂಗಮಲಿಂಗವೇ ಹಿಮಗಿರೀಶ್ವರನೆಂದು ಪ್ರಾಣತ್ರಯವ

ಮಡಿಮಾಡಿ, ಶಾಂತಿ ಎಂಬ ಮಜ್ಜನಕ್ಕೆರೆದು ವಾಯು ನಿವೃತ್ತಿಯಾದ ಗಂಧವ ಧರಿಸಿ, ಮನಸುಮನವಾದಕ್ಷತಿಯನಿಟ್ಟು ಅಲ್ಲಿಹ ದ್ವಾದಶದಳಂಗಳನೇ ಪುಷ್ಪದ ಮಾಲೆಯೆಂದು, ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಮಾಂಜಿಷ್ಟವರ್ಣವೇ ಕರ್ಪುರಜ್ಯೋತಿ ಎಂದು ಬೆಳಗಿ, ತೂರ್ಯಾವಸ್ಥೆಯೆಂಬ, ನವೀನ ವಸ್ತ್ರವ ಹೊದ್ದಿಸಿ ನಿರ್ಮೋಹವೆಂಬ ಆಭರಣವ ತೊಡಿಸಿ, ಸುಸ್ಪರ್ಶನವೆಂಬ ನೈವೇದ್ಯವನರ್ಪಿಸಿ, ಅನುಭಾವವೆಂಬ ತಾಂಬೂಲವನಿತ್ತು, ಇಂತೀ ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿಸೂರ್ಯರಂತೆ ಬೆಳಗುವ, ಜಂಗಮಲಿಂಗವನ್ನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು, ಆ ಜಂಗಮಲಿಂಗದ ಪೂಜೆಯಂ ಸಮಾಪ್ತಿ ಮಾಡಿ, "ಓಂ ವಾಂ ವಾಂ ವಾಂ ವಾಂ ವಾಂ ವಾಂ" ಎಂಬ ವಾಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ, ಆ ಜಂಗಮಲಿಂಗವೇ ತಾನೆಂದರಿದು, ಎರಡಳಿದು ನಿಃಪ್ರಪಂಚಿಯಾಗಿ, ಆಚರಿಸಬಲ್ಲಾತನೇ ಅನುಭಾವ ಭಕ್ತಿಯನುಳ್ಳ, ಘನಪ್ರಾಣಲಿಂಗಿ ನೋಡಾ; ಸಂಗನಬಸವೇಶ್ವರಾ ॥ ೫ ॥

ಅಯ್ಯಾ ದರ್ಪಣಾಕೃತಿ, ಯಕಾರಪ್ರಣವು, ಪ್ರಣಮನಾದ, ವಿಶುದ್ಧಿ ಚಕ್ರ, ಕಪೋತವರ್ಣ, ಶರಣಸ್ಥಲ, ಆನಂದತನು, ಸುಜ್ಞಾನಹಸ್ತ, ಶ್ರೋತ್ರಮುಖ, ಆನಂದ ಭಕ್ತಿ, ಶಬ್ದ ಪದಾರ್ಥ, ಸುಶಬ್ದ ಪ್ರಸಾದ, ಸದಾಶಿವ ಪೂಜಾರಿ, ಸದಾಶಿವನಧಿದೇವತೆ, ಶಿವಸಾದಾಖ್ಯ ಪರಿಪೂರ್ಣವೆಂಬ ಲಕ್ಷಣ, ಅನಾದಿವತ್ ಸಂಜ್ಞೆ, ಊರ್ಧ್ವದಿಕ್ಕು, ಅಜಪ ವೇದ, ಆಕಾಶವೇ ಅಂಗ, ಶುದ್ಧಾತ್ಮ, ಪರಶಕ್ತಿ, ಶಾಂತತೀತಕಲೆ, ಇಂತು ೨೪ ಸಕೀಲನೊಳಕೊಂಡು ಎನ್ನ ವಿಶುದ್ಧಿ ಚಕ್ರವೆಂಬ ವೈಮುಕ್ತಿ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಈಳನ ಸ್ವರೂಪವಾದ, ಪ್ರಸಾದಲಿಂಗವೇ ವಿಶ್ವನಾಥಲಿಂಗವೆಂದು ಭಾವತ್ರಯವ ಮಡಿಮಾಡಿ, ಕ್ಷಮೆ ಎಂಬ ಜಲದಿಂದ ಮಜ್ಜನಕ್ಕೆರೆದು ಗಗನ ನಿವೃತ್ತಿಯಾದ ಗಂಧವ ಧರಿಸಿ ಜ್ಞಾನ ಸುಜ್ಞಾನವಾದಕ್ಷತೆಯನಿಟ್ಟು, ಅಲ್ಲಿಹ ಷೋಡಶದಳಂಗಳನೇ ಪುಷ್ಪದ ಮಾಲೆಯ ಧರಿಸಿ ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಹ ಕಪೋತ ವರ್ಣವೇ ಕರ್ಪೂರದ ಜ್ಯೋತಿಯೆಂದು ಬೆಳಗಿ, ಅಲ್ಲಿ ತೂರ್ಯಾತೀತಾವಸ್ಥೆಯೇ ನವೀನ ವಸ್ತ್ರವ ಹೊದಿಸಿ, ನಿರ್ಮದವೆಂಬಾಭರಣವ ತೊಡಿಸಿ, ಸುಶಬ್ದವೆಂಬ ನೈವೇದ್ಯವನರ್ಪಿಸಿ, ಆನಂದವೆಂಬ ತಾಂಬೂಲವನಿತ್ತು; ಇಂತೀ

ಪ್ರಸಾದಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿಸೂರ್ಯರ ಪ್ರಭೆಯಂತೆ ಬೆಳಗುವ ಪ್ರಸಾದಲಿಂಗವನ್ನು ಕಣ್ಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು; ಆ ಪ್ರಸಾದಲಿಂಗದ ಪೂಜೆ ಸಮಾಪ್ತಿ ಮಾಡಿ "ಓಂ ಯಂ ಯಂ ಯಂ ಯಂ ಯಂ ಯಂ" ಎಂಬ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ, ಆ ಪ್ರಸಾದಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿರ್ಮೋಹಿಯಾಗಿ; ಆಚರಿಸಬಲ್ಲಾತನೇ ಆನಂದ ಭಕ್ತಿಯನುಳ್ಳ ಶಿವಶರಣ ನೋಡಾ ಸಂಗನಬಸವೇಶ್ವರಾ ॥ ೬ ॥

ಆ ಮ್ಯಾ ಜ್ಯೋತಿರಾಕೃತಿ; ಓಂಕಾರ ಸ್ವರೂಪ; ಸಿಂಹನಾದ; ಅಜ್ಞಾಚಕ್ರ; ಮಾಣಿಕ್ಯ ವರ್ಣ ಐಕ್ಯಸ್ಥಲ; ಶುದ್ಧ ತನು; ಸದ್ಭಾವ ಹಸ್ತ; ಮಹಲಿಂಗ ಹೃದಯವೆಂಬ ಮುಖ; ಸಮರಸ ಭಕ್ತಿ; ತೃಪ್ತಿ ಪದಾರ್ಥ, ಸುತೃಪ್ತಿ ಪ್ರಸಾದ; ಮಹದೇವ ಪೂಜಾರಿ; ಮಹದೇವನಧಿದೇವತೆ; ಮಹಾ ಸಾದಾಖ್ಯ; ಅಖಂಡವೆಂಬ ಲಕ್ಷಣ, ಮಹವೆಂಬ ಸಂಜ್ಞೆ ಪಾತಾಳದಿಕ್ಕು; ಗಾಯತ್ರಿ ವೇದ; ಆತ್ಮನೇ ಅಂಗ; ಜ್ಞಾನಾತ್ಮ, ಚಿತ್‌ಶಕ್ತಿ; ಶಾಂತತೀತೋತ್ತರ ಕಲೆ, ಇಂತೀ ೨೪ ಸಕೀಲಂಗಳನೊಳಕೊಂಡು ಎನ್ನ ಆಜ್ಞಾ ಚಕ್ರವೆಂಬ ತ್ರಿಕೂಟ ಸಂಗಮ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಬೋಧಾಸ್ವರೂಪವಾದ ಮಹಲಿಂಗವೇ ಸಂಗಮೇಶ್ವರ ಲಿಂಗವೆಂದು; ಅವಸ್ಥಾತ್ರಯವ ಮಡಿಮಾಡಿ; ಸಂತೋಷವೆಂಬ ಜಲದಿಂ ಮಜ್ಜನವೆರೆದು; ಆತ್ಮ ನಿವೃತ್ತಿಯಾದ ಗಂಧವ ಧರಿಸಿ; ಭಾವ ಸದ್ಭಾವವಾದಕ್ಷತೆಯನಿಟ್ಟು; ಅಲ್ಲಿಯ ದ್ವಿದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ; ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ; ಅಲ್ಲಿಯ ಮಾಣಿಕ್ಯ ವರ್ಣವೇ ಕರ್ಪುರ ಜ್ಯೋತಿಯೆಂದು ಬೆಳಗಿ; ಅಲ್ಲಿಯ ನಿರಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ; ನಿರ್ಮಲವೆಂಬಾಭರಣವ ತೊಡಿಸಿ ತೊಡಿಸಿ; ಸುತೃಪ್ತಿ ಎಂಬ ನೈವೇದ್ಯವನರ್ಪಿಸಿ; ಸಮರಸವೆಂಬ ತಾಂಬೂಲವನಿತ್ತು; ಇಂತು ಮಹ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ; ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಮಹಲಿಂಗವ ಕಂಗಳತುಂಬ ನೋಡಿ; ಮನದಲ್ಲಿ ಸಂತೋಷಗೊಂಡು ಆ ಮಹಲಿಂಗದ ಪೂಜೆ ಸಮಾಪ್ತಿ ಮಾಡಿ "ಓಂ ಓಂ ಓಂ ಓಂ ಓಂ ಓಂ" ಎಂಬ ಓಂಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ; ಆ ಮಹಾಲಿಂಗವೇ ತಾನೆಂದರಿದು ಕೂಡಿ ಎರಡಳಿದು; ನಿತ್ಯ

ತೃಪ್ತನಾಗಾಚರಿಸಬಲ್ಲನನೇ ಸಮರಸ ಭಕ್ತಿಯುಳ್ಳ ಲಿಂಗೈಕ್ಯ ನೋಡಾ ಸಂಗನಬಸವೇಶ್ವರಾ ॥ ೭ ॥

ಅಯ್ಯಾ ನಿಃಕಲಾಕೃತಿ; ಬಕಾರ ಪ್ರಣವು, ಭ್ರಮರನಾದ; ಬ್ರಹ್ಮ ಚಕ್ರ, ಜ್ಯೋತಿವರ್ಣ, ನಿಃಕಳಂಕ ಸ್ಥಲ, ಚಿದ್ರೂಪ ತನು, ಸ್ವತಂತ್ರ ಹಸ್ತ, ನಿಃಕಳ ಲಿಂಗ, ಬ್ರಹ್ಮರಂಧ್ರ ಮುಖ, ಸದ್ಭಾವ ಭಕ್ತಿ. ಪರಮಾನಂದ ಪ್ರಸಾದ, ಶ್ರೀಗುರು ಪೂಜಾರಿ; ಶ್ರೀಗುರುವಧಿದೇವತೆ, ಅಗಮ್ಯವೆಂಬ ಲಕ್ಷಣ, ಅಪ್ರಮಾಣವೆಂಬ ಸಂಜ್ಞೆ, ಹೃತ್ಕಮಲ ದಿಕ್ಕು, ಧನುರ್ವೇದ, ಚಿತ್‌ಸೂರ್ಯನೇ ಅಂಗ ಮಹಾತ್ಮ್ಯ, ಅನಾದಿಶಕ್ತಿ, ನಿರ್ವಂಚಕ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು; ಎನ್ನ ಬ್ರಹ್ಮರಂಧ್ರ ಚಕ್ರದ ರಜತಾದ್ರಿಯೆಂಬ ಕ್ಷೇತ್ರದಲ್ಲಿ; ಮೂರ್ತಗೊಂಡಿರ್ದ ಶಿವದೀಕ್ಷಾ ಸ್ವರೂಪಾದ; ನಿಃಕಳಲಿಂಗವೇ ರಜತೇಶ್ವರ ಲಿಂಗವೆಂದು; ಗುಣತ್ರಯವ ಮಡಿಮಾಡಿ; ಸ್ವತಂತ್ರವೆಂಬ ಜಲದಿಂ ಮಜ್ಜನವೆರೆದು; ಸೂರ್ಯ ನಿವೃತ್ತಿಯಾದ; ಗಂಧವ ಧರಿಸಿ; ಪರತಂತ್ರವಳಿದು ಸ್ವತಂತ್ರವಾದಕ್ಷತೆಯನಿಟ್ಟು; ಅಲ್ಲಿಯ ಸಹಸ್ರ ದಳಂಗಳನೇ ಪುಷ್ಪದ ಮಾಲೆಯೆಂದು ಧರಿಸಿ; ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ,ಅಲ್ಲಿಯ ಜ್ಯೋತಿ ವರ್ಣದ ಜ್ಯೋತಿಯೆಂದು ಬೆಳಗಿ, ನಿಃಕಳಂಕ ಅವಸ್ಥೆಯೇ ನವೀನ ವಸ್ತ್ರವ ಹೊದ್ದಿಸಿ, ನಿರಾಭಾರವೆಂಬಾಭರಣವ ತೊಡಿಸಿ ಪರಮಾನಂದವೆಂಬ ತಾಂಬೂಲವನಿತ್ತು, ಇಂತು ನಿಃಕಳಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ದಶಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ನಿಃಕಳಲಿಂಗವ ಕಂಗಳತುಂಬ ನೋಡಿ ಮನದಲ್ಲಿ ಸಂತೋಷಗೊಂಡು, ಆ ನಿಃಕಳಲಿಂಗದ ಪೂಜೆ ಸಮಾಪ್ತಿ ಮಾಡಿ; ಕ್ರಿಯಾ ಜಪವೆಂಬ ದ್ವಾದಶ ಪ್ರಣವ ಮಂತ್ರಗಳಿಂದ ನಮಸ್ಕರಿಸಿ ಆ ನಿಃಕಳ ಲಿಂಗವೇ ತಾನೆಂದರಿಮು ಕೂಡಿ ಸ್ವತಂತ್ರನಾಗಿ, ಆಚರಿಸಬಲ್ಲಾತನೇ ಸದ್ಭಾವ ಭಕ್ತಿಯುಳ್ಳ ನಿಃಕಳಂಕ ನೋಡಾ ಸಂಗನಬಸವೇಶ್ವರಾ ॥ ೮

ಅಯ್ಯಾ ನಿಃಶೂನ್ಯಾಕೃತಿ, ಕ್ಷಕಾರ ಪ್ರಣವು, ದಿವ್ಯನಾದ, ಶಿಖಾ ಚಕ್ರ, ಮಾಣಿಕಜ್ಯೋತಿ ವರ್ಣ, ನಿರಾಲಂಬ ಸ್ಥಲ, ಚಿನ್ಮಯತನು, ನಿರಾಳ ಹಸ್ತ, ಶೂನ್ಯಲಿಂಗ, ಉನ್ಮನಿ ಮುಖ, ನಿರಹಂಕಾರ ಭಕ್ತಿ, ಪರಿಪೂರ್ಣ ಪದಾರ್ಥ; ಪರಿಪೂರ್ಣ ಪ್ರಸಾದ; ಪರಶಿವ ಪೂಜಾರಿ; ಪರಶಿವನಧಿ

ದೇವತೆ; ಅವಿರಳ ಸಾದಾಖ್ಯ; ಅಗಮ್ಯವೆಂಬ ಲಕ್ಷಣ, ನಿರ್ಮಾಯ ವೆಂಬ ಸಂಜ್ಞೆ, ಘೋಷ ದಿಕ್ಕು, ಮನೋಲಯುವೇದ, ಚಿತ್ ಚಂದ್ರನೇ ಅಂಗ, ದಿವ್ಯಾತ್ಮ ನಿಭ್ರಾಂತ ಶಕ್ತಿ, ಅನಂತ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು, ಎನ್ನ ಶಿಖಾಚಕ್ರವೆಂಬ ಹೇಮಾದ್ರಿ ಪರ್ವತ ಕ್ಷೇತ್ರದಲ್ಲಿ; ಮೂರ್ತವಗೊಂಡಿರ್ದ ಶಿವಮಂತ್ರ ಶಿಕ್ಷಾಕರ್ತೃ ಸ್ವರೂಪಾದ ಶೂನ್ಯ ಲಿಂಗವೇ ಹಿರಣ್ಯೇಶ್ವರ ಲಿಂಗವೆಂದು, ಕರಣತ್ರಯುವ ಮಡಿವಾಡಿ; ಅನುಪಮವೆಂಬ ಜಲದಿಂ ಮಜ್ಜನವೆರೆದು, ಚಂದ್ರ ನಿವೃತ್ತಿಯಾದ ಗಂಧ ಧರಿಸಿ; ಅವಿರಳದಕ್ಷತೆಯನಿಟ್ಟು, ಅಲ್ಲಿಯ ತ್ರಿದಳಂಗಳನೇ ಪುಷ್ಪದ ಮಾಲೆ ಎಂದು ಧರಿಸಿ, ಕನುಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯ ಮಹಜ್ಯೋತಿ ವರ್ಣವೇ ಕರ್ಪುರಜ್ಯೋತಿಯೆಂದು ಬೆಳಗಿ, ನಿಃಸಂಸಾರವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ಸದಾನಂದವೆಂಬಾಭರಣವ ತೊಡಿಸಿ, ಪರಿಪೂರ್ಣವೆಂಬ ನೈವೇದ್ಯವನರ್ಪಿಸಿ, ನಿರಹಂಕಾರವೆಂಬ ತಾಂಬೂಲವನಿತ್ತು, ಇಂತೀ ಶೂನ್ಯ ಲಿಂಗಕ್ಕೆ ಅಷ್ಟವಿಧಾರ್ಚನೆಯುಂ ಮಾಡಿ, ಶತಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ, ಶೂನ್ಯ ಲಿಂಗವನು, ಕಂಗಳತುಂಬ ನೋಡಿ, ಮನದಲ್ಲಿ ಸಂತೋಷಗೊಂಡು ಆ ಶೂನ್ಯ ಲಿಂಗದ ಪೂಜೆಯುಂ ಸಮಾಪ್ತಮಾಡಿ, ಜ್ಞಾನ ಜಪವೆಂಬ ದ್ವಾದಶ ಪ್ರಣವ ಮಂತ್ರಗಳಿಂದ ನಮಸ್ಕರಿಸಿ, ಆ ಶೂನ್ಯ ಲಿಂಗವೇ ತಾನೆಂದರಿದು, ಕೂಡಿ ಎರಡಳಿದು ನಿಃಸಂಸಾರಿಯಾಗಿ, ಆಚರಿಸಬಲ್ಲಾತನೇ ನಿರಹಂಕಾರ ಭಕ್ತಿಯುಳ್ಳ ನಿಜಾತ್ಮಲಿಂಗ ನೋಡಾ ಸಂಗನಬಸವೇಶ್ವರಾ ॥ ೯ ॥

ಅಯ್ಯಾ ನಿರಂಜನಾಕೃತಿ, ಹಕಾರ ಪ್ರಣವು, ಮಹನಾದ, ಪಶ್ಚಿಮ ಮುಖ, ಅಪ್ರಮಾಣ ಭಕ್ತಿ, ಅವಿರಳ ಪದಾರ್ಥ, ಅವಿರಳ ಪ್ರಸಾದ, ಪರಮೇಶ್ವರ ಪೂಜಾರಿ, ಪರಮೇಶ್ವರನಧಿದೇವತೆ, ನಿಶ್ಚಲ ಸಾದಾಖ್ಯ, ನಿರ್ವಂಚಕವೆಂಬ ಲಕ್ಷಣ, ಅವಿರಳವೆಂಬ ಸಂಜ್ಞೆ, ನಿರಾಳ ದಿಕ್ಕು, ಅಗಮ್ಯ ವೇದ, ಶಿವಯೋಗಿಯೇ ಅಂಗ, ಚಿನ್ಮಯಾತ್ಮ, ನಿರಾವಯ ಶಕ್ತಿ, ಅನಂತ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಪಶ್ಚಿಮ ಚಕ್ರವೆಂಬ, ಮಹಂ ಮೇರು ಪರ್ವತಕ್ಷೇತ್ರದಲ್ಲಿ, ಮೂರ್ತಗೊಂಡಿರ್ದ, ನಿಜಮೋಕ್ಷವಾದ ನಿರಂಜನ ಲಿಂಗವೇ ಶಾಂಭವ ಮೂರ್ತಿಲಿಂಗವೆಂದು, ಹಂಸತ್ರಯುವ ಮಡಿಮಾಡಿ, ನಿರ್ಭಾವವೆಂಬ ಜಲದಿಂ ಮಜ್ಜ

ನೆರೆಸು, ನಿರ್ಜಾತನೆಂಬ ಗಂಧವ ಧರಿಸಿ, ನಿರ್ಜಡವೆಂಬಕ್ಷತೆಯನಿಟ್ಟು, ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯಂ ಧರಿಸಿ, ನಿರ್ಲಜ್ಜವೆಂಬ ಧೂಪವ ಬೀಸಿ, ಸಾಲಂಬವೆಂಬ ಜ್ಯೋತಿಯ ಬೆಳಗಿ, ನಿರವಯುವೆಂಬ ವಸ್ತ್ರವ ಹೊದಿಸಿ, ನಿಸ್ಪೃಹವೆಂಬ ಆಭರಣವತೊಡಿಸಿ, ನಿರಾಳವೆಂಬ ನೈವೇದ್ಯವ ನರ್ಪಿಸಿ, ನಿರ್ವಾಣವೆಂಬ ತಾಂಬೂಲವನಿತ್ತು, ಇಂತು ನಿರಂಜನ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಸಹಸ್ರಕೋಟಿ ಸೂರ್ಯರಂತೆ ಬೆಳಗುವ, ನಿರಂಜನ ಲಿಂಗವನು ಕಂಗಳತುಂಬ ನೋಡಿ, ಮನದಲ್ಲಿ ಸಂತೋಷ ಗೊಂಡು, ಆ ನಿರಂಜನ ಜಂಗಮದ ಪೂಜೆ ಸಮಾಪ್ತಿಯಂ ಮಾಡಿ, ಮಹಜ್ಞಾನ ಜಪವೆಂಬ ದ್ವಾದಶಪ್ರಣವ ಮಂತ್ರಗಳಿಂದ ನಮಸ್ಕರಿಸಿ, ಆ ನಿರಂಜನ ಲಿಂಗವೇ ತಾನೆಂದರಿದು ಕೂಡಿಯುರಡಳಿದು, ನಿಜಾಂತರ್ಯಾಮಿಯಾಗಿ, ಆಚರಿಸಬಲ್ಲಾತನೇ ಅಪ್ರಮಾಣ ಭಕ್ತಿಯನುಳ್ಳ, ನಿಜಮೋಕ್ಷ ಸ್ವರೂಪನೋಡಾ ಸಂಗನಬಸವೇಶ್ವರಾ ॥ ೧೦ ॥

ಅಯ್ಯಾ ತಾರಕಾಕೃತಿ ಮೊದಲಾದ ನವಾಕೃತಿಗಳು ನಕಾರ ಪ್ರಣವು ಮೊದಲಾಗಿ ನವಪ್ರಣವುಗಳು ಭ್ರಮರನಾದ ಮೊದಲಾದ ನವನಾದಗಳು, ಆಧಾರ ಚಕ್ರ ಮೊದಲಾದ, ನವ ಚಕ್ರಗಳು, ಪೀತವರ್ಣ ಮೊದಲಾದ ನವವರ್ಣಗಳು, ಭಕ್ತಿಸ್ಥಲ ಮೊದಲಾದ ನವಸ್ಥಲಗಳು ಸ್ಥೂಲತನು ಮೊದಲಾದ ನವತನುಗಳು ಸುಚಿತ್ತಹಸ್ತ ಮೊದಲಾದ ನವಹಸ್ತಗಳು, ಆಚಾರಲಿಂಗ ಮೊದಲಾದ ನವಲಿಂಗಗಳ, ಘ್ರಾಣಮುಖ ಮೊದಲಾದ ನವಮುಖಗಳು ಶ್ರದ್ಧಾ ಭಕ್ತಿ ಮೊದಲಾದ ನವಭಕ್ತಿಗಳು, ಗಂಧಪದಾರ್ಥ ಮೊದಲಾದ ನವಪದಾರ್ಥಗಳು, ಸುಗಂಧಪ್ರಸಾದ ಮೊದಲಾದ ನವಪ್ರಸಾದಗಳು, ಬ್ರಹ್ಮಪೂಜಾರಿ ಮೊದಲಾದ ನವಪೂಜಾರಿಗಳು, ಬ್ರಹ್ಮನಧಿದೇವತೆ ಮೊದಲಾದ ನವ ಅಧಿದೇವತೆಗಳು, ಕರ್ಮಸಾದಾಖ್ಯ ಮೊದಲಾದ ನವಸಾದಾಖ್ಯಗಳು, ಸತ್ತುಲಕ್ಷಣ ಮೊದಲಾದ ನವಲಕ್ಷಣಗಳು, ಪರವೆಂಬ ಸಂಜ್ಞೆ ಮೊದಲಾದ ನವಸಂಜ್ಞೆಗಳು, ಪೂರ್ವದಿಕ್ಕು ಮೊದಲಾದ ನವದಿಕ್ಕುಗಳು, ಋಗ್ವೇದ ಮೊದಲಾದ ನವವೇದಗಳು, ಚಿತ್ಪೃಥ್ವಿ ಮೊದಲಾದ ನವಅಂಗಗಳು, ಜೀವಾತ್ಮ ಮೊದಲಾದ ನವ ಆತ್ಮರು, ಕ್ರಿಯಾಶಕ್ತಿ ಮೊದಲಾದ ನವಶಕ್ತಿಯರು, ನಿವೃತ್ತಿಕಲೆಮೊದಲಾದ ನವಕಲೆಗಳು ಇಂತು ೨೪ ಸಕೀಲಂಗಳು, ನವವಿಧತೆ ದಿಂದ

ತಾಟಿ ಸಕೀಲಂಗಳು ಸಮಸ್ತ ಕ್ಷೇತ್ರವನೊಳಕೊಂಡು ನಿನ್ನ ಅಣುಚಕ್ರವೆಂಬ ಪರಮ ಕೈಲಾಸ ಚಿದಾಕಾಶ ಮಂಡಲದ ವರಚೌಕ ಮಂಟಪದ ನವರತ್ನಖಚಿತ ಶೂನ್ಯಸಿಂಹಾಸನ ಪೀಠದಲ್ಲಿ ಮೂರ್ತಿಗೊಂಡಿರ್ದ ಪರಾತ್ಪರ ನಿಜ ಜಂಗಮ ಲಿಂಗ ಸ್ವರೂಪ ಸರ್ವ ಚೈತನ್ಯಾಧಾರ ಅಣುಲಿಂಗ ಜಂಗಮವೇ ಪರತತ್ವ ನಿಃಕಲಪರಬ್ರಹ್ಮಮೂರ್ತಿ ಲಿಂಗಜಂಗಮಪ್ರಸಾದವೆಂದು ತನುತ್ರಯ ಮನತ್ರಯ ಭಾವತ್ರಯ ಪ್ರಾಣತ್ರಯ ಗುಣತ್ರಯ ಅವಸ್ಥಾತ್ರಯ ತತ್ವತ್ರಯ ಕರಣತ್ರಯ ಹಂಸತ್ರಯಂಗಳ ಪೂರ್ಣ ಮಡಿಮಾಡಿ ನಿರ್ನಾಮವೆಂಬ ಜಲದಿಂ ಮಜ್ಜನಕ್ಕೆರದು ನಿಃಕಾರಣವೆಂಬ ಗಂಧವಧರಿಸಿ ನಿಃಸಂಗವೆಂಬಕ್ಷತೆಯನಿಟ್ಟು ಪರಿಪೂರ್ಣವೆಂಬ ಪುಷ್ಪದ ಮಾಲೆಯಂಧರಿಸಿ ನಿರುಪಾಧಿಕವೆಂಬ ಧೂಪವಬೀಸಿ ನಿಃಕಳೆಯೆಂಬ ಜ್ಯೋತಿಯಬೆಳಗಿ ನಿಂರಾಳವೆಂಬ ವಸ್ತ್ರವಹೊದಿಸಿ ಪರಮ ನಿಜಾಭರಣವ ತೊಡಿಸಿ ನಿಃಶೂನ್ಯವೆಂಬ ನೈವೇದ್ಯವನರ್ಪಿಸಿ ನಿರಾವಯವೆಂಬ ತಾಂಬೂಲವನಿತ್ತು ಇಂತು ಅಣುಲಿಂಗ ಜಂಗಮ ಪ್ರಸಾದಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಅನಂತಕೋಟಿ ಸೂರ್ಯ ಚಂದ್ರಾಗ್ನಿಪ್ರಭೆಯಂತೆ ಬೆಳಗುವ ಗಣುಲಿಂಗ ಜಂಗಮ ಪ್ರಸಾದವನ್ನೇ ಅನಿಮಿಷ ದೃಷ್ಟಿಯಿಂ ನಿರೀಕ್ಷಿಸಿ ಉನ್ಮನಾಗ್ರದಲ್ಲಿ ಸಂತೋಷಗೊಂಡು ಆ ಅಣುಲಿಂಗ ಜಂಗಮ ಪ್ರಸಾದ ಪೂಜೆಸಮಾಪ್ತಿಯಂ ಮಾಡಿ ಅನಂತಕೋಟಿ ಮಹಮಂತ್ರಗಳಿಂದ ನಮಸ್ಕರಿಸಿ ಆ ಅಣುಲಿಂಗ ಜಂಗಮ ಪ್ರಸಾದವೇ ತಾನೆಂದರಿದು ಎರಕತ್ವದಿಂ ನಿಶ್ಚಲಚಿತ್ತದೊಳ್ಕೂಡಿ ಉಭಯವಳಿದು ಇಹಪರಂಗಳ ಹೊದ್ದದೆ ಕನ್ನಡಿಯ ಪ್ರತಿಬಿಂಬದಂತೆ ಸರ್ವಸಂಗ ಪರಿತ್ಯಾಗತ್ವದಿಂದ ನಿಜಾಚರಣೆಯಲ್ಲಿ ಆಚರಿಸಬಲ್ಲಾತನೇ ದಶವಿಧ ಲಿಂಗ ಜಂಗಮ ಸಂಗ ಭಕ್ತಪ್ರಸಾದುಳ್ಳ ಅನಾದಿ ಅಖಂಡ ಚಿಜ್ಯೋತಿ ಸದ್ಭಕ್ತ ಜಂಗಮ ನೋಡಾ ಸಂಗನ ಬಸವೇಶ್ವರಾ. ॥ ೧೧ ॥

ಅಯ್ಯಾ ಇಂತು ಬೆಳಗುವ ನಿಜವಸ್ತುವ, ಅಂಗಲಿಂಗವೆಂಬ ಪ್ರತಿದೋರವೆ, ತನ್ನ ನಿಜಚಿದ್ಬೆಳಗ ತಾನೇ ನೋಡಿ, ಕೂಡಿ ಅರ್ಚಿಸುವ ವಿಚಾರವೆಂತೆಂದಡೆಃ— ಅಯ್ಯಾ ಬಿಳಿಯ ಮುಗಿಲಿನ ಕರಿಯ ನಕ್ಷತ್ರದಲ್ಲಿ, ಉರಿಯ ಅಂಕುರ ಉಂಟು. ಒಂದೆರಡೊಂಭತ್ತು ಉರಿಯುತ್ತಿದೆ. ಹೊಸತಲ ಜ್ಯೋತಿಯಂತೆ; ಒಳಹೊರಗೆ ಬೆಳಗುತ್ತಿದೆ. ಅದು ನೋಡಿ

ದರೆ ಘನ, ನೋಡದಿರ್ದಡೆ ಸಹಜ, ಈ ಭೇದವ ಗುಹೇಶ್ವರ ಲಿಂಗದಲ್ಲಿ. ಚನ್ನ ಬಸವಣ್ಣನೇ ಬಲ್ಲ. ಬೆಸಗೊಂಬ ಬಾರೋ ಸಿದ್ಧರಾಮಯ್ಯ, ಎಂದು ಶೂನ್ಯ ಸಿಂಹಾಸನದಲ್ಲಿ ಪ್ರಭುಸ್ವಾಮಿಗಳು ನಿರೂಪಮಂ ಕೊಡುತಿರ್ದರು ನೋಡಯ್ಯ. ನೀಲಮಣಿ ಮಧ್ಯ ಸ್ಥಾನದಲ್ಲಿ, ಕಾರಮೇಘ ಮಿಂಚಿನ ಪ್ರಕಾಶವಾಗಿ; ಚಿದಾಕಾರ ಸ್ವರೂಪಿನಿಂದ; ಪೀತವರ್ಣ ಮೊದಲಾಗಿ ಅನಂತ ಸ್ವರೂಪವಾಗಿ, ಅತ್ಯಂತವಾದ ಅಣುರೂಪವಾಗಿ; ಅನಂತ ಪ್ರಕಾರ ಕಾಣಲ್ಪಡುವದು ನಿಜಶಿವಯೋಗ ಲಿಂಗಧ್ಯಾನಿಗಳಿಗೆ. ಅನಾದಿ ಮೂಲ ಪ್ರಣವ ಸ್ವರೂಪದಿಂದ, ಮುಖಕಮಲದ ಮೇಲೆ ಕಾಣಲ್ಪಡುವದು ನೋಡಾ; ಅದೆಂತೆಂದೊಡೆ:— ಮುಖಮಧ್ಯದಲ್ಲಿ ನೇತ್ರ; ನೇತ್ರ ಮಧ್ಯದಲ್ಲಿ ಮನ, ಮನದ ಮಧ್ಯದಲ್ಲಿ ತಾನೇ ತಾನಲ್ಲದೆ ಮತ್ತೊಂದು ಸಾಧಕವಿಲ್ಲದೆ; ನಿಜತಾರಕ ಬ್ರಹ್ಮಶಾಂಭವ ಮೂರ್ತಿ ನೋಡಾ; ಅಯ್ಯಾ ನಿಜಶಿವಯೋಗಿಯ ನೋಟವೇ ಕೂಟ. ಕೂಟವೇ ಪ್ರಾಣ; ಪ್ರಾಣವೇ ಲಿಂಗಾಂಗ ಸಮರಸ ಪರಿಪೂರ್ಣ ಪರಬ್ರಹ್ಮವು ತಾನೇ ನೋಡಾ; ಈ ನಿಜವಸ್ತು ನೆಲಸಿರ್ಪ ನೇತ್ರವೇ ಗುಹ್ಯಕ್ಕೆ ಗುಹ್ಯ; ಗೋಪ್ಯಕ್ಕೆ ಗೋಪ್ಯ, ರಹಸ್ಯಕ್ಕೆ ರಹಸ್ಯ; ನೋಟಕ್ಕೆ ನೋಟ; ಕೂಟಕ್ಕೆ ಕೂಟ; ಬೇಟಕ್ಕೆ ಬೇಟ ಅದೆಂತೆಂದೊಡೆ:—

**ಲಿಂಗಸ್ಯಸಾಯುಕಂ ನೇತ್ರ ಚಕ್ಷು ಲಿಂಗಸ್ಯ ಚಾಕ್ಷುಸಿ ।**

ಎಂದುದಾಗಿ ಗುರುಕಟಾಕ್ಷೆಯಿಂದ; ಇಷ್ಟ ಪ್ರಾಣ ಭಾವಲಿಂಗ ಸಂಬಂಧವಾದ; ಮಹಾಘನ ಚಕ್ಷುವೇ ಗುಹೇಶ್ವರ ಲಿಂಗಕ್ಕೆ ಮಹಪ್ರಸಾದ ನೋಡಾ ಸಿದ್ಧರಾಮಯ್ಯ ಎಂದು ಪ್ರಭುಸ್ವಾಮಿಗಳು ನಿರೂಪವಂ ಕೊಡುತ್ತಿರ್ದರು ನೋಡಾ; ಸಂಗನಬಸವೇಶ್ವರಾ. ॥ ೧೨ ॥

# ಆರು ಲೇಸು ?

—x—

೧ ಕೆಲನಿಮಿಷದೀ ಜಗದ,
ಜಂಜಾಟದಲಿ ಸಿಲುಕಿ,
ಜರ್ಜರಿತನಾಗದಿಹ,
ಮಾನವ ನಿನಗಿನ್ನಾರು ಲೇಸು ?

೨ ಕ್ಷಣಿಕ ಸುಖ ತೊರೆದು,
ಪರಮ ಸುಖ ಪಡೆದು,
ನಿರತ ನಿತ್ಯಾತ್ಮನಲಿ,
ನಿಂದ ಮಾನವಗಾರು ಲೇಸು ?

೩ ಬಂದುದಕೆ ಕಾರಣವು,
ಬಂದವನು ತಾನಾರು ?
ಎಂಬುದನು ಅರಿತ,
ಅನುಭಾವಿಗಿನ್ನಾರು ಲೇಸು ?

೪ ಲೇಸು ಲೇಸನೆ ಮಾಡಿ,
ಹೇಸಿ ಸಂಸಾರದಲಿ,
ಸಿಲುಕದಿಹ ನರಗೆ,
ಬೇರೆ ನರನಿನ್ನಾರು ಲೇಸು ?

೫ ಪ್ರಪಂಚದಲಿ ಇದ್ದರ್ೂ,
ಪರಮಾರ್ಥ ಸಾಧಿಸಿದ,
ಪರಮ ಸಾಧಕಗೆ,
ಪರಸಾಧಕರಾರು ಲೇಸು ?

೬ ಅಂಗ ಲಿಂಗಗಳರಿವ,
ಅಂಗದಲೆ ಅರಿತು,
ಲಿಂಗದಲಿ ಬೆರೆತ,
ಶರಣಂಗೆ ಇನ್ನಾರು ಲೇಸು ?

೭ ಹಗಲಿರುಳು ಹರನಾಮ,
ನಿಷ್ಕಾಮ ಭಕ್ತಿಯಲಿ,
ನಿತ್ಯದಿ ನೆಲಿಸುತಿಹ,
ನರಗೆ ಹರನಾರು ಲೇಸು ?

೮ ನರನಂತೆ ಜನಿಸಿ,
ಹರನಂತೆ ನೆಲಿಸಿ,
ಸರ್ವರಿಗೆ ಹರಿಸಿ,
ಹರನಾದಂಗಿನ್ನಾರು ಲೇಸು ?

— ಬಿ. ವ್ಹಿ. ಕತ್ತಿ. ಕಾದರವಳ್ಳಿ ( ಜಿ. ಬೆಳಗಾಂವ )

# ಶಿವಶರಣರ ಚರಿತ್ರೆಗಳು.

## ಭಾಗ ೪.

---

### ಕಿನ್ನರಿ ಬ್ರಹ್ಮಯ್ಯ.

ದಕ್ಷಿಣ ದೇಶದಲ್ಲಿ ಸೂಡೂರೆಂಬ ಗ್ರಾಮವಿರುತ್ತದೆ. ಅಲ್ಲಿ ಕಿನ್ನರೀ ಬ್ರಹ್ಮಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನ ತಾಯಿಯ ಹೆಸರು ಕಲಿದೇವಿ. ತಂದೆಯ ಹೆಸರು ನಮಗೆ ಇನ್ನೂ ತಿಳಿದಿರುವದಿಲ್ಲ. ಅವನು ಕುಲದಿಂದ ಅಕ್ಕಸಾಲಿಗನಾಗಿದ್ದನು. ಅವನು ಚಿನ್ನಬೆಳ್ಳಿ ಮೊದಲಾದ ಬೆಲೆಯುಳ್ಳ ಧಾತುಗಳಿಂದ ಆಭರಣಗಳನ್ನು ಮಾಡುವಲ್ಲಿ ನಿಷ್ಣಾತನಾಗಿದ್ದನು. ಈ ಉದ್ಯೋಗದಿಂದ ಅವನು ಸಿರಿವಂತನೂ ಆಗಿದ್ದನು. ಆದರೆ ಅವನು ಕೇವಲ ಶಿವಭಕ್ತಿಯುಳ್ಳವನಾದ್ದರಿಂದ ಅವನು ದಿನಾಲು ತನ್ನ ಗ್ರಾಮದಲ್ಲಿದ್ದ ಶಿವಾಲಯಕ್ಕೆ ಹೋಗಿ ಅಲ್ಲಿ ಕಿನ್ನರಿಯನ್ನು ನುಡಿಸುತ್ತ ದೇವರ ಪ್ರಾರ್ಥನೆಯನ್ನು ಮಾಡುವನು. ಇದರಿಂದ ಅವನು ದೇವರಿಗೆ ಪ್ರಿಯನಾಗಿ ದೇವರಿಂದ ದಿನಾಲು ೧೧ ಹಣ ದ್ರವ್ಯವನ್ನು ಪಡೆಯುತ್ತಿದ್ದನು. ಪರಮ ಶಿವಭಕ್ತನಾದ ನಂಬೆಣ್ಣನೂ ಕೂಡ ಇದೇ ರೀತಿಯಾಗಿ ದೇವರಿಂದ ಕಾಣಿಕೆಯಾಗಿ ಹಣವನ್ನು ಸಂಪಾದನೆಮಾಡಿ ತನ್ನ ಸ್ತ್ರೀಯಳಿಗೆ ಅದನ್ನು ಕೊಡುತ್ತಿದ್ದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಆದರೆ ಕಿನ್ನರಿ ಬ್ರಹ್ಮಯ್ಯನು ತನಗೆ ದೊರೆದ ಇಂಥ ಹಣವನ್ನು ತಾನು ಸೇವಿಸದೆ ದಾಸೋಹಕ್ಕಾಗಿ ಉಪಯೋಗಿಸುವನು. ಅವನು ಅಕ್ಕಸಾಲಿಗನಾಗಿದ್ದರೂ ಅವನು ಕಿನ್ನರಿಯನ್ನು ನುಡಿಸಿ ದೇವರನ್ನು ಮೆಚ್ಚಿಸಿದವನಾದ್ದರಿಂದ ಜನರು ಅವನನ್ನು 'ಕಿನ್ನರೀ ಬ್ರಹ್ಮಯ್ಯ' ನೆಂದು ಕರೆಯುತ್ತಿದ್ದರು. ಅವನು ಮುಂದಾದರೂ ಇದೇ ಹೆಸರಿನಿಂದ ಪ್ರಸಿದ್ಧನಾದನು.

ಕಿನ್ನರೀ ಬ್ರಹ್ಮಯ್ಯನ ಕೀರ್ತಿಯು ಇದರಿಂದ ಎಲ್ಲ ಕಡೆಗೂ ಹಬ್ಬಿತು. ಇದು ಕಲ್ಯಾಣಪಟ್ಟಣದಲ್ಲಿದ್ದ ಬಸವೇಶ್ವರನಿಗೂ ತಿಳಿದುಬಂದಿತು. ಅವನು ಕಿನ್ನರೀ ಬ್ರಹ್ಮಯ್ಯನನ್ನು ಎಂದು ನೋಡುವೆನೋ ಎಂಬುದನ್ನೇ ಯಾವಾ

ಗಲೂ ಚಿಂತಿಸುತ್ತಿದ್ದನು. ಹಾಗೆಯೇ ಬಸವೇಶ್ವರನ ಕೀರ್ತಿನಾಲ್ದೆಯಾದರೂ ದೇಶದ ತುಂಬೆಲ್ಲ ಹಬ್ಬಿದ್ದರಿಂದ ಕಿನ್ನರೀ ಬ್ರಹ್ಮಯ್ಯನಾದರೂ ಅವನನ್ನು ಕಾಣಬೇಕೆಂದು ಕಲ್ಯಾಣಪಟ್ಟಣಕ್ಕೆ ಬರುವವನಾದನು. ಅವನು ಮೊದಲು ತ್ರಿಪುರಾಂತಕ ದೇವಾಲಯಕ್ಕೆ ಬಂದು ಅಲ್ಲಿಯ ತ್ರಿಪುರಾಂತಕೇಶ್ವರನನ್ನು ತನ್ನ ಕಿನ್ನರಿಯ ಮೂಲಕ ದಿನಾಲು ಭಜಿಸಲು ಪ್ರಾರಂಭಿಸಿದನು. ಆಗ ಆ ಲಿಂಗವು ಅವನಿಗೆ ೧೧ ಹಣ ದ್ರವ್ಯವನ್ನು ದಯಪಾಲಿಸಿತು. ಆದರೆ ಕಿನ್ನರೀ ಬ್ರಹ್ಮಯ್ಯನು ಅದರ ಮೇಲೆ ಉಪಜೀವಿಸದೆ ತನ್ನ ಅಕ್ಕಸಾಲಿಗ ಉದ್ಯೋಗವನ್ನು ಕಲ್ಯಾಣ ಪಟ್ಟಣದಲ್ಲಿ ನಡಿಸುತ್ತ ಅದರಿಂದ ಬಂದ ಕೂಲಿಯಿಂದಲೇ ತನ್ನ ನಿರ್ವಾಹಸಾಗಿಸುತ್ತ ಗುರುಲಿಂಗಜಂಗಮ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು.

ಹೀಗೆ ಅವನು ಕಲ್ಯಾಣ ಪಟ್ಟಣದಲ್ಲಿ ದಾಸೋಹವನ್ನು ನಡಿಸುತ್ತಿದ್ದುದನ್ನು ಬಸವೇಶ್ವರನು ಕೇಳಿ ಅವನನ್ನು ಅಗಿಂದಾಗ್ಗೆ ಕಂಡು ಆದರಿಸುವನು. ಕಿನ್ನರಯ್ಯನು ಶಿವಾನುಭವ ಮಂಟಪದಲ್ಲಿ ಸೇರ್ಪಡೆಯಾಗಿ ಅಲ್ಲಿ ತನ್ನ ಅನುಭಾವವನ್ನು ವಚನಗಳ ಮೂಲಕ ಶಿವಶರಣರೊಡನೆ ಹೇಳುವವನಾದನು. "ತ್ರಿಪುರಾಂತಕ ಲಿಂಗ" ಎಂಬುವೇ ಅವನ ವಚನಗಳ ಮುದ್ರಿಕೆಯಾಗಿತ್ತು. ಈ ಮುದ್ರಿಕೆಯುಳ್ಳ ಅವನ ಐದು ವಚನಗಳು ಮಾತ್ರ ನಮಗೆ ದೊರಕಿರುತ್ತವೆ. ಅವನು ಇನ್ನೂ ಅನೇಕ ವಚನಗಳನ್ನು ರಚಿಸಿರಬಹುದೆಂದು ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿರುವದಿಲ್ಲ.

ಹೀಗೆ ಕಿನ್ನರೀ ಬ್ರಹ್ಮಯ್ಯನು ಪರಮಾತ್ಮನನ್ನು ಭಜಿಸುತ್ತ ತನ್ನ ಅಕ್ಕಸಾಲಿಗ ಉದ್ಯೋಗವನ್ನು ನಡಿಸುತ್ತ ಕಲ್ಯಾಣ ಪಟ್ಟಣದಲ್ಲಿರಲು ಅವನು ಒಂದು ದಿವಸ ತ್ರಿಪುರಾಂತಕೇಶ್ವರನ ದೇವಾಲಯದಲ್ಲಿದ್ದಾಗ ಒಂದು ಕುರಿಯು ತನ್ನನ್ನು ಒಯ್ಯುತ್ತಿದ್ದವನ ಕಯ್ಯಿಂದ ಕೊಸರಿಕೊಂಡು ಓಡಿಬಂದು ಆ ದೇವಾಲಯವನ್ನು ಪ್ರವೇಶಿಸಿತು. ಅಲ್ಲಿ ಸಮೀಪದಲ್ಲಿ ಕುಳಿತಿದ್ದ ಕಿನ್ನರೀ ಬ್ರಹ್ಮಯ್ಯನು ಈ ಕುರಿಯು ತನ್ನ ಮೊರೆಹೊಕ್ಕಿತೆಂದು ತಿಳಿದು ಅದನ್ನು ಕಾಯಬೇಕೆಂಬ ಅಭಿಲಾಷೆಯುಳ್ಳವನಾಗಿ ಅದಕ್ಕೆ ಲಿಂಗಮುದ್ರೆಯನ್ನು ಒತ್ತಿದನು.

ಆ ಕುರಿಯನ್ನು ಹುಡುಕುತ್ತ ಬರುತ್ತಿದ್ದ ಒಬ್ಬ ವಿಟನು ದೇವಾಲಯಕ್ಕೆಯೇ ಬಂದು— ಈ ಕುರಿಯು ನನ್ನದು ಇದನ್ನು ನನ್ನ ಸ್ತ್ರೀಯ

ಳಿಗೆ ಒಯ್ಯಬೇಕಾಗಿದೆ. ಇದನ್ನು ತೆಗೆದುಕೊಂಡು ಹೋಗುವೆನೆಂದು ಅದನ್ನು ಬಲಾತ್ಕಾರದಿಂದ ಜಗ್ಗಿ ಎಳೆಯುತ್ತಿದನು. ಆಗ ಕಿನ್ನರಯ್ಯನು- ಇದರ ಬೆಲೆಯನ್ನು ನಾನು ಕೊಡುವೆನು. ಇದನ್ನು ಬಿಡೆಂದು ಎಷ್ಟು ಹೇಳಿದರೂ ಆ ವಿಟನು ಕೇಳಲಿಲ್ಲ. ಒಂದು ಸಾವಿರ ಹೊನ್ನು ಕೊಡುವೆನೆಂದು ಹೇಳಿದರೂ ಅವನು ಕೇಳಲಿಲ್ಲ. ಇದಕ್ಕೆ ಲಿಂಗಮುದ್ರೆ ಇದೆ, ಇದು ದೇವರ ಪಶು–ಎಂದು ಹೇಳಿದರೂ ಕೇಳಲಿಲ್ಲ. ಆ ವಿಟನು ಅದನ್ನು ಜಗ್ಗಿ ಎಳೆದೊಯ್ಯಹತ್ತಿದನು. ಕಿನ್ನರೀ ಬ್ರಹ್ಮಯ್ಯನು ಅದನ್ನು ನೋಡಿ ಕುಪಿತನಾಗಿ ತನ್ನ ಕತ್ತಿಯಿಂದ ಆ ವಿಟನನ್ನು ಹೊಡೆದು ಕೊಂದು ಹಾಕಿದನು.

ಬ್ರಹ್ಮಯ್ಯನು ಹೀಗೆ ಅವನನ್ನು ಕೊಂದುಹಾಕಿದ ವಾರ್ತೆಯು ಬಿಜ್ಜಳನಿಗೆ ತಿಳಿಯಿತು. ಆಗ ಅವನು ಬಸವೇಶ್ವರನಿಗೆ— ಇದು ಅನ್ಯಾಯವು. ಭಕ್ತರಾದವರು ಹೀಗೆ ಮನುಷ್ಯವಧೆ ಮಾಡಬೇಕೇ ಎಂದು ಕೇಳಲು ಬಸವೇಶ್ವರನು ನಿಜಸ್ಥಿತಿಯನ್ನು ಅಲ್ಲಿಗೆ ಹೋಗಿ ಅರಿತುಕೊಳ್ಳುವಾ ಎಂದು ನುಡಿಯಲು ಉಭಯತರು ತ್ರಿಪುರಾಂತಕ ದೇವಾಲಯಕ್ಕೆ ಬಂದರು. ಆಗ ಅವರು ನಡೆದ ಸಂಗತಿಗಳನ್ನು ತಿಳಿದು—ಇದರಲ್ಲಿ ಯಾರ ತಪ್ಪು ಇದೆ ಎಂದು ಬಿಜ್ಜಳನು ಲಿಂಗಕ್ಕೆಯೇ ಕೇಳಲು ಇದರಲ್ಲಿ ವಿಟನ ತಪ್ಪು ಇದೆ, ಕಿನ್ನರಯ್ಯನ ತಪ್ಪಿತನಲ್ಲ ಎಂಬ ಶಬ್ದಗಳು ಅದರೊಳಗಿಂದ ಹೊರಟವು. ಈ ಅದ್ಭುತವನ್ನು ನೋಡಿ ಎಲ್ಲರೂ ಬೆರಗಾದರು. ಶಿವಶರಣರು ತಪ್ಪು ನಡೆಯುವವರಲ್ಲ ಎಂದು ಬಿಜ್ಜಳನು ನುಡಿಯುತ್ತ ಕಿನ್ನರಿ ಬ್ರಹ್ಮಯ್ಯನಿಗೆ ವಂದಿಸಿದನು ಆಗ ಕಿನ್ನರಯ್ಯನು ತಾನು ಸಿರವನರಿದ ವಿಟನಿಗೆ ಪ್ರಾಣದಾನ ಮಾಡಲು ಪರಮಾತ್ಮನಿಗೆ ಬೇಡಿಕೊಳ್ಳಲು ಅವನು ಚೇತರಿಸಿಕೊಂಡು ಎದ್ದು ಕುಳಿತನು. ಬಿಜ್ಜಳನು ಅದನ್ನು ನೋಡಿ ಭಕ್ತರನ್ನು ಹೊಗಳುತ್ತ ತನ್ನರಮನೆಗೆ ಬಂದನು.

ಇತ್ತ ಕಿನ್ನರಯ್ಯನು ಕಲ್ಯಾಣ ಪಟ್ಟಣದಲ್ಲಿ ತನ್ನ ಅಕ್ಕಸಾಲಿಗ ಉದ್ಯೋಗವನ್ನು ನಡಿಸುತ್ತ ಬಂದನು. ಇದರಿಂದ ಅವನು ಧನವಂತನೆಂದು ಖ್ಯಾತಿಯನ್ನು ಹೊಂದಿದನು. ಆಗ ಬಹು ಜನ ಬಡಬಗ್ಗರೂ ಜಂಗಮರೂ ಅವನಲ್ಲಿಗೆ ಬಂದು ಅವನಿಂದ ಸಹಾಯವನ್ನು ಹೊಂದುವವ

ರಾದರು. ಕಿನ್ನರಯ್ಯನಾದರೂ ಯಾರಿಗೂ ಇಲ್ಲೆನ್ನದೆ ದಾನಧರ್ಮ ಮಾಡುವಲ್ಲಿ ಪ್ರಸಿದ್ಧಿಯನ್ನು ಹೊಂದಿದನು. ಈ ಸಂಗತಿಯು ಕಲ್ಲಕೇತ ಬೊಮ್ಮಯ್ಯನ ಚರಿತ್ರೆಯನ್ನು (೧) ನೋಡಿದಲ್ಲಿ ಸ್ಪಷ್ಟಪಡುವದು. ಕಿನ್ನರಯ್ಯನ ಈ ಉದಾರ ವೃತ್ತಿಯನ್ನು ಬಹು ಜನರು ನೋಡಿ ಅವನಂತೆಯೇ ವರ್ತಿಸುವವರಾದರು.

ಆದರೆ ಸದ್ಗುಣಗಳಿದ್ದಲ್ಲಿ ಮಾತ್ಸರ್ಯ ಗುಣವಾದರೂ ಹೆರವರಲ್ಲಿ ಅಂಕುರಿಸಿ ಅದು ಕಾರ್ಯಕ್ಕೆ ಅಡ್ಡಿಯನ್ನುಂಟುಮಾಡುತ್ತದೆ. ಇದು ಕಿನ್ನರಯ್ಯನ ವಿಷಯದಲ್ಲಾದರೂ ಕಂಡುಬಂದಿತು. ಅವನು ದುರ್ಗುಣ್ಯವನೆಂದು ವಿರೋಧಿಗಳು ತಿಳಿದು ಅವನ ವಿಷಯವಾಗಿ ತಪ್ಪು ಕಲ್ಪನೆಗಳನ್ನುಂಟು ಮಾಡಲು ಹಿಂದಾಗಲಿಲ್ಲ. ಒಂದು ದಿನ ಬಿಜ್ಜಳನು ಕಿನ್ನರಯ್ಯನು ಅಕ್ಕಸಾಲಿಗ ಉದ್ಯೋಗ ಮಾಡುವವನೆಂಬುದನ್ನು ತಿಳಿದು ಅವನು ೧೦ ಸಾವಿರ ವರಹ ಬೆಲೆಯುಳ್ಳ ಬಂಗಾರವನ್ನು ಬಸವೇಶ್ವರನ ಕಯ್ಯಲ್ಲಿ ಕೊಟ್ಟು ಅದರಿಂದ ಕಿನ್ನರಯ್ಯನ ಕಡೆಯಿಂದ ಆಭರಣಗಳನ್ನು ಮಾಡಿಸೆಂದು ಆಜ್ಞಾಪಿಸಿದನು. ಆಗ ಆ ಚಿನ್ನವನ್ನು ಬಸವೇಶ್ವರನು ಕಿನ್ನರಯ್ಯನ ಕಡೆಗೆ ಕೊಡಲು ಅವನು ಆಭರಣಗಳನ್ನು ಮಾಡಲು ಉದ್ಯೋಗಿಸಿದನು. ಆಗ ಎಂದಿನಂತೆ ಒಬ್ಬ ಬಡ ಜಂಗಮನು ಬಂದು ತನಗೆ ಚಿನ್ನವನ್ನು ಕೊಡಲು ಕೇಳಲು ಕಿನ್ನರಯ್ಯನು ಜಂಗಮ ಪ್ರೇಮಿಯಾದ್ದರಿಂದ ಅವನಿಗೆ ಕೆಲವು ಚಿನ್ನವನ್ನು ತಂದುಕೊಟ್ಟನು. ಹೀಗೆಯೇ ಅನೇಕ ಜಂಗಮರು ಚಿನ್ನವನ್ನು ಬೇಡಹತ್ತಲು ಅವರಿಗೂ ಕೊಟ್ಟನು. ಇದರಿಂದ ಬಹು ಜನರು ಬಿಜ್ಜಳನ ಬಂಗಾರವನ್ನು ಕಿನ್ನರಯ್ಯನು ಹೀಗೆ ದುರುಪಯೋಗ ಮಾಡುತ್ತಿರುವನೆಂದು ಅಪಪ್ರಚಾರ ಮಾಡಹತ್ತಿದರು. ಆದರೆ ಕಿನ್ನರಯ್ಯನು ತಾನು ಮಾಡತಕ್ಕ ಆಭರಣಗಳನ್ನು ಮಾಡಿ ಬಸವನಿಗೆ ತೋರಿಸಲಾಗಿ ಅವನು ಅವುಗಳನ್ನು ತೂಕ ಮಾಡಲು ತಾನು ಮೊದಲಿಗೆ ಕೊಟ್ಟಷ್ಟೇ ಚಿನ್ನವು ಅವುಗಳಲ್ಲಿದ್ದುದು ಕಂಡುಬಂದಿತು. ಆಮೇಲೆ ಆ ಆಭರಣಗಳನ್ನು ಬಿಜ್ಜಳನಿಗೆ ತೋರಿಸಲಾಗಿ ಅವನು ಅವುಗಳ ತೂಕ ಮಾಡಲು ಅದು ಸರಿಯಾಗಿರುವದು ಕಂಡುಬಂದಿತು. ಕಿನ್ನರಯ್ಯನು ಬಸವೇಶ್ವರನಿಗೆ ಪ್ರಾಣದ ಸ್ನೇಹಿತನಾಗಿದ್ದನು. ರಾಜಧಾನಿ

---

(೧) ಶಿವಶರಣರ ಚರಿತ್ರೆಗಳು ಭಾಗ ೨-ಪುಟ ೭೫ ನೋಡಿರಿ.

ಯಲ್ಲೆಲ್ಲ ಬಸವೇಶ್ವರನ ವಿರೋಧಿಗಳು ಅಸಂಖ್ಯವಾಗಿದ್ದು ಅವರು ಈ ತೆರದ ದೋಷವನ್ನು ಕಲ್ಪಿಸಿ ಬಿಜ್ಜಳನ ಕಿವಿವರೆಗೂ ಒಯ್ದಿದ್ದರು. ಆಗ ಬಿಜ್ಜಳನು ಕಿನ್ನರಯ್ಯನು ಸದ್ಗುಣಿಯು ಮತ್ತು ಸದಾಚಾರಿಯು ಎಂದು ತಿಳಿದು ಅವನನ್ನು ಹೊಗಳುವವನಾದನು.

ಶಿವಶರಣರು ಲಿಂಗಾರ್ಪಣ ಭಾವದಿಂದ ಆಚರಣೆ ಮಾಡಬೇಕೆಂದು ಅವರ ತತ್ವವಿರುತ್ತದೆ. ಆದ್ದರಿಂದ ಅವರು ತಮ್ಮ ತತ್ವಜ್ಞಾನ ವಿಮರ್ಶೆಯಲ್ಲಿ, ಇಂದ್ರಿಯ ಭೋಗಗಳಲ್ಲಿ ಅಥವಾ ಇನ್ನಿತರ ಕಾರ್ಯಗಳಲ್ಲಿ ಈ ಭಾವವನ್ನಿಟ್ಟುಕೊಂಡೇ ಆಚರಿಸುತ್ತಾರೆ. ಇಂಥ ಆಚರಣೆಗಳು ಪುನೀತವಾಗಿರುತ್ತವೆ. ಈ ವಿಧದ ವಿಚಾರಗಳ ಮೂಲಕ ಶಿವಶರಣರು ಯಾವದು ಯೋಗ್ಯವೋ ಅದನ್ನೇ ಕಂಡುಹಿಡಿದು ಅವನ್ನು ಲಿಂಗಾರ್ಪಣ ಭಾವದಿಂದ ಸೇವಿಸುವದುಂಟು. ಅವರು ಕೆಲವೊಂದು ಕೃತಿಯು ಯೋಗ್ಯವೋ ಅಯೋಗ್ಯವೋ ಎಂಬುದನ್ನು ಅವರು ತಮ್ಮ ಅನುಭವ ಅಥವಾ ಅನ್ಯ ಭಾವದಿಂದ ನಿರ್ಧರಿಸುತ್ತಾರೆ. ಈ ತೆರದ ಘಟನೆಗಳು ಕಿನ್ನರಿ ಬೊಮ್ಮಯ್ಯನ ಚರಿತ್ರೆಯಲ್ಲಿ ಕಂಡುಬರುತ್ತವೆ.

ಬಳ್ಳೊಳ್ಳಿಯು ಆಯುರ್ವೇದದಲ್ಲಿಯೂ ರೂಢಿಯಲ್ಲಿಯೂ ಒಂದು ಮಹತ್ವದ ಆಹಾರ ಪದಾರ್ಥವಾಗಿದೆ. ಕಿನ್ನರಿ ಬೊಮ್ಮಯ್ಯನು ಇದನ್ನು ತನ್ನ ಆಹಾರದಲ್ಲಿ ಉಪಯೋಗಿಸುವ ರೂಢಿಯು ಅವನಿಗೆ ಇದ್ದಿತು. ಬಸವೇಶ್ವರನಿಗೆ ಈ ಸಂಗತಿಯು ತಿಳಿದುಬರಲು ಅವನು ಇದು ನಿಷಿದ್ಧ ಪದಾರ್ಥವೆಂತಲೂ ಅದನ್ನು ಸೇವಿಸಬಾರದೆಂತಲೂ ಕಿನ್ನರೀ ಬೊಮ್ಮಯ್ಯನಿಗೆ ತಿಳಿಸಿದನು. ಹೀಗೆ ತಿಳಿಸಲಾಗಿ ಕಿನ್ನರಯ್ಯನಿಗೆ ಕೋಪ ಬಂದು ಅವನು ಕಲ್ಯಾಣ ಪಟ್ಟಣವನ್ನು ಬಿಟ್ಟು ಒಂದು ಗಾವುದ ದೂರವಿರುವ ಒಂದು ಹಳ್ಳಿಗೆ ಹೋಗಿ ಒಬ್ಬ ಭಕ್ತನ ಮನೆಯಲ್ಲಿ ಇರಹತ್ತಿದನು. ಆಗ ಶಿವಶರಣರು ಬಸವೇಶ್ವರನಿಗೆ ಕಿನ್ನರಿ ಬೊಮ್ಮಯ್ಯನು ತನ್ನ ಲಿಂಗಕ್ಕೆ ಯಾವದು ಹಿತವಾದುದೋ ಅದನ್ನೇ ಮಾಡುತ್ತಿದ್ದಾನೆ. ಆದರೆ ನೀವು ಆದರಲ್ಲಿ ಅವನನ್ನು ಜರಿದದ್ದರಿಂದ ಅವನು ಮುನಿದು ಹೋಗಿದ್ದಾನೆಂದು ಅವನಿಗೆ ತಿಳಿಸಿದರು. ಬಸವೇಶ್ವರನು ಇದನ್ನು ತಿಳಿದು ತನ್ನಿಂದ ತಪ್ಪಾಯಿತೆಂದು ಪಶ್ಚಾತ್ತಾಪಗೊಂಡನು. ಆಗ ಅವನು ಬಂಡಿ ತುಂಬ ಉಳ್ಳಿಯನ್ನು ತರಿಸಿ ಅದರ ಸರಗಳಿಂದ ಆನೆ ಕುದುರೆಗಳನ್ನು

ಸಹ ಶೃಂಗರಿಸಿ ಕಿನ್ನರಿ ಬೊಮ್ಮಯ್ಯನಿದ್ದಲ್ಲಿಗೆ ಹೋಗಿ ಅವನಿಗೆ ನನ್ನಿಂದ ತಪ್ಪಾಯಿತೆಂದು ಕ್ಷಮೆ ಬೇಡಿಕೊಂಡನು. ಆಗ ಕಿನ್ನರಿ ಬೊಮ್ಮಯ್ಯನ ಕೋಪವು ಅಡಗಿತು. ಮತ್ತು ಬಸವೇಶ್ವರನೊಂದಿಗೆ ಕಲ್ಯಾಣ ಪಟ್ಟಣಕ್ಕೆ ಬಂದು ಇರಹತ್ತಿದನು.

ಬಸವೇಶ್ವರನ ಆಲಯದಲ್ಲಿ ಶಿವಶರಣರಲ್ಲಿ ಶಿವಾನುಭವದ ತತ್ವಗಳ ಬಗ್ಗೆ ಮೇಲಿಂದ ಮೇಲೆ ವಿಚಾರ ವಿನಿಮಯಗಳೂ ಚರ್ಚೆಗಳೂ ನಡೆಯುತ್ತಿದ್ದವು. ಉದಾಹರಣಾರ್ಥವಾಗಿ ಭಕ್ತರು ಯಾವ ಬಗೆಯ ಯೋಗಾಭ್ಯಾಸ ಮಾಡತಕ್ಕದ್ದು, ಇಷ್ಟಲಿಂಗದ ಸ್ವರೂಪವೇನು, ಜಂಗಮನು ಇದ್ದ ಬಳಿಕ ಲಿಂಗದ ಅವಶ್ಯಕತೆಯು ಇದೆಯೋ ಹೇಗೆ, ಸ್ಥಾವರ ದೇವತೆಗಳನ್ನು ಪೂಜಿಸುವದಾದರೆ ಯಾವ ಭಾವದಿಂದ ಪೂಜಿಸಬೇಕು, ಇವೇ ಮೊದಲಾದ ವಿಷಯಗಳ ಬಗ್ಗೆ ವಾದ ವಿವಾದಗಳು ಜರಗುತ್ತಿದ್ದವು. ನಾವು ಸುಲಿಯ ಚಂದಯ್ಯ, ಢಕ್ಕೆಯ ಬೊಮ್ಮಯ್ಯ, ಸಿದ್ಧರಾಮಯ್ಯ ಇವರ ಚರಿತ್ರೆಗಳನ್ನು ನೋಡಿದಲ್ಲಿ ಇದರ ನಿಜಸ್ಥಿತಿಯು ತಿಳಿದು ಬರುತ್ತದೆ.

ಸ್ಥಾವರ ಲಿಂಗ ಮತ್ತು ಇಷ್ಟಲಿಂಗ ಇವುಗಳ ಬಗ್ಗೆ ಕೆಲವೊಂದು ಪ್ರಸಂಗದಲ್ಲಿ ನಡೆದ ವಿವಾದಗಳು ವಿಶೇಷವಾಗಿ ಕಿನ್ನರಿ ಬೊಮ್ಮಯ್ಯನ ಚರಿತ್ರೆಯಲ್ಲಿ ಕಂಡುಬರುತ್ತವೆ. ಒಂದುದಿವಸ ಮೋಳಿಗೆ ಮಾರಯ್ಯನ ಸಮಯಾಚಾರದ ದೇವರು ತ್ರಿಪುರಾಂತಕ ದೇವಸ್ಥಾನಕ್ಕೆ ಬಂದಿರಲು ಕಿನ್ನರಯ್ಯನು ಅವನನ್ನು ನೋಡಿ ದೇವರಮೇಲಿದ್ದ ವಸ್ತ್ರವನ್ನು ತೆಗೆದುಕೊಂಡು ಇದು ಪವಿತ್ರವಾದುದೆಂದು ಹೇಳಿ ಅವನಿಗೆ ಕೊಟ್ಟನು. ಆಗ ಅವನು ಆ ವಸ್ತ್ರವನ್ನು ತನ್ನ ಸೆಜ್ಜೆಗೆ ಉಪಯೋಗಿಸಿಕೊಟ್ಟನು. ಆಗ ಮೋಳಿಗೆ ಮಾರಯ್ಯನ ಹೆಂಡತಿ ಮಹಾದೇವಿಯಮ್ಮನು ಇದನ್ನು ತಿಳಿದು ಈ ವಸ್ತ್ರವು ಸ್ಥಾವರಲಿಂಗದ್ದು, ಕಿನ್ನರಿ ಬೊಮ್ಮಯ್ಯನು ಸ್ಥಾವರವನ್ನು ಭಜಿಸುತ್ತ ಹಣ ಸಂಪಾದನೆ ಮಾಡುತ್ತಾನೆ. ಹೀಗೆ ಮಾಡುವದು ಭಕ್ತರಿಗೆ ಸಲ್ಲದೆಂದು ಆ ಬಟ್ಟೆಯನ್ನು ಅವಳು ಕಿನ್ನರಿ ಬೊಮ್ಮಯ್ಯನಿಗೆ ತಿರುಗಿ ಕಳಿಸಿದಳು. ಆಗ ಕಿನ್ನರಿ ಬೊಮ್ಮಯ್ಯನು ಸ್ಥಾವರ, ಜಂಗಮ ಇದರ ರೀತಿಯು ಮಹಾದೇವಿಯಮ್ಮನಿಗೆ ತಿಳಿಯದು. ಭಕ್ತಿಯ ಉಚ್ಚ ಸ್ಥಾನದಲ್ಲಿ ಸ್ಥಾವರ ಮತ್ತು ಜಂಗಮ ಇವು ಭಿನ್ನತೆ ಇಲ್ಲ, ಇವುಗಳಲ್ಲಿ ಒಂದೇ ಎಂದು ತಿಳಿಯಬೇಕು. ಎಂದು ಹೇಳಿ ಕಿನ್ನರಯ್ಯನು ತನ್ನ ಇಷ್ಟಲಿಂಗದ ಮುಂದೆ

ಕಿನ್ನರಿಯನ್ನು ನುಡಿಸುತ್ತ ಪರಮಾತ್ಮನನ್ನು ಪ್ರಾರ್ಥಿಸಹತ್ತಲು ಆ ಇಷ್ಟ ಲಿಂಗದೊಳಗಿಂದಲೇ ೧೧ ಹಣದ ಸಿಧಿಯು ಹೊರಕ್ಕೆ ಬಂದು ಅವನ ಕೈಯ್ಯಲ್ಲಿ ಬಂದು ಬಿದ್ದಿತು. ಅದನ್ನು ಅವನು ೯ ಸಮಯಾಚಾರದ ದೇವರಿಗೆ ತೋರಿಸಿ ಇದನ್ನು ಮೋಳಿಗೆ ಮಾರಯ್ಯನ ಹೆಂಡತಿಯಾದ ಮಹಾದೇವಿಯಮ್ಮನಿಗೆ ತಿಳಿಸು ಎಂದು ಹೇಳಿ ಕಳಿಸಿದನು.

ಷಟ್‌ಸ್ಥಲ ಶಾಸ್ತ್ರದಲ್ಲಿ ಇಷ್ಟಪ್ರಾಣ ಭಾವಲಿಂಗ ಗಳಿಂದು ಲಿಂಗವು ಮೂರು ವಿಧವಾಗಿದೆಂದು ಹೇಳಲ್ಪಟ್ಟಿದೆ. ಅವು ಅನುಕ್ರಮವಾಗಿ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಶರೀರಗಳಿಗೆ ಸಂಬಂಧಿಸಿರುತ್ತದೆ. ಈ ಮೂರು ಶರೀರಗಳಲ್ಲಿ ಮೇಳವಿದ್ದಾಗಲೇ ಮನುಷ್ಯನಿಂದ ಕ್ರಿಯೆಗಳು ಸರಾಗವಾಗಿ ನಡಿಯುತ್ತವೆ. ಈ ಶರೀರಗಳು ಒಂದನ್ನೊಂದು ಬಿಟ್ಟು ವ್ಯವಹರಿಸಲಾರವು. ಶಿವಶರಣರಲ್ಲಿ ಕೆಲವರು ಸ್ಥೂಲಶರೀರದಲ್ಲಿ ಇಷ್ಟ ಲಿಂಗವನ್ನು ಸಾಧಿಸಿ ಭಕ್ತಮಹೇಶ್ವರ ಸ್ಥಲದಲ್ಲಿ ಇರುತ್ತಾರೆ. ಬೇರೆಕೆಲವರು ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗವನ್ನುಸಾಧಿಸಿ ಪ್ರಸಾದಿ ಮತ್ತುಪ್ರಾಣಲಿಂಗಿ ಸ್ಥಲದಲ್ಲಿ ಇರುತ್ತಾರೆ. ಬೇರೆ ಕೆಲವರು ಕಾರಣ ಶರೀರದಲ್ಲಿ ಭಾವಲಿಂಗವನ್ನು ಸಾಧಿಸಿ ಶರಣ ಐಕ್ಯ ಸ್ಥಲದಲ್ಲಿದ್ದವರೂ ಇರುತ್ತಾರೆ. ಬಸವೇಶ್ವರನ ಕಾಲದಲ್ಲಿ ಹೀಗೆ ಆಯಾ ಸ್ಥಲಗಳನ್ನು ಸಾಧಿಸಿದ ಶಿವಶರಣರು ಶಿವಾನುಭವ ಮಂಟಪದಲ್ಲಿದ್ದರು. ಈ ಶಿವಶರಣರಲ್ಲಿ ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಸೋದರ ಕೇತಯ್ಯ, ಮತ್ತು ಕಿನ್ನರಿ ಬ್ರಹ್ಮಯ್ಯ, ಈ ಐದು ಜನರು ಮಾತ್ರ ಷಟ್‌ಸ್ಥಲ ಜ್ಞಾನಿಗಳಾಗಿ ಆಚರಿಸುತ್ತ ಕೇವಲ ಸಗಸ್ಪರತ್ವದಿಂದ ನಡೆಯುತ್ತಿದ್ದರು. ಈ ಐವರ ಪ್ರಾಣವು ಸಹ ಏಕ ರೂಪತೆಯನ್ನು ಹೊಂದಿದ್ದಾಗಿತ್ತು.

ಒಂದುದಿನ ಕೇತಯ್ಯನು ಮರಣ ಹೊಂದಲು ಮಡಿವಾಳ ಮಾಚಿದೇವನು ಅವನ ಜೀವವನ್ನು ಆತ್ಮ ಶಕ್ತಿಯಿಂದ ಹಿಂದುರಿಗಿಸಿ ತರಲು ಸಮರ್ಥನಾಗನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಇದೇ ಪ್ರಕಾರ ಕಿನ್ನರಯ್ಯನ ವಿಷಯವಾಗಿಯೂ ಒಂದು ಘಟನೆಯು ಉಂಟಾಯಿತೆಂದು ಅವನ ಚರಿತ್ರೆಯಲ್ಲಿ ಹೇಳಿದೆ.

ಒಂದಾನೊಂದು ದಿವಸ ಕಿನ್ನರಿ ಬೊಮ್ಮಯ್ಯನ ಪ್ರಾಣವನ್ನು ಶಿವನು ತನ್ನ ಸ್ಥಾನಕ್ಕೆ ಬರಮಾಡಿಕೊಂಡನು. ಆಗ ಅವನ ಬಾಹ್ಯ ದೇಹವು

ಸತ್ತಂತೆ ನೆಲಕ್ಕೆ ಬಿದ್ದಿತು. ಬಸವೇಶ್ವರನಿಗೆ ಇದು ಗೊತ್ತಾಗಲು ಅವನು ಕಿನ್ನರಯ್ಯನು ಸತ್ತನೆಂದು ಭಾವಿಸಿ ಅವನ ಶರೀರವಿದ್ದ ಸ್ಥಳಕ್ಕೆ ಬಂದು ಬಹಳ ಶೋಕವಮಾಡಹತ್ತಿದನು. ಮಡಿವಾಳ ಮಾಚಿದೇವನಿಗೆ ಇದು ತಿಳಿದುಬರಲು ಅವನು ಅಲ್ಲಿಗೆ ಬಂದು ನೋಡಲಾಗಿ ಕಿನ್ನರೀ ಬೊಮ್ಮಯ್ಯನ ಪ್ರಾಣವು ದೇಹವನ್ನು ತಾತ್ಕಾಲಿಕವಾಗಿ ಬಿಟ್ಟುಹೋಗಿದೆ, ಅವನು ಶಿವನ ಸನ್ನಿಧಿಯಲ್ಲಿ ಇದ್ದಾನೆ ಎಂದು ಅವನಿಗೆ ಭಾಸವಾಯಿತು. ಆಗ ಮಾಚಿದೇವನು ಕಿನ್ನರಿ ಬೊಮ್ಮಯ್ಯನನ್ನು ಉದ್ದೇಶಿಸಿ ಭಕ್ತ ಶ್ರೇಷ್ಠನಾದ ಬಸವನು ನಿನ್ನನ್ನು ಬಿಟ್ಟು ಅಗಲಲಾರನು. ನೀನು ಮರ್ತ್ಯಕ್ಕೆ ಹೊರಟು ಬರಬೇಕೆಂದು ಘೋಷಿಸಿದನು. ಅವನು ಮಾಡಿದ ಈ ಘೋಷಣೆಯು ಕಿನ್ನರಯ್ಯನಿಗೂ ಶಿವನಿಗೂ ತಿಳಿಯಲಾಗಿ ಕಿನ್ನರಯ್ಯನ ಪ್ರಾಣವು ಮರ್ತ್ಯಕ್ಕೆ ಹಿಂದಿರುಗಿ ಬಂದು ಕಿನ್ನರಯ್ಯನ ದೇಹವನ್ನು ಪ್ರವೇಶಿಸಲಾಗಿ ಅವನು ಚೇತರಿಸಿಕೊಂಡು ಎದ್ದನು. ಈ ಘಟನೆಯಿಂದ ಕಿನ್ನರಯ್ಯ ಮತ್ತು ಬಸವೇಶ್ವರ ಈ ಉಭಯತರ ಪ್ರಾಣಗಳು ಎಷ್ಟು ಗಾಢವಾಗಿ ನಿಗಡಿತವಾಗಿದ್ದವೆಂಬುದು ಎಲ್ಲರಿಗೂ ತಿಳಿದು ಅವರು ಆಶ್ಚರ್ಯ ಪಟ್ಟರು.

ಶಿವಶರಣರೆಲ್ಲರೂ ಕೂಡಿಕೊಂಡುಅಷ್ಟಾವರಣಗಳನ್ನು ತಮ್ಮ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳಲ್ಲಿ ಸಾಧಿಸಿದ್ದರ ಪರಿಣಾಮವು ಇದಾಗಿರುತ್ತದೆ.

ಈ ಪ್ರಕಾರ ಕಿನ್ನರಯ್ಯನು ಬಸವೇಶ್ವರನ ಕೇವಲ ಗೆಳೆಯನಾಗಿ ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತ ಇರಲು ಹರಳಯ್ಯ ಮಧುವಯ್ಯಗಳ ಬಗ್ಗೆ ದೊಡ್ಡ ಕೋಲಾಹಲವು ರಾಜಧಾನಿಯಲ್ಲಿ ಉಂಟಾಯಿತು. ಇವರಲ್ಲಿ ಒಬ್ಬನು ಮಚ್ಚಿಗಾರನು, ಮತ್ತೊಬ್ಬನು ಬ್ರಾಹ್ಮಣನು. ಮಧುವಯ್ಯನು ರಾಜನಲ್ಲಿ ಮುಖ್ಯಾಧಿಕಾರಿಯಾಗಿ ಕೆಲಸಮಾಡುತ್ತಿದ್ದನು. ಇವರೀರ್ವರ ಮಕ್ಕಳಲ್ಲಿ ಲಗ್ನವಾಗಲು ದೇಶದಲ್ಲಿ ಇದೊಂದು ಅನಾಹುತವಾಯಿತೆಂದು ಜನರಲ್ಲಿ ಕ್ಷೋಭೆಯುಂಟಾಯಿತು. ಇವರೀರ್ವರು ದೊಡ್ಡ ಪಾಪಕೃತ್ಯವನ್ನು ಮಾಡಿದರೆಂದು ಜನರು ತಿಳಿದರು. ಅರಸನಾದ ಬಿಜ್ಜಳನು ಜನರ ಅಭಿಪ್ರಾಯವನ್ನು ಪುರಸ್ಕರಿಸಿ ಇವರಿಬ್ಬರನ್ನು ಹಿಂಸೆಪಡಿಸಿ ಅವರನ್ನು ಘಾತಿಸಿದನು. ಇದಕ್ಕೋಸ್ಕರ ಶಿವಶರಣರು ಬಸವೇಶ್ವರನೊಡನೆ ಕಲ್ಯಾಣವನ್ನು ಬಿಟ್ಟು ಕಪ್ಪಡಿ ಸಂಗಮ ಸ್ಥಾನದಕಡೆಗೆ ತೆರಳಿದರು.

ಸರ್ವಾಂಗದಲ್ಲಿ ಧರಿಸಿ ಆ ಲಿಂಗಸುಖ ಪ್ರಸನ್ನ ಪ್ರಸಾದವ ಸ್ವೀಕರಿಸ ಬಲ್ಲಾತನೇ ಪರಶಿವ ಸ್ವರೂಪನೆಂಬುದೀಗ ಅಚ್ಚ ಬೆಳ್ಳಗೆಯ ಹಾಲ ನಿತ್ಯಯದಲ್ಲಿ ತೆರೆದು ತೃಪ್ತಿಯಾಗಿ ಕೊಳಬಲ್ಲಡೆ ಆತನೇ ಸದಾಶಿವ ಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೪೯. ಬಂಟ ಸೊಡೆಯನೊಡನೆಯುಂಡಲ್ಲಿ ದಾಸತನವಳಿಯಿತ್ತು. ನೀ ಮರೆದು ಮಲಗಿರ್ದು ಸ್ವಪ್ನವ ಕಾಂಬಲ್ಲಿ ಲಿಂಗದ ಕೂಟವೆಲ್ಲಿದ್ದಿತ್ತು? ನೀ ಸ್ತ್ರೀ ಸಂಭೋಗವ ಮಾಡುವಲ್ಲಿ ಲಿಂಗ ನಿನ್ನಲ್ಲಿ ಸಹಗೂಡಿದ್ದ ಠಾವಾವುದು? ಸಾಕು. ಅರ್ಥಿಕಾರರ ಹೊತ್ತುಹೋಕನ ಅರ್ಪಿತಲಿಂಗ ಸಂಗದಿಂದ ಹಿಂಗಿದಾಗಲೇ, ಸ್ವಪ್ನದ ಅರ್ಪಿತ. ಮರವೆಯ ಮುಟ್ಟದ ಅರ್ಪಿತವಿದು. ನಿಶ್ಚಯವಲ್ಲ. ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೫೦. ಲಿಂಗಕ್ಕೆ ಸಹಭೋಜನವಾದಲ್ಲಿ ಕೂರ್ಮನ ಶಿಶುವಿನ ಸ್ನೇಹದಂತಿರಬೇಕು. ಅಯಃ ಕಾಂತದ ಶಿಲೆಯ ಲೋಹದಂತಿರಬೇಕು. ಶಶಿಶಿಲೆಯಂತೆ ಒಸರುವ ಅರ್ಪಿತ ಕೂಡುವ ಕೂಟ ಭ್ರಮರ ಚಂಪಕ ದಂತೆ ಒಡಗೂಡಿ ಲಿಂಗವ ಎಡತೆರಹಿಲ್ಲದ ಸಹಭೋಜನ ಕೊಡುವ ತನ್ನಡಿಗೆ ಕಡೆನಡು ಮೊದಲಿಲ್ಲದೆರಗುವೆ. ಆತ ಸದಾಶಿವಮೂರ್ತಿ ಲಿಂಗವು ತಾನೇ.

೫೧. ಲಿಂಗದೊಡನೆ ಸಹಭೋಜನವ ಮಾಡುವ ಸಾಧಕರೆಲ್ಲರು ನೀವು ಕೇಳಿರೋ! ಲಿಂಗವೇ ಕರ್ತೃವಾಗಿ ನೀವೇ ಭೃತ್ಯರಾಗಿದ್ದಲ್ಲಿ ಲಿಂಗ ದೊಡನೆ ಸಹಭೋಜನವ ಮಾಡಲಾಗದು. ಅದೇಕೆಂದಡೆ, ಲಿಂಗವು ಅಮಲ ಸ್ವರೂಪವು. ನೀನು ಮಲದೇಹಿ. ನಿನಗೆ ಪ್ರಪಂಚು, ಲಿಂಗವು ನಿಃಪ್ರಪಂಚು. ನೀನು ಅಂಗಿ, ಲಿಂಗವು ನಿರಂಗಿ. ಅಂತಹ ಲಿಂಗಕ್ಕೂ ನಿನಗೂ ಸಹಭೋಜನವೆಂತುಟಯ್ಯ!? ಜಾಗ್ರದಲ್ಲಿ ತೋರಿ ಸ್ವಪ್ನದಲ್ಲಿ ಕಂಡುದ ಲಿಂಗಕ್ಕರ್ಪಿಸಿ ಸಹಭೋಜನವ ಮಾಡುವ ಪರಿ ಎಂತೋ? ಸಾಕು ಕುಟಿಲದ ಊಟ. ಸದಾಶಿವಮೂರ್ತಿಲಿಂಗವ ಮುಟ್ಟದ ಅರ್ಪಿತ ವದೇಕೆ? ಕೇಳಿರಣ್ಣಾ! ನರಕಕ್ಕೆ ಭಾಜನರಪ್ಪರಲ್ಲವೆ?

---

# (೮) ಪ್ರಾಣಲಿಂಗಿಸ್ಥಲ.

**ವಿವರಣೆ:—** ಈ ಸ್ಥಲದಲ್ಲಿ ಇಷ್ಟ, ಪ್ರಾಣ ಭಾವಲಿಂಗಗಳ ವಿಚಾರಗಳಲ್ಲಿ ಅವುಗಳ ಪರಸ್ಪರ ಸಂಬಂಧಗಳೂ ಹೇಳಲ್ಪಟ್ಟಿವೆ. ವಚನಕಾರನು ಇಲ್ಲಿ ಅನೇಕ ಬೆಡಗಿನ ವಚನಗಳನ್ನು ಉಪಯೋಗಿಸಿ ಈ ವಿಷಯಗಳನ್ನು ತಿಳಿಸಲು ಯತ್ನಿಸಿದ್ದಾನೆ. ಈ ಮೂರು ಲಿಂಗಗಳು ಮನುಷ್ಯನಲ್ಲಿ ಹೇಗೆ ಪ್ರಕಟವಾಗುತ್ತವೆ, ಅವುಗಳ ಪರಿಣಾಮಗಳು ಆಯಾ ಶರೀರಗಳ ಮೇಲೆ ಹೇಗೆ ಉಂಟಾಗುತ್ತವೆ, ಜ್ಞಾನ ಕ್ರಿಯಗಳ ಸಂಬಂಧವೇನು, ಮಾಯೆಯನ್ನು ಹೇಗೆ ದೂರ ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಬೆಡಗುಗಳ ಮೂಲಕ ವಚನಕಾರನು ಬಹು ಮಾರ್ಮಿಕ ರೀತಿಯಿಂದ ವಿವೇಚಿಸಿದ್ದಾನೆ.

## ವಚನಗಳು.

೫೭. ಜೇನುತುಪ್ಪದ ಹೊತ್ತು ಮಾರುವವಳ ಮಡಿಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ. ಒಂದು ತುಂಬಿ ಇದ್ದಿತ್ತು. ಒಂದು ತುಂಬಿ ಹಾರಿತ್ತು. ಒಂದು ತುಂಬಿ ಸತ್ತಿತ್ತು. ಮೂರು ತುಂಬಿಯಿಂದವ ಕಂಡುದಿಲ್ಲ. ಮಡಿಕೆ ಒಡೆಯಿತ್ತು. ತುಪ್ಪ ಉಕ್ಕಿತ್ತು. ಹೊತ್ತವ ಸತ್ತ. ಇದೇನು ಕೃತ್ರಿಮವೆಂದು ಕೇಳಬನ್ನಿ ಸದಾಶಿವಮೂರ್ತಿಲಿಂಗವ.

ಟೀಕು:— ಪರಮಾಮೃತ ಸ್ವರೂಪವಾದ ಸುಜ್ಞಾನವನ್ನು ತನ್ನ ಸರ್ವಾಂಗದಲ್ಲಿ ಧರಿಸಿಕೊಂಡು ಎಂಬುದೀಗ ಜೇನುತುಪ್ಪದ ಹೊತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ತನ್ನ ಉಪಾವಸ್ಥೆಯ ಮಾಡುತ್ತಿರ್ದ ಮೋಕ್ಷಾಪೇಕ್ಷೆಯುಗಳಾದ ಭಕ್ತಜನಂಗಳಿಗೆ ಪರಮಾಮೃತ ಸ್ವರೂಪವಾದ ಸುಜ್ಞಾನ ಬೋಧೆಯ ಬೋಧಿಸುತ್ತಿಹನು. ಚಿತ್ಶಕ್ತಿ ಸ್ವರೂಪವಾದ ಶ್ರೀಗುರುವೆಂಬುದೀಗ ಮಾರುವವಳೆಂಬ ಶಬ್ದಕ್ಕರ್ಥ. ಆ ಶ್ರೀಗುರು ಸಂಬಂಧವಾಗಿಹುದೆಂಬುದೀಗ ಮಡಿಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ ಎಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಸತ್ಕ್ರಿಯಾಚಾರದಲ್ಲಿರುತ್ತಿಹುದೆಂಬುದೀಗ ಒಂದು ತುಂಬಿ ಇದ್ದಿತ್ತು ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪವಾದ ಪ್ರಾಣಲಿಂಗವು ಶರಣನ ನಿಜಾಂತರಂಗಕ್ಕೆ ವೇಧಿಸಿತ್ತೆಂಬುದೀಗ ಒಂದು ತುಂಬಿ ಹಾರಿತ್ತು ಎಂಬ ಶಬ್ದಕ್ಕರ್ಥ. ಆನಂದ ಸ್ವರೂಪವಾದ ತೃಪ್ತಿ ಲಿಂಗವು ಶರಣನ

ಭಾವದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಒಂದು ತುಂಬಿ ಸತ್ತಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗವು ಶರಣನ ತ್ರಿವಿಧಾಂಗವನವಗ್ರಹಿಸಿ ನಿಷ್ಪತ್ತಿಯಾದ ಬಳಿಕ ಇದಿರಿಟ್ಟು ಕಾಣಲಿಲ್ಲವೆಂಬುದೀಗ ಮೂರು ತುಂಬಿ ಯುಂದವ ಕಂಡುದಿಲ್ಲ ಎಂಬ ಶಬ್ದಕ್ಕರ್ಥ. ಅಂತು ನಿಷ್ಪತ್ತಿಯಾಗಲು ಆ ಚಿದ್ಭಾಂಡದಲ್ಲಿ ಏಕಾರ್ಥವಾಯಿತ್ತೆಂಬುದೀಗ ಮಡಕೆ ಒಡೆಯಿತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವು ಲಿಂಗದಲ್ಲಿ ನಿಷ್ಪತ್ತಿಯಾಗಲು ಆ ಪರಮಾಮೃತ ರಸ ಶರಣನ ಬಾಹ್ಯಾಭ್ಯಂತರಂಗದಲ್ಲಿ ಪರಿಪೂರ್ಣ ವಾಗಿ ಸೂಸುತ್ತಿಹುವೆಂಬುದೀಗ ತುಪ್ಪ ಉಕ್ಕಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವ ಧರಿಸಿಕೊಂಡಿರ್ದ ಜ್ಞಾನಗುರು ಶರಣನ ನಿಜಾಂತ ರಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಹೊತ್ತವ ಸತ್ತ, ಇದೇನು ಕೃತ್ರಿಮ ವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ

೫೩. ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ, ಮೂರು ಕಣ್ಣ ಕಂಡೆನು. ಒಂದು ಧರೆಯ ಕಣ್ಣು, ಒಂದು ಸಿರಿಯ ಕಣ್ಣು, ಒಂದು ಉರಿಯ ಕಣ್ಣು. ಉರಿ ಸಿರಿಯ ನುಂಗಿ, ಸಿರಿ ಧರೆಸಿರಿಯ ನುಂಗಿ, ಧರೆಯು ಅರ ಹಿರಿಯರು ನುಂಗಿ, ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಸಬೇಕು.

ಟೀಕು:— ದೇಹ ಸಂಬಂಧಿಯಾದಾತ್ಮಂಗೆ ಸುಜ್ಞಾನ ದೃಷ್ಟಿ ನಷ ವಾಯಿತ್ತೆಂಬುದೀಗ ಕಣ್ಣಿಲ್ಲದ ಕುರುಡನೆಂಬ ಶಬ್ದಕ್ಕರ್ಥ. ಅಂತಪ್ಪಾ ತ್ಮಂಗೆ ಶಿವಕೃಪೆಯಿಂ ಸದ್ವಿವೇಕ ಜ್ಞಾನ ತಲೆದೋರಿ ಶ್ರೀಗುರುಕಾರು ಣ್ಯದಿಂ ತ್ರಿವಿಧಲಿಂಗ ಭಾವಿಸಿತ್ತೆಂಬುದೀಗ ಕನ್ನಡಿಯ ನೋಡಿ ಮೂರು ಕಣ್ಣ ಕಂಡೆನೆಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಶರಣನ ಸ್ಥೂಲಾಂಗದಲ್ಲಿ ಸಂಬಂಧವಾಗಿಹುವೆಂಬುದೀಗ ಒಂದು ಧರೆಯ ಕಣ್ಣು ಎಂಬ ಶಬ್ದಕ್ಕರ್ಥ. ಸುಜ್ಞಾನಸ್ವರೂಪವಾದ ಪ್ರಾಣಲಿಂಗವು ಶರಣನ ಸೂಕ್ಷ್ಮಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಸಿರಯ ಕಣ್ಣು ಎಂಬ ಶಬ್ದಕ್ಕರ್ಥ. ಚಿದಗ್ನಿಸ್ವರೂಪವಾದ ಭಾವಲಿಂಗವು ಶರಣನ ಕಾರಣಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಉರಿಯ ಕಣ್ಣು ಎಂಬ ಶಬ್ದಕ್ಕರ್ಥ. ಆ ಚಿದಗ್ನಿಸ್ವರೂಪವಾದ ಭಾವಲಿಂಗವು ಶರಣನ ಸ್ವರೂಪವಾದ ಪ್ರಾಣಲಿಂಗವನವಗ್ರಹಿಸಿ ಲೀಯವಾಯಿತ್ತೆಂಬುದೀಗ ಉರಿ ಸಿರಿಯ ನುಂಗಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನಸ್ವರೂಪವಾದ ಪ್ರಾಣ

ಲಿಂಗವು ಸದ್ರೂಪವಾದ ಇಷ್ಟಲಿಂಗವನನವಗ್ರಹಿಸಿ ಲೀಯವಾಯಿತ್ತೆಂಬುದೀಗ ಸಿರಿ ಧರೆಯು ನುಂಗಿ ಎಂಬ ಶಬ್ದಕ್ಕರ್ಥ. ಆ ಶರಣನ ಆಚಾರಲಿಂಗದಲ್ಲಿ ಸಂಬಂಧವಾದ ಸತ್ಕ್ರಿಯಾಲಿಂಗವು ತ್ರಿವಿಧಲಿಂಗಾನುಭಾವಿಗಳ ಸರ್ವಾಂಗವನನವಗ್ರಹಿಸಿ ನಿಷ್ಪತ್ತಿಯಾಯಿತ್ತೆಂಬುದೀಗ ಧರೆಯು ಅರುಹಿರಿಯರು ನುಂಗಿ ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಿಸಬೇಕು ಎಂಬ ಶಬ್ದಕ್ಕರ್ಥ.

೫೪. ಒಂದು ಹರಿವ ಹಾವು, ಒಂದು ಧನಿ ಸಂಕ್ಕೆ ನಿಂತ ಹಾವು, ಒಂದು ಉರಿವ ಹಾವು, ಈ ಮೂವರ ನಡುವೆ ನಿಂತು ಆಡುವ ಕೋಡಗದಿರವು ಇಂದೆಂದೊಡೆ ಹರಿವ ಹಾವ ಮೆಟ್ಟಿ, ನಿಂದ ಹಾವ ಕೈಯ್ಯಲ್ಲಿ ಹಿಡಿದು, ಉರಿವ ಹಾವ ಬಾಯಲ್ಲಿ ಕಚ್ಚಿ ಆಡುತ್ತಿರಲಾಗಿ, ಕೋಡಗದೊಡೆಯು ಬಂದು ನೋಡಿ ಕೋಲ ಹಿಡಿದು ಕುಟ್ಟೆ, ಮೂರು ಹಾವ ಬಿಟ್ಟು ಕುಟ್ಟಿದ ಕೋಲ ನುಂಗಿತ್ತು. ಆ ಕೋಲು ಕೋಡಗದ ಒಡಲೊಳಗೋಡೆಮು, ಕೋಡಗ ಸತ್ತಿತ್ತು. ಪಡಿ ಒಡೆಯನ ನುಂಗಿ ಒಡೆಯನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಒಚ್ಚಬಯಲಾಯಿತ್ತು.

ಟೀಕು:— ಸ್ಥೂಲತನುವಿನ ಜಾಗ್ರಾವಸ್ಥೆಯ ವ್ಯಾಪಾರದಲ್ಲಿ ಚರಿಸುತ್ತಿಹನು ವಿಶ್ವನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಶಬ್ದ ಜಾಲದೊಳಗಿರ್ದ ತೈಜಸನೆಂಬುದೀಗ ಒಂದು ಧನಿ ಸಂಕ್ಕೆ ನಿಂತ ಹಾವು ಎಂಬ ಶಬ್ದಕ್ಕರ್ಥ. ತಾಪತ್ರಯದೊಳಗೆ ಸಿಲ್ಕಿ ಮರವೆಯಲ್ಲಿರುತ್ತಿಹನು ಪ್ರಾಜ್ಞನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳೊಳಗಾಗಿ ಸಿಲ್ಕಿಯೆಂಬುದೀಗ ಈ ಮೂವರ ನಡುವೆ ನಿಂದು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳೊಳಗೆ ಮನವು ಸಿಲ್ಕಿ ಪ್ರಪಂಚಿನಲ್ಲಿ ಚರಿಸುತ್ತಿಹುವೆಂಬುದೀಗ ಆಡುವ ಕೋಡಗದಿರವು ಎಂಬ ಶಬ್ದಕ್ಕರ್ಥ. ಇಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಲು ಶ್ರೀಗುರು ಕಾರುಣ್ಯದಿಂ ಜಾಗ್ರಾವಸ್ಥೆಯ ವ್ಯಾಪಾರವ ಕ್ರಿಯಾದೀಕ್ಷೆಯಿಂ ನಿವೃತ್ತಿಮಾಡಿ ಆ ವಿಶ್ವದಲ್ಲಿ ಇಷ್ಟಲಿಂಗ ಪ್ರತಿಷ್ಠೆಯ ಮಾಡಿದನೆಂಬುದೀಗ ಹರಿವ ಹಾವ ಮೆಟ್ಟಿ ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧವಾಗಲು ಸೂಕ್ಷ್ಮ ತನುವಿನ ಇಂದ್ರಿಯಂಗಳ ವರ್ತನೆಯಲ್ಲಿ ಚರಿಸುತ್ತಿಹ ತೈಜಸನ ದುರ್ಭಾವ ಹಸ್ತವ ಮಂತ್ರದೀಕ್ಷೆಯಿಂ ನಷ್ಟವಾಗಿ

ಸದ್ಭಾವ ನೆಲೆಗೊಂಡಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ ನಿಂತ ಠಾಣ ಸ್ಥೈಯಲ್ಲಿ ಹಿಡಿದು। ಎಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗ ಸಂಬಂಧವಾಗಲ್ಲ ತಾಪತ್ರಯಾಗ್ನಿಯಲ್ಲಿ ಬೇವುತ್ತಿರ್ದ ಪ್ರಾಜ್ಞನಸು ವೇದಾದೀಕ್ಷೆಯಿಂ ನಷ್ಟವ ಮಾಡಿ ಭಾವಲಿಂಗದ ಸಂಬಂಧವಾಗಲು ಚಿದ್ವಾರದಲ್ಲಿ ಅನುಗ್ರಹಿಸಿದನೆಂಬುದೀಗ ಉರಿವ ಹಾವ ಬಾಯಲ್ಲಿ ಕಚ್ಚಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಆಚರಿಸುತ್ತಿರಲಾಗಿ ಎಂಬುದೀಗ ಆಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಮನಕ್ಕೆ ಕರ್ತನಾದ ಶರಣ ಬಂದು ಅವಿರಳ ಜ್ಞಾನ ದೃಕ್ಕಿನಿಂ ನೋಡಲೊಡನೆ ಕೋಲೆಂದೊಡೆ ಶಿವಭಾವ, ಆ ಶಿವಭಾವದಲ್ಲಿ ಒಡಿಯುಲಾಗಿ। ಜೀವತ್ರಯಂಗಳ ವರ್ತನೆ ಬಿಟ್ಟು ಶಿವಭಾವನನವಗ್ರಹಿಸಿತ್ತೆಂಬುದೀಗ ಕೋಡಗದೊಡೆಯು ಬಂದು ನೋಡೆ ಕೋಲು ಹಿಡಿದು ಕುಟ್ಟೆ ಮೂರು ಹಾವು ಬಿಟ್ಟು ಕುಟ್ಟಿದ ಕೋಲ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವಭಾವವು ಮನೋಮಧ್ಯದಲ್ಲಿ ಸಮರಸವಾಯಿತ್ತೆಂಬುದೀಗ ಆ ಕೋಲು ಕೋಡಗದ ಒಡಲೊಳಗೊಡೆದು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ರೂಪವಾದ ಬ್ರಹ್ಮನೆಯಾಯಿತ್ತೆಂಬುದೀಗ ಕೋಡಗ ಸತ್ತಿತ್ತೆಂಬ ಶಬ್ದಕ್ಕರ್ಥ. ಅಂತು ಮನ ಲಿಂಗದಲ್ಲೇಕಾರ್ಥನಾಗಲು ಶರಣನ ಆ ಶಿವಭಾವವನವಗ್ರಹಿಸಿತ್ತೆಂಬುದೀಗ ದಡಿ ಒಡೆಯನ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮನು ಆ ಶಿವಭಾವದಲ್ಲೇಕಾರ್ಥವಾದನೆಂಬುದೀಗ ಒಡೆಯನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಬಚ್ಚಬಯಲಾಯಿತ್ತು ಎಂಬ ಶಬ್ದಕ್ಕರ್ಥ.

೫೫. ಇಷ್ಟಲಿಂಗ ಪ್ರಾಣಲಿಂಗವೆಂದು ಬೇರೊಂದು ಕಟ್ಟಣೆಯ ಮಾಡಬಹುದೇ ಅಯ್ಯಾ? ಬೀಜ ಒಡೆದು ಮೊಳೆ ತಲೆದೋರುವಂತೆ, ಬೀಜಕ್ಕೂ ಅಂಕುರಕ್ಕೂ ಭಿನ್ನಭಾವ ಉಂಟೇ ಅಯ್ಯಾ? ಇಷ್ಟಲಿಂಗದ ಕುರುಹಿನಲ್ಲಿ ಚಿತ್ತು ನಿಂದು ಮಿಕ್ಕ ಗುಣಂಗಳನರಿಯಬೇಕು ಇದೇ ನಿಶ್ಚಯ ಸದಾಶಿವಮೂರ್ತಿಲಿಂಗವು ತಾನೆ.

೫೬. ಅರಿವ ಮರೆದು ಪೂಜಿಸುವುದು ಸ್ಥಾವರಲಿಂಗಕ್ಕೆ ಸರಿ. ಅರಿಯದೆ ಮರೆಯದೆ ಕರಿಗೊಂಡ ನೆನಹು ಅದು ಪ್ರಾಣಲಿಂಗ ಸಂಬಂಧ. ಇಂತಿವರಲ್ಲಿ ಭೇದಂಗಳನರಿತು ಪರತತ್ವವ ಕೊಡುವ ಪರನು ಗುರುವಾಗಬೇಕು. ಸದಾಶಿವಮೂರ್ತಿಲಿಂಗ ತಾನಾಗಬೇಕು.

೫೭. ಕೋಡಗದ ಚೇಷ್ಟೆ ಉಡುಗಿ ಹಾವಿನ ಹಲ್ಲ ಮುರಿದು ಆಡಿಸುವ ಜೋಗಿಯ ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತು.

ಟೀಕು:— ಅಂತರಂಗದಲ್ಲಿ ಸುಜ್ಞಾನೋದಯವಾದ ಶರಣಂಗೆ ಮನೋವಿಕಾರವಳಿದು ಉನ್ಮನಿ ತತ್ವರೂಪವನೆಯ್ದಿತ್ತೆಂಬುದೀಗ ಕೋಡಗ ಚೇಷ್ಟೆ ಉಡುಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋವಿಕಾರ ನಷ್ಟವಾಗಲು ಜೀವನ ಸಂಕಲ್ಪ ವಿಕಲ್ಪಂಗಳೆಂಬ ದಂತ ಭಗ್ನವಾದವೆಂಬುದೀಗ ಹಾವಿನ ಹಲ್ಲ ಮುರಿದು ಎಂಬ ಶಬ್ದಕ್ಕರ್ಥ. ಆ ಎಡೆಯನು ನಿವೃತ್ತಿ ಮುಖಕ್ಕೆ ತಂದು ಲಿಂಗದಲ್ಲಿ ಏಕಾರ್ಥವ ಮಾಡಿ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಜ್ಞಾನಕ್ರಿಯಿಂದಾಚರಿಸುತ್ತಿಹ ಶರಣನ ಸರ್ವಾಂಗವು ಲಿಂಗಮಯವಾಯಿತ್ತೆಂಬುದೀಗ ಆಡಿಸುವ ಜೋಗಿಯು ಎಂಬ ಶಬ್ದಕ್ಕರ್ಥ. ಆ ಸರ್ವಾಂಗಲಿಂಗ ಸಂಬಂಧಿಯಾದ ಶರಣನು ಮಹಾ ಘನ ಲಿಂಗದಲ್ಲಿ ನಿಷ್ಪತ್ತಿಯಾಗಲು ಉಭಯ ನಾಮವಳಿದು ನಿರ್ನಾಮ ಸ್ವರೂಪವಾಯಿತ್ತೆಂಬುದೀಗ ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೫೮. ಕೋಣೆಯೊಳಗಣ ಮಿಂಡ, ನಡುಮನೆಯೊಳಗಣ ಗಂಡ, ಇವರಿಬ್ಬರ ಒಡಗೂಡುವವಳ ಚಂದವ ನೋಡಾ. ಕೈಯ್ಯಲ್ಲಿ ಕಣ್ಣು ಹುಟ್ಟಿ, ಬಾಯಲ್ಲಿ ಬಸಿರು ಹುಟ್ಟಿ, ಮೊಲೆತಲೆಯಲ್ಲಿ ಭಗ ಬೆನ್ನಿನಲ್ಲಿ ಈ ಹಾದರಗಿತ್ತಿಯಂದವ ಸದಾಶಿವಮೂರ್ತಿ ಲಿಂಗವೇ ಬಲ್ಲ.

ಟೀಕು:— ಶರಣನ ಸೂಕ್ಷ್ಮಾಂತರಂಗದಲ್ಲಿ ಸಂಬಂಧವಾಗಿರ್ಪ ಚಿದ್ರೂಪವಾದ ಪ್ರಾಣಲಿಂಗವೆಂಬುದೀಗ ಕೋಣೆಯೊಳಗಣ ಮಿಂಡನೆಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಆಚಾರಾಂಗದಲ್ಲಿ ಸಂಬಂಧವಾಗಿರ್ಪ ಸದ್ರೂಪವಾದ ಇಷ್ಟಲಿಂಗವೆಂಬುದೀಗ ನಡುಮನೆಯೊಳಗಣ ಗಂಡನೆಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಸ್ವರೂಪನಾದ ಶರಣ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನದಿಂ ಬೆರಿಸುತಿರ್ದನೆಂಬುದೀಗ ಇವರಿಬ್ಬರ ಒಳಗೂಡುವವಳ ಚಂದವ ನೋಡಾ ಎಂಬ ಶಬ್ದಕ್ಕರ್ಥ ಅಂತು ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದ ಶರಣ ಸತಿಯ ಸದ್ಭಾವ ಹಸ್ತದಲ್ಲಿ ಜ್ಞಾನದೃಷ್ಟಿ ಪ್ರಭಾವಿಸಿತ್ತೆಂಬುದೀಗ ಕೈಯ್ಯಲ್ಲಿ ಕಣ್ಣು ಹುಟ್ಟಿ

ಎಂಬ ಶಬ್ದಕ್ಕರ್ಥ. ಆ ಶರಣನ ಶಿವಾಪೇಕ್ಷೆಯಲ್ಲಿ ಚಿದ್ಗರ್ಭದ ಚಿನ್ನ ದೋರುತ್ತಿಂಬುದೀಗ ಬಾಯಲ್ಲಿ ಬಸಿರು ಹುಟ್ಟಿ ಎಂಬ ಶಬ್ದಕ್ಕರ್ಥ. ಅನ್ವೃತ ಕುಂಭ ಸ್ವರೂಪಿಸಿಂದೊಪ್ಪುತ್ತಿರ್ದ ಮಹಾಘನ ಲಿಂಗವು ಶರಣನ ಅಭಿನ್ನ ಸ್ವಜ್ಞಾನದಲ್ಲಿ ಸಂಬಂಧವಾಯಿತ್ತೆಂಬುದೀಗ ಮೊಲೆ ತಲೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣನ ಸತಿಯ ನಿಜ ಸುಷುಪ್ತಿ ಸ್ಥಾನವು ಸುಜ್ಞಾನವೆಂಬ ಅವರ ಭಾಗದಲ್ಲಿ ಸಂಬಂಧವಾಗಿರುತ್ತಿಹುದೆಂಬುದೀಗ ಭಗ ಬೆನ್ನಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗಕ್ಕಂಗವಾಗಿರ್ಪ ಶರಣ ಸತಿಯು ತನ್ನ ನಿಜಾಂತರಂಗದ ಪ್ರಾಣಲಿಂಗದಲ್ಲಿ ಜ್ಞಾನಾಚಾರಣೆಯಿಂ ಚರಿಸುತ್ತಿಹಳೆಂಬುದೀಗ ಈ ಹಾದರಗಿತ್ತಿಯಂದವ ಸದಾಶಿವಮೂರ್ತಿಲಿಂಗವೇ ಬಲ್ಲನೆಂಬ ಶಬ್ದಕ್ಕರ್ಥ.

೫೯. ತಾವರೆಯ ನಾಳದ ತೆರಪಿನಲ್ಲಿ ಮೂರು ಲೋಕವನೊಳಕೊಂಡ ಗಾತ್ರದಾನೆ ಎಡತಾಕುತ್ತಿದೆ. ನಾಳ ಹರಿದು ಆನೆಯಂಗಕ್ಕೆ ನೋವಿಲ್ಲ. ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗವೆ.

ಟೀಕು:— ಹೃದಯ ಕಮಲದಲ್ಲಿರ್ಪ ಸುಜ್ಞಾನದ್ವಾರವೆಂಬುದೀಗ ತಾವರೆಯ ನಾಳದ ಎಂಬ ಶಬ್ದಕ್ಕರ್ಥ. ಆ ಸುಜ್ಞಾನದ್ವಾರದ ವಿಶಾಲತರದಲ್ಲಿ ಎಂಬುದೀಗ ತೆರಪಿನಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ತನುತ್ರಯಂಗಳನೊಳಕೊಂಡಿರ್ಪ ಚಿದಹಂಕಾರ ಸ್ವರೂಪವಾದ ಭಕ್ತಿಗಜವೆಂಬುದೀಗ ಮೂರು ಲೋಕವನೊಳಕೊಂಡ ಗಾತ್ರದಾನೆ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರವನೊಳಕೊಂಡಿರ್ಪ ಶರಣನು ಇಷ್ಟಪ್ರಾಣಲಿಂಗದಲ್ಲಿ ಸುಜ್ಞಾನ ಕ್ರಿಯೆವಿಡಿದು ಆಚರಿಸುತ್ತಿರ್ದನೆಂಬುದೀಗ ಎಡತಾಕುತ್ತಿದೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನದ್ವಾರಕ್ಕೆ ಕೇಡಿಲ್ಲವೆಂಬುದೀಗ ನಾಳ ಹರಿಯದು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವನೊಳಕೊಂಡಿರ್ಪ ಶರಣನಂಗಕ್ಕೆ ಸಂಸಾರವ್ಯಾಪ್ತಿಯ ದುಃಖವಿಲ್ಲವೆಂಬುದೀಗ ಆನೆಯಂಗಕ್ಕೆ ನೋವಿಲ್ಲ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪನಾದ ಶರಣನ ಚಿತ್ ಪ್ರಭಾಂಗಕ್ಕೆ ಸಂಸಾರ ಬಂಧನವಿಲ್ಲದಿರ್ಪುದು ಆಶ್ಚರ್ಯವೆಂಬುದೀಗ ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

೬೦. ಸೂಜಿಯ ಮೊನೆಯಲ್ಲಿ ದಾರವೇರಿ ಹಿನ್ನಿಯ ಹಂಗ ಬಿಡಿಸಿತ್ತು. ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು. ಮನ ಕಂಡು ಕೈ ಸಂದೇಹವ ಬಿಡಿಸಿತ್ತು. ಮನ ಘನದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು.

ಟೀಕು:— ಚಿದ್ರೂಪನಾದ ಶರಣ ಶಿವಾನುಭಾವ ಸನ್ನಿಹಿತನಾದ ಮನಸ್ಸಿನಗ್ರದಲ್ಲಿ ಸ್ವಾನುಭಾವ ಸೂತ್ರವ ಪ್ರಯೋಗಿಸಿದನೆಂಬುದೀಗ ಸೂಜಿಯ ಮೊನೆಯಲ್ಲಿ ದಾರವೇರಿ ಎಂಬ ಶಬ್ದಕ್ಕರ್ಥ. ಆ ಶಿವಾನುಭಾವದಲ್ಲಿ ಸನ್ನಿಹಿತವಾದ ಸ್ವಾನುಭಾವ ಸೂತ್ರವು ಕ್ರಿಯೆಯಿಂದೊದಗುವ ಭಿನ್ನಫಲಪದಂಗಳ ನಿವೃತ್ತಿ ಮಾಡಿತ್ತೆಂಬುದೀಗ ಹಿನ್ನಿಯ ಹಂಗ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಭಿನ್ನಫಲಪದಂಗಳು ನಿವೃತ್ತಿಯಾಗಲು ಸಕಲ ವಿಷಯ ಭೋಗಂಗಳ ಜೀವನು ಭುಂಜಿಸುತ್ತಿಹುದನು ಶರಣ ಸುಜ್ಞಾನ ದೃಷ್ಟಿ ಕಂಡು ಆ ಭಿನ್ನಾಪೇಕ್ಷೆಯನ್ನು ನಷ್ಟವ ಮಾಡಿದನೆಂಬುದೀಗ ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಅಂತು ಭಿನ್ನಾಪೇಕ್ಷೆ ನಷ್ಟವಾಗಲು ತನ್ನ ನಿಜಾಂತರಂಗದಲ್ಲಿರ್ಪ ಪ್ರಾಣಲಿಂಗವನು ಮನ ಸುಜ್ಞಾನ ದೃಷ್ಟಿಯಿಂ ಕಂಡು ಅವಿರಳ ಸಂಬಂಧಿಯಾಗಲು ಕರಸ್ಥಲದಲ್ಲಿ ಇಷ್ಟಲಿಂಗಪಡಿಯ ಮಾಡುವ ಸತ್ಕ್ರಿಯಾಚಾರವೆಲ್ಲ ನಿಷ್ಪತ್ತಿಯಾದವೆಂಬುದೀಗ ಮನ ಕಂಡು ಕೈಯ್ಯ ಸಂದೇಹವ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಈ ಜ್ಞಾನಕ್ರಿಯೆಯನೊಳಕೊಂಡಿರ್ಪ ಮನಸ್ಸು ನಿಷ್ಕಲಪರಬ್ರಹ್ಮದಲ್ಲಿ ಸುಸ್ಥಿರವಾಗಿ ಸಮರಸವನೆಯ್ದಿತ್ತೆಂಬುದೀಗ ಮನ ಘನಲಿಂಗದಲ್ಲಿ ನಿಂದು ಸದಾಶಿವಮೂರ್ತಿ ಲಿಂಗದ ಕುರುಹಳಿಯಿತ್ತು ಎಂಬ ಶಬ್ದಕ್ಕರ್ಥ.

೬೧. ಹಾವಿನ ಹುತ್ತದಲ್ಲಿ ಹದ್ದು ತತ್ತಿಯನಿಕ್ಕಿ ಹಾವು ಹಸಿದ ತತ್ತಿಯ ಮುಟ್ಟದು ನೋಡಾ. ಹಾವಿನ ವಿವರ ಹದ್ದಿನ ಭೇದ ತತ್ತಿಯ ಗುಣ ಆವುದೆಂದರಿದಲ್ಲಿ ಜೀವ ಪರಮ ಸ್ವಯಜ್ಞಾನ ಭೇದವನರಿಯಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ.

ಟೀಕು:— ಶಂಕಾ ವಿಷ ಸಂಬಂಧಿಯಾದ ಜೀವಂಗೆ ನವದ್ವಾರ ಯುಕ್ತವಾದ ದೇಹವೇ ಆಶ್ರಯವಾಯಿತ್ತೆಂಬುದೀಗ ಹಾವಿನ ಹುತ್ತದಲ್ಲಿ ಎಂಬ ಶಬ್ದಕ್ಕರ್ಥ. ಆ ನವದ್ವಾರಯುಕ್ತವಾದ ದೇಹದಲ್ಲಿ ಪರಮಾ

ಮೂಲಿಗೆ ಹಿಡಿದು ಎಂಟು ದಿಕ್ಕು ಪ್ರಮಾಣಿಸಿಕೊಂಡು ಎಂಟು ಪಾದ ಘಾತ ಒಂದುಪಾದ ವೇದಿಕೆಗೆ ನಿಲಿಸಿದಲ್ಲಿ ಒಂಬತ್ತುಪಾದ ಘಾತವಂ ನಿಲಿಸಿದಲ್ಲಿ ಕಡಿಮೆಯಾಗದ ಹಾಗೆ ಬೆಲ್ಲದಚ್ಚಿನೋಪಾದಿಯಂತೆ ಒಳಗೆ ಆಗುವದು.

ಇನ್ನು ಮುಂದೆ ಸೋಪಾನದ ಲಕ್ಷಣವಂ ಪೇಳ್ವೆನದು ಹೇಗೆಂದಡೆ:- ಬಡಗು ದಿಕ್ಕಿನ ಚೌಕದ ನಡುವೆ ಮಧ್ಯದಿಂದ ೫ ಪಾದ ಉತ್ತರ ದಕ್ಷಿಣವಾಗಿ ಅಳಿದು ಗುರುತವ ಮಾಡಿ ಮೂಡಲು ಪಡುವಲು ಎರಡು ಪಾದವ ಬಿಟ್ಟು ನಡುವೆ ಮೂರು ಪಾದವ ಅಳಿದು ಗುರುತವ ಮಾಡಿದಲ್ಲಿ ಸೋಪಾನದಾಕಾರವಹುದು. ಆ ಸೋಪಾನದ ನಾಲ್ಕು ಮೂಲಿಯನು ನೂಲ ಸೂತ್ರದಿಂದ ಪ್ರಮಾಣಿಸಿಕೊಂಡು ಕಡೆಯ ಸೋಪಾನ ಒಂದು ಪಾದ ಉದ್ದ ಘಾತವಿಡಿದು ಒಂದು ಪಾದ ನಡುವಣ ಸೋಪಾನ ಎರಡು ಪಾದ ಘಾತ ಎರಡುಪಾದ ಉದ್ದ ಮೂರನೆಯ ಸೋಪಾನ ಮೂರು ಪಾದ ಘಾತ ಮೂರುಪಾದ ಉದ್ದ ನೀಳ ಉಳಿದದ್ದು ಮೂರುಪಾದ ಮೂರು ಸೋಪಾನಕ್ಕೆ ಮೂರು ತತ್ವಂಗಳ ಸಂಬಂಧಿಸಿ ಅಂತು ಸೋಪಾನದ ಗಣನೆ ನವ ಘಾತವು.

ಇನ್ನು ಸೋಪಾನದ ಮುಂದೆ ವೇದಿಕೆಯ ರಚಿಸುವುದು. ಅದೆಂತೆಂದೊಡೆ ಆ ಚೌಕದ ಮಧ್ಯದಲ್ಲಿ ಉತ್ತರ ದಕ್ಷಿಣ ಮೂರು ಪಾದವ ಅಳಿದು ಮೂಡಲು ಪಡುವಲು ಮೂರು ಪಾದವ ಅಳಿದು ಅಳೆದಲ್ಲಿ ಚೌಕವಹುದು. ಆ ಚೌಕದ ಮೂಲಿಯೇ ಆಗ್ನೇಯ ನೈಋತ್ಯ ವಾಯುವ್ಯ ಈಶಾನ್ಯ ಮೂಲಿಗೆ ಹಿಡಿವುದು. ಹಿಡಿದು ಅಳಿದ ಬಳಿಕ ದಕ್ಷಿಣ ದಿಕ್ಕಿನ ನಿಲುವಿನಲ್ಲಿ ಒಂದು ಪಾದ ಘಾತ, ಒಂದು ಪಾದವಿಡಿದು ಪಡುವಣ ದಿಕ್ಕಿನಲ್ಲಿ ನಿಲವು ಒಂದು ಪಾದ ಘಾತ ಒಂದು ಪಾದ ಅಡ್ಡ ನೀಳ ಉತ್ತರ ದಿಕ್ಕಿನಲ್ಲಿ ನಿಲವು ಒಂದು ಪಾದ ಘಾತ ಒಂದು ಪಾದ ಅಡ್ಡ ಪಾದ ನಿಡಿದು ಮೂಡಲ ದಿಕ್ಕಿನ ನಿಲವಿನಲ್ಲಿ ಒಂದು ಪಾದ ಘಾತ ಒಂದು ಪಾದ ಅಡ್ಡ ನಿಡಿದು ಇಂತು ನಾಲ್ಕು ದಿಕ್ಕಿನಲ್ಲಿ ಡೋಣಿಯಾಕಾರದಲ್ಲಿ ಅದಾದರೆ ನಾಲ್ಕು ಮೂಲಿ ಹುಟ್ಟಿ ಜಗಲಿ ಆಕಾರವಹುದು. ಅದು ವೇದಿಕೆ ಎನಿಸುವದು.

ಇನ್ನು ವೇದಿಕೆಯ ಮುಂದೆ ತ್ರಿಕೋಣೆಯ ರಚಿಸುವ್ರಗು ಅದೆಂತೆಂದೊಡೆ ಮೂಡಲ ದಿಕ್ಕು ಒಂದು ಪಾದವ ಬಿಟ್ಟು ಪಡುವಲ ದಿಕ್ಕು ಒಂದು ಪಾದವ ಬಿಟ್ಟು ನಡುವೆ ಮೂಡಲು ಪಡುವಲಾಗಿ ಮೂರು ಪಾದವ ಅಳೆದು ಗುರುತವ ಮಾಡಿ ಮೂರು ಪಾದವ ಘಾತವ ನಿಲಿಸಿ ಆದರ ಮೇಲೆ × × × ಆಕಾರವ ಬರೆದು ಒಳಗೆ ಮೂರು ಪಾದವ ಉತ್ತರ ದಕ್ಷಿಣವಾಗಿ ಚೌಕವಾಗುವ ಹಾಗೆ ಅಗಿದು ಆ ಚೌಕದ ನಾಲ್ಕು ಮೂಲಿಯ ನೂಲ ಸೂತ್ರದಿಂದ ಅಳೆದು ಪ್ರಮಾಣಿಸಿದಲ್ಲಿ ಅದು ತ್ರಿಕೋಣೆ ಎನಿಸುವದು.

ಇನ್ನು ವೇದಿಕೆಯ ಮೇಲೆ ಸಮ್ಮಾರ್ಜನೆಯ ಮಾಡಿ ಪಂಚವಣ್ಣಿಗೆಯ ಹಿಟ್ಟಿನಲ್ಲಿ ಚನ್ನಾಗಿ ಎಲ್ಲರು ಅರಿವಂತೆ ಪಂಚ ಮುದ್ರೆಯಲ್ಲಿ ಲಿಖಿಸಿ ಆ ಪಂಚ ಮುದ್ರೆಯ ಕೋಣೆಗಳಲ್ಲಿ ಸಂಚಾಕ್ಷರವ ಒರೆದು ಮಧ್ಯದಲ್ಲಿ ಓಂಕಾರವ ಅಂಕಿಸಿ ಎಡಬಲದೊಳು ಪಂಚ ಬ್ರಹ್ಮ ಮಂತ್ರವ ಬರೆದು ಇನ್ನು ಮುಂದೆ ತ್ರಿಕೋಣೆಯಲ್ಲಿ ಪಂಚಲೋಹವನು ಪಂಚರತ್ನವನು ಸುವರ್ಣಮಯವಾದ ಚೂರ್ಣಂಗಳನಿಟ್ಟು ವಿಭೂತಿಯ ಪ್ರಸ್ತರೆರಡನ್ನು ಹರವುವುದು. ತಗಡಿನೊಳು ಲಿಂಗ ಮುದ್ರೆಗಳ ಬರೆದು ನಾಲ್ಕು ಮೂಲಿಗಳಲ್ಲಿ ಹತ್ತಿಸುವದು. ನಿರ್ಮಲತರದ ಏಕವರ್ಣವನಿಕ್ಕಿ ಇನ್ನು ಆ ಸಮಾಧಿಯ ಮೇಲೆ ಮೇಲು ಕಟ್ಟುಗಳ ಕಟ್ಟಿ ತರತರದೊಳು ನವೀನವಾದ ಮುಡಿವಾಳ ಹೊಂಬಾಳೆ ಕಣ್ಣು ಕಾಯಿಗಳು ಹೂವಿನ ಮಾಲೆಗಳು ಮೌಕ್ತಿಕದ ಗುಚ್ಛಗಳು ಪವಳದ ಗುಡಿಗಳು ಬೆಳ್ಳಿಯ ಜಲ್ಲಿಗಳನು ಪ್ರೀತಿಯಿಂದ ಅಲ್ಲಿಗಲ್ಲಿಗೆ ಕಟ್ಟಿ ಬಾಳೆಯ ಕಂಭಗಳ ಗೊನೆವೆರಸಿ ತಂದು ನಾಲ್ಕು ದಿಕ್ಕಿನಲ್ಲಿ ನಿಲಿಸಿ ಕಬ್ಬಿನ ಕೋಲಗಳ ನಾಲ್ಕು ಮೂಲೆಯಲ್ಲಿ ಕಟ್ಟಿ ತೆಂಗಿನ ನೀರಗಳ ನಾಲ್ಕು ಮೂಲಿಗೆ ಎಸೆವಂತೆ ಕಟ್ಟಿ ಸಮಾಧಿಯ ಶೃಂಗರಿಸುವದು.

ಆ ಸಮಾಧಿಯ ಶೃಂಗಾರವ ಕೇಳಿದ ಬಳಿಕ ವಿಭೂತಿ ವೀಳೆಯವ ಮಾಡಿಸಿ ಸುವರ್ಣ ವಸ್ತ್ರಂಗಳ ಸಮರ್ಪಿಸಿ ಭಕ್ತಮಾಹೇಶ್ವರರು ಕೂಡಿ ಆ ಮಂಟಪದೊಳಗಣ ವಿಭೂತಿ ಹಸೆಯೊಳಗಣ ಶೃಂಗಾರವಾಗಿಪ್ಪ ಶಿವಮೂರ್ತಿಯ ಬಿಜಯಂಗೈಸಿ ತಂದು ಪುಷ್ಪಕದೊಳಗಿರಿಸಿ ಭಕ್ತ ಮಹೇಶ್ವರರು ಜಯ ಜಯ ಉಘೇ ಎಂಬ ರವದಿಂದ ವಾದ್ಯ ಘೋಷ ಸಂಭ್ರಮ

ದಿಂದ ಶಿವಭಕ್ತಗೆತ್ತಿ ಹೊರುವುದು. ಆ ಪುಷ್ಪಕ ಸಮಾಧಿಯತ್ತಭಿಮುಖವಾಗಿ ನಡೆದು ಹೊಡೆವ ವಾದ್ಯಂಗಳಿಂದ ಛತ್ರ ಚಾಮರಗಳಿಂದ ಉಗ್ಘಡಣದ ಪುಷ್ಪಾಂಜಲಿಗಳಿಂದ ಮಡದಿಯರ ಸಂಭ್ರಮದಿಂದ ಆ ಸಮಾಧಿಯ ಸ್ಥಾನದೆಡೆಗೆ ಬಂದು ಪುಷ್ಪಕವ ನಿಳುಹುವದು.

ಆಗ ಗಣಂಗಳು ಅತಿ ಸಂಭ್ರಮದೊಳು ಭಕ್ತರೆಲ್ಲರು ಉಲ್ಹಾಸದಿಂದ ಇಳುಹುತ ಆ ಪುಷ್ಪಕದೊಳಗಿದ್ದವರ ತೆಗೆದುಕೊಂಡು ಸೋಪಾನಂಗಳನಿಳಿದು ವೇದಿಕೆಯ ಮೇಲೆ ಹರುಷದಿಂದ ಮೂರ್ತಗೊಳಿಸಿ ಜಂಗಮದ ಪಾದೋದಕದಿಂದ ಮುಖದೊಳೆದು ವಿಭೂತಿಯ ಧರಿಸಿ ಶುಭ್ರ ವಸ್ತ್ರಾಭರಣ ಗಂಧಾಕ್ಷತೆ ಪುಷ್ಪ ಪರಿಮಳಂಗಳನ್ನು ಮಾಹೇಶ್ವರರು ಪಾದಕ್ಕರ್ಪಿಸಿ ಪೂಜೆಯ ಮಾಡಿ ಧೂಪವನೆಬ್ಬಿಸಿ ಆರತಿಯ ಬೆಳಗಿ ಆ ಶಿವಮೂರ್ತಿಯ ಆ ಜಗಲಿಯಿಂದ ಮೆಲ್ಲನೆ ತ್ರಿಕೋಣೆಯ ಸ್ಥಾನಕ್ಕೆ ತೆಗೆದು ಮೂರ್ತಗೊಳಿಸಿ ಜಂಗಮ ಪಾದ ತೀರ್ಥದಿಂದ ಮುಖದೊಳೆದ ಬಳಿಕ ವಿಭೂತಿ ಬಿಲ್ವಪತ್ರೆಯ ತುಂಬಿ ಪಂಚಾಕ್ಷರಿಯ ಮಂತ್ರವನುಚ್ಚರಿಸಿ ಆ ಸಮಾಧಿಯ ಬಾಗಿಲಕ್ಕೆ ಕದವನಿಕ್ಕಿ ನೆಲಸರಿಸಮಮಾಡಿ ಆ ಸಮಾಧಿಯ ಶಿವಾಲಯವ ತ್ರಿಕೋಣೆ ವಾಸವೇ ಗರ್ಭಗೃಹ ಅಲ್ಲಿ ಸ್ಥಾಪಿಸಿದ ಶಿವಶರಣನ ದೇಹವೇ ಲಿಂಗವೆಂದು ಕಲ್ಪಿಸಿ ಸಂಭ್ರಮದೊಳಗಣ ಪರ್ವ ಮಾಡಿ ಸುಖದಲ್ಲಿಪ್ಪುದು ಭಕ್ತಮಾಹೇಶ್ವರರು.



# ದೇಹಕ್ಕೆ ಮಂತ್ರ ಸಂಬಂಧ.

(೧) ಇನ್ನು ಸಪ್ತಸ್ಥಾನದಲ್ಲಿ ಸಪ್ತ ಪ್ರಣಮಂಗಳ ಸಂಬಂಧವ ಮಾಡುವುದು. ಜ್ಞಾನಿಗಳು ಸಮಾಧಿಕ್ರಿಯೆ ಸಂಬಂಧಿಸುವ ಪ್ರಣಮಂಗಳು. ಊರ್ಧ್ವದಲ್ಲಿಯು ಪ್ರಣಮವು ಹಕಾರ ಓಂಕಾರ ಹಾಕಾರ ಸಕಾರ ಈ ನಾಲ್ಕು. ಹಾ, ಓಂ, ಹಾ, ಸ, ಈ ನಾಲ್ಕು ವಾಮ ಭಾಗದ ಪ್ರಣಮವು, ಅ ಓಂ ನಮಃ ಶಿವಾಯ ಈ ಏಳು ದಕ್ಷಿಣ ಭಾಗದ ಪ್ರಣಮವು. ಅ ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೌಂ ಹ್ರಾಃ ಈ ಏಳು ಮುಂದೆಸೆಯ ಪ್ರಣಮವು. ಉ ಬಸವ ಉ ಬಸವ ಈ ಎಂಟು ಹಿಂದೆಸೆಯ ಪ್ರಣಮವು. ಮ ಅ ಉ ಮ ಮ ಆ ಉ ಮ ಈ ಎಂಟು ವಾಮ ಕರ್ಣದ ಪ್ರಣಮವು × × × ದಕ್ಷಿಣ ಕರ್ಣದ ಪ್ರಣಮವು. ಬ ಒಂದು ಮುಖದಲ್ಲಿಯು ಪ್ರಣಮವು. ಓಂ ಒಂದು ವಾಮ ಭುಜದ ಪ್ರಣಮವು ಮತ್ತು ದಕ್ಷಿಣ ಭುಜದ ಪ್ರಣಮವು, ನಾಂ ನಾಂ ಎರಡು ಹೃದಯದ ಪ್ರಣಮವು, ಶೀಂ ಶೀಂ ಎರಡು ವಾಮಪಾರ್ಶ್ವದ ಪ್ರಣಮವು, ಮ ಒಂದು ದಕ್ಷಿಣ ಪಾರ್ಶ್ವದ ಪ್ರಣಮವು. ಉ ಒಂದು ವಾಮ ಜಾನುವಿನ ಪ್ರಣಮವು. ಆ ಓಂ ನಮಃ ಶಿವಾಯ ಈ ಏಳು ದಕ್ಷಿಣ ಜಾನುವಿನ ಪ್ರಣಮವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೌಂ ಹ್ರಃ ಈ ಏಳು ವಾಮ ಪಾದದ ಪ್ರಣಮವು. ಯ ಯ ಎರಡು ದಕ್ಷಿಣ ಪಾದದ ಪ್ರಣಮವು. ವ ವ ವಾಮ ವಾಮ ಕಡಪದ ಪ್ರಣಮವು. ಯ ಒಂದು ದಕ್ಷಿಣ ಕಡಪದ ಪಣಮವು. ವ ಒಂದು ಆಧಾರ ಸ್ಥಾನದ ಪ್ರಣಮವು. ಅ ಒಂದು × × × ಸ್ಥಾನದ ಪ್ರಣಮಂಗಳ ಸಂಬಂಧಿ ಸುವುದು ಜ್ಞಾನಿಗಳು ತಗಡು ೩೪ ಲಿಂಗ ತಗಡು ೪ ಜಮೆ ೩೮ ಇದು ಪ್ರಥಮದ ಪ್ರಣಮವು.

ಶ್ರೀ ಗುರು ಬಸವಲಿಂಗಾಯನಮಃ-ಪ್ರತ್ಯೇಕ ಪ್ರಣಮದ ಸಂಬಂಧವು. ಊರ್ಧ್ವದ ಪ್ರಣಮವು. ಓಂ ಹಾ ಎರಡು ವಾಮ ಭಾಗದ ಪ್ರಣಮವು. ಅ ಓಂ ನಮಃ ಶಿವಾಯ ಏಳು ದಕ್ಷಿಣ ಭಾಗದ ಪ್ರಣಮವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರಃ ಏಳು ಮುಂದೆಸೆಯ ಪ್ರಣಮವು. ಉ ಬಸವ ನಾಲ್ಕು ಹಿಂದೆಸೆಯ ಪ್ರಣಮವು. ಮ ಅ ಉಮ ನಾಲ್ಕು ವಾಮ ಭುಜದ ಪ್ರಣಮವು. ಮ ಒಂದು ದಕ್ಷಿಣ ಭುಜದ

ಪ್ರಣವಮವು. ನ ಒಂದು ಹೃದಯದ ಪ್ರಣವಮವು. ಶಿ ಒಂದು ವಾಮ ಪಾದದ ಪ್ರಣವಮವು- ಯ ಒಂದು ದಕ್ಷಿಣ ಪಾದದ ಪ್ರಣವಮವು.. ವ ಒಂದು ಇದು ದಶ ಸ್ಥಾನದ ಪ್ರಣವಮಂಗಳ ಸಂಬಂಧಿಸುವುದು ಜ್ಞಾನಿಗಳು ಇದು ದ್ವಿತೀಯದ ಪ್ರಣವಮವು. ತಗಡು ೧೫ ಲಿಂಗ ತಗಡು ೪ ಜಮೆ ೧೯ || ೨ ||

ಇನ್ನು ತೃತೀಯದ ಪ್ರಣವಮದ ಸಂಬಂಧವು. ಮೂರ್ಧ್ನಿಯ ಪ್ರಣವಮವು. ಹ ಒಂದು ಮುಂದೆಸೆಯ ಪ್ರಣವಮವು. ಬ ಬಸವ ನಾಲ್ಕು ಹಿಂದೆಸೆಯ ಪ್ರಣವಮವು. ಮ ಅ ಉ ಮ ನಾಲ್ಕು ವಾಮ ಜಾನುವಿನ ಪ್ರಣವಮವು. ಅ ಓಂ ನಮಃ ಶಿವಾಯ ಏಳು ದಕ್ಷಿಣ ಜಾನುವಿನ ಪ್ರಣವಮವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರಃ ಏಳು ವಾಮ ಪಾದದ ಪ್ರಣವಮವು. ಯ ಒಂದು ದಕ್ಷಿಣ ಪಾದದ ಪ್ರಣವಮವು. ೮೧ ಇಂತೀ ಸಪ್ತ ಸ್ಥಾನಂಗಳ ಪ್ರಣವಮವು ಸಂಬಂಧಿಸುವುದು ಜ್ಞಾನಿಗಳು ತಗಡು ೭ ಲಿಂಗ ತಗಡು ೪ ಜಮೆ ೧೧. || ೩ ||

( ೨ ) ಅಕಾರವೇ ಎಡದಕಡೆಯಲ್ಲಿ ಸಂಬಂಧ. ಉಕಾರವೇ ಮುಂದೆಸೆಯಲ್ಲಿ ಸಂಬಂಧ. ಮಕಾರವೇ ಬೆನ್ನಿನಲ್ಲಿ ಸಂಬಂಧ. ಓಂಕಾರವೇ ಬಲದಲ್ಲಿ ಸಂಬಂಧ. ಹಕಾರವೇ ಮಸ್ತಕದಲ್ಲಿ ಸಂಬಂಧ. ಇಂತಿವು ಪಂಚ ಪ್ರಣವಮ ಸಂಬಂಧ.

ಬಸವ ಎಂಬ ಮೂರಕ್ಷರವೇ ಮುಂದೆಸೆಯಲ್ಲಿ ಸಂಬಂಧ. ಅ ಉ ಮ ಎಂಬ ಮೂರು ಅಕ್ಷರಂಗಳು ಹಿಂದೆಸೆಯಲ್ಲಿ ಸಂಬಂಧ. ಓಂ ನಮಃ ಶಿವಾಯ ಎಂಬ ಆರು ಅಕ್ಷರಂಗಳು ಎಡದಲ್ಲಿ ಸಂಬಂಧ. ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೋಂ ಹ್ರಃ ಎಂಬ ಆರು ಅಕ್ಷರಂಗಳು ಬಲದಲ್ಲಿ ಸಂಬಂಧ ಓಂಕಾರವೇ ಊರ್ಧ್ವದಲ್ಲಿ ಸಂಬಂಧ. ನಕಾರವೇ ಬಲದ ಭುಜದಲ್ಲಿ ಸಂಬಂಧ. ಮಕಾರವೇ ಎಡದ ಭುಜದಲ್ಲಿ ಸಂಬಂಧ. ಶಿಕಾರವೇ ಹೃದಯದಲ್ಲಿ ಸಂಬಂಧ. ವಕಾರವೇ ಬಲದ ತೊಡೆಯಲ್ಲಿ ಸಂಬಂಧ. ಯಕಾರವೇ ಎಡದ ತೊಡೆಯಲ್ಲಿ ಸಂಬಂಧವು.

---

# ಮರಣ.

(೧) ಗುರುವಿನಿಂದ ಉಪದೇಶವ ಹಡೆದ ಶಿಷ್ಯಂಗೆ ಭಾವ ವಾವುದಯ್ಯಾ ಎಂದರೆ, ಸದ್ಗುರು ಸಂಬಂಧವೇ ಲಿಂಗದಲ್ಲಿ ಐಕ್ಯವಾದರೆಂದು ಭಾವಿಸುವುದಯ್ಯಾ. ಲೋಕದವರಂತೆ ಸತ್ತರು ಕೆಟ್ಟರು ಎಂದು ಬರಿಯ ನುಡಿಯ ನುಡಿದರೆ ಅಘೋರ ನರಕ ತಪ್ಪದು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

(೨) ಗುರುವು ಅಳಿದನು ಉಳಿದನು ಎಂದೆಂಬಿರಿ, ಗುರು ಅಳಿದ ಜಗ ಉಳಿಯ ಬಲ್ಲುದೇ ? ಸ್ಥಾವರಂ ಜಂಗಮಾಧಾರಂ ನಿರ್ಮಳ ಸ್ಥಿರಮೇವಚ ॥ ಜಗದ್ವಂದಿತ ಪಾದಾಯ ತಸ್ಮೈ ನಮಃ ॥ ಎಂದುದಾಗಿ ಗುರು ಅಳಿವನು ಅಲ್ಲ, ಉಳಿವನು ಅಲ್ಲ, ನಿಮ್ಮ ಭ್ರಾಂತಿ. ಅಳಿದನು ಉಳಿದನು ಎಂದು ಕೂಗುತ್ತ ಕೇಳುವಿರಿ. ಇದು ಅಲ್ಲ. ಈ ವಿಕಾರಾದಿ ಮುಳುಗಿದವನ ಶಿಷ್ಯನೆಂದೆಂಬೆನೆ ? ಇನ್ನೇನಯ್ಯಾ ? ಗುರು ಸತ್ತನೆಂದು ಬಸಿರು ಹೊಯ್ದುಕೊಂಡು ಬಾಯಿ ಬಡೆದುಕೊಂಡು ಅಳುವ ದುಃಖ ಜೀವಿಗಳಿಗೆ ಗುರುವಿಲ್ಲ, ಗುರುವಿಲ್ಲವಾಗಿ ಜಂಗಮವಿಲ್ಲವಯ್ಯಾ. ಜಂಗಮ ವಿಲ್ಲವಾಗಿ ಪಾದೋದಕ ಪ್ರಸಾದವಿಲ್ಲ. ಈ ತ್ರಿವಿಧವಿಲ್ಲವಾಗಿ ಮುಕ್ತಿ ಎಂಬುದು ಎಂದಿಗೂ ಇಲ್ಲವಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೩) ಅರಿಮರತು ಮರಹುಗೆಟ್ಟು ತನ್ನಲ್ಲಿ ತಾನೇ ಸನ್ನಿಹಿತನಾದಂಗೆ ದುಃಖಿಸುವದೇ ಹೇಳಾ ? ಒಡಲಿಲ್ಲದಾತಂಗೆ ಎಡೆಯಲೊಂದು ಅಳಿವುಂಟೆಂದು ಹೇಳುವ ಮಾತು ಭ್ರಾಂತು ನೋಡಾ. ಎರಡಿಲ್ಲದ ಐಕ್ಯಂಗೆ ಒಳಹೊರಗಿಲ್ಲ ನೋಡಾ ಗುಹೇಶ್ವರನ ಶರಣ ಅಜಗಣ್ಣಂಗೆ.

(೪) ಅನುಮಿಷ ದೇವರು ನಿಜವನೈದಲು ಅನುತಾಪಿಸುತ್ತಿರ್ದ ಪ್ರಭುದೇವರು ತನ್ನ ತಾ ಸಂತೈಸಿಕೊಂಡು ತಿಳಿದು ನೋಡಿ ಆ ಗುರುವಿನ ಚೈತನ್ಯ ಲಿಂಗದಲ್ಲಿ ಅಡಗಿತ್ತು. ಆ ಲಿಂಗವೆನ್ನ ಕರಸ್ಥಲದಲ್ಲಿ ಬಂದಿತ್ತು. ಅದು ಕಾರಣ ಈ ಶ್ರೀ ಗುರು ಎನ್ನ ಕರಸ್ಥಲದಲ್ಲಿ ಸಂಪೂರ್ಣವಾಗಿ ನೆಲೆಗೊಂಡನಲ್ಲದೆ ಅನ್ಯಭಾವ ವಿಷಯದಿಂದ ಅಳಿದುದಿಲ್ಲವೆಂದು ನಿಶ್ಚಯಿಸಿಕೊಂಡ ಪ್ರಸ್ಥಾವದ ವಚನ:- ಆಹಾ ಮನವೇ ಮರೆದೆಯಲ್ಲಾ

ನಿನ್ನ ಪೂರ್ವಾ ಪರವ. ಘನ ಮನದೊಳಗಾಗಿ ಆ ಮನ ಲಿಂಗದೊಳಡಗಿ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಬಳಿಕ ಅಳಿಯಿತ್ತು ಅಗಲಿತ್ತು ಎಂಬ ಭಾವ ಭ್ರಾಂತು ಇದೇನೊ ? ಜನನವಿಲ್ಲದ ಘನಕ್ಕೆ ಮರಣ ಉಂಟೇ ? ತೆರಹಿಲ್ಲದ ನಿಜವು ತನ್ನಲ್ಲಿ ತಾನು ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋರದೆಂಬ ಅಜ್ಞಾನವಿದೇನೋ ? ಜನನವಿಲ್ಲದ ನೀ ನಾನು ಎಂಬುದು ಮಾದು, ತಾನೆಯಾಗಿ ಸಾಧ್ಯವಾಯಿತ್ತು ಇದನೇನೆಂಬೆ ಗುಹೇಶ್ವರಾ ?

( ೫ ) ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಸಾವೆಂಬುದು ಸ್ವಯವಲ್ಲ. ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ, ಆ ಲಿಂಗದಲ್ಲಿ ಎಲ್ಲಿದೆ ಬೇರೆ ಮತ್ತೊಂದೆಡೆಯುಂಟೇ ಕೂಡಲ ಸಂಗಮ ದೇವಾ.

( ೬ ) ಮುಟ್ಟಿತ್ತು, ಕೆಟ್ಟಿತ್ತು ಎಂದರೆ ಇನ್ನರಸುವುದಾವಾವು ದಯ್ಯಾ ? ತನುವ ಮರೆದರೆ ನೆನಹಿನೊಳಗದೆ ನೋಡಾ, ಹಾವು ಹೊರೆ ಗಳೆದರೆ ವಿಷ ನಾಶವಪ್ಪುದೇ ? ಶರಣನು ಕಾಯವೆಂಬ ಕಂಥೆಯ ಕಳೆದರೆ ಮೃತವಹನೇ ? ಅರಿವು ಲಿಂಗದಲ್ಲಿ ಪ್ರತಿಷ್ಠೆಯಾಗಿ ನಿರ್ಲೇಪನಾಗಿ ಮಹಾ ಲಿಂಗ ಕಲ್ಲೇಶ್ವರನಲ್ಲಿ ಲೀಯವಾದ ಶರಣ.

( ೭ ) ಕಾಯವಿರಿಸಿ ಕೈಲಾಸಕ್ಕೆ ಹೋದೆಹೆನೆಂಬುದು ಕ್ರಮವಲ್ಲ. ಘನಲಿಂಗ ಕರಸ್ಥಳದೊಳಗಿಪ್ಪ ಅನುವನರಿಯದೆ ಇಲ್ಲಿಗೆ ಕರ್ಮ, ಅಲ್ಲಿಗೆ ನಿಃಕರ್ಮವೇ ? ಹೇಮಧ ಮಾಟದ ಒಳಹೊರಗಿನಂತೆ ಮರ್ತ್ಯ ಕೈಲಾಸ ವೆಂಬ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ. ಈ ಗುಣ ಸದಮಲ ಭಕ್ತನ ಯುಕ್ತಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನನಿಕ್ಕಿದ ಗೊತ್ತು.

( ೮ ) ಸಾಲೋಕ್ಯವೆಂದೇನೋ ಅಂಗದ ಮೇಲೆ ಲಿಂಗ ಸಂಬಂಧ ವಾಗಿರುತ್ತಿರಲು ? ಸಾಮೀಪ್ಯವೆಂದೇನೋ ಗುರುಲಿಂಗ ಜಂಗಮದ ದಾಸೋ ಹದ ಸನ್ನಿಧಿಯೊಳಿರುತ್ತಿರಲು ? ಸಾರೂಪ್ಯವೆಂದೇನೋ ಅನವರತ ಅರ್ಚನೆ ಯೊಳಿರುತ್ತಿರಲು ? ಸಾಯುಜ್ಯವೆಂದೇನೋ ಚತುರ್ದಶ ಭುವನವನೊಳ ಕೊಂಡ ಮಹಾ ಘನವ ಮನ ನೆನೆವುತ್ತಿರಲು ? ಇಂತೀ ಚತುರ್ವಿಧ ಪದ ವೆಂಬುದೇನೋ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ನಿಮ್ಮನರಿದ ಶರಣಂಗೆ. ?

(೯) ಲಿಂಗವಂತಂಗೆ ಲಿಂಗವು ಮಾಡಿದ ಪದವಿಯನು ಲಿಂಗವಂತರೇ ಬಲ್ಲರು. ಕೇವಲ ಸಾಕ್ಷಾತ್ ಪರವಸ್ತುವನು ಕರಸ್ಥಲಕ್ಕೆ ಬಿಜಯಂಗೈಸಿ ಕೊಟ್ಟನಾಗಿ ಸಾಲೋಕ್ಯ ಪದ. ಅಂಗದ ಮೇಲೆ ನಿರಂತರ ಪೂಜೆಗೊಳ್ಳುತ್ತಿಹನಾಗಿ ಸಾಮೀಪ್ಯ ಪದ. ಸದ್ಭಕ್ತಿ ರೂಪನ ಮಾಡಿದನಾಗಿ ಸಾರೂಪ್ಯ ಪದ. ಪ್ರಾಣಲಿಂಗವ ಮಾಡಿ ಅವಿನಾಭಾವವ ಮಾಡಿದನಾಗಿ ಸಾಯುಜ್ಯಪದ. ಲಿಂಗಮಧ್ಯೆ ಶರಣ, ಶರಣ ಮಧ್ಯೆಲಿಂಗವೆಂದುದಾಗಿ ಸರ್ವ ಭೋಗಂಗಳು ಸಹವಾಗಿ ಭೋಗಿಸಿ ಪ್ರಸಾದವನಿಕ್ಕಿ ಸಲಹಿದನು. ಸದ್ಯೋನ್ಮುಕ್ತನಾದೆನು. ಸರ್ವಾಂಗವು ಲಿಂಗವು ಈ ತಾತ್ಪರ್ಯದ ಮರ್ಮವ ಲೋಕದ ಜಡರೆತ್ತ ಬಲ್ಲರು? ಬಲ್ಲಡೆ ಲಿಂಗಾನುಭಾವಿಗಳು ಬಲ್ಲರಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

---

## ಲಿಂಗಾಂಗಿಯು ಶರೀರವನ್ನು ದಹಿಸಕೂಡದು

(೧) ಮಹಾಲಿಂಗವಂ ಗುರುವು ತಂದಿದಿರಿಟ್ಟಲ್ಲಿ ಸ್ಫಟಿಕ ಭಾಂಡದಲ್ಲೊಳಗಿರ್ಪ ವಸ್ತುವೇ ಹೊರಗೆ, ಹೊರಗಿರ್ಪ ವಸ್ತುವೇ ಒಳಗೆ ತೋರಿ ಆ ಭಾಂಡವು ತನ್ನ ನಿಜಗುಣವಳಿದು ವಸ್ತುವಿನ ಗುಣರೂಪವಾಗಿ ತೋರ್ಪಂದದಿ ಇಷ್ಟ ಪ್ರಾಣಂಗಳೇಕವಾದಲ್ಲಿ ಶರೀರವು ತನ್ನ ಮುನ್ನಿನ ಗುಣವಳಿದು ಅಗ್ನಿಸ್ವರೂಪವಾದ ಇಷ್ಟಲಿಂಗದಲ್ಲಿ ಐಕ್ಯವಾದುದರಿಂ ದಹನಕ್ಕಯೋಗ್ಯವಾಯಿತ್ತು. ನಿರಾಕಾರವಾದ ಪ್ರಾಣವು ಈಶಾನ ಸ್ವರೂಪವಾದ ಪ್ರಾಣಲಿಂಗದಲ್ಲಿ ಲೀನವಾದುದರಿಂ ಕರ್ಮ ಸಂಸ್ಕಾರ ಯೋಗ್ಯವಲ್ಲದಾಯಿತ್ತು. ಅದದರಿಂದ ಶಿವಭಕ್ತನಿಗೆ ದಹನ ಸಂಸ್ಕಾರ ವಿಲ್ಲವಾಯಿತ್ತು. ಇಂತಪ್ಪ ಸಾಕಾರ ನಿರಾಕಾರ ಶಿವಶಕ್ತಿ ಸ್ವರೂಪುಗಳೆಲ್ಲವೂ ಭಾವದಲ್ಲೊಂದೇ ಆಗಿ ಪರಿಪೂರ್ಣ ತೃಪ್ತಿಯಲ್ಲಿ ನಿಜ ಸ್ವಭಾವವಾಯಿತ್ತು ಕಾಣಾ ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ.

---



# BOOK-POST.

R. N. B. 2554

From,
Shivanubhava
Office
Bijapur.

ಶ್ರೀ, ರಾ॥ ರಾ॥

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ. ೨ ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ವಿಷಯಾನುಕ್ರಮಣಿಕೆ.

ಪುಟ.



---


ಶಿವಾನುಭವ ಮಾಸಪತ್ರಿಕೆ,
ವಿಜಾಪುರ.
[illegible]

# ಶಿವಾನುಭವ

| ವರ್ಷ ೨೬ | ಎಪ್ರೀಲ ೧೯೫೨ | ಸಂಚಿಕೆ ೪ |
| --- | --- | --- |


## ಅನುಭವಮಂಟಪ.


(ಲೇಖಕರು:— ಶ್ರೀ. ಪು. ಮಲ್ಲಪ್ಪ ಶಿವಾನುಭವ ಸಂಘ-ಹಲಗೂರು.)


ಅನುಭವ ಮಂಟಪವು ಹನ್ನೆರಡನೆ ಶತಮಾನದ ಆತ್ಮಜ್ಯೋತಿಯ ಪ್ರಕಾಶನಿಲಯು, ಅರ್ಥಾತ್ ಆತ್ಮವಿಚಾರ ಮಂದಿರವು ಆಗಿದೆ. ಈ ಮಂದಿರದ ಜೀವಜೀವಾಳವು ಅನುಭವವೇ ಆಗಿರುತ್ತದೆ. ಆತ್ಮಸಂಯಮದ ವೀರವೈರಾಗ್ಯದ ಬತ್ತದ ಜೀಲುಮೆಯು, ಶಿವಜ್ಞಾನದ ಕನಕಗಿರಿಯು ಅನುಭವಮಂಟಪವು. ಅನುಭವವೇ ಧರ್ಮದ ತಳಹದಿಯಾಗಿ ನಿಲ್ಲಲಿಕ್ಕೆ ಪ್ರಾರಂಭ.

ವೇದವೇ ಹಿರಿದೆಂದು ವಾದವನು ಮಾಡುವಿರಿ.
ವೇದದಲೇನು ಅರಿದಿಹುದು. ಅನುಭವಿಯ
ವೇದವೇ ವೇದ ಸರ್ವಜ್ಞ ॥

ಎಂಬುದು ಅನುಭವದ ಅಂತರಾರ್ಥವನ್ನು ಅರಿವು ಮಾಡಿಕೊಡುವುದಿಲ್ಲವೇ ?

ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ.

ಜ್ಞಾನವೆಂದರೆ ತಿಳಿಯುವದು, ಕ್ರಿಯೆಯೆಂದರೆ ತಿಳಿದಂತೆ ಮಾಡುವುದು.

ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ.
ಅದರಂತೆ ಆಚರಿಸುವುದೇ ಕ್ರಿಯೆ.

ಅರಿತು ಅಂತು ಆಚರಿಸದಿದ್ದರೆ ಅದೇ ಅಜ್ಞಾನ ನೋಡಾ ಕೂಡಲ ಚೆನ್ನ ಸಂಗಮ ದೇವಾ.

ಈ ತೆರದ ಜ್ಞಾನಸಕ್ರಿಯೆಯ ಸಾಮರಸ್ಯ ತತ್ವಾರ್ಥ ಸಾಧನೆಯನ್ನು ಸಲೆ ಸಾಧಿಸಿದ ದಿವ್ಯಾಲಯವೇ ಅನುಭವಮಂಟಪವು. ಈ ಮಂಟಪದ ಅಧಿಪತಿಯು ಆತ್ಮಜ್ಞಾನಿ ಅಲ್ಲಮಪ್ರಭುವು. ಈ ಧಾರ್ಮಿಕ ಸಂಸ್ಥೆಯ ಸ್ಥಾಪಕರು ಶಾಂತಿವಾದಿ ಬಸವಣ್ಣನು. ಇವರ ಕೈಪಿಡಿಯು 'ಶೂನ್ಯ ಸಂಪಾದನೆ' ಯು. ಶೂನ್ಯ ಸಂಪಾದನೆಯ ಕರ್ತೃವು ಗೂಳೂರು ಸಿದ್ಧವೀರಣಾರ್ಯನು. ಈತನು ಹದಿನೈದನೆ ಶತಮಾನದಲ್ಲಿ ಆಗಿಹೋದ ಕರ್ಣಾಟ ಕವಿಯು. ಶರಣ ಶರಣೆಯರ ವಚನಗಳಿಂದಲೇ ಈ ಮಂಟಪದ ವಿಚಾರವಿನಿಮಯ ಸರಣಿಯು ಜೋಡಿಸಲ್ಪಟ್ಟಿರುವ ಅಪೂರ್ವ ಗ್ರಂಥವೇ ಶೂನ್ಯ ಸಂಪಾದನೆಯು. ತಮಿಳು ನಾಡಿನ ಸಂಘ ಸಾಹಿತ್ಯ, ಸೂಫಿಸಾಹಿತ್ಯ, ಪ್ಲೇಟೋವಿನ ಸಂಭಾಷಣೆಯನ್ನು ಇದು ಹೋಲುತ್ತದೆ. ರೀತಿನೀತಿಯ ಉಭಯ ದೃಷ್ಟಿಯಿಂದ ಇದು ಮಹತ್ವಪೂರಿತವಾದ ಗ್ರಂಥವು.

ವ್ಯಕ್ತಿಯೋರ್ವನನ್ನೇ ಅವಲಂಬಿಸದೆ ತತ್ವಗಳ ಬುನಾದಿಯ ಮೇಲೆ ನಿಂತು ಸಮಾಜ, ಧರ್ಮ, ವ್ಯಕ್ತಿಯ ಪ್ರಗತಿಗಳೆಲ್ಲವನ್ನೂ ಸರಿಸಮಾನ ದೃಷ್ಟಿಯಿಂದ ನೋಡುತ್ತ ಜನಜೀವನದ ಸರ್ವಾಂಗಗಳ ಮೇಲೆಯೂ ತನ್ನ ಪ್ರಭಾವ ಮುದ್ರೆಯನ್ನೊತ್ತಿದ ಮಹತ್ಕೀರ್ತಿಯು ಅನುಭವ ಮಂಟಪಕ್ಕೆ ಸೇರಿದೆ. ವೀರಶೈವ ಧರ್ಮವು ಕೇವಲ ವ್ಯಕ್ತಿವೈಶಿಷ್ಟ್ಯವನ್ನು ಸಾರುವುದಕ್ಕಾಗಲೀ ಇಲ್ಲವೇ ವ್ಯಕ್ತಿಯ ವಿಮುಕ್ತಿಯನ್ನು ಸಾಧಿಸುವದಕ್ಕಾಗಲೀ ಜನ್ಮವನ್ನು ತಾಳಲಿಲ್ಲ. ಜಗತ್ತೆಲ್ಲವೂ ಧರ್ಮ ಶ್ವೇತಚ್ಛತ್ರದ ತಡಿಯಲ್ಲಿ ಸೌಹಾರ್ದತೆಯಿಂದ ಪರಸ್ಪರ ಪ್ರೀತಿಯಿಂದ ಬಾಳಬೇಕೆಂಬುದೇ ಅದರ ಹೆಗ್ಗುರಿಯು. ಈ ಗುರಿಯನ್ನು ಸಲೆಸಾಧಿಸಲು ಟೊಂಕ ಕಟ್ಟಿನಿಂತ ಶರಣ ಶರಣೆಯರೇ ಈ ಅನುಭವ ಮಂಟಪದಲ್ಲಿ ಅಧ್ಯಯನ ವ್ಯಸನಿಗಳಾಗಿ ಕಾಲ ಕಳೆದರು.

ಒಕ್ಕಡೆ, ವ್ರತನಿಯಮಗಳು ಲೆಕ್ಕವಿಲ್ಲದೆ ಸಾಗುತ್ತ ಜನಜೀವನವನ್ನು ಜೋಲಾಡುವಂತೆ ಮಾಡುತ್ತಿದ್ದರು; ಮತ್ತೊಂದೆಡೆ, ವೇದದ ಹಾದಿ ಹಿಡಿದು ಸ್ತ್ರೀಶೂದ್ರರ ಜೀವನ ಪ್ರಗತಿಪಥಕ್ಕೆ ಪೆಟ್ಟನ್ನು ಪೆಡಸಾಗಿ ಕೊಡುತ್ತಿದ್ದರು. ಇನ್ನೊಂದೆಡೆ ಎಲ್ಲಕ್ಕೂ ಕೈಲಾಸವನ್ನೇ ತೋರುತ್ತಿದ್ದರು. ಮಗದೊಂದು ಕಡೆ ಹಿರಿಯ ಕಿರಿಯರೆಂಬ ಏರಿಯನ್ನು ವಧ್ಯೆ ತಂದು ಸಹಜ ಜ್ಞಾನಪ್ರಕಾಶಕ್ಕೆ ಅವಕಾಶವಿಲ್ಲದಂತಾಗುತ್ತಿತ್ತು. ಪರಿಸ್ಥಿತಿಯು ಈ ಪರಿಯ ಪರಿದಾಟಕ್ಕೆ ಪಕ್ಕಾಯಿತು. ಇದು ಕಾರಣ ಜನಸಾಮಾನ್ಯಕ್ಕೆ ಧರ್ಮದ ನಿಜಸ್ವರೂಪವೇ ತಿಳಿಯದಂತಾಯಿತು. ವೇದಾಗಮಗಳನ್ನು ಬಲ್ಲವರೆಂಬ ಜನರು ತಾವೇ ಶ್ರೇಷ್ಠರೆಂದೂ, ದೇಹಶ್ರಮದಿಂದ ಇಲ್ಲವೇ ಇತರ ಉದ್ಯೋಗಗಳಿಂದ ಜೀವಿಸುತ್ತಿದ್ದವರು ಕೀಳೆಂದು ಭಾವಿಸುತ್ತಿದ್ದುದೂ ಅಲ್ಲದೆ ಅನೇಕ ಅಂಥ ಸಂಪ್ರದಾಯಗಳಿಗೆ ಆಹುತಿಯಾಗುತ್ತಿದ್ದರು.

ಮನೆ ನೋಡಾ ಬಡವರು; ಮನ ನೋಡಾ ಘನ.
ಸೋಂಕಿನಲ್ಲಿ ಸುಖಿ; ಸರ್ವಾಂಗ ಕಲಿ.
ಪಸಾರಕ್ಕನುವಿಲ್ಲ; ಬಂದ ತತ್ಕಾಲಕ್ಕುಂಟು.
ಕೂಡಲಸಂಗನ ಶರಣರು ಸ್ವತಂತ್ರರು, ಧೀರರು.

ಎಂದು ಅಪ್ಪಣೆಕೊಡಿಸಿದ ಬಸವಣ್ಣನವರ ದೃಷ್ಟಿಗೆ ಇದು ಬೀಳದೆ ಇರಲಿಲ್ಲ. ಜಗತ್ತಿನಲ್ಲಿ ಏನಾದರೂ ಹಿಂಸೆ, ಅತ್ಯಾಚಾರ, ಕದನ, ರಕ್ತಪಾತಾದಿ ಶಾಂತಿಭಂಗ ಘಟನೆಗಳನ್ನು ಕಂಡು ಕೇಳಿ ಸಹಿಸರು ಶರಣರು. 'ಎಲುವು ತೋರಿದೊಡೆ ನರ ಹರಿವರೆ ಕರುಳು ತುಪ್ಪಳಿಸಿದೊಡೆ ನಾ ಕೃತಿಗೆಡೆನಯ್ಯ' ಎಂಬ ನಿಷ್ಠುರ ನಿರ್ದಾಕ್ಷಿಣ್ಯದಿಂದ ಪ್ರಚಂಡ ಧೈರ್ಯವನು ಇವರು ತಾಳುತ್ತಿದ್ದರು. ಈ ಬಗೆಯ ಶರಣ ಶರಣೆಯರೇ ಅನುಭವ ಮಂಟಪದ ಸದಸ್ಯ ಸದಸ್ಯೆಯರು.

ಅನುಭವ ಮಂಟಪವು ಪುಣ್ಯ ತಪೋವನವಾಗಿತ್ತು. ವಚನವಾಙ್ಮಯ ಸೃಷ್ಟಿಕಾರರಾದ ಶರಣ ಶರಣೆಯರೇ ಈ ತಪೋವನದ ತಪಸ್ವಿಗಳು. ಸಕಲ ಧರ್ಮಗಳ ಸಾರ ವಿಷಯಗಳನ್ನು ಸೇರಿಸಿ ನರನು ಹರನ ಜನಾರ್ದನ ಆಗುವುದಕ್ಕೆ ಸಹಾಯವಾಗುವ ಸಿದ್ಧಾಂತವೊಂದನ್ನು

ಸ್ಥಾಪಿಸಿ, ಈ ಮಂಟಪದ ಮೂಲಕ ಅದನ್ನು ಪ್ರಪಂಚದಲ್ಲಿ ಪ್ರಸರಿಸಿದರು. ಅರಿವಿನ ದ್ವಾರಕ್ಕೆ ಬಗೆಬಗೆಯ ಹಾದಿಗಳನ್ನೇರ್ಪಡಿಸದೆ ಅದನ್ನು ಸಕಲೋಪಯೋಗಾರ್ಥವಾಗಿ ತೆರೆದಿಟ್ಟರು. ಜಾತಿಭೇದವಿಲ್ಲದೆ, ಲಿಂಗ ತಾರತಮ್ಯವಿಲ್ಲದೆ, ವಯೋವ್ಯತ್ಯಾಸವನ್ನೆಣಿಸದೆ, ಬಡವ ಬಲ್ಲಿದನೆನ್ನದೆ, ಗುರು ಹಿರಿಯರೆನ್ನದೆ ಯಾರೂ ಬೇಕಾದರೂ ಅಲ್ಲಿಗೆ ಹೋಗುವಂತಾಯಿತು.

ಅನುಭವ ಮಂಟಪದ ಚಾಲಕರೂ, ಸ್ಥಾಪಕರೂ, ವ್ಯವಸ್ಥಾಪಕರೂ ಲೌಕಿಕದಲ್ಲಿ ಒಳ್ಳೆಯ ನೀತಿ ಸಂಪನ್ನರಾದಂತೆ ಪರಮಾರ್ಥದಲ್ಲಿಯೂ ಕೂಡ ಭಕ್ತಿಯೋಗ ಜ್ಞಾನಸಂಪನ್ನರಾಗಿ ಇಷ್ಟಲಿಂಗದಲ್ಲಿ ಭಕ್ತಿಯನ್ನೂ ಪ್ರಾಣಲಿಂಗದಲ್ಲಿ ಯೋಗವನ್ನೂ, ಭಾವಲಿಂಗದಲ್ಲಿ ಅವಿರಳ ಜ್ಞಾನವನ್ನೂ ಸಂಪಾದಿಸಿ ಆಧ್ಯಾತ್ಮಿಕಾನಂದಿಗಳಾಗಿದ್ದರು. ಜನಜೀವನದ ಜಂಜಡವನ್ನು ಕಂಡು ಕೇಳಿ ಬಸವಣ್ಣನವರು ಮನ ಕರಗಿದರು. ಆಧ್ಯಾತ್ಮಿಕ ಪರಮಹಂಸಗಳ ತಿಳಿಗೊಳವೊಂದನ್ನು ನಿರ್ಮಿಸಲು ರಾಜಧಾನಿಯನ್ನು ಬಿಟ್ಟು ಕಲ್ಯಾಣದತ್ತ ಹೊರಟರು. 'ರಸವಾರಿಧಿ' ಬಸವಣ್ಣನವರು ಈಗಾಗಲೇ ಜನತೆಗೆ ಪರಿಚಿತರಾಗಿದ್ದರು. ಹೃದಯ ಮಂದಿರದಲ್ಲಿ ತನ್ನ ಮಹತ್ವವನ್ನು ತಪ್ಪದೆ ತೋರಿ, ಅದಕ್ಕೆ ಸಿಕ್ಕಿದಾತನನ್ನು ಹಸನುಮಾಡುವುದು ಅನುಭಾವವು.

ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು.
ಅನುಭಾವವಿಲ್ಲದ ಸಂಗವು ಸಮರಸಕ್ಕೆ ನಿಲ್ಲದು.
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು.
ಅನುಭಾವವಿಲ್ಲದೆ ಏನೇನೂ ಅರಿಯಬಾರದು.
ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನಲುಂಟೇ?
ಕೂಡಲಸಂಗಮದೇವ ನಿಮ್ಮ ಅನುಭಾವ ಮಾತಿನ ಮಥನವೆಂದು
ನುಡಿಯಬಹುದೇ ಪ್ರಭುವೇ?

ಎಂದು ಬಸವಣ್ಣನವರು ಅನುಭಾವವನ್ನು ವಿವರಿಸಿದ್ದಾರೆ. ಅನುಭಾವಕ್ಕೆ ವೇದ್ಯವಾಗುವ ಜ್ಞಾನಭಕ್ತಿಗಳೇ ಚಿರಸ್ಥಾಯಿಯಾಗಿ ಉಳಿಯತಕ್ಕದ್ದು. ಇದನ್ನು ಸಾಧಿಸಲು ಬಸವಣ್ಣನವರು ಕಲ್ಯಾಣಕ್ಕೆ ಬಂದು ಅನುಭವಮಂಟಪವನ್ನು ಸ್ಥಾಪಿಸಿದರು.

ಬಗೆಬಗೆಯ ಹೂಗಳಿಂದ ತುಂಬಿದ ಉದ್ಯಾನವನಕ್ಕೆ ತುಂಬಿಗಳು ಮಕರಂದದಾಸೆಗೆ ಬಂದು ಕೂಡುವಂತೆ ಭಾರತದ ಎಲ್ಲ ಕಡೆಯಿಂದಲೂ ಸಿದ್ಧಸಾಧಕರೂ, ಶಕ್ತಿಮುಕ್ತರೂ ಇತ್ಯಾದಿಯಾಗಿ ಅನುಭವಮಂಟಪದಲ್ಲಿ ಬಂದುಸೇರಿದರು. ಬಳ್ಳಿಗಾವಿಯಿಂದ ಪ.ಮ ವೈರಾಗ್ಯಮೂರ್ತಿ ಜ್ಞಾನ ನಿಧಿ ಅಲ್ಲಮಪ್ರಭು ಕಲ್ಯಾಣದತ್ತ ಧಾವಿಸಿ ಶೂನ್ಯಸಿಂಹಾಸನಾರೂಢ ರಾದರು. ಸೊನ್ನಲಾಪುರದಿಂದ ಮಹಾಶಿವಯೋಗಿ ಸಿದ್ಧರಾಮ, ಉಡುತಡಿ ಯಿಂದ ಮಹಾವಿರಾಗಿಣಿ ಮಹಾದೇವಿ ಅಕ್ಕನ ಆಗಮನವಾಯಿತು. ಪ್ರಭು ದೇವರೇ ಆಚಾರ್ಯನೂ ಇತರೇಯವರು ಅಧ್ಯಾಪಕವೃಂದವೂ ಆಯಿತು. ಇಡೀ ಮಾನವಜನಾಂಗವೇ ವಿದ್ಯಾರ್ಥಿಯಾಯಿತು ಅಜ್ಞಾನಾಂಧಕಾರ ದಲ್ಲಿ ಹಾದಿ ಕಾಣದ ಜನತೆಗೆ ಶಿಕ್ಷಣಕೊಟ್ಟು ಅವರನ್ನು ಒಳ್ಳೆಯ ಹಾದಿಗೆ ತರುವ ಮಹತ್ಕಾರ್ಯವು ಇಲ್ಲಿ ಆರಂಭವಾಯಿತು. ಮಾದಾರ ಚೆನ್ನಯ್ಯ, ಡೋಹರಕಕ್ಕಯ್ಯನೂ ನೀಚ ಕುಲದವರಾಗಿದ್ದರೂ ಅವರ ಅನುಭವವು ಉನ್ನತವಾಗಿತ್ತು. ಇಲ್ಲಿನ ಗುಣವಿಶೇಷಗಳ ಮೂಲಕ ಈ ಮಂಟಪದ ಕೀರ್ತಿಯು ದೂರದೂರ ಹರಡಲು, ಪಾಂಡ್ಯ, ಚೇರ, ಚೋಳ, ಕೇರಳ, ಕುಂತಳ, ಗುರ್ಜರ, ಉತ್ಕಲ, ವಂಗ, ಕಾಶ್ಮೀರ, ನೇಪಾಳಾದಿ, ದೂರ ದೇಶಗಳಿಂದ ಇಲ್ಲಿಗೆ ಬರುತ್ತಿದ್ದರು. ಕಾಶ್ಮೀರದ ದೊರೆಯಂತೂ ಇಲ್ಲಿನ ಧಾರ್ಮಿಕ ಜೀವನಕ್ಕೆ ಮನಬಿಟ್ಟು ತನ್ನ ಅರಸೊತ್ತಿಗೆಗೆ ತಿಲಾಂ ಜಲಿ ಇತ್ತು ರಾಣಿಯ ಜೊತೆಗೂಡಿ ಕಲ್ಯಾಣದತ್ತ ಕಾಲ್ದೆಗೆದು ಅನುಭವ ಮಂಟಪದ ಸದಸ್ಯನಾದನು. ಕಟ್ಟಿಗೆಯ ಕಾಯಕವ ಕೈಗೊಂಡು ಶಿವಾ ನುಭವಾರ್ಜನೆ ಮಾಡುತ್ತ ಈ ರಾಜರಾಣಿಯರು ಮೋಳಿಗೆ ಮಾರಯ್ಯ ಮತ್ತು ಮಹದೇವಿ ಎಂಬ ಹೆಸರಿನಿಂದ ನಿಂತರು. ದಕ್ಷಿಣದಲ್ಲಿ ಸಕಳೇಶ ಮಾದರಸನೆಂಬ ದೊರೆಯು ರಾಜ್ಯ ಹಾಗೂ ಕುಟುಂಬ ತ್ಯಾಗ ಮಾಡಿ ಚನ್ನೇನ ಆಜ್ಞಾನುಸಾರವಾಗಿ ಕಲ್ಯಾಣಕ್ಕೆ ಬಂದನು. ಸೌರಾಷ್ಟ್ರದಿಂದ ಆದ ಯ್ಯನೆಂಬ ವರ್ತಕನೂ ಬ್ಬರ್ಬರದೇಶದಿಂದ ಮರುಳಶಂಕರದೇವನೂ ಆಂಧ್ರ ದಿಂದ ಮೈದುನರಾಮಯ್ಯನೂ, ಕುಂತಳದಿಂದ ಏಕಾಂತರಾಮಯ್ಯನೂ, ಹಿಪ್ಪರಿಗೆಯಿಂದ ಮಡಿವಾಳಮಾಚಯ್ಯನೂ ಇಲ್ಲಿಗೆ ಬಂದು ನೆರೆದರು. ತಿಳಿಗೊಳದ ನೀರಿಗಾಗಿ ತೃಷಾರ್ತ ಜೀವಿಗಳು ಧಾವಿಸುವಂತೆ ಶಿವಾನು ಭವಿಗಳಿದ್ದೆಡೆಗೆ ಅಧ್ಯಾತ್ಮಪ್ರೇಮಿಗಳು ಬರುವುದು ಸಹಜವಷ್ಟೇ.

ಜ್ಞಾನಮೂರ್ತಿ ತೀರ್ಥಂಕರನು ಸಮವಸರಣದಲ್ಲಿ ನಿಂತು ಭವ್ಯ ರಿಗೆ ಬೋಧಾಮೃತವನ್ನು ಪಾನ ಮಾಡಿಸುವಂತೆ ಆತ್ಮಜ್ಞಾನಿ ಅಲ್ಲಮ

ಪ್ರಭುವು ಶರಣಶರಣೆಯರಿಗೆ ಭವ್ಯ ಗದ್ದುಗಾರೂಢನಾಗಿ ಉಪದೇಶಿಸುತ್ತಿದ್ದನು. ಅನುಭವಮಂಟಪದಲ್ಲಿ ಸಾಧಕರ ಹೃದಯಕಮಲಗಳು ಜ್ಞಾನಸೂರ್ಯನ ಉದಯದಿಂದ ಬಿರಿಯುತ್ತವೆ.

ಸೂರ್ಯನುದಯ ತಾವರೆಗೆ ಜೀವಾಳ.
ಚಂದ್ರಮನುದಯ ನೈದಿಲೆಗೆ ಜೀವಾಳ.
ಕೂಪರ ಠಾವಿನಲ್ಲಿ ಕೂಟ ಜೀವಾಳವಯ್ಯ.
ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯ.
ಕೂಡಲಸಂಗನ ಶರಣರ ಬರವೆನಗೆ ಜೀವಾಳವಯ್ಯ.

ಅನುಭವ ಮಂಟಪವು ಬಗೆಬಗೆಯ ವೃತ್ತಿಯ ಬಗೆಬಗೆಯ ಜಾತಿಮತಗಳಿಗೆ ಸೇರಿದ ಆಶ್ರಯ ಸ್ಥಾನವಾಗಿತ್ತು. ಅಂಬಿಗರ ಚೌಡಯ್ಯ. ಹಡಪದ ಅಪ್ಪಣ್ಣ, ಜೇಡರ ದಾಸಿಮಯ್ಯ, ಸುಂಕದ ಬಂಕಣ್ಣ, ಅಕ್ಕಸಾಲಿಗ ಬೊಮ್ಮಣ್ಣ, ಸಿಪಾಯಿ ಮಾದಣ್ಣ, ತಳವಾರ ರಾಮದೇವ, ಮೊಚ್ಚೆಗಾರ ಮಾದರ ಚನ್ನಯ್ಯ, ಸೂಚಿಕಾರ ರಾಮಿತಂದೆ, ಮೇದರ ಕೇತಯ್ಯ ಇತ್ಯಾದಿ ಶರಣರೂ, ಸತ್ಯಕ್ಕ, ಮುಕ್ತಾಯಕ್ಕ, ರೆಮ್ಮವ್ವೆ, ಸೋಮವ್ವೆ, ಸುವರ್ಣದೇವಿ, ನೀಲಲೋಚನೆ, ಲಿಂಗಮ್ಮ, ಕಾಳವ್ವೆ, ಲಕ್ಷ್ಮಮ್ಮ, ಗುಡ್ಡವ್ವೆ, ರೇಚವ್ವೆ, ಗೊಗ್ಗವ್ವೆ, ರಾಯಮ್ಮ, ನೀಲಾಂಬಿಕೆ, ಗಂಗಮ್ಮ, ಮಸಣಮ್ಮ, ಗಂಗಾಂಬಿಕೆ, ಕಾಯಮ್ಮ, ವೀರಮ್ಮ, ರೇಕಮ್ಮ, ಬೊಂತಾದೇವಿ ಇತ್ಯಾದಿ ಶರಣೆಯರೂ ಇದ್ದರು. ಶರಣಶರಣೆಯರು ಮೂರುನೂರು ಅರವತ್ತಕ್ಕಿಂತ ಹೆಚ್ಚಾಗಿದ್ದರು. ಶರಣಶರಣೆಯರು ತಮ್ಮ ತಮ್ಮ ವಿಚಾರಗಳನ್ನು ಮಂಡಿಸುತ್ತ ಬರುತ್ತಿದ್ದರು. ಅವುಗಳು ತೀಕ್ಷ್ಣ ಚರ್ಚೆಗೆ ಒಳಗಾಗುತ್ತಲೆ, ತಪ್ಪೋ ಒಪ್ಪೋ ವಿಮರ್ಶೆಯಾಗಿ ಸರಿಯಾದದ್ದು ಸ್ವೀಕಾರವಾಗುತ್ತಿತ್ತು. ಮೊದಮೊದಲು ವಚನಕಾರರು ತಮ್ಮ ತಮ್ಮ ಕೃತಿಗಳನ್ನು ತಂದು ಬಸವಣ್ಣನವರಿಗೆ ಕೊಡುತ್ತಿದ್ದರು. ಇವರೂ, ಚೆನ್ನಬಸವಣ್ಣನವರೂ ಅವುಗಳನ್ನು ಓದಿ ನೋಡಿ ಯೋಗ್ಯವಾದವುಗಳನ್ನು ಮಂಟಪದ ಮುಂದೆ ತಂದಿಡುತ್ತಿದ್ದರು. ಅವುಗಳನ್ನು ಚನ್ನಬಸವಣ್ಣನವರು ವಾಕ್ಯಾರ್ಥ ಮಾಡಿ ವಿವರಿಸಿದ ಮೇಲೆ ಅವು ಚರ್ಚೆಯಾಗಲ್ಪಡುತ್ತಿತ್ತು. ಚರ್ಚೆಯಾದ ಮೇಲೆ ಸರ್ವಾನುಮ

ಹಡೆದವುಗಳನ್ನು ವಚನಭಾಂಡಾರಿ ಶಾಂತರಸರು ಬರೆದಿಡುತ್ತಿದ್ದರು. ಯಾವ ಭೇದವೂ ಕೂಡ ಪ್ರವೇಶಿಸದೆ ಎಲ್ಲರ ವಚನಗಳೂ ಈ ಪ್ರಾಯೋಗಿಕ ಕ್ಷೇತ್ರದಿಂದ ಬಿಡುಗಡೆಯಾಗಿಯೇ ಬರಬೇಕಾಗಿದ್ದವು. ಬರೀ ಆಧ್ಯಾತ್ಮಿಕ ಚರ್ಚೆಯಲ್ಲಿ ಅದು ಅಂತ್ಯವಾಗುತ್ತಿರಲಿಲ್ಲ; ಅದು ಮುಗಿದ ನಂತರ ನಿಮಗೆ ನೀವೇ, ನಮಗೆ ನಾವೇ ಎಂಬ ಉದಾಸೀನತೆ ಇರಲಿಲ್ಲ; ಆದರೆ ನೀವೇ ನಾವು ನಾವೇ ನೀವು ಎಂಬ ಜೀವನವು ನಡೆಯುತ್ತಿತ್ತು. ನವೀನ ನಾಗರೀಕತೆಯ ಪ್ರಯಾಣ ಸೌಕರ್ಯಗಳಾವುವೂ, ವಾರ್ತಾವಾಹನಗಳು ಯಾವುವೂ ಇಲ್ಲದ ಕಾಲದಲ್ಲಿ ಅನುಭವ ಮಂಟಪದ ಯಶಸ್ಸು ನೂರಾರು ಮೈಲಿಯ ವರೆಗೆ ಹರಡಿ ಅಲ್ಲಿಂದ ಇಲ್ಲಿಗೆ ಜನರು ಬರಬೇಕಾದರೆ ಈ ಹೆಚ್ಚಳವಲ್ಲದೆ ಮತ್ತಿನ್ನಾವುದಿದೆ? ಇಲ್ಲಿನವರು ಬರೀ ಒಣ ವೇದಾಂತಿಗಳಾಗಿರಲಿಲ್ಲ. ತಮ್ಮಷ್ಟಕ್ಕೆ ತಾವೇ ಪೂಜೆ ಪುರಸ್ಕಾರಗಳನ್ನು ಸಾಗಿಸಿಕೊಂಡು ಹೋಗುವ ಕರ್ಮಠರಾಗಿರಲಿಲ್ಲ; ಪ್ರಪಂಚದಲ್ಲಿ ಪಾರಮಾರ್ಥವನ್ನು ಸುಗಮವಾಗಿ ಸಹಕಾರದಿಂದ ನಡೆಯಿಸಿಕೊಂಡು ಹೊಗುವ ಜಾಣರೇ ಈ ಶರಣಶರಣೆಯರೆಂದರೆ ತಪ್ಪೇನಾಗಲಾರದು.

ಇಲ್ಲಿನ ಜೀವನವು ಒಂದೇ ಕುಟುಂಬಜೀವನವಾಗಿತ್ತು. ಇದರಲ್ಲಿ ಜಾತಿಭೇದವಾಗಲೀ, ಸ್ವಾಮಿಭೃತ್ಯ ಸಂಬಂಧವಾಗಲೀ, ಗುರುಶಿಷ್ಯ ಭೇದವಾಗಲೀ, ಬಡವ ಬಲ್ಲಿದನೆಂಬ ಉಚ್ಚ ನೀಚ ಭಾವನೆಯಾಗಲೀ, ಲಿಂಗಭೇದವಾಗಲೀ ಇದ್ದಿರಲಿಲ್ಲ. ಎಲ್ಲರೂ ಕಾಯಕವಮಾಡುತ್ತಿದ್ದರು ಅನುವು ಆಪತ್ತು ಆಡರಿದಾಗ ಪರಸ್ಪರ ನೆರವಾಗುತ್ತಿದ್ದರು. ಪಾದೋದಕ ಪ್ರಸಾದ ವಿವಾಹಾದಿಗಳ ಮೂಲಕ ಪ್ರೇಮವನ್ನು ಹೆಚ್ಚುಹೆಚ್ಚಿಗೆ ಬಂಧುರಪಡಿಸಿಕೊಳ್ಳುತ್ತಿದ್ದರು.

ಮತ್ತೊಂದ ಕಾಣದಂತೆ ಮತ್ತೊಂದ ಕೇಳದಂತೆ
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ
ಇರಿಸಯ್ಯಾ ಕೂಡಲ ಸಂಗಮ ದೇವ.

ಎಂಬಂತೆ ತಮ್ಮ ತಮ್ಮ ಜೀವನವನ್ನು ಶರಣರ ಸೇವೆಗಾಗಿಯೇ ಮೀಸಲಾಗಿಟ್ಟು ಆಚರಿಸುತ್ತಲಿರುವುದರಿಂದ ಯಾವ ತೊಂದರೆ ತೊಡಕು ಬಾರದು ನೆರೆ ನಂಬಿದ ಬಾಳು ಇಲ್ಲಿನ ಬಾಳು. ನೊಂದ ಹೃದಯವನ್ನು

ಸಂತೃಪ್ತಿಗೊಳಿಸಿ, ಜೀವ ಮನಸ್ಸನ್ನು ಉಲ್ಲಾಸಗೊಳಿಸಿ, ಜನಪದ ಹೃದಯದಲ್ಲಿ ವಿಚಾರ ಕ್ರಾಂತಿಯನ್ನೆಬ್ಬಿಸಿ, ಜನತೆಯಲ್ಲಿ ನವ ಚೈತನ್ಯವನ್ನು ತುಂಬಿಸಿ, ಸ್ವಶಕ್ತಿಯ ಅರಿವನ್ನು ಬೆಳಗಿಸಿತು ಈ ಶಾಲೆ. ಆರ್ಥಿಕ, ಔದ್ಯೋಗಿಕ, ನೈತಿಕ ಮತ್ತು ಸಾಮಾಜಿಕ ಜೀವನದಲ್ಲಿಯೇ ಕ್ರಾಂತಿಯು ಬೆಳಗೊಂದು ಬೆಳಗಿತು. 'ಕಿರಿದರೊಳು ಹಿರಿದುಮರ್ಥಮಂ ತುಂಬಿಕೊಂಡಿರ್ದ' ವಚನಗಳು ಸೂರೆಯಾಗುತ್ತಿದ್ದವು. ಸರ್ವ ಸ್ವಾತಂತ್ರ್ಯವು ಸರ್ವರಿಗೂ ಸಿಕ್ಕಿದ್ದಿತು. ಸಾಧಕನು ತನ್ನ ಅಂತರಾತ್ಮನನ್ನು ಶುದ್ಧಿಗೊಳಿಸಿಕೊಂಡು ಧರ್ಮದ ಬೆಳಕು ಬಿತ್ತರಿಸಲು ಬೇಕಾದ ಭೂಮಿಕೆಯನ್ನು ಸಿದ್ಧಗೊಳಿಸಿಕೊಳ್ಳುವ ಹಿರಿಯ ಅಗತ್ಯವನ್ನು ಇಲ್ಲಿನ ಜೀವನವು ಹೊರಸೂಸಿತು.

ಸಾರ ಸಜ್ಜನ ಸಂಗವ ಮಾಡುವುದು
ದೂರ ದುರ್ಜನರ ಸಂಗ ಬೇಡವಯ್ಯಾ
ಆವ ಹಾವಾದಡೇನು, ವಿಷ ಒಂದೆ
ಅಂತವರ ಸಂಗ ಬೇಡವಯ್ಯ.

ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟ ವಿಷವು. ಇಲ್ಲಿನ ಜೀವನವು ಇಡೀ ವೀರಶೈವ ಜಗತ್ತಿಗೆ ನೀಡಿದ ಅಸದೃಶ ಕಾಣಿಕೆಯು ನಿರಂಜನ ತತ್ವವು, ಅರ್ಥಾತ್ ವೀರಶೈವದ ವೈಶಿಷ್ಟ್ಯ ವಿಶಿಷ್ಟ ಮಾರ್ಗವು. ಈ ತತ್ವವನ್ನು ಅವಿರಳವಾಗಿ ತಿಳಿಸುವುದು ಶೂನ್ಯ ಸಿಂಹಾಸನವು.

ಅಷ್ಟದಳ ಕಮಲದ ಹೂಗಲ್ಲಿನಿಂದಿರುವ ಶೂನ್ಯ ಸಿಂಹಾಸನಕೆ ಧವಳಾಲಯವೆತ್ತಿತ್ತು. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವಂ ತೆಗೆದು ನೋಡುವರೆ ವಿಪರೀತ. ಏಕೋಭಾವವೆಂಬುವೊಂದು ಕಂಬ, ಅದಕ್ಕೆ ಅನೇಕ ಚಿತ್ರಂಗಳಡಗಿನ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪವಳ ಹಾರದ ಪಂಚರಮುಂ ಇಟ್ಟು, ಪಂಚ ಮೌಕ್ತಿಕದ ಮಾಲೆಯ ಸಿಳಿಬಿಟ್ಟು, ಮಲಕು ಮಲಕಿನ ನಡುವೆ ಕಟ್ಟಿದುವು ನವರತ್ನದ ಗೊಂಡೆಯಂಗಳು ಕಾಳಿಕೆಯು ಕಪ್ಪಡವದಕೆ ಮೇಲು ಹೊದಿಕೆ ಉಲುಹಿನ ರತ್ನ ಶ್ರೀಯ ಬಳಸುಮೋರಣವ ಕಟ್ಟಿ, ದಶವಾಯುಗಳನೊಂದು ಮಾಡಿ, ಲಿಂ

ವಾಯುವ ಸಂತೈಸಿ ಆಲವಟ್ಟವಂ ಮಾಡಿ, ಲಂಪಿಸಿದ ಮುಂದಾಸಿ ಮಲಗಂ ಮಾಡಿ, ಹರುಷವನೀವ ವಸಂತನ ಚಾಕವಟ್ಟಿಗೆಯು ಆಸನವಂ ಮಾಡಿ, ನವನಾಳ ಸುನಾಳದೊಳು ಮೊರೆವ ಶಬ್ದಮಂ ಶುಕ ಪ್ರಮರಾಮೋದವಮಂ ಮಾಡಿ, ಪರಮ ಶಾಂತಿಯೆಂಬ ಶೈತ್ಯಾಕಾರ ಸೋಂಕಿನ ಚೂತ ಫಲಗಳಂ ಹಾಸಿ, ಉತ್ತರ ದ್ವಾರವೆಂಬ ನುಸುಳು ಗುಡಿಯಂ ರಚಿಸಿ, ಪೂರ್ವ ಯೋಗಂಗಳೆಂಬ ಸೋಪಾನವಂ ಮಾಡಿ, ಪಶ್ಚಿಮದ್ವಾರವೆಂಬ ನಿಜದ್ವಾರವಂ ಮಾಡಿ, ಸಪ್ತ ವ್ಯಸನ ಪಂಚೇಂದ್ರಿಯಂಗಳೆಂಬ ಗವಾಕ್ಷಿಯನಿಕ್ಕಿ, ಆಶೆಯಾಮಿಷವಂ ಕೆಡಿಸಿ, ಊರ್ಧ್ವ ಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ, ಚಂದ್ರ ಸೂರ್ಯರೆಂಬ ದೀಪಂಗಳ ಬೆಳಗಿ, ಶಿವೋಹವೆಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶವೆಂಬ ಹೊನ್ನ ಕಳಶವ ಸಿಂಗಾರವಂ ಮಾಡಿ, ನಿಃಶೂನ್ಯ ನಿರಾಳವೆಂಬ ಶೂನ್ಯ ಸಿಂಹಾಸನವಂ ಮಾಡಿದ ಬಸವಪ್ರಿಯ ಕೂಡಲ ಚೆನ್ನಸಂಗನಲ್ಲಿ ಎನ್ನ ಶರಣ ಗುರು ಸಂಗನಬಸವಣ್ಣಾ.

ನೀಲಾಂಬಿಕೆಯ ನುಡಿಯು ಶೂನ್ಯಸಿಂಹಾಸನದ ವಿಚಾರದಲ್ಲಿ ಈ ಬಗೆಯು ಪೀಠದ ಅಧಿಪತಿಯ ಮಹತ್ತನ್ನು ಎಂತು ತಾನೇ ಹೇಳಲು ಸಾಧ್ಯವು?

ಜನತೆಯ ಮೇಲೆ ಅನುಭವ ಮಂಟಪವು ಅಗಾಧ ಪರಿಣಾಮವನ್ನುಂಟು ಮಾಡಿದೆ ಎಂದರೆ ತಪ್ಪೇನಾಗಲಾರದು. ಪ್ರತಿಯೊಬ್ಬನೂ ಜ್ಞಾನದಿಂದ ಶುದ್ಧಿಯಾಗಬೇಕು. ನುಡಿಯಂತೆ ನಡೆ ಇದ್ದರೆ ಮನುಷ್ಯನಿಗೆ ಪುರುಷಾರ್ಥವು ಕಟ್ಟಿಟ್ಟ ಗಂಟೇ ಸರಿಯು. ಪ್ರತಿಯೊಂದು ಕ್ರಿಯೆಗೂ ಶಿಸ್ತಿರಬೇಕು. ಶಿಸ್ತು ಇಲ್ಲದ ಎಂತಹ ಕಸ್ತಿನ ಕೆಲಸವೂ ಕೂಡ ಕಸವೇ ಆಗುವದರಲ್ಲಿ ಯಾವ ಸಂಶಯವೂ ಇಲ್ಲವು ಪ್ರತಿಯೊಬ್ಬನ ಜ್ಞಾನವೂ ಕ್ರಿಯಾತ್ಮಕವಾಗಿರಬೇಕು. ವಾಕ್ ಸ್ವಾತಂತ್ರ್ಯ ಎಂದು ಗೋಳಿಡುತ್ತಿರುವವರು ಈ ಅನುಭವ ಮಂಟಪದತ್ತ ದೃಷ್ಟಿಯನ್ನು ಬೀರಲಿ. ಸ್ತ್ರೀಪ್ರಗತಿಯತ್ತ ಕೈ ಎತ್ತಿ ನಿಂತಿರುವವರಿಗೆ ಇದು ಕೈಗೋಲಿ ಸರಿಯು. ವಚನಕಾರರ ಕೃಪಾದೃಷ್ಟಿಯು ಮಾನವ ಜನಾಂಗದ ಅರ್ಧ ಶರೀರವಾದ ಸ್ತ್ರೀಸಮಾಜದತ್ತ ಬೀಳದೆ ಇರಲಿಲ್ಲ. ವೇದಾಗಮಗಳ ಕಾಲದಲ್ಲಿ ಹೆಂಗಸರಿಗೆ ತಕ್ಕಮಟ್ಟಿಗೆ ಸ್ಥಾನಮಾನವಿದ್ದಿತಾದರೂ ಕ್ರಮಕ್ರಮೇಣ

ಅದು ಅಳಿಯುತ್ತಬಂದಿತು. ಹೆಂಗಸು ಗಂಡಸಿನ ಉಪಭೋಗ ವಸ್ತು
ವಾದಳು. ಆದರೆ ಪುನಃ ಅವರ ಅಸ್ತಂಗತ ಸ್ವಾತಂತ್ರ್ಯಸೂರ್ಯ
ಉದಯವಾದನು. ಸ್ತ್ರೀಯು ಕೇವಲ ಮಾಯೆಯು. ಆಕೆಯನ್ನು ನಂಬ
ಬಾರದು, ಎಂಬ ತಿರಸ್ಕೃತ ಮಾಯೆಯನ್ನು ಖಂಡಿಸಿ 'ಹೆಣ್ಣು ಮಾಯೆ
ಯಲ್ಲ, ಮನದ ಮುಂದಣ ಆಸೆಯೇ ಮಾಯೆ' ಎಂದೂ 'ಹೆಣ್ಣು
ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿ
ಕಾರ್ಜುನ' ಎಂಬ ದಿವ್ಯ ಸಂದೇಶದಿಂದ ಸಮಾಜವನ್ನು ಈ ಮಂಟಪ
ಬಡಿದೆಬ್ಬಿಸಿತು. ಗಂಡಸಿಗಿರುವ ಸಕಲ ಧಾರ್ಮಿಕ ಸಾಮಾಜಿಕ ಹಕ್ಕು
ಗಳನ್ನು ಎಲ್ಲ ಹೆಂಗಸರಿಗೂ ದೊರಕಿಸಿಕೊಟ್ಟಿತು. ಮಹಾದೇವಿ ಅಕ್ಕನ
ಅನುಭವ ಮಂಟಪದಲ್ಲಿ ಅಲ್ಲಮ ಪ್ರಭುವಿನ ಸಂಗಡ ಅತಿಗಹನ
ವಿಚಾರವನ್ನು ಮಾಡಿದ್ದೇ ಇದಕ್ಕೆ ಸಾಕ್ಷಿಯಾಗಿದೆ. ಮಹಾದೇವಿಯಕ್ಕನ
ದೃಢತೆ, ವೀರ ವೈರಾಗ್ಯ, ಜ್ಞಾನದ ಪರಿಪಕ್ವತೆ, ಭಕ್ತಿಯ ಆತ್ಮ
ಯನ್ನು ಆಕೆಯ ವಚನಗಳ ಹಿರಿಮೆಯನ್ನು

ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ಮಹಾದೇವಿಯಕ್ಕನ ಒಂದು ವಚನ

ಎಂದು ಕೊಂಡಾಡಿದರು. ಬಸವಣ್ಣನವರು ಕೂಡಲಸಂಗಮಕ್ಕೆ ಹೊ
ಟಿರುವ ವಿಷಯವನ್ನು ತಮ್ಮ ಧರ್ಮಪತ್ನಿ ನೀಲಾಂಬಿಕೆಗೆ ಹೇಳಕಳು
ಸಿದಾಗ ಅದನ್ನು ಆಕೆಯು ಖಂಡಿಸಿ ತಮ್ಮ ಇಷ್ಟಲಿಂಗದಲ್ಲಿಯೇ
ವಾದದ್ದನ್ನು ನೋಡಿದರೆ ಸ್ತ್ರೀಸ್ಥಾನ ಮರ್ಯಾದೆಯು ತಿಳಿಯದೆ ಇರ
ಒಮ್ಮೆ ಶಿಲೆಯಾಗಿದ್ದ ಸ್ತ್ರೀ ಸಮಾಜವು ಅನುಭವ ಮಂಟಪದ ಪರಿ
ತನದಿಂದ ಪುನಃ ಅಮರ ಸ್ತ್ರೀ ರೂಪಾಯಿತೆಂದರೆ ತಪ್ಪೇನಾಗಲಾರ

ಈ ಮಂಟಪದ ಅನುಭವವು ಸರ್ವಪಕ್ಷೀಯವಾಗಿದೆ. ಸ್ವಸಂಶೋ
ದಿಂದ ಹೃದಯ ಪರಿವರ್ತನೆಯಾಗಲಿಕ್ಕೆ ಅನುಕೂಲ ವಾತಾವರಣ
ಸಿದ್ಧಗೊಳಿಸುವ ಕ್ರಿಯೆಯನ್ನೇ ಇದು ಮಾಡಿತು. ಇಲ್ಲಿ ವ್ಯಕ್ತಿ
ತನ್ನ ತಪ್ಪನ್ನು ತಾನೇ ತಿದ್ದಿಕೊಳ್ಳುವಂತೆ ವಾತಾವರಣವೊಂದು ಮಾಡಿ

ನವೀನ ಶಿಕ್ಷಣ- *Basic Education* ಸಿದ್ಧಾಂತದ ಶ್ರೇಷ್ಠ ತತ್ವವು. ವ್ಯಕ್ತಿ ವಿಕಾಸ ಮಾರ್ಗವು ಇದಾಗಿಲ್ಲವೇ ? ಯೋಗ್ಯತೆಯುಳ್ಳವರ ಸಂಗಡ ಸಮರಸವಾಗಿ ಸಾಗುವುದರಿಂದಲೇ ಈ ಗತಿಪಥವು ದೊರಕುತ್ತದೆ. ಏಕತ್ವದಲ್ಲಿ ಅನೇಕತ್ವವನ್ನೂ, ಅನೇಕತ್ವದಲ್ಲಿ ಏಕತ್ವವನ್ನೂ ಅನುಭವಿಸುವ ಸಂದರ್ಭವು ಇದರಲ್ಲಿ ಸಿಗುತ್ತದೆ. ಇತರರ ಬಗ್ಗೆ ನಾವು ಮಿಗಿಮಿಗಿಲು ತಿಳಿದುಕೊಂಡಹಾಗೆಲ್ಲ ಅವರಬಗ್ಗೆ ನಮಗೆ ಮಿಗಿಮಿಗಿಲು ಪ್ರೇಮವು ಜನಿಸುತ್ತದೆ ಎಂಬುದನ್ನು ಇದು ಹೇಳುತ್ತದೆ. ವಿಶ್ವವೆಂಬ ವಿದ್ಯಾಲಯದಲ್ಲಿ ಪ್ರತಿಯೊಬ್ಬನೂ ವಿದ್ಯಾರ್ಥಿಯು, ಪ್ರಕೃತಿಯೇ ಪುಸ್ತಕವು; ಅವರವರ ಯತ್ನಕ್ಕನುಸಾರವಾಗಿ ಫಲವು ದೊರಕುತ್ತದೆ.

ಮನುಜನು ಕೀಳಾಗುವುದು ಆತನ ಜನ್ಮದಿಂದಲ್ಲ; ಆತನ ಗುಣದಿಂದ ಮಾತ್ರ. ಜಾತಿ, ಕುಲಗಳ ಮೇಲ್ಮೆ ಏತರಿಂದ ?

ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಕುಲವೇನೋ ಅವಂದಿರ ಕುಲವೇನೋ ?
ಸಕಲ ಜೀವಾಳಿಗಳಿಗೆ ಲೇಸನೆ ಬಯಸುವ ನಮ್ಮ ಕೂಡಲ
ಸಂಗನ ಶರಣರೇ ಕುಲಜರು.

ಪರಮಾತ್ಮನ ಕೃಪಾಛತ್ರದಲ್ಲಿ ಎಲ್ಲ ಜಾತಿಯೂ ಒಂದೇ. ಲಿಂಗಭಕ್ತರಲ್ಲಿ ಭೇದವೆಂತಹುದು ? ವ್ಯತ್ಯಾಸವೇ ಸೊನ್ನೆಯು.

ಆವ ಕುಲವಾದರೇನು ? ಶಿವಲಿಂಗವಿದ್ದವನೇ ಕುಲಜನು.
ಕುಲವನರಸುವರೇ ಶರಣರಲ್ಲಿ ಜಾತಿಸಂಕರವಾದಬಳಿಕ?
'ಶಿವೇಜಾತ ಕುಲೇ ಧರ್ಮಃ । ಪೂರ್ವ ಜನ್ಮ ವಿವರ್ಜಿತಃ ।
ಉಮಾ ಮಾತಾ ಪಿತಾ ರುದ್ರ ಈಶ್ವರಃ ಕುಲಮೇವಚ ॥
ಎಂದುದಾಗಿ ಒಕ್ಕುದ ಕೊಂಬೆನವರಲ್ಲಿ, ಕೂಸ ಕೊಡುವೆ.
ಕೂಡಲ ಸಂಗಮ ದೇವ, ನಂಬುವೆ ನಿಮ್ಮ ಶರಣರನು.

ಈ ಉದಾತ್ತ ವಿಚಾರಗಳನ್ನು ಕಾರ್ಯರೂಪಕ್ಕೆ ತಂದು, ಇಂದಿನ ಸಮಾಜ ಸುಧಾರಕರಿಗೆ ಮೇಲು ಪಂಕ್ತಿಯನ್ನು ಅನುಭವ ಮಂಟಪವು ಹಾಕಿದೆ.

ಅನೇಕ ದೇವೋಪಾಸನೆಯನ್ನು ಖಂಡಿಸಿ ಏಕ ದೇವೋಪಾಸನೆಯನ್ನು ಸ್ಥಾಪಿಸಿ, ದೇವರು ಒಬ್ಬನೇ ಎಂಬುದನ್ನು ಅನುಭವ ಮಂಟಪವು ಸಾರಿತು. ಭಾಷೆಗೆ ಹೊಸಕಳೆಯೊಂದನ್ನು ಕೊಟ್ಟು ತೇಜಸ್ವಿಯಾಗಿರುವಂತೆ ಮಾಡಿತು. ಭಾಷೆಯು ಜನಜೀವನದಲ್ಲಿ ಹಾಸು ಹೊಕ್ಕಿರುವಂತೆ ಮಾಡಿತು. ತನ್ನದೇ ಆದ ಹಾದಿಯಲ್ಲಿ ಕನ್ನಡವು ನಡೆಯುವಂತಾಯಿತು. ಪ್ರತಿಯೊಬ್ಬನೂ ಸ್ನಾನಮಾಡಿ ತನ್ನ ಕೊಳೆಯನ್ನು ಕಳೆದುಕೊಳ್ಳುವ ಜಲನಿಧಿಯಾಗಿ ಇದು ಪರಿಣಮಿಸಿ ಅನುಭವವೇ ಮನುಜನನ್ನು ಶುದ್ಧಿಮಾಡುತ್ತದೆ ಎಂಬುದನ್ನು ಇದು ಪ್ರುತಪಡಿಸಿತು. ಸನ್ಯಾಸಿಯಂತೆ ಸಂಸಾರಿಗೂ ಮುಕ್ತಿಯುಂಟು ಎಂಬುದನ್ನು ಇದು ಘಂಟಾಘೋಷವಾಗಿ ಸಾರಿತು. ಷಟ್ಸ್ಥಲ ಸಿದ್ಧಾಂತದ ಮೂಲಕ ಇದು ಕರ್ಮವಾದದ ಬೇರುಗಳನ್ನು ಸಡಲಿಸಿತು. ಗುರು ಕೃತ ಲಿಂಗದ ಪೂಜೆಯ ಮೂಲಕ ಪ್ರತಿಯೊಬ್ಬರಿಗೂ ಒಂದೇ ಒಂದು ಜನ್ಮದಲ್ಲಿ ಮೋಕ್ಷವು ಸಿಗುತ್ತದೆ ಎಂಬುದನ್ನು ಪ್ರಕಟಿಸಿತು. ಕರ್ಮಗಳಲ್ಲಿ ಜನ್ಮವನ್ನು ಕೊಡುವ ಬೀಜಶಕ್ತಿಯನ್ನು ನಾಶಪಡಿಸಿ, ಅವುಗಳೆಲ್ಲವನ್ನೂ ಪ್ರಸಾದ ರೂಪವನ್ನು ಪ್ರಕಾಶಿಸುವಂತೆ ಮಾಡುವುದೇ ಷಟ್ಸ್ಥಲ ಸಿದ್ಧಾಂತವು. ಸಿಕ್ಕಿದುದೆಲ್ಲಕ್ಕೂ ಕೈಲಾಸವನ್ನೇ ಕುರಿತು ಹೇಳುವವರಿಗೆ ಅನುಭವ ಮಂಟಪವು

ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ ಕೇಳಿರಯ್ಯ
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ.

ಅಲ್ಲಿರುವ ಮುನಿಗಳೆಲ್ಲರೂ ಜೀವಗಳ್ಳರು.
ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ.

ಇವರಾಡಂಬರವೇತಕಯ್ಯ? ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ, ಲಿಂಗಾಂಗ ಸಮರಸವ ತಿಳಿದು ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ

'ಕಾಯಕವೇ ಕೈಲಾಸ' ಎಂದು ಹೇಳಿ ಜನರಿಗೆ ವಿವೇಕವನ್ನು ಹೇಳಿತು. ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡಿತು. ಕಾಯಕದಲ್ಲಿ ಮೇಲುಕೀಳುಗಳೆ

ಜೋಡು ಹೊಲಿಯುವ ಕಾಯಕವು ರಾಜಸೂತ್ರವನ್ನು ನಡೆಯಿಸುವ ಸಚಿವತನದಷ್ಟೇ ಮರ್ಯಾದೆಯನ್ನು ಪಡೆದಿರುವುದರಿಂದ ಯಾವ ಕಾಯಕವನ್ನೂ ಕೂಡ ಕೀಳೆಂದೆಣಿಸಲು ಇದು ಅವಕಾಶವನ್ನು ಕೊಡಲಿಲ್ಲ. ಮನುಸ್ಮೃತಿ ಮೇಲುಕೀಳನ್ನು ಕಾಯಕದಿಂದ ಅಳೆಯುವುದನ್ನು ಅಳಿಸಿತು. ಸರ್ವರೂ ಸಕಲ ಕಾಯಕಗಳನ್ನಂಗೀಕರಿಸುವಂತೆ ಮಾಡಿ, ಶ್ರಮಗೌರವದ ಬೆಲೆಯನ್ನು ತಿಳಿಸಿತು. ತಾವು ತಾವೇ ಸ್ವತಃ ಒಂದೊಂದು ಕಾಯಕವನ್ನು ಕೈಕೊಂಡು ದೃಢವಿಶ್ವಾಸಗಳನ್ನು ಚಿಗುರಿಸಿಕೊಂಡು ಪರಸ್ಪರ ಪ್ರೇಮಮಯ ಜೀವನವನ್ನು ಜನವು ಬಳಕೆಗೆ ತರುವಂತೆ ಮಾಡಿತು. ಜನಸೇವೆಯೇ ಮಾನವ ದೃಷ್ಟಿಯಿಂದ ಪ್ರತಿಯೊಂದು ಉದ್ಯೋಗವನ್ನು ಮಾಡುವಂತೆ ಮಾಡಿತು. ಇದು ಭಾರತದ ಔದ್ಯೋಗಿಕ ಇತಿಹಾಸದಲ್ಲಿಯೇ ಮಹಾ ಕ್ರಾಂತಿಯನ್ನುಂಟುಮಾಡಿ, ನಾಡಿನ ಆರ್ಥಿಕ ಶಾಸ್ತ್ರವನ್ನೇ ಮತ್ತೊಂದು ತಳಹದಿಯಮೇಲೆ ರಚಿಸಲ್ಪಟ್ಟಿತು. ಭಾವಿಕತನ, ಮಡಿಮೈಲಿಗೆಗಳ ಕಲ್ಪನೆ, ಪಂಚ ಸೂತಕಾದಿ ದೋಷಗಳಿಂದ ಅವ್ಯವಹಾರಿಕವಾಗಿ ಸಮಾಜವು ಬಂಧಿಸಿರುವುದು. ಅನುಭವ ಮಂಟಪದ ಶರಣರ ದೃಷ್ಟಿಗೆ ಇದು ಬೀಳದೆ ಇರಲಿಲ್ಲ. ಒಟ್ಟಿನಲ್ಲಿ ಅಧ್ಯಾತ್ಮಿಕ ಸಾಧನದ ಮೂಲಕ ಇಡೀ ಸಮಾಜವನ್ನೇ ಪರಿಷ್ಕರಿಸಲು ಟೊಂಕಕಟ್ಟಿ ನಿಂತ ಪ್ರಚೋದವ್ಯಕ್ತಿಗಳ ವಿಶ್ವವಿದ್ಯಾನಿಲಯವು ಅನುಭವಮಂಟಪವೆಂದರೆ ತಪ್ಪೇನಾಗಲಾರದು. ಜಗತ್ತಿನ ಕಲ್ಯಾಣಕ್ಕೆ ಅಗತ್ಯವಾದ ಬೆಳಕನ್ನು ನೀಡುವ ಸೌಭಾಗ್ಯವನ್ನು ಅನುಭವಮಂಟಪದ ಶಿವಾನುಭಾವಿಗಳು ಕರ್ನಾಟಕಕ್ಕೆ ಒಂದಲ್ಲ ಒಂದು ಕಾಲದಲ್ಲಿ ಒದಗಿಸಲು ಯತ್ನಿಸಿದರು. ಇದರ ಉಪಯೋಗವನ್ನು ಹರಿಹರ, ರಾಘವಾಂಕ, ಚಾಮರಸ, ವಿರೂಪಾಕ್ಷಪಂಡಿತ, ನಿಜಗುಣ ಶಿವಯೋಗಿ, ನಿಜಗುಣಾದಿ ಕವಿಪುಂಗವರು ಪಡೆದರು.

ರುಚಿರ ಮಾಣಿಕ್ಯ ಪ್ರಭಾಮಯ
ನಿಚಿತವಾಗಿರ್ದಚಲ ಕಾಂಚನ
ರಚಿತಘನಸಿಂಹಾಸನವನೈತಂದು ತಾನೇರಿ
ಶುಚಿಯನೂನ ಪ್ರಭುವಿರಲು ತನು
ರುಚಿ ವಿಶದದಿಂದಾವರಿಸಿ ದಿಗು
ನಿಚಯದೊಳು ಥಳಥಳಿಸಿ ಬೆಳಗಿದನೇನ ವರ್ಣಿಸುವೆ

ಎಂಬ ಪದ್ಯದಲ್ಲಿ ಅಲ್ಲಮಪ್ರಭು ಕಲ್ಯಾಣಕ್ಕೆ ಬಂದು ಬಸವನ ಭಕ್ತಿಯ ಸೇವೆಯಾದ ಕಾಂಚನ ಸಿಂಹಾಸನವನ್ನು ಅಲಂಕರಿಸಿ ಮೆರೆದನೆಂದು ಭೀಮಕವಿಯು ಹೇಳಿರುವುದು ಸಾಕಾಗಿದೆ. ಅನಂತರ ಸರ್ವಜ್ಞನು ವಚನಕಾರರ ನುಡಿಗಳನ್ನು ಇದ್ದಂತೆಯೇ ಉಪಯೋಗಿಸಿಕೊಂಡಿದ್ದಾನೆ. ಸತ್ಯದ ಕೇಂದ್ರವನ್ನು ಕಂಡು ಭಾವ ಭಾಷೆಯಲ್ಲಿ ವಿನೂತನ ರಚನೆ ಮಾಡಿ, ತಾಯಿಯ ಶ್ರೀರೂಪಕ್ಕೆ ನವೀನ ಉಡಿಗೆ ತೊಡಿಗೆಯನ್ನು ಶಿವಶರಣರು ತೊಡಿಸುವಂತಾಯಿತು. ಅನುಭವ ಮಂಟಪವು ದಿಗ್ದರ್ಶಿಸಿದ ಧರ್ಮವು ಎಲ್ಲರಲ್ಲಿಯೂ ಬೇರೂರಲಿ.

ದಯೆಯಿಲ್ಲದ ಧರ್ಮವಾವುದಯ್ಯಾ ?
ದಯೆಯೇ ಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ದರ್ಮದ ಮೂಲವಯ್ಯಾ.

---

## ಗುಣತ್ರಯಗಳು

(ಲೇ: — ಶ್ರೀ. ಸಿ. ನಾ. ಮಹಾಂತಣ್ಣವರ, ಹೂನೂರ–ತಾ. ಜಮಖಂಡಿ)

ಅಟ್ಟಹಾಸದಿಂದ ಮೆರೆಯುವ ಈ ಸೃಷ್ಟಿಯ ಗುಣಸ್ವಭಾವಗಳನ್ನು ನಿಡುಗಣ್ಣಿನಿಂದ ನಿಟ್ಟಿಸಲು, ಪೃಥ್ವಿಯಲ್ಲಿ ನಾನಾವರ್ಣದ ಮಣ್ಣುಕಲ್ಲುಗಳೂ, ಅವುಗಳ ಪರಿಪರಿಯ ಸತ್ವಗಳೂ, ರುಚಿಗಳೂ, ತರತರದ ಆಕಾರಗಳೂ, ಅಪ್ರಮಾಣವಾದ ತೂಕ ಮಾಪುಗಳೂ ಮಾನವನ ಬುದ್ಧಿಗೆ ತೋಚದಷ್ಟು ಭಿನ್ನಭಿನ್ನವಾಗಿವೆ. ಇದರಂತೆ ವನಸ್ಪತಿಗಳ ಜಾತಿ, ವರ್ಣ ಬೆಳಿಗೆ, ಬೇರು, ಬೊಡ್ಡೆ, ಎಲೆ, ಟೊಂಗೆ, ಹೂವು, ಕಾಯಿ, ಬೀಜಗಳ ಭವಿತವ್ಯವಾದರೂ ಬೇರೆಬೇರೆಯಾಗಿದೆ. ಹಾಗು ಪಶುಪಕ್ಷಿಗಳ ರಚನೆ

ವರ್ಣ, ಆಕಾರ, ಜೀವನ ಗುಣಧರ್ಮಗಳೂ ಸಚಿತ್ರವಾಗಿಯೂ ವಿಚಿತ್ರವಾಗಿಯೂ ಇದ್ದದ್ದ ಕಂಡುಬರುತ್ತದೆ. ಇವೆಲ್ಲವುಗಳ ಗುಣಧರ್ಮ ಸ್ವಭಾವಾದಿಗಳನ್ನು ಮಾನವನು ಕಂಡುಹಿಡಿದು, ಅವುಗಳ ಮೂಲ ತತ್ವಗಳನ್ನು ವಿಂಗಡಿಸುತ್ತ ಹೋಗಿ, ತನ್ನ ಹಿತಕ್ಕಾಗಿ ಮನೆಮಾರುಗಳನ್ನು ಕಟ್ಟಿಕೊಂಡು ಅರಿವೆಅಂಚಡಿಗಳನ್ನು ಮಾಡಿಕೊಂಡು, ಭೂ-ಜಲ-ಆಕಾಶಗಾಮಿಯಾಗಿ, ಊಟ-ಉಪಚಾರಗಳಿಗೆ ಕೊರತೆಬಾರದಂತೆ, ಸುಖಾನಂದವನ್ನು ಅನುಭವಿಸಲು ಅತಿ ಮುಂದರಿದಿದ್ದಾನೆ. ಪ್ರಕೃತಿ ವಿಮರ್ಶೆ, ಪದಾರ್ಥವಿಜ್ಞಾನಶಾಸ್ತ್ರ, ರಸಾಯನಶಾಸ್ತ್ರಗಳೆಲ್ಲವೂ ಮಾನವನಲ್ಲಿ ಕ್ರಮಘಮಿಸುವ ಗುಣತ್ರಯಗಳಲ್ಲವೆ ಮತ್ತೇನು? ಇದನ್ನರಿತ ಶ್ರೀ ಕೃಷ್ಣನು ಹಿಂದೂ ಧರ್ಮದ ಗ್ರಂಥವಾದ ವೇದವೂ ಕೂಡಾ "ತ್ರೈಗುಣ್ಯ ವಿಷಯಾ ವೇದಾ, ನಿಸ್ತ್ರೈಗುಣ್ಯೋ ಭವಾರ್ಜುನ" ಎಂಬುದಾಗಿ ಹಾಡಿದ ಬಳಿಕ, ಮಾನವನಲ್ಲಿ ಮನೆಮಾಡಿಕೊಂಡಿರುವ ಗುಣತ್ರಯಗಳನ್ನು ಶಿವಾನುಭವಿಗಳು ವಿವೇಚಿಸುವದು ಸಹಜವಾಗಿದೆ.

ಪರವಸ್ತುವಿನ ನೆನಹಿನಿಂದಲೇ ಈ ಜಡವಾದ ವಿಶ್ವವೂ ನೆನಹಿನೊಳು ಮನೆಮಾಡಿದ ಮೂಲ ಮಾಯೆಯೂ ಅಥವಾ ಮೂಲ ಚಿತ್ತುವೂ ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೂ ಉಂಟಾಗಿ, ಈ ಮೂರರೊಳು ಮೂಲ ಚಿತ್ತುವು ಬೆರಸಿ ನಾದ ಬಿಂದು ಕಲೆಗಳಿಂದೊಡಗೂಡಿದ ಜಗತ್ತಿನ ಆವಿರ್ಭಾವವಾದುದಷ್ಟೇ? ನೀರಿನಿಂದ ಹಾಂಸೆ ಉದ್ಭವಿಸಿದಂತೆ ಅನಾದಿ ಮಾಯೆಯಿಂದ ಉದ್ಭವಿಸಿದ ಚಿತ್ಕಿರಣಗಳೆಂಬ ಚಿದಂಬುಧಿಯ ಕಲಕಾಟವೇ ಗುಣತ್ರಯಗಳೆಂದು ಹೇಳಲು ಅಡ್ಡಿಯಿಲ್ಲ. ಪಶುಪಕ್ಷಿಗಳ ಗುಣ ಸ್ವಭಾವಗಳು ಆಯಾ ಪ್ರಕೃತಿಗಳಿಗನುಸರಿಸಿ ಅಜ್ಞಾನಾಂಧಕಾರವಾಗಿದ್ದು, ಆಹಾರ ನಿದ್ರಾಭಯ ಮೈಥುನಗಳು ಮಾತ್ರ ಮಾನವನಿಗೆ ಹೋಲುವಂಥವಿದ್ದು, ಜ್ಞಾನಾಜ್ಞಾನ ವಿಚಾರಕ್ಕೆ ಅವಕಾಶವೇ ಇಲ್ಲ. ಆದರೆ ಮಾನವ ಪ್ರಾಣಿಯಲ್ಲಿ ಜ್ಞಾನಾಜ್ಞಾನಾಂಶ ವಿಚಾರಗಳು ತಕ್ಕಷ್ಟು ಇದ್ದು ಅವುಗಳ ಸದುಪಯೋಗ ಅಥವಾ ದುರುಪಯೋಗ ಮಾಡಿಕೊಳ್ಳುವದು ಆತನ ಮನಸ್ಸಿನಮೇಲೆ ಅದೆ. ಆದ್ದರಿಂದ ಮಾನವನಲ್ಲಿ ಜ್ಞಾನ ಸುಜ್ಞಾನ, ಮಹಾಜ್ಞಾನಗಳಿದ್ದರೂ ಅವುಗಳ ಕಡೆಗೆ ಲಕ್ಷ್ಯಗೊಡದೆ ಪಶುವೃತ್ತಿಯನ್ನವಲಂಬಿಸಿ ಗುಣತ್ರಯಗಳ ಅಧೀನನಾಗಿ ಸಾತ್ವಿಕ ರಾಜಸ

ತಾಮಸ ವೃತ್ತಿಗಳನ್ನು ಬಳಿಸುವವನಾಗಿ ಆವುಗಳಲ್ಲಿ ಯಾವುದರ ಜಿನ್ನನ್ನ ವಿಶೇಷವಾಗಿ ಹತ್ತುವನೋ, ಅದೇ ಗುಣವಿಶಿಷ್ಟನಾಗಿ ಸಮಾಜದಲ್ಲಿ ಸಾತ್ವಿಕನು ಅಥವಾ ರಾಜಸಿಯು ಅಥವಾ ತಾಮಸೀ ಗುಣವುಳ್ಳವನೆಂ ನಾಮಧಾರಿಯಾಗಿ ಉಳಿಯುತ್ತಾನೆ. ಅಂತೂ ಈ ಗುಣತ್ರಯಗಳಲ್ಲಿ ಜ್ಞಾನಕ್ಕೆ ಯಾವದು ಯೋಗ್ಯವೋ ಅದನ್ನು ಬೆಳೆಯಿಸುತ್ತ ಹೋಗು ವದೂ ಅಯೋಗ್ಯವಾದ ಗುಣಾಂಶಗಳನ್ನು ಅತಿಗಳೆಯುತ್ತ ಹೋಗುವದು ಅತ್ಯವಶ್ಯವೆಂಬುದು " ಅಕ್ರೋಧವಾಚಾರ ಜಿತೇಂದ್ರಿಯತ್ವಂ ಕ್ಷಮಾ ದಯಾ ಸರ್ವಜನ ಪ್ರಿಯತ್ವಂ । ನಿರ್ಲೋಭದಾನಂ ಸುಗುಣಂಚಶೀಲಃ ಜ್ಞಾನಸ್ಯ ಚಿಹ್ನಂ ದಶಲಕ್ಷಣಾನಿ ॥೧॥ " ಈ ಶ್ಲೋಕದಿಂದ ಸ್ಪಷ್ಟ ವಾಗುತ್ತದೆ.

ಸದ್ಗುಣಗಳಾಗಲಿ ದುರ್ಗುಣಗಳಾಗಲಿ ಜೀವನಿಗೆ ಅಂಟಲು ಆಯಾ ಜೀವಿಗಳ ಪರಿಸ್ಥಿತಿಯೇ ಮೂಲ ಕಾರಣವು. ಅಂತೆಯೇ ಚಿಕ್ಕ ಹುಡು ಗರ " ಮೂರುವರ್ಷದ ಬುದ್ಧಿ ನೂರುವರ್ಷದತನಕ " ಎಂಬ ಗಾದೆಯು ಮಾತಾಗಿದೆ. ಮಾನವ ಕುಲಕ್ಕೆ ಜಗತ್ತೇ ವ್ಯವಹಾರಿಕ ಶಾಲೆ. ಈ ಶಾಲೆಯಲ್ಲಿ ಕೀಳ ಕಾಡುಸ್ಥಿತಿಯಿಂದ ಶುದ್ಧ ಸಂಸ್ಕೃತಿಯ ಪರಿಸ್ಥಿತಿಯ ವರೆ ಸಂದರ್ಶಿಸಬಹುದು. ನೀತಿ ಅನೀತಿಯು, ಸತ್ಕ್ರಿಯೆ ದುಷ್ಕ್ರಿಯೆಯುಳ್ಳ ಜ್ಞಾನಿ ಅಜ್ಞಾನಿಗಳನ್ನು ಕಾಣಬಹುದು. ಆಗಾಗ್ಗೆ ಕಣ್ಣೆದುರಿಗೆ ಅನೇಕ ವೃತ್ತಿಗಳು ಬಂದು ಬಂದು ಬಯಲಾಗಬಹುದು. ಕಣ್ಣಿನಲ್ಲಿಯು ಕಾಮ ವಾಸನೆಯಿಂದ ರೂಪಕ್ಕೆ ಮರುಳಾಗಿ ಹೊಲಗೇರಿ ಹೊಕ್ಕವರನ್ನೂ "ನೇತ್ರದೋಷೋ ನ ಚಪರಂ" ಎಂಬ ಉಕ್ತಿಯಂತೆ ವಿಶ್ವಾಂತರ್ಯಾಮಿಯ ನಿಡುಗಣ್ಣಿಂದೋರ್ಪ ನಿಜದೇವನ ರೂಪ ಜ್ಞಾನದಿಂದ ನಿಜಶರಣರಾದ ರನ್ನೂ ನಿರೀಕ್ಷಿಸಬಹುದು.

ಅಂತೆಯೇ ಸುಧಾರಿಸಿದ ರಾಷ್ಟ್ರಗಳು ಶಿಶುಶಾಲೆಯಿಂದ ಪ್ರೌಢ ಶಿಕ್ಷ ಣದ ಶಾಲೆಗಳವರೆಗೆ ತಮ್ಮ ಬಾಲಕರನ್ನು ಸ್ವಗೃಹವಾಸದೊಳಿರಿಸದೆ ಸಾರ್ವ ಜನಿಕ ಶಾಲೆಗಳಲ್ಲಿಯೇ ಆವರ ತಾರುಣ್ಯಾವಸ್ಥೆಯವರೆಗೆ ಇರಿಸುತ್ತ ನಾಗರಿಕರನ್ನಾಗಿ ಮಾಡುವದರಲ್ಲಿ ತೊಡಗಿರುವವು. ಶ್ರೀ ಬಸವೇಶ್ವರ ಕಾಲದಿಂದ ನಮ್ಮ ಅಖಂಡ ಕರ್ನಾಟಕದಲ್ಲಿ ಸಹ, ಪ್ರತಿಗ್ರಾಮಾಂತ

ಗಳಲ್ಲಿ ಸಾರ್ವಜನಿಕ ಮಠಗಳನ್ನು ಸ್ಥಾಪಿಸಿ, ಸಾಲೀಮಠದ ಅಧ್ಯಯನದಿಂದ ಓದುಬರಹ ವ್ಯವಹಾರಿಕ ಶಿಕ್ಷಣಕೊಡುವ ಪದ್ಧತಿಯೂ ಧಾರ್ಮಿಕ ನೈತಿಕ ಶಿಕ್ಷಣಕೊಡುವ ಪದ್ಧತಿಯೂ ಬಳಕೆಯಲ್ಲಿ ಬಂದುಬಿಟ್ಟಿದ್ದವು. ಮುಂದೆ ಇಂಗ್ಲೀಷ ರಾಜ್ಯಪದ್ಧತಿಯಿಂದ ಮೊದಲಿನ ಮಠಶಿಕ್ಷಣ ಪದ್ಧತಿಯು ಮಾರಿದು, ನೈತಿಕ ಭಕ್ತಿ ಸತ್ಯ ಸದಾಚಾರಗಳು ಲೋಪವಾಗುತ್ತ ವಂಚಕ ಗುಣಗಳು ಸಂಚಲಿಸಹತ್ತಿದವು. ಮಾನವನು ಅನುಕರಣಪ್ರಿಯನು. ಊರಲ್ಲಿ ವಿಶಿಷ್ಟ ಜನರ ಆರುಹು ಆಚಾರ ಕ್ರಿಯಗಳ ಆಚರಣೆಗಳೇ ಅಥವಾ ಗುಣಗಳೇ ಸಾಮಾನ್ಯ ಜನರಲ್ಲಿ ಉಂಟಾಗುವವು.

ದೊಡ್ಡ ಊರುಗಳಲ್ಲಿ ಒಂದೆಗೊಂದು ಮಠವೂ ಚಿಕ್ಕ ಮಠಗಳಲ್ಲಿ ಸಹ, ತೀರ ಕಡಿಮೆಂದರೆ ಒಂದು ಮಠವೂ ಇದ್ದದ್ದನ್ನು ಈಗಲೂ ಕಾಣಬಹುದು. ಆಯಾ ಮಠಾಧಿಪತಿಯು ಸಾತ್ವಿಕವೃತ್ತಿಯುವನಿದ್ದು, ಅವನಲ್ಲಿ ಸತ್ಯ, ಜ್ಞಾನ, ತಪಸ್ಸು, ವೈರಾಗ್ಯ, ಸದಾಸಂತೋಷ, ಶಾಂತಿ, ನಿಜಾಚರಣೆಯಲ್ಲಿ ಉತ್ಸಾಹ, ಗಣಾಚಾರದಲ್ಲಿ ವೀರ ಧೀರತನಗಳು ಒಡೆದುಕಂಡುಬರುತ್ತಿದ್ದು ತನ್ನ ಸುಜ್ಞಾನಾಮೃತವನ್ನು ಸದ್ಭಕ್ತರಲ್ಲಿ ಸರಿಯಾಗಿ ಉಣ್ಣಿಸಿ, ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಗಟ್ಟಿಗೊಳಿಸಿದ. ಬ್ರಹ್ಮಿಯೆನಿಸಿ ವೀರಶೈವ ಮತಾಚಾರಗಳನ್ನು ಪ್ರಚಾರಗೊಳಿಸುತ್ತ ನಿಜಾನಂದದೊಳು ನಿರತನಾಗಿರುತ್ತಿದ್ದನು. ಈ ಪದ್ಧತಿಯು ಮುಳುಗಬಾರದೆಂದು ಈಗಿನ ಸಮಾಜ ಸುಧಾರಣಾ ಪ್ರಿಯರು ಶಿವಾನುಭವ ಪತ್ರಿಕೆಯ ಉದ್ದೇಶವನ್ನು ಸುವಿಚಾರಿಸಿ, ಶಿವಾನುಭವ ಮಂಟಪಗಳನ್ನು ಸ್ಥಾಪಿಸಿ, ಶಿವಶರಣರ ಅಂತಶ್ಶಕ್ತಿ ಬಹಿಶ್ಶಕ್ತಿಗಳನ್ನರಿಯುವುದು ಎಷ್ಟು ಮಹತ್ವದ್ದಾಂಬದು ಮುಂದಿನ ವಚನಾನುಭವದಿಂದ ಗೊತ್ತಾಗದೆ ಇರದು.

೬ ಶಿವಾಂಶಿಕನಾದ ಆತ್ಮನು ಶಿವನಾಜ್ಞೆಯಿಂದ ಶರೀರಸಂಬಂಧಿಯಾದಾಗ ಆ ಆತ್ಮನು ಸಂಸಾರವ್ಯಾಪ್ತಿಯಾದಂಥ ಸ್ಥೂಲ ಸೂಕ್ಷ್ಮವಾದ ಸಕಲ ಸಂಸೃತಿಗಳಲ್ಲಿ ಇಚ್ಛೆಯುಳ್ಳವನಾದಂಥ ಜೀವನ ಬೆರಿಸಲಾಗಿ ಜೀವಾತ್ಮನ ವರ್ತನೆಯೊಡನೆ ಕೂಡಿ, ತಾನು ಚರಿಸುವನಾಗಿ ಜೀವಾತ್ಮನೆಂದು ಹೇಳಿಸಿಕೊಳ್ಳುವನು.

ಪೃಥ್ವಿಯೇ ಬಹಿರಂಗ. ಆಕಾಶವೇ ಅಂತರಂಗ. ಆ ಅಂತರಂಗವಸ್ತು ಆಕಾಶದಲ್ಲಿ ನಿಂನಿರ್ಪ. ಬಹಿರಂಗವಸ್ತು ಪೃಥ್ವಿಯಲ್ಲಿ ನಾನಿರ್ಪ.

ಅಂತರಂಗ ಜ್ಞಾನವು ನಿನಗೆ. ಬಹಿರಂಗ ಜ್ಞಾನವು ನನಗೆ. ನೀನು ಅಂತರಂಗದಲ್ಲಿ ಆನಂದಿಸುತ್ತಿಪ್ಪೆ. ನಾನು ಬಹಿರಂಗದಲ್ಲಿ ಆನಂದಿಸು ಪ್ಪೆನು. ನಿನಗೆ ಅಂತರಂಗವೇ ನಿಜವಾಗಿರ್ಪುದು. ನನಗೆ ಬಹಿರಂಗವೇ ನಿಜವಾಗಿರ್ಪುದು. ನೀನು ಅಂತರಂಗದಲ್ಲಿ ನಡೆಯುತಿರ್ಪೆ. ನಾನು ಬಹಿರಂಗದಲ್ಲಿ ನಡೆಯುತಿರ್ಪೆನು. ಅಂತರಂಗದಲ್ಲಿ ನೋಟವು ನಿನಗೆ. ಬಹಿ ರಂಗದಲ್ಲಿ ನೋಟವೆನಗೆ. ನಿನ್ನ ಸತ್ವವು ಎನ್ನ ಬಹಿರಂಗವನಾವ ಎನ್ನ ಮೋಹಿಸುತ್ತಿರ್ಪುದು. ಎನ್ನ ಮನವು ನಿನ್ನ ಅಂತರಂಗವನ್ನಾ ರಿಸಿ, ನಿನಗೆ ಆಗ್ರಹಮಂ ಪುಟ್ಟಿಸುತ್ತಿಹುದು. ನನಗೆ ಅಂತಃಶಕ್ತಿಯಿ ಕಾರಣ, ನನ್ನ ತಮಸ್ಸನ್ನು ನಿನ್ನ ಕೈವಶಮಾಡಿಕೊಂಡು, ಅದರಿಂದಲೆ ಎನ್ನನು ಸಂಹರಿಸುತ್ತಿರುವೆ. ನನಗೆ ಶಕ್ತಿಯು ಬಾಹ್ಯವಾದಕಾರಣ ನಿನ್ನ ಸತ್ವಗುಣಮಂ ನಾನು ಪರಿಗ್ರಹಿಸಲಾರದೆ, ಲಯವನ್ನೈದುತ್ತಿರ್ಪ ಸಕೀ ವನ್ನು ನಿನ್ನಿಂದ ನಾನು ತಿಳಿದಲ್ಲಿ ಬಹಿರಂಗದಲ್ಲಿ ಸತ್ವಗುಣಮಂ ನಿನ್ನೀ ನಾನು ಕಂಡಲ್ಲಿ, ನಿನಗೆ ಅಂತರಂಗವಾಗಿರ್ಪವನು ನಾನು ಎಂದು ನೀನು ಕಂಡೆಯಯ್ಯ. ಬಹಿರಂಗದಲ್ಲಿ ನೀನು ಎನಗೆ ಆಧಾರವಾದಲ್ಲಿ ಅಂತ ರಂಗದಲ್ಲಿ ನಿನಗೆ ನಾನೇ ಆಧಾರವಾದೆನಯ್ಯ. ಬಹಿರಂಗದಲ್ಲಿ ನೀನು ಎನಗೆ ಶಕ್ತಿಯಾದಲ್ಲಿ ಅಂತರಂಗದಲ್ಲಿ ನಿನಗೆ ನಾನೇ ಶಕ್ತಿಯಾದೆನಯ್ಯ. ತಮೋಗುಣಮಂ ಪಿಡಿದು ನೀನು ಎನ್ನಂ ಆಡಿಸಿದೊಡೆ ಸತ್ವ ಗುಣಮು ಪಿಡಿದು ನಿನ್ನಂ ನಾನಾಡಿಸುತಿಪ್ಪೆನಯ್ಯಾ; ಕರ್ಪೂರ ವಪ್ಪಿದ ಉರಿಯಾ ಮಹಾಘನ ದೊಡ್ಡ ದೇಶಿಕಾರ್ಯಗುರು ಪ್ರಭುವೇ"

ವಿಶ್ವಧರ್ಮವಾದ ವೀರಶೈವ ಮತದಲ್ಲಿ ಇಹರು ಗಂಡಸರು, ಇರ ಹೆಂಗಸರು ಎಂಬ ಮತಭೇದವಿಲ್ಲ. ಎಲ್ಲರಿಗೂ ಲಿಂಗಧಾರಣವೂ, ಲಿಂಗ ಪೂಜೆಯೂ, ಲಿಂಗ ಭಕ್ತಿಭಾವವೂ, ಅಂಗ-ಲಿಂಗ ಜ್ಞಾನವೂ, ಲಿಂಗಾಂಗ ಯೋಗವೂ, ಅರ್ಥಾತ್ ಶಿವಯೋಗ ಸಾಧನ ಸಾಮಗ್ರಿಯೂ ಉಂಟು ಪ್ರತಿಯೊಂದು ವ್ಯಕ್ತಿಯು ತನುಮನ ಭಾವದೊಳು ಗುರುಲಿಂಗ ಜಂಗಮ ತ್ವವೂ, ಅವುಗಳ ಮಾಟ ನೋಟ ಕೂಟಗಳೂ ಸದಾ ಸನ್ನಿಹಿತವಾ ರುತ್ತವೆ. ಅದುಹು ಆಚಾರ ಸತ್ಕ್ರಿಯೆಗಳು ಲಿಂಗಾಂಗಿಯಲ್ಲಿ ನೆಲೆಗೊ ಳ್ಳುತ್ತ, ಶಿವಾನುಭಾವವು ಬೆಳೆಯುತ್ತ, ಸದ್ಭಾವತ್ರಯಗಳ ಬೆಳಗಿನ ಫಲ ಪ್ರತಿದೋರುತ್ತ, ಅವರವರ ಮುಖದಲ್ಲಿ ಶಿವಜ್ಞಾನ ಜ್ಯೋತಿಯು

ಗತ್ತು ಹಾಗು ಅವರ ಸತ್ಕಾಯಕದಲ್ಲಿಯೂ, ಗಮನಾಗಮನಗಳಲ್ಲಿಯೂ, ಅಷ್ಟಾವರಣದಲ್ಲಿಯೂ, ಜಾಗ್ರತ್, ಸ್ವಪ್ನ, ಸುಷುಪ್ತಿಗಳಲ್ಲಿಯೂ, ಧ್ಯಾನ ಧಾರಣ ಸಮಾಧಿಗಳು ಪ್ರಜ್ವಲಿಸುತ್ತಲಿರುವವು. ವೀರಶೈವ ಷಟ್‍ಸ್ಥಲಾಂತರ್ಗತ ನೂರೊಂದು ಸ್ಥಲವೊಳು, ತಾಮಸ ನಿರಸನ ಸ್ಥಲವೂ, ಶೀಲ ಸಂಪಾದನೆಯ ಸ್ಥಲವೂ, ಅಂಗ ಲಿಂಗಸ್ಥಲವೂ, ಲಿಂಗ ನಿಜಸ್ಥಲವೂ, ಏಕಭಾಜನ ಸ್ಥಲವೂ, ಭಕ್ತ ಮಾಹೇಶ್ವರಾದಿ ಅಂಗಸ್ಥಲಗಳನ್ನು ಆಚಾರಾದಿ ಲಿಂಗಸ್ಥಲಗಳಲ್ಲಿ ಸಾಮರಸ್ಯಗೊಳಿಸುವ ಸರ್ವ ಸಂಪತ್ತಿನಾಚರಣೆಯ ಸ್ಥಲವೂ, ಅತಿ ಮಹತ್ವವುಳ್ಳವುಗಳಾಗಿವೆ. ಇದರಿಂದ ಕರಣ ಮಥನವಿಲ್ಲದುದೇ ಅನುಭಾವ"ವೆಂಬ ಶ್ರೀ ಚನ್ನಬಸವನ ಉಕ್ತಿಯಂತೆ ಚಿದಂಗಗಳಲ್ಲಿ ಚಿಲ್ಲಿಂಗಗಳನ್ನು ಬೆಸೆಯುವ ಲಿಂಗಾಂಗ ಸಾಮರಸ್ಯದ ಅನುವಿನ ಅನುಭಾವವು ಹೊಗಳತಕ್ಕಂಥಾದ್ದಾಗಿದೆ. ಈ ಅನುವಿನ ಅನುಭಾವವನ್ನು ಶ್ರೀ ಲಿಂಗಮ್ಮ ಶರಣೆಯು ಈ ಪ್ರಕಾರ ತನ್ನ ಅನುವನ್ನು ಮನನೀಯವಾಗಿ ಸ್ಪಷ್ಟಗೊಳಿಸಿದ್ದಾಳೆ.

"ತನುವ ಕರಗಿಸಿ, ಹರಿವ ಮನವ ನಿಲಿಸಿ, ಅಂಗ ಗುಣವನೆ ಅಳಿದು, ಲಿಂಗಗುಣವನೆ ನಿಲಿಸಿ, ಭಾವವಳಿದು ಭವವ ಜರಿದು ಮಹಾದೇವನಾದ ಶರಣರ, ಜಗದ ಮಾನವರೆತ್ತಬಲ್ಲರು ಅಪ್ಪಣ್ಣ ಪ್ರಿಯ ಚನ್ನಬಸವಣ್ಣ ? ॥ ೧ ॥

ಅಂತರಂಗ ಬಹಿರಂಗ ಶುದ್ಧವಿಲ್ಲದೆ ನುಡಿವರು, ಸಂತೆಯ ಸೂಳೆಯಂತೆ. ಅಂತರಂಗ ಬಹಿರಂಗವೆಂಬುದಿಲ್ಲ. ನಮ್ಮ ಶಿವಶರಣರಿಗೆ ಅಂತರಂಗವೆಲ್ಲ ಅರುಹಾಯಿತ್ತು. ಬಹಿರಂಗವೆಲ್ಲ ಲಿಂಗವಾಯಿತ್ತು. ಆ ಲಿಂಗದಲ್ಲಿ ನುಡಿದು, ಲಿಂಗದಲ್ಲಿ ನಡೆದು, ಲಿಂಗದಲ್ಲಿ ಮುಟ್ಟಿ, ಲಿಂಗದಲ್ಲಿ ವಾಸಿಸಿ, ಲಿಂಗದಲ್ಲಿ ಕೇಳಿ, ಲಿಂಗವಾಗಿ ನೋಡಿ, ಸರ್ವಾಂಗವೂ ಲಿಂಗವಾಗಿ; ಆ ಲಿಂಗವ ನೋಡುವ ಕಂಗಳಲ್ಲಿ ಐಕ್ಯ ಕಂಡೆಯಾ; ಅಪ್ಪಣ್ಣಪ್ರಿಯ ಚನ್ನಬಸವಣ್ಣ ॥ ೨ ॥

ಇಗೋ ಇಲ್ಲಿ ಇದೆ ದಾಂತಿ! ಶರಣಸುಘನದ ವಾಂತಿ! ತೋರು ಶಾಂತಿ; ಹೊಳೆಯುತಿದೆ ಕಾಂತಿ! ಆಗಿಹೋಗಿದೆ ಜನನ ಮರಣ ಭ್ರಾಂತಿ! ಒಡೆದು ಹೇಳಲಾರದಾಗಿದೆ ಅವರ ನಿರ್ಭ್ರಾಂತಿ ಜ್ಞಾನ

ಶೂನ್ಯ ಸ್ಥಲದ ಸರ್ವಶೂನ್ಯವಾದ ನಿಶ್ಶಬ್ದದ ನಿರಾಲಂಬದ ನಿಶ್ಶಾಂತಿ! ಕಡಿದೊಗೆದ ದುರ್ಘಟದಾನ ದುರ್ವಾಸನೆಯ ಭಿಂತಿ; ಕೇಳುತ್ತಿಪ ವಚನ ವೀಣಾಸುನಾದದ ತಂತಿ! ಆಗಿಹೋಗುತ್ತಿವೆ ಮೂರು ಗುಣಗಳ ಮೂರು ದಿನದ ಸಂತಿ! ಕೂಡಿಹೋಗುತ್ತಿವೆ ಲಿಂಗಾಂಗಗಳ ಒಪ್ಪಂದಿತ್ತ ಕಂತಿ.

ಮಾನವನ ಪ್ರಕೃತಿಗುಣಗಳಿಗನುಸಾರವಾಗಿ ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನಾದಿಗಳಲ್ಲಿ ಯಾವದೊಂದರ ವ್ಯಸನದೊಳು ಬುದ್ಧಿ ಸುಪಣಿಸಿ, ವ್ಯಸನಾಧೀನನಾಗುವದು ಸ್ವಾಭಾವಿಕವು. ಈ ವ್ಯಸನಗಳ ಪ್ರಚಂಡ ಶಕ್ತಿಯನ್ನು ತಡೆದು ಗುಣತ್ರಯಗಳ (ಪರಿಣಾಮವನ್ನು) ಜ್ಞಾನಾಗ್ನಿಯಿಂದ ದಹಿಸಿ ಅಧೋಮುಖದ ಹೃತ್ಕಮಲವಾಸನಾದರ್ಶ ಅಷ್ಟದಳದೊಳು ಚರಿಸುವ ಜೀವಾತ್ಮನ ಸುಳಿವರಿದು ಅಧೋಮುಖದ ಅಷ್ಟದಳ ಕಮಲದ ನಾಳದಿಂದ ನಿಜ್ಯಜೀವನನ್ನು . ಚತುರ್ದಳದ ಊರ್ಧ್ವಮುಖದ ಪರಮನೊಳು ನೆಲೆಗೊಳಿಸಿ ನಿಜಾನಂದದೊಳು ನಿಲ್ಲುವ ಪರಿಯನರಿತು ಶಿವಯೋಗ ಸಾಧಿಸುವ ಸುಲಭಮಾರ್ಗದ ಸುಸಂಧಾನವಾದ ವೀರಶೈವರ ತ್ರಿಕಾಲದ ಲಿಂಗಾರ್ಚನೆಯೊಳು ನಿರತನಾಗಿ ಉಳಿಯುವ ಶಿವಯೋಗವನ್ನರಿತು ಆಚರಿಸಿ ಪರಿತವರಾದ ಶ್ರೀಅಲ್ಲಮಪ್ರಭುದೇವರು ತಮ್ಮ ಮಂತ್ರಗೋಪ್ಯದಲ್ಲಿ ಸರಸವಾಗಿ ಹೇಳಿದ್ದಾರೆ.

"ಸತ್ವರಜತಮಗಳನು ಸುಟ್ಟುರುಹಿ ನಿಟ್ಟಿಸಿರಿಸಿ । ಸಪ್ತೇಳುಸಾಗರವ
ಮೆಟ್ಟಿನಿಂದೆ ॥ ಸಪ್ತೇಳುಸಾಗರದ ಮಹಾತರಂಗಳ ನಡುವೆ । ಮುತ್ತಿಂದ
ಸೋಜಿಗದ ನೋಡಿ ಕಂಡೆ ॥೧॥

ಹೃತ್ಕಮಲ ಕರ್ಣಿಕಾವಾಸದೊಳಗಿರುತಿರ್ಪ । ಇಕ್ಕೈಹಿಕ್ಕೈಗಳ ತಾ
ನೊಂದು ಮಾಡಿ ॥ ಸಿಕ್ಕಿಲ್ಲ ತೊಡಕಿಲ್ಲದರ್ಕಜನ ಪಂಜರವ । ಮಿಕ್ಕಿ ಮೀರಿ
ನಿಂತ ಪರಮಯೋಗಿ ॥೨॥

ಜೋಳದ ಜಾತಿಯು ಒಂದೇ ಇದ್ದರೂ ಅದರಲ್ಲಿ ಭೀಮಾತೀರದ ಜೋಳ, ಕೃಷ್ಣಾತೀರದ ಜೋಳ, ಡೋಣಿನಾಲದ ಜೋಳ ಬಿಳಿ

ಸಮಗು ಜೋಳ, ಕಲ್ಲುಸುರಡಿಯ ಜೋಳಗಳ ಕಜ್ಜಗಳ ಸತ್ವರೂಪು ಗಟ್ಟಿಗಳ, ಭೇದಪ್ರಭೇದಗಳು ತೋರುವಂತೆ. ಹಾಗು ಮಾವಿನಗಿಡಗಳ ಗುಂಪಿನಲ್ಲಿ ಮಾವಿನ ಹಣ್ಣಿನ ಜಾತಿಯು ಒಂದೇ ಆದರೂ ಒಗರು ಮಧುರ, ಹುಳಿಮಧುರ, ಹುಳಿ, ಕ್ಷಾರ ಮತ್ತು ಜೇನುಮಾವು. ದ್ರಾಕ್ಷೆ ಮಾವು, ಸಜ್ಜಸಿಗೆಮಾವು, ಬಾಳೆಮಾವು, ಮುಜ್ಜಿಗೆಮಾವು, ಗೊಡ್ಡುಹುಳಿ ಮಾವುಗಳೆಂಬ ಪ್ರಭೇದಗಳು ಆಯಾ ಹಣ್ಣುಗಳ ರಸ ರೂಪು ರುಚಿ ವಾಸನೆಗಳಿಂದ ಗುಣಭೇದಗಳು ತೋರುವಂತೆ, ಸಮ್ಯತತ್ವವೇತ್ತಿಗಳಾದ ಶಿವಶರಣರು ಮಾನವನಲ್ಲಿ ತೋರುವ ತ್ರಿಗುಣಾಂಶಗಳನ್ನು ತಿಳಿತಿಳಿದು ಸದ್ಗುಣಾಂಶಗಳಲ್ಲಿ ಉಳಿಉಳಿದು ಕಟ್ಟಕಡೆಗೆ ಅಳಿದಳಿದು ಉಳಿಯುವ ನಿರ್ಗುಣಾತ್ಮನಲ್ಲಿ ನಿರವಯವಾದ ಸಂಗತಿಗಳನ್ನು ಅರಿಯುವದು ಅಗತ್ಯವು.

"ಸತ್ವ, ರಜ, ತಮಂಗಳೇ ಗುಣತ್ರಯಂಗಳು. ಅವುಗಳ ವಿವರ:—

(೧) ಸತ್ವಕ್ಕೆ ಶ್ವೇತವರ್ಣ. ರಜಕ್ಕೆ ರಕ್ತವರ್ಣ, ತಾಮಸಕ್ಕೆ ಕಪ್ಪುವರ್ಣ.

ಗ್ರಂಥ॥ ಸತ್ಯಂ ಜ್ಞಾನಂ ತಪೋ ಮೌನಂ, ತೋಷ: ಶಾಂತಿರ್ವಿವೇಕತಾ। ಉತ್ಸಾಹೋ ನಿಶ್ಚಯೋ ಧೈರ್ಯಂ, ಸಾತ್ವಿಕಸ್ಯ ಚಲಕ್ಷಣಂ ॥೧॥ ಸತ್ಯ, ಜ್ಞಾನ, ತಪಸ್ಸು, ಮೌನ, ಹರುಷ, ಕ್ಷಮೆ, ಸಾಹಸ, ನಿಶ್ಚಯ, ಧೈರ್ಯ, ವಿವೇಕಂ ಈ ಹತ್ತು ಸಾತ್ವಿಕ ಗುಣಂಗಳು.

ಗ್ರಂಥ ॥ ಗರ್ವಕ್ರೋಧೋಹ್ಯಹಂಕಾರೋ, ಸತೀ ಸಂಗ ಪ್ರಳಾಪನಂ। ಅಕೃತ್ಯ ಡಂಭ ಮಾತ್ಸರ್ಯೋ ರಾಜಸಸ್ಯಚ ಲಕ್ಷಣಂ ॥೨॥

ಗರ್ವ, ಕ್ರೋಧ, ಅಹಂಕಾರ, ವಿಷಯ, ವಾದ, ಅಪ್ರಿಯವಾಚಕ, ಅನ್ಯೋಗ್ಯ ಮತ್ಸರ, ರೋಷ ಇವು ಎಂಟು ರಾಜಸ ಗುಣಂಗಳು.

ಗ್ರಂಥ ॥ ಅಜ್ಞಾನಂ ಮೋಹ ನಿದ್ರಾಚ ಚಾಪಲ್ಯಂ ಬುದ್ಧಿಹೀನಂಚ ; ದಾಸತ್ವ ಪರಬಾಧತ್ವಂ ತಾಮಸಸ್ಯ ಚ ಲಕ್ಷಣಂ ॥೩॥

ಎಂದು ಅಜ್ಞಾನ, ಮೋಹ, ನಿದ್ರಾ, ಚಾಪಲ್ಯ, ಹೀನವೃತ್ತಿ, ಪರ ನಿಂದೆ, ಹಿಂಸೆ, ಪಾಪಿಷ್ಠತ್ವ ಈ ಎಂಟು ತಾಮಸಗುಣಂಗಳು.

(೨) **ಸಾತ್ವಿಕ ಗುಣಂಗಳು:—** ಸತ್ಯ— ನುಡಿದ ಮಾತಿಂಗೆ ತಪ್ಪದೆ ಹಿಡಿದ ಆಚರಣೆಯ ಬಿಡದೆ ಯಥಾಸ್ಥಿತವಾಗಿ ನಡೆವಳಿಯೊಡನೆ ಕೂಡಿ ಆಚರಿಸುವುದೇ ಸತ್ಯವು. ಜ್ಞಾನಃ— ಕಾಕು ಗೋಷ್ಠಿಗಳಂ ಬಿಟ್ಟು ಸದಾ ನಿತ್ಯಾನಿತ್ಯ ವಿವೇಕದ ಪರಾಂಬರಿಕೆಯೊಡನೆ ಕೂಡಿರುವಂತಹದೇ ಜ್ಞಾನವು. ತಪಃ— ಇಂದ್ರಿಯಂಗಳಂ ನಿಗ್ರಹಿಸಿಕೊಂಡು ಜಿತೇಂದ್ರಿಯ ನಾಗಿ ಸದಾಶಿವಜ್ಞಾನವ ಮುಂದುಗೊಂಡು ಇರುವಂತಹದೇ ತಪವು; ಮೌನಃ— ಕಲಹನಾಸ್ತಿಯಾಗಿ ವಾಙ್ನೇಮವ ಮುಂದುಗೊಂಡಿರುವುದೇ ಮೌನವು. ಹರ್ಷಃ— ಸುಖದುಃಖ ಬಂದು ತಟ್ಟಿಗರೂ ಕಂದದೆ ಕುಂದದೆ ಅಂತರಂಗದಲ್ಲಿ ಮುಂದುಗೊಂಡಿರುವಂತಹ ಸಂತೋಷವೇ ಹರ್ಷ. ಕ್ಷಮೆಃ— ಅಂದಲ್ಲಿಯೂ ಆಡಿದಲ್ಲಿಯೂ ಕೋಂದಲ್ಲಿಯೂ ಬಡಿದಲ್ಲಿಯೂ ಜರಿದಲ್ಲಿಯೂ ಹೇಮುವನಿಕ್ಕಿ ನುಡಿದಲ್ಲಿಯೂ ತಾಳಿಕೊಂಡು ಹೋಗುವಂತಹ ಸರ್ವ ಸಮ್ಮತಭಾವವೇ ಕ್ಷಮೆಯು. ಸಾಹಸಃ— ಸಾವಿರ ಮುಖದಲ್ಲಿ ಬಂದ ಕಂಟಕವನ್ನಾದರೂ ಏಕ ಮುಖದಲ್ಲಿ ತೀರ್ಚಿ ಕಳೆವೆನೆಂಬಂತಹ ಸಾಮ ರ್ಥ್ಯವೇ ಸಾಹಸವು. ನಿಶ್ಚಯ:— ಅಂತರಂಗದಲ್ಲಿ ದೃಢಭಾವ ಮುಂದು ಗೊಂಡಿರುವಂತಹದೇ ನಿಶ್ಚಯವು.

**ಧೈರ್ಯಃ**-ಹೆದರದೆ ಇರುವಂತಹ ಪರಮ ದಿಟ್ಟತನವೇ ಧೈರ್ಯವು.
**ವಿವೇಕಃ**-ನಡೆವಲ್ಲಿಯೂ ನುಡಿವಲ್ಲಿಯೂ ಕೊಡುವಲ್ಲಿಯೂ ಕೊಂಬು ವಲ್ಲಿಯೂ ಸರ್ವಾವಸ್ಥೆಯಲ್ಲಿಯೂ ವಿಚಾರ ಪರಾಯಣನಾಗಿರುವದೇ ವಿವೇ ಕವು. ಈ ಹತ್ತು ಸಾತ್ವಿಕ ಗುಣಂಗಳು.

(೩) **ರಜೋಗುಣಂಗಳು:—**"ಗರ್ವ"ಅಯ್ಯಾ, ಜೀಯ ಎಂದು ವಕ್ಕೆ ಎತ್ತಿದ ಶಿರಸ್ಸುಳ್ಳಾತನಾಗಿ ನನಗಾರು ಸರಿಯೆಂದು ಇದಿರಲೆಕ್ಕಿಸದೆ ಇರುವಂತಹದೇ ಗರ್ವವು. ಕ್ರೋಧಃ— ಈ ಗರ್ವದಿಂದ ಏನು ಪ್ರಯೋ ಜನ ಎಂದು ಯಾರಾದರೂ ಸತ್ಪುರುಷರು ಪ್ರಸಂಗವ ಹೇಳಲು ಅವರ ಮೇಲೆ ಕಡುಕೋಪವು ಮುಂದುಗೊಂಡಿರುವಂತಹದೇ ಕ್ರೋಧವು.

ಅಹಂಕಾರಃ— ವಿದ್ಯೆ, ಬುದ್ಧಿ, ಕುಲ, ಬಲ, ಪಂಥ ಪರಾಕ್ರಮದಲ್ಲಿ ನಾನೇ ಶ್ರೇಷ್ಠನೆಂದು ಗರ್ವಿಸುವುದೇ ಅಹಂಕಾರವು. ವಿಷಯವಾದಃ— ಶಿವಶಾಸ್ತ್ರ, ಶಿವಗೋಷ್ಠಿಗಳಂ ಬಿಟ್ಟು, ಸದಾ ಸ್ಮರಶಾಸ್ತ್ರಾನುಗ್ರಹಕರೊಡನೆ ಕೂಡಿರುವುದೇ ವಿಷಯವಾದವು. ಅಪ್ರಿಯವಾಚಕಃ— ನಿನ್ನ ಮಾತೆನಗೆ ಸೊಗಸದು ತಿಗೆ, ಎಂದು ಹಿತವಲ್ಲದ ಪ್ರಸಂಗವನಾಡುವಂತಹದೇ ಅಪ್ರಿಯವಾಚಕವು. ಉದ್ಯೋಗಃ— ಸದಾ ಒಂದು ವ್ಯವಸಾಯದೊಡನೆ ಕೂಡಿರುವಂತಹದೇ ಉದ್ಯೋಗವು. ಮತ್ಸರಃ— ಓರೋರ್ವರಿಗೆ ಒಂದೊಂದು ಪ್ರಸಂಗ ಬಂದಲ್ಲಿ ದೇಹಧರ್ಮ ಗತಿಯಿಂದ ಬರುವದುಂಟಾದುದು ಎಂದು ನೀರಮೇಲಣ ಲಿಪಿಯಂತೆ ಹೋಗದೆ ಕಾಡುಕೋಣನಹಾಗೆ, ಕಾಳೋರಗನಹಾಗೆ ಅಂತರಂಗದಲ್ಲಿ ದೀರ್ಘ ದ್ವೇಷ ತಾಳಿಕೊಂಡಿರುವಂತಹದ್ದೇ ಮತ್ಸರವು. ರೋಷಃ— ತೂಪುಂದ ಕೊಳ್ಳಿಯೋಪಾದಿಯಲ್ಲಿ ಚಿಟಿ ಚಿಟಿಗುಟ್ಟುವಂಥ ಕಟ್ಟುಗ್ರದ ಕಡುಗೋಪವೇ ರೋಷವು. ಈ ಎಂಟು ರಾಜಸ ಗುಣಗಳಿರ್ಪವು.

(೪) ತಾಮಸಗುಣಂಗಳುಃ — ಅಜ್ಞಾನಃ- ತಾನಾರೆಂಬ ತನ ನಿಜವನರಿಯದಿರಹತನವೇ ಅಜ್ಞಾನವು. ಮೋಹಃ—ಸದಾ ಸತಿಸುತಾದಿಗಳ ಮೇಲಣ ಮಮಕಾರವು ಮುಂದುಗೊಂಡಿರುವುದೇ ಮೋಹವು. ನಿದ್ರೆ:— ಅನ್ನೋದಕಗಳಂ ಯಥೇಷ್ಟವಾಗಿ ತೆಗೆದುಕೊಂಡು ದಿವಾಕಾಲ ನಿಶಾಕಾಲಂಗಳಲ್ಲಿ ಹೊಡೆಗೆಡೆದು ಮಲಗಿರುವುದೇ ನಿದ್ರೆಯು. ಚಾಪಲ್ಯ:- ಸತ್ಪುರುಷರು ಪ್ರಸಂಗವನಾಡಿದರೆ ವಾಗ್ಬಂಧನವ ಮಾಡುವಂತಹ ವಾಕ್ಚಾತುರ್ಯವೇ ಚಾಪಲ್ಯವು. ಹೀನವೃತ್ತಿ: — ವರ್ತನೆಯಿಲ್ಲದೆ ಹೀನ ವರ್ತನೆಯ ವರ್ತಿಸುವುದೇ ಹೀನವೃತ್ತಿಯು. ಪರನಿಂದೆ: — ಪಾತಕವಾವುದೆಂಬುದನ್ನು ಒಬ್ಬರಲ್ಲೊಂದು ಗುಣವ ನೋಡದೆ ಅವರ ಗುಣಾವಗುಣಗಳನೆತ್ತಿ ದೂಷಣೆಯ ಮಾಡುವಂತಹದ್ದೇ ಪರನಿಂದೆಯು. ಹಿಂಸೆ:— ನಿರಪರಾಧಿ ಪ್ರಾಣಿಗಳ ಕೊಲ್ಲುವಂತಹದ್ದೇ ಹಿಂಸೆಯು. ಪಾಪಿಷ್ಠತ್ವ:— ನಿರಪರಾಧಿ ಪ್ರಾಣಿಗಳ ಕೊಂದರೆ, ಪಾಪ ಬರುವುದೆಂದು ಹೇಳಿದರೆ ಕೊಂದಲ್ಲದೆ ಬಿಡೆನೆಂಬ ಪಾಪದ ಮೇಲಣ ಬಯಕೆಯೇ ಪಾಪಿಷ್ಠತ್ವವು. ಈ ಎಂಟು ತಾಮಸಗುಣಂಗಳು.

ಶಬ್ದಮಧ್ಯದಲ್ಲಿಪ್ಪ ಅರ್ಥವೇ ಜೀವನು ತಮೋರೂಪವಾಗಿಹನು. ಜ್ಞಾನದಲ್ಲಿಪ್ಪ ಅರ್ಥವೇ ಪರಮನು ಸತ್ವರೂಪವಾಗಿಹನು. ಜ್ಞಾನ

ಶರೀರದಲ್ಲಿರ್ಪ ಪರಮಾರ್ಥ ಭಾವವೆಂಬ ಹಸ್ತದಲ್ಲಿ ಬುದ್ಧಿಯೆಂಬ ತ್ರಿಗುಣಾತ್ಮಕಮಪ್ಪ ಮುಸ್ಕೊನೆಯುಲಗಂ ಪಿಡಿದು, ಆ ಶಬ್ದ ಶರೀರಮಂ ಭೇದಿಸಿ, ತನ್ಮಧ್ಯದೊಳಿಪ್ಪ ಅರ್ಥವನ್ನು ಆ ಜ್ಞಾನವು ಗ್ರಹಿಸಿದಲ್ಲಿ ಜ್ಞಾನಾರ್ಥವೊಳಗೆ ಬೆರೆದು, ಎರಡೂ ಒಂದಾಗಿ, ಆ ಅರ್ಥವೇ ಸತ್ಯವಾಗಿ, ಆನಂದಾನುಭವಪ್ಪುದು. ಜ್ಞಾನವು ಗ್ರಹಿಸದೆ ಬಿಟ್ಟರೆ, ಶಬ್ದಾರ್ಥವೇ ದುರರ್ಥವಾಗಿ ಸೃಷ್ಟಿಸ್ಥಿತಿ ಸಂಹಾರಂಗಳಲ್ಲಿ ಕೋಟಲೆಗೊಳ್ಳುತಿರ್ಪುದೀ ಜೀವನು. ಅದೇ ಪರಮನ ತತ್ಪರಿಗ್ರಹವೇ ಐಕ್ಯವಾದಲ್ಲಿ ಎರಡೂ ಒಂದೇ ಆಗಿರ್ಪುದು ಕಾಣಾ ಮಹಾಘನ ದೊಡ್ಡ ದೇಶಿಕಾರ್ಯ ಗುರು ಪ್ರಭುವೇ ”

ಮ. ಶಾ. ಸಂ. ಭಾಗ ೨

ಅಷ್ಟರಿಂದ ಲಿಂಗಾಂಗಿಗಳಾದ ನಾವೆಲ್ಲರೂ ಹಂಸ ರೂಪವಾದ ತಾಮಸವನ್ನೂ ಸೋಹಂ ಎಂದೆನಿಸುವ ರಾಜಸವನ್ನೂ ಅತಿಗಳೆದು ದಾಸೋಹಂ ಎಂದೆಂಬ ಸತ್ವಗುಣಮಂ ಪಿಡಿಯುತ್ತ ಉಪಾಧಿಮಾಟಸ್ಥಳ ನಿರುಪಾಧಿಮಾಟಸ್ಥಲದೊಳು ಅಳಿಯುತ್ತ ಸಹಜಮಾಟಸ್ಥಲಿಕನಾಗುವ ಜ್ಞಾನ ಸುಜ್ಞಾನ ಮಹಾಜ್ಞಾನದೊಳು ಕ್ರಮವಾಗಿ ಕೂಡುವ ಕೈಗನ್ನಡಿಯಿದು. ಮತ್ತಂ - ವಚನ:-

ಇರುವೆಯು ಜಾತಿಯೊಳು ಕಟ್ಟಿರುವೆ, ಚಿಟ್ಟಿರುವೆ, ಸೊಟ್ಟಿರುವೆಗಳ ಪರಿಯಂತೆ, ಕಟ್ಟನೆ ಕಡಿದು ತನ್ನ ರುಂಡ ಮುಂಡಗಳು ಬೇರಾದರೂ, ಬಿಡದಿರುವ ಇಕ್ಕಳದಂತಹ ಹಲ್ಲಿನ ಕಟ್ಟಿರುವೆಯೇ ತಾಮಸಗುಣವು. ಮೈತುಂಬ ಮುಕುರಿ ಸಣ್ಣಾಗಿ ಚನ್ನಾಗಿ ಕಡಿಯುವುದು, ಒರಸಿದರೂ ಮೈಯಲ್ಲಿ ಅಂಟುವ ಕೆಂಪಿರುವೆಗಳೇ ರಾಜಸಗುಣ ಸ್ವರೂಪಿಗಳು. ಕೆಂಪಿರುವೆಗಳನ್ನು ಹೋಲುವ ಅಷ್ಟೇ ಆಕಾರದ ಬೀಗರಿದಿನ ಜಾತಿಯ ಸೊಟ್ಟಿರುವೆಗಳು ಮೈಮೇಲೆ ಚಕ್ಕಂದಿನಿಂದ ಚಲಿಸುವ ನಿರುಪದ್ರವಿಗಳಾದವುಗಳೇ ಸತ್ವಗುಣ ರೂಪ್ಯವು. ಈ ಇರುವೆಗಳ ಗುಣವರಿತು, ಎನ್ನ ಗುಣಾವಗುಣಗಳಲ್ಲಿ ಸದ್ಗುಣಗಳನ್ನೇ ಇತ್ತು ಸಲಹಯ್ಯ ಸಿದ್ಧೇಶ್ವರಾ ॥ ೧ ॥

ಟೊಂಗೆ ಟೊಂಗೆಗೆ ಹಾರುವ ಮಂಗನಂತಿರುವ ಮನದ ಮಗ್ಗುಳ ಮುರಿಯುಲು, ಸದಾ ಸರ್ವದಾ ನಾಲಿಗೆಯೊಳು ನಲಿಯುವ ಮಾಯಾ

ಮಂತ್ರವೇ ಬಲಿಯಯ್ಯ. ಮಂತ್ರಾಕ್ಷರಗಳ ವ್ಯಾಪಕಾರ್ಥವನರಿದು, ಪಠಿಸಲು ಅವಗುಣಗಳು ಅಣುಮಾತ್ರವಿಲ್ಲವಂತಾಗುವವೆಂದ ನಮ್ಮ ಸಿದ್ಧೇಶ್ವರಾ. ॥ ೨ ॥

ಜ್ಞಾನಾಚಾರದಿಂದ ತಮೋಗುಣವು ತೊರೆಯುವದಯ್ಯ. ಭೃತ್ಯಾಚಾರದಿಂದ ರಜೋಗುಣವು ಮಾಜುವದಯ್ಯ. ಭಕ್ತ್ಯಾಚಾರದ ಸಮರಸ ಭಕ್ತಿಯಿಂದ ಸತ್ವಗುಣವು ನಿಸ್ಸತ್ವವಾಗುವದೆಂದ ನಮ್ಮ ಸಿದ್ಧೇಶ್ವರಾ ॥ ೩ ॥

ಕ್ರಿಯಾಚಾರದಿಂದ ತನುಗುಣದ ಕೊನೆಯಾಗದಿರದೇನಯ್ಯ? ಲಿಂಗಾಚಾರದಿಂದ ಮನಗುಣವು ಮರೆಯಾಗುವದಯ್ಯ. ಭಾವಾಚಾರದಿಂದ ಬುದುಬುದು ಏಳುವ ಭವಗುಣಗಳಿಲ್ಲ ಸವೆದು ಶಿವಗುಣಗಳು ಸಂಜನಿಸಿ, ಶಿವಾನಂದವು ಸಮನಿಸುವೆಂದ ನಮ್ಮ ಸಿದ್ಧೇಶ್ವರಾ ॥ ೪ ॥

ಗುಣತ್ರಯವೆಂಬ ಬಳ್ಳಿಯ ತಾಮಸವೆಂಬ ತಪ್ಪಲವ ತರಿದು, ರಾಜಸವೆಂಬ ಹಬ್ಬುಗುಣದ ತಬ್ಬರವ ನಿಲಿಸಿ, ಸತ್ವಗುಣದ ಸಾರವ ಹೀರಿ, ಗುಣತ್ರಯಗಳ ಬೀಜವ ಹುರಿದು ನಿನ್ನ ಅರುಹಿನ ಕುರುಹಿನೊಳು ಬೆರೆದು ಬೇರಾಗದಂತಿರಿಸಯ್ಯ ಸಿದ್ಧೇಶ್ವರಾ ॥ ೫ ॥

---

## ವೀರಶೈವ ಧರ್ಮದ ನಿಜಸ್ವರೂಪ

ಲೇಖಕ:- ಸಮತಾವಾದಿ ಶರಣ ]

............●............

“ಶ್ರೀ ಗುರು ಬಸವಲಿಂಗಾಯನಮಃ ಓಂ” ಎಂಬುದು ಎಲ್ಲ ಕ್ರಿಯಸ್ಥರಿಗೂ ಮಾರ್ಗದರ್ಶಕವಾದ ತಾರಕ ಮಂತ್ರವಾಗಿದೆ. ಈ ಸಂಗತಿಯು ಎಲ್ಲ ಲಿಂಗಾಂಗಿಗಳಿಗೂ ಅನುಭವದ ಮಾತಲ್ಲವೇ? ಶಿವಾನುಭವ ಸಾಧಕರೆಲ್ಲರೂ ನಿತ್ಯ ಒಳ್ಳೇ ಭಕ್ತಿಯಿಂದ ಆದರ್ಶ ಮೂರ್ತಿಯ ನಾಮವನ್ನು “ಬಸವಾ, ಬಸವಾ” ಎಂದು ಆದರಪೂರ್ವಕವಾಗಿ ಧ್ಯಾನಿಸ

ವಮು ಸರ್ವತ್ರದಲ್ಲಿ ಸದಾ ಕಂಡುಬರುವದಿಲ್ಲವೇ ? ಅದೂ ಅಲ್ಲದೆ ಅಷ್ಟಾ
ವರಣಗಳಲ್ಲಿ ಬಹು ಮಹತ್ವವಾದ ಪಾದೋದಕವು ನಿರ್ಮಾಣವಾಗಲಿಕ್ಕೆ
"ಬಸವ" ಮಂತ್ರವು ಅವಶ್ಯವಾದದ್ದಲ್ಲವೆ ? ಹಾಗೂ ವೀರಶೈವ ಪರ, ಎಲ್ಲ
ಗ್ರಂಥಗಳ ಆರಂಭದಲ್ಲಿ "ಶ್ರೀ ಗುರು ಬಸವಲಿಂಗಾಯನಮಃ" ಎಂಬ
ಗುರುಧ್ಯಾನ ಮಂತ್ರವು ಕಂಡುಬರುವದಿಲ್ಲವೆ ? ಈ ಎಲ್ಲ ಸಂಗತಿಗಳು
ಅಥವಾ ನಿದರ್ಶನಗಳು ಬಸವೇಶ್ವರರು ಮಂತ್ರಮೂರ್ತಿಯಾದ ಆದರ್ಶ
ಆದಿದೇಶಿಕರು ಅರ್ಥಾತ್ ಉಪದೇಶಿಕರು ಇಲ್ಲವೆ ಮೂಲ ಗುರುಗಳು
ಆಗಿರುವರೆಂದು ನಿಶ್ಚಯವಾಗಿ ನಿರ್ಧಾರವಾಗುವದಿಲ್ಲವೆ ? ಹೀಗೆ ಬಸವಣ್ಣ
ನವರು ಆದರ್ಶ ಅನುಕರಣೀಯ ಗುರುಮೂರ್ತಿಯಾಗಲಿಕ್ಕೆ ಅಕ್ಕಮಹಾ
ದೇವಿಯು ಅಂದ ವಚನದಂತೆ ಬಸವಣ್ಣನವರು [illegible] ಶೀಲ ಅಥವಾ
ಆಚಾರವುಳ್ಳ ಮಹಾನುಭಾವಿಗಳಿದ್ದದ್ದೇ ಮುಖ್ಯ ಕಾರಣವಲ್ಲವೆ ? ಮತ್ತು
ಬಸವಣ್ಣನವರು ಭಕ್ತಿಭಂಡಾರಿಯಾಗಿ, ಬಹುಕಾಲದಿಂದ ಅಸ್ತಿತ್ವದಲ್ಲಿದ್ದ
ಸ್ಥಾವರಪೂಜೆ, ವರ್ಣ, ಇಲ್ಲವೆ ಜಾತಿಭೇದಗಳಿಂದ ಉಪಲಕ್ಷಿತವಾದ
ಶೈವ ಧರ್ಮವನ್ನು ಖಂಡಿಸಿ, ಜಂಗಮ ಪೂಜೆ, ಸಮತಾಭಾವದ ಸಮಾಜ
ರಚನೆ, ತಾನು ಭಕ್ತ ಉಳಿದ ಲಿಂಗಾಂಗಿಗಳೆಲ್ಲರೂ ಜಂಗಮರೆಂಬ ಭಾವ
ನೆಯೇ ಮುಖ್ಯ ಲಕ್ಷಣವುಳ್ಳ ವೀರಶೈವ ಅಥವಾ ಲಿಂಗಾಂಗಿ ಧರ್ಮದ
ಸಂಪ್ರದಾಯ ಪ್ರವರ್ತಕರಾಗಿ ಶಿವಭಕ್ತರಾದ ಶಿವಶರಣರಿಗೆಲ್ಲ ಪ್ರಮಥ
ಪುಂಗವರಾದ ಸಂಗತಿಯು ಸರ್ವಸಾಮಾನ್ಯವಾಗಿಲ್ಲವೆ ? ಭಕ್ತಿ ವರ್ತನೆಗೆ
ಮೂಲಪುರುಷರಾಗಿ ಪೂರ್ವಾಚಾರ್ಯ ಸಂಗನಬಸವಣ್ಣನವರೆಂದೂ,
ದ್ವಿತೀಯ ಶಂಭುವೆಂದೂ, ಮಂತ್ರಮೂರ್ತಿಯೆಂದೂ, ಧರ್ಮ ಸ್ವರೂಪಿ
ಯೆಂದೂ, ಎಲ್ಲ ಲಿಂಗಾಂಗಿಗಳೂ ನೆರೆನಂಬಿ ಬಸವಾದಿ ಪ್ರಮಥರ ಅನು
ಯಾಯಿಗಳಾಗಿಲ್ಲವೆ ? ಈ ಸಂಗತಿಗನುಸರಿಸಿ "ಅನಾದಿ ವೀರಶೈವ ಸಂಗ್ರಹ"
ವೆಂಬ ಗ್ರಂಥದಲ್ಲಿ ಚತುರಾಚಾರ್ಯರು ಬಸವೇಶ್ವರ ದೇವರನ್ನು ಪೂರ್ವಾ
ಚಾರ್ಯರೆಂದು ಇಟ್ಟುಕೊಂಡು ಅವರ ಸಂಪ್ರದಾಯವನ್ನು ಮುಂದುವರಿ
ಸಲು ಅವರ ಅನುಯಾಯಿಗಳಾಗಿ ವರ್ತಿಸಿದಬಗ್ಗೆ ಉಲ್ಲೇಖವುಂಟು.

ಬಹುದಿನಗಳ ತರುವಾಯ ಬಸವೇಶ್ವರ ದೇವರ ಬದಲು ವಿಶ್ವಾ
ರಾಧ್ಯರೆಂಬ ಐದನೆಯ ಆಚಾರ್ಯರನ್ನು ಕೂಡಿಕೊಂಡರೆಂದು ಪಂಚ
ಬ್ರಹ್ಮೋದಯವೆಂಬ ಗ್ರಂಥವು ಪ್ರತಿಪಾದಿಸುತ್ತದೆ. ಈ ಪ್ರಕಾರ ಪಂಚಾ

ಆಚಾರ್ಯರು ಬಸವಾದಿ ಪ್ರಮಥರ ಅನುಯಾಯಿಗಳಿದ್ದಾಗ್ಯೂ ಪ್ರಮಥರ ಜಾತಿಭೇದ ವರ್ಗಭೇದವಿಲ್ಲದ ಸಮತಾಭಾವದ ಸಮಾಜ ರಚನೆಯನ್ನು ಬಿಟ್ಟು ಭಕ್ತ ಮಹೇಶ್ವರ ಮುಂತಾದ ಕ್ರಮಸಾಧನ ಸೋಪಾನಗಳನ್ನು ಭಕ್ತ ಮಹೇಶ್ವರ ವರ್ಗಗಳೆಂದು ಜನನದಿಂದುಂಟಾಗುವ ವರ್ಗಗಳೆಂದು ರೂಢಿಗೈಯ್ಯಲು ಪ್ರಯತ್ನಿಸಿದ್ದಾರೆ.

ಬಸವಾದಿ ಶಿವಶರಣರು ಮಾತ್ರ ಸಮತಾವಾದಿಗಳು, ಜಾತಿಗಳನ್ನಾಗಲಿ, ವರ್ಗಗಳನ್ನಾಗಲಿ ಮನ್ನಿಸುವದಿಲ್ಲ. ಮತ್ತು ಎಲ್ಲ ಭಕ್ತರೂ ಭಕ್ತಿಯು ಜ್ಞಾನಯುಕ್ತವಾಗುತ್ತ ಬೆಳೆದಂತೆ, ಷಟ್‌ಸ್ಥಲಗಳನ್ನು ಅಳವಡಿಸಿಕೊಂಡು ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಪಡೆಯಲು ಯಾವ ಅಭ್ಯಂತರವೂ ಇಲ್ಲವೆಂದು ಪ್ರತಿಪಾದಿಸುತ್ತಾರೆ. ಆದರೆ ಪ್ರಮಥರ ಅನುಯಾಯಿಗಳೂ ಆದ ಆಚಾರ್ಯರು ಪ್ರಮಥರಿಂದ ತೆಗೆದುಹಾಕಲ್ಪಟ್ಟ ವರ್ಣ, ಆಶ್ರಮ ಜಾತಿಗಳನ್ನು ಪುನಃ ಪ್ರತಿಪಾದಿಸತೊಡಗಿ ಸಮಾಜದಲ್ಲಿರುವ ಕಾಯಕಗಳನ್ನೆಲ್ಲ ಜಾತಿಗಳೆಂದು ಶೈವ ಪದ್ಧತಿಯನ್ನು ಪುನಃ ರೂಢಿಗೈಯ್ಯಹತ್ತಿದ್ದಾರೆ. ಇದರ ಪರಿಣಾಮವಾಗಿ ವಿಶ್ವಧರ್ಮವಾಗುವ ಶ್ರೇಷ್ಠತೆಯುಳ್ಳ ವೀರಶೈವ ಧರ್ಮವನ್ನು ಪುನಃ ಸಂಕುಚಿತ ಭೇದಭಾವನೆಯುಳ್ಳ ಶೈವ ಧರ್ಮವನ್ನಾಗಿ ಮಾರ್ಪಡಿಸುವದು ಎಷ್ಟು ಹೀನವಾಗಿದೆ? ಬಸವಾದಿ ಪ್ರಮಥರ ಸಮತಾಭಾವದ ಸಮಾಜ ರಚನೆಯಿಂದ ವೀರಶೈವ ಧರ್ಮಕ್ಕೆ ಬಂದ ಶ್ರೇಷ್ಠತೆಯು ಆಚಾರ್ಯರಿಂದ ಪ್ರತಿಪಾದಿಸಲ್ಪಡುವ ವರ್ಗಭಾವನೆ, ಜಾತಿಭಾವನೆಗಳಿಂದ ಸ್ಪಷ್ಟವಾಗಿ ಅನುಕರಿಸಲು ಯೋಗ್ಯವಲ್ಲದ ಹೀನವಾದ ಶೈವಧರ್ಮವಾಗುವದಿಲ್ಲವೆ? ಆದ್ದರಿಂದ ಬಸವಾದಿ ಶಿವಶರಣರು ತಮ್ಮ ವಚನಗ್ರಂಥಗಳಲ್ಲಿ ಅನುಭವದಿಂದ ನುಡಿದ ಆಚಾರ ವಿಚಾರಗಳು ಎಲ್ಲ ಲಿಂಗಾಂಗಿಗಳಿಂದಲೂ ಅನುಕರಿಸಲ್ಪಡಲು ಯೋಗ್ಯವಾಗಿವೆಂದು ಹೇಳಬೇಕೇ? ಶಿವಶರಣರು ನುಡಿದ ಆಚಾರ ವಿಚಾರಗಳನ್ನು ಕೆಲಮಟ್ಟಿಗೆ ಈ ಕೆಳಗೆ ಕೊಡಲಾಗಿದೆ.

ದೇವ ಸಹಿತ ಭಕ್ತರು ಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡೆನಾದಡೆ,
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ತಲೆದಂಡ ಕೂಡಲ ಸಂಗಮ ದೇವಾ !

ಭಕ್ತರಲ್ಲಿ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ ।
ಆವ ಕುಲವಾದಡೇನು ಶಿವಲಿಂಗವಿದ್ದವನೇ ಕುಲಜನು
ಭಕ್ತನಾದಡೆ ಕಿಂಕರರ ಕಿಂಕರನಾಗಿರಬೇಕು
ಮಹೇಶ್ವರನಾದಡೆ ಆದಿ ಅನಾದಿಯ ಅರಿದಿರಬೇಕು
ಪ್ರಸಾದಿಯಾದೊಡೆ ಒಡಲೋಗಣ
ದುರ್ಗುಣವಿರಹಿತನಾಗಿರಬೇಕು
ಪ್ರಾಣಲಿಂಗಿಯಾದಡೆ ಬಾಹ್ಯಾಚಾರವಿಲ್ಲದಿರಬೇಕು
ಶರಣನಾದಡೆ ನಿಸ್ಸಂಗಿಯಾಗಿರಬೇಕು.
ಐಕ್ಯನಾದಡೆ ಬಯಲು ಬಯಲಾಗಬೇಕು ।

ಆಚಾರಗಳ ವಿವರ:— ಶಿವಾಚಾರ ಲಿಂಗವಂತರೆಲ್ಲರೂ ಸರಿಸಮಾನರೆಂದು ಭಾವಿಸಿ ಪ್ರತಿಒಬ್ಬನೂ ಅನ್ಯೋನ್ಯವಾಗಿ ಶಿವಸ್ವರೂಪವನ್ನೇ ಕಂಡು ಆಚರಿಸುವದೇ ಕ್ರಮವಯ್ಯ.

ಲಿಂಗಾಚಾರ:— ತನ್ನ ಅರುಹಿನ ಕುರುಹೇ ಇಷ್ಟಲಿಂಗವಾದ್ದರಿಂ ಲಿಂಗಾಂಗಿಯು ತನ್ನ ಇಷ್ಟಲಿಂಗವನ್ನು ಬಿಟ್ಟು ಅನ್ಯ ದೈವವನ್ನು ಪೂಜಿಸಲಾಗದಯ್ಯ. ತನ್ನೊಳಗಿಹ ಜ್ಞಾನಕಳೆಯನ್ನು ಲಕ್ಷಿಸಿ ಜ್ಞಾನಯುಕ್ತನಾಗುವದೇ ಲಿಂಗ ಪೂಜಿಸಿ ಲಿಂಗವಾಗುವ ಪರಿ ನೋಡಾ.

ಭೃತ್ಯಾಚಾರ:— ತಾನು ಭಕ್ತ ಉಳಿದ ಲಿಂಗಾಂಗಿಗಳೆಲ್ಲ ಜಂಗಮವೆಂದು ತಿಳಿದು ಅದರಂತೆ ಆಚರಿಸುವದೇ ಭೃತ್ಯಾಚಾರ ನೋಡಾ.

ಅಷ್ಟಾವರಣ ಬಳಕೆಯಲ್ಲಿ ಇದ್ದಲ್ಲಿ ಕಾಯಕ ನೋಡದೆ ಉದ್ಯೋಗದ ಮೇಲಿಂದ ಜಾತಿಯು ಕಲ್ಪನೆಯಾಗಿರುವದೆಂದು ತಿಳಿದು ಲಗ್ನ ಕನ್ಯೆ ಕೊಳುಕೊಡೆಯ ಲಗ್ನ ವ್ಯವಹಾರವನ್ನು ನಿರಾತಂಕವಾಗಿ ಮಾಡುವದಯ್ಯ.

ಸರ್ವರು ಜ್ಞಾನದಿಂದ ಜಂಗಮವಾಗಿಹರಲ್ಲದೆ ಜಾತಿ ಮತ ಪಂಥಗಳಿಂದಲ್ಲ ನೋಡಾ. ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ ಜೇಡರ ದಾಸಯ್ಯ ಮುಂತಾದವರು ಜ್ಞಾನದಿಂದ ಜಂಗಮವಾದರು ಅವರ ಗಣಂಗಳಾದುದು ಪುಸಿಯೇನಯ್ಯಾ ?

ಪಂಚಾಚಾರ್ಯರು ಲಿಂಗೋದ್ಭವರೆಂಬರಯ್ಯಾ ಗುರುಕರಜಾತರು ಲಿಂಗಾಂಗಿಗಳೆಲ್ಲ ಲಿಂಗೋದ್ಭವರಲ್ಲವೆ ? “ ಲಿಂಗಮಧ್ಯೆ ಜಗತ್ಸರ್ವಂ

ಎಂಬ ಮತಾನುಸಾರ, ಸಕಲ ಸಚರಾಚರ ಪ್ರಾಣಿಗಳು ಲಿಂಗೋದ್ಭವ ನೋಡಾ.

ಅಯ್ಯಾ ಪಂಚಾಚಾರ್ಯ, ಪಂಚಾಚಾರ್ಯರ್, ಎಂಬರಯ್ಯಾ. ಆಚಾರವೇ ಲಿಂಗ, ಆಚಾರದ ಅರಿವೇ ಜಂಗಮವೆಂಬ ತತ್ವವರಿವಡೆ ಪಂಚಾಚಾರ್ಯ ನೋಡಾ.

"ಆಚಾರಃ ಪ್ರಥಮೋ ಧರ್ಮ" ಎಂಬಂತೆ ಧರ್ಮಕ್ಕೆ ಮೊದಲು ಆಚಾರವೇ ಮುಖ್ಯ ಕಾರಣವಾದ್ದರಿಂದ, ಪಂಚ ಆಚಾರಂಗಳಾದ ಲಿಂಗಾಚಾರ, ಶಿವಾಚಾರ, ಸದಾಚಾರ, ನಿತ್ಯಾಚಾರ, ಭೃತ್ಯಾಚಾರಗಳನ್ನು ಪಾಲಿಸುತಿಪ್ಪಾತನೆ ಪಂಚಾಚಾರ್ಯ ನೋಡಯ್ಯಾ.

ಸಂಕ್ಷಿಪ್ತವಾಗಿ ಸಮಾರೋಪ ಮಾಡುವದಾದರೆ ವೀರಶೈವ ಲಿಂಗಾಂಗಿ ಧರ್ಮದ ಸಂಪ್ರದಾಯ ಪ್ರವರ್ತಕರೆಂದರೆ ಭಕ್ತಿಭಾಂಡಾರಿ ದ್ವಿತೀಯ ಶಂಭುವಾದ ಪೂರ್ವಾಚಾರ್ಯ ಬಸವೇಶ್ವರ ದೇವರು.

ಧರ್ಮದ ಸಮಾಜರಚನೆಯೆಂದರೆ ಜಾತಿಭೇದ ವರ್ಗಭೇದವಿಲ್ಲದ ಸಮತಾಭಾವದ ತಳಹದಿಯಮೇಲೆ ರಚಿಸಿದ ಸಮಾಜವು. ಗುರುವೆಂದರೆ ಲಿಂಗದ ನೆಲೆಕಲೆಯನ್ನು ತೋರಿಸುವಾತನು. ಜಂಗಮವೆಂದರೆ ಆಚಾರದ ಅರಿವನ್ನು ಇಲ್ಲವೆ ವಿಚಾರವನ್ನು ತಿಳಿಸಿಕೊಡುವಾತನು.

ಧರ್ಮದ ಮುಖ್ಯ ಆಚಾರಗಳಾದ ಸದಾಚಾರ, ಲಿಂಗಾಚಾರ, ಶಿವಾಚಾರ, ನಿತ್ಯಾಚಾರ ಹಾಗು ಭೃತ್ಯಾಚಾರ ಇವುಗಳನ್ನು ನಿತ್ಯ ಪಾಲಿಸುವದು.

ಅಷ್ಟಾವರಣಗಳು ಬಹಿರಂಗದ ಕುರುಹುಗಳಾಗಿದ್ದು, ಅಂತರಂಗದಲ್ಲಿ ಅವುಗಳ ಆಯುತವನ್ನುಂಟುಮಾಡಿಕೊಳ್ಳತಕ್ಕದ್ದು. ಅವುಗಳ ತತ್ವಗಳನ್ನು ಅರಿತು ವ್ಯೈಕರಿ ಮಾಡಿಕೊಳ್ಳತಕ್ಕದ್ದು.

ಷಟ್‌ಸ್ಥಲಗಳಾದ ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಇವು ಸಾಧನ ಸೋಪಾನಗಳಂತಿದ್ದು ಶಿವಭಕ್ತಿಯು ಜ್ಞಾನಯುಕ್ತವಾಗಿ ಬೆಳೆದಂತೆ ಶ್ರದ್ಧಾ ನಿಷ್ಠಾ, ಅವಧಾನ, ಅನುಭವ, ಆನಂದ, ಸಾಮರಸ್ಯಮಯುವಾಗಿ ಬೆಳೆದಂತೆ ಭಕ್ತನನ್ನು ಮಹಾ ಶಿವಾನುಭಾವಿಯನ್ನಾಗಿ ಪರಿವರ್ತಿಸುವದೇ ಧರ್ಮದ ಅಂತಿಮ ಧ್ಯೇಯವಾಗಿದೆ.

---

# ಲಿಂಗ ಅಥವಾ ಶಿವತತ್ವವು.

(ಲೇಖಕರು:— ಪ. ಬೋ. ಸು. ಕುಂದರಗಿ ಶಾಸ್ತ್ರಿಗಳು ಮುಕ್ಕಾಂ-ಬಳ್ಳಾರಿ)

---

ಶರಣರ ಪ್ರತಿ ಸೂಕ್ತಿಗಳೂ ಸೂತ್ರರೂಪ ಅಂದರೆ ವಿಶಾಲಾರ್ಥ ಗರ್ಭಿತವಾಗಿವೆ. ಇಂತಹ ಕೆಲಸೂತ್ರಗಳಿಂದ ತಯಾರಿಸಿದ ಮಾಲೆಗಳೇ ವಚನಗಳು.

"ಶರಣರು ಮನವೆರೆದು ಮಾತನಾಡಿದರೆ ಲಿಂಗವ ಕಾಣಬಹುದು."

ಶಿವಶರಣರು ಪ್ರಸನ್ನ ಚಿತ್ತದಿಂದಿರುವಾಗ ಎವೆ ಬಿಚ್ಚಿ ನುಡಿದ ನುಡಿಯಿಂದ ಅಂದರೆ ತೃಪ್ತನಾದವನ ತೇಗಿನಂತೆ ಶಿವಾನುಭವ ತೃಪ್ತ ಶರಣರಿಂದ ಹೊರಟ ನಿರಹಂತೆಯುದಯದ ಸೂಳ್ನುಡಿ (ಘಟ್ಟಿಯಾದ ವೈಖರಿ ನುಡಿ) ಯಿಂದ ಲಿಂಗದ ಅನುಭಾವವು ಸಿದ್ಧಿಸಬಹುದು ಎಂಬ ಮಾತನ್ನೇ ಇಲ್ಲಿ ಪ್ರಮಾಣ್ಯವಾಗಿ ಅಂಗೀಕರಿಸಿ 'ಲಿಂಗ' ವಿಚಾರವನ್ನು ಸ್ಪಷ್ಟವಾಗಿ ಬಿಂಬಿಸುವ ಪಂಚಸೂತ್ರೀಕೃತ ಲಿಂಗದಂತಿರುವ ಪಂಚಸೂತ್ರಾನ್ವಿತವಾದ ಒಂದು ಮಾಲೆ (ವಚನ) ಇದು. ಲಿಂಗ ಭಕ್ತರೆಲ್ಲರೂ ಇವನ್ನು ಲಿಂಗಾರ್ಪಿತ ಮಾಡಿಕೊಳ್ಳಲು ಯೋಗ್ಯವಾಗಿದೆ.

ಅರಸು— ಅರಸಿಯರು ಹೆತ್ತ ಅರಸು ಚಿನ್ಹಾಂಕಿತವುಳ್ಳ ಮಗುವನ್ನು ಆಡಿಸಿ ಮುದ್ದಿಟ್ಟು ಸಂತೋಷಪಡುವ ರಾಣಿವಾಸದ ದಾದಿಯು ಸೊಬಗು ತನಗೊಮ್ಮೆಯಾದರೂ ದೊರಕೀತೆಂಬ ಆಶೆಯಿಂದಿರುವ ದಾದಿಯ ದಾಸನಾಗಿರುವ ಭಾಗ್ಯವನ್ನು

"ತುಮಚ್ಯಾ ದಾಸೀಚಾ ದಾಸ ಕರೋನಿಯಾ ಠೇವಾ"

ನಿಮ್ಮ ದಾಸಿಯ ದಾಸನನ್ನಾಗಿ ಮಾಡಿ ಇಟ್ಟುಕೊಳ್ಳಿರಿ ಎಂಬ ಮಹಾರಾಷ್ಟ್ರೀಯ ಸಂತ ತುಕಾರಾಮರ ಉಕ್ತಿಯಂತೆ ಪರಶಿವನಿಗಭಿನ್ನರಾದ ಶರಣರು ಕರುಣಿಸಿದರೆ ಸಾಕು. ಲೇಖಕನು ಕೃತಾರ್ಥನಾಗುವನು.

**ವಚನ:**— " ನಿಜವಸ್ತು ಒಂದೇ, ಎರಡಾಗಬಲ್ಲುವದೊಂದೇ, ಬೇರೆ ತೋರಬಲ್ಲುದದೊಂದೇ, ತನ್ನ ಮರವೆಯ ಬಲ್ಲುದದೊಂದೇ, ತಾನಲ್ಲದನ್ಯ ವಿಲ್ಲಂಬರಿವು ತಾನೇ ಸಿಮ್ಮಲಿಗೆಯ ಚನ್ನರಾಮಾ.

ಅರಸು ಶರಣರಾದ ಚಂದಿಮರಸರ ಈ ವಚನದ ಅರ್ಥವು ಸರಳವಾಗಿದೆ. ಆದರೂ ಇದೊಂದೇ ವಚನದಲ್ಲಿ ವಿಶ್ವದ ಎಲ್ಲ ಜ್ಞಾನ ಭಂಡಾರವನ್ನು ತೋರುವ ಸಾಮರ್ಥ್ಯವಿದೆ. ಈ ರೀತಿ ಸುಗಮವೂ ದುರ್ಲಭವೂ ಆದ ವಚನ ತತ್ವದ ಜ್ಞಾನವು ಆಗಬೇಕಾದರೆ 'ಅದು ತನ್ನ ಮಹಾಕಾಲಕ್ಕಲ್ಲದೆ' ಎಂಬ ಅಕ್ಕಮಹದೇವಿಯ ನುಡಿಗನುಸರಿಸಿ ಅನಂತ ಜನ್ಮಗಳಲ್ಲಿ ಅನಂತ ಕಾಲ ಆಚರಿಸಿದ ಶಿವಾರ್ಚನೆ ಶಿವಸ್ಮರಣೆ ಶಿವಧ್ಯಾನಗಳಿಂದ, ಶ್ರವಣ ಮನನ ನಿಧಿಧ್ಯಾಸನಾದಿ ಜಿಜ್ಞಾಸು ಮಾರ್ಗಗಳಿಂದ ನಿರೀಕ್ಷೆಯಲ್ಲಿದ್ದ ಪುಣ್ಯ-ಪರ್ವಕಾಲ ಒದಗದೆ, ಹಾಗೂ ಅದಕ್ಕನುಸರಿಸಿ ' ಒಲವಿನ ದಯದ ಚಿತ್ತವಿಡಿದಂಗಲ್ಲದೆ ' ಶಿವನ ದಯಾದೃಷ್ಟಿಯು ತನ್ನ ಮೇಲೆ ಬೀಳದೆ ' ಶಿವತತ್ವ ಸಾಂಗತ್ಯವಾಗದು ' ಎಂಬ ಬಸವಣ್ಣನವರ ಉಕ್ತಿಯಂತೆ ಮೇಲಿನ ವಚನತತ್ವದ ಜ್ಞಾನವು ತನಗೆ ಅನುಭವಕ್ಕೆ ಬರದು.

ಪ್ರತಿ ಜೀವನೂ ಲಿಂಗ ಪಡವಿಗೆ ಅರ್ಹನು.
" ಅಮಿತಿ ಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ "

ಅನಾ ಇತಿ ಬ್ರಹ್ಮ (ಬ್ರುಹತ್ವಾತ ಬ್ರುಂಹಣತ್ವಾಚ್ಚ ಬ್ರಹ್ಮ) ವಿಶಾಲವಾದುದೂ ಆಕರ್ಷಕವಾದುದೂ ಯಾವುದೋ ಅದನ್ನು ' ಬ್ರಹ್ಮ ' ಅಥವಾ ' ಲಿಂಗ ' ಶಬ್ದದಿಂದ ಕರೆಯುವರು. ಇಂತಹ ಲಿಂಗದೆಡೆಗೆ ಧಾವಿಸುವ ಸ್ವಭಾವವುಳ್ಳವನಾದುದರಿಂದ ಜೀವನಿಗೆ ಅಂಗನೆಂಬ ಹೆಸರು ಬಂದಿದೆ. ಜೀವನು ಲಿಂಗಾಭಿಮುಖನಾಗುವುದೇ ತಡ. ಲಿಂಗವು ಜೀವನನ್ನು ಆಕರ್ಷಿಸುವದು. ಲಿಂಗಮುಖನಾಗದಿರುವನಕ ಜೀವಿಯಾಗಿಯೇ ಉಳಿಯುವನು. ಅಂತೆಯೇ ಲಿಂಗವಿಮುಖನನ್ನು ಭವಿಯೆಂದು ಕರೆಯುವ ವಾಡಿಕೆ ಇಂದು. ಲಿಂಗದ ಜಿಜ್ಞಾಸುವೇ ಲಿಂಗಮುಖಿಯು. ಇವನಿಗೆ ಮಾತ್ರ ಲಿಂಗಕೃಪೆಯಿಂದ ಲಿಂಗಾಂಗಿಗಳಾದ ಶರಣರ ನುಡಿಗಡಣಗಳ ಅರ್ಥವು ಅನುಭವಕ್ಕೆ ಬರುವದು. ಆದರಿಂದಲವನ ಭವ ಹಿಂಗುವದು.

ಲಿಂಗರೂಪ ಶಿವನಿಗೆ ಸದ್ಯೋಜಾತ ವಾಮದೇವಾದಿ ಐದು ಮುಖಗಳೆಂದು ಹೇಳುವದಾಗಲಿ, ಪೀಠ ವರ್ತುಳ ಗೋಮುಖಾದಿ ಪಂಚ ಅಂಗಗಳು ಸೂತ್ರಾನ್ವಿತವಾಗಿರ ಬೇಕೆಂಬುದಾಗಲಿ, ಈ ಮಾಲೆಯಲ್ಲಿ ಕಾಣಿಸಿದ ಐವೆಳೆಗಳ ರೂಪಕಾಲಂಕಾರವೆಂದು ಹೇಳಲಭ್ಯಂತರವಿಲ್ಲ. ಈ ಐದು ಎಳೆಗಳು ಯಾವವೆಂದರೆ-

೧ ನಿಜವಸ್ತುವು ಒಂದೆಂಬದು. ೨ ಎರಡಾಗುವತನ ಉಳ್ಳದು ಅದೇ ಎಂಬದು. ೩ ವಿಧವಿಧ ಲೋಕಗಳಿಂದಿರುವುದು ಅದೇ ಎಂಬದು ೪ ತನ್ನ ಮಹಿಮೆಯನರಿಯುವದಾದರೂ ಅದೇ ಎಂಬದು. ೫ ಅ[illegible]ನ್ಯವಾಗಿ ಏನೊಂದಿಲ್ಲವೆಂಬ ಅನುಭೂತಿಯುಳ್ಳುದೂ ಅದೇ ಎಂಬದು ಹೀಗೆ ಐದು. ಇವುಗಳನ್ನು ಒಂದೊಂದಾಗಿ ವಿಮರ್ಶಿಸುವಾ.

ನಿಜವಸ್ತು ಒಂದೇ- ಯಥಾರ್ಥವಾದ ವಸ್ತುವು ಒಂದೇ, ಅದರಿಂದ ಬೇರಾಗಿ ಇನ್ನೊಂದಿಲ್ಲೆಂಬ ಭಾವವು. ಸಮಸ್ತ ಭೇದಾತ್ಮಕ ಸಾಪೇಕ್ಷ ಜ್ಞಾನಗಳು ವಿಶ್ವದ ಕೊನೆಯ ಸತ್ಯದ ಸಂಗಡ ವ್ಯಷ್ಟಿಗತ ಆತ್ಮನ ಏಕತ್ವದ ಅನುಭೂತಿಯಲ್ಲಿ ಕೊನೆಗೊಳ್ಳುವುದು. ಈ ಅನುಭೂತಿಯ ಜ್ಞಾನವೇ ವೇದಾಂತ. ಇಲ್ಲಿ ವೇದ ಶಬ್ದವನ್ನು ಯಾವುದಾದರೊಂದು ಗ್ರಂಥಕ್ಕೆ ಅನ್ವಯಿಸಿ ಬರೆಯಲಿಲ್ಲ. ವೇದ ಶಬ್ದವು ವಿದ್ ತಿಳಿಯುವಿಕೆ ಎಂಬ ಧಾತುವಿನಿಂದ ಉಂಟಾಗಿದೆ. ಇಂಗ್ಲೀಷ ಭಾಷೆಯ ವಿಜ್ಡಮ್ ಶಬ್ದ ಕೂಡಾ ಇದರಿಂದಲೇ ಉಂಟಾಗಿದೆ. ಆದು ಕಾರಣ ಮೇಲೆ ಹೇಳಿದ ಜ್ಞಾನದ ಪೂರ್ತಿಯೇ ವೇದಾಂತವೆಂದು ತಿಳಿಯುವುದು.

'ನಾತಃ ಪರಂ ವೇದಿತವ್ಯಂ ಹಿ ಕಿಂಚಿತ್' ಶ್ವೇ. ಉ. ೧. ೧೧

ಎಂಬ ಉಪನಿಷದ್ವಾಕ್ಯವೂ ಆದರಂತೆಯೇ

'ಯಂ ಜ್ಞಾತ್ವಾನೇಹ ಭೂಯೋಽನ್ಯ ಜ್ಞಾತವ್ಯಮವ ಶಿಷ್ಯತೇ' ಭ. ೧೧.೬

ಎಂಬ ಭಗವದ್ಗೀತೆಯ ವಾಕ್ಯವೂ

ಕ್ರಮವಾಗಿ ಇನ್ನು ಮುಂದೆ ತಿಳಿಯತಕ್ಕುದು ಲೇಶಮಾತ್ರವೂ ಇಲ್ಲದ ವಸ್ತು ಯಾವುದನ್ನು ತಿಳಿದನಂತರ ತಿಳಿಯತಕ್ಕ ಇನ್ನೊಂದು ಉಂಟಾಗದು, ಯಾವ ಜ್ಞಾನವನ್ನು ಬಣ್ಣಿಸಿರುವದೋ ಆದುವೇ ವೇದಾಂತ

ಈ ಜ್ಞಾನದ ಅನುಭೂತಿಯೇ 'ಶಾಂತಂ ಶಿವಮ್ ಅದ್ವೈತವ್' ಎಂಬ ಶಾಂತರೂಪ ಕಲ್ಯಾಣಮಯ ದ್ವಿತೀಯ ತತ್ತ್ವವು. ಇದೇ 'ಶಿವಲಿಂಗವು' ಈ ಮಾತನ್ನು ಶ್ರೀ ಶಿವಯೋಗಿ ಶಿವಾಚಾರ್ಯರು

"ವೇದಾಂತ ವಾಕ್ಯಜಾಂ ವಿದ್ಯಾಂ। ಲಿಂಗಮಾಹು ಸ್ತ್ವಥಾಪರೇ।
ತದ ಸಜ್ಞೇಯ ರೂಪತ್ವಾ। ಲ್ಲಿಂಗಸ್ಯ ಬ್ರಹ್ಮ ರೂಪಿಣಃ ॥

ಸಿ. ಶಿ. ೧೩-೨೬

ಜ್ಞಾನದ ಕೊನೆಯ ಅನುಭಾವದ ವಾಕ್ಯಗಳಿಂದ ದೊರೆಯುವ ಅನುಭೂತಿಯೇ 'ಲಿಂಗ' ವೆಂದು ತಿಳಿ. ಆ ಬ್ರಹ್ಮರೂಪ ಲಿಂಗವೇ ತಿಳಿಯತಕ್ಕ ಪರತತ್ತ್ವವು ಎಂಬುದಾಗಿ ನಿರೂಪಿಸಿದ್ದಾರೆ. ಅದರಂತೆ ಲಿಂಗರೂಪೀ ಶ್ರೀ ತೋಂಟದ ದೇಶಿಕರು.

"ಉಪಮಾತೀತ ಮೆನಿಪ್ಪ ಖಂಡ ನಿಜತೇಜೋ ರೂಪವಾಗಿರ್ಪ
ಸದ್ವಿಮಲ ಜ್ಞಾನ ವಿಶಿಷ್ಟವಾದ ಘನಲಿಂಗಂ"

ಉಪಮೆಗೆ ನಿಲುಕದವಾಗಿಯೂ ಅಖಂಡವಾಗಿಯೂ ಸ್ವಪ್ರಕಾಶರೂಪವಾಗಿಯೂ ನಿರ್ಮಲವಾದ ಅಶೇಷ ಜ್ಞಾನವುಳ್ಳ ಪರತರ ಲಿಂಗವೆಂದು ಬಣ್ಣಿಸಿರುವರು. ಇಂತಹ ಪರತತ್ತ್ವ ರೂಪ 'ಲಿಂಗ' ಯಾವ ವಸ್ತುವು, ವಿಭುವಾಗಿ ನಿತ್ಯವಾಗಿರುವುದರಿಂದ ದೇಶ, ಕಾಲ, ವಸ್ತು ಪರಿಚ್ಛಿನ್ನರಹಿತವಾಗಿದೆ ಮತ್ತು ಅದ್ವಿತೀಯವಾಗಿದೆ ಇದನ್ನು

'ಏಕಂ ಸದ್ವಿಪ್ರಾ ಬಹುಧಾ ವದಂತಿ'

ಅದ್ವಿತೀಯವಾದ ಪರವಸ್ತುವನ್ನು ಅನುಭಾವಿಗಳು ಮಹಾತ್ಮರು ಸಮಯ (ಮತ) ಕ್ಕನುಸರಿಸಿ ವಿಧ ವಿಧದ ನಾಮಗಳಿಂದ ಕರೆಯುತ್ತಾರೆ. ಬ್ರಾಹ್ಮಣರು 'ಬ್ರಹ್ಮ' ವೆಂದು, ಶೈವರು 'ಶಿವ'ನೆಂದು ವೈಷ್ಣವರು 'ವಿಷ್ಣು' ವೆಂದು, ಜೈನರು 'ಅರ್ಹಂತ' ನೆಂದು, ಯಹೂದಿಗಳು 'ಜೇಹೋವಾ' ಎಂದು, ಪಾರ್ಶಿಗಳು 'ಅಹುರಮಜ್ದ' ಎಂದು, ಮುಸಲ್ಮಾನರು 'ಅಲ್ಲಾಹ' ಎಂದು, ವೀರಶೈವರು 'ಲಿಂಗ' ನೆಂದು, ಯಾರು ಯಾವ ಹೆಸರಿನಿಂದ ಕರೆದರೂ ತಾತ್ವಿಕಾರ್ಥದಲ್ಲಿ ಅದೊಂದನ್ನೇ ಭಾವಿಸುವರು.

ಉದಾ:— ‘ ಲಾ ಇಲಾಹ ಇಲ್ಲಿಲ್ಲಾಹ ’

ಲಾ ಇಲಾಹ- ಏನೊಂದೂ ಇಲ್ಲ. (ದೇವ, ಭಕ್ತ, ನಾನು, ನೀನು ಮುಂತಾಗಿ )

ಇಲ್ಲಿಲ್ಲಾಹ-( ಇಂತಪ್ಪ ಸ್ಥಿತಿಯಲ್ಲಿ ) ಒಬ್ಬ( ಜ್ಞಾನ ಮಹಿಮಾವಂತ) ನಿದ್ದಾನೆ.

ಮಹಾತ್ಮಾ ಕಬೀರರು

‘ ಲಾ ಇಲಾಹಕಾ ಆರಸೀ ಇಲ್ಲಿಲ್ಲಾಹೋಸೇ ದೇಖ’ ಅಂದರೆ—ಏನೊಂದೂ ಇಲ್ಲವೆಂಬ ಕನ್ನಡಿಯಲ್ಲಿ ಇರುವನೊಬ್ಬನನ್ನು ಕಾಣು ಎಂಬದಾಗಿ ಹೇಳಿದ್ದಾರೆ. ಈ ಮಾತನ್ನು ಇನ್ನೂ ಸ್ಪಷ್ಟವಾಗಿ ‘ ಅಲ್ಲಮ ’ ಪ್ರಭುಗಳ ವಚನದಲ್ಲಿ ಕಾಣಬಹುದು.

ವಚನ ; “ ಆದಿ ಅನಾದಿ ಇಲ್ಲದಂದು ಹಮ್ಮು ಬಿಮ್ಮುಗಳಿಲ್ಲದಂದು ಶೂನ್ಯ ನಿಃಶೂನ್ಯವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರಾ ಒಬ್ಬನೇ ಇದ್ದಿಯಲ್ಲ ಇಲ್ಲವಂತೆ ”

ಹೀಗೆ ಶೋಧಿಸಲು ಎಲ್ಲರು ಕರೆದ ನಾಮಮಾತ್ರ ಭೇದವನುಳಿದು ಉಳಿಯುವ ನೈಜ ವಸ್ತುವು ಒಂದೇ ಒಂದು. ಅರ್ಥಾತ್ ‘ ಏಕಮೇ ಏವ ದ್ವಿತೀಯಮ್ ’ ಸ್ವಗತ, ಸಜಾತೀಯ ವಿಜಾತೀಯ ಭೇದಗಳಿಂದ ರಹಿತವಾಗಿರುವ ವಸ್ತುತತ್ವವು ಒಂದೇ ಒಂದು, ಅದೇ ಲಿಂಗ ಅಥವಾ ಶಿವತತ್ವವು.

---

# ಜೀವನದ ಅರ್ಪಣ

[ ಲೇಖಕರು:- ಡಾ॥ ಎಸ್. ಜಿ. ಪಾಠಕ್. ವಿಜಾಪೂರ ]

ಸತ್ಯವು ಶ್ರೇಷ್ಠವಾದ ವಸ್ತುವು. ಆ ವಸ್ತುವಿನಲ್ಲಿ ಅನನ್ಯವಾದ ಪ್ರೇಮವನ್ನು ಇಡುವದು ಆಸ್ತಿಕ ಮತವೆನಿಸುತ್ತದೆ. ದೇವನಲ್ಲಿ ಬಲವಾದ ನಂಬಿಕೆಯನ್ನು ಇಡದಿರುವದೇ ಮಾನವನನ್ನು ಅವನತಿಗೆ ಇಳಿಸಿದೆ. ನಿತ್ಯವಾದ ವಸ್ತುವು ದೇವಸ್ವರೂಪವು. ಆ ನಿತ್ಯ ವಸ್ತುವನ್ನು ನಂಬುವದರಿಂದ ಮಾನವನ ಸರ್ವ ಹಿತಸಾಧನೆಗೆ ಕಾರಣವು. ಮಾನವನ ಪ್ರಗತಿ ಪಥಗಳಲ್ಲಿ ಜ್ಞಾನಯೋಗ ಎಂಬುವು ಮುಖ್ಯವಾದವಾಗಿವೆ. ಭೌತಿಕ ವಾದದಲ್ಲಿ ಆಸ್ತಿಕ ಭಾವವುಳ್ಳವರು ಮತ್ತು ಅದರಲ್ಲಿ ಸರ್ವಸ್ವಿಯಾಗಿ ಹೋರಾಡುವವರು ಈ ವಿಶ್ವದಲ್ಲಿ ಉಚ್ಚ ಸ್ಥಾನಮಾನಗಳನ್ನು ಪಡೆಯಬಹುದು. ಆದರೆ ಸತ್ಯ ಜೀವನವು ಅದರಲ್ಲಿ ಪ್ರಾಪ್ತವಾಗುವದಿಲ್ಲ. ಮಾನವನಿಗೆ ಜೀವನದ ಸತ್ಯತೆಯನ್ನೂ ಸಾತ್ವಿಕತೆಯನ್ನೂ ನಿರ್ಮಲತೆಯನ್ನೂ ಪರಿಪೂರ್ಣತೆಯನ್ನೂ ಹೊಂದುವದರಲ್ಲಿ ಶ್ರೇಯಸ್ಸು ಅದೆ. ಆದುದರಿಂದಲೇ ಅನೇಕ ಮಹತ್ಪುರುಷರು ಇಂಥ ಅತಿಮಾನವ ಜೀವನದ ಬಗ್ಗೆ ಸದ್ಬೋಧವನ್ನು ಮಾಡಿ ಬಹುಜನರನ್ನು ಉದ್ಧರಿಸಿದ್ದಾರೆ.

ದೇವಭಕ್ತಿಯಲ್ಲಿ ಕರ್ಮ, ಉಪಾಸನ, ಯೋಗ, ಭಕ್ತಿ, ಜ್ಞಾನ ಮುಂತಾದ ಬೇರೆ ಬೇರೆ ಭಾಗಗಳಾಗಿದ್ದರೂ ಕೂಡ ಅವುಗಳಲ್ಲಿ ಸಮನ್ವಯ ರೀತಿಯಿಂದ ಆಚರಿಸಿದರೆ ಅದು ಸತ್ಯದೆಡೆಗೆ ಒಯ್ಯುತ್ತದೆ. ಅದು ಅನುಯಾಯಿಗಳಿಗೆ ಸಾಧನ ಪಥದ ಮುಖ್ಯ ಮಾರ್ಗವೆಂದು ಹೆಸರುಗೊಳ್ಳುತ್ತಿದೆ.

ಭಗವಾನ್ ಮಹರ್ಷಿ ಶ್ರೀ ಅರವಿಂದರು ಬೋಧಿಸುವ ಅಧ್ಯಾತ್ಮ ಸಾಧನಕ್ಕೆ ಯೋಗವೆಂದು ಕರೆಯಲಾಗಿದೆ. ವೇದಕಾಲದಿಂದಲೂ ಯೋಗದ ಬಗ್ಗೆ ಅನೇಕ ಸಾಧನಗಳು ಪ್ರಚಲಿತವಾಗಿ ಬಂದಿವೆ. ಆಯಾ ಸಾಧನಗಳ ಆಧಾರವಾಗಿ ಮಹರ್ಷಿ ಶ್ರೀ ಅರವಿಂದರು ಆಧುನಿಕ ಕಾಲದಲ್ಲಿ ಯೋಗ ಮಾರ್ಗವನ್ನು ಆಚರಣೆಗೆ ತಂದಿದ್ದಾರೆ. ನೇರವಾಗಿ ಸತ್ಯವನ್ನು ಸಾಧಿಸುವ ಸುಗಮ ಯೋಗವು ಯಾವತ್ತು ಮಾನವರಿಗೆ ಹಿಡಿಸುವಂತಹದು ಇದು

ತ್ತದೆ. ದಿವ್ಯ ಸ್ವರೂಪವಾದ ಸತ್ಯ ವಸ್ತುವನ್ನು ಸುಲಭವಾಗಿ ಸಾಧಿಸುವ ಬಗ್ಗೆ ಈ ಯೋಗದಲ್ಲಿ ದಿವ್ಯ ಬೋಧೆಯು ದೊರೆಯುತ್ತದೆ. ಚಲವಿಚಲವಿರುವ ಚಂಚಲ ಮನಸ್ಸು ಒಂದು ಸ್ತಿಮಿತಕ್ಕೆ ಬಂದು ಮಾನವನಲ್ಲಿ ಪವಿತ್ರತೆಯನ್ನು ಬೆಳೆಸಿ ದಿವ್ಯವಸ್ತುವಿನೆಡೆಗೆ ಶಕ್ತಿಯುತವಾಗಿ ಬೆಳೆಯುವದರಬಗ್ಗೆ ಅದರಲ್ಲಿ ಪೃಥಕ್ ಸಾಧನಗಳಿವೆ. ಆದರಿಂದ ಮಾನವನಲ್ಲಿ ಹೃದಯವು ನಿರ್ಮಲಗೊಂಡು ಸದ್ಭಾವವು ಸ್ಥಾಪಿತವಾಗಿ ಮನಸ್ಸಿನ ಏಕಾಗ್ರತೆಯು ಪ್ರಾಪ್ತವಾಗುವದರಿಂದ ಮಾನವನ ಅಗಮ್ಯ ಗುರಿಗಳೆಲ್ಲ ಅದರಿಂದ ಸಾಧಿಸಲಾಗುತ್ತದೆ.

ಜನತೆಯಲ್ಲಿ ಸತ್ಯ ಶೀಲತ್ವ ಬೆಳೆಯುತ್ತ ಹೋದಂತೆ, ಧರ್ಮಬೋಧದಲ್ಲಿಯೂ ತಾತ್ವಿಕ ವಿಚಾರಗಳ ಬೆಳೆಯಾಗುತ್ತ ಹೋಗುತ್ತದೆ. ಬಹುಜನ ಸಮಾಜದ ಹೃದಯವು ಪರಿಪಕ್ವತೆಗೆ ಬಂದ ಸಮಯದಲ್ಲಿ ಮಹತ್ಪುರುಷರ ಅವತಾರವಾಗುತ್ತದೆ. ಈ ಪ್ರಕಾರ ಧರ್ಮಜಾಗ್ರತೆಯ ಈ ಕಾಲದಲ್ಲಿ ಈ ಯೋಗಸಾಧನೆಯ ಲಾಭವನ್ನು ಪ್ರತಿ ಮಾನವನು ಅನುಸರಿಸಬಹುದೆಂದು ನನ್ನ ಹೃತ್ಪೂರ್ವಕ ಆಸೆ ಇರುತ್ತದೆ. ಮಹರ್ಷಿ ಶ್ರೀ ಅರವಿಂದರ ಯೋಗ, ಅವರಸಾಧನವೆಂಬ ಚಿಕ್ಕ ಹೊತ್ತಿಗೆಗಳು ಈಗಾಗಲೇ ಕನ್ನಡದಲ್ಲಿ ಅನುವಾದಿತವಾಗಿದ್ದು ಅದನ್ನು ಓದುಗರು ಅವಲೋಕಿಸಬೇಕೆಂದು ನನ್ನ ಹೆಬ್ಬಯಿಕೆ ಇದೆ.

ಅರವಿಂದರ ಆಶ್ರಮದ ಗುರಿ, ಅದರ ಉದ್ದೇಶ ಸಾಧನ ಇವುಗಳ ಬಗ್ಗೆ ಕೂಡಾ ಗ್ರಂಥಗಳಿದ್ದು ಅವುಗಳಲ್ಲಿ ಧಾರ್ಮಿಕ ಜೀವನದ ರೀತಿಗಳನ್ನು ಕಂಡುಕೊಳ್ಳಬಹುದು. ಸರ್ವ ಜೀವಿಗಳ ಜೀವನದ ಮಟ್ಟವನ್ನು ಹೊಂದುವ ಕುರಿತು, ಈ ಸಾಧನೆಗಳು ರೂಪುಗೊಂಡಿವೆ. ಮಾನವನಲ್ಲಿ ಇರತಕ್ಕ ವ್ಯಕ್ತಿತ್ವವು ವಿಕಾಸಹೊಂದಿ, ಅತಿ ಮಾನವ ಸ್ಥಿತಿಯನ್ನು ಪಡೆದುದಾದಮೇಲೆ ಈ ವ್ಯಕ್ತಿತ್ವಗಳ ಸರ್ವ ಸಮರ್ಪಣೆಯಲ್ಲಿ ದಿವ್ಯ ಜೀವನವು ಪ್ರಕಟವಾಗುತ್ತದೆ. ಧಾರ್ಮಿಕ ಸಂಸ್ಕಾರವನ್ನು ಕ್ರಮೇಣ ಸಾಧಕನು ಹೊಂದುವದರಿಂದ ಆಯಾ ಮೆಟ್ಟಲಿನ ಸ್ಥಿತಿಗತಿಗಳನ್ನು ಅವನು ಸುಲಭವಾಗಿ ಪಡೆಯುತ್ತಾ ಹೋಗುತ್ತಾನೆ. ಜನಸಾಮಾನ್ಯರಿಗೆ ಕೇವಲ ಸಾತ್ವಿಕತೆಯನ್ನು ಪಡೆಯುವದು ಎಷ್ಟೇ ಕಠಿಣ ಸಾಧನವೆನಿಸಿದರೂ ಇಲ್ಲಿಯ ಸಾಧಕ ಜೀವಿಗಳಿಗೆ ಸಾತ್ವಿಕತನವೇ ಹೃದಯಭೂಮಿಕೆಯಾಗುತ್ತದೆ. ಆಮೇಲೆ ನಿಜಜೀವನವು ಪ್ರಾರಂಭವಾಗುತ್ತದೆ. ಅದಕ್ಕೆ ಉತ್ಕಟ ಇಚ್ಛೆ

ಶ್ರೀಮಾತೆಯ ಆಶೀರ್ವಾದ ಶ್ರೀ ಅರವಿಂದರ ದಿವ್ಯ ಕೃಪಾಶಕ್ತಿ ಇವುಗಳು ಅವಶ್ಯವಾಗಿ ಬೇಕು. ಕಾರಣ ವಾಚಕರು ಮೊದಲು ಯೋಗ ಸಾಧನದಲ್ಲಿಯ ಧ್ಯಾನಯೋಗ, ಪ್ರಾಣಯೋಗ, ಸಮರ್ಪಣೆಯೋಗ, ಆತ್ಮನಿವೇದನೆ ಯೋಗ, ಜ್ಞಾನಯೋಗ, ಪೂರ್ಣಯೋಗ, ಮುಂತಾದ ವಿಶಿಷ್ಟತೆಗಳನ್ನು ಕಂಡುಕೊಳ್ಳಬೇಕು. ಉದ್ದೇಶ, ಸಾಧನ, ಗುರಿಗಳನ್ನು ಚೆನ್ನಾಗಿ ಅರಿತು ಅರಗಿಸಿಕೊಂಡಮೇಲೆ ಅವರು ಸಾಧಕ ಜೀವಿಗಳಾಗಿ ಯೋಗ್ಯ ಫಲಗಳನ್ನು ಹೊಂದುತ್ತಾರೆ.

ವೇದಕಾಲದಿಂದ ಇಲ್ಲಿಯವರೆಗೆ ಬೋಧಿಸಲ್ಪಟ್ಟ ಶುದ್ಧ ಜೀವನದ [illegible]ಳು ಆಧುನಿಕ ಕಾಲದ ಜನತೆಯ ಹೃದಯಕ್ಕೆ ಒಗ್ಗುವಂತೆ ಭಗವಾನ್ ಮಹರ್ಷಿ ಶ್ರೀ ಅರವಿಂದರು ತಾವು ಅನುಭೋಗಿಸಿದ ದಿವ್ಯ ಜ್ಞಾನಯೋಗ ಪ್ರಾಯೋಗಿಕವಾದ ಸಹಜ ಯೋಗಗಳ ಮುಖಾಂತರ ಶುದ್ಧ ಜೀವನದ ಸಂದೇಶಗಳನ್ನು ಬೀರುತ್ತಿದ್ದಾರೆ. ಈ ಸಂದೇಶವೇ ವಿದ್ಯುತ್ ಶಕ್ತಿಯಂತೆ ಜನತೆಯ ಹೃದಯಗಳಲ್ಲೆಲ್ಲ ಸಂಚರಿಸಿ ಅವರನ್ನು ಪರಿವರ್ತಿಸಿ ಉದ್ಧರಿಸುತ್ತದೆ. ಕಾರಣ ಎಲ್ಲರೂ ಅವರ ಅಮರ ತತ್ವದ ಲಾಭವನ್ನು ಹೊಂದಲು ಪ್ರವರ್ತರಾಗುವದು ಉಚಿತವೆಂದು ನಾನು ನಂಬುತ್ತೇನೆ.

---

ಆಶ್ಚರ್ಯಚಕಿತನಾದನು. ಓಲಗದಲ್ಲಿದ್ದ ಜನರು ಜೊಮ್ಮಯ್ಯನ ಮಹಾಮಹಿಮನೆಂದು ಹೊಗಳಹತ್ತಿದರು. ಆಗ ಅರಸನ ಕೋಪವು ಇಳಿಯಿತು. ಲಿಂಗದ ಮಹಾತ್ಮೆಯನ್ನು ಅವನು ತಿಳಿದವನಾದನು.

ಲಿಂಗದಲ್ಲಿ ಇಷ್ಟಲಿಂಗ ಪ್ರಾಣಲಿಂಗ ಎಂಬ ಎರಡು ವಿಧಗಳು. ಭಾವಲಿಂಗವು ಈ ಎರಡಕ್ಕೆ ಚೈತನ್ಯಾತ್ಮಕವಾದದ್ದು ಹೀಗೆ ಷಟ್ಸ್ಥಲ ಶಾಸ್ತ್ರದಲ್ಲಿ ವಿವರಣೆಗಳು ಇರುತ್ತವೆ. ಪ್ರಾಣಲಿಂಗವು ಭಕ್ತನ ಅಂತರಂಗದಲ್ಲಿರುವ ಸೂಕ್ಷ್ಮ ಶರೀರದಲ್ಲಿದ್ದು ಅದರಲ್ಲಿ ಒಂದು ಅದ್ಭುತ ಶಕ್ತಿಯು ಇರುತ್ತದೆ. ಇದು ಮೊದಲು ಗುಪ್ತವಾಗಿದ್ದರೂ ಇಷ್ಟಲಿಂಗ ಸಾಧನೆಯ ಮೂಲಕ ಪ್ರಾಣಲಿಂಗದ ಶಕ್ತಿಯನ್ನು ಪ್ರಕಟಗೊಳಿಸಬಹುದಾಗಿದೆ. ಹೀಗೆ ಈ ಶಕ್ತಿಯು ಪ್ರಕಟವಾದಕೂಡಲೆ ಅದು ಬಾಹ್ಯ ಲಿಂಗದ ಮೇಲೆ ಪರಿಣಾಮ ಮಾಡುತ್ತದೆ. ಆಗ ಅದು ಆ ಬಾಹ್ಯಲಿಂಗವನ್ನು ಬೇಕಾದಕಡೆಗೆ ಸಂಚರಿಸುವಂತೆ ಮಾಡಬಲ್ಲದು. ತೆಲಗು ಜೊಮ್ಮಯ್ಯನು ತನ್ನ ಲಿಂಗ ಶಕ್ತಿಯನ್ನು ಹೀಗೆ ಬೆಳಸಿಕೊಂಡವನಾಗಿದ್ದನು. ಅದರ ಪ್ರಭಾವದಮೂಲಕ ಬಾಹ್ಯಲಿಂಗವು ಅಂತರಿಕ್ಷದಲ್ಲಿ ನಿಂತುಕೊಂಡಿತು. ಹೀಗೆ ಈ ಪವಾಡದ ಅರ್ಥವಾಗಿದೆ.

ಜೊಮ್ಮಯ್ಯನ ಈ ಪವಾಡದಿಂದ ಇಷ್ಟಲಿಂಗ, ಪ್ರಾಣಲಿಂಗ ಇವುಗಳಲ್ಲಿರುವ ಸಂಬಂಧವನ್ನು ನಾವು ಅರಿತುಕೊಳ್ಳಬಹುದಾಗಿದೆ. ಈ ರೀತಿ ಶಿವಶರಣರಲ್ಲಿ ಬಹುಜನರು ಆಚರಿಸಿದವರಿದ್ದಾರೆ. ಕೇಶಿರಾಜನು ಒಂದುದಿನ ನದಿಯ ದಂಡೆಯಲ್ಲಿ ಕುಳಿತು ಲಿಂಗಪೂಜೆಯನ್ನು ಮಾಡುತ್ತಿರುವಾಗ ಅದು ನದಿಯಲ್ಲಿ ಬಿದ್ದಿತು. ಅವನ ಸೇವಕರು ಅದನ್ನು ಹುಡುಕುವದರಲ್ಲಿ ತೊಡಗಿದರು. ಆದರೆ ಕೇಶಿರಾಜನು ತನ್ನ ಪ್ರಾಣಲಿಂಗ ಶಕ್ತಿಯ ದ್ವಾರಾ ಆ ಇಷ್ಟಲಿಂಗವು ತಾನಾಗಿಯೇ ಹೊಳೆಯೊಳಗಿಂದ ತೇಲಿಬಂದು ಅವನ ಹಸ್ತದಲ್ಲಿ ಬಂದು ನಿಂತಿತು.

ಮನುಷ್ಯನು ತನ್ನ ಅಂತಃಶಕ್ತಿಯನ್ನು ಬೆಳಸುವದು ಅವನಿಗೆ ಸಾಧ್ಯವಿದೆ. ಹಿಂದಿನಕಾಲದ ಶಿವಶರಣರು ಈ ಪ್ರಕಾರ ಸಾಧಿಸಿದವರಾಗಿದ್ದರು. ಇದಕ್ಕನುಸರಿಸಿ ಅವರಿಂದ ಅನೇಕ ಪವಾಡಗಳು ಜರಗಿದ್ದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ.

---

F

ಮುಂದೆ ಚನ್ನಬಸವೇಶ್ವರನ ಮತ್ತು ಮಡಿವಾಳಮಾಚಿದೇವನ ಅಪ್ಪಣೆಯಮೇರೆಗೆ ಶರಣರನ್ನು ಕೊಲೆಮಾಡಿದ ಬಿಜ್ಜಳನನ್ನು ಜಗದೇವ ಮಲ್ಲಿಬೊಮ್ಮಣ್ಣಗಳು ವಧಿಸಿದರು. ಇದರಿಂದ ದೇಶದಲ್ಲಿ ಹೋರಾಟಗಳು ನಡೆದವು.

ಆರಂಭದಲ್ಲಿ ಚನ್ನಬಸವೇಶ್ವರ ಮತ್ತು ಮಡಿವಾಳಮಾಚಿದೇವ ಇವರು ಶರಣರಿಗೆ ಮುಂದಾಳುಗಳಾಗಿ ನಿಂತು ಯುದ್ಧಕ್ಕೆ ಅಣಿಯಾದರು. ಈ ಕಾಲದಲ್ಲಿ ಕಿನ್ನರೀ ಬ್ರಹ್ಮಯ್ಯನು ಶಿವಶರಣರನ್ನೊಡಗೊಂಡು ಬಿಜ್ಜಳನ ದಂಡಾಳುಗಳ ಕೂಡ ಹೋರಾಡುತ್ತ ಉಳಿವಿಯ ವರೆಗೂ ಹೋದನು.

ಈ ಯುದ್ಧಗಳು ಈಗಿನ ಬೆಳಗಾವ ಜಿಲ್ಹೆಯಲ್ಲಿಯ ಬೈಲಹೊಂಗಲ ತಾಲೂಕಿನ ಗ್ರಾಮಗಳಾದ ಕಡಕೋಳ, ಸತ್ತಿಗೇರಿ, ತಲ್ಲೂರು, ಸೊದಲೂರು, ಮುರಗೋಡ, ಇಂಚಲ, ಮೂಗಬಸವ, ಸಂಪಗಾವ, ನಾಗಲಾಪುರ ಈ ಗ್ರಾಮಗಳಲ್ಲಿ ಅಥವಾ ಅವುಗಳ ಸುತ್ತಮುತ್ತಲೂ ನಡೆದವು. ಉಭಯ ದಳಗಳು ಬಹು ಘೋರವಾದ ಹೋರಾಟಗಳಲ್ಲಿ ಬಹಳಕಾಲ ತೊಡಗಿದವು. ಕಡೆಗೆ ಕಾಂತವಳ್ಳಿಯಲ್ಲಿ ಉಭಯ ಪಕ್ಷಗಳಲ್ಲಿ ದೊಡ್ಡ ಯುದ್ಧವಾಯಿತು. ಅದರಲ್ಲಿ ಶಿವಶರಣರು ಬಿಜ್ಜಳನ ದಂಡನ್ನು ಹಿಮ್ಮೆಟ್ಟಿಸಿದರು.

ಈ ಕಾಲದಲ್ಲಿ ಸೇನಾನಾಯಕನಾದ ಮಡಿವಾಳ ಮಾಚಿದೇವನು ಮಡಿದುಬಿದ್ದನು. ಅವನ ಸಮಾಧಿಯು ಸೊಗಲ ತೀರ್ಥದ ಪಶ್ಚಿಮಕ್ಕಿದ್ದ 'ಕಾರೀಮನೆ' ಎಂಬಲ್ಲಿ ಈಗಲೂ ಇರುತ್ತದೆಂದು ತಿಳಿಯುತ್ತದೆ. ಆಗ ಶಿವಶರಣರ ಸಂಖ್ಯೆಯು ಅತ್ಯಲ್ಪವಾಗಿದ್ದಿತು. ಆದುದರಿಂದ ಅವರು ಬಹಿರಂಗ ಯುದ್ಧವನ್ನು ತೊರೆದು ಈಗಿನ ಕಾರವಾರ ಜಿಲ್ಲೆಯಲ್ಲಿರುವ ಸುಪಾ, ಮುಂಡಗೋಡ, ಹಲ್ಯಾಳ ಮತ್ತು ಯಲ್ಲಾಪುರ ತಾಲೂಕುಗಳಲ್ಲಿರುವ ಗಾಢವಾದ ಅರಣ್ಯ ಪ್ರದೇಶಗಳನ್ನು ಪ್ರವೇಶಿಸಿ ಅಲ್ಲಿ ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳಬೇಕಾಯಿತು.

ಈ ಕಾಲದಲ್ಲಿ ಕಿನ್ನರೀ ಬ್ರಹ್ಮಯ್ಯನು ಚನ್ನಬಸವೇಶ್ವರನಿಗೆ ಸಹಾಯಕನಾಗಿ ನಿಂತು ವೈರಿಗಳನ್ನು ಹೆಜ್ಜೆ ಹೆಜ್ಜೆಗೆ ಪ್ರತಿಬಂಧಿಸುತ್ತ ಈಗ ಇರುವ ಉಳಿವಿಯ ಗ್ರಾಮದ ವರೆಗೂ ಬಂದನು. ಇದಕ್ಕೆ ಸಮೀಪವಾ

ಗಿರುವ ಕಿನ್ನರೀ ಬ್ರಹ್ಮಯ್ಯನ ಹೊಳೆ ಮತ್ತು ಕಾಳೀನದಿ ಇವುಗಳ ಮಧ್ಯ ಪ್ರದೇಶದಲ್ಲಿ ಮಹಾಮನೆಯ ಬೆಟ್ಟದ ಸಾಲು ಇದ್ದು ಇದನ್ನೇ ಶಿವಶರಣರು ತಮ್ಮ ಆಶ್ರಯ ಸ್ಥಾನವನ್ನಾಗಿ ಮಾಡಿಕೊಂಡರು.

'ಮಹಾಮನೆ'ಯು ಒಂದು ಬಹು ವಿಶಾಲವಾದ ಗುಹೆಯಾಗಿತ್ತು. ಅದು ಒಂದು ಪರ್ವತದ ಕೊನೆಗಿರುವ ಪೊಳ್ಳು ಪ್ರದೇಶವು. ಇದ ಮಗ್ಗಲು ಒಂದು ಹಳ್ಳವು ಇಳಿಜಾರು ಇರುವ ಪ್ರದೇಶದಲ್ಲಿ ಅಲ್ಲ ತಿರುಗಣಿ ಮಡುಗಳಾಗಿ ಹರಿಯುತ್ತ ಗವಿಯ ಮಗ್ಗುಲಿನಿಂದ ರಭಸದಿಂ ಹೋಗುತ್ತದೆ. ಈ ಹಳ್ಳವು ಗವಿಯಿಂದ ೨೦೦-೩೦೦ ಫೂಟುಗಳ ಅಂತರದಲ್ಲಿ ಬರಲು ಅದರ ಪಾತ್ರವನ್ನು ಕಡಿದು ನೀರಿನ ಕೆಲಭಾಗವನ್ನು ಗವಿಯ ಇದಿರಿಗೆ ತಂದು ಬಿಡಲಾಗಿ ಅದು ಗವಿಯೊಳಗೆ ಪ್ರವೇಶಿಸುತ್ತ ಅದು ಅಲ್ಲಿ ಪ್ರವೇಶಿಸಲು ಅದರ ನೀರು ಹೊರಗೆ ಹೋಗುವಂತೆ ಗವಿಯ ಬಲಭಾಗದ ಗೋಡೆಯಲ್ಲಿ ಒಂದು ದೊಡ್ಡ ತೂತನ್ನು ಕೆಡಹಿದ್ದಾ ಈ ತೂತಿನೊಳಗಿಂದಲೇ ಹಳ್ಳವು ಹೊರಬಿದ್ದು ಅದು ಮುಂದೆ ಮು ಪ್ರವಾಹವನ್ನು ಕೂಡುತ್ತದೆ. ಇದನ್ನು ಯೋಜಿಸಿದವನು ಕಿನ್ನರೀ ಬ್ರಹ್ಮಯ್ಯನಾಗಿದ್ದಾನೆ. ಆದ್ದರಿಂದ ಈ ಹಳ್ಳಕ್ಕೆ 'ಕಿನ್ನರೀ ಬ್ರಹ್ಮಯ್ಯ ಹೊಳೆ'! ಎಂಬ ಹೆಸರು ಬಿದ್ದಿದೆ. ಮತ್ತು ಸರಕಾರೀ ನಕಾಶದಲ್ಲಿ ಸ 'ಕಾನೇರಿ ನದಿ' ಎಂದು ಇದಕ್ಕೆ ಹೆಸರು ಇದ್ದುದು ಕಂಡುಬರುತ್ತದೆ.

ಈ ಪ್ರಕಾರ ಈ ಹೋರಾಟದಲ್ಲಿ ಕಿನ್ನರಯ್ಯನು ಈ ಭಾಗದ ಶರಣರ ರಕ್ಷಣೆಗೋಸ್ಕರ ಬಹು ಭದ್ರ ಮಾಡಿಕೊಂಡನು. ಆದರೆ ಇಲ್ಲಿಯು ಕೂಡ ವೈರಿಗಳು ಶಿವಶರಣರನ್ನು ಬೆನ್ನಟ್ಟುವದನ್ನು ಬಿಡಲಿಲ್ಲ. ಉಭಯ ಪಕ್ಷಗಳಲ್ಲಿ ಹೋರಾಟಗಳು ನಡೆದವೆಂಬುದರಲ್ಲಿ ಏನೂ ಸಂದೇಹವಿರದು. ಈ ಕಾಲದಲ್ಲಿ ಶಿವಶರಣರು ಕಡೆಯ ವರೆಗೂ ಕಾದಾಡುತ್ತ ಇಲ್ಲಿಯೆ ದೇಹವಿಟ್ಟಿದ್ದಾರೆಂದು ತೋರುತ್ತದೆ. ಕಿನ್ನರೀ ಬ್ರಹ್ಮಯ್ಯನು ಸಹ ಇಲ್ಲಿಯೆ ಮಡಿದಿದ್ದಾನೆ. ಅವನು ಮಡಿದ ಸ್ಥಾನದಲ್ಲಿ ಒಂದು ಕಲ್ಲನ್ನು ನೆಡಿಸಿದ್ದು ಅದರ ಮೇಲೆ ಸೂರ್ಯ ಚಂದ್ರರ ಚಿಹ್ನಗಳು ಮತ್ತು ಅದರ ಕೆಳಗೆ 'ಕಿನ್ನರಯ್ಯ' ಎಂಬ ಹೆಸರು ಸಹ ಈಗಲೂ ಇದ್ದುದು ಕಂಡು ಬರುತ್ತದೆ. ಇದೇ ಸ್ಥಳದಲ್ಲಿ ಕಿನ್ನರಯ್ಯನು ಹೋರಾಡುತ್ತ ಮಡಿದು ಬಿದ್ದಿದ್ದಾನೆಂದು ನಾವು ಊಹಿಸಬಹುದಾಗಿದೆ.

ಈ ಪ್ರಕಾರ ಕಿನ್ನರಿ ಬ್ರಹ್ಮಯ್ಯನು ತನ್ನ ಧರ್ಮಕ್ಕಾಗಿ ಹೋರಾಡಿದವನಾಗಿದ್ದಾನೆ. ಅವನು ಶಿವಶರಣರಲ್ಲಿ ಅಗ್ರಗಣ್ಯನು, ಒಬ್ಬ ಮಹಾತ್ಮನು. ಅವನು ಶಿವಶರಣರಲ್ಲಿ ಶ್ರೇಷ್ಠ ಪುರುಷನಾಗಿದ್ದಾನೆ. ಅವನು ಕಡೆವರೆಗೆ ಬಸವೇಶ್ವರನ ಅನುಯಾಯಿಯಾಗಿ ಅವನ ತತ್ವಪ್ರಚಾರ ಕಾರ್ಯಗಳಲ್ಲಿ ಬಹು ಮುಖ್ಯ ಭಾಗವನ್ನು ವಹಿಸಿ ಕಡೆಗೆ ತನ್ನ ಪ್ರಾಣವನ್ನೇ ಸಮಾಜಕ್ಕೆ ಅರ್ಪಿಸಿದ್ದಾನೆ.

---

## ಮಡಿವಾಳ ಮಾಚಿದೇವ.

ಮಡಿವಾಳ ಮಾಚಿದೇವನು ಬಸವೇಶ್ವರನಿಗೆ ಸಹಾಯಕನಾಗಿ ಯಾವಾಗಲೂ ಅವನೊಡನೆ ಇದ್ದುಕೊಂಡು ಅವನ ಧರ್ಮೋದ್ಧಾರ ಕಾರ್ಯಗಳಲ್ಲಿ ಮುಖ್ಯ ಸ್ಥಾನವನ್ನು ಪಡೆದವನಾಗಿದ್ದನು. ಅವನ ವಿಷಯವಾಗಿ ಇರುವ ದಂತಕಥೆಯು ಏನೆಂದರೆ— ವೀರಭದ್ರನು ಶಿವನ ಲೋಚನದಿಂದ ಜನಿಸಿ ಶಿವನನ್ನು ತಿರಸ್ಕರಿಸಿ ಯಾವಾಗಲೂ ಕಾರ್ಯಮಾಡುತ್ತಿದ್ದ ದಕ್ಷಬ್ರಹ್ಮನನ್ನು ಸಂಹರಿಸಿದನು. ತರುವಾಯ ನಾರದನು ವೀರಶೈವವು ಮನುಷ್ಯಲೋಕದಲ್ಲಿ ಮಸುಳಿಸಿತೆಂದು ಶಿವನಲ್ಲಿ ಮೊರೆಇಡಲು ಶಿವನು ವೀರಭದ್ರನನ್ನು ಕಂಡು ನೀನು ನರಲೋಕದಲ್ಲಿ ಜನಿಸಿ ಪರವಾದಿಗಳನ್ನು ಸಂಹರಿಸು ಎಂದು ಅಪ್ಪಣೆಯನ್ನಿತ್ತನು. ಆಗ ವೀರಭದ್ರನು ಹಿಪ್ಪರಿಗೆ ಎಂಬ ಪುರದಲ್ಲಿ ಪರ್ವತಯ್ಯನೆಂಬ ಒಬ್ಬ ಮಡಿವಾಳನಿದ್ದು ಅವನಿಗೆ ಮಗನಾಗಿ ಜನಿಸಿದನು. ಈ ಹಿಪ್ಪರಿಗೆಯು ವಿಜಾಪುರ ಪಟ್ಟಣದ ಪೂರ್ವಕ್ಕೆ ಸಿಂದಗಿ ತಾಲೂಕಿನಲ್ಲಿ ೨೨ ಮೈಲುಗಳ ಮೇಲೆ ಇದೆ.

ಮಾಚಿದೇವನು ತನ್ನ ತಂದೆಯಂತೆ ವಸ್ತ್ರಗಳನ್ನು ತೊಳೆಯುವ ಕಾಯಕವನ್ನು ಮಾಡುತ್ತ ಪ್ರಮಥರ ಆಚರಣೆಗೆ ಅನುಕೂಲನಾಗಿ ಶಿವಗೆ ತೆತ್ತಿಗನಾಗಿ ಪ್ರಸಿದ್ಧನಾದನು. ಅವನು ಶಕ್ತಿವಂತನಾಗಿ ತನ್ನ ಆಚರಣೆಯಲ್ಲಿ ಗಣಾಚಾರವನ್ನು ಅನುಸರಿಸುತ್ತ ಬಂದನು.

ಹೀಗಿರುವಲ್ಲಿ ಗ್ರಾಮದಲ್ಲಿ ಚನ್ನಮಲ್ಲಿಕಾರ್ಜುನನೆಂಬ ಮಂತ್ರವಿದ ಶ್ರೇಷ್ಠನು ಇದ್ದು ಅವನಿಂದಲೇ ಮಾಚಿದೇವನು ದೀಕ್ಷಾ ಸಂಸ್ಕಾರವನ್ನು

ಹೊಂದಿದನು. ಪಟ್ಟಣದಲ್ಲಿ ಕಲಿನಾಥನೆಂಬ ಹೆಸರಿನ ಒಂದು ಪ್ರಾಚೀನ ದೇವಾಲಯವಿದ್ದು ಈ ಕಲ್ಲಿನಾಥನೇ ಗುರುಮೂರ್ತಿಯಾಗಿ ಬಂದು ಮಡಿವಾಳ ಮಾಚಿದೇವನಿಗೆ ದೀಕ್ಷೋಪದೇಶ ಮಾಡಿದನೆಂದು ಅನೇಕ ಕಡೆಗೆ ಉಲ್ಲೇಖಗಳಿವೆ. ಹೀಗೆ ಬೇರೆ ಬೇರೆ ಉಲ್ಲೇಖಗಳಿದ್ದರೂ ಮಾಚಿದೇವನು ದೀಕ್ಷಾ ಸಂಸ್ಕಾರವನ್ನು ಹೊಂದಿ ವೀರಶೈವಾಚಾರ ನಿರತನಾಗಿದ್ದನೆಂಬು ದರಲ್ಲಿ ಯಾವ ಮತಭೇದವೂ ಇರುವದಿಲ್ಲ.

ಮಡಿವಾಳ ಮಾಚಿದೇವನು ಚಿಕ್ಕಂದಿನಲ್ಲಿಯೇ ಚನ್ನಾಗಿ ವಿದ್ಯಾಭ್ಯಾಸ ಮಾಡಿ ಷಟ್‌ಸ್ಥಲಶಾಸ್ತ್ರಪಾರಂಗತನೆಂದು ಹೆಸರುಪಡೆದನು. ಅವನು ಸಂಸ್ಕೃತಭಾಷೆಯನ್ನು ಚನ್ನಾಗಿ ತಿಳಿದುಕೊಂಡವನಾಗಿದ್ದನು. ಅವನು ವಚನಕಾರನಿದ್ದಾನೆ. ಅವನು ತನ್ನ ವಚನಗಳನ್ನು ತನ್ನ ಇಷ್ಟದೇವತೆಯಾದ ಕಲ್ಲಿನಾಥನ ಹೆಸರಿನಿಂದ ರಚಿಸಿದ್ದಾನೆ. ಕಲಿದೇವರ ದೇವಾ, ಕಲ್ಲಿನಾಥಾ, ಕಲ್ಲಯ್ಯಾ, ಕಲ್ಲೇಶ್ವರ ಎಂಬುವೇ ಅವನ ವಚನಗಳ ಮುದ್ರಿಕೆಯಾಗಿರುತ್ತದೆ. ಅವನು ಶರಣರ ವಸ್ತ್ರಗಳನ್ನು ಅ ಉ ಮಾ ಕ್ಷರಗಳಿಂದಲೇ ಶುದ್ಧವಿಸಿ ಸ್ವಚ್ಛಮಾಡುತ್ತಿದ್ದನು. ಅವನು ಈ ಪ್ರಣವಾಕ್ಷರಗಳನ್ನು ಉಚ್ಚರಿಸುತ್ತ, ಸೋಹಂ ಭಾವದಿಂದ ಬಟ್ಟೆಯನ್ನು ಎತ್ತಿ ಓಂ ಬುಮಾಉ ಎಂದು ನುಡಿಯುತ್ತ ಬಟ್ಟೆಗಳನ್ನು ತೊಳೆಯುವನು. ಹೀಗೆ ಅವನಿಗೆ ಒಕ್ಕಿ ತೊಳೆಯುವ ಕಾಯಕವು ಲಿಂಗಪೂಜೆಯಾಗಿ ಪರಿಣಮಿಸುತ್ತಿತ್ತು. ಇದೇ ರೀತಿಯಾಗಿ ವೀರಶೈವರಾದವರು ತಮ್ಮ ತಮ್ಮ ಕಾಯಕಗಳನ್ನು ಮಾಡುತ್ತಿರಬೇಕೆಂದು ಪ್ರಮಥರ ಉಕ್ತಿಗಳಿರುತ್ತವೆ. ಇದರಿಂದ ಮಡಿವಾಳ ಮಾಚಿದೇವನಲ್ಲಿ ಒಂದು ಪ್ರಚಂಡ ಮಂತ್ರಶಕ್ತಿಯು ವಾಸವಾಯಿತ್ತೆಂದು ಪ್ರಮಥರಲ್ಲಿ ನಂಬಿಗೆಯುಂಟಾಗಿ ಅವರು ಅವನಲ್ಲಿ ಅತ್ಯಂತ ಭಕ್ತಿ ವಿಶ್ವಾಸಗಳನ್ನಿಡುವವರಾದರು.

ಹೀಗಿರುವಲ್ಲಿ ಬಸವಾದಿ ಪ್ರಮಥರು ಕಲ್ಯಾಣ ಪಟ್ಟಣಕ್ಕೆ ಬಂದು ವಾಸಮಾಡಹತ್ತಿದ್ದಾರೆಂಬ ವಾರ್ತೆಯನ್ನು ಮಡಿವಾಳ ಮಾಚಿದೇವನು ಕೇಳಿ ತಾನೂ ಅವರಲ್ಲಿರಬೇಕೆಂದು ಅಲ್ಲಿಗೆ ಹೊರಡಲುದ್ಯುಕ್ತನಾದನು. ಆಗ ಅವನು ಭಕ್ತ ಜಂಗಮರ ದರ್ಶನವನ್ನು ಶಿವಾನುಭವ ಮಂಟಪದಲ್ಲಿ ಎಂದು ಮಾಡುವೆನೋ ಎಂಬ ಉತ್ಕಟೇಚ್ಛೆಯನ್ನು ತಾಳಿ ಕಲ್ಯಾಣದ ಕಡೆಗೆ ಹೊರಟನು. ಹೀಗೆ ಹಾದೀ ನಡೆಯುತ್ತಿರುವಲ್ಲಿ ಹಾದಿ

ಭೀಮಾನದಿಯು ಅಡ್ಡಗಟ್ಟಿತು. ಅದು ಅಕಾಲವೃಷ್ಟಿಯ ಮೂಲಕ ತುಂಬಿ ಹರಿಯುತ್ತಿತ್ತು. ಆದರೆ ಮಾಚಿದೇವನು ಅಲ್ಲಿ ಹರಿಗೋಲವಿದ್ದದ್ದನ್ನು ಎಷ್ಟುಮಾತ್ರವೂ ಲಕ್ಷಿಸದೆ ಶಿವನನ್ನು ನೆನೆಯುತ್ತ ನದಿಯಲ್ಲಿ ಹೋಗುವಾಗ ಅದರಲ್ಲಿ ಇಬ್ಭಾಗಗಳಾಗಿ ಅದು ಹರಿಯತೊಡಗಿತು. ಹೀಗೆ ಅವನು ನದಿಯನ್ನು ದಾಟಿ ಕಲ್ಯಾಣ ಪಟ್ಟಣಕ್ಕೆ ಬಂದನು.

ಅವನು ಪಟ್ಟಣಕ್ಕೆ ಬಂದಬಳಿಕ ಅವನು ಭಕ್ತರ ಅಂಗವಸ್ತ್ರಗಳನು ತೊಳೆಯುವ ಕಾಯಕವನ್ನೇ ಬಹು ಭಕ್ತಿಪೂರ್ವಕವಾಗಿ ಮಾಡಹತ್ತಿದನು. ಅಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಮಂಟಪದಲ್ಲಿ ಸೇರ್ಪಡೆಯಾಗಿ ಅಲ್ಲಿ ನಡೆಯುತ್ತಿದ್ದ ಸದ್ಗೋಷ್ಠಿಗಳಲ್ಲಿ ವಿಚಾರವಿನಿಮಯ ಮಾಡುವನು. ಅವನು ಅತ್ಯಂತ ಜ್ಞಾನಿಯಾಗಿದ್ದರಿಂದ ಅವನ ವಿಚಾರಗಳನ್ನು ಅಲ್ಲಿ ನೆರೆದ ಶಿವಶರಣರು ಬಹು ವಿಶ್ವಾಸಪೂರ್ವಕವಾಗಿ ಕೇಳುವರು. ಈ ಕಾಲದಲ್ಲಿ ರಾಜಧಾನಿಯಲ್ಲಿ ಯಾವಾಗಲೂ ಧರ್ಮಚರ್ಚೆಗಳು ಜರಗುತ್ತಿದ್ದವು. ಆಗ ತೀಕ್ಷ್ಣ ಮತಭೇದಗಳು ಉಂಟಾಗಿ ಕೋಲಾಹಲಗಳಾಗಲು ಮಡಿವಾಳ ಮಾಚಿದೇವನು ಅವುಗಳಲ್ಲಿ ಅಂಗವಹಿಸಿ ವಿರೋಧಿಗಳ ಸೆಣಸಾಟವನ್ನು ತನ್ನ ವರ್ಚಸ್ಸಿನಿಂದ ನಿಲ್ಲಿಸಿಬಿಡುವನು. ಹೀಗೆ ಮಾಚಿದೇವನು ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನಿಗೆ ಬಲಗಯ್ಯಾಗಿ ಆಚರಿಸುತ್ತ ಪ್ರಭಾವಶಾಲಿ ಎಂದೆನಿಸಿಕೊಂಡನು. ಪಟ್ಟಣದಲ್ಲಿ ಎಲ್ಲಾದರೂ ಮನಸ್ತಾಪಗಳುಂಟಾಗಲು ಬಸವೇಶ್ವರನು ತನ್ನಕೂಡ ಹೋಗುವಾಗಲೂ ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಮೇದರ ಕೇತಯ್ಯ, ಕಿನ್ನರೀ ಬ್ರಹ್ಮಯ್ಯ ಇವರನ್ನು ಕೂಡಿಕೊಂಡು ಆ ಸ್ಥಳಗಳಿಗೆ ಹೋಗಿ ವಿರೋಧ ಭಾವವನ್ನು ದೂರಮಾಡಲು ಪ್ರಯತ್ನಿಸುತ್ತ ಇದ್ದನೆಂದು ಐತಿಹ್ಯಗಳಿವೆ. ಹೀಗೆ ಈ ಶಿವಶರಣರು ಕಲ್ಯಾಣ ಪಟ್ಟಣದಲ್ಲಿ ಧರ್ಮವೃದ್ಧಿಯ ಕಾರ್ಯಗಳನ್ನು ಮಾಡುತ್ತ ಕಾಲಕಳೆಯುತ್ತ ಬಂದರು.

ಮಡಿವಾಳ ಮಾಚಿದೇವನಲ್ಲಿ ಅಚಲವಾದ ಭಕ್ತಿಯು ಇದ್ದದರಿಂದ ಅವನು ಮಹೇಶ್ವರ ಸ್ಥಲದವನೆಂದು ವಚನಶಾಸ್ತ್ರದಲ್ಲಿ ಅವನ ಖ್ಯಾತಿಯು ಇದೆ. ಆದರೆ ಅವನು ಶಿವಾನುಭವದ ತತ್ವಗಳನ್ನು ಬಿಟ್ಟು ಅವನು ಅಂಧಶ್ರದ್ಧೆಯಿಂದ ಯಾರಕೂಡವೂ ಹಗೆತನದಿಂದ ವ್ಯವಹರಿಸಿರುವದಿಲ್ಲ. ಅವನು ಒಂದು ವಚನದಲ್ಲಿ ಭವಿಸಂಗವಾವುದೆಂಬುದನ್ನು ಕೆಳಗೆ ಕಾಣಿಸಿದಂತೆ ಹೇಳಿದ್ದಾನೆ.

(೧) ತನಗನ್ಯವಾದುವ ನೋಡಿದಡೆ ಭವಿಸಂಗ. ಸತ್ಯರು ಒಪ್ಪು ದುದನೊಪ್ಪದಿರ್ದಡೆ ಭವಿಸಂಗ. ಮಾಡಿಕೊಂಡ ವ್ರತವ ಮೀರಿದಡೆ ಭವಿ ಸಂಗ. ತಾ ಮಾಡಿದ ಭಕ್ತಿಯನಾಡಿಕೊಂಡಲ್ಲಿ ಭವಿಸಂಗ. ಇಂತಿವನರಿ ದೊಡೆ ಸದ್ಭಕ್ತಿ ಕಲಿದೇವರ ದೇವಾ.

(೨) ಬಹುಜಲನುಂ ಬಿಟ್ಟು ಚಿಲುಮೆಯುಂ ತೆಗೆದರೆ ಅದು ಸೀ ಶುದ್ಧ ಸೌಕರ್ಯವಲ್ಲದೆ ಅದು ಶೀಲವಲ್ಲ. ಉಪ್ಪ ಬಿಟ್ಟು ಸಪ್ಪೆಯ ನುಂಡರೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ. ವ್ರತ ನಿಶ್ಚಯ ವಾದರೆ ಪರಸ್ತ್ರೀ ಪರಧನ ಪರದೂಷಣೆಯನರಿತುಬಿಟ್ಟರೆ ಅರುವತ್ತಾ ವ್ರತಗಳಿಗೆ ಕಡೆ ಎಂದೆ ಕಲಿದೇವರ ದೇವ.

ಅಂದರೆ ಯಾವದು ಯೋಗ್ಯವಾದುದೋ ಅದರಂತೆ ನಡೆಯದಿದ್ದ ವದೇ ಭವಿಸಂಗವೆಂದು, ಮಡಿವಾಳ ಮಾಚಿದೇವನು ಭಾವಿಸುತ್ತಿದ್ದ ನೆಂಬುದು ಈ ವಚನಗಳಿಂದ ಸ್ಪಷ್ಟವಾಗುತ್ತದೆ. ಇಂಥ ವೃತ್ತಿಯೇ ತ್ಯಾಜ್ಯ ವೆಂದು ಅವನು ಭಾವಿಸುತ್ತಿದ್ದನು. ಈ ತೆರದ ವಿಚಾರಗಳಲ್ಲಿ ಧಾರ್ಮಿಕ ಅಂಧ ಶ್ರದ್ಧೆಯು ಇದೆ, ಎಂದು ಹೇಳಲಿಕ್ಕೆ ಬರಲಾರದು. ಹಿಂದಿನ ಕಾಲದಲ್ಲಿ ಈ ರೀತಿ ಬಹುಜನ ಶಿವಶರಣರು ಆಚರಿಸಿದ್ದಾರೆ.

ಬಸವ, ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ, ಜಯದೇವ, ಮಲ್ಲಿ ಬೊಮ್ಮಣ್ಣ, ಕೂಗಿನ ಮಾರಿತಂದೆ, ಕಕ್ಕಯ್ಯ ಮೊದ ಲಾದವರು ಧರ್ಮ ರಕ್ಷಣೆಗಾಗಿ ಈ ಕಾಲಕ್ಕೆ ಶಸ್ತ್ರಹಿಡಿದು ಹೋರಾಡಿದ್ದಾರೆ. ಇದಕ್ಕೋಸ್ಕರ ಅವರು ಧಾರ್ಮಿಕ ಮೂಢ ನಂಬಿಗೆಯುವರು, ಅಂಧ ಶ್ರದ್ಧೆ ಯವರು, ಧರ್ಮಲಂಡರು ಎಂದು ಈಚೆಗೆ ಅನೇಕರು ಹೀಯಾಳಿಸುವ ದುಂಟು. ಆದರೆ ಹೀಗೆ ಹೇಳುವವರು ಸಮಾಜದ ಆಗಿನ ನಿಜಸ್ಥಿತಿಯ ತಿಳುವಳಿಕೆ ಇಲ್ಲದವರೆಂದು ನಾವು ಹೇಳಬೇಕಾಗುತ್ತದೆ. ಒಂದುವೇಳೆ ಶಿವಶರಣರು ಇಂಥ ಕಾಲದಲ್ಲಿ ಹೀಗೆ ಹೋರಾಡದೆ ಹೋಗಿದ್ದರೆ ವೀರಶೈವ ಧರ್ಮವು ನಾಶವಾಗುವ ಪ್ರಸಂಗವು ನಿಶ್ಚಯವಾಗಿ ಬರುತ್ತಿತ್ತು.

ಈ ಪ್ರಕಾರ ಮಡಿವಾಳ ಮಾಚಿದೇವನು ಕಲ್ಯಾಣ ಪಟ್ಟಣಕ್ಕೆ ಬಂದು ಬಟ್ಟೆಒಗೆಯುವ ಕಾಯಕ ಮಾಡುತ್ತ ಶಿವಾನುಭವ ಸಮ್ಮೆ ಷ್ಠಿಯಲ್ಲಿರುತ್ತ ವಚನಗಳನ್ನು ರಚಿಸುತ್ತಾ ಇರುವಲ್ಲಿ ಅವನು ತಾನ

ಹಸನುಮಾಡಿದ ಬಟ್ಟೆಗಳನ್ನು ಬೀದಿಯಲ್ಲಿ ತರುವಾಗ ಓಂ, ಓಂ, ಎಂದು ಗಂಟೆ ಸಾರುತ್ತಿರಲು ಭವಿಗಳು ಅವುಗಳನ್ನು ಮುಟ್ಟದೆ ಕೆಲಕ್ಕೆ ತೊಲಗಿ ಹೋಗುವರು. ಆದರೆ ಒಬ್ಬ ಭವಿಯು ಮಾತ್ರ ದುಷ್ಟಬುದ್ಧಿಯಿಂದ ಆ ಬಟ್ಟೆಗಳನ್ನು ಸಂಧಿಸಲಾಗಿ ಮಡಿವಾಳ ಮಾಚಿದೇವನು ಅವನ ತಲೆಯನ್ನು ಕೂಡಲೆ ಹಾರಿಸಲಾಗಿ ಅವನ ಹೆಣವು ಅಲ್ಲಿಯೇ ನೆಲಕ್ಕೆ ಬಿದ್ದಿತು. ಆಗ ಅವನ ಬಂಧುಗಳು ಬಿಜ್ಜಳನಿಗೆ ಮೊರೆಯಿಡಲು ಬಿಜ್ಜಳನು ಮಡಿವಾಳಯ್ಯನನ್ನು ಕೊಂದುಹಾಕಿರೆಂದು ಆನೆ ಕುದುರೆ ಮೊದಲಾದ ಬಲವನ್ನು ಕಳುಹಲು ಮಡಿವಾಳಯ್ಯನು ಅವುಗಳನ್ನು ಇದಿರಿಸಿ ಅವುಗಳ ಸಂಹಾರ ಮಾಡಿದನು. ಆಗ ಬಿಜ್ಜಳನು ಬಸವಣ್ಣನೊಡನೆ ಅಲ್ಲಿಗೆ ಬಂದು ನಿಜವಾದ ಸಂಗತಿಗಳನ್ನು ತಿಳಿದುಕೊಳ್ಳಲಾಗಿ ತನ್ನ ತಪ್ಪುತಿಳಿದು ಅವನ ಕ್ಷಮೆಯನ್ನು ಕೇಳಿದನು. ಆಗ ಮಡಿವಾಳಯ್ಯನು ಆನೆ, ಕುದುರೆ, ಕಾಲಾಳುಗಳಿಗೆ ಪ್ರಾಣವನ್ನಿತ್ತದ್ದಲ್ಲದೆ, ತಾನು ಕೊಂದುಹಾಕಿದ ಭವಿಗೂ ಕೂಡ ಪ್ರಾಣದಾನ ಮಾಡಿದನು. ಮುಂದೆ ಅವನು ಬಿಜ್ಜಳನಿಗೆ ಅಭಯವನ್ನಿತ್ತು ತಾನು ತನ್ನ ಮನೆಗೆ ಬಂದನು.

ಬಸವೇಶ್ವರನ ವಿಚಾರಗಳು ಅತ್ಯಂತ ಕ್ರಾಂತಿಕಾರಕವಾದವುಗಳು. ಆಗ ಅವು ವರ್ಣಾಶ್ರಮಿಗಳಿಗೆ ಬಹು ವಿರೋಧವಾಗಿ ಭಾಸವಾಗುತ್ತಿದ್ದವು. ಬಿಜ್ಜಳರಾಜನು ಆರಂಭದಲ್ಲಿ ಬಸವೇಶ್ವರನಿಗೆ ಅನುಕೂಲನಾಗಿದ್ದರಿಂದ ಬಸವೇಶ್ವರನು ಪುರಾಣಮತವಾದಿಗಳನ್ನು ಲಕ್ಷಿಸದೆ ಧರ್ಮಪ್ರಸಾರ ಕಾರ್ಯ ಮಾಡುತ್ತ ಬಂದನು. ಇದರಿಂದ ಅವನ ಶಿವಾನುಭವ ಮಂಟಪದ ಲ್ಲಿಯ ಸದಸ್ಯರ ಸಂಖ್ಯೆಯು ಹೆಚ್ಚುತ್ತಲೇ ಇದ್ದಿತು. ಹೀಗೆ ಬಸವೇಶ್ವರನು ಪ್ರಬಲನಾಗಹತ್ತಲು ವಿರೋಧಿಗಳು ಅವನ ವಿಷಯವಾಗಿ ರಾಜನ ಮನಸ್ಸನ್ನು ಮತ್ತಿಷ್ಟು ಕಲುಷಿತ ಮಾಡಲು ಪ್ರಯತ್ನಿಸಹತ್ತಿದರು. ಇಷ್ಟೇ ಅಲ್ಲ, ಇಂಥವರ ಸಂಖ್ಯೆಯಾದರೂ ಕ್ರಮೇಣ ಬೆಳೆಯುತ್ತಲೇ ಬರಹತ್ತಿತು. ಆಗ ಕೆಳಗೆ ಕಾಣಿಸಿದ ಘಟನೆಗಳು ಉಂಟಾದವು.

ರಾಜನ ಓಲಗದಲ್ಲಿ ಮಧುವರಸನೆಂಬ ಬ್ರಾಹ್ಮಣ ಅಧಿಕಾರಿಯು ಕೆಲಸ ಮಾಡುತ್ತಿದ್ದನು. ಅವನು ವಿದ್ವಾಂಸನಾಗಿ ವಚನಗಳನ್ನು ರಚಿಸಿದ್ದಾನೆ. 'ಅರ್ಕೇಶ್ವರ' ಎಂಬುದು ಅವನು ರಚಿಸಿದ ವಚನಗಳಿಗೆ ಮುದ್ರಿಕೆಯಾಗಿರುತ್ತದೆ. ಅವನು ಕೇವಲ ಶಿವಾನುಭವಿಯು. ಅವನ ಸಂಗಡೇ ಶಿವಾನುಭವ ಮಂಟಪದಲ್ಲಿ ಹರಳಯ್ಯನೆಂಬ ಶಿವಶರಣನಿದ್ದು

ಆಸನು ಸಹ ಬಸವೇಶ್ವರನ ಪ್ರೀತಿಗೆ ಪಾತ್ರನಾಗಿದ್ದನು. ಅನನಾದರೂ ಶಿಷ್ಟಾನುಭವಿಯೂ ಅತ್ಯಂತ ಸಾಧುವೂ, ಆಗಿದ್ದನು. ಹೀಗಿರುವಲ್ಲಿ ಮಧುವರಸನು ತನ್ನ ಮಗಳನ್ನು ಈ ಹರಳಯ್ಯನ ಮಗನಿಗೆ ಕೊಟ್ಟು ಲಗ್ನ ಮಾಡಬೇಕೆಂದು ನಿರ್ಧರಿಸಿ ಅದಕ್ಕೆ ಶಿವಶರಣರ ಅನುಮತಿಯನ್ನು ಹೊಂದಿ ಲಗ್ನಕಾರ್ಯವನ್ನು ಸಹ ಮುಗಿಸಿದನು.

ಹೀಗೆ ಒಬ್ಬ ಶ್ರೇಷ್ಠ ಬ್ರಾಹ್ಮಣ ಅಧಿಕಾರಿಯು ಒಬ್ಬ ಹೊಲೆಯನ ಕೂಡ ಅಂತರ್ಜಾತೀಯ ವಿವಾಹವನ್ನು ಮಾಡಿದ್ದರಿಂದ ಆಗಿನ ಬ್ರಾಹ್ಮಣ ಸಮಾಜದಲ್ಲಿ ಬಹು ದೊಡ್ಡ ಕೋಲಾಹಲವೆದ್ದಿತು. ಬ್ರಾಹ್ಮಣ ಸಮಾಜವು ಈ ವರ್ತನೆಯನ್ನು ತರಹರಿಸದೆ ಬಿಜ್ಜಳರಾಜನ ಕಡೆಗೆ ದೂರು ಒಯ್ದರು. ರಾಜನು ಬಸವೇಶ್ವರನನ್ನು ಕರಿಸಿ ಕೇಳಲಾಗಿ ಅವನು ಶಿವಶರಣರು ವರ್ಣಭೇದವನ್ನು ಮನ್ನಿಸುವದಿಲ್ಲ. ಅವರು ವರ್ಣಾತೀತರೆಂತಲೂ ಹರಳಯ್ಯ ಮಧುವರಸ ಇವರು ನಡಿಸಿದ ಲಗ್ನಕಾರ್ಯವು ಯೋಗ್ಯವೆಂತಲೂ ಅವರನ್ನು ಸಮರ್ಥಿಸಿದನು. ಆದರೆ ಬಿಜ್ಜಳನು ಈ ಮಾತನ್ನು ಒಪ್ಪದೆ ಆ ಉಭಯತರನ್ನು ಅತ್ಯಂತವಾಗಿ ಹಿಂಸಿಸಿ ಅವರನ್ನು ಕೊಲ್ಲಿಸಿದನು. ಹೀಗೆ ಬಿಜ್ಜಳನು ಈ ಉಭಯ ಶಿವಶರಣರನ್ನು ಕೊಲ್ಲಿಸಿದ್ದಕ್ಕೋಸ್ಕರ ನಾಡಿನಲ್ಲೆಲ್ಲ ಶಿವಶರಣರಿಗೂ ಇತರರಿಗೂ ಮಹತ್ತರ ಕ್ಷೋಭವು ಉಂಟಾಗಲು ಕಾರಣವಾಯಿತು. ಇನ್ನುಮುಂದೆ ಉಭಯ ಪಕ್ಷಗಳಲ್ಲಿ ಕದನಗಳು ಉಂಟಾಗುವವೆಂದು ಬಸವೇಶ್ವರನು ತಿಳಿದುಕೊಂಡು ಅವನು ಕಲ್ಯಾಣವನ್ನು ಶಪಿಸಿ ಕಪ್ಪಡಿಸಂಗಮ ದೇವಸ್ಥಾನಕ್ಕೆ ತೆರಳಿ ಅಲ್ಲಿಯೇ ಐಕ್ಯಹೊಂದಿದನು.

ಬಸವೇಶ್ವರನು ಕಲ್ಯಾಣವನ್ನು ಬಿಡುವ ಪೂರ್ವದಲ್ಲಿ ತನ್ನ ಎಲ್ಲ ಅಧಿಕಾರವನ್ನು ಚನ್ನಬಸವೇಶ್ವರನಿಗೆ ಕೊಟ್ಟು ತಾನು ಅಲ್ಲಿಂದ ಹೊರಟುಹೋದನು. ಈ ಕಾಲದಲ್ಲಿ ಚನ್ನಬಸವೇಶ್ವರನು ಬಹು ಚಿಕ್ಕ ವಯಸ್ಸಿನವನು, ಅಂದರೆ ಕೇವಲ ೨೪ ವರ್ಷದವನಾಗಿದ್ದನು. ಅವನು ಚಿಕ್ಕ ವಯಸ್ಸಿನವನಾದ್ದರಿಂದ ಬಸವೇಶ್ವರನು ಮಡಿವಾಳ ಮಾಚಿದೇವನನ್ನು ಅವನಿಗೆ ಸಲಹೆಗಾರನನ್ನಾಗಿ ನೇಮಿಸಿದನು. ಈ ಕಾಲದಲ್ಲಿ ಅಕ್ಕನಾಗಲಾಂಬಿಕೆಯೂ ಜೀವಿಸಿದ್ದಳು. ಅವಳು ಅನುಭವಿಕಳಾಗಿ ಬಸವೇಶ್ವರನ ಕೂಡ ಯಾವಾಗಲೂ ಕಾಲಕಳೆಯುತ್ತಾ ಬಂದಿದ್ದಳು. ಆದ್ದರಿಂದ ಚೆನ್ನ

ಕ್ಕನು ಸ್ವಯಜ್ಞಾನ ಪ್ರಭಾವಿಸಿವನೆಂಬುದೀಗ ಹದ್ದು ತತ್ತ್ರಿಯನಿಕ್ಕಿ ಎಂಬ ಶಬ್ದಕ್ಕರ್ಥ. ಆ ಜೀವನು ಆಶೆ ತೃಷ್ಣೆ ಮುಂದುಗೊಂಡ ಕಾರಣ ಸ್ವಯಜ್ಞಾನ ಸಾಧ್ಯವಲ್ಲನೆಂಬುದೀಗ ಹಾವು ಹಸಿದು ತತ್ತ್ರಿಯ ಮುಟ್ಟದು ನೋಡಾ ಎಂಬ ಶಬ್ದಕ್ಕರ್ಥ. ಆ ಜೀವಾತ್ಮನೆಂಬುದೀಗ ಹಾವಿನ ವಿವರ. ಆ ಜೀವಂಗೆ ಚೈತನ್ಯವಾದ ಪರಮಾತ್ಮ ತತ್ವವೆಂಬುದೀಗ ಹದ್ದಿನ ಭೇದ. ಆ ಪರಮಾತ್ಮನಿಂದುದಯವಾದ ಸ್ವಯಜ್ಞಾನವೆಂಬುದೀಗ ತತ್ತ್ರಿಯ ಗುಣ. ಆ ಜೀವ ಭಾವವಳಿದು ಸಜ್ಜೀವ ಸ್ವರೂಪನಾದ ಶರಣ ಸತಿಯೇ ಅಂಗ. ಆ ಪರಮಾತ್ಮ ತತ್ವವೇ ಕರಸ್ಥಲಕ್ಕೆ ಇಷ್ಟ ಲಿಂಗ ಸ್ವರೂಪನಾಗಿ ಬಲದಲ್ಲಿ ಈ ಲಿಂಗಾಂಗವೆರಡರ ಕೂಟವೇ ಅಸಿ ಕದ ಸ್ವರೂಪವಾದ ಭಕ್ತಿ ಎಂದರಿಯಬೇಕೆಂಬುದೀಗ ಹಾವಿನ ವಿವರ ಹದ್ದಿನ ಭೇದ ತತ್ತ್ರಿಯ ಗುಣ ಅವು ಏನೆಂದರಿದಲ್ಲಿ ಜೀವ ಪರಮ ಸ್ವಯಜ್ಞಾನ ಭೇದವನರಿಯಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೬೨. ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರು ಬಲ್ಲರು? ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರು ಬಲ್ಲರು? ಹುಲಿ ಹಾವು ಹದ್ದು ಕೂಡಿ ಕುಲವ ಹೊರಗಿಟ್ಟು ಒಳಗಾದ ಭೇದವನಾರು ಬಲ್ಲರು? ಇಂತೀ ಸ್ಥೂಲ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂತು ಬಚ್ಚಬಯಲಾಯಿತ್ತು ಸದಾಶಿವಮೂರ್ತಿ ಲಿಂಗದಲ್ಲಿ

ಟೀಕು:— ಜಾಗ್ರಾವಸ್ಥೆಯಿಂ ವಿಶ್ವಪ್ರಪಂಚವ ಗ್ರಹಿಸುತ್ತಿಹನು ಜೀವನೆಂಬುದೀಗ ಹುಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ನವ ದ್ವಾರಯುಕ್ತವಾದ ದೇಹವನಾಶ್ರಯಿಸಿ ಶಂಕಾ ವಿಷಯ ರೂಪವಾದ ಮನೋವರ್ತನೆಯನೆಯ್ದಿದ ಭೇದವನಾರಿಗೂ ಅರಿಯಬಾರದೆಂಬುದೀಗ ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರುಬಲ್ಲರು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಸದ್ವಿವೇಕ ಜ್ಞಾನ ತಲೆದೋರಿ ದೇಹಭಾವವ ವಿಡಂಬಿಸಿ ಪರಮಾತ್ಮನ ಸ್ವರೂಪವಾದ ಭೇದವ ಆರಿಗೂ ಅರಿಯಬಾರದೆಂಬುದೀಗ ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರು ಬಲ್ಲರು ಎಂಬ ಶಬ್ದಕ್ಕರ್ಥ. ಆ ಜೀವನು ಮನಸ್ಸು ಶಿವಭಾವದಲ್ಲಿ ಒಂದುಗೂಡಿ ಎಂಬುದೀಗ ಹುಲಿ ಹಾವ ಹದ್ದು ಕೂಡಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸನ್ನಿಹಿತವಾಗಲು ಪೂರ್ವಾಶ್ರಯವ ಗುಣಂ

ಗಳು ಕೆಟ್ಟು ಶಿವತತ್ವದಲ್ಲಿ ಅಡಗುವ ಭೇದವ ಹರಿಗೂ ಅರಿಯಬಾರ ದೆಂಬುದೀಗ ಕಾಲನ ಕಣ್ಣರಗಿಟ್ಟು ಹೊರಗಾದ ಭೇದವನಾರು ಬಲ್ಲರು ಎಂಬ ಶಬ್ದಕ್ಕರ್ಥ. ಇಂತೀ ತನುತ್ರಯ ಸಂಬಂಧವಾದ ಜೀವನು ಮನಸ್ಸು ಪರಮಾತ್ಮನೆಂಬ ತ್ರಿವಿಧವು ಶ್ರೀಗುರು ಕಾರುಣ್ಯದಿಂ ಇಷ್ಟ ಪ್ರಾಣ ಭಾವವೆಂಬ ತ್ರಿತತ್ವದಲ್ಲಿ ಒಡಗೂಡಿ ಸಮರಸವನೆಯ್ದಿ ನಿರ್ಣಯ ವಾಯಿತ್ತೆಂಬುದೀಗ ಇಂತೀ ಸ್ಥೂಲ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂದು ಒಚ್ಚತಬಯಲಾಯಿತ್ತು ಸದಾಶಿವಮೂರ್ತಿ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೬೩. ಹೊಲದೊಳಗಣ ಹುಲ್ಲೆ ಗವಿಯೊಳಗಣ ಹುಲಿ ಕೊಂಬಿನ ಮೇಲಣ ಕೋಡಗ ಅಂಬರದಲಾಡುವ ಹಾವು ನಾಲ್ವರ ಅತಿ ಮಥ ನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು. ಆ ಚತುಷ್ಟಯದ ಲಿಂಗ ಭೇದವನರಿತಲ್ಲಿ ಸದಾಶಿವ ಮೂರ್ತಿಲಿಂಗವು ತಾನೆ.

ಟೀಕು:— ದೇಹವೆಂಬ ಕ್ಷೇತ್ರವನಾಶ್ರಯಿಸಿಕೊಂಡಿರ್ಪ ಜೀವ ನೆಂಬುದೀಗ ಹೊಲದೊಳಗಣ ಹುಲ್ಲೆ ಎಂಬ ಶಬ್ದಕ್ಕರ್ಥ. ಸೂಕ್ಷ್ಮಾಂಗ ದಂಗದಲ್ಲಿಡಗಿರ್ಪ ಕಾಲವ್ಯಾಘ್ರನೆಂಬುದೀಗ ಗವಿಯೊಳಗಣ ಹುಲಿ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೆಗಳಲ್ಲಿಹ ಮನೋಮರ್ಕಟನೆಂಬು ದೀಗ ಕೊಂಬಿನ ಮೇಲಣ ಕೋಡಗನೆಂಬ ಶಬ್ದಕ್ಕರ್ಥ. ಆತ್ಮಾಕಾಶ ಮಧ್ಯದಲ್ಲಿರ್ಪ ಊರ್ಧ್ವಕುಂಡಲಿ ಸ್ವರೂಪವಾದ ಸತ್‌ಪ್ರಣವ ಜ್ಞಾನ ವೆಂಬುದೀಗ ಅಂಬರದಲಾಡುವ ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡ ಮಧ್ಯದಲ್ಲಿ ಶಿವಕೃಪೆಯಿಂ ಪರಿಪೂರ್ಣ ಜ್ಞಾನ ಪ್ರಭಾವಿಸಲು ಈ ಚತು ರ್ವಿಧ ಮರ್ವರ್ತನೆಗಳಳಿದ ಶರಣನ ಜ್ಞಾನ ಕಾಯದಲ್ಲಿ ತರಹರವ ನೆಯ್ದಿಹವೆಂಬುದೀಗ ನಾಲ್ವರ ಅತಿ ಮಥನವ ಬಿಟ್ಟು ಒಂದೇ ಗೂಡಿ ನಲ್ಲಿ ಅಡಗಿದವು ಎಂಬ ಶಬ್ದಕ್ಕರ್ಥ. ಜೀವಭಾವವಳಿದ ಸಜ್ಜೀವನು ಇಷ್ಟಲಿಂಗಕ್ಕೆ ಚಿದಂಗ ಸ್ವರೂಪನಾಗಿ ಕಾಲವ್ಯಾಘ್ರನಳಿದು ಲಿಂಗದಲ್ಲಿ ಅನಿಮಿಷ ನಿರೀಕ್ಷಣೆಯಾಗಲು ಮನವಳಿದು ಉನ್ಮನಿ ತತ್ವ ಸ್ವರೂಪವಾ ಗಲು ಆ ಸತ್‌ಪ್ರಣವಜ್ಞಾನವು ಶರಣನ ಸರ್ವಾಂಗದಲ್ಲಿ ಪರಿಪೂರ್ಣ ವಾಗಿ ವೇಧಿಸಲು ಈ ಚತುರ್ವಿಧ ಸಂಬಂಧವನರಿದ ಶರಣನೇ ಸಾಕ್ಷಾತ್ ಪರವಸ್ತುವೆಂಬುದೀಗ ಆ ಚತುಷ್ಟಯದ ಅಂಗಭೇದವನರಿತಲ್ಲಿ ಸದಾಶಿವ ಮೂರ್ತಿಲಿಂಗವು ತಾನೇ ಎಂಬ ಶಬ್ದಕ್ಕರ್ಥ.

೧೪. ಕಾಮನ ಅಂಬಿನ ಗಣಿಯಲ್ಲಿ ಮೂವರು ಬಾಲೆಯರು ಹುಟ್ಟಿದ ವಿವರ. ಹಿಲಿಕಿನಲ್ಲಿ ತಾಯಿ ಹುಟ್ಟಿದಳು. ಮಧ್ಯದಲ್ಲಿ ಮಗಳು ಹುಟ್ಟಿದಳು. ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತಿಯ ತಿಂದು ತಾಯಿಗೆ ಒಸರಿತ್ತುತ್ತಿರ್ದಾಳೆ. ಅವಳ ಕೊಲುವ ಧೀರರಿನ್ನಾರನು ಕಾಣೆ. ಎನಗೆ ಗಂಡ ಎಮ್ಮವ್ವೆಯ ಮಗನೆಂದು ಸಂದಣಿಗೊಳುತ್ತವಳ. ನಾವೆಲ್ಲರೂ ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ.

ಟೀಕು:— ತನ್ನ ನಿಜವಪ್ಪ ಪರಬ್ರಹ್ಮವ ಕಾಮಿಸುತ್ತಿರ್ಪ ಸಕಲ ತತ್ವ ಸನ್ನಿಹಿತವಾದ ಶ್ರೀಗುರು ಮೂರ್ತಿ ಎಂಬುದೀಗ ಕಾಮನೆಂಬ ಶಬ್ದಕ್ಕರ್ಥ. ಆ ಗುರು ತತ್ವದಲ್ಲಿ ಸನ್ನಿಹಿತವಾಗಿರ್ಪ ಸುಜ್ಞಾನವೆಂಬುದೀಗ ಕಾಮನ ಅಂಬಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನವನೊಳಕೊಂಡಿರ್ಪ ಶಿವಭಾವವೆಂಬುದೀಗ ಗಣಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸನ್ನಿಹಿತವಾದ ಶಿವಭಾವದಲ್ಲಿ ಇಚ್ಛಾ ಜ್ಞಾನ ಕ್ರಿಯೆಂಬ ತ್ರಿಶಕ್ತಿಗಳು ಉದಿಸಿದ ಭೇದವೆಂಬುದೀಗ ಮೂವರು ಬಾಲೆಯರು ಹುಟ್ಟಿದ ವಿವರವೆಂಬ ಶಬ್ದಕ್ಕರ್ಥ. ಆ ಶಿವಭಾವದ ಮೊನೆಯಲ್ಲಿ ಇಚ್ಛಾಶಕ್ತಿ ಉದಿಸಿದಳೆಂಬುದೀಗ ಹಿಲಿಕಿನಲ್ಲಿ ತಾಯಿ ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವಭಾವದ ನಡುವೆ ಜ್ಞಾನಶಕ್ತಿ ಉದಿಸಿದಳೆಂಬುದೀಗ ಮಧ್ಯದಲ್ಲಿ ಮಗಳು ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವಭಾವದಗ್ರದಲ್ಲಿ ಕ್ರಿಯಾಶಕ್ತಿ ಉದಿಸಿದಳೆಂಬುದೀಗ ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಎಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಗೆ ತಾಯಾದ ಇಚ್ಛಾಶಕ್ತಿಯನವಗ್ರಹಿಸಿದಳೆಂಬುದೀಗ ಹೆತ್ತಿಯ ತಿಂದು ಎಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಯನವಗ್ರಹಿಸಬೇಕೆಂಬ ಬಯಕೆಯಲ್ಲಿರುತ್ತಿದ್ದಳೆಂಬುದೀಗ ತಾಯಿಗೆ ಒಸರಿತ್ತುತ್ತಿರ್ದಾಳೆ ಎಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಶಕ್ತಿಯನು ತಮ್ಮಲ್ಲಿ ಅವಗ್ರಹಿಸಿಕೊಂಬ ಜ್ಞಾನಿಗಳಪೂರ್ವವೆಂಬುದೀಗ ಅವಳ ಕೊಲುವ ಧೀರರಿನ್ನಾರನೂ ಕಾಣೆನೆಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯಿಂದುದಯಿಸಿದ ಇಷ್ಟಲಿಂಗವು ಆ ಕ್ರಿಯಾಶಕ್ತಿಗೆ ಪುರುಷನಾದನೆಂಬುದೀಗ ಎನಗೆ ಗಂಡ ಎಮ್ಮವ್ವೆಯ ಮಗನೆಂದು ಎಂಬ ಶಬ್ದಕ್ಕರ್ಥ. ಆ ಕ್ರಿಯಾಶಕ್ತಿಯು ಲಿಂಗಾಂಗ ರಮಣರಸಾನಂದ ಸುಖವ ಕಂಡು ಪರಮ ಹರುಷದೊಳಿರ್ಪಳೆಂಬುದೀಗ ಸಂದಣಿಗೊಳುತ್ತವಳ ನಾವೆಲ್ಲರು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

# (೯) ಶಿವಯೋಗ

೬೫. ಮಹಾ ಮನೆಯೊಳಗೊಂದು ಮಂದಿರವಾಡ, ಅದರೊಳಗೆ ಹದಿನಾಲ್ಕು ಕೋಣೆ ಒಂಬತ್ತು ಬಾಗಿಲ ಮುಚ್ಚಿ ಒಂದು ಬಾಗಿಲು ತೆರೆದಿಹುದು. ತೆರೆದ ಬಾಗಿಲಲ್ಲಿ ಮೂರು ಮುಖದ ಸರ್ಪ ಊರ್ಧ್ವಮುಖವಾಗಿ ತಿರುಗಾಡುತ್ತಿಹುದು. ಮಿಕ್ಕ ಆರು ಬಾಗಿಲಿನಲ್ಲಿ ಮೂರು ಬಾಗಿಲು ಕೀಳಾಗಿ ಕೀಳಿನೊಳಗೆ ಅಧೋಮುಖ ಸರ್ಪವು ಉಡುಗಿಹುದು. ಮೇಲಣ ಮೂರು ಬಾಗಿಲ ಊರ್ಧ್ವದ ತ್ರಿಗುಣದ ಸರ್ಪ ನೊದಲು ತಲೆಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ ವಿಶ್ವವೆಂಬ ಆಕಾಶದ ಹದ್ದು ಹೋಯಿತ್ತು. ಅದರೊಳಗೆ ಎರಡು ತಲೆಯ ಮರೆದು ಒಂದು ತಲೆ ಎಚ್ಚತ್ತು ಹದ್ದಿನ ಕೊಕ್ಕ ತಪ್ಪಿ ಕಾಲುಗುರ ಹೆಜ್ಜೆಯ ಗಾಯವ ತಪ್ಪಿ ಗರಿಯ ಅಡುಕವ ತೊಲಗಿಸಿ ಹಿಡಿಯಿತ್ತು. ಅದಿ ಹೊಟ್ಟೆಯ ನೋಡಿ ಏರಿತ್ತು ವಿಷ ಹದ್ದಿನ ಹಸುವ ಬಿಡಿಸಿತ್ತು. ಹದ್ದು ಹಾವು ಕೂಡಿ ಘಟಕರ್ಮಕ್ಕೊಳಗಾಯಿತ್ತು. ಕರ್ಮದೊಳಗಾದ ಸದಾಶಿವಮೂರ್ತಿಲಿಂಗವ ಮುಟ್ಟದುದಿಲ್ಲ.

ಟೀಕು:— ಸಕಲ ತತ್ವಂಗಳಿಗಾಶ್ರಯವಪ್ಪ ಸ್ಥೂಲತನು ಮಧ್ಯಸ್ಥವಾದ ಸೂಕ್ಷ್ಮಾಂತರಂಗವೇ ಜೀವಂಗೆ ಆಶ್ರಯವಾಗಿರ್ಪುದೆಂಬುದೀಗ ಮಹಾಮನೆಯೊಳಗೊಂದು ಮಂದಿರವಾಡ ಎಂಬ ಶಬ್ದಕ್ಕರ್ಥ. ಅಲ್ಲಿ ಬಾಹ್ಯ ಬಾಹ್ಯಾಭ್ಯಂತರದ ಷೋಡಶಮದಂಗಳೇ ಕೋಣೆಗಳಾಗಿಹವೆಂಬುದೀಗ ಅದರೊಳಗೆ ಹದಿನಾರು ಕೋಣೆ ಎಂಬ ಶಬ್ದಕ್ಕರ್ಥ. ಈ ದೇಹ ಸಂಬಂಧವಾದ ನವದ್ವಾರಂಗಳ ವಾಯಾಯಾತಮಂಧ ಮುಚ್ಚಿಕೊಂಡಿಹುದೆಂಬುದೀಗ ಒಂಬತ್ತು ಬಾಗಿಲ ಮುಚ್ಚಿ ಎಂಬ ಶಬ್ದಕ್ಕರ್ಥ. ನವ ದ್ವಾರಂಗಳಿಗೆ ಮುಖ್ಯವಾದ ಸುಷುಮ್ನದ್ವಾರ ಪ್ರಾಣವಾಯುವಿನ ಸಂಚಲ ಪ್ರವರ್ತಿಸಕ್ಕೆ ತೆರವಾಗಿಹುದೆಂಬುದೀಗ ಒಂದು ಬಾಗಿಲು ತೆರೆದಿಹುದೆಂಬ ಶಬ್ದಕ್ಕರ್ಥ. ಆ ದ್ವಾರದಲ್ಲಿ ಪ್ರಕೃತಿಯೇ ಮುಖ್ಯವಾಗಿರ್ಪ ಪ್ರಜ್ಞಾನಿವೃತ್ತಿ ಜ್ಞಾನದಿಂ ಹಂಸಗತಿಗಳಿಂ ಚರಿಸುತ್ತಿರ್ದನೆಂಬುದೀಗ ತೆರೆದ ಬಾಗಿಲಲ್ಲಿ ಮೂರು ಮುಖದ ಸರ್ಪ ಊರ್ಧ್ವಮುಖವಾಗಿ ತಿರುಗಾಡುತ್ತಿಹುದೆಂಬ ಶಬ್ದಕ್ಕರ್ಥ. ನವದ್ವಾರಯುಕ್ತವಾದ ಷಡ್ದ್ವಾರಂಗಳಲ್ಲಿ ಎಂಬುದೀಗ ಮಿಕ್ಕಾರು ಬಾಗಿಲನಲ್ಲಿ ಎಂಬ ಶ

ಕ್ಕರ್ಥ. ಅದರೊಳಗೆ ಪಾಯು ಗುಹ್ಯ ಜಿಹ್ವೇಂದ್ರಿಯುವೇ ಪ್ರಕೃತಿ ಸ್ವರೂಪವಾದ ದೇಹಸಂಬಂಧವಾಗಿಹವು. ಅಲ್ಲಿ ಅಜ್ಞಾನಮುಖವಾಗಿರ್ಪ ವಿಶ್ವನು ಹುದುಗಿಹನೆಂಬುದೀಗ ಮೂರು ಬಾಗಿಲು ಕೀಳಾಗಿ ಕೀಳಿನೊಳಗಧೋಮುಖ ಉಡುಗಿಹುದೆಂಬ ಶಬ್ದಕ್ಕರ್ಥ. ಮನೋವೃತ್ತಿಯುಳ್ಳ ಘ್ರಾಣ ನೇತ್ರ ಶ್ರೋತ್ರಂಗಳಲ್ಲಿ ವೃತ್ತಿಜ್ಞಾನದಿಂ ಗುಣತ್ರಯಸ್ವರೂಪವಾದ ತೈಜಸಂಗೆ ಜ್ಞಾನಾಜ್ಞಾನಂಗಳೇ ತಲೆವಾಗಿಲವಾದ ಕಾರಣ ಒಂದರೊಳಗೊಂದು ಕೂಡಿ ಪ್ರಪಂಚ ಕ್ರೀಡೆಯಲ್ಲಿಹನೆಂಬುದೀಗ ಮೇಲಣ ಮೂರು ಬಾಗಿಲು ಉರ್ಧ್ವ ತ್ರಿಗುಣದ ಬಾಲ ಮೊದಲು ತಲೆ ಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. "ಆತ್ಮಾಕಾಶಮಯಂ ಶಾವತ್" ಎಂಬ ಶ್ರುತಿ ಪ್ರಮಾಣದಿಂ ಆಕಾಶದಲ್ಲಿ ಸ್ವಲೀಲಾಪರನಾಗಿರ್ದ ಪರಮಹಂಸನು ಯೋಗಕ್ರಮಾನುಸಂಧಾನಂಗಳಿಂ ಶಂಕಾವಿಷವನುಳ್ಳ ಜೀವತ್ರಯಂಗಳನವಗ್ರಹಿಸಿ ಚಿದಾಕಾಶದತ್ತಭಿಮುಖವಾಗಲೆಂಬುದೀಗ ವಿಶ್ವಮಯವೆಂಬ ಆಕಾಶದ ಹದ್ದು ಹೋಯಿತ್ತೆಂಬ ಶಬ್ದಕ್ಕರ್ಥ. ಸ್ವಪ್ನಾವಸ್ಥೆಯನುಳ್ಳ ತೈಜಸನು ಸುಷುಪ್ತಾವಸ್ಥೆಯನುಳ್ಳ ಪ್ರಾಜ್ಞನು ಭಿನ್ನ ಜ್ಞಾನವಲ್ಲಿ ಮರ್ಭಿತನಾದನೆಂಬುದೀಗ ಅದರೊಳಗೆರಡು ತಲೆ ಮರೆದು ಎಂಬ ಶಬ್ದಕ್ಕರ್ಥ. ವಿಶ್ವನು ಜಾಗ್ರಾವಸ್ಥೆಯಿಂದೆದ್ದತ್ತು ಆ ಪರಮಾತ್ಮನ ಭಾವಮಂ ತಪ್ಪಿಸಿ ಕ್ರಿಯಾಚಾರ ಜ್ಞಾನಾನುಗ್ರಹಕ್ಕೆ ಒಳಗಲ್ಲವೆ ಯೋಗಾನುಸಂಧಾನಕ್ಕೆ ವಿಲಕ್ಷಣವಾಗಿ ಆ ಪರಮಾತ್ಮನ ಜ್ಞಾನವ ಗ್ರಹಿಸಿತ್ತೆಂಬುದೀಗ ಒಂದು ತಲೆ ಎಚ್ಚತ್ತು ಹದ್ದಿನ ಕೊಕ್ಕು ತಪ್ಪಿ ಕಾಲುಗುರು ಹೆಜ್ಜೆಯು ಘಾಯವ ತಪ್ಪಿ ಗರಿಯು ಅಡುಹ ತೊಲಗಿಸಿ ಹಿಡಿಯಿತ್ತು, ಅಡಿ ಹೊಟ್ಟೆಯು ನೋಡಿ ಎಂಬ ಶಬ್ದಕ್ಕರ್ಥ. ಆ ಜೀವನ ಶಂಕಾವಿಷಭಿನ್ನಜ್ಞಾನವ ಪ್ರವೇಶಿಸಲು ಆ ಪರಮಾತ್ಮಂಗೆ ಚೈತನ್ಯ ಸ್ವರೂಪವಾದ ಲಿಂಗ ತೊಲಗಿತ್ತೆಂಬುದೀಗ ಏರಿತ್ತು ವಿಷ ಹದ್ದಿನ ಅಸುವ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಜೀವ ಪರಮರು ದೇಹಪ್ರಪಂಚಕ್ಕೊಳಗಾಗಲು ಆ ಪ್ರಪಂಚು ಜ್ಞಾನ ಲಿಂಗವ ಮುಟ್ಟದ-ದಿಲ್ಲವೆಂಬುದೀಗ ಹದ್ದು ಹಾವು ಕೂಡಿ ಘಟಕರ್ಮಕ್ಕೆ ಒಳಗಾಯಿತ್ತು. ಕರ್ಮದೊಳಗಾದ ಜ್ಞಾನ ಸದಾಶಿವಮೂರ್ತಿಲಿಂಗವ ಮುಟ್ಟಿದುದಿಲ್ಲ ಎಂಬ ಶಬ್ದಕ್ಕರ್ಥ.

೭೭. ಶರೀರದಲ್ಲಿ ಷಡಾದಾರ ಚಕ್ರ ಉಂಟೆಂಬರು. ಆಧಾರ ೬ ಆದುದನರಿಯದೆ ಆರುಂಟೆಂದು ಬೇರೆ ಕಲ್ಪಿಸಬಹುದೇ ? ಅದಕ್ಕೆ

ದೃಷ್ಟ. ಕುತ್ತದ ಬಾಯಿ ಹಲವಾದಡೆ ಒಡಲೊಂದೇ: ಘಟ ಭೇದವಾದ್ದ ನಾನೆಂಬುದನರಿತಲ್ಲಿ ಷಡಾಧಾರ ನಿಂದಿತ್ತು. ಅದು ತನ್ನಯ ಚಿತ್ತದ ಭೇ ವಲ್ಲದೆ ವಸ್ತುವನರಿವ ಭೇದವಲ್ಲ. ಹಲವು ಒವರಿಯಲ್ಲಿ ತಿಳಿವು ನೋ ವನೊಬ್ಬನೇ ಮನೆಯೊಡೆಯ. ಆ ಹೊಲಬನರಿತಲ್ಲಿಯೇ ನಿಂದಿತ್ತು ಸದಾಶಿವಮೂರ್ತಿ ಲಿಂಗದಂಗ.

೬೭. ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ವಾಯುವ ತೆನೆಯ ಮಾಡಿ ಅಸುರಾಜನೆಂಬರಸು ಆ ಪಟ್ಟಣಕ್ಕೊಡೆ ಯನಾಗಿ ಸೋಮ ಸೂರ್ಯವೀಧಿಗಳಲ್ಲಿ ಪಶ್ಚಿಮಕೇರಿಯ ಹೊಕ್ಕು ದ ಣದಲ್ಲಿ ನಿಂದು ಪೂರ್ವದಲ್ಲಿ ಪರಸ್ಥಾನವ ಮಾಡಿ ಉತ್ತರ ಮಧ್ಯದ ಸಿಂಹಾಸನಂಗೈಯ್ದು ಸಕಲೇಂದ್ರಿಯ ನಾನಾ ವಿಷಯಪರಿವಾರವಲ್ಲಿ ಗಳಿಗೆ ವಶವಲ್ಲದೆ ಸುಖಮಯವಾಗಿರ್ದ ಸದಾಶಿವ ಮೂರ್ತಿಲಿಂಗವು ನಿರಾಳವಾಯಿತ್ತು.

ಟೀಕು:— ಪರಿಪೂರ್ಣವಾದ ಪರಬ್ರಹ್ಮನು ಸರ್ವಾಂಗದಲ್ಲಿ ಸಾ ತ್ಯವ ಮಾಡಿಕೊಂಡ ಶರಣನು ಸದ್ವಿವೇಕ ಸ್ವರೂಪವಾದ ಪರಮಾನಂ ಜಲವ ಆ ನಿರಾಳ ಪರಬ್ರಹ್ಮದಲ್ಲಿ ಏಕೀಕರಿಸಿದನೆಂಬುದೀಗ ನಿರಾಳದ ನೀರ ಕೋಟೆಯನಿಕ್ಕಿ ಎಂಬ ಶಬ್ದಕ್ಕರ್ಥ. ಆ ಪರಮಶಾಂತಿಯ ಜಲವ ಲಿಂಗದಲ್ಲಿ ಏಕೀಕರಿಸಿದ ಶರಣನು ನಿರಾಕಾರವಪ್ಪ ಮಹಾಜ್ಞಾನ ಚಿತ್ತನು ಅಗಳಾಗಿ ಸಂಬಂಧಿಸಿದನೆಂಬುದೀಗ ಬಯಲ ಅಗಳ ತೆಗೆದು ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಚಿತ್ತುವಿನ ಅವಿರಳ ಸಂಬಂಧವ ಮಾಡಿದ ಶರಣನು ಚೈತನ್ಯ ಸ್ವರೂಪವಾದ ಪ್ರಣವವನೇ ತೆನೆಯಾಗಿ ಸಂಬಂಧಿಸಿದನೆಂಬುದೀಗ ವಾಯುವ ತೆನೆಯ ಮಾಡಿ ಎಂಬ ಶಬ್ದ ಕ್ಕರ್ಥ. ಆ ಪ್ರಣವು ಸಂಬಂಧವಾದಲ್ಲಿ ಜೀವಂಗೆ ಚೈತನ್ಯ ಸ್ವರೂ ವಾದ ಮಹಾಘನ ಲಿಂಗವೆಂಬರಸು ಶರಣನ ಶಿವಕ್ಷೇತ್ರವೆಂಬ ಶಿವಪು ರಕ್ಕೆ ಕರ್ತನಾಗಿಹನೆಂಬುದೀಗ ಅಸುರಾಜನೆಂಬರಸನು ಆ ಪಟ್ಟಣಕ್ಕೆ ಒಡೆಯನಾಗಿ ಎಂಬ ಶಬ್ದಕ್ಕರ್ಥ. ಆ ಮಹಾಘನ ಲಿಂಗದಲ್ಲಿ ಸಮರಸ ಭಾವವ ಘಟಿಸಿದ ಶರಣನು ಈಡಾಪಿಂಗಳ ಮಾರ್ಗದಲ್ಲಿ ಪ್ರಣವ ಪಂಚಾ ಕ್ಷರಿಯ ಸಂಬಂಧವ ಮಾಡಿಕೊಂಡು ಆ ಮಂತ್ರ ಸಂಸ್ಕಾರ ವಿಡಿ ಪಶ್ಚಿಮದ್ವಾರವೆನಿಸುವ ಸುಷುಮ್ನೆಯಲ್ಲಿ ಶಿವಯೋಗ ಮಾರ್ಗದ ವಿಡಿದು ಕೇವಲವಾದ ನಿಷ್ಕಲ ಪರಬ್ರಹ್ಮನತ್ತ ಬೆಳಸುತ್ತಿರ್ದನೆಂಬುದೀ

ಶೋಮಸೂರ್ಯವೀಥಿಗಳಲ್ಲಿ ಬ...ಸು ಕೇರಿಯ ಹೊಕ್ಕು ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮಲ್ಲಿ ಸಮರಸಭಾವಿಯಾಗಿರ್ಪ ಶರಣನು ಶ್ರೀಗುರು ಕಾರುಣ್ಯದಿಂ ಸಂಬಂಧವಾದ ಇಷ್ಟಲಿಂಗದಲ್ಲಿ ಸತ್ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದನೆಂಬುದೀಗ ದಕ್ಷಿಣದಲ್ಲಿ ಸಿಂದು ಎಂಬ ಶಬ್ದಕ್ಕರ್ಥ. ಆ ಶರಣನು ಇಷ್ಟಲಿಂಗದ ಸಂಬಂಧವಾಗಿರ್ಪ ಪರಮ ಚಿತ್ಕಳೆಯನು ತನ್ನ ಸುಜ್ಞಾನ ಮುಖಕ್ಕೆ ತಂದು ಅಂತರಂಗದಲ್ಲಿ ಪ್ರಾಣಲಿಂಗ ಸ್ವರೂಪಿನಿಂ ಸಾಹಿತ್ಯವ ಮಾಡಿದನೆಂಬುದೀಗ ಪೂರ್ವದಲ್ಲಿ ಪರಮ ಸ್ನಾನವ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ಕಾರಣಾಂಗದರುವಿನ ಮಧ್ಯದಲ್ಲಿ ಭಾವಲಿಂಗವ ಮೂರ್ತಿಗೊಳಿಸಿದನೆಂಬುದೀಗ ಉತ್ತರದ ಮಧ್ಯದಲ್ಲಿ ಸಿಂಹಾಸನಸ್ಥೈದು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಪ್ರಸಿರ್ದ ಶರಣನ ಸರ್ವೇಂದ್ರಿಯಗಳೆಲ್ಲಾ ಲಿಂಗೇಂದ್ರಿಯ ಸ್ವರೂಪವಾಗಿ ಸತ್ಕ್ರಿಯನೆಯ್ದಿದಲ್ಲಿ ಕರ್ಮೇಂದ್ರಿಯಗಳ ವ್ಯವಹಾರವಿಲ್ಲದೆ ಹೋಯಿತ್ತು ...ಂಗೆಂಬುದೀಗ ಸಕಲೇಂದ್ರಿಯ ನಾನಾ ವಿಷಯ ಪರಿವಾರದಲ್ಲಿ ಅರಿ...ಗಿ ವಶವಲ್ಲದೆ ಸುಖಮಯವಾಗಿರ್ದ ಸದಾಶಿವಮೂರ್ತಿಲಿಂಗವು ನಿರಾ...ಮಯತು ಎಂಬ ಶಬ್ದಕ್ಕರ್ಥ.

೬೮. ಊರಬಾಗಿಲ ಕಂಭದಲ್ಲಿ ಮೂರು ಮುಖದ ಕೋಡಗ ...ದವನಿವನೆಂದು ನೋಡುತ್ತ ಮತ್ತೊಂದು ಮುಖದಿಂದ ಓಡಿಸುತ್ತ ...ತ್ತೊಂದು ಮುಖ ಹಿಂದೆ ಹೊಂದಿದವನ ನೆನೆವುತ್ತ ಇಂತೀ ಮೂರು...ವ ಜಾಗ್ರದ ವ್ಯವಹಾರವು ಹಿಂದಣ ಅಧೋ ಮುಖಕ್ಕೆ ನಡುವಣ ...ಮುಖಕ್ಕೆ ಕಡೆಯಣ ಊರ್ಧ್ವ ಮುಖಕ್ಕೆ ಕುಂಡಲಿಯ ಹಾವೆದ್ದು ...ಕೋಡಗವನೊಂದೇ ಬಾರಿ ನುಂಗಿತ್ತು, ಸದಾಶಿವಮೂರ್ತಿಲಿಂಗವನರಿತಲ್ಲಿ.

ಟೀಕು:- ಪಂಚ ಭೌತಿಕ ಗ್ರಾಮವೆಂಬುದೀಗ ಊರೆಂಬ ಶಬ್ದ...ರ್ಥ. ಅಂತಪ್ಪ ದೇಹವಿಡಿದು ನಡೆವ ಸಂಸಾರಮಾರ್ಗ ಒಂದೇ ...ಬುದೀಗ ಊರ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಬಾಗಿ...ಮಧ್ಯವಸ್ತಂಭನಿರುತ್ತಿಹುದೆಂಬುದೀಗ ಕಂಬದಲ್ಲಿ ಎಂಬ ಶಬ್ದಕ್ಕರ್ಥ. ...ಸ್ವಪ್ನ ಸುಷುಪ್ತಿ ಆ ಮನಕ್ಕೆ ಮುಖವಾಗಿಹವೆಂಬುದೀಗ ಮೂರು ...ಕೋಡಗವೆಂಬ ಶಬ್ದಕ್ಕರ್ಥ; ಆ ಮನಸ್ಸು ರಜೋಗುಣ ಸಂಬಂಧ...ರ ತನುವಿನ ವರ್ತನೆಯಲ್ಲಿಯ ವಿಶ್ವನು ಸಂಸಾರ ವಿಷಯ ಸುಖ

ವನನುಭವಿಸಿ ಬರುತ್ತಿರ್ದನೆಂದು ಹಾಸ್ಯೋಪಮಾನವ ಮಾಡು
ದೇಬುದೀಗ ಬಂದವನಿವನೆಂದು ನೋಡುತ್ತಾ ಎಂಬ ಶಬ್ದ
ಮತ್ತೊಂದು ಮುಖವೆಂತೊಡೆ ಸ್ವಪ್ನಾವಸ್ಥೆಯಲ್ಲಿಹ ಮನಸ್ಸು
ತನುವಿನ ಇಂದ್ರಿಯಾದಿ ವಿಷಯ ಸುಖವನನುಭವಿಸುತ್ತಿರ್ದನೆಂದು
ತೇಜಸ್ಸನೆ ಹಾಸ್ಯಕವ ಮಾಡುತ್ತಿಹುದೆಂಬುದೀಗ ಮತ್ತೊಂದು
ದಿಂದವನ ಓಡಿಸುತ್ತ ಎಂಬ ಶಬ್ದಕ್ಕರ್ಥ. ಮತ್ತೊಂದು ಎ
ಸುಷುಪ್ತಾವಸ್ಥೆಯಲ್ಲಿಯು ಮನಸ್ಸು ತಮೋಗುಣ ಸಂಬಂಧವಾದ
ತನುವಿನ ಮರೆಯಲ್ಲಿಯು ಪ್ರಜ್ಞಾನ ಹಾಸ್ಯೋಪಮಾನವ ಮಾ
ದೀಗ ಮತ್ತೊಂದು ಮುಖ ಹಿಂದೆ ಹೋದಿದವನ ನೆನವುತ್ತ ಎಂ
ಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆಯೊಳಗೆ ಜೀವತ್ರಯಂಗಳು ಸಿಲ್ಕಿ
ದೀಗ ಇಂತೀ ಮೂರು ಚಂದ ಜಾಗ್ರತ್ ವ್ಯವಹಾರವು ಹಿಂದಣ
ಮುಖವೆಂಬ ಶಬ್ದಕ್ಕರ್ಥ. ಸೂಕ್ಷ್ಮತನುವಿನ ಇಂದ್ರಿಯಂಗಳ
ಕ್ಕೆಂಬುದೀಗ ನಡುವಣ ಅಭಿಮುಖಕ್ಕೆ ಎಂಬ ಶಬ್ದಕ್ಕರ್ಥ.
ಗುಣ ಸಂಬಂಧವಾದ ಕಾರಣ ತನುವಿನ ಮರವೆಯು ಮುಖವೆ
ಕಡೆಯಣ ಊರ್ಧ್ವಮುಖಕ್ಕೆ ಎಂಬ ಶಬ್ದಕ್ಕರ್ಥ. ಇಂತಪ್ಪ
ವಸ್ಥೆಯಲ್ಲಿರ್ದ ಮನಸ್ಸು ಅಧೋಕುಂಡಲಿಯುಳಿದು ಊರ್ಧ್ವ
ಲಿಯ ಸ್ವರೂಪವನೆಯ್ದಿ ಅದೇ ಸತ್ಪ್ರಾಣಜ್ಞಾನವಾಗಿ ಪ್ರಭಾವಿಸಿ
ವನವಗ್ರಹಿಸಿತ್ತೆಂಬುದೀಗ ಕುಂಡಲಿಯು ಹಾವೆದ್ದು ಕೋಡಗನ
ಬಾರಿ ನುಂಗಿತ್ತು ಸದಾಶಿವಮೂರ್ತಿಲಿಂಗವನಂತಲ್ಲಿ ಎಂಬ ಶ

[ನಾವು ಈ ಪ್ರಕೃತ ಗ್ರಂಥದ ೨೦೧ ಪುಟದವರೆಗೆ ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಈ ವಿಷಯಗಳಿಗೆ ಸಂಬಂಧಪಟ್ಟ ಮೂಲ ವಚನಗಳನ್ನು ಉದಹರಿಸುತ್ತ ಬಂದಿದ್ದೇವೆ. ಇವುಗಳ ತರುವಾಯ ಮಂತ್ರ ವಿಷಯವು ಬರುತ್ತದೆ ಆದರ ಜ್ಞಾನವು ಬಹು ಅಗಾಧವಾದದ್ದು. ಯೋಗ್ಯ ಗುರುವಿನ ಉಪದೇಶವಿಲ್ಲದೆ ಅವುಗಳ ಜ್ಞಾನವಾಗುವದು ದುಸ್ತರ. ಅವುಗಳ ಬಗ್ಗೆ ಸರಿಯಾದ ಜ್ಞಾನವಿಲ್ಲದೆ ಹೋದರೆ ಅವುಗಳ ಧಾರಣೆಯೂ ಕೂಡ ತಪ್ಪುವದು. ಈ ಸ್ಥಿತಿಯಲ್ಲಿ ನಮಗೆ ದೊರೆತ ವಚನಗಳನ್ನು ಅವು ಇದ್ದಕ್ಕಿದ್ದಹಾಗೆ ಪ್ರಕಟಿಸುತ್ತ ಬಂದಿದ್ದೇವೆ.

ನಾವು 'ಶಿವಾನುಭವ ಶಬ್ದಕೋಶ' ಎಂಬ ಗ್ರಂಥವನ್ನು ರಚಿಸುವಲ್ಲಿ ಶೈವಿಯ ಈ ಐದೂ ಆವರಣಗಳಲ್ಲಿ ಇರುವ ಸಂಬಂಧವನ್ನು ಶಕ್ತ್ಯನುಸಾರ ಕಂಡುಹಿಡಿಯಲು ಪ್ರಯತ್ನಿಸಿದ್ದೇವೆ. ಈ ಶಬ್ದಕೋಶ ಗ್ರಂಥವು ಈಗ ಸಿಕ್ಕುವದಿಲ್ಲ. ಆದ್ದರಿಂದ ಈ ಗ್ರಂಥದ ಪುಟ ೧೪೨ರಿಂದ ೨೨೭ ವರೆಗೆ ಇರುವ ಮಹತ್ವದ ಪುಟಗಳನ್ನು ಮಾತ್ರ ನಾವು ಇಲ್ಲಿ ಪುನಃ ಮುದ್ರಿಸಿದ್ದೇವೆ. ಕೆಲವೊಂದು ವ್ಯವಸ್ಥೆಯಿಂದ ಈ ವಿಷಯದ ಚರ್ಚೆಯು ಅಲ್ಲಿ ಆಗಿರುವದರಿಂದ ಈ ವಿಷಯದ ಬಗ್ಗೆ ಮಹತ್ವದ ಪ್ರಕಾಶವು ಬೀಳಬಹುದೆಂದು ಎಣಿಸಿ ನಾವು ಈ ಪುಟಗಳನ್ನು ಪುನಃ ಅಚ್ಚುಹಾಕಿದ್ದೇವೆ. ಸಂಪಾದಕ]

ಮಂತ್ರ:— ಪರಮಾತ್ಮನ ನಾಮವೇ ಮಂತ್ರವಾಗಿದೆ. ಇದು ವೀರಶೈವರಲ್ಲಿ 'ಓಂ ನಮಃಶಿವಾಯ' ಎಂದಿದೆ. ಇದನ್ನೇ ಅವರು ಜಪಿಸಬೇಕು. ಇದು ಭವಬಂಧನ ದುರಿತಗಳನ್ನು ಗೆಲ್ಲುವದೆಂದು ಶಿವಶರಣರ ಅಭಿಪ್ರಾಯವು. ವಿವೇಕವು ಹೋದಲ್ಲಿ, ನೆನಹುಗೆಟ್ಟು ಮತಿ ಮಂದವಾದಲ್ಲಿ ಮಂತ್ರವನ್ನು ನೆನೆಯಬೇಕು. ಇದನ್ನೇ ವೀರಶೈವನು ಜಪಿಸಬೇಕು. ಪಂಚಾಕ್ಷರಿಯು ಹೀಗಿದ್ದು ಇದೇ ಎಲ್ಲ ಮಂತ್ರಗಳಿಗೆ ಉತ್ಪತ್ತಿ ಲಯ ಸ್ಥಾನವಾಗಿದೆ. ಇದೇ ಶಿವಮಂತ್ರವೆನಿಸುತ್ತದೆ. ಏಳು ಕೋಟಿ ಮಹಾಮಂತ್ರಗಳಿವೆ. ಉಪಮಂತ್ರಗಳಿಗೆ ಲೆಕ್ಕವಿಲ್ಲ. ಆದರೆ ಶರಣನು ಅವುಗಳಲ್ಲಿ ವ್ಯಾಕುಲನಾಗದೆ ಈ ಶಿವಮಂತ್ರ ಒಂದನ್ನೇ ನೆನೆಯಬೇಕೆಂದು ವಚನಕಾರರ ಅಭಿಪ್ರಾಯವಿದೆ.

ಪಂಚಾಕ್ಷರ ಮಂತ್ರಃ— ಆರಂಭದಲ್ಲಿ ಜಗತ್ತು ತಲೆದೋರದೆ
ಕಾಲದಲ್ಲಿ ನಿತ್ಯ ನಿರಂಜನ ಪರವಸ್ತುವು ಒಂದೇ ಇದ್ದು ಅದು ನಿ
ಪ್ರಣವುವೆಂದು ಹೇಳಲ್ಪಡುತ್ತದೆ. ಅದರ ಚಿತ್ಕಳೆಗೆ ಶುದ್ಧ ಪ್ರ
ನೆಂಬ ಹೆಸರು ಇದೆ. ಈ ಶುದ್ಧ ಪ್ರಣವುದಲ್ಲಿ ಚಿತ್ತು ಉದಯ
ತ್ತದೆ. ಆ ಚಿತ್ತು ಸಚ್ಚಿದಾನಂದ ಸ್ವರೂಪುಳ್ಳದಾಗಿ ಚಿತ್‌ಪ್ರಣವ
ನಿಸಿಕೊಳ್ಳುತ್ತದೆ. ಅದರಲ್ಲಿ ಚಿತ್‌ಶಕ್ತಿಯು ಉದಯವಾಗುತ್ತದೆ. ಇ
ನಾದ ಬಿಂದು ಕಳೆಗಳು ಉಂಟಾಗುತ್ತವೆ. ಅಕಾರವೇ ನಾದವು
ರವೇ ಬಿಂದುವು ಮಕಾರವೇ ಕಳೆಯು ಮತ್ತು ಚಿತ್‌ಶಕ್ತಿ ಇವು ನಾ
ಒಂದಾದಲ್ಲಿ ಪ್ರಣವುವು ಅಂದರೆ ಓಂಕಾರವು ಉಂಟಾಗುತ್ತದೆ. ಈ
ವುವು ತಾರಕಾಕೃತಿ, ದಂಡಕಾಕೃತಿ, ಕುಂಡಲಾಕೃತಿ, ಅರ್ಧಚಂದ್ರಾ
ಬಿಂದ್ವಾಕೃತಿ ಎಂದು ಐದು ಆಕೃತಿಗಳನ್ನು ಒಳಗೊಂಡಿದೆ. ಅವು
ರಲ್ಲಿ ಅಡಕವಾಗಿವೆ. ತಾರಕಾಕೃತಿಯಲ್ಲಿ ನಕಾರ ಜನನ, ದಂಡಕಾ
ಯಲ್ಲಿ ಮಕಾರ ಜನನ, ಕುಂಡಲಾಕೃತಿಯಲ್ಲಿ ಶಿಕಾರ ಜನನ,
ಚಂದ್ರಾಕೃತಿಯಲ್ಲಿ ವಕಾರ ಜನನ, ಬಿಂದ್ವಾಕೃತಿಯಲ್ಲಿ ಯಕಾರ
ಈ ಪ್ರಕಾರ ಪಂಚಾಕ್ಷರಗಳ ಉತ್ಪತ್ತಿಯು ಇದೆ. ಈ ಅಕ್ಷರಗಳಲ್ಲಿ
ಪ್ರಣವುವು ಕೂಡಲು ಅದು ಶಿವಪಂಚಾಕ್ಷರೀ ಮಂತ್ರವೆಂದು ಹೇ
ಡುತ್ತದೆ. ಇದಕ್ಕೆ ಪ್ರಣವು ಪಂಚಾಕ್ಷರೀ ಮಂತ್ರ, ಷಡಕ್ಷರೀ ಮ
ಎಂಬ ಬೇರೆ ಹೆಸರುಗಳಿವೆ.

ಪ್ರಣವು ಪಂಚಾಕ್ಷರೀ ಮಂತ್ರದ ಜಪದ ಪರಿಣಾಮಗಳು
ಮನುಷ್ಯನು ಮೂಲದಲ್ಲಿ ಶಕ್ತಿಮಯನಾಗಿದ್ದಾನೆ. ಆದರೆ ಅದು
ವಾಗಿರುವದಿಲ್ಲ. ಅದನ್ನು ಪ್ರಕಟಗೊಳಿಸುವದೇ ಮಂತ್ರಜಪದ ಉದ್ದೇ
ಈ ಮಂತ್ರವು ಅವನ ಶಕ್ತಿಯನ್ನೆಲ್ಲ ಆವರಿಸತಕ್ಕದ್ದಾಗಿದೆ. ಮಂತ್ರ
ಸುವದೂ ಪರಮಾತ್ಮನನ್ನು ನೆನೆಯುವದೂ ಒಂದೇಯಾಗಿವೆ.
ಪ್ರಾರ್ಥನೆ ಎಂದರೆ ಪರಮಾತ್ಮನ ಹೆಸರನ್ನು ತೆಗೆದುಕೊಂಡು ಅವ
ಒಂದು ಭಿಕ್ಷೆ ಬೇಡುವದು ಅಲ್ಲ. ಯಾಕಂದರೆ ವೀರಶೈವರಲ್ಲಿ ಭಿಕ್ಷೆ
ವದು ಇಲ್ಲ. ಆದ್ದರಿಂದ ಪಂಚಾಕ್ಷರೀ ಜಪವನ್ನು ಮಾಡುವ
ಉದ್ದೇಶವು ಆತ್ಮಶಕ್ತಿಯನ್ನು ಬೆಳಿಸುವದಿರುತ್ತದೆ. ಹೀಗೆ ಶಕ್ತಿ
ಬೆಳಿಸಿ ಕಾಯಕಗಳನ್ನು ಮಾಡುತ್ತ ತಮ್ಮ ಎಲ್ಲ ಗುಣಗಳನ್ನು
ಪಡಿಸಬೇಕು. ಈ ವಿಕಾಸದ ಪೂರ್ಣಾವಸ್ಥೆಯೇ ಲಿಂಗಾಂಗಸ

ಸ್ತವ ಮಂತ್ರಜಪದ ಉದ್ದೇಶವು ಹೀಗಿರುವದರಿಂದ ಅದನ್ನು ಕೇವಲ ಯಾಂತ್ರಿಕ ರೀತಿಯಿಂದ ಮಾಡಕೂಡದು. ಅದರ ಅರ್ಥವನ್ನು ತಿಳಿದು ಜಪವನ್ನು ಮಾಡಬೇಕು. ಮನುಷ್ಯನ ಗುಣಗಳಾವವೆಂಬುದು ಷಟ್ಸ್ಥಲ ಶಾಸ್ತ್ರದಲ್ಲಿ ಹೇಳಿದೆ. ಇವುಗಳನ್ನು ತಿಳಿದುಕೊಂಡು ಮಂತ್ರಶಕ್ತಿಯನ್ನು ಅವುಗಳಲ್ಲಿ ಬೆರಿಸಬೇಕು. ಪಂಚಾಕ್ಷರದಲ್ಲಿ ಪ್ರಣವುಗೂಡಿ ಆರು ವಿಭಾಗಗಳಿವೆ. ಅವು ನ, ಮ, ಶಿ, ವ, ಯ, ಓಂ ಎಂದಿವೆ. ಅವುಗಳು ಮನುಷ್ಯನ ಆಯಾ ಗುಣಗಳಿಗೆ ಸಂಬಂಧಪಡುತ್ತವೆ. ಅವುಗಳ ಉಚ್ಚರಣೆಯಲ್ಲಿ ಈ ಗುಣಗಳ ವಿಕಾಸದ ಉತ್ಕಟ ಭಾವನೆಯು ಇರಬೇಕು. ಈ ಗುಣಗಳಲ್ಲಿ ವಚನ ಶಾಸ್ತ್ರವು ೫ ಮುಖ್ಯ ವಿಭಾಗಗಳನ್ನು ಮಾಡುತ್ತದೆ. ಅವು:— (೧) ಶರೀರಕ್ಕೆ ಸಂಬಂಧಿಸಿದವು. (೨) ಬಾಹ್ಯ ವರ್ತನೆಗೆ ಸಂಬಂಧಿಸಿದವು. (೩) ಅಂತರಂಗದ ಆಚರಣೆಗೆ ಸಂಬಂಧಿಸಿದವು. (೪) ಮನುಷ್ಯನ ಯೌಗಿಕ ಜೀವನಕ್ಕೆ ಸಂಬಂಧಿಸಿದವು. (೫) ಮನುಷ್ಯನ ಲೈಂಗಿಕ ವರ್ತನೆಗೆ ಸಂಬಂಧಿಸಿದವು. ಹೀಗೆ ಐದು ವಿಭಾಗಗಳನ್ನು ಸ್ಥೂಲವಾಗಿ ಮಾಡಬಹುದು. ಯಾವ ಯಾವ ಗುಣಗಳು ಯಾವ ಯಾವ ಪ್ರಣವುಗಳಿಗೆ ಸಂಬಂಧಪಡುತ್ತವೆಂಬುದನ್ನು ವೀರಶೈವರು ಅರಿತು ಆಚರಿಸಬೇಕು. ಆಚರಿಸಿದಲ್ಲಿ ಆಯಾ ಗುಣಗಳು ಬಲಪಡುತ್ತವೆ.

(೧) ನಕಾರಮಂತ್ರ:—ಪೃಥ್ವೀತತ್ವ, ರುಧಿರಮಯ ದಶೇಂದ್ರಿಯಗಳು ಮತ್ತು ಆಧಾರಚಕ್ರ ಇವು ಶರೀರಕ್ಕೆ ಸಂಬಂಧಪಡುತ್ತವೆ. ಸುಚಿತ್ತ ಹಸ್ತ ಮತ್ತು ಶ್ರದ್ಧಾಭಕ್ತಿ ಇವು ಬಾಹ್ಯಾಚಾರಕ್ಕೆ ಸಂಬಂಧಿಸುತ್ತವೆ. ಅಂತರ್ಯಾಮಿತ್ವ, ಕ್ರಿಯಾಶಕ್ತಿ ಮತ್ತು ಪೀತವರ್ಣ ಇವು ಅಂತರಂಗದ ಆಚರಣೆಗೆ ಸಂಬಂಧಿಸುತ್ತವೆ. ಬ್ರಹ್ಮತತ್ವ, ಕರ್ಮಸಾದಾಖ್ಯ, ಸದ್ಯೋಜಾತ ಮಂತ್ರ ಮೂರ್ತಿ, ಸತ್ ಸ್ವರೂಪ ಇವು ಯೌಗಿಕ ಜೀವನಕ್ಕೆ ಸಂಬಂಧಪಡುತ್ತವೆ. ಆತ್ಮತತ್ವ, ಈಶಾನ್ಯಮಂತ್ರ ಮೂರ್ತಿ, ಬ್ರಹ್ಮ, ಭಕ್ತಸ್ಥಲ, ಸ್ವರೂಪ ಭಕ್ತ ಮತ್ತು ಆಚಾರಲಿಂಗ ಇವು ಲೈಂಗಿಕ ವರ್ತನೆಗೆ ಸಂಬಂಧಪಡುತ್ತವೆ. ನಕಾರ ಪ್ರಣವು ಇವುಗಳಿಗೆಲ್ಲ ಸಂಬಂಧಿಸಿರುವದರಿಂದ ಅದರ ಪ್ರಭಾವದ ಮೂಲಕ ಈ ಗುಣಗಳ ವಿಕಾಸವು ಉಂಟಾಗುತ್ತದೆ.

(೨) ಮಕಾರ ಮಂತ್ರ:— ಅಪ್ಪು ತತ್ವ, ಮಾಂಸಮಯ, ಪಂಚಕಗಳು ಮತ್ತು ಸ್ವಾಧಿಷ್ಠಾನಚಕ್ರ ಇವು ಶರೀರಕ್ಕೆ ಸಂಬಂ ಸುಬುದ್ಧಿಹಸ್ತ, ನೈಷ್ಠಿಕಾಭಕ್ತಿ ಇವು ಬಾಹ್ಯಾಚಾರಕ್ಕೆ ಸಂಬ ತ್ತವೆ. ಜೈತನ್ಯ, ಜ್ಞಾನಶಕ್ತಿ ಮತ್ತು ನೀಲವರ್ಣ ಇವುಗಳು ರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ವಿಷ್ಣುತತ್ವ, ಕರ್ತೃಸಾದಾ ವಾಮದೇವ ಮಂತ್ರಮೂರ್ತಿ, ಚಿತ್‌ಸ್ವರೂಪ ಇವು ಯೌಗಿಕ ನಕ್ಕೆ ಸಂಬಂಧಿಸುತ್ತವೆ. ವಿದ್ಯಾತತ್ವ, ಈಶ್ವರಮಂತ್ರಮೂರ್ತಿ, ಬ್ರಹ್ಮ, ವಿದ್ಯಾಂಗಸ್ವರೂಪ, ಮಹೇಶ್ವರ ಮತ್ತು ಗುರುಲಿಂಗ ಇವು ಲೈಂಗಿಕ ವರ್ತನೆಗೆ ಸಂಬಂಧಪಡುತ್ತವೆ. ಇವುಗಳಿಗೆ ಮಕಾರ ಪ್ರಣವ ಸಂಬಂಧವಾಗಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣ ವಿಕಾಸವು ಉಂಟಾಗುತ್ತದೆ.

(೩) ಶಿಕಾರಮಂತ್ರ:—ಅಗ್ನಿತತ್ವ, ಮೇಧಸ್ಸು ಮಯ, ಪ್ರಾಣ ರೂಪು, ಮಣಿಪೂರಕ ಚಕ್ರ, ಇವು ಶರೀರಕ್ಕೆ ಸಂಬಂಧಿಸಿದವು. ಹಂಕಾರಹಸ್ತ ಮತ್ತು ಅವಧಾನಭಕ್ತಿ ಇವು ಬಾಹ್ಯ ಆಚರಣೆಗೆ ಸಂಬ ಪಡುತ್ತವೆ. ಭಾವ, ಇಚ್ಛಾಶಕ್ತಿ ಮತ್ತು ಕುಂಕುಮವರ್ಣ ಇವು ರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ರುದ್ರತತ್ವ, ಮೂರ್ತಿ ಸಾದಾ ಅಘೋರಮಂತ್ರ ಮೂರ್ತಿ, ಆನಂದಸ್ವರೂಪ ಇವು ಯೌಗಿಕ ಜೀವನ ಸಂಬಂಧಪಡುತ್ತವೆ. ಶಿವತತ್ವ, ಮಹೇಶ್ವರಮಂತ್ರ ಮೂರ್ತಿ, ಬ್ರಹ್ಮ, ಪ್ರಸಾದಿ, ಶಿವಲಿಂಗ ಇವು ಲೈಂಗಿಕ ಆಚರಣೆಗೆ ಸಂಬ ಪಡುತ್ತವೆ. ಶಿಕಾರಪ್ರಣವವು ಇವುಗಳಿಗೆ ಸಂಬಂಧಿಸಿರುವದರಿಂದ ಧ್ಯಾನ ಮೂಲಕ ಈ ಗುಣಗಳ ವಿಕಾಸವು ಉಂಟಾಗುತ್ತದೆ.

(೪) ವಕಾರಮಂತ್ರ:— ವಾಯುತತ್ವ, ಅಸ್ಥಿಮಯ, ದಶವಾ ಗಳ ಸ್ವರೂಪು, ಅನಾಹತಚಕ್ರ, ಇವು ಶರೀರಕ್ಕೆ ಸಂಬಂಧಪಡುತ್ತ ಸುಮನಹಸ್ತ ಮತ್ತು ಅನುಭಾವಭಕ್ತಿಗಳು ಬಾಹ್ಯಾಚಾರಕ್ಕೆ ಸಂಬ ಪಡುತ್ತವೆ. ಕರ್ತಾರ, ಆದಿಶಕ್ತಿ ಮತ್ತು ಶ್ವೇತವರ್ಣಗಳು ಅಂತರಂ ಆಚರಣೆಗೆ ಸಂಬಂಧಪಡುತ್ತವೆ. ಈಶ್ವರತತ್ವ, ಅಮೂರ್ತಿಸಾದಾ ತತ್ಪುರುಷಮಂತ್ರ ಮೂರ್ತಿ, ಮತ್ತು ನಿತ್ಯಸ್ವರೂಪ ಇವುಗಳು ಯ ಜೀವನಕ್ಕೆ ಸಂಬಂಧಿಸುತ್ತವೆ. ಈಶ್ವರತತ್ವ, ಈಶಮಂತ್ರಮೂರ್ತಿ,

ಬ್ರಹ್ಮ, ಕಾಮಾಂಗಸ್ವರೂಪವಪ್ಪ ಪ್ರಾಣಲಿಂಗಿ ಮತ್ತು ಜಂಗಮ ಲಿಂಗ, ಇವು ಲೈಂಗಿಕ ಆಚರಣೆಗೆ ಸಂಬಂಧಪಡುತ್ತವೆ. ವಕಾರ ಪ್ರಣವವು ಇವುಗಳಿಗೆ ಸಂಬಂಧಿಸಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣ ಗಳ ವಿಕಾಸವು ಉಂಟಾಗುತ್ತದೆ.

(೫) ಯಕಾರಮಂತ್ರ:— ಆಕಾಶತತ್ವ, ಸುಜ್ಞಾನಮಯ, ತ್ರಿಗುಣ ಸ್ವರೂಪ, ವಿಶುದ್ಧಿಚಕ್ರ, ಇವು ಶರೀರಕ್ಕೆ ಸಂಬಂಧಿಸುತ್ತವೆ. ಸುಜ್ಞಾನ ಹಸ್ತ ಮತ್ತು ಆನಂದಭಕ್ತಿಗಳು ಬಾಹ್ಯಾಚಾರಕ್ಕೆ ಸಂಬಂಧಪಡುತ್ತವೆ. ಕ್ಷೇತ್ರಜ್ಞ, ಪರಾಶಕ್ತಿ, ಸ್ಫಟಿಕವರ್ಣ ಇವು ಅಂತರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ಸದಾಶಿವತತ್ವ, ಶಿವಸಾದಾಖ್ಯ, ಈಶಾನ್ಯಮಂತ್ರ ಮೂರ್ತಿ, ಪರಿಪೂರ್ಣಸ್ವರೂಪ ಇವು ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿ ಸುತ್ತವೆ. ಸದಾಶಿವತತ್ವ, ಸದಾಶಿವಮಂತ್ರಮೂರ್ತಿ, ವಿಜ್ಞಾನಬ್ರಹ್ಮ, ಭೂತಾಂಗಸ್ವರೂಪವಪ್ಪ ಶರಣ, ಪ್ರಸಾದಲಿಂಗ ಇವು ಲಿಂಗವಿಕಾಸಾವ ಸ್ಥೆಯನ್ನು ತೋರಿಸುತ್ತವೆ. ಇವುಗಳಿಗೆ ಯಕಾರಮಂತ್ರವು ಸಂಬಂಧಿಸಿರು ವದರಿಂದ ಅದರ ಧ್ಯಾನದ ಮೂಲಕ ಈ ಗುಣಗಳೆಲ್ಲ ವಿಕಾಸವನ್ನು ಹೊಂದುತ್ತವೆ.

(೬) ಓಂಕಾರ ಮಂತ್ರ:— ಆತ್ಮತತ್ವ, ಶುಕ್ಲಮಯ, ಪಂಚಭೂ ತಾತ್ಮಮಯ, ಆಜ್ಞಾಚಕ್ರ ಇವುಗಳು ಶರೀರಕ್ಕೆ ಸಂಬಂಧಪಡುತ್ತವೆ. ಸದ್ಭಾವ ಹಸ್ತ ಮತ್ತು ಸಮರಸಭಕ್ತಿ ಇವುಗಳು ಬಾಹ್ಯಾಚಾರಕ್ಕೆ ಸಂಬಂ ಧಪಡುತ್ತವೆ. ಶಿವ, ಚಿತ್‌ಶಕ್ತಿ, ಮತ್ತು ಜ್ಯೋತಿರ್ಮಯ ವರ್ಣ, ಇವು ಅಂತರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ಮಹತ್ ತತ್ವ, ಮಹಾ ಸಾದಾಖ್ಯ, ಮಹಾಮಂತ್ರಮೂರ್ತಿ, ನಿರಂಜನಸ್ವರೂಪ, ಇವುಗಳು ಯೌಗಿಕ ಜೀವನಕ್ಕೆ ಸಂಬಂಧಿಸುತ್ತವೆ. ಪರತತ್ವ, ಶಿವಮಂತ್ರಮೂರ್ತಿ, ಪರಬ್ರಹ್ಮ, ಶಿವಲಿಂಗರೂಪ ಸ್ವರೂಪವಪ್ಪ ಐಕ್ಯ, ಮಹಾಲಿಂಗ ಇವುಗಳು ಲಿಂಗ ವಿಕಾಸಾವಸ್ಥೆಯನ್ನು ತೋರಿಸುತ್ತವೆ. ಇವುಗಳಿಗೆ ಓಂಕಾರವು ಸಂಬಂ ಧಿಸಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣಗಳೆಲ್ಲ ವಿಕಾಸವನ್ನು ಹೊಂದುತ್ತವೆ.

ಪಂಚಾಕ್ಷರಮಂತ್ರ ಜಪಿಸುವವನು ಮೇಲೆ ಹೇಳಿದಂತೆ ಬಾಹ್ಯಾ ಚಾರ ಮತ್ತು ಅಂತರಂಗಿಕ ಆಚರಣೆಗಳಂತೆ ನಡೆಯಬೇಕು. ಅದ

ರಿಂದ ಅವನ ಆಧ್ಯಾತ್ಮಿಕ ಜೀವನವೂ ಉಚ್ಚತರದ್ದಾಗುತ್ತದೆ. ಇದರಿಂದ ಅವನ ಶರೀರವೂ ಅವನ ಲೈಂಗಿಕ ಸ್ಥಿತಿಯೂ ಶ್ರೇಷ್ಠತರದ್ದಾಗುತ್ತವೆ. ಆದರೆ ಈ ಕಾರ್ಯದಲ್ಲಿ ಪಂಚಾಕ್ಷರಗಳನ್ನು ಜಪಿಸಿ ಅವುಗಳ ಮೂಲಕ ತನ್ನ ಶರೀರವನ್ನೆಲ್ಲ ಮಂತ್ರಮಯವನ್ನಾಗಿ ಮಾಡತಕ್ಕದ್ದು. ಈ ಭಾವವು ಮೇಲ್ಕಂಡ ವಿವರಣೆಗಳಲ್ಲಿರುತ್ತದೆ.

ನಿರಂಜನ ಪ್ರಣವಃ – ಏನೂ ಏನೂ ಎನಲಿಲ್ಲದ ಮಹಾ ಘನ ನಿರಂಜನಾತೀತವಾದ ನೆನಹು ಮಾತ್ರದಲ್ಲಿ ನಿರಂಜನ ಪ್ರಣವವು ಉತ್ಪತ್ತಿಯನ್ನು ಹೊಂದುತ್ತದೆ. ಸೃಷ್ಟಿಯ ಆವಿರ್ಭಾವವಾಗುವ ಮೊದಲು ಪರಮಾತ್ಮನ ಶೂನ್ಯದ ಮೊದಲಿನ ಸ್ಥಿತಿಯ ದ್ಯೋತಕವು ಇದಾಗಿದೆ.

ಅವಾಚ್ಯಃ— ನಿರಂಜನ ಪ್ರಣವದ ನೆನಹು ಮಾತ್ರದಿಂದ ಇದಾಗುತ್ತದೆ. ಇದಕ್ಕೆ ನಿರಂಜನ ಹಕಾರವೆಂಬ ಹೆಸರಿದೆ. ಅದು ಅವಾಚ್ಯ ಎಂದರೆ ಹೇಳಲಿಕ್ಕೆ ಬಾರದ ಪ್ರಣವವೆಂದು ವಚನಕಾರರು ಹೇಳುತ್ತಾರೆ. ಅಲ್ಲಿ ನಾದವು ದಿವ್ಯವಾದದ್ದು, ಬಿಂದುವು ನಿರಾವರಣವಾದದ್ದು, ಮತ್ತು ಕಳೆಯು ನಿರುಪಮವಾದದ್ದೆಂದು ಹೇಳಲ್ಪಡುತ್ತಿದೆ. ಇಂಥ ಇವು ಮೂರು ಕೂಡಿದಲ್ಲಿ ಈ ಅವಾಚ್ಯ ಪ್ರಣವವಾಗುವದು.

ಹಕಾರಃ— ಅದು ವಾಚ್ಯಪ್ರಣವವು. ಅದಕ್ಕೆ ವಾಚ್ಯವೆಂಬ ಹೆಸರಿದೆ. ಅದು ಪರಮ ತೇಜೋರಾಶಿಯಾದ ಪರವಸ್ತು ಸ್ವರೂಪವಾಗಿರುತ್ತದೆ. ಅದು ಸರ್ವ ಚೈತನ್ಯಾತ್ಮಕವಾಗಿರುತ್ತದೆ. ಅನಿರ್ವಾಚ್ಯವು ವಾಚ್ಯವಾದಲ್ಲಿ ಹಕಾರವಾಗುತ್ತದೆ. ಅದು ನಿರಂಜನ ಮತ್ತು ಅವಾಚ್ಯಕ್ಕಿಂತಲೂ ಸ್ಥೂಲವು.

ಹಂ, ಕ್ಷಂಃ— ಪರಶಿವ ಮತ್ತು ಶಕ್ತಿ ಇವುಗಳನ್ನು ಈ ಅಕ್ಷರಗಳು ಸೂಚಿಸುತ್ತವೆ.

ಕಲಾಪ್ರಣವಃ— ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ ಕಲಾ ಪ್ರಣವದ ಉತ್ಪತ್ತಿಯು. ಅವಾಚ್ಯ ಪ್ರಣವದ ನೆನಹಿನಿಂದ ಚಿನ್ನಾದ, ಚಿದ್ಬಿಂದು, ಚಿತ್ಕಲೆಗಳು ಉದಯವಾಗುತ್ತವೆ. ಇದಕ್ಕೆ ಚಿತ್ಕಲಾಪ್ರಣವವೆಂತಲೂ ಹೇಳುತ್ತಾರೆ. ಅದರ ಚಿನ್ನಾದ ಕಲೆಯಲ್ಲಿ ೧೨ ಕಲೆಗಳು, ಚಿದ್ಬಿಂದು ಕಲೆಯಲ್ಲಿ ೧೬ ಕಲೆಗಳು, ಚಿತ್ಕಲೆಯಲ್ಲಿ ೧೦ ಕಲೆಗಳು ಅಂತು ೩೮ ಕಲೆಗಳು ಕೂಡಿ ಕಲಾಪ್ರಣವವಾಗುತ್ತದೆ. ಈ

ಯೋಂಮ ಕಲೆಯು ಬಹು ಪ್ರಕಾಶಮಾನವಾದುದು. ಅದು ಬಹು ಸೂಕ್ಷ್ಮ ವಾದುದು.

ಅನಾದಿಪ್ರಣವು:— ಚಿತ್ಕಳಾ ಪ್ರಣವದ ನೆನಹು ಮಾತ್ರದಿಂದ ಅನಾದಿ ಪ್ರಣವುದ ಉತ್ಪತ್ತಿಯು. ಆದಿ ಅಕಾರ, ಉಕಾರ, ಮಕಾರ ವಿಲ್ಲದಂದು ಆದಿ ನಾದ ಬಿಂದು ಕಳೆಗಳಿಲ್ಲದಂದು ಅನಾದಿ ಪ್ರಣವು ಓಂಕಾರವು ಉಂಟಾಗುತ್ತದೆ.

ಬಕಾರಪ್ರಣವು:— ಕಲಾಪ್ರಣವದಲ್ಲಿ ಉದಯವಾದ ಚಿನ್ನಾದ ದಿಂದ ಬಕಾರಪ್ರಣವುವು ಉಂಟಾಗುತ್ತದೆ. ಅದಕ್ಕೆ ಪರನಾದವೆಂಬ ಹೆಸರು ಇದೆ. ಪರಶಕ್ತಿ ಸುನಾದ ಚೈತನ್ಯವೇ ಈ ಬಕಾರವು.

ಸಕಾರಪ್ರಣವು:— ಕಲಾಪ್ರಣವದ ಚಿದ್ಬಿಂದುವಿನಿಂದ ಸಕಾರಪ್ರಣ ವುದ ಉತ್ಪತ್ತಿಯು. ಅದಕ್ಕೆ ಪರಬಿಂದುವೆನ್ನುವರು. ಪರಶಕ್ತಿಯ ಚಿತ್ ಪ್ರಭಾವರಣವೇ ಸಕಾರವು.

ವಕಾರ ಪ್ರಣವು:— ಕಲಾಪ್ರಣವದ ಚಿತ್ಕಳೆಯಿಂದ ವಕಾರ ಪ್ರಣವುದ ಉತ್ಪತ್ತಿಯು. ಅದಕ್ಕೆ ಪರಕಳೆ ಎಂದೆನ್ನುತ್ತಾರೆ. ಪರಶಕ್ತಿಯ ಚಿತ್ಕಲಾತೇಜದ ಪುಂಜವೇ ಈ ವಕಾರವು.

ಬ, ಸ, ವಾಕ್ಷರತ್ರಯ:— ಈ ಪ್ರಣವುಗಳು ಪರನಾದ ಬಿಂದು ಪರಕಳೆಗಳು. ಇವುಗಳ ಮೇಲೆ ಮೂಲ ಪ್ರಕೃತಿಯು ಅವಲಂಬಿಸಿರು ವದು. ಈ ಮೂರು ಅಕ್ಷರಗಳು ಮುಂದಿನ ಅ, ಉ, ಮ ಇವುಗಳಿಗೂ ಆಧಾರವಾಗಿವೆ. ಈ ಅ, ಉ, ಮ ಪ್ರಣವುಗಳು ಹೆಚ್ಚಿಗೆ ಸ್ಥೂಲವಾದವು ಗಳು ಮತ್ತು ಇವು ಅನಾದಿಪ್ರಣವದ ನೆನಹು ಮಾತ್ರದಿಂದ ಉಂಟಾಗುತ್ತವೆ.

ಅಕಾರ ಪ್ರಣವು:— ಅದು ಆದಿನಾದವು. ಅದಾದರೂ ಚಿನ್ನಾದ ವೆಂದು ಹೇಳಲ್ಪಡುತ್ತದೆ. ಜಗತ್ತಿನಲ್ಲಿ ಸಂಹಾರಕೃತ್ಯವನ್ನೆಸಗುತ್ತದೆ. ಆದ್ದ ರಿಂದ ಅದು ರುದ್ರತತ್ವವು. ಓಂಕಾರ ಪ್ರಣವುದ ತಾರಕಾಕೃತಿ ಮತ್ತು ದಂಡಕಾಕೃತಿಗಳು ಅಕಾರಪ್ರಣವುದಲ್ಲಿ ಸಂಬಂಧಪಡುತ್ತವೆ.

ಉಕಾರ ಪ್ರಣವು:— ಇದು ಆದಿ ಬಿಂದುವು. ಅಥವಾ ಚಿದ್ಬಿಂದುವು. ಇದು ತಿರೋಧಾನ ಕೃತ್ಯವನ್ನೆಸಗುತ್ತದೆ. ಆದ್ದರಿಂದ ಅದು ಈಶ್ವರ

ತತ್ವವು. ಓಂಕಾರಪ್ರಣವುವ ತಾರಕಾಕೃತಿ ಮತ್ತು ಅರ್ಧಚಂದ್ರಾಕೃತಿಗಳು ಇದಕ್ಕೆ ಸಂಬಂಧಿಸುತ್ತವೆ.

ಮಕಾರ ಪ್ರಣವು:— ಇದು ಆದಿಕಳೆಯು ಅಥವಾ ಚಿತ್ಕಳೆಯು ಇದೆ. ಇದು ಅನುಗ್ರಹಕೃತ್ಯವನ್ನೆಸಗುತ್ತದೆ. ಅದ್ದರಿಂದ ಇದು ಸದಾಶಿವತತ್ವವು. ಓಂಕಾರದ ಜ್ಯೋತಿರಾಕೃತಿ ಮತ್ತು ದರ್ಪಣಾಕೃತಿಗಳು ಇವುಗಳಿಗೆ ಸಂಬಂಧಿಸುತ್ತವೆ.

ಬೀಜಾಕ್ಷರಗಳು:— ಅ, ಉ, ಮ, ಬ, ಸ, ವ, ಇವುಗಳಿಗೆ ಬೀಜಾಕ್ಷರಗಳೆಂದು ಹೆಸರಿದೆ. ಬ ಸ ವಾಕ್ಷರಗಳು ಚಿನ್ನಾದ ಚಿದ್ಬಿಂದು ಚಿತ್ಕಲಾ ಸ್ವರೂಪಗಳು. ಅ, ಉ, ಮಾಕ್ಷರಗಳು ಶಿವಶಕ್ತ್ಯಾತ್ಮಕವಾಗಿವೆ- ಅವೂ ಕೂಡ ಚಿತ್‌ಸ್ವರೂಪಗಳು. ಅವುಗಳಿಂದ ಮೂಲ ಪ್ರಣವವು ಉಂಟಾಗುತ್ತವೆ.

ಶಕ್ತಿಸಂಬಂಧದ ಪ್ರಣವುಗಳು:— ಉ, ಮ, ಅ ಈ ಕ್ರಮದಿಂದ ಜಪಗಳಿದ್ದಲ್ಲಿ, ಅವು ಶಕ್ತಿಸಂಬಂಧದ ಪ್ರಣವುಗಳೆಂದೆನಿಸಿಕೊಳ್ಳುತ್ತವೆ.

ಶಿವಸಂಬಂಧದ ಪ್ರಣವುಗಳು:— ಇಲ್ಲಿಯು ಜಪದ ಕ್ರಮವು ಅ, ಉ, ಮ ಹೀಗಿರುತ್ತವೆ.

ಶಿವಶಕ್ತಿರಹಿತ ಪ್ರಣವುಗಳು:— ಇಲ್ಲಿಯು ಜಪದ ಕ್ರಮವು ಮ, ಅ, ಉ ಹೀಗಿರುತ್ತದೆ.

ಶಿವಸಂಬಂಧ, ಶಕ್ತಿಸಂಬಂಧ ಮತ್ತು ಶಿವಶಕ್ತಿರಹಿತ ಪ್ರಣವುಗಳ ಕೂಟವು:— ಶಿವಸಂಬಂಧವಾದ ಪ್ರಣವುಗಳು, ಶಕ್ತಿಸಂಬಂಧವಾದ ಪ್ರಣವುಗಳು, ಶಿವಶಕ್ತಿರಹಿತ ಪ್ರಣವುಗಳು, ಇವು ಮೂರು ಕೂಡಿ ಏಕಾರ್ಥವಾದಲ್ಲಿ ಅಖಂಡ ಅಪ್ರಮಾಣ ವಾಚಾಮಗೋಚರಕ್ಕತ್ತತ್ತವಾದ ಮಹಾಘನಕ್ಕೆ ಘನವಾದ ಉಪಮಾತೀತಕ್ಕೆ ಅತ್ತತ್ತವಾದ ಸ್ಥಿತಿಯು ಇರುತ್ತದೆ.

ಶಿವಸಂಬಂಧದ ಪ್ರಣವುಗಳಿಂದಾದ ವಸ್ತುಗಳು:— ಇವರಲ್ಲಿ ಜ್ಯೋತಿಸ್ವರೂಪಪ್ರಣವು, ದರ್ಪಣಾಕಾರಪ್ರಣವ, ಅರ್ಧಚಂದ್ರಕಪ್ರಣವ, ಕುಂಡಲಾಕಾರಪ್ರಣವ, ದಂಡಸ್ವರೂಪಪ್ರಣವ, ತಾರಕಸ್ವರೂಪಪ್ರಣವ ಎಂಬ ಆರು ಪ್ರಕಾರಗಳಿರುತ್ತವೆ.

BOOK-POST.

ಶ್ರೀ. ರಾ॥ ರಾ॥

From,

Shivanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ರಾ॥ ಪಿ.
ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ
ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್

# ಶಿವಾನುಭವ

] [ ಸಂಚಿಕೆ ೫-೬

ಸಂಪಾದಕ.

ಫ. ಗು. ಹಳಕಟ್ಟಿ,

ಬಿಎ. ಎಲ್. ಎಲ್. ಬಿ.



೫-೧೨-೦ ] ವಿಜಾಪುರ. [ ಮೇ-ಜೂನ. ೧೯೩೦

R. N. B. 2554

# ಶಿವಾನುಭವ

ಸಂಪುಟ ೨೬ ]                    [ ಸಂಚಿಕೆ ೪

ಸಂಪಾದಕ.

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.



# ಶಿವಾನುಭವ

ಸಂಪುಟ ೨೩ ] [ ಸಂಚಿಕೆ ೫-೬

ಸಂಪಾದಕ.

ಫ. ಗು. ಹಳಕಟ್ಟಿ,

ಬಿ.ಎ. ಎಲ್. ಎಲ್. ಬಿ.





ವಾ. ಚಂ. ೫-೧೨-೦ ] ವಿಜಾಪುರ. [ ಮೇ, ಜೂನ. ೧೯೫೨

# ವಿಷಯಾನುಕ್ರಮಣಿಕೆ.



---


ಶಿವಾನುಭವ ಮಾಸಪತ್ರಿಕೆ,

ವಿಜಾಪುರ.

ವಾರ್ಷಿಕ ಚಂದಾ ೫—೧೨—೦

# ಶಿವಾನುಭವ

| ವರ್ಷ ೨೬ | ಮೇ-ಜೂನ ೧೯೫೨ | ಸಂಚಿಕೆ ೫-೬ |
|---|---|---|

## ವೀರಶೈವ ಧರ್ಮದ ಪ್ರಸಾರ.

( ಲೇಖಕರು— ರಾ। ಬ॥ ಫ. ಗು. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. )
ವಿಜಾಪುರ.

....❖●❖....

ವೀರಶೈವ ಧರ್ಮವು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿ ಬೆಳೆದಿರುವದಲ್ಲದೆ ಅನೇಕತರದ ವೃತ್ತಿಗಳನ್ನು ಮಾಡುವವರಲ್ಲಿಯೂ ಕೂಡ ಅದು ಬೆಳೆದಿರುತ್ತದೆ. ಅಸ್ಪೃಶ್ಯ ಮೊದಲ್ಗೊಂಡು ಎಲ್ಲ ಸಮಾಜದವರೂ ಅದರಲ್ಲಿ ಸೇರ್ಪಡೆಯಾಗಿರುತ್ತಾರೆ. ಹೀಗೆ ಒಂದು ವ್ಯಾಪಕ ಸ್ವರೂಪವನ್ನು ಹೊಂದಿದ ಧರ್ಮವು ಅದಾಗಿದೆ. ಈ ಕಾಲದಲ್ಲಿ ಶೀಖ ಧರ್ಮವು ಮಾತ್ರ ಈ ತೆರದ್ದಾಗಿರುತ್ತದೆ. ಪುರಾತನ ಕಾಲದಲ್ಲಿ ಬೌದ್ಧ ಧರ್ಮವೂ ಕೆಲಮಟ್ಟಿಗೆ ಜೈನ ಧರ್ಮವೂ ಈ ಪ್ರಕಾರ ವಿಸ್ತೃತ ಸ್ವರೂಪವನ್ನು ತಾಳಿದ್ದವು. ಆದರೆ ಬೌದ್ಧ ಧರ್ಮವು ಹಿಂದುಸ್ತಾನದಲ್ಲಿ ಸ್ಥಾಯಿಕವಾಗಿ ನೆಲೆಗೊಳ್ಳಲಿಲ್ಲ. ಅದರ ಅನುಯಾಯಿಗಳು ಚೀನ, ಜಪಾನ, ಬ್ರಹ್ಮದೇಶ ಇಂಥ ಪರ ದೇಶಗಳಲ್ಲಿ ಕಂಡುಬರುತ್ತಾರೆ. ಜೈನ ಧರ್ಮದ ಅನುಯಾಯಿಗಳ ಸಂಖ್ಯೆಯು ಹಿಂದುಸ್ಥಾನದಲ್ಲಿ ಬಹಳ ಸ್ವಲ್ಪ ಇರುತ್ತದೆ. ಆದರೆ ವೀರಶೈವ ಸ್ಥಿತಿಯು ಹೀಗೆ ಇರುವದಿಲ್ಲ. ಅವರ ಸಂಖ್ಯೆಯು ಬಹಳ ದೊಡ್ಡದಾಗಿರುತ್ತದೆ. ಈ ಸ್ಥಿತಿಯು ಬಸವೇಶ್ವರನ ಕಾಲದಿಂದಲೂ ಇದ್ದುದು ತಿಳಿದುಬರುತ್ತದೆ. ಒಟ್ಟಿಗೆ ಕರ್ನಾಟಕದಲ್ಲಿ ಅದು ಒಂದು ಪ್ರಬಲ ಸಮಾ

ಜವಾಗಿರುವದಲ್ಲದೆ ಸುತ್ತಲಿನ ಪ್ರಾಂತಗಳಲ್ಲಿಯೂ ಕೂಡ ಅದು ಪಸರಿಸಿರುತ್ತದೆ. ಈ ಸ್ಥಿತಿಯು ಅದಕ್ಕೆ ಉಂಟಾದ ಕಾರಣವೇನೆಂಬುದನ್ನು ತಿಳಿಯುವದು ಬಹು ಮಹತ್ವದ್ದಾಗಿರುತ್ತದೆ.

ಕೆಲವು ವರ್ಷಗಳ ಹಿಂದೆ ಶಿವಶರಣರು ಉಂಟುಮಾಡಿದ ವಾಙ್ಮಯದ ಪರಿಚಯವು ಬಹು ಸ್ವಲ್ಪ ಜನರಿಗೆ ಇದ್ದಿತು. ಅದರಲ್ಲಿರುವ ನೈತಿಕ ಮತ್ತು ಧಾರ್ಮಿಕ ಉಚ್ಚತೆಯ ತತ್ವಗಳ ತಿಳಿವಳಿಕೆಯು ಬಹು ಜನರಿಗೆ ಇರಲಿಲ್ಲ. ಆಗ ಬಸವೇಶ್ವರನು ೧ ಲಕ್ಷ ತೊಂಬತ್ತಾರುಸಾವಿರ ಜಂಗಮರನ್ನು ತನ್ನ ಅನುಯಾಯಿಗಳನ್ನು ಮಾಡಿಕೊಂಡು ಅವರಲ್ಲಿ ಸ್ವೈರಾಚಾರಗಳನ್ನು ಪ್ರೋತ್ಸಾಹಿಸುತ್ತ, ಅವರ ಮೂಲಕ ಕೀಳ ಜನರಲ್ಲಿ ವೀರಶೈವ ಧರ್ಮವನ್ನು ಪ್ರಸಾರಪಡಿಸಿದನೆಂದು ಬಹು ಜನರ ತಿಳಿವಳಿಕೆ ಇದ್ದಿತು. ಆದರೆ ವಚನ ವಾಙ್ಮಯವು ಪ್ರಕಟವಾದಂದಿನಿಂದ ಇಂಥ ತಿಳಿವಳಿಕೆಯು ತಪ್ಪಾದದ್ದೆಂದು ಎಲ್ಲರಿಗೂ ತೋರಿಬಂದಿರುತ್ತದೆ. ಈಚೆಗೆ ಈ ತೆರದ ಆರೋಪಗಳನ್ನು ಮಾಡುವದು ಪೂರ್ಣವಾಗಿ ನಿಂತುಹೋಗಿದೆ.

ಬೇರೆ ಕೆಲವರು ಬಸವೇಶ್ವರನು ಒಂದು ದೊಡ್ಡ ರಾಜ್ಯದಲ್ಲಿ ಮಂತ್ರಿಯಾದದ್ದರಿಂದ ಅವನು ತನ್ನ ಅಧಿಕಾರದ ಬಲದಿಂದ ಬಹು ಜನರನ್ನು ಧರ್ಮಾಂತರ ಮಾಡುತ್ತ ಬಂದನೆಂದು ಭಾವಿಸಿದ್ದು ಕಂಡುಬರುತ್ತದೆ. ಹೀಗೆ ಅವನು ಮಾಡುವದು ಶಕ್ಯವಲ್ಲ. ಯಾಕೆಂದರೆ ಅಧಿಕಾರಿಗಳ ವರ್ಚಸ್ಸು ಅವರಿಗೆ ನಿಕಟಸಂಬಂಧವಿದ್ದವರ ಮೇಲೆ ಉಂಟಾಗಬಹುದು. ಆದರೆ ಇಡೀ ದೇಶದ ಜನರ ಮೇಲೆ ಹಾಗೆ ಇರುವದು ಸಂಭವವಿರುವದಿಲ್ಲ. ಬಸವೇಶ್ವರನು ಕೇವಲ ಒಬ್ಬ ಮಂತ್ರಿಯಾಗಿದ್ದು ರಾಜನಾಗಿರಲಿಲ್ಲ. ರಾಜನಾದ ಬಿಜ್ಜಳನು ಅವನ ಕೂಡ ಯಾವಾಗಲೂ ಸ್ನೇಹದಿಂದಿರಲಿಲ್ಲ. ಉಭಯತರಲ್ಲಿ ಆಗಿಂದಾಗ್ಗೆ ವಾಗ್ವಾದಗಳೂ ಮನಸ್ತಾಪಗಳೂ ಉಂಟಾಗುತ್ತಿದ್ದವೆಂದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಈ ಕಾರಣವು ಯೋಗ್ಯವೆಂದು ನಮಗೆ ಕಂಡುಬರುವದಿಲ್ಲ.

ಇನ್ನು ಕೆಲವರು ಬಸವೇಶ್ವರನು ವೀರಶೈವ ಧರ್ಮವನ್ನು ಹಗುರಾಗಿ ಮಾಡಿದನು, ಅದು ಎಲ್ಲರಿಗೂ ತಿಳಿಯುವಂತೆ ಮಾಡಿದನು. ವೈದಿಕ ಧರ್ಮವು ಕ್ಲಿಷ್ಟವಾದದ್ದು, ಅದು ಬಿಕ್ಕಟ್ಟಿನದು. ಆದ್ದರಿಂದ

ಹಗುರು ಆಚರಣೆಗಳುಳ್ಳ ವೀರಶೈವ ಧರ್ಮವು ದೇಶದಲ್ಲಿ ಎಲ್ಲರಲ್ಲಿಯೂ ಪ್ರಸಾರವಾಯಿತೆಂದು ಇತರು ಪ್ರತಿಪಾದಿಸುವದುಂಟು. ಆದರೆ ವಚನ ಗ್ರಂಥಗಳು ಈಚೆಗೆ ಪ್ರಕಟವಾಗಹತ್ತಿವೆ. ಇದರಿ ಈ ವಚನಗಳು ನಮಗೆ ತಿಳಿಯುವದಿಲ್ಲೆಂದು ಬಹುಜನರ ಆಕ್ಷೇಪಣೆ ಇದೆ. ಶರಣರ ಆಚರಣೆಗಳ ರೀತಿಗಳು ನಮಗೆ ಏನೂ ಗೊತ್ತಾಗುವದಿಲ್ಲೆಂದು ವಿದ್ವಾಂಸರು ಕೂಡ ನುಡಿಯುತ್ತಿರುವರೆಂಬುದು ಬಹುಜನರ ಲಕ್ಷಕ್ಕೆ ಬಂದಿರಬಹುದು. ಆದ್ದರಿಂದ ಈ ಕಾರಣವು ಯೋಗ್ಯವಾದುದಲ್ಲೆಂಬುದು ಕಂಡಬರುವದು.

ಬೇರೆ ಕೆಲವರು ವೀರಶೈವ ಧರ್ಮವು ಜಾತಿಭೇದವನ್ನು ಮನ್ನಿಸುವದಿಲ್ಲ, ಅಸ್ಪೃಶ್ಯರು ಸಹ ಉಚ್ಚ ಸಮಾಜದವರೆಂದು ಅದು ತಿಳಿಯುತ್ತದೆ, ಆದ್ದರಿಂದ ವೀರಶೈವ ಧರ್ಮವು ಎಲ್ಲ ವರ್ಗದವರಲ್ಲಿ ಪ್ರಸಾರ ಹೊಂದಿತೆಂದು ತಿಳಿಯುತ್ತಾರೆ ಆದರೆ ಇದು ಸಕಾರಣವಾದುದೆಂದು ನಮಗೆ ತೋರುವದಿಲ್ಲ. ಈಗಿನ ೨೦ ನೇ ಶತಮಾನದಲ್ಲಿ ಜಾತಿಭೇದವನ್ನು ಗಣಿಸಬಾರದೆಂದು ಎಲ್ಲರ ಅಭಿಪ್ರಾಯವಾಗಿರುತ್ತದೆ. ಈ ದೃಷ್ಟಿಯಿಂದ ಕಾನೂನುಗಳೂ ಆಗಿರುತ್ತವೆ. ಆದರೆ ಜಾತಿಭೇದವು ಮೊದಲಿದ್ದಂತೆಯೇ ಅಸ್ತಿತ್ವದಲ್ಲಿದೆ. ಊಟ ಉಪಚಾರಗಳಲ್ಲಿ ಲಗ್ನಾದಿ ವ್ಯವಹಾರಗಳಲ್ಲಿ ಕೆಲವು ಅಪವಾದಗಳನ್ನು ಬಿಟ್ಟು ಎಲ್ಲರೂ ಜಾತಿಭೇದವನ್ನು ಎಣಿಸುತ್ತಿರುವರು. ಆದ್ದರಿಂದ ಶಿವಶರಣರು ಜಾತಿಭೇದವನ್ನು ನಿರಾಕರಿಸಿದ್ದರಿಂದ ವೀರಶೈವ ಧರ್ಮವು ಬೆಳೆಯಿತೆಂದು ಹೇಳುವದು ತೀರ ತಪ್ಪಾದುದೆಂದು ನಮಗೆ ತೋರುತ್ತದೆ.

ಬೇರೆ ಕೆಲವರು ಬಸವೇಶ್ವರನು ಸಿದ್ಧಿಗಳನ್ನು ಮಾಡಬಲ್ಲವನಾಗಿದ್ದನು. ಅವನು ಪಂಚ ಪರುಷಗಳನ್ನು ಸಾಧಿಸಿದ್ದನು. ಇದರಿಂದ ಜನತೆಯಲ್ಲಿ ಅವನ ಮಹತ್ವವು ಬಹಳ ಬೆಳೆದು ಜನರು ಅಸಂಖ್ಯಾತವಾಗಿ ವೀರಶೈವ ಧರ್ಮವನ್ನು ಸೇರಿದರೆಂತಲೂ ಇವರು ತಿಳಿದಿರುತ್ತಾರೆ. ಆದರೆ ಇದು ನಿಜವಾದ ಕಾರಣವೆಂದು ನಮಗೆ ತೋರುವದಿಲ್ಲ. ಯಾಕಂದರೆ ಸಿದ್ಧಿಗಳನ್ನು ಮಾಡಕೂಡದೆಂದು ಶಿವಶರಣರ ವಚನಗಳಿವೆ. ಹಠಯೋಗ ಸಾಧನೆಗಳನ್ನು ಅವರು ನಿರಾಕರಿಸಿದ್ದಾರೆ. ಅವರು ಪ್ರತಿಪಾದಿಸುವ ಶಿವಯೋಗ ಸಾಧನೆಗಳಲ್ಲಿ ಹಠಯೋಗದ ಪ್ರಯೋಗಗಳಿಲ್ಲ. ಅವರ ಲಿಂಗಾಚಾರವು ತೀರ ಬೇರೆಯಾಗಿದೆ. ಆದ್ದರಿಂದ ಬಸವೇಶ್ವರನು

ಸಿದ್ಧಿಗಳನ್ನು ಮಾಡುತ್ತ ಜನಸಮುದಾಯದಲ್ಲಿ ಭ್ರಮೆಗಳನ್ನು ಉಂಟು ಮಾಡುತ್ತ ವೀರಶೈವ ಧರ್ಮವನ್ನು ಬೆಳಿಸಿದನೆಂದು ತಿಳಿಯುವದು ತೀರ ತಪ್ಪು ತಿಳಿವಳಿಕೆಯಾಗಿದೆ.

ಈ ವರೆಗೆ ನಾವು 'ಶಿವಶರಣರ ಚರಿತ್ರೆಗಳು' ಈ ಹೆಸರಿನ ಮೂರು ಗ್ರಂಥಗಳಲ್ಲಿ ೧೪೩ ಜನ ಶಿವಶರಣರ ಚರಿತ್ರೆಗಳನ್ನು ಪ್ರಸಿದ್ಧಿಸಿದ್ದೇವೆ. ಮುಂದೆ ನಾವು ಸುಮಾರು ೪೦—೫೦ ಜನ ಶಿವಶರಣರ ಚರಿತ್ರೆಗಳನ್ನು ಪ್ರಸಿದ್ಧಿಸುವವರಿದ್ದೇವೆ. ಈ ೪೦—೫೦ ಜನ ಶಿವಶರಣರು ಬಸವ, ಚನ್ನಬಸವ, ಅಲ್ಲಮಪ್ರಭು, ರೇವಣಸಿದ್ಧ ಇವರೊಡನೆ ವೀರಶೈವ ಧರ್ಮವನ್ನು ಪ್ರಸಾರಪಡಿಸಿದವರೂ ಅದನ್ನು ರಕ್ಷಿಸಿದವರೂ ಇದ್ದಾರೆ. ಹೀಗೆ ನಾವು ೨೦೦ ಜನ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಪ್ರಸಿದ್ಧಿಸಿದ್ದು ಇವರಲ್ಲಾರೂ ಸ್ವೈರವೃತ್ತಿಗೆ ಆಸ್ಪದ ಕೊಟ್ಟವರಿರುವದಿಲ್ಲ. ಅವರೆಲ್ಲರೂ ಉಚ್ಚ ಆಚರಣೆಗಳುಳ್ಳವರಾಗಿ ಶಿವಾನುಭವದಂತೆ ನಡೆಯುವವರಾಗಿದ್ದರೆಂಬುದು ಈ ಚರಿತ್ರೆಗಳಿಂದ ಕಂಡುಬರುತ್ತದೆ. ಅವರಲ್ಲಿ ಬಹು ಜನರು ವಚನಕಾರರಿದ್ದು ಅವರ ಉಕ್ತಿಗಳನ್ನು ನಾವು ಇವುಗಳಲ್ಲಿ ಉದಹರಿಸುತ್ತ ಬಂದಿದ್ದೇವೆ. ಅವರಲ್ಲಿ ಅಸ್ಪೃಶ್ಯ, ಅಕ್ಕಸಾಲಿಗ, ಒಕ್ಕಲಿಗ, ಸಿಂಪಿಗ, ನೇಕಾರ ಹೀಗೆ ನಾನಾವಿಧ ಉದ್ಯೋಗಗಳನ್ನು ಮಾಡುವವರೂ ಇದ್ದಾರೆ. ಆದರೆ ಅವರ ನಡೆಯು ಉಚ್ಚತಮವಾದದ್ದು, ಅವರ ಆಚಾರಗಳು ಶ್ರೇಷ್ಠತರವಾದವುಗಳು. ಇದರಿಂದ ಅವರು ಲೋಕಪೂಜ್ಯರಾದರು. ಅವರು ವಾಸಿಸಿದ್ದ ಸ್ಥಳಗಳಲ್ಲಿ ಈಗಲೂ ದೇವಾಲಯಗಳಾಗಿವೆ. ಈ ದೇವಾಲಯಗಳು ಅವರವರ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿವೆ. ಇವುಗಳ ಬಗ್ಗೆ ಜಾತ್ರೆಗಳಾಗುತ್ತವೆ. ಈ ಜಾತ್ರೆಗಳಲ್ಲಿ ಸಾವಿರಾರು ಲಕ್ಷಾವಧಿ ಜನರು ನೆರೆಯುತ್ತಾರೆ. ಉದಾ:— ಗೊಲ್ಲಾಳೇಶ್ವರನ ಗೋಲಗಿರಿ, ವರದಾನಿಗುಡ್ಡಮ್ಮೆಯ ಗುಡ್ಡಾಪುರ, ವೈಜಪ್ಪೆಯ ಪರಿವಳಿಗೆ ಅಥವಾ ಪರಳೀಕ್ಷೇತ್ರ, ಇಲ್ಲಿ ಅಸಂಖ್ಯಾತ ಜನರು ನೆರೆಯುತ್ತಾರೆ. ಈ ಶಿವಶರಣರ ಮಹತ್ವದ ಪುರಾಣಗ್ರಂಥಗಳೂ ಆಗಿವೆ. ಒಂದುವೇಳೆ ಇವರು ದುಶ್ಶೀಲರೂ, ನಡೆ ಇಲ್ಲದವರೂ ಆಗಿದ್ದರೆ ಅವರಿಗೆ ಇಂಥ ಶ್ರೇಷ್ಠಸ್ಥಾನವು ಎಂದಾದರೂ ದೊರೆಕಬಹುದಿತ್ತೋ? ಅವರು ಪೂಜ್ಯರೆಂದು ಎಂದಾದರೂ ಭಾವಿಸಲ್ಪಡುತ್ತಿದ್ದರೊ? ನಮ್ಮ ನಾಡಿನ ಎಲ್ಲ ಭಾಗಗಳಲ್ಲಿ ಇಂಥ ಅಸಂಖ್ಯ ಶಿವಶರಣರು ಉದಯವಾಗಿ ವಚನಗಳನ್ನು ರಚಿಸಿ

ಅವುಗಳ ಮೂಲಕ ಬೋಧೆ ಮಾಡಿದ್ದಾರೆ. ಅವರ ಬೋಧೆಯಿಂದಲೇ ವೀರಶೈವ ಧರ್ಮವು ದೇಶದಲ್ಲಿ ಬೆಳೆದಿರುತ್ತದೆ. ಇಂಥ ಶಿವಶರಣರು ಕರ್ನಾಟಕ ಮಾತ್ರವಲ್ಲ ಆಂಧ್ರ, ಮಹಾರಾಷ್ಟ್ರ, ತಮಿಳು ದೇಶಗಳಲ್ಲಿಯೂ ಆಗಿಹೋಗಿದ್ದಾರೆ. ಪಂಡಿತಾರಾಧ್ಯನು ಆಂಧ್ರ ದೇಶದಲ್ಲಿ ಉದಯವಾಗಿ ವೀರಶೈವ ಧರ್ಮವನ್ನು ಅಲ್ಲಿ ಬೋಧಿಸಿದನು. ತಮಿಳು ದೇಶದಲ್ಲಿ ಮೆರೆ ನಿಂಡದೇವ, ಚನ್ನಯ್ಯ ಮೊದಲಾದವರು ತಲೆದೋರಿದರು. ಮಹಾರಾಷ್ಟ್ರದಲ್ಲಿ ವೈಜಪ್ಪೆ, ಉರಿಲಿಂಗದೇವ, ಉರಿಲಿಂಗಪೆದ್ದಿ ಇವರು ಉದಯವಾದರು. ಇದರಿಂದ ಪರನಾಡುಗಳಲ್ಲಿಯೂ ಕೂಡ ವೀರಶೈವ ಧರ್ಮವು ಬೆಳೆದಿರುತ್ತದೆ. ಈ ಮಹಾನುಭಾವರೆಲ್ಲರೂ ಉಚ್ಚ ಶಿವಾನುಭವಿಗಳೂ ಪಂಡಿತರೂ ಆಗಿ ಎಲ್ಲರಿಂದಲೂ ಮಾನ್ಯ ಹೊಂದಿದವರಾಗಿದ್ದಾರೆ. ಇವರೆಲ್ಲರೂ ಬಸವೇಶ್ವರನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿದ್ದಾರೆ. ಇದು ಅವರು ರಚಿಸಿದ ಗ್ರಂಥಗಳಲ್ಲಿ ಮತ್ತು ಅವರ ಉಕ್ತಿಗಳಲ್ಲಿ ಕಂಡುಬರುತ್ತದೆ. ಒಂದುವೇಳೆ ಬಸವೇಶ್ವರನು ನೀತಿಗೆ ಬಾಹಿರವಾಗಿ ನಡೆದಿದ್ದರೆ ಅವನನ್ನು ಇಂಥ ಮಹಾನುಭಾವರು ಎಂದೂ ಹೊಗಳುತ್ತಿದ್ದಿಲ್ಲ ಮತ್ತು ಭಕ್ತಿಯಿಂದ ಕಾಣುತ್ತಿದ್ದಿಲ್ಲ. ಆದ್ದರಿಂದ ಬಸವೇಶ್ವರನು ಕೆಡಕು ಜನರನ್ನು ಪ್ರೋತ್ಸಾಹಿಸಿ ಧರ್ಮ ಪ್ರಸಾರ ಮಾಡಿದನೆಂಬ ಅಭಿಪ್ರಾಯವು ಅತ್ಯಂತ ತ್ಯಾಜ್ಯವೆಂದು ಸ್ಪಷ್ಟವಾಗುತ್ತದೆ.

ವೀರಶೈವ ಧರ್ಮದ ಪ್ರಸಾರ ಮಾಡುವಲ್ಲಿ ಶಿವಶರಣರು ಯಾವ ಮಾರ್ಗವನ್ನು ಅನುಸರಿಸಿದರೆಂಬುದರ ಬಗ್ಗೆ ಕೆಲವು ಉದಾಹರಣೆಗಳನ್ನು ನಾವು ಕೆಳಗೆ ಕೊಡುತ್ತೇವೆ. ದೇವರದಾಸಿಮಯ್ಯನು ಶಿವಶರಣರಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಬಸವೇಶ್ವರನು ತನ್ನ ವಚನಗಳಲ್ಲಿ ಅವನನ್ನೂ ಅವನ ಹೆಂಡತಿಯಾದ ದುಗ್ಗಳೆಯನ್ನೂ ಆಗಿಂದಾಗ್ಗೆ ಸ್ಮರಿಸುವದುಂಟು ಈತನು ಮೊದಲು ಶ್ರೀಶೈಲಮಲ್ಲಿಕಾರ್ಜುನಲಿಂಗದ ದೇವಸ್ಥಾನಕ್ಕೆ ಆಗಮಿಸಿ ಅಲ್ಲಿ ತಪಸ್ಸನ್ನಾಚರಿಸುತ್ತ ಇದ್ದನು. ಆಗ ಅವನಿಗೆ ಲಿಂಗದೀಕ್ಷೆಯೂ ಲಿಂಗೋಪದೇಶವೂ ಶ್ರೀಮಲ್ಲಿಕಾರ್ಜುನಲಿಂಗದಿಂದ ಒದಗಲಾಗಿ ಮುಂದೆ ಅವನು ವಿರಕ್ತಾಶ್ರಮಿಯಾಗಿ ಅಲ್ಲಿಯೇ ಕೆಲಕಾಲ ಕಳೆದನು. ಆಮೇಲೆ ಅವನು ಸ್ವಗ್ರಾಮಕ್ಕೆ ಬರುವಾಗ ಕಾಡಿನಲ್ಲಿ ಬೇಟೆಯಾಡುತ್ತ ಉಪಜೀವನ ಮಾಡುತ್ತಿದ್ದ ಕಾಡುಜನರ ತಂಡಗಳನ್ನು ನೋಡಿದನು. ಅವರನ್ನು ನೋಡಿ ದೇವರದಾಸಿಮಯ್ಯನು ಅವರಿಗೆ ಸನ್ಮಾ

ರ್ಗವನ್ನು ಬೋಧಿಸುತ್ತ ಕ್ರೂರಕರ್ಮಿಗಳಾಗಿ ಜೀವಹಿಂಸೆಮಾಡುತ್ತ ಇರ ಬೇಡಿರೆಂದು ತಿಳಿಸಿಹೇಳಿದನು. ಆಗ ಅವರ ಮನೋವೃತ್ತಿಯು ಬದ ಲಾಗಿ ದಾಸಿಮಯ್ಯನಿಂದ ಲಿಂಗಧಾರಣೆಯನ್ನು ಹೊಂದಿದರು. ಮತ್ತು ತಿಲಗಾಣವನ್ನಾಡಿಸುವ ಕಾಯಕವನ್ನು ಅವನಿಂದ ತೆಗೆದುಕೊಂಡು ತಮ್ಮ ಮೊದಲಿನ ಹಿಂಸಾಚಾರಗಳನ್ನು ಬಿಟ್ಟುಕೊಟ್ಟರು ಮತ್ತು ದೇಶದಲ್ಲಿ ಭಕ್ತ ಶ್ರೇಷ್ಠರೆಂದು ಎನಿಸಿಕೊಂಡರು.

ಮುಂದೆ ದೇವರದಾಸಿಮಯ್ಯನು ಅಲ್ಲಿಂದ ತೆರಳಿ ಗೋಡೆಗೆರೆ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಬಹುಜನ ಕೃಷಿಕರು ವಾಸಿಸುತ್ತಿದ್ದು ಅವರು ಆಚಾರರಹಿತರಾಗಿ ವರ್ತಿಸುತ್ತಿದ್ದರು. ಅವರಿಗೆ ದೇವರದಾಸಿಮಯ್ಯನು ಲಿಂಗೋಪದೇಶವನ್ನು ಮಾಡಿ ಹೇಗೆ ಧರ್ಮಾಚಾರದಿಂದ ನಡೆಯಬೇ ಕೆಂಬುದನ್ನು ಅವರಿಗೆ ತಿಳಿಸಿಹೇಳಿದನು. ಆಗ ೧೨ ಸಾವಿರ ಕೃಷಿಕರು ವೀರಶೈವ ಧರ್ಮವನ್ನು ಸ್ವೀಕರಿಸಿದರು.

ದೇವರ ದಾಸಿಮಯ್ಯನು ಬಹಳ ವಿದ್ವಾಂಸನಾಗಿದ್ದನು. ಅವನು ಎಲ್ಲ ಶಾಸ್ತ್ರಗಳ ಪರಿಚಯವನ್ನು ಚನ್ನಾಗಿ ಮಾಡಿಕೊಂಡವನಾಗಿದ್ದನು. ಈ ಕಾಲದಲ್ಲಿ ಜಯಸಿಂಹನೆಂಬ ಚಾಲುಕ್ಯ ರಾಜನು ರಾಜ್ಯವನ್ನಾಳು ತ್ತಿದ್ದನು. ಅವನ ಸಮ್ಮುಖದಲ್ಲಿ ದೇವರ ದಾಸಿಮಯ್ಯನಿಗೂ ವೇದಾಂತಿ ಗಳೂ ಗಾಣಪತ್ಯರೂ ಜೈನರೂ ಮೊದಲಾದ ಪಂಗಡದವರಿಗೂ ಧಾರ್ಮಿಕ ವಾಗ್ವಾದಗಳು ನಡೆಯಲು ಅವುಗಳಲ್ಲಿ ದಾಸಿಮಯ್ಯನು ಅವರೆಲ್ಲರನ್ನು ಸೋಲಿಸಿದನು. ಆಗ ಪಟ್ಟಣದಲ್ಲಿಯ ೨೦ ಸಾವಿರ ಜೈನರು ವೀರಶೈವ ದೀಕ್ಷೆಯನ್ನು ಹೊಂದಿದರು.

ಈ ಸಂಗತಿಗಳನ್ನು ನೋಡಲಾಗಿ ಶಿವಶರಣರು ಮೊದಲಿನ ಕಾಲದಲ್ಲಿ ಹೇಗೆ ಧರ್ಮ ಪ್ರಸಾರ ಮಾಡಿದರೆಂಬುವು ಸ್ಪಷ್ಟವಾಗುತ್ತದೆ. ಅನಾಗರಿಕ ಸಮಾಜಗಳಿಗೆ ಅವರು ಸನ್ಮಾರ್ಗವನ್ನು ಬೋಧಿಸಿದರು. ಮತ್ತು ನಾಗರಿಕ ಉಚ್ಚ ಸಮಾಜದವರಿದ್ದರೆ, ಅವರಿಗೆ ತತ್ವಾರ್ಥಗಳನ್ನು ತಿಳಿಸಿ ಹೇಳಿ ಅವರಿಗೆ ಅಧ್ಯಾತ್ಮ ಜ್ಞಾನವನ್ನು ಮಾಡಿಕೊಟ್ಟರು. ಈ ಪ್ರಕಾರ ಶಿವ ಶರಣರು ಧರ್ಮ ಪ್ರಸಾರ ಕಾರ್ಯ ಮಾಡಿದ್ದು ಕಂಡುಬರುತ್ತದೆ. ಆದರೆ ಅವರು ಯಾರ ಮೇಲೆಯೂ ಬಲಾತ್ಕಾರ ಮಾಡಿಲ್ಲ. ಹೃದಯ ಪರಿವ

ರ್ತನೆ ಮಾಡುವದೇ ಅವರ ಮುಖ್ಯ ಕಾರ್ಯವಾಗಿತ್ತು. ಈ ಪ್ರಕಾರ ಅವರು ಆಚರಿಸಿದ್ದರಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮವು ಎಲ್ಲ ವರ್ಗಗಳಲ್ಲಿಯೂ ಬೆಳೆಯಿತು.

ಇನ್ನೊಬ್ಬ ಶಿವಶರಣನು ಹೇಗೆ ಧರ್ಮ ಬೋಧೆ ಮಾಡುತ್ತಿದ್ದನೆಂಬುದನ್ನು ಕುರಿತು ಇಲ್ಲಿ ಉಲ್ಲೇಖಿಸುತ್ತೇವೆ. ಅವನ ಹೆಸರು ಸುಜ್ಞಾನಿದೇವನು. ವೀರಶೈವ ವಾಙ್ಮಯದಲ್ಲಿ ಆತನಿಗೆ ಮಹತ್ವದ ಸ್ಥಾನವಿದೆ. ಅವನ ವಿಷಯವಾಗಿ ನನ್ನಯ್ಯನ ಪುರಾಣ, ನನ್ನಯ್ಯನ ಸಾಂಗತ್ಯ ಎಂಬ ಕೆಲವು ದೊಡ್ಡ ಗ್ರಂಥಗಳಾಗಿವೆ. ಅವನು ಬಸವೇಶ್ವರನ ಸಮಕಾಲೀನನು, ಓಡಿಸಾ ಪ್ರಾಂತದವನು. ಅವನು ಬಸವೇಶ್ವರನನ್ನು ಕಾಣಬೇಕೆಂದು ಕಲ್ಯಾಣಕ್ಕೆ ಹೊರಡುತ್ತಾನೆ. ದಾರಿಯಲ್ಲಿ ಮಾತಂಗತಮ್ಮನೆಂಬ ಹಾದಿ ಬಡಿಯುವವನಾದ ಬೇಡರವನು ಅವನನ್ನು ಸುಲಿಯಬೇಕೆಂದು ಮುಂದೆ ಬಂದು ಅವನ ಗಂಟು ಗುದಿಗೆಗಳನ್ನು ಕಸಿದುಕೊಂಡು ಬಿಚ್ಚಿಸಿ ನೋಡುತ್ತಾನೆ. ಅದರಲ್ಲಿ ಲಿಂಗಗಳೇ ಇದ್ದವು. ಸುಜ್ಞಾನಿ ದೇವನ ಕಾಯಕವು ಜನರಿಗೆ ಬೋಧೆ ಮಾಡಿ, ಅಂಗ ಲಿಂಗಗಳ ರೀತಿಯನ್ನು ತಿಳಿಸಿ ಹೇಳಿ ಅವರಿಗೆ ಲಿಂಗದೀಕ್ಷೆ ಮಾಡುವದೇ ಆಗಿತ್ತು. ಬಸವೇಶ್ವರನ ಕಾಲದಲ್ಲಿ ಇಂಥ ಕಾಯಕಮಾಡುವ ಬಹುಜನರು ದೇಶದಲ್ಲೆಲ್ಲ ಪಸರಿಸಿದಹಾಗೆ ನಮಗೆ ತೋರುತ್ತದೆ. ಅವರು ಮಾಡುತ್ತಿದ್ದ ಈ ಕೆಲಸವು ಬಹು ಕಠಿಣವಾದದ್ದು. ಆದರೂ ಅವರು ಅಂಜದೆ ಏನೂ ಹಿಂಜರಿಯದೆ ಈ ಕಾರ್ಯ ಮಾಡುತ್ತಿದ್ದರೆಂಬುದು ಸುಜ್ಞಾನಿದೇವನ ಚರಿತ್ರೆಯಿಂದ ತಿಳಿದುಬರುತ್ತದೆ. ಈತನ ಚರಿತ್ರೆಯು ಶಿವಶರಣರ ಚರಿತ್ರೆಗಳು ಭಾಗ೨ ಪುಟ ೫೯ರಲ್ಲಿ ಇದ್ದು ಅದನ್ನು ವಾಚಕರು ಮೂಲದಲ್ಲಿಯೇ ಪರಿಶೀಲಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ. ಮಾತಂಗ ತಮ್ಮನು ಅತ್ಯಂತ ಕ್ರೂರ ಸ್ವಭಾವದವನು, ಹಿಂಸೆಗೆ ಹೇಸುವವನಾಗಿದ್ದಿಲ್ಲ. ಇಂಥವನಿಗೆ ಸುಜ್ಞಾನಿದೇವನು ಸಮಯೋಚಿತವಾದ ಬೋಧೆಗಳನ್ನು ಮಾಡುತ್ತ ಅವನಿಗೆ ಅಷ್ಟಾವರಣಗಳ ರೀತಿಗಳನ್ನು ತಿಳಿಸಿ ಹೇಳುತ್ತಾನೆ. ಅನೇಕ ಕಥೆಗಳನ್ನೂ ದೃಷ್ಟಾಂತಗಳನ್ನೂ ಹೇಳುತ್ತ ಅವನ ಮನವನ್ನು ಒಲಿಸಿ ಲಿಂಗವೆಂದರೇನೆಂಬುದರ ಜ್ಞಾನಮಾಡಿಕೊಡುತ್ತಾನೆ. ಆಗ ಆ ಬೇಡನು ತನ್ನ ಮೊದಲಿನ ಕ್ರೂರ ಆಚರಣೆಗಳನ್ನು ಬಿಟ್ಟುಕೊಡುತ್ತಾನೆ. ಮತ್ತು ಸುಜ್ಞಾನಿದೇವನ ಶಿಷ್ಯತ್ವವನ್ನು ಅಂಗೀಕರಿಸಿ ಅವನೊಡನೆ ಕಲ್ಯಾಣ ನಗರಿಗೆ

ಬಂದು ಬಸವೇಶ್ವರನನ್ನು ಕಾಣುತ್ತಾನೆ. ಈ ಕಥೆಯಲ್ಲಿ ಉಪದೇಶಕರು ಹೇಗೆ ಉಪದೇಶ ಮಾಡಬೇಕು, ಅವರು ಹೇಗೆ ನಡೆಯಬೇಕು, ಎಂಬುದು ಬಹು ಸುಂದರವಾಗಿ ನಿರೂಪಿಸಲ್ಪಟ್ಟಿದೆ. ಈ ಚರಿತ್ರೆಯನ್ನು ನೋಡಿದಲ್ಲಿ ಬಸವೇಶ್ವರನ ಕಾಲದಲ್ಲಿಯು ಶಿವಶರಣರು ನಾಡಿನಲ್ಲಿ ಎಂಥ ಅಗಾಧವಾದ ಕೃತ್ಯಗಳನ್ನು ಮಾಡಿಹೋದರೆಂಬುದನ್ನು ನೆನಸು ಸಹ ನಮಗೆ ಉಳಿದಿಲ್ಲವಲ್ಲಾ ಎಂದು ಖೇದವಾಗುತ್ತದೆ. ತಮ್ಮ ವಾಙ್ಮಯ, ಮತ್ತು ತಮ್ಮ ಇತಿಹಾಸ ಇವುಗಳ ವಿಷಯವಾಗಿ ವೀರಶೈವರಲ್ಲೆಲ್ಲ ಹರಡಿದ ಅಜ್ಞಾನಾಂಧಕಾರವೇ ಇದಕ್ಕೆ ಕಾರಣವೇ ಹೊರ್ತು ಬೇರೆ ಏನೂ ಇರುವದಿಲ್ಲ.

ಇದೇ ರೀತಿಯಾಗಿ ಹಿಂದಿನಕಾಲದಲ್ಲಿ ಬಹುಜನ ಶಿವಶರಣರು ದೇಶದಲ್ಲಿ ಸಂಚರಿಸುತ್ತ ಧರ್ಮ ತತ್ವಗಳನ್ನು ಬೋಧಿಸುತ್ತ ಧರ್ಮ ಪ್ರಸಾರ ಮಾಡುತ್ತ ಬಂದಿದ್ದಾರೆ. ಇವರಲ್ಲಿ ರೇವಣಸಿದ್ಧ ಮತ್ತು ಅಲ್ಲಮಪ್ರಭುಗಳು ಬಹು ಮುಖ್ಯರಾಗಿದ್ದಾರೆ. ಅವರು ಇಡೀ ದೇಶದಲ್ಲಿ ಮುಖ್ಯವಾಗಿ ಕರ್ನಾಟಕ ಮತ್ತು ಆಂಧ್ರದೇಶಗಳಲ್ಲಿ ಸಂಚರಿಸಿ ಜನತೆಯಲ್ಲಿ ಧರ್ಮ ಶ್ರದ್ಧೆಯನ್ನು ಹುಟ್ಟಿಸಿದ್ದಾರೆ. ಇದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇದರಿಂದ ಅವರ ಕಾಲದಲ್ಲಿ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ವರದಾನಿ ಗುಡ್ಡಮ್ಮೆಯು ಪೂರ್ವ ಕರ್ನಾಟಕ, ದಕ್ಷಿಣ ಮೈಸೂರು ಮುಂತಾದಕಡೆಗೆ ಪ್ರವಾಸಮಾಡುತ್ತ ಅಲ್ಲಲ್ಲಿ ವಾಸಮಾಡಿದ್ದಾಳೆ. ಆಕೆಯ ಮೂಲಕವಾಗಿ ಬಹುಜನರು ಅನೇಕ ಕಡೆಗೆ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಶೂನ್ಯ ಸಿಂಹಾಸನಾಧೀಶ್ವರರಾದ ಅನೇಕ ಮಹಾನುಭಾವರ ಕಾಲದಲ್ಲಿಯೂ ವೀರಶೈವ ಧರ್ಮವು ಪ್ರಸಾರಹೊಂದಿದೆ. ಇದು ಅವರವರ ಚರಿತ್ರೆಗಳಿಂದ ತಿಳಿದುಬರುತ್ತದೆ. ತೋಂಟದಾರ್ಯರ ಮೂಲಕವೂ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ.

ಒಟ್ಟಿಗೆ ವೀರಶೈವ ಧರ್ಮದಲ್ಲಿ ಉಚ್ಚ ವಿಚಾರಗಳಿವೆ. ಅವುಗಳ ಬೋಧೆಯಮೂಲಕವೇ ವೀರಶೈವ ಧರ್ಮವು ವಿಸ್ತಾರಹೊಂದಿದೆಯೇಹೊರ್ತು ಒತ್ತಾಯ ಅಥವಾ ಮೋಸ, ಅಥವಾ ಬಗೆಬಗೆಯ ಆಮಿಷಗಳಿಗೆ ಒಳಗಾಗಿ ಜನತೆಯು ವೀರಶೈವ ಧರ್ಮವನ್ನು ಹೊಂದಿರುವದಿಲ್ಲೆಂದು ಹೇಳುವದೇ ಈ ಲೇಖದ ಮುಖ್ಯ ಅಭಿಪ್ರಾಯವಾಗಿದೆ.

---

# "ಶಿವಾನುಭವ ಆಶ್ರಮ ಬಸವ ಕಲ್ಯಾಣ"

(ಸಂಗ್ರಾಹಕರು :— ಶ್ರೀ ಎಮ್. ಸಿದ್ಧವೀರಯ್ಯ)



ಈಚೆಗೆ ಪ್ರತಿ ವರುಷ ಬಸವ ಕಲ್ಯಾಣದಲ್ಲಿ ಶ್ರೀ ಬಸವೇಶ್ವರ ಜಯಂತ್ಯುತ್ಸವವು ಸಂಭ್ರಮದಿಂದ ಜರಗುತ್ತಿದೆಯಷ್ಟೆ. ಈ ವರ್ಷ ಅಲ್ಲಿಯ ಉತ್ಸವ ಕಮೀಟಿಯವರು ವಿಶೇಷ ಕಾರ್ಯಕ್ರಮ ಏರ್ಪಡಿಸಿ ಕನ್ನಡ ನಾಡಿನ ಶ್ರೇಷ್ಠ ಅನುಭಾವ ಸಾಹಿತಿಗಳನ್ನೂ ಧರ್ಮಾಭಿಮಾನಿಗಳನ್ನೂ ಆಮಂತ್ರಿಸಿ ಉತ್ಸವಕ್ಕೆ ಹೊಸ ಕಳೆಯನ್ನುಂಟು ಮಾಡಿದ್ದರು.

ತಾ॥ ೩೦-೪-೫೨ ನೆಯ ದಿನಾಂಕ ಬುಧವಾರ ಮುಂಜಾನೆ ಶ್ರೀಮಾನ್ ಮಲ್ಲಪ್ಪ ಶೇರಿಕಾರ ಇವರ ಮನೆಯಲ್ಲಿ ಶ್ರೀ ಚೆನ್ನಬಸಪ್ಪ ಮಲ್ಲಪ್ಪ ವಾರದ ಸೋಲಾಪೂರ ರವರ ಅಧ್ಯಕ್ಷತೆಯಲ್ಲಿ ಶ್ರೀ ಬಸವೇಶ್ವರ ದೇವಸ್ಥಾನ ಬಸವಕಲ್ಯಾಣದ ಜನರಲ್ ಮೀಟಿಂಗ ಕೂಡಿ ಇಲ್ಲಿ ಸ್ಥಾಪಿತವಾಗಲಿರುವ ಶಿವಾನುಭವ ಆಶ್ರಮದ ಸ್ಥಾಯೀಸಮಿತಿಯ ಸದಸ್ಯರನ್ನೂ ಕ್ರಿಯಾ ಸಮಿತಿಯ ಮೆಂಬರರನ್ನೂ ಆರಿಸಲಾಯಿತು. ಸ್ಥಾಯೀ ಸಮಿತಿಗೆ ವೀರಶೈವ ಸಮಾಜದ ಪ್ರಮುಖರು ಮತ್ತು ಕ್ರಿಯಾ ಸಮಿತಿಗೆ ೧೫ ಜನ ಸದಸ್ಯರು ಇರಬೇಕೆಂದು ಗೊತ್ತಾಯಿತು. ಮೂರು ಜನರ ಸಲಹಾ ಮಂಡಳಿಯೂ ನೇಮಿಸಲ್ಪಟ್ಟಿತು.

## ಆಶ್ರಮದ ಧ್ಯೇಯ ಧೋರಣೆಗಳು

ಆಶ್ರಮದ ಹಿನ್ನೆಲೆ ಮತ್ತು ಅದರ ಧ್ಯೇಯ ಧೋರಣೆಯ ಬಗ್ಗೆ ಸಭೆಯ ಆರಂಭದಲ್ಲಿ ಶ್ರೀಮಾನ್ ಮಹಾಗಾಂವ ಶರಣಯ್ಯನವರು ಮತ್ತು ಶ್ರೀಮಾನ್ ಹಳಕಟ್ಟಿಯವರು ಪ್ರಸ್ತಾವಿಕ ಮಾತುಗಳನ್ನು ಆಡಿದರು. ಶ್ರೀ. ಶರಣಯ್ಯನವರು ತಮ್ಮ ಹೇಳಿಕೆಯಲ್ಲಿ "ಹಿಂದೊಮ್ಮೆ ಕಲ್ಯಾಣದ ಇದೇ ಪುಣ್ಯ ಭೂಮಿಯಲ್ಲಿ ಶರಣರು ಅನುಭವ ಮಂಟಪವನ್ನು ಕಟ್ಟಿ ಅನುಭಾವ ವಿದ್ಯೆಯನ್ನು ಪ್ರಚಾರಗೊಳಿಸಿದರು. ಅವರ ಅಂತಿಮ ಧ್ಯೇಯವು ಶೂನ್ಯ ಸಂಪಾದನೆಯಾಗಿದ್ದಿತು. ಈ ಶೂನ್ಯವೇ ಶಿವತತ್ತ್ವ. ಈ ಶೂನ್ಯವು ಅಣೋರಣೀಯಾನ್ ಮಹಾತೋಮಹೀಯಾನ್ ಆಗಿ ಪಿಂಡಾಂಡ

ಬ್ರಹ್ಮಾಂಡವನ್ನು ವ್ಯಾಪಿಸಿದೆ. ಈ ಶೂನ್ಯೋಪಾಸನೆಯೇ ಬ್ರಹ್ಮಾಂಡೋಪಾಸನೆಯು. ಶೂನ್ಯಸಿಂಹಾಸನವೇ ಶಾಂತಿಪೀಠವು. ಇಂದಿನ ಸ್ವತಂತ್ರ ಭಾರತದ ದೆಹಲಿ ಪೀಠವು ಶಾಂತಿ ಸಾಮ್ರಾಜ್ಯದ ಮಾದರಿಯಾಗಿದೆ.

ನಂತರ ರಾ॥ ಬ॥ ಹಳಕಟ್ಟಿಯವರು ಶ್ರೀಮಾನ್ ಶರಣಯ್ಯನವರ ವಿಚಾರಸರಣಿಯನ್ನು ಸಮರ್ಥಿಸಿ ಸಭೆಯನ್ನು ಈ ರೀತಿ ಸಂಬೋಧಿಸಿದರು. "ಕೆಲವು ದಿನಗಳ ಹಿಂದೆ ನಾನು ಶ್ರೀ ದೇವಸ್ಥಾನ ಕಮೀಟಿಯ ಅಧ್ಯಕ್ಷರಾದ ಶ್ರೀ ಪಾದ ಬಾಬಾಸಾಹೇಬರ ನಿಮಂತ್ರಣದ ಮೇರೆಗೆ ಸೊಲ್ಲಾಪುರಕ್ಕೆ ಹೋಗಿ ಕಲ್ಯಾಣದಲ್ಲಿ ಮುಂದೇನು ಮಾಡಬೇಕೆಂಬುದರ ವಿಚಾರವಿನಿಮಯ ಮಾಡುವಾಗ್ಗೆ ಕೆಲವು ಮಾತುಗಳ ನಿರ್ಣಯವನ್ನು ಕೈಕೊಂಡೆವು. ಅವುಗಳಲ್ಲಿ ಮುಖ್ಯವಾಗಿ ಇಲ್ಲಿ ಒಂದು ಅನುಭವ ಮಂಟಪದ ಸ್ಥಾಪನೆ ಮಾಡಬೇಕೆಂದೂ ತದ್ವಾರಾ ವಚನಶಾಸ್ತ್ರ ಸಂಶೋಧನೆ, ಪ್ರಕಟನೆ ಮತ್ತು ಶಿವಾನುಭವ ವಿದ್ಯಾ ಪ್ರಚಾರ ಗೊಳಿಸಬೇಕೆಂದೂ ಇವೇ ಮುಂತಾದ ಮಹತ್ವದ ಕಾರ್ಯಗಳ ಬಗ್ಗೆ ಆಪಾಲೋಚನೆ ಗೈದು ಅವುಗಳನ್ನು ಕಾರ್ಯರೂಪಕ್ಕಿಳಿಸಲು ನಾವೆಲ್ಲರೂ ಇಲ್ಲಿ ನೆರೆಯಲಾಗಿದೆ.

ಶಿವಾನುಭವ ವಿದ್ಯೆಯು ಒಂದು ದೊಡ್ಡ ಶಾಸ್ತ್ರವಿದೆ. ವಚನಕಾರರು ಅದನ್ನು ವಚನಗಳಲ್ಲಿ ವಿವರಿಸಿದ ಕಾರಣ ಅವಕ್ಕೆ ವಚನಶಾಸ್ತ್ರವೆಂತಲೂ ಪರ್ಯಾಯ ನಾಮವಿದೆ. ಇತ್ತಿತ್ತಲಾಗಿ ವಚನಶಾಸ್ತ್ರಾಭ್ಯಾಸದ ರೂಢಿಯು ಜನತೆಯಲ್ಲಿ ಬಹಳ ಕಡಿಮೆಯಾಗಿದೆ. ಷಟ್‌ಸ್ಥಲ ಸಿದ್ಧಾಂತವು ಆತ್ಮೋನ್ನತಿಯ ಅದ್ವಿತೀಯ ಸಾಧನವಾಗಿದೆ. ಅದೇ ವಚನ ಸಾಹಿತ್ಯದ ಜೀವಾಳವಾಗಿದೆ. ಅದರ ನಿಜಾಚರಣೆಯನ್ನು ಅರಿಯಲು ನಾವು ವಚನ ಶಾಸ್ತ್ರಕ್ಕೆ ಮೊರೆಹೊಗಬೇಕು.

ಈ ವಚನಗಳಲ್ಲಿ ಮನುಷ್ಯನ ವಿಚಾರಗಳನ್ನು ಮಾರ್ಪಡಿಸುವ ಅಮೋಘವಾದ ಶಕ್ತಿಯಿದೆ. ಅವು ಕೇವಲ ವಿದ್ವತ್ ಪ್ರದರ್ಶಕ ಶಬ್ದಗಳಲ್ಲ. ಶರಣರ ಅಂತಃಕರಣವು ಉಕ್ಕಿ ಭಾವಾವಿಷ್ಟವಾಗಿ ನುಡಿದ ವಾಕ್ಯಗಳು. ಅವು ಸದ್ಭಾವದಿಂದ ತುಂಬಿಕೊಂಡು ಕಾಪಟ್ಯರಹಿತವಾಗಿವೆ. ಆತ್ಮೋದ್ಧಾರಕ್ಕಾಗಿ ಹೇಳಿದರೂ ವಾಕ್ಯಗಳಲ್ಲಿ ರಾಜಕಾರಣ, ನೀತಿ, ಆಚಾರ ವಿಚಾರಗಳೆಲ್ಲ ಅಡಕವಾಗಿವೆ. ಇಂದಿನ ಭಕ್ತ ಜಂಗಮರೆಲ್ಲಾ ಕೂಡಿ

ಈ ವಚನಗಳ ಪ್ರಚಾರವಾಡಿದರೆ ಉಚ್ಚತಮ ವಾತಾವರಣವು ನಾಡಿನಲ್ಲಿ ಉಂಟಾಗುವಲ್ಲಿ ಸಂದೇಹವಿಲ್ಲ. ೧೨ ನೆಯ ಶತಮಾನ ಕ್ರಾಂತಿಗೆ ಈ ವಚನ ಪ್ರಚಾರವೇ ಮುಖ್ಯವಾಗಿದ್ದಿತು. ಆಗ ರೈಲು ಮೋಟಾರು ರೇಡಿಯೋ ಮುಂತಾದ ಆಧುನಿಕ ಸಾಧನೆಗಳಾವವೂ ಇಲ್ಲದಿದ್ದರೂ ವಚನಕಾರರು ತಮ್ಮ ವಿಚಾರ ಸರಣಿಯನ್ನು ಹಳ್ಳಿ ಹಳ್ಳಿಗೆ ಮುಟ್ಟಿಸಿದರು. ಜನರು ಅವುಗಳನ್ನು ಪಠಿಸಿ ಪರಿಣಮಿಸುತ್ತಿದ್ದರು. ಈ ರೀತಿ ಪವಿತ್ರಾತ್ಮರುಗಳಾದ ವಚನಕಾರರು ತಮ್ಮ ಸಂದೇಶವನ್ನು ಸಾಮಾನ್ಯ ಮಾನವನಿಗೂ ಸಹ ಮುಟ್ಟಿಸಿದರು. ಅಂದು ಅನುಭವ ಮಂಟಪದ ದ್ವಾರಾ ಶ್ರೀ ಬಸವಣ್ಣನವರು ಮಾಡಿದ್ದು ಇದೇ ಮಹತ್ಕಾರ್ಯವು.

ಕನ್ನಡ ವಚನಗಳ ರಚನೆಯ ರೂಢಿಯು ಬಸವಣ್ಣನವರಿಗಿಂತಲೂ ೧೦೦-೧೫೦ ವರ್ಷ ಮೊದಲೇ ಪ್ರಚಾರದಲ್ಲಿತ್ತೆಂದು ತೋರುತ್ತದೆ. ದೇವರದಾಸಿಮಯ್ಯ, ಶಂಕರದಾಸಿಮಯ್ಯ ಮುಂತಾದ ಪುರಾತನ ವಚನಕಾರರು ಈ ದಾರಿಯನ್ನು ಕೈಕೊಂಡರು. ಬಸವಣ್ಣನವರ ಕಾಲಕ್ಕೆ ಅನೇಕ ಶರಣ ಶರಣೆಯರು ತಮ್ಮ ಸ್ವಾನುಭಾವ ಸದ್ವಿಚಾರಗಳನ್ನು ಈ ವಚನಗಳಲ್ಲಿ ವ್ಯಕ್ತಪಡಿಸಿದರು. ಬಸವಣ್ಣನವರ ನಂತರವೂ ಈ ಕಾರ್ಯವು ಸುಮಾರು ನೂರಿನ್ನೂರು ವರ್ಷಗಳ ವರೆಗೆ ಸತತವಾಗಿ ಸಾಗಿತ್ತು. ತೋಟದ ಸಿದ್ಧಲಿಂಗ, ಷಣ್ಮುಖ ಸ್ವಾಮಿಗಳು ಮುಂತಾದವರೇ ಕಡೆಯ ವಚನಕಾರರು. ಈ ರೀತಿ ಅನೇಕ ವರ್ಷಗಳ ವರೆಗೂ ವಚನ ರಚನೆಯ ಕಾರ್ಯವು ಅವ್ಯಾಹತವಾಗಿ ನಡೆದು ಅದೊಂದು ಅಪಾರವಾದ ಸಾಹಿತ್ಯವಾಗಿ ಪರಿಣಮಿಸಿದೆ. ನಾನು ಈ ಸಾಹಿತ್ಯದ ಸ್ವಲ್ಪೇ ಭಾಗವನ್ನು ಅಚ್ಚು ಹಾಕಿದ್ದೇನೆ. ಇನ್ನೂ ಇದರ ಬಹುಭಾಗವು ಕಾಲಗರ್ಭದಲ್ಲಿ ಅಡಕವಾಗಿದೆ. ಬಹ ಭಾಗ ನಶಿಸಿಯೂ ಹೋಗಿರಬಹುದೆಂದು ತೋರುತ್ತದೆ. ಇನ್ನಾದರೂ ನಾವು ಊರೂರಿಗೆ ಮನೆಮನೆಗೆ ಅಡ್ಡಾಡಿ ಐತಿಹಾಸಿಕ ಸ್ಥಳಗಳನ್ನೂ ಅಗೆದು ನೋಡಿ ಅಲ್ಲಲ್ಲಿ ಸಿಗುವ ಅನುಭಾವ ಸಂಸ್ಕೃತಿಯ ಅವಶೇಷಗಳನ್ನು ಸಂಗ್ರಹಿಸಿ ಸಂಶೋಧಿಸಬೇಕು. ಬೋಧಕರಿಂದಲೂ ಪ್ರಚಾರಕರಿಂದಲೂ ಅದನ್ನು ಪ್ರಚಾರಗೊಳಿಸಬೇಕು. ಕೆಲವು ಸದ್ಭಾವಿಗಳು ಕಾರ್ಯಶೀಲರಾಗಿ ಸ್ವಾವಲಂಬನದ ಜೀವನ ಸಾಗಿಸುತ್ತ ಶರಣರ ಆದರ್ಶವನ್ನು ಮಾದರಿಯಾಗಿಟ್ಟುಕೊಂಡು ಸೇವಾತತ್ಪರರಾಗಬೇಕು. ಶಿವಶರಣರ ಪರಂಪರಾನುಗತ ಕಾರ್ಯವನ್ನು ನಾವಿಂದು ನಡಿಸಬೇಕು. ಬಸ

ವರ್ಣನವಂತೆ ನಾವಾದರೂ ವಿಸ್ತೃತ ಭಾವನೆಯಿಂದ ನಡೆದುಕೊಳ್ಳ ಬೇಕು. ಲೋಕದ ನಂಬಿಗೆಯನ್ನು ಬೆಳಸಿಕೊಂಡು ಜನಾಶ್ರಯದೊಂದಿಗೆ ಧನಾಶ್ರಯ ಉಂಟುಮಾಡಿಕೊಳ್ಳಬೇಕು.

ಈ ಕಲ್ಯಾಣದ ನಾಡು ಹಲವು ಕಾರಣಗಳಿಂದ ಹೆಸರಾಗಿದೆ. ಮೊದಲನೆಯದಾಗಿ ಈ ಭಾಗದಲ್ಲಿ ಪುರಾತನ ಐತಿಹಾಸಿಕ ಸ್ಥಾನಗಳೂ ವಚನ ಗ್ರಂಥಗಳೂ ಹೇರಳವಾಗಿ ದೊರೆಯಬಹುದು. ಇವುಗಳನ್ನು ಶೋಧಿಸಿ ವಚನಗಳನ್ನು ಅಚ್ಚುಹಾಕುವದು ದೊಡ್ಡ ಕೆಲಸವಿದೆ. ಎರಡನೆಯದಾಗಿ ಕಲ್ಯಾಣವು ರಾಜಕೀಯ ಮಹತ್ವದ ಸ್ಥಾನವಾಗಿದೆ. ವಿಕ್ರಮ ಚಾಳುಕ್ಯನ ಕಾಲದಲ್ಲಿ ರೇವಣಸಿದ್ಧ ತೆಲಗುಜೊಮ್ಮಯ್ಯ ಮುಂತಾದವರು ದೊಡ್ಡ ದೊಡ್ಡ ಅಧಿಕಾರಿಗಳಾಗಿ ಧರ್ಮ ಪ್ರಚಾರ ಮಾಡಿದರು. ಈ ಸಾಂಪ್ರದಾಯವು ಬಸವೇಶ್ವರನ ವರೆಗೂ ಬಂದಿತು. ಮೂರನೆಯದಾಗಿ ಆರ್ಥಿಕ ಸುವ್ಯವಸ್ಥೆಗೆ ಕಾಯಕವೇ ಕೈಲಾಸವೆಂದು ಭಾವಿಸಿ ಇಲ್ಲಿಯ ಜನರು ಹಿಂದಿನಕಾಲದಲ್ಲಿ ನೈತಿಕ ಬಲವನ್ನು ಬೆಳಸಿಕೊಂಡಿದ್ದರು. ಇದರಿಂದ ನಿರುದ್ಯೋಗ ಮತ್ತು ಸೋಮಾರಿತನದ ಭೂತವು ಆಗ ಮಾಯವಾಗಿತ್ತು. ಇದರಿಂದ ಸುವ್ಯವಸ್ಥಿತ ಸಮಾಜ ರಚನೆಯಾಯಿತು. ಇಂಥ ಅಸದೃಶ್ಯ ಆದರ್ಶಗಳನ್ನೊಳಗೊಂಡ ಈ ಭೂಮಿಯಲ್ಲಿ ಇಂದು ರೂಪಗೊಳ್ಳುವ ಸಂಸ್ಥೆಯನ್ನು ನಾವೆಲ್ಲರೂ ನೈತಿಕ ಬಲದಿಂದ ಬೆಳೆಸಬೇಕು. ಸರ್ವಾರ್ಪಣ ಭಾವ ತಾಳಿ ಸೇವೆಗೆ ಸನ್ನದ್ಧರಾಗಬೇಕು." ಎಂದು ಕಳಕಳಿ ಪೂರ್ವಕವಾಗಿ ಹೇಳಿ ಮುಗಿಸಿದರು.

ನಂತರ ಸಭಾಧ್ಯಕ್ಷರಾದ ಬಾಬಾಸಾಹೇಬರು ಪ್ರಾರಂಭದಲ್ಲಿ:— ಕಲ್ಯಾಣದಲ್ಲಿ ಸ್ಥಾಪಿತವಾಗಲಿರುವ ಸಂಸ್ಥೆಗೆ ಶಿವಾನುಭವ ಆಶ್ರಮವೆಂದು ಅಭಿಧಾನಿಸಬೇಕೆಂಬ ಸೂಚನೆಯನ್ನು ಚರ್ಚೆಗೆ ಮಂಡಿಸುತ್ತೇನೆ. ಇದಕ್ಕೆ ಸೂಚಕರು:— ಶ್ರೀ ಮಹಾಗಾಂವ ಶರಣಯ್ಯನವರು. ಅನುಮೋದಕರು:— ಶ್ರೀ ರುದ್ರಶೆಟ್ಟಿ ಪಾಟೀಲರು. ಸಮರ್ಥಕರು: — ಶ್ರೀ ರೇವಣಸಿದ್ದಯ್ಯನವರು ನಂದೀಮಠ.

ಮೇಲ್ಕಾಣಿಸಿದ ಸೂಚನೆಯ ಬಗ್ಗೆ ಚರ್ಚೆಯು ಸುಮಾರು ಎರಡು ಗಂಟೆಯವರೆಗೆ ಶಾಸ್ತ್ರೀಯವಾಗಿಯೂ ವಿಚಾರ ಪರಿಪ್ಲುತವಾಗಿಯೂ ಆಗಿತು

ಪ್ರಾರಂಭದಲ್ಲಿ ಚರ್ಚೆಗೆ ಬುಡವನ್ನಿಡುತ್ತ ಶ್ರೀ ವಾರದ ಬಾಬಾಸಾಹೇಬರು ಹೀಗೆಂದರು:— ಸಂಸ್ಥೆಯ ಹೆಸರು ಶಿವಾನುಭವ ಆಶ್ರಮವೆಂಬುದೇನೋ ಯೋಗ್ಯವಿದೆ. ಆದರೆ ಶಿವ ಎಂಬ ಶಬ್ದವು ಪರಧರ್ಮದವರಿಗೆ ಸಂಶಯಾಸ್ಪದವಾಗಿದೆ. ಕಲ್ಯಾಣಕ್ಕೆ ಬಸವ ಕಲ್ಯಾಣವೆಂದು ಹೆಸರಿಟ್ಟು ಕರೆಯುವದರಿಂದ ಇಲ್ಲಿಯ ನಿವಾಸಿಗಳಲ್ಲಿ ಕೆಲವರಿಗೆ ಅದು ಬೇಡವೆನಿಸಿದೆ. ಬಸವನದೇಕೆ ಕಲ್ಯಾಣ ? ಇಲ್ಲಿ ಬೇರೆ ಮಹಾತ್ಮರುದಿಸಿಲ್ಲವೇ ? ಅವರೊಡನೇಕೆ ನಿಮ್ಮ ವಂಚನೆ, ಎಂಬ ಕೂಗು ಎದ್ದಿದೆ. ಕಾರಣ ನಾವು ಮುಂದಾದರೂ ಸಾಂಪ್ರದಾಯ ಶಬ್ದವನ್ನುಪಯೋಗಿಸದೆ ಸಮಸ್ತ ಮತೀಯರಿಗೆ ಒಪ್ಪಿಗೆಯಾಗುವ ವಿಶಾಲ ಶಬ್ದವನ್ನು ಉಪಯೋಗಿಸಿ ಎಲ್ಲರ ಅನುರಾಗವನ್ನು ಸಂಪಾದಿಸುವದು ಕಾಲೋಚಿತವಾಗಿದೆ.

ಉದಗಿರಿಯ ಶ್ರೀ ಗುರುಲಿಂಗ ಶಿವಾಚಾರ್ಯರು:— ಶಿವ ಎಂಬ ಶಬ್ದವು ಸಂಶಯಾಸ್ಪದವಾಗಿದೆ ಎಂದು ಹೇಳುವವರ ಮನವೇ ಸಂಶಯಾತ್ಮಕವಾಗಿರುತ್ತದೆ. ಶಿವ ಎಂಬ ಸುಂದರ ಶಬ್ದವು ಸಾಂಪ್ರದಾಯಾತೀತವಾಗಿದ್ದರೂ ಅದರ ಬಗ್ಗೆ ಸಂಶಯಗೊಳ್ಳುವದು ಒಂದು ಬಗೆಯ ಅಭಿಮಾನವೇ ಸರಿ. ಎಲ್ಲ ಜನರು ಒಪ್ಪುವಂತೆ ಮಾಡುವದು ಯಾರಿಂದಲೂ ಸಾಧ್ಯವಿಲ್ಲ. ಯಾವುದು ಯಾರಿಗೆ ಮಾನ್ಯವೋ ಅದು ಇನ್ನೊಬ್ಬರಿಗೆ ಅಮಾನ್ಯವಾಗಿರುತ್ತದೆ. ಜಗತ್ತು ಭಿನ್ನ ರುಚಿಯುಳ್ಳದ್ದು.

ನಾರಾಯಣಪ್ಪ ಕಿಲ್ಲಾರಿ:— ನಾವು ಬಸವಣ್ಣನವರ ತತ್ವ ಪ್ರಚಾರಗೊಳಿಸುವ ಕಾರಣ ಈ ಸಂಸ್ಥೆಗೆ ಬಸವ ತತ್ವ ಪ್ರಚಾರ ಸಂಘವೆಂದು ಕರೆಯಬಹುದು.

ಶ್ರೀ. ಬಾಬಾಸಾಹೇಬ ವಾರದ:— ಶಿವ ಮತ್ತು ಬಸವ ಎಂಬ ಶಬ್ದಗಳಿಂದ ನಮಗೆ ವೈಯ್ಯಕ್ತಿಕ ಅಪನಂಬಿಕೆ ಇಲ್ಲ. ನಾವು ಎಲ್ಲಾ ಜಾತಿಯವರೊಂದಿಗೆ ಕೂಡಿಕೊಂಡು ಒಂದು ದೊಡ್ಡ ಕೆಲಸ ಮಾಡಬೇಕು. ಅದಕ್ಕಾಗಿ ಯಾವ ಬಗೆಯ ಸಂಶಯಾಸ್ಪದ ಹೆಸರನ್ನಿಡದೆ ಸಂಶಯರಹಿತವಾದ ಸಾರ್ವತ್ರಿಕ ಹೆಸರನ್ನಿಟ್ಟು ಕಾರ್ಯಸಾಧಿಸುವದು ವ್ಯವಹಾರ್ಯವಾಗಿದೆ. ಆವ ಶಬ್ದವಾದರೇನು ಉದ್ದೇಶ ಈಡೇರಿದರೆ ಸಾಕು.

ಶ್ರೀ. ಶರಣಯ್ಯನವರು:— ಶಿವ ಎಂಬ ಶಬ್ದವು ಮಂಗಲಸ್ವರೂಪ ವಾಗಿದೆ. ಇದೇ ಎಲ್ಲಕ್ಕೂ ಸುಂದರ ಶಬ್ದವು. ಇದಕ್ಕೂ ಹೆಚ್ಚಿನ ಯೋಗ್ಯ ಶಬ್ದವನ್ನು ಯಾರಾದರೂ ತೋರಿಸಿಕೊಟ್ಟಲ್ಲಿ ನಾವು ಅದನ್ನು ಗ್ರಹಿಸಲು ಸಿದ್ಧರಿದ್ದೇವೆ.

ಶ್ರೀ. ದ. ರಾ. ಬೇಂದ್ರೆ:— ಶಿವ ಎಂಬ ಶಬ್ದವು ಸಾಮಾನ್ಯವಾಗಿ ಎಲ್ಲರಿಗೂ, ವಿಶೇಷವಾಗಿ ವೀರಶೈವರಿಗೂ ವಂದನೀಯವಾಗಿದೆ. ಜೈನರೂ ಈ ಶಬ್ದವನ್ನು ಬಳಸುತ್ತಾರೆ. ವೇದಾಗಮಗಳಲ್ಲಿಯೂ ಈ ಶಬ್ದ ವಿಶಾಲಾರ್ಥದಲ್ಲಿ ಉಪಯೋಗವಾಗಿದೆ. ಸಂಶಯರಹಿತವಾದ ಶಬ್ದವು ಜಗತ್ತಿನಲ್ಲಿ ಯಾವದೂ ಇಲ್ಲ. ಅಂಥಾದ್ದನ್ನು ಹುಡುಕಿ ಸಂಬೋಧಿಸುವದಾವೂ ಸಾಧ್ಯವಿಲ್ಲ. ಕಾರಣ ನನ್ನ ದೃಷ್ಟಿಯಲ್ಲಿ ಶಿವ ಎಂಬ ಶಬ್ದವು ಸ್ವಲ್ಪ ಸಂಶಯಾಸ್ಪದವಾಗಿಯೂ ಬಸವ ಎಂಬ ಶಬ್ದವು ಹೆಚ್ಚು ಸಂಶಯಾಸ್ಪದವಾಗಿಯೂ ತೋರಿದರೂ ಶಿವ ಎಂಬ ಶಬ್ದವು ಮಂಗಲಕರವಾಗಿದ್ದು ಯಾವ ಸಾಂಪ್ರದಾಯಕ್ಕೆ ಬಾಧಕವಾಗಿಲ್ಲ.

ಶ್ರೀ. ರಾ. ಬ. ಹಳಕಟ್ಟಿ:— ಶಿವ ಎಂಬ ಶಬ್ದವು ಶಿವಶರಣರ ದೃಷ್ಟಿಯಲ್ಲಿ ಬಹು ವ್ಯಾಪಕಾರ್ಥವುಳ್ಳದ್ದಾಗಿದೆ. ಬ್ರಹ್ಮ, ವಿಷ್ಣು, ರುದ್ರ ಈ ತ್ರಿಮೂರ್ತಿಗಳಲ್ಲೊಬ್ಬನಾದ ರುದ್ರನಿಗೆ ನಮ್ಮವರು ಶಿವನೆಂದು ಕರೆದಿಲ್ಲ. ಈ ಮೂವರ ಆಚೆಗಿರುವ ನಿಃಕಲ ಪರಶಿವ ತತ್ವಕ್ಕೆ ನಮ್ಮವರು ಶಿವನೆಂದು ಸಂಬೋಧಿಸಿದ್ದಾರೆ. ಈ ಶಬ್ದವು ಬಹಳ ವ್ಯಾಪಕವಿದ್ದು, ಆತ್ಮಜ್ಞಾನ ಜಿಜ್ಞಾಸುಗಳೆಲ್ಲರಿಗೂ ಪೂಜ್ಯವಾಗಿದೆ. ಈ ಶಬ್ದದ ಮಹತ್ವವನ್ನು ಅಂತೇ ನಾನು ನನ್ನ ಮಾಸಿಕಕ್ಕೆ ಶಿವಾನುಭವವೆಂದು ಹೆಸರಿಟ್ಟೆನು. ಷಟ್‌ಸ್ಥಲಕ್ಕಿದೇ ಮೂಲ ಪದ.

ಶ್ರೀ ನಿ. ಮೃತ್ಯುಂಜಯ ಮಹಾಸ್ವಾಮಿಗಳು ಮುಧೋಳ:— ಶಿವ ಎಂಬ ಶಬ್ದವು ಪಾರಿಭಾಷಿಕವಾಗಿದೆ. ನಾವು ಎಷ್ಟೇ ಅದಕ್ಕೆ ವಿಶಾಲ ರೂಪ ಕೊಟ್ಟರೂ ಪರಸಮಯದವರು ಅದನ್ನು ಸಂಶಯಾಸ್ಪದವಾಗಿ ಗ್ರಹಿಸುತ್ತಾರೆ. ವೈದಿಕ ಧರ್ಮಾನುಯಾಯಿಗಳು ವಿಷ್ಣು ಈ ಶಬ್ದವನ್ನು ವ್ಯಾಪ್ನೋತಿ ಇತಿ ವಿಷ್ಣುಃ ಎಂದು ವಿಶಾಲ ಅರ್ಥದಲ್ಲಿ ತಿಳಿಸುತ್ತಾರೆ. ಇದಾದರೂ ಹಾಗೆಯೇ ಸರಿ. ಇವೆಲ್ಲ ಒಂದು ಬಗೆಯ ಸಾಂಪ್ರದಾಯಿಕ ಹಟ. ಶ್ರೀ. ವಾರದ ಬಾಬಾಸಾಹೇಬರ ಸಂಶಯವು ವೈಯಕ್ತಿಕವಾಗಿ

ರದೆ ಬಹುಜನ ವಾಣಿಯು ಸಂಯುಕ್ತ ಧ್ವನಿಯಾಗಿದೆ. ಕಾರಣ ಸಂಶಯಾಸ್ಪದ ಶಬ್ದವನ್ನು ಬಿಟ್ಟು ಈ ಸಂಸ್ಥೆಗೆ ಪರಾನುಭವ ಸಂಘವೆಂದು ಕರೆದರೆ ಯೋಗ್ಯವಾಗಬಹುದಲ್ಲವೇ ?

ಉದಗೀರ ಗುರುಲಿಂಗ ಶಿವಾಚಾರ್ಯರು:— ಶಬ್ದದಲ್ಲಾವ ಮಹತ್ವವಿಲ್ಲ. ನಡೆಯು ಮುಖ್ಯವಾಗಿದೆ. ವಿಶಾಲ ಹೆಸರನ್ನಿಟ್ಟು ಸಂಕುಚಿತ ಭಾವನೆಯಿಂದ ವರ್ತಿಸುವದು ಅತಿ ಸಂಶಯಾಸ್ಪದವಾದದ್ದು ಕೃತಿಯಲ್ಲಿ ವಿಶಾಲಭಾವನೆ ಉಂಟು ಮಾಡಿಕೊಳ್ಳುವದೇ ಸಂಶಯ ರಹಿತವಾದುದಲ್ಲದೆ ಹೆಸರಿನಲ್ಲೇನಿಲ್ಲ. ಈ ಶಬ್ದವು ಸುಂದರವಾಗಿಯೂ ಶಿವಶರಣರ ಬಳಕೆಯಲ್ಲಿ ಬೆಳೆದು ಉಳಿದದ್ದಕ್ಕಾಗಿಯೂ ನಮಗೆ ವಿಹಿತವಾಗಿ ತೋರುತ್ತದಲ್ಲದೆ ಇದರಲ್ಲಿ ನಮ್ಮ ಹಟವಾವುದಿಲ್ಲ.

ಗೋಲಾಬ ದೇವಜಿ ಕಲ್ಯಾಣ:— ಶಿವ ಎಂಬ ಶಬ್ದದ ಬಗ್ಗೆ ಸಂಕುಚಿತ ಕಲ್ಪನೆ ಉಂಟುಮಾಡಿಕೊಳ್ಳುವದು ದೊಡ್ಡ ತಪ್ಪು. ನಾನು ವೈದಿಕ ಬ್ರಾಹ್ಮಣನೇನು ಅಹುದು. ಆದರೆ ಶಿವ ಎಂಬ ಶಬ್ದದ ಬಗ್ಗೆ ನನಗೆ ಯಾವ ಸಂಶಯವೂ ತೋರುವದಿಲ್ಲ. ಈಶ್ವರ ಎಂಬ ಪದದ ಪರ್ಯಾಯ ನಾಮವೇ ಶಿವ ಎಂದು ಗ್ರಹಿಸುವದು. ಇದು ಜಗತ್ತಿನಲ್ಲಿ ಅತಿ ವಿಶಾಲ ಶಬ್ದಕ್ಕಿಂತಲೂ ಅತಿ ವಿಶಾಲವಾಗಿದೆ. ಸುಂದರ ಶಬ್ದಕ್ಕಿಂತಲೂ ಸುಂದರವಾಗಿದೆ. ಇಂಥಾ ಸಂಶಯ ರಹಿತವಾದ ಶಬ್ದದ ಬಗ್ಗೆಯೂ ಸಂಶಯವನ್ನುಂಟು ಮಾಡುವವರ ಬಗ್ಗೆ ಉಪೇಕ್ಷಾಭಾವನೆ ತಾಳುವದೇ ಸುಲಭೋಪಾಯ. ವಿಶ್ವಪ್ರೇಮದಿಂದ ನಾವು ವರ್ತಿಸಿದರೆ ಇದರ ಬಗ್ಗೆ ಯಾರ ಸಂಶಯವೂ ಉಳಿಯಲಾರದು. ನಮ್ಮ ಸಂಕುಚಿತ ಭಾವನೆಯೇ ನಾಮಗಳಿಗೆ ಸಾಂಪ್ರದಾಯ ರೂಪ ಕೊಡಿಸಿದೆ. ನಾಮದಲ್ಲಿ ಆವ ಸಂಕುಚಿತವೇ ಇಲ್ಲ. ನಾಮ ಯಾವುವೇ ಇರಲಿ ಮೊದಲು ನಮ್ಮ ಮನ ವಿಶಾಲವಾಗುವದು ಅತ್ಯಗತ್ಯವಿದೆ.

ಸೊಲ್ಲಾಪುರದ ವಿಭೂತಿ ಪತ್ರಿಕಾ ಸಂಪಾದಕರು:— ಶ್ರೀ. ವಾರದ ಬಾಬಾಸಾಹೇಬರ ಆಕ್ಷೇಪಣೆಯು ಒಂದು ಬಗೆಯಿಂದ ಯೋಗ್ಯವೇ ಅಹುದು. ಅವರು ಸಮಾಜದ ಕಡಿವಾಣ ಕೈಯ್ಯಲ್ಲಿ ಹಿಡಿದ ಕಾರಣ ಎಲ್ಲರ ಮನ ಒಲಿಸಿ ನಡೆಯುವದು ಅವರ ಕೆಲಸವಾಗಿದೆ. ಕೇವಲ ಶಬ್ದಕ್ಕಾಗಿ ಯಾರೂ

ಹಟಮಾಡದೆ ಕೃತಿಯಲ್ಲಿ ಸೌಜನ್ಯವನ್ನು ತೋರಿಸುವದೇ ಸಮಯೋಚಿತ ವಾಗಿದೆ.

ಶ್ರೀ. ರುದ್ರಶೆಟ್ಟಿ ಪಾಟೀಲಃ— ಇಲ್ಲಿಯವರೆಗೂ ಸಾಕಷ್ಟು ಚರ್ಚೆ ಯಾಯಿತು. ಅತಿ ಸರ್ವತ್ರಂ ವರ್ಜಯೇತ್ ಎಂಬಂತೆ ಯಾವದನ್ನೂ ವಿಶೇಷ ಬೆಳಿಸುತ್ತ ಹೋದಲ್ಲಿ ಸ್ವಾರ ರಹಿತವಾಗುವದು. ಶ್ರೀ. ಗೋಪಾಲಜಿಯವರ ಅಭಿಪ್ರಾಯವನ್ನು ನಾನು ಪುಷ್ಟೀಕರಿಸುತ್ತೇನೆ. ಇವರು ವಿಶಾಲಭಾವನೆಯಿಂದ ಎಲ್ಲರೊಡನೆ ಕೂಡಿ ವರ್ತಿಸುತ್ತಾರೆ. ಅದಕ್ಕಾಗಿ ಹಟವಾದಿಗಳು ಇವರನ್ನು ಹಾನಿಗೀಡು ಮಾಡುತ್ತಿರುವರು. ಆದರೂ ಇವರು ಅದನ್ನು ಲಕ್ಷಿಸದೆ ತಮ್ಮ ಅಂತರಾತ್ಮನ ಪ್ರೇರಣೆಯಂತೆ ಧೈರ್ಯ ದಿಂದ ಕಾರ್ಯ ನಡಿಸುತ್ತಾರೆ. ಜನವಿರೋಧಿಗೆ ಇವರು ಅಂಜುವವ ರಲ್ಲ. ಪ್ರಾಣವನ್ನಾದರೂ ಕೊಟ್ಟು ತತ್ವ ಉಳಿಸುವ ವೀರರಿವರು. ಕಾರಣ ನಾನು ಗೋಪಾಲಜಿಯವರ ಅಭಿಪ್ರಾಯವನ್ನೇ ಪುಷ್ಟೀಕರಿಸು ತ್ತೇನೆ. ನಾವು ಶಿವ ಎಂಬ ಶಬ್ದವನ್ನೇ ಗ್ರಹಿಸಿ ಮನೋವೈಶಾಲ್ಯ ಬೆಳಸುವದೇ ನ್ಯಾಯ ಸಮ್ಮತವಾಗಿದೆ.

ಶ್ರೀ. ವಾರದ ಬಾಬಾಸಾಹೇಬರುಃ—ಈ ಬಗ್ಗೆ ಒಂದು ಸಬ್ ಕಮೀಟಿ ಏರ್ಪಡಿಸಿ ಆ ಕಮೀಟಿಯು ನಿರ್ಣಯದಂತೆ ಸಂಸ್ಥೆಗೆ ಹೆಸರಿಡುವದು ಉಚಿತವಾಗಬಹುದಲ್ಲವೇ ?

ಶ್ರೀ. ಮಹೇಶ ಶಂಕರ ನಾಗೂರಃ—ಇದರ ನಿರ್ಣಯದ ಬಗ್ಗೆ ಯಾವ ಕಮೀಟಿ ರಚಿಸುವದೂ ಅವಶ್ಯವಿಲ್ಲ. ಪಿಷ್ಟಪೇಷ ನ್ಯಾಯದಂತೆ ಅವರಾದರೂ ಇದೇ ನಿರ್ಣಯಕ್ಕೆ ಬರುವರು. ಈ ಶಬ್ದವು ಹಿಂದೊಮ್ಮೆ ಬಸವಾದಿ ಶಿವಶರಣರ ಕಾಲಕ್ಕೆ ಸಾಕಷ್ಟು ಚರ್ಚೆಗೀಡಾಗಿ ನಿಂತಿದೆ. ನಮ್ಮ ಚರ್ಚೆ ಪೊಳ್ಳು. ಈ ಶಬ್ದ ಮಾತ್ರ ಯಾವಾಗಲೂ ಗಟ್ಟಿ. (ಎಲ್ಲರ ಕರತಾಡನೆ)

ಶ್ರೀ. ರಾ. ಬ. ಹಳಕಟ್ಟಿಯವರುಃ— ಶಿವ ಎಂಬ ಶಬ್ದವು ಅಧ್ಯಾತ್ಮ ಗಾಂಭೀರ್ಯವಾಗಿದೆ. ನಿರಾಕಾರ ನಿಃಶೂನ್ಯ ನಿಃಕಲ ಶಿವ ತತ್ವವು ಪ್ರವೃತ್ತಿ ಮಾರ್ಗವಿಡಿದು ಒಂದು ಮೂರಾಗುತ್ತದೆ. ಮೂರು ಆರಾಗುತ್ತದೆ. ಆರು ಮುವತ್ತಾರಾಗುತ್ತಿದೆ. ಮುವತ್ತಾರು ಇನ್ನೂರಾ ಹದಿನಾರಾಗುತ್ತದೆ. ಇವು

ನಿವೃತ್ತಿ ಮಾರ್ಗವಿಡಿದು ಅವು ಒಂದರಲ್ಲೊಂದು ಸಮಾವೇಶಗೊಂಡು ಬಯಲಾಗುತ್ತವೆ. ಈ ಸಿದ್ಧಾಂತಕ್ಕೆ ಶಿವತತ್ವವೇ ಮೂಲಾಧಾರವಾಗಿದೆ. ಈ ಶಿವತತ್ವವು ಯಾರ ಸಾಂಪ್ರದಾಯದ್ದಲ್ಲ. ನಿರಂಜನ, ನಿಃಶೂನ್ಯ, ನಿರವಯ ಲಿಂಗವೇ ಇದಾಗಿದೆ. ಲಿಂಗವೆಂಬುದಾಗಲೀ, ಶಿವತತ್ವವೆಂಬುದಾ ಲೀ, ಅಖಂಡ ಜ್ಞಾನ ಜ್ಯೋತಿ ಅನುಪಮ ಸ್ವಯಂ ಪ್ರಕಾಶ ಭಕ್ತಿ ಮಾಡುವವನು ಷಡ್ವಿಧ ಭಕ್ತಿಗಳಿಂದ ಈಷಡ್ವಿಧಲಿಂಗಗಳನ್ನಾರಾಧಿಸಿ ನಿವೃತ್ತಿ ಪಥವಿಡಿದು ಈ ಶಿವತತ್ವದಲ್ಲಿ ಬೆರೆಯುವದೇ ಅಂತಿಮ ಗುರಿಯಾಗಿದೆ. ಈ ತತ್ವದ ಅನುಭವ ಮಾಡಿಕೊಳ್ಳುವದೇ ಶಿವಾನುಭವ. ಇದು ಸಾಂಪ್ರದಾಯಿಗಳಿಗೇಕೆ? ತ್ರಿಮೂರ್ತಿಗಳಿಗೂ ತೀವ್ರದಲ್ಲಿ ನಿಲುಕಲಾರದ ಶಬ್ದವು. ಇದನ್ನು ಭಕ್ತನು ಕರತಳಾಮಳಕ ಮಾಡಿಕೊಂಡಿದ್ದಾನೆ. ಭಕ್ತಿಭಾವಿಗಳಿಗಿದು ಪ್ರಕಾಶಮಾನವಾಗಿದೆ. ಕಾರಣ ನಾವೆಲ್ಲರೂ ಸಂಶಯ ಪ್ರಪಂಚದಲ್ಲಿ ಸುಳಿದಾಡದೆ ಭಕ್ತಿ ಕ್ಷೇತ್ರದಲ್ಲಿ ನಿಂತು ನಿರೀಕ್ಷಿಸಿದರೆ ಇದರ ವ್ಯಾಪಕತೆ ತಾನಾಗಿಯೇ ವ್ಯಕ್ತವಾಗುತ್ತದೆ. (ಎಲ್ಲರ ಕರತಾಡನೆ.)

ಈ ರೀತಿ ಸಾಕಷ್ಟು ಚರ್ಚೆಯಾದ ನಂತರ ಬಹು ಮತನಂತೆ ಸಂಸ್ಥೆಯ ಹೆಸರು ಶಿವಾನುಭವ ಆಶ್ರಮವೆಂದು ಸ್ವೀಕೃತವಾಯಿತು. ಸಭೆಯ ಅಧ್ಯಕ್ಷರಾದ ಶ್ರೀಮಾನ್ ವಾರದ ಬಾಬಾಸಾಹೇಬರು ತಮ್ಮ ಅಧ್ಯಕ್ಷೀಯ ಸಮಾರೋಪದಲ್ಲಿ ತಮ್ಮ ಅನುಮತಿಯನ್ನು ವ್ಯಕ್ತಪಡಿಸುತ್ತ ಹೀಗೆಂದರು:— "ಶರಣರ ವಾದ ಮೋಕ್ಷದ ನಾಡು, ಶರಣರ ವಾದ ಲಿಂಗದ ಬೀಡು" ಎಂಬಂತೆ ಶರಣರ ವಾದದ ಸಾರಾಂಶವು ಮಾಧುರ್ಯವಾಗಿರುತ್ತವೆ. ದೀರ್ಘವಾದವು ಎಲ್ಲರ ಸಂಶಯಗಳನ್ನು ನಿವೃತ್ತಿಗೊಳಿಸಿತು. ಕಲ್ಯಾಣದಲ್ಲಿ ಮಹಾ ಉತ್ಸವವನ್ನು ನೆರವೇರಿಸುವದರಲ್ಲಿ ಬಸವ ತತ್ವವನ್ನು ಪ್ರಚಾರಗೊಳಿಸುವದೇ ನಮ್ಮ ಉದ್ದೇಶವಾಗಿದೆ ಹೊರತು ವಿಜೃಂಭಣೆಯಿಂದ ಡೊಳ್ಳುಬಾರಿಸಿ ಬರೇ ಮುದ್ದು ಸುಟ್ಟು ಮನೆಗೆ ಹೋಗುವುದಿಲ್ಲ. ಇವೆಲ್ಲಾ ಅಜ್ಞ ಸಮಾಜದ ಮನವನ್ನು ಸೆಳೆಯುವ ಉಪಾಯಗಳು. ಬಸವಣ್ಣನವರ ವಿಶಾಲ ತತ್ವಗಳನ್ನು ಸಾಮಾನ್ಯ ಮಾನವರಿಗೂ ಸಹ ಮುಟ್ಟಿಸುವದು ನಮ್ಮ ಕರ್ತವ್ಯವಾಗಿದೆ. ಇಂದು ಸ್ಥಾಪಿಸಲ್ಪಟ್ಟ ಸಂಸ್ಥೆಯ ಸದಸ್ಯರು ಏಕಭಾವನೆಯಿಂದ ವರ್ತಿಸುವದು ಅವಶ್ಯವದೆ. ಅಧ್ಯಕ್ಷ ಸೆಕ್ರೆಟರಿ, ಅಥವಾ ಕೋಶಾಧ್ಯಕ್ಷ ಮುಂತಾದ ಈ ಅಧಿಕಾರಿಗಳೆಲ್ಲಾ ನಾಟಕದ ಪಾರ್ಟುಗಳಂತಿವೆ. ಪ್ರತಿಯೊಬ್ಬ ಪಾತ್ರಗಾರನು ತಾನು ಧರಿಸಿದ ಪಾತ್ರದ ಉದ್ದೇಶ

ವಿಚಾರಗಳಲ್ಲಿ ತಲ್ಲೀನನಾಗಿ ನಟಿಸುವರೂ ಕಡೆಗೆ ತಾನು ಮೊದಲು ಹೇಗೋ ಹಾಗೆಯೇ ಇರುವನು. ಸಂಸ್ಥೆಯ ಮೆಂಬರರೆಂದರೆ ಕಂಪನಿಯ ಪಾತ್ರಗಳಂತೆ ಸರಿ. ಕಾರ್ಯದ ವೃಷ್ಟಿಗೆ ಅಧಿಕಾರಿಗಳನ್ನು ಬಳಿಸಿ ಎಲ್ಲರೂ ಒಮ್ಮತ ಸರ್ವಸಮತಾ ಭಾವನೆಯಿಂದ ನಡಕೊಳ್ಳುವದು ಬಹಳ ಮಹತ್ವವಿದೆ. ನನ್ನನ್ನು ಇಲ್ಲಿಯ ಬಸವೇಶ್ವರ ದೇವಸ್ಥಾನ ಕಮೀಟಿಯು ಅಧ್ಯಕ್ಷನನ್ನಾಗಿ ಮಾಡಿ ದೊಡ್ಡ ಸೇವೆಯ ಹೊಣೆ ಒಪ್ಪಿಸಿದ್ದಾರೆ. ಶಿಕ್ಷಣ ಪ್ರಸಾರಕ್ಕಾಗಿ ಇಲ್ಲಿ ಹೈಸ್ಕೂಲ ಸ್ಥಾಪನೆ ಮಾಡಿಸಿ ಒಂದು ಫ್ರೀ ಬೋರ್ಡಿಂಗ ನಡಿಸಲಾಗಿದೆ. ಕಲ್ಯಾಣದಲ್ಲಿ ಸಮಾಜೋನ್ನತಿಯ ಯಾವ ಚಟುವಟಿಕೆ ನಡೆದರೂ ಅವು ಒಂದೇ ಕೇಂದ್ರಕ್ಕೆ ಸಂಬಂಧಪಟ್ಟಿರಬೇಕು. ಇಂದಿನ ಶುಭದಿನದ ವಾದವು ಐತಿಹಾಸಿಕ ಪ್ರಸಂಗನಾಗಲಿ. ಇಂದು ಸ್ಥಾಪಿಸಿದ ಆಶ್ರಮವು ತನ್ನ ಕಾರ್ಯ ವಿಶಿಷ್ಟತೆಯಿಂದ ಐತಿಹಾಸಿಕವಾಗಿ ಪರಿಣಮಿಸಲಿ. ಇಲ್ಲಿಯ ಉತ್ಸವ ಕಮೀಟಿಯವರ ಪರವಾಗಿ ತಮ್ಮ ಆಭಾರವನ್ನು ಮನ್ನಿಸುತ್ತೇನೆ ಎಂದು ಮುಗಿಸಿದರು.

ಸದ್ಭಕ್ತರೇ ಇಂದು ಸ್ಥಾಪಿಸಲ್ಪಟ್ಟ ಸಂಸ್ಥೆಯು ನಿಮಗಾಗಿಯೇ ಇದೆ. ನೀವು ಅದಕ್ಕಾಗಿಯೇ ಇರುವಿರಿ. ನೀವು ಬಾಹ್ಯ ವಸ್ತುಗಳನ್ನು ಇದಕ್ಕೆ ಕೊಟ್ಟರೆ ಸಾಲದು. ಹೃದಯ ಬಿಚ್ಚಿ ಆತ್ಮಾರ್ಪಣೆಯಿಂದ ಇದರ ಹಸಿವನ್ನು ತೃಪ್ತಿಗೊಳಿಸಿರಿ. ಇದೇ ನಮ್ಮವರ ಆದರ್ಶ. ( ಕರತಾಡನೆ )

ತರುವಾಯ ಒಂದು ಸ್ಥಾಯೀ ಕಮೀಟಿಯೂ ಒಂದು ಕಾರ್ಯಕಾರೀ ಕಮೀಟಿಯೂ ನೇಮಿಸಲ್ಪಟ್ಟವು. ಸ್ಥಾಯೀ ಕಮಿಟಿಯಲ್ಲಿ ಎಲ್ಲ ಪ್ರಾಂತಗಳ ಪ್ರಮುಖ ವೀರಶೈವರಿರಬೇಕೆಂತಲೂ ಕಾರ್ಯಕಾರೀ ಕಮೀಟಿಯಲ್ಲಿ ೧೫ ಜನಸದಸ್ಯರಿರಬೇಕೆಂತಲೂ ಗೊತ್ತಾಯಿತು ಕಾರ್ಯಕಾರೀ ಕಮೀಟಿಯವರು ಆಶ್ರಮಕ್ಕೋಸ್ಕರ ಶಕ್ಯವಿದ್ದಷ್ಟು ಹೆಚ್ಚು ಹಣವನ್ನು ಸಂಗ್ರಹಿಸತಕ್ಕದ್ದು. ಸಂಸ್ಥೆಯ ನಿಯಮಾವಳಿಗಳ ಕರಡನ್ನು ರಾ || ಬ|| ಹಳಕಟ್ಟಿಯವರು ಸಿದ್ಧಪಡಿಸಬೇಕೆಂತಲೂ ಗೊತ್ತಾಗಿ ಕಾರ್ಯಕಾರೀ ಕಮೀಟಿಗೆ ಒಂದು ಸಲಹೆ ಕಮೀಟಿಯೂ ನೇಮಿಸಲ್ಪಟ್ಟಿತು. ಆದಷ್ಟು ಶೀಘ್ರವಾಗಿ ಕಾರ್ಯ ಕಮೀಟಿಯನ್ನು ಕರೆಯುವದು ಗೊತ್ತಾಯಿತು. ಕಾರ್ಯಕಾರೀ ಕಮೀಟಿಗೆ ಶ್ರೀ ಬಾಬಾಸಾಹೇಬ ವಾರದ. ಇವರು ಅಧ್ಯಕ್ಷರಾಗಿಯೂ ಶ್ರೀ. ಶರಣಯ್ಯ ಮಹಾಗಾವ ಮು.- ಕಲಬುರ್ಗಿ ಮತ್ತು ಶ್ರೀ. ರುದ್ರಶೆಟ್ಟಿ ಪಾಟೀಲ ಮು. ಮಹಾಗಾವ ಇವರು ಸಂಯುಕ್ತ ಸೆಕ್ರೆಟರಿಗಳಾಗಿಯೂ ನೇಮಿಸಲ್ಪಟ್ಟರು.

---

# ಪುಸ್ತಕ ಪರೀಕ್ಷೆ.

**ಮಣಿಕಾಂತಿಃ—** ಈ ಗ್ರಂಥವನ್ನು ಶ್ರೀ ಜ. ಪ. ಚನ್ನಬಸವ ರಾಜ ದೇಶೀಕೇಂದ್ರ ಶಿವಾಚಾರ್ಯ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಗೂಳೂರು ಇವರು ರಚಿಸಿದ್ದು ಇದರ ಪ್ರಕಾಶಕರು ತ್ಯಾಗವೀರ ಶ್ರೀ ಶಿವಶಂಕರಪ್ಪ ಶಿವಲಿಂಗಪ್ಪ ಚಿತ್ತರಗಿ ಮು-ಬಾಗಲಕೋಟ ಇವರು ಇದ್ದಾರೆ. ಷಟ್‌ಸ್ಥಲ ಜ್ಞಾನವನ್ನು ಹೊಂದುವದು ಬಹು ಕಠಿಣವಿರು ತ್ತದೆ. ಅದರಲ್ಲಿ ತೊಡಕುಗಳು ಬಹಳ. ಕೆಲವೊಂದು ದೃಷ್ಟಿಯಿಂದ ಕೆಲವೊಂದು ವಿಚಾರವನ್ನು ಮಾಡುತ್ತಿರುವಲ್ಲಿ ಬೇರೊಂದು ಸಂದರ್ಭದಲ್ಲಿ ಆದರ ಅರ್ಥದ ವಿಶಿಷ್ಟತೆಯೇ ಬೇರೆಯಾಗಿಬಿಡುತ್ತದೆ. ಉದಾಃ— ಷಟ್ ಸ್ಥಲಗಳನ್ನು ೩೬ ಸ್ಥಲಗಳ ದೃಷ್ಟಿಯಿಂದ ವಿವರಿಸಬಹುದು. ಅವುಗಳನ್ನು ೧೦೧ ಸ್ಥಲಗಳಮೂಲಕವಾಗಿಯೂ ವಿವೇಚಿಸಬಹುದು. ೧೦೧ ಸ್ಥಲಗಳ ಬಗ್ಗೆ ಗ್ರಂಥಗಳು ಕೆಲವು ಮಾತ್ರ ಇವೆ. ಅವುಗಳಲ್ಲಿ 'ಮಣಿಕಾಂತಿ' ಎಂಬ ಈ ಗ್ರಂಥವು ಹೊಸತರದ್ದಾಗಿದೆ. ಸಿದ್ಧಾಂತ ಶಿಖಾಮಣಿಯನ್ನು ಅವಲಂಬಿಸಿ ಇದರ ವಿವೇಚನೆಯನ್ನು ಗ್ರಂಥಕಾರರು ಮಾಡಿರುತ್ತಾರೆ. ಆಚಾರದ ತತ್ವಗಳನ್ನರಿಯಲಿಕ್ಕೆ ೧೦೧ ಸ್ಥಲಗಳ ಜ್ಞಾನವು ಅತ್ಯಾವಶ್ಯ ವಾಗಿರಬೇಕು. ಈ ಮಹತ್ವದ ವಿಷಯವಾಗಿ ವಿಸ್ತೃತ ವಿವೇಚನೆಗಳು ಈ ಗ್ರಂಥದಲ್ಲಿ ಬಂದಿರುತ್ತವೆ. ಇದರ ಮಹತ್ವವು ವಾಚಕರ ಲಕ್ಷಕ್ಕೆ ಬರ ಬೇಕೆಂದು ಗ್ರಂಥಕಾರರಾದರೂ ಉಚಿತ ಶಬ್ದಗಳಿಂದ ಗ್ರಂಥದ ಹೆಸರಿಟ್ಟಿ ರುವರು. ಷಟ್‌ಸ್ಥಲ ವಿಚಾರಗಳು ಸುಲಭವಾಗಿ ತಿಳಿಯುವ ಭಾಷೆ ಯಲ್ಲಿ ಇದರಲ್ಲಿ ಹೇಳಲ್ಪಟ್ಟಿರುತ್ತವೆ. ಗ್ರಂಥವನ್ನು ಎಲ್ಲ ವೀರಶೈವರೂ ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ಸೂಚನೆ ಇದೆ. ಇದಕ್ಕೆ ವಿಸ್ತೃತ ಪರಿವಿಡಿಯೂ ಇದೆ.

**ಶ್ರೀರಮಣ ಮಹರ್ಷಿಃ** - ದಕ್ಷಿಣ ಹಿಂದುಸ್ತಾನದಲ್ಲಿ ರಮಣ ಮಹರ್ಷಿ ಗಳು ಹೆಸರುವಾಸಿಗಳಾದ ಧಾರ್ಮಿಕ ಪುರುಷರಾಗಿದ್ದಾರೆ. ಶ್ರೀಮಾನ್ ಅರ್ಚಕ ವೆಂಕಟೇಶ ಮತ್ತು ಶ್ರೀಮಾನ್ ಎಚ್. ಎಸ್. ರೇಣುಕ ಪ್ರಸಾದ ಬಿ. ಎ. ಇವರು ಬಹು ಶ್ರಮಪಟ್ಟು ಅನೇಕ ಸಂಗತಿಗಳನ್ನು ಸಂಗ್ರಹಿಸಿ ಸರಳವಾದ ಶೈಲಿಯಲ್ಲಿ ಈ ಗ್ರಂಥವನ್ನು ಬರೆದಿದ್ದಾರೆ ಇದನ್ನು ಆಸ್ಥಾನ ವಿದ್ವಾನ್ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತಮ್ಮ ಮುದ್ರಣಾ

ಲಯದಲ್ಲಿ ಮುದ್ದಾಗಿ ಮುದ್ರಿಸಿದ್ದಾರೆ. ಭಾರತದ ಸಂಸ್ಕೃತಿಯನ್ನು ಶ್ರೀ ರಮಣ ಮಹರ್ಷಿಗಳಂಥವರು ಕಾಲಕಾಲಕ್ಕೆ ಜನಿಸಿ ಪೋಷಿಸುತ್ತ ಬಂದಿದ್ದಾರೆ. ಇವರ ಹುಟ್ಟು ಗ್ರಾಮವು ಮಧುರೆಯ ದಕ್ಷಿಣಕ್ಕೆ ೩೦ ಮೈಲು ದೂರದಲ್ಲಿದ್ದ ತಿರುಚ್ಚುಳಿ ಎಂಬುದಾಗಿದೆ. ಅಲ್ಲಿ ರಮಣ ಮಹರ್ಷಿಗಳು ಚಿಕ್ಕಂದಿನಲ್ಲಿಯೇ ಧ್ಯಾನಮಗ್ನರಾಗಿ ಕಾಲಕಳೆಯುತ್ತಿದ್ದುದು ಕಂಡುಬಂದಿದೆ. ಅಧ್ಯಾತ್ಮ ಜೀವನದಕಡೆಗೆಯೇ ಅವರಿಗೆ ಆಸಕ್ತಿಯುಂಟಾಗಿತ್ತು. ಅವರು ಸುಕ್ಷೇತ್ರ ತಿರುವಣ್ಣಾಮಲೆಗೆ ಆಗಮಿಸಿ ಅಲ್ಲಿ ಕೆಲಕಾಲ ಮೌನವಾಗಿಯೇ ಇರುತ್ತಿದ್ದರು. ಬಹುಜನರು ಇವರು ಹುಚ್ಚರೆಂದು ಭಾವಿಸಿದರು. ಅವರ ತಾಯಿಯವರು ಈ ಮಾರ್ಗವನ್ನು ತ್ಯಜಿಸಲು ಬಹಳ ಬೋಧಿಸಿದರು. ಆದರೆ ಅದು ಸಿದ್ಧಿಗೆ ಹೋಗಲಿಲ್ಲ. ಮುಂದೆ ಅವರು ರಮಣ ಮಹರ್ಷಿಗಳೆಂದು ಪ್ರಸಿದ್ಧರಾದರು. ಅವರು ಆಶ್ರಮವನ್ನು ರಚಿಸಿ ಅಧ್ಯಾತ್ಮ ಜೀವನವನ್ನು ಕಡೆವರೆಗೆ ಸಾಗಿಸಿ ತಮ್ಮ ೬೧ ನೇ ವರ್ಷದಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿದರು. ಅವರಲ್ಲಿ ಶಾಂತಿ ಸಹನ ಗುಣಗಳು ಅಲೌಕಿಕವಾಗಿದ್ದವು. ಅವರ ಆಶ್ರಮ ಜೀವನ ಮತ್ತು ಅವರ ಮಾರ್ಗ ಇವುಗಳ ವಿಷಯವಾಗಿ ಸ್ವತಂತ್ರ ಅಧ್ಯಾಯಗಳಿವೆ. ಅವುಗಳನ್ನು ವಾಚಕರು ಅವಶ್ಯವಾಗಿ ನೋಡಬೇಕು. ಇದು ೯೮ ಪುಟವುಳ್ಳ ಗ್ರಂಥವು. ಬೆಲೆ ೧ ರೂಪಾಯಿ.

ಆದರೆ ಶಿವಶರಣರು ಮೇಲೆ ಹೇಳಿದಂತೆ ತಮ್ಮ ನಿತ್ಯ ಜೀವನವನ್ನು ತ್ಯಜಿಸದೆ ಕಾಡುಜನರು, ಒಕ್ಕಲಿಗರು, ಅಸ್ಪೃಶ್ಯರು ದುಃಖಿತರು, ಇಂಥವರಲ್ಲಿ ಬೆರೆದು ಅವರನ್ನು ಉದ್ಧಾರ ಮಾಡುವ ಕಾರ್ಯವನ್ನು ಯಾವಾಗಲೂ ಕೈಕೊಂಡಿರುತ್ತಾರೆ. ಹಿಂಸಾಚಾರಿಗಳಿದ್ದರೆ ಇವರ ಹಿಂಸಾತ್ಮಕ ರೀತಿಗಳನ್ನು ಬಿಡಿಸಲು ಅವರು ಯತ್ನಿಸಿದ್ದಾರೆ. ಭೃತ್ಯಾಚಾರವೇ ಅವರ ರೀತಿಯು. ಇದು ಈ ದೃಷ್ಟಿಯಿಂದ ಶ್ರೇಷ್ಠ ಧರ್ಮವಾಗಿದೆಂಬುದರಲ್ಲಿ ಸಂದೇಹವಿರಲಾರದು.

**ದುಂಬಿಃ**— ಆಸ್ಥಾನ ವಿದ್ವಾನ್ ಪಂಡಿತರತ್ನಂ ಕೀರ್ತನಾಚಾರ್ಯ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕಾಲಕಾಲಕ್ಕೆ ರಚಿಸಿದ ಕವನಗಳ ಸಂಗ್ರಹವು ಇದಾಗಿದೆ. ಇದರಲ್ಲಿ ಅವರ ೬೦ ಕವನಗಳು ಸಂಗ್ರಹಿಸಲ್ಪ

ಟ್ಟಿರುತ್ತವೆ. ಕರ್ನಾಟಕದ ಮಹತ್ತ್ವವನ್ನು ಸಾರುವ ಅನೇಕ ಕವನಗಳು ಇದರಲ್ಲಿ ಇವೆ. ಅಜಂತದ ಗವಿಯೇ, ಕೈಲಾಸ ಮಂದಿರ, ರಾಮರಾಜನ ಸಂದೇಶ, ಈ ಶಿರೋಲೇಖಗಳ ಕೆಳಗೆ ಇರುವ ಅವರ ಕವನಗಳನ್ನು ನೋಡಬೇಕು. ಇವು ಅವರ ಕರ್ನಾಟಕ ಪ್ರೇಮವನ್ನು ಹೊರಪಡಿಸುತ್ತವೆ. ಹಾಗೆಯೇ ಭಾರತದ ಮಹಿಮೆಯನ್ನು ವರ್ಣಿಸುವ ಅನೇಕ ರಾಷ್ಟ್ರೀಯ ಕವನಗಳೂ ಇದರಲ್ಲಿ ಇವೆ. ಈ ವಿಷಯವಾಗಿ ಮಹಾತ್ಮಾ ಗಾಂಧೀ, ಅಹಿಂಸೆಯ ವಿಜಯ, ವೀರ ವಲ್ಲಭಭಾಯಿ ಈ ಕವನಗಳನ್ನು ನೋಡಬೇಕು. ನೆಲಸಂಪಿಗೆ, ಶತ್ರು-ಮಿತ್ರ, ಓ ಹಿಮಾಲಯ ಈ ಕವನಗಳು ಅವರ ಅಧ್ಯಾತ್ಮಿಕ ವಿಚಾರಗಳನ್ನು ಅರುಹುತ್ತವೆ. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಕವನಗಳು ಯಾವಾಗಲೂ ಗಂಭೀರವಾದವುಗಳು. ಮತ್ತು ಉಚ್ಚ ಶೈಲಿಯವು. ಅವರ ಈ ರೀತಿಯನ್ನು ಈ ಕವನಸಂಗ್ರಹದಲ್ಲಿ ನಾವು ಕಾಣಬಹುದಾಗಿದೆ. ೯೩ ಪುಟಗಳುಳ್ಳ ಈ ಗ್ರಂಥದ ಬೆಲೆ ೧ ರೂಪಾಯಿ ಮಾತ್ರ ಇದೆ.

**ಕನ್ನಡ ಕಲಿಸಿರುಮನ ಚರಿತೆ:—** ಇದು ಶರಣಸಾಹಿತ್ಯ ಗ್ರಂಥಮಾಲೆಯಲ್ಲಿಯ ೧೨ ನೆಯ ಗ್ರಂಥವಾಗಿದೆ. ಈ ಗ್ರಂಥವನ್ನು ಇತಿಹಾಸ ಸಂಶೋಧಕರಾದ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಬರೆದಿದ್ದಾರೆ. ಇದರ ಪ್ರಕಾಶಕರು ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಇದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಬೂದಿಹಾಳು ಎಂಬ ಗ್ರಾಮವಿದೆ. ಇದು ವಿಜಯನಗರದ ಅರಸರ ಕಾಲದಲ್ಲಿ ಒಂದು ಸಣ್ಣ ಪಾಳ್ಯವಾಗಿತ್ತು ಅಲ್ಲಿ ಸಿರುಮ ಎಂಬ ರಾಜನು ಆಳುತ್ತಾ ಇದ್ದನು. ಅವನು ಬಹು ಶೂರನು. ಆಗ ಚಂದ್ರಗಿರಿಯಲ್ಲಿ ವಿಜಯನಗರದ ಕಡೆಯ ರಾಜನಾದ ನರಸಿಂಗರಾಯನು ರಾಜ್ಯವಾಳುತ್ತಿದ್ದನು. ತಾಳೀಕೋಟೆಯ ಕಾಳಗವಾದಬಳಿಕ ಕಡೆಯ ರಾಜರು ಇಲ್ಲಿಗೆ ಬಂದು ರಾಜ್ಯ ಸಾಗಿಸುತ್ತಿದ್ದರು. ಕೆಲವೊಂದು ಕಾರಣದ ಸಲುವಾಗಿ ನರಸಿಂಗ ರಾಯನಿಗೂ ಸಿರುಮನಿಗೂ ಯುದ್ಧವು ಪ್ರಾರಂಭವಾಯಿತು. ಬಹಳ ದಿವಸಗಳವರೆಗೆ ನರಸಿಂಗರಾಯನು ಸಿರುಮನ ಕೋಟೆಯನ್ನು ಮುತ್ತಿದನು. ಶೂರತನದಿಂದ ಸಿರುಮನು ತನ್ನನ್ನು ರಕ್ಷಿಸಿಕೊಂಡನು. ಆದರೆ ಕಡೆಗೆ ರಾಜನು ಕೋಟೆಯನ್ನು ತನ್ನ ಕೈವಶಮಾಡಿಕೊಂಡನು. ಕಥೆಯ ಮೂಲವು

ಸಾಂಗತ್ಯದಲ್ಲಿದೆ. ಅದನ್ನೇ ಆಧಾರವಾಗಿಟ್ಟುಕೊಂಡು ಗ್ರಂಥಕಾರರು ಈ ಗ್ರಂಥವನ್ನು ಬರೆದಿದ್ದಾರೆ. ಇದು ಕರ್ನಾಟಕದ ಹಿಂದಿನ ಕಾಲದ ಸ್ಥಿತಿಯನ್ನು ತಿಳಿಯಲಿಕ್ಕೆ ಬಹು ಸಹಾಯಕಾರಿಯಾಗಿದೆ. ಇಂಥ ವೃತ್ತಾಂತಗಳನ್ನು ನಾವು ಅವಶ್ಯವಾಗಿ ಸಂಗ್ರಹಿಸಬೇಕು. ಕರ್ನಾಟಕ ಇತಿಹಾಸವನ್ನು ಬರೆಯಲು ಇವು ಸಹಾಯಕಾರಿಗಳು. ಗ್ರಂಥದ ಬೆಲೆ ೧೨ ಆಣೆ

**ಕನ್ನಡ ಆದಿತ್ಯ ಪುರಾಣ:—** ಇದೊಂದು ಕಾವ್ಯ ಗ್ರಂಥವು. ಕವಿರಾಜ ಕಂಠೀರವನೆಂಬ ಕವಿಯು ಭಾಮಿನಿ ಷಟ್ಪದಿಯಲ್ಲಿ ಈ ಕಾವ್ಯವನ್ನು ರಚಿಸಿದ್ದಾನೆ. ಇದರ ಕಾಲವು ೧೫೫೦ ಇರಬಹುದೆಂದು ಕವಿಚರಿತ್ರೆಕಾರರು ಊಹಿಸಿದ್ದಾರೆ. ಇದರಲ್ಲಿ ಅಲ್ಲಲ್ಲಿ ವೀರಶೈವ ಮತೀಯ ವಿಷಯಗಳು ಬರುತ್ತವೆ. ಗ್ರಂಥಕಾರನು ಆರಂಭದಲ್ಲಿ ಶೈವ ದೇವತೆಗಳನ್ನು ಸ್ತುತಿಸುತ್ತಾನೆ. ಅವನು ಮೊದಲು ಬ್ರಾಹ್ಮಣನಿದ್ದು ಹಿಂದುಗಡೆ ವೀರಶೈವ ಮತವನ್ನು ಸ್ವೀಕರಿಸಿರಬಹುದೆಂದು ಹೇಳಲವಕಾಶವಿದೆ. ಈ ಗ್ರಂಥವು ಸಂಸ್ಕೃತ ಆದಿತ್ಯ ಪುರಾಣದ ಭಾಷಾಂತರವಾಗಿದೆ. ಇದರಲ್ಲಿ ಒಟ್ಟು ೪೮ ಸಂಧಿಗಳಿವೆ. ಅವುಗಳಲ್ಲಿ ೧೮ ಸಂಧಿಗಳು ಮಾತ್ರ ಈ ಗ್ರಂಥದಲ್ಲಿ ಪ್ರಕಟವಾಗಿವೆ. ಅಲ್ಲಲ್ಲಿ ಮತತತ್ವ ವಿಚಾರಗಳು ಬರುತ್ತವೆ. ಉದಾ:— ನಾಲ್ಕನೇ ಸಂಧಿಯಲ್ಲಿ ಸದಾಶಿವತತ್ವವನ್ನು ಮೊದಲು ಉಲ್ಲೇಖಿಸಿ ಅದರಿಂದ ಜಗತ್ತು ಹೇಗೆ ಉದಯಿಸಿತು, ಶಕ್ತಿಯ ಸ್ವರೂಪ, ಲಿಂಗದ ಸ್ವರೂಪ, ಓಂಕಾರದ ಉತ್ಪತ್ತಿ, ಪಂಚಾಕ್ಷರಗಳು ಮುಂತಾದವುಗಳನ್ನು ವರ್ಣಿಸುತ್ತ ಐದನೇ ಸಂಧಿಯಲ್ಲಿ ವಿಷ್ಣುವಿನ ವಿಚಾರ, ಮಾಯೆಯ ವಿಚಾರ ಮೊದಲಾದ ವಿಷಯಗಳನ್ನು ಕವಿಯು ನಿರೂಪಿಸಿದ್ದಾನೆ. ಇದಲ್ಲದೆ ಅನೇಕ ಶಿವಭಕ್ತರ ಕಥೆಗಳೂ ಕೂಡ ಇದರಲ್ಲಿ ಬಂದಿವೆ. ಗ್ರಂಥದ ಭಾಷೆಯು ಪ್ರೌಢವಾದುದು ಇದೆ. ಬೆಲೆ ೧ ರೂಪಾಯಿ ಇದೆ.

---

# ಶಿವಶರಣರ ತತ್ವ ಪ್ರಚಾರ.

(ಲೇಖಕರುಃ—ಶ್ರೀ. ಅನ್ನದಾನೀಶ್ವರ ವಿರಕ್ತಮಠ, ಬಾಗಲುಕೋಟೆ.)

೧

**ಅಗತ್ಯಃ**— ಶಿವಶರಣರು ವಿಶ್ವವ್ಯಾಪಕ ಪ್ರೇಮವುಳ್ಳವರು. ಅವರ ತತ್ವಗಳು ಇಡೀ ಮಾನವ ಜನಾಂಗದ ಕಲ್ಯಾಣಕ್ಕಾಗಿ ಇವೆ. ಅವರ ಅಮರ ವಚನಗಳಲ್ಲಿ ಪೂರ್ಣಮಾನವತೆಯ ಅಥವಾ ದಿವ್ಯ ಮಾನವತೆಯ ಸಿದ್ಧಿಗೆ ಸಾಧನೀಭೂತವಾದ ಸ್ವಾತಂತ್ರ್ಯ, ಸಮಾನತೆ, ಬಂಧುಪ್ರೇಮ, ರಾಷ್ಟ್ರೀಯತೆ, ಜನತಾ-ಪ್ರಭುತ್ವ, ನಾಗರಿಕತೆ, ಸಂಸ್ಕೃತಿ, ಅಂತರರಾಷ್ಟ್ರೀಯತೆ, ಮುಂತಾದ ಸಾಧನ ಸಾಮಗ್ರಿಗಳು-ಚೈತನ್ಯದಾಯಕ ಸಾಧನಗಳು-ಹೊಳೆಯುತ್ತವೆ. ಆ ಅಮೃತ ವಾಕ್ಯಗಳಲ್ಲಿ ಧಾರ್ಮಿಕ ಗುಲಾಮಗಿರಿ ಇಲ್ಲ. ಸಮತಾವಾದದ ಸೂತ್ರಗಳು ಮಿನುಗುತ್ತಿವೆ. ಮಾನವ ಸಮಾಜದ ವಿಕಾಸಕ್ಕೆ ಸಾಧನವಾದ ವ್ಯಕ್ತಿ ಸ್ವಾತಂತ್ರ್ಯವನ್ನು ಅವಲೋಕಿಸಬಹುದು. ರಾಷ್ಟ್ರಗಳು ಸ್ವಾತಂತ್ರ್ಯ ಪಡೆಯುವ ದಿವ್ಯ ಬೆಳಕು ಶರಣರ ತತ್ವಗಳಲ್ಲಿ ಬೆಳಗುತ್ತದೆ. ರಾಷ್ಟ್ರೀಯ ಸೀಮೆಯನ್ನು ದಾಟಿ ಪೂರ್ಣ ಮಾನವತೆಯತ್ತ ಸಾಗಿಸುವ ಬಂಧುಪ್ರೇಮವು ಶರಣರ ಜೀವನದಲ್ಲಿ ಸಮರಸವಾಗಿ ಪ್ರವಹಿಸುತ್ತಿತ್ತು. ಭಕ್ತಬಂಧುಗಳೆಲ್ಲರೂ ಸಮಾನರೆಂದೂ, ಆಧ್ಯಾತ್ಮಿಕ ತಳಹದಿಯ ಮೇಲೆ ವಿಶ್ವಬಂಧುತ್ವವನ್ನು ಕಟ್ಟುವದು ಶಕ್ಯವಿದೆಯೆಂದೂ ಶರಣರು ನಡೆದು ನುಡಿದು ಜಗತ್ತಿಗೆ ಮಾರ್ಗದರ್ಶಕರಾಗಿ ಹೋಗಿರುವರು. ಶರಣರಲ್ಲಿ ಸತ್ವವಿದೆ. ಸತ್ಯವಿದೆ. ನೀತಿಯಿದೆ. ಧರ್ಮವಿದೆ. ಸದಾಚಾರ, ಸದ್ವಿಚಾರ, ಸದುಚ್ಚಾರಗಳ ತ್ರಿವೇಣೀ ಸಂಗಮವಿದೆ. ಶರಣರು ನಾಗರಿಕತೆಯ ತಳಹದಿಯನ್ನೇ ಹಾಕಿರುವರು. ಬೌದ್ಧ ಧರ್ಮ, ಹಿಂದೂ ಧರ್ಮ, ಕ್ರಿಸ್ತೀ ಧರ್ಮ, ಮುಸಲ್ಮಾನ ಧರ್ಮ, ಝೋರೋಯಾಸ್ಟ್ರಿಯನ್ ಧರ್ಮ, ಮುಂತಾದ ಧರ್ಮಗಳಲ್ಲಿಯ ತತ್ವಗಳಿಗೆ ಕಡಿಮೆಯಿಲ್ಲದಷ್ಟು ವಿಪುಲವಾದ ಜಾಗತಿಕ ಶಾಶ್ವತ ತತ್ವ ರತ್ನಗಳು ಶರಣರ ಧರ್ಮದಲ್ಲಿ ಥಳಥಳಿಸುತ್ತವೆ. ಬುದ್ಧ, ಪೈಗಂಬರ, ಕ್ರಿಸ್ತ, ಮಹಾತ್ಮಾ ಗಾಂಧಿಯವರು ಜಗತ್ತಿನ ನಾಗರಿಕತೆಗೆ ಕಾಣಿಕೆಗಳನ್ನು ಸಲ್ಲಿಸಿದಂತೆ ಶರಣರೂ ತಮ್ಮ ಅಮೌಲ್ಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಆದುದರಿಂದ ಜಗತ್ಕ

ಲ್ಯಾಣ ಬಯಸುವವರು ಶರಣರ ತತ್ವಗಳನ್ನು ಜಗದಲ್ಲಿ ಪ್ರಸಾರ ಮಾಡು ವದು ಅತ್ಯಗತ್ಯವಾದುದಾಗಿಯೇ ಇದೆಯೆಂಬುದು ವೇದ್ಯವಾದ ಸಂಗತಿಯು ಲ್ಲವೇ ?

**ಪ್ರಚಾರಕ್ಕೆ ಅನುಕೂಲ ಸಂಗತಿಗಳು.**:— ಈಗ ಆಧುನಿಕ ಪ್ರಚಾರದ ಸಾಧನಗಳು ವಿಪುಲವಾಗಿವೆ. ಪ್ರಚಾರದ ಸಾಧನಗಳು ಇಲ್ಲದ ೧೨ ನೇ ಶತಮಾನದಲ್ಲಿ ಶರಣರು ಅದ್ಭುತ ಪ್ರಚಾರ ಮಾಡಿದ್ದಾರೆ. ಅವರ ಪೀಳಿಗೆಯವರಾಗಿರುವ ನಾವು ಈಗ ಸುಲಭವಾಗಿ ಪ್ರಚಾರ ಮಾಡುವ ಸಾಧನಗಳಿದ್ದಾಗ ಪ್ರಚುರಪಡಿಸದಿದ್ದರೆ ನಮ್ಮಂಥ ಕೃತಘ್ನರು ನಾವೇ ಎಂದು ಹೇಳಬೇಕಾಗುವದು. ಪ್ರಚಾರವು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಜರುಗಬೇಕು. ವ್ಯಕ್ತಿ ಸ್ವಾತಂತ್ರ್ಯ, ಸಮಾಜ ಸಂಘಟನೆಗಳು ಸಮರಸವಾಗಿ ಸಾಗಿದರೆ ಅದೇ ನಿಜವಾದ ತತ್ವಪ್ರಚಾರ. ಈಗ ಕೆಲಕೆಲವು ಧರ್ಮಪೀಠದವರೂ, ಸ್ವಾಮಿಗಳೂ ಶರಣರ ತತ್ವ ಪ್ರಸಾರಕ್ಕೆ ಅನುಕೂಲರಾಗಿರುತ್ತಾರೆ. ಆಂಗ್ಲವಿದ್ಯಾವಿಭೂಷಿತರಾದ ಪದವೀ ಧರರ ಲಕ್ಷ್ಯವು ಶರಣರ ಕಡೆಗೆ ಸ್ವಲ್ಪಾದರೂ ಎಳೆಯಲ್ಪಟ್ಟಿದೆಯೆಂಬು ದಕ್ಕೆ ಅಲ್ಲಲ್ಲಿ ಝರಿಯಂತೆ ಸಾಗಿರುವ ತತ್ವಪ್ರಸಾರಕ ಸಂಘ ಸಂಸ್ಥೆಗಳೇ ಸಾಕ್ಷಿ. ಅಲ್ಲಲ್ಲಿ ಸಾಹಿತಿಗಳು ಶರಣರ ತತ್ವಗಳನ್ನು ಸಮಯೋಚಿತವಾಗಿ ಉದಾಹರಿಸುತ್ತಿರುವದೇ ಸಾಕ್ಷಿ. ಶರಣರೂ, ಶರಣರ ಧರ್ಮವೂ, ಶರ ಣರ ವಚನಗಳೂ, ಶರಣರ ನೈತಿಕ ತತ್ವಗಳೂ ಅಂತರ್ಯದಲ್ಲಿ ಒಳ್ಳೇ ಸತ್ವ, ಜಿಗುಟುಗಳಿಂದ ಕೂಡಿರುವದೇ ಎಲ್ಲಕ್ಕೂ ಹೆಚ್ಚಿನ ಅನುಕೂಲವಾದ ಸಂಗತಿಯೆಂದು ನಮಗೆ ಮನವರಿಕೆಯಾಗಬೇಕು. ಅಂದರೆ ಬಾಹ್ಯ ಪ್ರತಿ ಕೂಲ ಪರಿಸ್ಥಿತಿಯಲ್ಲಿಯೂ ತತ್ವ ಪ್ರಚಾರವನ್ನು ನಾವು ಮಾಡುತ್ತೇವೆ. ಶರಣತತ್ವಗಳ ಅಭ್ಯಾಸವು ಸುಸಂಘಟಿತವಾಗಿ ಸಾಗುವಂತೆ ಮಾಡುವದೇ ಸಮಾಜ ಮುಂದಾಳುಗಳ ಆದ್ಯ ಕರ್ತವ್ಯ.

ಈ ಸಂದರ್ಭದಲ್ಲಿ ಶ್ರೀ. ಹಳಕಟ್ಟಿಯವರ ಶಿವಾನುಭವ ಸಂಘಗಳ ಸ್ಥಾಪನೆಯ ಯೋಜನೆಯು ಮಾದರಿಯಾಗಿದೆಯೆಂದು ಹೇಳಬಹುದು. ತತ್ವಜ್ಞಾನವು ತತ್ವ ಪ್ರಚಾರಕ್ಕೆ ಒಳ್ಳೇ ಪುಷ್ಟಿಯನ್ನು ಕೊಡುತ್ತದೆ. ತತ್ವಜ್ಞಾನವುಳ್ಳ, ಜಾತೀಯ ಭಾವನೆಯಿಲ್ಲದ, ಸಮತಾವಾದಿಗಳಾದ, ನೈತಿಕ ಬಲವುಳ್ಳ ಪ್ರಚಾರಕರು (ಕಾರ್ಯಕರ್ತರು) ಶರಣರ ತತ್ವಗಳನ್ನು ಚೆನ್ನಾಗಿ ಪ್ರಸಾರ ಮಾಡಬಲ್ಲರು. ವಚನಗಳ ಅರ್ಥವನ್ನು ಜನಸಾಮಾ

ನ್ಯರಿಗೆ ತಿಳಿಯುವಂತೆ ಬರೆದು ಸಾವಿರಾರು ಪುಸ್ತಕಗಳನ್ನು ಪ್ರಚುರಪಡಿಸುವದೂ ಪ್ರಚಾರಕ್ಕೆ ಅನುಕೂಲವಾದ ಸಂಗತಿಯಾಗಿದೆ. ಕೀರ್ತನಕಾರರು, ಪುರಾಣಿಕರು, ಭಾಷಣಕಾರರು, ನಾಟಕಕಾರರು ಇತ್ತಕಡೆಗೆ ಲಕ್ಷ್ಯ ಕೊಟ್ಟರೆ ಒಳ್ಳೇ ಅನುಕೂಲ. ಶರಣರ ತತ್ವ ಪ್ರಸಾರಕ್ಕೆ ನಮ್ಮ ಸ್ವತಂತ್ರ ಸರಕಾರದ ಅಧಿಕಾರಿಗಳು ಜಾತೀಯ ಬಣ್ಣವನ್ನು ತಿಳಿದೂ ತಿಳಿಯದೆಯೂ ಬಳಿದು ಜಗತ್ಕಲ್ಯಾಣಕ್ಕೆ ಆತಂಕವನ್ನುಂಟು ಮಾಡದಿದ್ದರೆ ಅದೂ ಒಂದು ಅನುಕೂಲವೇ ಸರಿ.

**ಪ್ರತಿಕೂಲ ಸಂಗತಿಗಳು:**—ಶರಣರ ತತ್ವ ಪ್ರಸಾರಕ್ಕೆ ಜಾತೀಯ ಭಾವನೆಯು ದೊಡ್ಡ ಗಂಡಾಂತರವೇ ಸರಿ. "ನಾವು ಲಿಂಗಾಯತರು ಹೆಚ್ಚು; ಉಳಿದವರು ಭವಿಗಳು ಕಡಿಮೆ" ಎಂಬ ಭಾವನೆಯು ಸಲ್ಲದು ಶಿವಪಥಕ್ಕೆ. ಇಂಥ ಸಂಕುಚಿತ ವಿಚಾರಗಳು ತತ್ವ ಪ್ರಸಾರಕ್ಕೆ ಕೈಹಾಕಬಾರದು. "ಲಿಂಗವಂತರಲ್ಲಿ ಅಯ್ಯನವರು ಹೆಚ್ಚು; ಭಕ್ತರು ಕಡಿಮೆ" ಎಂಬ ಮತ್ತೊಂದು ಜಾತೀಯ ಭಾವವೂ ಇದೆ. ಇದು ಒಳಗಿನ ವೈರಿಯು. ಹೊರಗಿನ ವೈರಿಗಿಂತ ಈ ಒಳಗಿನ ಶತ್ರುವು ಶರಣರ ತತ್ವಗಳ ಬೆಳಕನ್ನೇ ಕ್ಷೀಣಿಸುವಂತೆ ಮಾಡುತ್ತದೆ. "ಪಕ್ಕಾ ಮಡಿಮಾಡುವವರು ಹೆಚ್ಚು; ಕಚ್ಚಾ ಮಡಿಯುವರು ಕಡಿಮೆ" ಎಂಬ ಹೀನ ಭಾವನೆಯೂ ಪ್ರಸಾರದ ವೈರಿಯು. ಇದು ಸಮತಾವಾದದ ಮಹೂಲಕ್ಕೇ ಕುಠಾರವು. ಅನಾಚಾರವಂತೂ ದೊಡ್ಡ ವೈರಿ ಎಂಬುದನ್ನು ಹೇಳುವದೇ ಬೇಡ.

"ಪಂಚಾಚಾರ್ಯರು ಹೆಚ್ಚು; ಶರಣರು ಕಡಿಮೆ" ಎಂಬುದೂ ಒಂದು ದೊಡ್ಡ ಪ್ರತಿಕೂಲವೇ ಸರಿ. ಶರಣರ ತತ್ವಕ್ಕಿಂತ ಹಣವೇ ದೊಡ್ಡದೆಂದು ತಿಳಿದಿರುವ ಕೆಲವು ಶ್ರೀಮಂತರ ಮಾನಸಿಕ ಭಾವನೆಯೂ ಶರಣ ತತ್ವ ಪ್ರಸಾರಕ್ಕೆ ಆತಂಕವನ್ನು ತಂದೊಡ್ಡುವದು. ಕ್ರಿಸ್ತ ಜಯಂತಿ, ಪೈಗಂಬರ ಜಯಂತಿಗಳಿಗೆ ಸರಕಾರಿ ರಜಾ ದಿನವೆಂದು ಸಾರಿ, ಬಸವ ಜಯಂತಿಗೆ ಮಾತ್ರ ಸರಕಾರಿ ರಜಾ ದಿನವಲ್ಲವೆಂದು ಹೇಳುವ ನಮ್ಮ ಸ್ವತಂತ್ರ ಸರಕಾರದ ಮನೋವೃತ್ತಿಯು ಪ್ರಗತಿಪರವಲ್ಲವೆಂದು ವಿಷಾದದಿಂದ ಹೇಳಬೇಕಾಗುವದು. ನಮ್ಮ ಕರ್ನಾಟಕದ ರಾಜಕೀಯ ಮುಂದಾಳುಗಳೆಂದು ಕರೆಯಿಸಿಕೊಳ್ಳುವವರು ಕೆಲವರು ಶರಣರ ತತ್ವಗಳನ್ನು

ಸಾರಿದರೆ ತಮಗೆ ಜಾತೀಯ ಬಣ್ಣಬಳಿಯುವವರೆಂದು ಹೆದರಿ ನಡೆಯುವದು ಅವರ ಮಾನಸಿಕ ದೌರ್ಬಲ್ಯವನ್ನೂ ನೈಚ್ಯ ಭಾವನೆಯನ್ನೂ ( *inferior complex* ) ತೋರಿಸುತ್ತದೆ. ಸಮತಾ ವಾದಕ್ಕೆ ವಿರೋಧಿಯಾಗಿರುವ ಭಂಡವಲಶಾಹಿ, ಸಾಮ್ರಾಜ್ಯಶಾಹಿಗಳೂ, ಪೇಶವಾಯಿ ಶಾಹಿಗಳೂ ಶರಣರ ತತ್ವಕ್ಕೆ ಪ್ರತಿಕೂಲ ಸಂಗತಿಗಳೇ ಆಗಿವೆ. ಕ್ಷತ್ರಿಯರು, ವೈಶ್ಯರು, ಶೂದ್ರರು ಕಡಿಮೆಯೆಂದೂ, ಬ್ರಾಹ್ಮಣರು ಶ್ರೇಷ್ಠರೆಂದೂ ಭಾವಿಸಿರುವ ವರ್ಣಾಶ್ರಮವಾದಿಗಳೂ, ಉಚ್ಚ ನೀಚ ತಳಹದಿಯ ಮೇಲೆ ನಿಂತ ಅವರ ವರ್ಣಾಶ್ರಮವೂ ಜಗತ್ಕಲ್ಯಾಣಕ್ಕೆ ಕಂಟಕಗಳೇ ಸರಿ. ವಿಭೂತಿ ರುದ್ರಾಕ್ಷಿಗಳನ್ನು ಥಾಳವಾಗಿ ಬಳಿದು, ಡಾಂಭಿಕ ರೀತಿಯಿಂದ ಧರ್ಮಾಂಧರಾಗಿ ಪರೋಪಜೀವಿಗಳಾಗಿರುವವರೆಲ್ಲರೂ ಶರಣರ ತತ್ವ ಪ್ರಸಾರಕ್ಕೆ ವೈರಿಗಳೇ ಸರಿ. ವೈಯಕ್ತಿಕ ಪ್ರತಿಷ್ಠೆಗೆ ಶರಣರ ತತ್ವಗಳನ್ನು ಉಪಯೋಗಿಸಿಕೊಳ್ಳುವ ಸ್ವಾರ್ಥಿಗಳೂ ಪ್ರತಿಕೂಲರೇ ಸರಿ. "ನಾವೇ ಶರಣರೆಂದು ಅನ್ಯತ್ರ, ತತ್ವಜ್ಞಾನವನ್ನು ಬಚ್ಚಿಟ್ಟುಕೊಳ್ಳುವ ಅಹಂಮನ್ಯರು" ಪ್ರಗತಿಯ ವೈರಿಗಳು. ಶರಣರ ಹೆಸರು ಕೇಳಿದ ಕೂಡಲೇ ಉದಾಸೀನ ಮಾಡುವವರೆಲ್ಲರೂ ಮತಿಮೂಢರು.

೨

೧೨ನೇ ಶತಮಾನದಲ್ಲಿ ಶ್ರೀ. ಬಸವೇಶ್ವರ, ಚನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ, ಮಡಿವಾಳಮಾಚಿದೇವ, ಅಪ್ಪಣ್ಣ ಮುಂತಾದ ಶಿವಶರಣ-ಶಿವಶರಣೆಯರು ತಮ್ಮ ಆದರ್ಶ ಭೂತವಾದ ನಡೆ, ನುಡಿ, ಆಚಾರ, ಉಚ್ಚಾರ, ವಿಚಾರ, ತತ್ವ, ಅನುಭವ, ಭಾವನೆಗಳಿಂದ ಜನಾಂಗದಲ್ಲಿ ಅತ್ಯದ್ಭುತವಾದ ಶಾಂತ ಕ್ರಾಂತಿಯನ್ನು ಮಾಡಿದ ಸಂಗತಿಯನ್ನು ಇತಿಹಾಸಕಾರರು ಸುವರ್ಣಾಕ್ಷರಗಳಿಂದ ಬರೆದಿಡುವಂತಿದೆ. ಕರ್ನಾಟಕದ ಧಾರ್ಮಿಕ, ಅಧ್ಯಾತ್ಮಿಕ, ನೈತಿಕ, ಸಾಮಾಜಿಕ, ಸಾಹಿತ್ಯಕ, ಔದ್ಯೋಗಿಕ ಮುಂತಾದ ಕ್ಷೇತ್ರಗಳಲ್ಲಿ ಶರಣರ ಯುಗವಾಣಿಯು ಸುವರ್ಣ ಯುಗವನ್ನೇ ಸ್ಥಾಪಿಸಿದ್ದಿತೆಂದು ಹೇಳಬಹುದು. ಶಿವಾನುಭವ ಮಂಟಪದಲ್ಲಿ ಚರ್ಚೆಗಳನ್ನು ನಡೆಯಿಸಿ, ತತ್ವಗಳನ್ನು ನಿರ್ಣಯಿಸಿ, ಅನುಭವಾತ್ಮಕ ವಿಚಾರಗಳನ್ನು ಬರೆದು ಶರಣರು ಅಮರ ವಚನಗಳ ಅಮೃತ ಪ್ರವಾಹವನ್ನೇ ಹರಿಸಿದರು. ಆ ದಿವ್ಯ ಪ್ರವಾಹದಲ್ಲಿ ಸ್ತ್ರೀ ಪುರುಷರು

ಹೊಂದು ಮನವನ್ನು ಮಡಿಮಾಡಿಕೊಂಡು ಜಗದ ಮಾಲಿನ್ಯವನ್ನು ಕಳೆಯಲಿಕ್ಕೆ ಅಹೋ ರಾತ್ರಿ ಹೋರಾಡಿ ಕೊನೆಗೆ ತತ್ವಕ್ಕಾಗಿ ಆತ್ಮಾರ್ಪಣವನ್ನೇ ಮಾಡಿಹೋದರು. ಶಿವಶರಣರ ಅಮೃತ ವಚನಗಳನ್ನು ಪಾರಾಯಣ ಮಾಡುವ ಸಾಂಪ್ರದಾಯವೇ ಉಂಟಾಯಿತು. ಕಲ್ಯಾಣ ಸೀಮೆಯಲ್ಲಿ ಇಂದಿಗೂ ಜಗುಲಿಯ ಮೇಲೆ ವಚನಗಳನ್ನಿಟ್ಟು ಸ್ನಾನ ಮಾಡಿ ಲಿಂಗಪೂಜೆಯಾದ ನಂತರ ಓದಿ ಪ್ರಸಾದ ತಕ್ಕೊಳ್ಳುವ ಪರಿಪಾಠವನ್ನು ನಾನು ಸ್ವತಃ ನನ್ನ ಕಲ್ಯಾಣ ಪ್ರಯಾಣದಲ್ಲಿ ಕಂಡು ಆನಂದಪಟ್ಟಿದ್ದೇನೆ. ಇತಿಹಾಸ ಸಂಶೋಧಕನೂ, ಸಾಹಿತ್ಯ ಸಂಶೋಧಕರೂ ಕಲ್ಯಾಣ ಸೀಮೆಯಲ್ಲಿ ಸಾವಿರಾರು ಹೊಸ ವಚನಗಳನ್ನು ಕಾಣಬಲ್ಲರು. ತಮಿಳು, ಮತ್ತು ತೆಲಗು ನಾಡುಗಳಲ್ಲಿ ಭಕ್ತಿವಂತ ಬ್ರಾಹ್ಮಣರು ಜಗುಲಿಯ ಮೇಲೆ ಬಸವ ಪುರಾಣವನ್ನು ಇಡುವದನ್ನು ಕಾಣಬಹುದು. ಆರಾಧ್ಯರು ಬಸವಣ್ಣನ ಮೇಲೆ ಬಹು ಭಕ್ತಿಯುಳ್ಳವರಿದ್ದಾರೆ. ಶ್ರೀ. ಘನಮಠೇಶ, ಷಣ್ಮುಖಪ್ಪ, ಬಾಲಲೀಲಾ ಮಹಂತ ಶಿವಯೋಗಿ, ಇಲಕಲ್ಲ ಮಹಂತ ಶಿವಯೋಗಿ, ಅಥಣಿ ಮಹಾಶಿವಯೋಗಿ, ಮೈಲಾರ ಬಸವಲಿಂಗಪ್ಪ, ಚೆನ್ನವೀರಸ್ವಾಮಿಗಳು, ಬೀಳೂರ ರಾಜಯೋಗಿ, ಹಾಳಕೇರಿ ಅನ್ನದಾನ ಶಿವಯೋಗಿ, ಮುಂಡರಗಿ ಅನ್ನದಾನ ಶಿವಯೋಗಿ ಮುಂತಾದ ಶರಣರು ತಮ್ಮ ಶಿವಯೋಗ ಪ್ರಭಾವದಿಂದ ನಾಡಿನಲ್ಲಿ ಆಧ್ಯಾತ್ಮಿಕ ಮತ್ತು ವಿಶ್ವ ಬಂಧುತ್ವದ ಶಾಂತವಾದ ತೇಜವನ್ನೇ ಹರಡಿ ಜಗವನ್ನು ಪಾವನ ಮಾಡಿದರು.

ಶಿವಶರಣರ ತತ್ವಗಳ ಪ್ರಭಾವದಿಂದ ಕನ್ನಡ ಸರಸ್ವತಿಯು ಸುಂದರವಾಗಿ ಶೃಂಗರಿಸಲ್ಪಟ್ಟಳು. ಕಾವ್ಯಗಂಗೆಯು ಹರಿದಳು. ಅನೇಕ ಪುರಾಣಗಳುದಯವಾದವು. ವಿಶ್ವಸಾಹಿತ್ಯದಲ್ಲಿ ವಿಶಿಷ್ಟವಾದ ಸರ್ವಜ್ಞನ ವಚನಗಳು ಶರಣರ ವಚನಗಳ ತೇಜಸ್ವಿಯಾದ, ಓಜಸ್ವಿಯಾದ, ಪ್ರತಿಬಿಂಬವು ವಿಜಯನಗರದಲ್ಲಿ ಉಂಟಾದ ಶೂನ್ಯಸಂಪಾದನೆ, ಪ್ರಭುಲಿಂಗಲೀಲೆ ಮುಂತಾದ ಉದ್ಗ್ರಂಥಗಳು ಶರಣರ ತತ್ವಗಳ ಸೂರ್ಯನ ತೇಜಸ್ಸಿನ ಕಣಗಳು. ಚನ್ನಬಸವ ಪುರಾಣವು ಶರಣರ ದಿವ್ಯಶಕ್ತಿಯ ಅಣುಶಕ್ತಿಯೆಂದೇ ಹೇಳಬೇಕು. ಹಂಪೆಯಲ್ಲಿ ನೂರಾವಂದು ಮಂದಿ ವಿರತರು ಮಾಡಿದ ತತ್ವೋಪದೇಶವು ಶರಣತತ್ವಪ್ರಭಾವದ ದ್ಯೋತಕವು. ಚೆನ್ನಬಸವ ಪುರಾಣವನ್ನು ಬರೆದ ವಿರೂಪಾಕ್ಷಪಂಡಿತನು ಹಂಪೆಯ ಹಿರೇ

ಮಠಾಧ್ಯಕ್ಷನಾಗಿದ್ದನೆಂಬದನ್ನು ನೆನಿಸಿದರೆ ವಿರಕ್ತರಂತೆ ಪಟ್ಟಾಧ್ಯಕ್ಷರು ಶಿವ ಶರಣರ ತತ್ವಾನುಗಾಮಿಗಳಾಗಿದ್ದರೆಂದೂ, ಅವರೆಲ್ಲರೂ ಶರಣಸಾಂಪ್ರದಾಯದಿಂದ ನಾಡಿನ ಜೀವನಾಡಿಯನ್ನೇ ಮಿಡಿಸಲು ಸಮರ್ಥರಾದರೆಂದೂ, ಹೇಳಬಹುದು. ಈಗಿನ ವಿರಕ್ತ-ಗುರು ಅಥವಾ ಪಟ್ಟದಪ್ಪಗಳ ಜಗಳವು ನಮ್ಮ ಶರಣ ಸಾಂಪ್ರದಾಯಕ್ಕೆ ವಿರೋಧವುಳ್ಳ ಅಜ್ಞಾನದ, ಅಹಂಕಾರದ, ಅಂಧತಮಸ್ಸು. ಕನ್ನಡದಲ್ಲಿ ಸರಸವಾದ, ಸರಳವಾದ, ಮಧುರವಾದ, ಅಲಂಕಾರ ಸಹಿತ, ವೀರ್ಯವತ್ತಾದ, ಕಾವ್ಯಮಯ ಹೊಸ ಗದ್ಯ, ಸಾಹಿತ್ಯದ ಪ್ರಭಾವವು ಅನೇಕ ಪದ, ಪದ್ಯ, ತತ್ವಗಳಿಗೆ ಸ್ಫೂರ್ತಿಯನ್ನು ಕೊಟ್ಟಿದೆ. ಘನಮಠೇಶರ ಪದಗಳು, ಸಪ್ಪಂಣೆಪ್ಪನ ಕೈವಲ್ಯ, ಬಾಲಲೀಲಾಮಹಂತಸ್ವಾಮಿಯ ಕೈವಲ್ಯ, ಶಿಶುನಾಳ ಶರೀಫಸಾಹೇಬನ ಕೆಲವು ತತ್ವಪದಗಳು, ದಾಸರ ಕೆಲವು ಪದಗಳು, ಹಂತಿಯ ಹಾಡುಗಳು, ಗರತಿಯ ಹಾಡು, ಕೀರ್ತನದ ಹಾಡುಗಳು, ಮುಂತಾದ ಅನೇಕ ವಿವಿಧಾಂಗಗಳಿಗೆ ಶರಣರ ಸಾಹಿತ್ಯವು ಸ್ಫೂರ್ತಿಯ ಸೆಲೆಯಾಗಿದೆಯೆಂದು ಹೇಳಿದರೆ ಅತ್ಯುಕ್ತಿಯಲ್ಲ. ಇತ್ತೀಚೆಗೆ ಹುಟ್ಟಿದ ಅಥಣಿ ಮಹಾಶಿವಯೋಗಿಗಳ ಪುರಾಣವಾಗಲೀ, ಇಲಕಲ್ಲ ಮಹಂತೇಶ ವಿಜಯವಾಗಲೀ, ಹಾಲಕೆರೆ ಅನ್ನದಾನೀಶ ಪುರಾಣವಾಗಲೀ, ಬಾಲಲೀಲಾಮಹಂತೇಶ ಪುರಾಣವಾಗಲೀ ಶರಣರ ತತ್ವಗಳ ಪ್ರಭಾಪುಂಜದಿಂದ ಸಿಡಿದ ರೇಣುಗಳೇ ಸರಿ. ಶರಣರ ವಚನಗಳಿಗೆ ತ್ರಿಕರಣಪೂರ್ವಕವಾದ ಭಕ್ತಿಯನ್ನು ತೋರಿಸಿದವರಲ್ಲಿ ಅಥಣಿ ಶಿವಯೋಗಿಗಳು, ಇಲಕಲ್ಲ ಶಿವಯೋಗಿ, ಘನಮಠೇಶ, ಮುಂತಾದ ಶಿವಯೋಗಿಗಳು ಶರಣರ ತತ್ವದಿಂದ ಪ್ರೇರಿತವಾದ ಸ್ಫೂರ್ತಿಮಯ ಜೀವನದ ದಿಗ್ದರ್ಶನಗಳೇ ಸರಿ. ಇಂದಿಗೂ ಸಾಗಿರುವ ಪುರಾಣ ಶ್ರವಣ, ವಚನ ಪ್ರವಚನ, ಕೀರ್ತನೆ, ವಚನಗಾಯನ ಮುಂತಾದವುಗಳು ಶರಣತತ್ವದ ಪ್ರಭಾವಕ್ಕೆ ಹೊರತಾದವುಗಳಲ್ಲ.

ನಮ್ಮ ಕಂನಾಡಿನಲ್ಲಿ ಅಲ್ಲಲ್ಲಿ ತೋರುತ್ತಿರುವ ದಾಸೋಹ ಮಠಗಳು ಶರಣ ತತ್ವ ಪ್ರಭಾಸಾಗರದ ಬಿಂದುಗಳೇ ಸರಿ. ಬಡವರಿಗೂ, ಅನಾಥರಿಗೂ, ಪ್ರಯಾಣಿಕರಿಗೂ, ಜಂಗಮರಿಗೂ, ಪ್ರಚಾರಕರಿಗೂ ಆಶ್ರಯ ಸ್ಥಾನಗಳಾಗಿದ್ದ ಹಿಂದಿನ ಕಾಲದ ದಾಸೋಹ ಮಠಗಳ ಇತಿಹಾಸವನ್ನು ಸ್ಮರಣೆಗೆ ತಂದರೆ ಶರಣ ತತ್ವನೆಂಬ ಹೆಮ್ಮರದ ಕಂಪು

ನೆಳಲು ಕರ್ನಾಟಕದ ಆಚೆಗೆ ಸಹ ಹರಡಿದ್ದಿತೆಂಬುದು ಹೊಳೆಯದಿರಲಾರದು. ಕಲಬುರ್ಗಿ ಶರಣಬಸಪ್ಪನ ದಾಸೋಹ, ಅಥಣಿ ಶಿವಯೋಗಿಯ ದಾಸೋಹ, ಅಂಕಲಿಗಿ ಅಡವಿಸ್ವಾಮಿಯ ದಾಸೋಹ, ಚಿತ್ರದುರ್ಗದ ಮುರುಘಾಸ್ವಾಮಿಗಳ ದಾಸೋಹ, ಅರಭಾವಿ ದುರದುಂಡೇಶ್ವರ ದಾಸೋಹ ಇತ್ಯಾದಿ ದಾಸೋಹ ಮಠಗಳು ಶರಣರ ದಾಸೋಹಂಭಾವ ತತ್ತ್ವದ ನಿದರ್ಶನಗಳಾಗಿ ಇಂದಿಗೂ ಉಳಿದಿವೆ. ಆದರೆ ಈ ದಾಸೋಹ ಮಠಗಳಲ್ಲಿ ಶರಣರ ತತ್ತ್ವಗಳು ಸುಸಂಘಟಿತವಾದ, ಶುದ್ಧವಾದ ಸ್ವರೂಪದಲ್ಲಿ ಆಧುನಿಕ ಪ್ರಚಾರದ ಸಾಧನಗಳನ್ನನುಸರಿಸಿ ಸಾಗಿದರೆ ಅಮೋಘವಾದ ರಾಷ್ಟ್ರಸೇವೆಯಾಗುವದರಲ್ಲಿ ಸಂದೇಹವಿಲ್ಲ.

ಶರಣತತ್ತ್ವಕ್ಕನುಸಾರವಾಗಿ ಶಿವಯೋಗಾನುಸಂಧಾನದಲ್ಲಿ ಧುರಂಧರರಾಗಿ ತಮ್ಮ ಸೇವೆ, ಸಂಚಾರ, ತಪೋನಿಷ್ಠೆ, ಬೋಧೆಗಳಿಂದ ಜನಜೀವನವನ್ನೇ ಮಾರ್ಪಡಿಸಿದ ಕಾರಣದಿಂದ, ಸದ್ಭಕ್ತರ ತ್ಯಾಗದ ನಿದರ್ಶನರೂಪವಾಗಿ ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲಿ ಹಿರೇಮಠ, ವಿರಕ್ತಮಠ ಮುಂತಾದ ಮಠಗಳು ಕಂಗೊಳಿಸುತ್ತವೆ. ಮಠಗಳು ಶರಣರ ಕಾಲದಲ್ಲಿ ಮತ್ತು ನಂತರ ಶಿವಸಂಸ್ಕೃತಿಯ ಕೇಂದ್ರಗಳಾಗಿದ್ದವು. ಜನರ ನಿತ್ಯ ಜೀವನವನ್ನು ಸುಂದರಗೊಳಿಸುವ ಆನಂದದಾಯಕ, ಪವಿತ್ರ ಸ್ಫೂರ್ತಿಯ ತವರುಗಳೇ ಈ ಮಠಗಳು. ಆದರೆ ಈಗ ಪುನಃ ಗತವೈಭವದ ಸ್ಮರಣೆಯಿಂದ ಪ್ರೇರಣೆಹೊಂದಿ ಜನಜೀವನವನ್ನು ಸುಸಂಸ್ಕಾರಗಳಿಂದ ಸಂಸ್ಕರಿಸಿ ಚೆನ್ನಾದ ಸಂಸ್ಕೃತಿಯನ್ನು ಹರಡುವ ಮಹಾ ಕಾರ್ಯದತ್ತ ನಮ್ಮ ಎಲ್ಲ ಹಿರಿಯ ಕಿರಿಯ ಮಠಗಳು ಚಿತ್ತವನ್ನು ಕೇಂದ್ರೀಕರಿಸುವ ಕಾಲವೀಗ ಬಂದಿದೆ. ಆದರೆ ಶಿವಾನುಭಾವವೇ ಹೃದಯವಾಗುಳ್ಳ ಶಿವಯೋಗಾನುಸಂಧಾನದ ಕಡೆಗೂ, ಶಿವಪೂಜೆಯ ವ್ಯಕ್ತಸ್ವರೂಪವಾದ ಜನಸೇವಾಧರ್ಮದ ಕಡೆಗೂ ಶಿವಪೂಜೆಯ ವ್ಯಕ್ತ ಸ್ವರೂಪವಾದ ಜನಸೇವಾ ಧರ್ಮದಕಡೆಗೂ ಮಠಾದಿಪತಿಗಳು ಲಕ್ಷಹೊರಳಿಸಿದರೆ ಮಾತ್ರ ಶರಣ ತತ್ತ್ವ ಸುಗಂಧವು ಸುತ್ತಲೂ ಘಮಘಮಿಸುವದು. ಯಾಂತ್ರಿಕ ಜೀವನಕ್ಕಿಂತಲೂ ಚೈತನ್ಯಮಯ ಜೀವನವು ಜನಾಂಗಕ್ಕೆ ಶಾಶ್ವತ ಸುಖಶಾಂತಿಗಳನ್ನು ನೀಡಬಲ್ಲುದೆಂಬ ಮಾತನ್ನು ಮಠಾಧಿಪತಿಗಳು ಅನುಲಕ್ಷಿಸುವದು ಅತೀವ ಮಹತ್ವದ ಸಂಗತಿಯಾಗಿದೆ.

ಜನ್ಮವಿಶಿಷ್ಟ ಜಾತಿಯ, ಕುಲದ, ವರ್ಣಗಳ ಕಲ್ಪನೆಯನ್ನು ಶರಣರು ತೀವ್ರವಾಗಿ ಖಂಡಿಸಿರುವರು. ಉದ್ಯೋಗಗಳಲ್ಲಿ ಕೀಳು ಮೇಲುಗ

ಇಲ್ಲ. ಶಿವಾನುಭವ ಸಂಘಗಳ ಮೂಲಕವಾಗಿ, ಮಠಗಳಲ್ಲಿಯ ಶಿವಾನುಭವ ಮಂಟಪದ ಮೂಲಕ, ಭಜನಾ ಸಂಘಗಳ ಮೂಲಕ, ರೇಡಿಯೋ, ಚಲಚ್ಚಿತ್ರ, ಸಂಗೀತ, ಕೀರ್ತನ, ಭಾಷಣಗಳಮೂಲಕ, ಪ್ರವಾಸ, ಪ್ರಚಾರ ಸಂಘಟನೆ ಮತ್ತು ಶುದ್ಧಿಗಳ ಮೂಲಕ ಶರಣ ತತ್ವಗಳನ್ನು ಸುತ್ತಲೂ ಹರಡುವದರಿಂದ ಸಂಸ್ಕೃತಿಯು ಜೀವನವನ್ನು ತಿದ್ದಿ ಶಾಂತಿ ಶೋಭೆಗಳನ್ನು ಕೊಡಬಲ್ಲುದು. ಫಲಜ್ಯೋತಿಷ್ಯ, ನಾನಾ ಮಂತ್ರ ಮಾಟ ತಂತ್ರಗಳು, ತೀರ್ಥಯಾತ್ರೆ, ಯಜ್ಞಯಾಗ, ದೇಹದಂಡನೆ, ನಾನಾ ದೇವತೋಪಾಸನೆ ಮುಂತಾದ ಎಲ್ಲ ಕರ್ಮಠತನದ ಮಾರ್ಗವನ್ನು ಶರಣರು ನಿಷೇಧಿಸಿರುವರು. ಭಕ್ತಿ ಜ್ಞಾನ ಸಮನ್ವಯ ಸ್ವರೂಪದ, ಆಧ್ಯಾತ್ಮಿಕ ತಳಹದಿಯ ಮೇಲೆ ವಿಶ್ವಬಂಧುತ್ವವನ್ನು ಸ್ಥಾಪಿಸುವ ಶರಣರ ಸೇವಾಧರ್ಮದ, ಭಕ್ತ ಬಂಧುತ್ವದ, ಮಧುರ ಬಾಂಧವ್ಯ ಸಂಘಟನೆಗಳಿಂದ ಜಾತೀಯತೆಯನ್ನು ನಾಶಮಾಡುವ ಏಕಮೇವ ಶಕ್ತಿಸಂಪನ್ನ ಮಾರ್ಗವಾಗಿರುವ ಸಹಭೋಜನ, ಶರೀರ ಸಂಬಂಧದ ಎಲ್ಲ ತತ್ವಗಳನ್ನು ಮಠಾಧಿಪತಿಗಳು ಜೀವನದಲ್ಲಿ ಇಳಿಸಿ ಬೆಳೆಸಿ ಬೆಳಗಿಸಿ ಬಳಸಿದರೆ ಜನಜೀವನವು ಶರಣರಂತೆ ಅಂತವಾಗುವದರಲ್ಲಿ ಸಂದೇಹವಿಲ್ಲ. ಗುರುಜಂಗಮರು ತಾವೇ ಕರ್ಮಠರಾದರೆ ಆಧ್ಯಾತ್ಮ, ಅನುಭಾವ, ದೈವೀ ಸಂಪತ್ತುಗಳನ್ನು ಹೇಗೆ ಅರ್ಪಣ ಮಾಡಬಲ್ಲರು ? " ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ, ಸಲಕ್ಕೆ ಕೂಲಿಯ ಮಾಡಿಯಾದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೇ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವ " ಎಂಬ ಬಸವ ಮಹಾನುಭಾವನ ದಿವ್ಯ ಆಧ್ಯಾತ್ಮಿಕ ಸ್ಫೂರ್ತಿಯ ವಿದ್ಯುದಾಗಾರವಾಗಿರುವಾಗ ಮಹಾ ಮಂತ್ರವನ್ನು ನಮ್ಮ ಗುರುಜಂಗಮರು ಅಥವಾ ಪಡದಪ್ಪ ವಿರಕ್ತರು ತಮ್ಮ ಜೀವನದ ಮಹಾ ಮಂತ್ರವನ್ನಾಗಿಯೂ, ರಹಸ್ಯವನ್ನಾಗಿಯೂ ಮಾಡಿಕೊಂಡು ಚೈತನ್ಯ, ಜ್ಞಾನ, ಸದಾಚಾರ, ಸದ್ಭಕ್ತಿಗಳಿಂದ ಸಾಗಿದರೆ ಉಜ್ವಲ ಭವಿಷ್ಯ ಜಗತ್ತಿಗೆ ಕರ್ನಾಟಕವು ತನ್ನ ಕಾಣಿಕೆಯನ್ನು ನೀಡಬಲ್ಲುದು.

(ಮುಂದೆಸಾಗುವದು)

# ಏಕೆ ?

=x=

೧ ಸತಿಸುತರು ನನ್ನಹರು
ಎಂದೆಂಬ ದುಗುಡದಲಿ
ದುರ್ದೈವಿಯಂದದಲಿ
ದೈವವನು ದೂಷಿಸುವೆಯುಕೆ ?

೨ ತಾನಾರು ? ತನಗಾರು ?
ಎಂಬುದನು ಅರಿಯದಲೆ
ಅರಿಯು ತಾ ತಾನಾಗಿ,
ಇರುತಿರುವಿಯೇಕೆ ?

೩ ಮರವೆಂಬ ಮಾರ್ಗದಲಿ,
ಅರಿವೆಂಬ ತಾಣವದು,
ದೊರಕಲು ತಾ ಬಹುದೇ ?
ಇದನರಿಯದಿರುವಿಯೇಕೆ ?

೪ ಕಾಮ ಕ್ರೋಧದಿ ಸಿಲುಕಿ,
ಲೋಭ ಮೋಹವ ಬೆರಸಿ,
ಮದ ಮತ್ಸರವ ಉಳಿಸಿ,
ಮೆರೆಯುತಿರುವಿಯೇಕೆ ?

೫ ಮನವ ಮೋಹದಿ ಇರಿಸಿ,
ಧನದ ಲೋಹವ ಗಳಿಸಿ,
ತನುವ ತಿದ್ದದೆ ನೀನು,
ಕುಣಿಯುತಿರುವಿಯೇಕೆ ?

೬ ಪರಮ ಸದ್ಭಕ್ತಿಯಲಿ,
ಈಶನನು ನೆನೆಯದಲೆ,
ಆಶೆಯನು ತೊರೆಯದಲೆ,
ಒರಗುತಿರುವೆಯೇಕೆ ?

೭ ಹಗಲು ಇರುಳುಗಳೆಂಬ,
ಪರಿಮಾಣಗಳ ಮಾಡಿ,
ಆಯುಷ್ಯ ರಾಶಿಯನು,
ಅಳೆಯುತಿರುವಿಯೇಕೆ ?

೮ ಮಮಕಾರವನ್ನಳಿದು.
'ಓಂ'ಕಾರ ಪೊಂದಲಿಕೆ,
ಒಗ್ಗದಿಹ ಮನಕೆ,
ಹಿಗ್ಗುತಿರುವಿಯೇಕೆ ?

ಬಿ. ವ್ಹಿ. ಕತ್ತಿ. ಕಾದರವಳ್ಳಿ ( ಬೆಳಗಾಂವ )

# ಶಿವಾನುಭವ ಗ್ರಂಥಮಾಲೆಯಲ್ಲಿ ಹೊಸ ಗ್ರಂಥಗಳು.

(೧) ಶಿವಶರಣರ ಚರಿತ್ರೆಗಳು ಭಾಗ ೩. ೩೩೮ ಪುಟಗಳುಳ್ಳ ಗ್ರಂಥ. ಇದರಲ್ಲಿ ದೇವರ ದಾಸಿಮಯ್ಯ ಮೊದಲ್ಗೊಂಡು ಅನೇಕ ಪುರಾತನ ಶಿವಶರಣರ ಚರಿತ್ರೆಗಳಿವೆ.

**ಬೆಲೆ** ೪—೮—೦

(೨) ಪ್ರಾಣಲಿಂಗ ಜ್ಞಾನದರ್ಪಣ. ಇದರಲ್ಲಿ ಪ್ರಾಣಲಿಂಗದ ಸ್ವರೂಪವು ವಿಶದವಾಗಿ ವಿವರಿಸಲ್ಪಟ್ಟಿದೆ. ಪುರಾತನ ಕಾಲದ ಗ್ರಂಥವಿದ್ದು ಅದಕ್ಕೆ ಟೀಕೆ ಇದೆ.

**ಬೆಲೆ** ೦—೧೨-೦

(೩) ವೇಮಣ್ಣಯೋಗಿಯ ಪದ್ಯಗಳು. ಆಂಧ್ರದೇಶದಲ್ಲಿ ಆಗಿ ಹೋದ ಈ ಮಹಾ ಪುರುಷನ ಆಂಧ್ರ ಪದ್ಯಗಳ ಭಾಷಾಂತರವು ಇದಾಗಿದೆ.

**ಬೆಲೆ** ೧—[illegible]—೦

---

## ಕ್ಷಮಾಪಣೆ.

ಶಿವಾನುಭವ ಮೇ ಸಂಚಿಕೆಯು ಪ್ರೆಸ್ಸಿನ ಅನಾನುಕೂಲತೆಯ ಮೂಲಕ ಹೊರಟಿರುವದಿಲ್ಲ. ಮೇ, ಜೂನ ತಿಂಗಳುಗಳ ಸಂಯುಕ್ತ ಸಂಚಿಕೆಯು ಜೂನ ತಿಂಗಳಲ್ಲಿ ಹೊರಟಿದೆ. ಇದಕ್ಕೋಸ್ಕರ ನಾವು ಚಂದಾದಾರರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

ಸಂಪಾದಕ— ಶಿವಾನುಭವ

ಬಸವ, ಮಡಿವಾಳ ಮಾಚಿದೇವ, ಸೊಡ್ಡಳ ಬಾಚರಸ, ಇವರೆಲ್ಲರೂ ಅವಳ ಸಲಹೆಯನ್ನು ಯಾವಾಗಲೂ ಹೊಂದುತ್ತಿದ್ದರು. ಈ ಪ್ರಕಾರ ವ್ಯವಸ್ಥೆಯನ್ನು ಮಾಡಿ ಬಸವೇಶ್ವರನು ಪಟ್ಟಣದಿಂದ ಹೊರಬಿದ್ದನು.

ಹೀಗೆ ಮಡಿವಾಳ ಮಾಚಿದೇವ ಚನ್ನಬಸವೇಶ್ವರ ಇವರು ಕಲ್ಯಾಣದಲ್ಲಿ ಆಧಿಪತ್ಯವನ್ನು ಹೊಂದಿದ ಬಳಿಕ ಹರಳಯ್ಯ ಮಧುವಯ್ಯಗಳ ಪ್ರಾಣ ಹಿಂಸೆಮಾಡಿದ ಬಿಜ್ಜಳನಿಗೆ ಯಾವ ರೀತಿಯಿಂದ ಪ್ರತೀಕಾರ ಮಾಡಬೇಕೆಂಬ ವಿಷಯವಾಗಿ ಆಲೋಚನೆಗಳು ಶಿವಶರಣರಲ್ಲಿ ನಡೆಯ ಹತ್ತಿದವು. ಆಗ ಮಧುವರಸ ಹರಳಯ್ಯ ಇವರನ್ನು ಕೊಲೆಬಡಿಸಿದ ಬಿಜ್ಜಳನನ್ನು ಸಂಹರಿಸಬೇಕೆಂದು ಎಲ್ಲರೂ ಅಭಿಪ್ರಾಯ ಪಟ್ಟರು.

ಆಗ ರಾಜಧಾನಿಯಲ್ಲಿ ಶಿವಶರಣರ ಕೊಲೆಗೋಸ್ಕರ ಅನಾಹುತಗಳೇಳುವ ಸಂಭವವಿದೆಂದು ಎಲ್ಲರಿಗೂ ಭಾಸವಾಗಹತ್ತಿತು. ಇಂಥ ಕ್ಷೋಭೆಯ ಕಾಲದಲ್ಲಿ ಸಮಾಧಾನ ಹೇಳಲು ಜಾಣನಾದ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೊರಟು ಹೋಗಿದ್ದನು. ಆದ್ದರಿಂದ ಪಟ್ಟಣದ ಜನರು ನಗರವನ್ನು ಬಿಟ್ಟು ಹೊರಡಲುಕ್ತರಾದರು. ಅಷ್ಟರಲ್ಲಿ ಬಹು ಜನ ಶಿವಶರಣರನ್ನು ಮಡಿವಾಳ ಮಾಚಿದೇವನು ಕರೆದುಕೊಂಡು ಅಂಜನೇಯ ನದಿಯನ್ನು ದಾಟಿಸಿದನು. ಪಟ್ಟಣದ ಜನರು ಸ್ವಸಂರಕ್ಷಣಾರ್ಥವಾಗಿ ಅಲ್ಲಿದ್ದ ಗುಹೆಗಳಲ್ಲಿಯೂ ಪಡೆಗಳಲ್ಲಿಯೂ ಅವಿತುಕೊಂಡು ಕುಳಿತರೆಂದು ತೋರುತ್ತದೆ.

ಇತ್ತ ಬಿಜ್ಜಳ ನೃಪಾಲನಾದರೂ ತನ್ನ ಪಡೆಗಳನ್ನು ಅಣಿಮಾಡಿಕೊಂಡಿದ್ದನು. ಈ ಪಡೆಗಳಮೇಲೆ 'ಎರಯಂಬರಗೆ' ಅಂದರೆ ಯಲಬುರ್ಗಿಯ ಸಿಂದ ವಂಶಕ್ಕೆ ಸೇರಿದ ತನ್ನ ಅಳಿಯನಾದ ಚಾಮುಂಡರಾಯನಿಗೆ ಸೈನ್ಯಾಧಿಪತ್ಯವನ್ನ ಕೊಟ್ಟಿದ್ದನು. ಅರಸನಿಗೆ ರಾಯಮುರಾರಿ ಸೋವಿದೇವನೆಂಬ ಮಗನಿದ್ದರೂ ಅವನ ಮೇಲೆ ಅವನಿಗೆ ವಿಶ್ವಾಸವಿಲ್ಲದ್ದರಿಂದ ಅವನು ತನ್ನ ಅಳಿಯನನ್ನು ದಂಡಿನ ಮುಖ್ಯಾಧಿಕಾರಿಯನ್ನಾಗಿ ಮಾಡಿಕೊಂಡಿದ್ದನು.

ಇತ್ತ ಮಡಿವಾಳ ಮಾಚಿದೇವನು ಶಿವಶರಣರನ್ನು ಅಂಜನೇಯ ಹೊಳೆಯನ್ನು ದಾಟಿಸಿದ ಬಳಿಕ, ತಾನಿಲ್ಲದ ಸಮಯದಲ್ಲಿ ತರಳನಾದ ಚನ್ನಬಸವನು ಬಿಜ್ಜಳನ ದಂಡಾಳುಗಳ ಮೇಲೆ ದುಡುಕಿ ಹೋಗಿ ಅನಾಹುತಕ್ಕೆ

ಎಡೆಯಾಗಬಹುದೆಂದು ತಿಳಿದು ತಿರುಗಿ ಕಲ್ಯಾಣಕ್ಕೆ ಬಂದನು. ಆಗ ಬಿಜ್ಜಳನನ್ನು ಕೊಲೆಮಾಡಬೇಕೆಂದು ಶಿವಶರಣರು ಮಾಡಿದ ನಿರ್ಧಾರವನ್ನು ಕೇಳಿ ಅವನು ಅರಸನನ್ನು ಗುಪ್ತರೀತಿಯಿಂದ ಕೊಲ್ಲದೆ ಬಹಿರಂಗವಾಗಿ ಅವನನ್ನು ಕೊಲ್ಲಲು ಸಿದ್ಧರಾಗಬೇಕೆಂಬ ಶರ್ತನ್ನು ಹಾಕಿದನು. ಇದಕ್ಕೆ ಜಗದೇವ ಮಲ್ಲಿಬೊಮ್ಮಣ್ಣಗಳು ಒಪ್ಪಿಕೊಂಡು ನಾವು ಅವನನ್ನು ಹೆಗ್ಗಡಿತಿ ಹೊನ್ನಮ್ಮನ ಚಾವಡಿಯ ಇದಿರಿಗೆಯೇ ಹೊಡೆದುಹಾಕುವೆವೆಂದು ಹೇಳಿದರು. ಅಲ್ಲಿ ಬಿಜ್ಜಳನ ಸುತ್ತಲೂ ನಾಲ್ಕು ಸಾವಿರ ಪಹರೆಯವರಿದ್ದರೂ ನಾವು ಅವನನ್ನು ಘಾತಿಸುವೆವೆಂದು ಪ್ರತಿಜ್ಞೆಮಾಡಿದರು. ಅದಕ್ಕೆ ಮಡಿವಾಳ ಮಾಚಿದೇವನು— ನೀವು ಅಂಜಬೇಡಿರಿ. ನೀವು ಅವನನ್ನು ಕೊಂದು ಅವನ ತೋಳನ್ನು ಕಡಿದು ಬೀದಿಗೆ ಚಲ್ಲಿದರೆ ಅದು ನೀವುಕೊಂದದ್ದರ ಗುರುತೆಂದು ತಿಳಿದು ನಾನು ತತ್‌ಕ್ಷಣ ನನ್ನ ದಂಡಿನೊಡನೆ ಬಂದು ನಿಮ್ಮನ್ನು ಕಾಪಾಡುವೆನೆಂದು ಹೇಳಿದನು.

ಆಗ ಜಗದೇವ ಮಲ್ಲಿಬೊಮ್ಮಣ್ಣಗಳು ಪಂಜುಗಾರರ ವೇಷವನ್ನು ಧಾರಣಮಾಡಿ ಮೊದಲು ಬಿಜ್ಜಳನ ಕಾವಲುಗಾರರಾಗಿ ಅವರಲ್ಲಿ ಕೆಲವು ದಿವಸ ಕೆಲಸಮಾಡಿದರು. ಆಮೇಲೆ ಅವರು ಗೊತ್ತುಪಡಿಸಿದ ದಿವಸ ಹೊನ್ನಮ್ಮನ ಚಾವಡಿಯ ಇದಿರಿಗೆ ಅರಸನ ಪಲ್ಲಕ್ಕಿಯು ಬಂದಿರಲು ತಾವು ಪಂಜುಗಳನ್ನು ಉದ್ಘೋಷಿಸುತ್ತ ಅರಸನನ್ನು ಕೊಂದುಹಾಕಿದರು. ಮತ್ತು ಅವನ ತೋಳನ್ನು ಕತ್ತರಿಸಿ ಬೀದಿಗೆ ಚಲ್ಲಿದರು. ಅದನ್ನೇ ಇದಿರು ನೋಡುತ್ತಿದ್ದ ಮಡಿವಾಳ ಮಾಚಿದೇವನು ಚನ್ನ ಬಸವೇಶ್ವರನ ಅರಮನೆಯಿಂದ ತನ್ನ ದಂಡಿನೊಂದಿಗೆ ಹೊರಬಿದ್ದು ವೈರಿಗಳ ಕೂಡ ಕಾದಾಡುತ್ತ ನಿಂತಿದ್ದ ಜಗದೇವ ಮಲ್ಲಿಬೊಮ್ಮಣ್ಣಗಳಿಗೆ ಸಹಾಯಮಾದನು. ಆದರೆ ಅರಸನ ಅಸಂಖ್ಯ ಸೈನ್ಯದೊಡನೆ ಕಾದಾಡುವದು ಶಿವಶರಣರಿಗೆ ಸಾಧ್ಯವಾಗಲಿಲ್ಲೆಂದು ತೋರುತ್ತದೆ. ಯಾಕಂದರೆ ಜಗದೇವ ಮಲ್ಲಿಬೊಮ್ಮಣ್ಣಗಳು ಈ ಕಾಲದಲ್ಲಿ ಕೈಲಾಸಕ್ಕೆ ಹೋದರೆಂತಲೂ ಅಳಿಯ ಬಿಜ್ಜಳನ ಸೇನೆಯು ಚನ್ನ ಬಸವೇಶ್ವರನ ಅರಮನೆಯನ್ನು ಮುತ್ತಿತೆಂತಲೂ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಹೀಗೆ ತನ್ನ ಅರಮನೆಯನ್ನು ಬಿಜ್ಜಳನ ದಂಡಾಳುಗಳು ಮುತ್ತಲಾಗಿ ಚನ್ನ ಬಸವೇಶ್ವರನು ಶೂಲದ ಬೊಮ್ಮಣ್ಣ, ಕಿನ್ನರಯ್ಯ ಮೊದಲಾದವರೊಂದಿಗೆ ಧೈರ್ಯದಿಂದ ಬಾಗಿಲನ್ನು ತೆರೆದು ಬಹಿರಂಗವಾಗಿ ಯುದ್ಧಮಾಡುತ್ತಿರಲು ಅಷ್ಟರಲ್ಲಿ ಮಡಿವಾಳ ಮಾಚಿದೇ

ವನು ತನ್ನ ದಂಡಿನವರೊಡನೆ ಅಲ್ಲಿ ಚನ್ನ ಬಸವಣ್ಣನನ್ನು ಸಂಧಿಸಲಾಗಿ ಅಳಿಯ ಬಿಜ್ಜಳನ ದಂಡಾಳುಗಳು ಎದೆಗುಂದಿ ಅಲ್ಲಿಂದ ಕಾಲ್ದೆಗೆದರು.

ಹರಳಯ್ಯ ಮಧುವರಸರ ಹಿಂಸೆಯಾದಬಳಿಕ ಉಭಯ ಪಂಗಡಗಳು ಯುದ್ಧದ ಸಿದ್ಧತೆಯಲ್ಲಿ ತೊಡಗಿದ್ದು ಸ್ಪಷ್ಟವಾಗುತ್ತದೆ. ಬಿಜ್ಜಳನ ದಂಡು ಅಪಾರವಾದದ್ದು. ಶಿವಶರಣರ ಸಂಖ್ಯೆಯು ಈ ಕಾಲದಲ್ಲಿ ಸ್ವಾಭಾವಿಕವಾಗಿ ಅತ್ಯಲ್ಪವಾದದ್ದು. ಆದ್ದರಿಂದ ಯುದ್ಧವು ಪ್ರಾರಂಭವಾದಲ್ಲಿ ತಾವು ಉಳಿವಿ ಮತ್ತು ಯಲ್ಲಾಪುರ ಮಧ್ಯದಲ್ಲಿರುವ ಕಾಡನ್ನು ಪ್ರವೇಶಿಸಿ ಅಲ್ಲಿ ಆತ್ಮಸಂರಕ್ಷಣೆಯಲ್ಲಿರಬೇಕೆಂದು ಶಿವಶರಣರು ಈ ಮೊದಲಿಗೆಯೇ ನಿರ್ಧರಿಸಿರಬಹುದೆಂದು ನಮಗೆ ತೋರುತ್ತದೆ. ಅವರು ಅಲ್ಲಿಗೆ ಆಕಸ್ಮಿಕವಾಗಿ ಹೋದಂತೆ ಕಾಣಿಸುವದಿಲ್ಲ. ಹಿಂದಿನ ಕಾಲದಲ್ಲಿ ಬನವಾಸಿ ಮತ್ತು ಗೋಕರ್ಣ ಇವುಗಳು ಪುಣ್ಯ ಕ್ಷೇತ್ರಗಳಾಗಿದ್ದವು. ಉಳಿವಿಯು ಈ ಕ್ಷೇತ್ರಗಳಿಗೆ ಸಮೀಪವಾದ ಪ್ರದೇಶದಲ್ಲಿದೆ. ಇದು ಭಯಂಕರವಾದ ಕಾಡು ಪ್ರದೇಶವು. ಆದ್ದರಿಂದ ಶಿವಶರಣರು ಇಲ್ಲಿಗೆ ಆಗಮಿಸಬೇಕೆಂದು ಈ ಮೊದಲಿಗೆಯೇ ನಿರ್ಧರಿಸಿರಬಹುದು.

ಬಿಜ್ಜಳನನ್ನು ಸಂಹರಿಸಿದಬಳಿಕ ಚನ್ನ ಬಸವೇಶ್ವರ, ಮಡಿವಾಳ ಮಾಚಿದೇವ, ಶೂಲದ ಬೊಮ್ಮಣ್ಣ, ಕಿನ್ನರಯ್ಯ, ರುದ್ರಮುನಿದೇವ, ಮಲ್ಲಿಕಾರ್ಜುನದೇವರು, ನಾಗಲಾಂಬಿಕೆ, ಸಿದ್ಧರಾಮ, ಮೋಳಿಗೆಯ ಮಾರಯ್ಯ, ಕೂಗಿನ ಮಾರಿತಂದೆ, ಘೋರರ ಕಕ್ಕಯ್ಯ ಈ ಮೊದಲಾದ ನೂರು ಶಿವಶರಣರು ಅವಿತುಕೊಂಡು ಕುಳಿತಿದ್ದ ಸ್ಥಾನಗಳಲ್ಲಿಗೆ ಹೋಗಿ ತಮ್ಮೊಡನೆ ಚಿತ್ತೈಸಬೇಕೆಂದು ಅವರನ್ನು ಹುರಿದುಂಬಿಸಹತ್ತಿದರು. ಹೀಗೆ ೭೭೦ ಅಮರ ಗಣಂಗಳು ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ಉಳವಿಗೆ ಹೊರಡಲು ಸಿದ್ಧರಾದರು.

ಆಮೇಲೆ ಇಷ್ಟು ಜನರು ಹಜಾರ ಚಾವಡಿಯ ಬಾಗಿಲನ್ನು ತಳವಾರರು ಕಾಯುತ್ತಿದ್ದು ಅವರನ್ನು ಕೆಲವೊಂದು ಉಪಾಯದಿಂದ ತಪ್ಪಿಸಿ ಎಲ್ಲರೂ ಕಲ್ಯಾಣವನ್ನು ಬಿಟ್ಟು ಹೊರಹೊರಟರು. ಈ ಸುದ್ದಿಯನ್ನು ಅಳಿಯ ಬಿಜ್ಜಳನು ಕೇಳಿದಕೂಡಲೆ ಕುದುರೆ ಆನೆ ರಥ ಮುಂತಾದ ಬಲವನ್ನು ಕೂಡಿಕೊಂಡು ಅವರನ್ನು ಬೆನ್ನಟ್ಟಿದನು.

ಚನ್ನಬಸವನ ದಂಡು ಕಲ್ಯಾಣವನ್ನು ಬಿಟ್ಟು ಯಾವ ಯಾವ ಗ್ರಾಮಗಳ ಮೇಲಿಂದ ಉಳಿವೆಯ ಕಡೆಗೆ ಹೊರಟಿತೆಂಬುದು ನಿಶ್ಚಿತವಾಗಿ ಗೊತ್ತಾಗುವದಿಲ್ಲ. ಅವರು ತೊರಗಲ್ಲುನಾಡು ಅಂದರೆ ಈಗಿನ ಬೈಲಹೊಂಗಲ, ಸಂಪಗಾವ ತಾಲೂಕುಗಳಲ್ಲಿ ಪ್ರವೇಶಿಸಿದ್ದು ಮಾತ್ರ ನಿರ್ವಿವಾದವು. ಅವರು ಮೊದಲು ಕಡಕೋಳ ಗ್ರಾಮಕ್ಕೆ ಹೋದರೆಂದು ಚನ್ನಬಸವೇಶ್ವರನ ಕಾಲಜ್ಞಾನದಿಂದ ತಿಳಿದುಬರುತ್ತದೆ. ಈ ಗ್ರಾಮವು ತೊರಗಲ್ಲಿಗೆ ಸಮೀಪವಾಗಿದ್ದು ತೊರಗಲ್ಲಿನಲ್ಲಿ ಈ ಕಾಲಕ್ಕೆ ಒಬ್ಬ ಶೈವ ಮಾಂಡಲಿಕನು ಬಿಜ್ಜಳನ ಕೈಕೆಳಗೆ ರಾಜ್ಯವಾಳುತ್ತಿದ್ದನು. ಅವನ ಸಹಾಯವನ್ನು ಅಪೇಕ್ಷಿಸಿ ಮಡಿವಾಳ ಮಾಚಿದೇವನು ಇತ್ತಕಡೆಗೆ ಬಂದಿರಬಹುದು. ಆದರೆ ಯಾವ ಮಾಂಡಲೀಕನೂ ಈ ಕಾಲದಲ್ಲಿ ಶಿವಶರಣರಿಗೆ ಸಹಾಯಮಾಡಿದಂತೆ ತೋರಲಿಲ್ಲ. ಇಷ್ಟರಲ್ಲಿ ಬಿಜ್ಜಳನ ಸೇನೆಯು ಈ ಭಾಗದಲ್ಲಿ ಬಂದು ಮಡಿವಾಳ ಮಾಚಿದೇವ ಚನ್ನಬಸವರೊಡನೆ ಯುದ್ಧವನ್ನು ಪ್ರಾರಂಭಿಸಿತು. ಈ ಕಾಲದಲ್ಲಿ ತೊರಗಲ್ಲು ನಾಡಿನಲ್ಲಿ ಉಭಯ ಪಕ್ಷಗಳಲ್ಲಿ ಅನೇಕ ದಿವಸ ಸತತವಾಗಿ ಯುದ್ಧಗಳು ನಡೆದ ಹಾಗೆ ನಮಗೆ ತೋರುತ್ತದೆ. ಕಡಕೋಳದಲ್ಲಿ ಶಿವಶರಣರು 'ಕಡಿದಾಡಿ'ದರೆಂತಲೂ, ಮೊಸಳೂರಿನಲ್ಲಿ ವೈರಿಗಳನ್ನು 'ಕಡಿದ'ರೆಂತಲೂ, ಸುರಗೊಂಡನಕೊಪ್ಪದಲ್ಲಿ 'ಮುಂಡೆಯ' ಕಡಿದರೆಂತಲೂ, ತಲವೂರು ಅಂದರೆ ತಲ್ಲೂರಿನಲ್ಲಿ 'ತಲೆಯ' ಕಡಿದರೆಂತಲೂ, ಸತ್ತಿಗೇರಿಯಲ್ಲಿ ಸತ್ತಿಗೆಯ ಕಳಶವನ್ನು ತೆಗೆದುಕೊಂಡರೆಂತಲೂ ಅಲ್ಲಿ ಬಿಜ್ಜಳನ ದಂಡು ಸತ್ತಿತ್ತೆಂತಲೂ, ಮುರಗಬಸವದಲ್ಲಿ ಕವಡೆ ಜಾಗಟೆ ಹೊಯಿಸಿದರೆಂತಲೂ ಕಾದರವಳ್ಳಿಯಲ್ಲಿ ಕಾದಾಡಿದರೆಂತಲೂ ಈ ಕಾಲಜ್ಞಾನದಲ್ಲಿ ಹೇಳಿದೆ. ಈ ಭಾಗದಲ್ಲಿ ಗೊಡಚಿಯಲ್ಲಿ ಪುರಾತನ ಪ್ರಸಿದ್ಧ ವೀರಭದ್ರನ ದೇವಸ್ಥಾನವಿದೆ. ಅಲ್ಲಿ ಗಿಡದ ಹುತ್ತಿನಲ್ಲಿ ಮಡಿವಾಳ ಮಾಚಿದೇವನು ಚಿಕ್ಕ ಗುಡಿಯನ್ನು ಕಟ್ಟಿಸಿದನೆಂದು ಈ ಗ್ರಂಥದಲ್ಲಿ ಹೇಳಿದೆ. ನಾಗಳಾಪುರದಲ್ಲಿ ನಾಗಲಾಂಬಿಕೆಯ ದೇವಾಲಯವು ಈಗಲೂ ಇದೆ. ಇಲ್ಲಿ ಆಕೆಯು ಇದ್ದಾಗ್ಗೆ ಬಿಜ್ಜಳನ ದಂಡಾಳುಗಳ ಕೂಡ ಯುದ್ಧವಾಗಿರಬಹುದು. ಇಂಚಲ ಮತ್ತು ಸಂಪಗಾವಗಳಲ್ಲಿಯೂ ಶಿವಶರಣರ ಕುರುಹುಗಳೂ ಅನೇಕ ದಂತಕಥೆಗಳೂ ಇವೆ. ಇಂಚಲವು ಬಂಕಯ್ಯನ ಸ್ಥಾನವೆಂದು ಹೆಸರುಪಡೆದಿದೆ. ಈತನು ಈ ಕಾಲದಲ್ಲಿ ಶಿವಶರಣರ ದಂಡಿನಲ್ಲಿ ಕಾದಾಡುತ್ತಿರಬಹುದು.

ಈ ಸ್ಥಳಗಳನ್ನು ನಿರೀಕ್ಷಿಸಿದಲ್ಲಿ ಈಗಿನ ಬೈಲಹೊಂಗಲು ತಾಲೂಕಿನ ಉತ್ತರದಿಕ್ಕಿನ ಮತ್ತು ಮಧ್ಯಭಾಗದ ಗ್ರಾಮಗಳಲ್ಲಿ ಘೋರವಾದ ಕದನಗಳನ್ನು ಶಿವಶರಣರು ನಡಿಸಿದರೆಂಬುದು ಸ್ಪಷ್ಟವಿದೆ. ಶಿವಶರಣರು ಜನತೆಯ ಬೆಂಬಲದಿಂದ ಬಿಜ್ಜಳನ ಸೈನ್ಯದೊಡನೆ ಹೋರಾಡಿದ್ದು ಸ್ಪಷ್ಟವಿದೆ.

ಈ ಕಾದಾಟಗಳಲ್ಲಿ ಕಾದರವಳ್ಳಿಯಲ್ಲಿ ನಡೆದ ಕಾಳಗವೇ ಬಹು ಘನತರವಾದದ್ದು. ಅಳಿಯ ಬಿಜ್ಜಳನು ಶಿವಶರಣರನ್ನು ಇಲ್ಲಿ ನಿಶ್ಚಯವಾಗಿ ಸೋಲಿಸುವೆನೆಂದು ತಿಳಿದಿದ್ದನು. ಆದರೆ ಶಿವಶರಣರು ಬಹು ಶೂರತನದಿಂದ ಕಾದಾಡಿದ್ದರಿಂದ ಅವರನ್ನು ಇಲ್ಲಿ ಮುರಿಯುವದು ಅವನಿಗೆ ಅಶಕ್ಯವಾಯಿತು. ಇಲ್ಲಿ ಅಳಿಯ ಬಿಜ್ಜಳನು ಗಾಯಹೊಂದಿ ಮೂರ್ಛೆ ಹೋದನೆಂದು ಚರಿತ್ರೆಗಳಲ್ಲಿ ಹೇಳಿದೆ. ಈ ಕಾದರವಳ್ಳಿಯ ಕಾಳಗದ ಉಲ್ಲೇಖಗಳು ಗ್ರಂಥಗಳಲ್ಲಿ ಯಾವಾಗಲೂ ಬರುವದುಂಟು.

ಮುಂದೆ ಕಾಲಜ್ಞಾನದಲ್ಲಿ ಮಡಿವಾಳಮಾಚಿದೇವನ ವಿಷಯವಾಗಿ ಹೇಳಿರುವದೇನೆಂದರೆ— " ಶಿವಶರಣರು ಮುರಗೋಡ ತಟಾಕಿನಲ್ಲಿ ಖಂಡೆಗಳನ್ನು ತ್ರಿಶೂಲಗಳನ್ನು ಕೊಳದು ಮಡಿವಾಳಯ್ಯಗಳು ಚನ್ನಬಸವರಾಜರಿಗೆ ಎಂಗಿ ನೀವಿನ್ನು ಮುಂದಕ್ಕೆ ಚಿತ್ತೈಸಿರಿ. ನಾವು ನಮ್ಮ ಕಲಿದೇವರಲ್ಲಿಗೆ ಪೋದಪೆವು. ಅಲ್ಲಿ ನಮ್ಮ ಸಮಯಾಚಾರದ ಮೂರ್ತಿ ಮಲ್ಲಿಕಾರ್ಜುನರಿದ್ದಾರೆ. ಅವರಿಗೆ ನಾನು ಬರುತಿಹೆನೆಂದು ಬಿನ್ನಹಂ ಮಾಡಿ ಬಂದಿದ್ದೇನೆ. ನಾವಲ್ಲಿಗೆ ಹೋಗಿ ಲಿಂಗದಲ್ಲಿ ಐಕ್ಯವಾಗಿಹೆವು " ಎಂದು ಹೇಳುತ್ತಾನೆ. ಆಮೇಲೆ ಅವನು ಮುಂದೆ ಹಿಪ್ಪರಿಗೆಯ ಕಲ್ಲಿನಾಥನ ಶಿವಾಲಯಕ್ಕೆ ಬಂದನೆಂತಲೂ ಅಲ್ಲಿ ಅವನು ತನ್ನ ಲಿಂಗದಲ್ಲಿ ಐಕ್ಯವಾದನೆಂತಲೂ ಇಲ್ಲಿ ಹೇಳಿದೆ. ಆದರೆ ಅವನ ಸಮಯಾಚಾರದ ಮೂರ್ತಿಗಳಾದ ಮಲ್ಲಿಕಾರ್ಜುನ ದೇವರು ತಾವು ಮೊದಲು ಉಳಿವೆಗೆ ಹೋಗಿ ಅಲ್ಲಿ ರುದ್ರಮುನಿದೇವರನ್ನು ಕಂಡು ಸೊನ್ನಲಾಪುರಕ್ಕೆ ಹಿಂದಿನಿಂದ ಬರುವೆನೆಂದು ಹೇಳಿದ್ದು ಇದರಲ್ಲಿ ಉಲ್ಲೇಖವಿದೆ.

ಈ ಎಲ್ಲ ಸಂಗತಿಗಳ ಮೇಲಿಂದ ಮಡಿವಾಳಮಾಚಿದೇವನು ಉಳಿವೆಗೆ ಹೋಗದೆ ಶಿವಶರಣರ ದಂಡು ಮುರಗೋಡ ಸಮೀಪದಲ್ಲಿದ್ದಾಗ್ಗೆ ಅಲ್ಲಿಯೇ ಅವನು ಮರಣಹೊಂದಿರಬೇಕೆಂದು ನಾವು ಊಹಿಸುತ್ತೇವೆ. ಕದುತರವಾದ ಕಾಳಗಗಳು ಬಿಜ್ಜಳನ ದಂಡಿನೊಡನೆ ನಡೆದಾಗ ಅವನು

ಹೀಗೆ ರಣಾಂಗಣವನ್ನು ಬಿಟ್ಟು ತನ್ನ ಊರಿಗೆ ಹೋಗುವ ಸಂಭವ ತೋರುವದಿಲ್ಲ. ಅವನು ಸೊಗಲತೀರ್ಥದ ಪಶ್ಚಿಮಕ್ಕೆ 'ಕಾರೀಮನೆ' ಗ್ರಾಮವಿದ್ದು ಇಲ್ಲಿ ಅವನ ಹೆಸರಿನ ಸಮಾಧಿ ಇರುತ್ತದೆಂದು ಸ್ಥಾನಿಕ ಐತಿಹ್ಯಗಳಿವೆ. ಆದ್ದರಿಂದ ಅಲ್ಲಿಯೇ ಅವನು ಮರಣಹೊಂದಿರಬೇಕು. ಸೊಗಲ ತೀರ್ಥವು ಮುರಗೋಡದಿಂದ ಬಹಳ ದೂರವಿಲ್ಲ. ಇದು ಒಂದು ಕಾಡು ಪ್ರದೇಶವು. ಇಲ್ಲಿ ಶಿವಶರಣರು ಬಿಜ್ಜಳನ ದಂಡಿನೊಡನೆ ಕಾದಾಡುತ್ತಿರು ವಾಗ ಅಲ್ಲಿಯೇ ಮಡಿವಾಳಮಾಚಿದೇವನು ಮರಣಹೊಂದಿರಬೇಕೆಂದು ನಮ್ಮ ಊಹೆ ಇದೆ. ಅವನು ಮರಣಹೊಂದಿದ ಸ್ಥಳದಲ್ಲಿ ಸಮಾಧಿಯು ಸಹ ಈಗಲೂ ಇದೆ ಎಂದು ನಾವು ಕೇಳುತ್ತೇವೆ. ಇದು ಸಂಶೋಧಿಸ ತಕ್ಕ ವಿಷಯವಾಗಿದೆ.

ಹೀಗೆ ಘೋರವಾದ ಕಾಳಗಗಳು ನಡೆದ ಕಾಲಕ್ಕೆ ಶೂರ ಯೋದ್ಧ ನೆಂದು ಹೆಸರುಗೊಂಡ ಮಡಿವಾಳಮಾಚಿದೇವನು ಮರಣಹೊಂದಿದ್ದು ಶಿವ ಶರಣರಿಗೆ ಒಂದು ದೊಡ್ಡ ಆಘಾತವೆಂಬುದರಲ್ಲಿ ಏನೂ ಸಂದೇಹವಿರಲಾ ರದು. ಅವನು ಅತ್ಯಂತ ಶೂರನೂ ಸಾಹಸಿಯೂ ಆಗಿದ್ದನು. ಆದರೆ ಶಿವಶರಣರು ಇದರಿಂದ ಎದೆಗುಂದಲಿಲ್ಲ. ಚನ್ನಬಸವೇಶ್ವರನು ಕೂಗಿನ ಮಾರಿತಂದೆ, ಕಿನ್ನರೀಬ್ರಹ್ಮಯ್ಯ, ಶೂಲದ ಬೊಮ್ಮಣ್ಣ ಇವರನ್ನು ಸಹಾಯ ಕರನ್ನಾಗಿ ಮಾಡಿಕೊಂಡು ವೈರಿಗಳೊಡನೆ ಕಾದಾಡುತ್ತ ಉಳಿವೆಯ ಮಹಾಕಾಡನ್ನು ಪ್ರವೇಶಿಸಿದನು.

ಈ ಕಾಲದಲ್ಲಿ ಸೊಡ್ಡಳಬಾಚರಸ, ಮೋಳಿಗೆಯಮಾರಯ್ಯ, ರುದ್ರ ಮುನಿದೇವ, ಮಲ್ಲಿಕಾರ್ಜುನದೇವ, ಹಡಪದರೇಚಣ್ಣ, ಘೋರರ ಕಕ್ಕಯ್ಯ, ಇವರು ಹಿರಿಯರಾಗಿ ಶಿವಶರಣರಿಗೆ ಧೈರ್ಯ ಹೇಳಬೇಕೆಂದು ಶಿವ ಶರಣರನ್ನು ಉಳಿವಿಯಲ್ಲಿ ಕೂಡದರೆಂದು ತಿಳಿದು ಬರುತ್ತದೆ. ಅವರೆಲ್ಲರೂ ಕಾತರವಳ್ಳಿಯಿಂದ ಉಳಿವೆಯ ವರೆಗೂ ಶಿವಶರಣರ ಕೂಡಿದ್ದರು. ಕಾತರ ವಳ್ಳಿಯ ಯುದ್ಧವಾದ ಬಳಿಕ ಮೇಲೆ ಕಾಣಿಸಿದ ಶಿವಶರಣರು ಹೆಚ್ಚಿಗೆ ದಂಡನ್ನು ಕೂಡಿಸಿ ಚನ್ನಬಸವನಿಗೆ ಸಹಾಯಮಾಡಲು ಬಂದಿರಬಹುದು.

ಈ ಕಾಲದಲ್ಲಿ ಮಡಿವಾಳಮಾಚಿದೇವನು ಮಲ್ಲೂಖಾನನೆಂಬ ಮುಸ್ಲ ಲ್ಮಾನ ಸರದಾರನನ್ನು ಬರಮಾಡಿಕೊಂಡು ಶಿವಶರಣರನ್ನು ಅವನ ಕೈಯ್ಯ ಲ್ಲಿರಿಸಿ ತಾನು ಹಿಪ್ಪರಿಗೆಗೆ ಹೊದನೆಂದು ಕೆಲವು ಶಿವಶರಣರ ಚರಿತ

ಗಳಲ್ಲಿ ಹೇಳಿರುತ್ತದೆ. ಆದರೆ ೧೧೭೦ ರ ಸುಮಾರಿನಲ್ಲಿ ದಕ್ಷಿಣ ಹಿಂದುಸ್ಥಾನದಲ್ಲಿ ಮುಸಲ್ಮಾನರ ಪ್ರವೇಶವು ಯಾವಾಗಲೂ ಇರಲಿಲ್ಲ. ಈ ಕಥೆಯು ನಂಬಿಗೆಗೆ ಅರ್ಹವಾದುದಲ್ಲ. ಇದು ಹಿಂದುಗಡೆ ಹುಟ್ಟಿಸಿದ ಸುಳ್ಳು ಕಥೆಯಾಗಿದೆಂದು ನಮಗೆ ತೋರುತ್ತದೆ. ಈ ಕಾಲದ ಶಿವಶರಣರು ಕರ್ನಾಟಕದಲ್ಲಿ ಅತ್ಯಂತ ಶೂರರೂ ಸಮರ್ಥರೂ ಯೋದ್ಧರೂ ಆಗಿದ್ದರೆಂದು ಅವರ ಚರಿತ್ರೆಗಳಿಂದ ಕಂಡುಬರುತ್ತದೆ. ಆದರೆ ಅವರು ಹೀಗೆ ಮುಸಲ್ಮಾನರ ಸಹಾಯವನ್ನು ಹೀಗೆ ಅಪೇಕ್ಷಿಸುವ ಸಂಭವವಿಲ್ಲ.

ಒಟ್ಟಿಗೆ ಮಡಿವಾಳಮಾಚಿದೇವನು ಶಿವಶರಣರಿಗೆ ಉಂಟಾದ ವಿಪತ್ಕಾಲದಲ್ಲಿ ಅವರನ್ನು ಕಾಪಾಡಿದ್ದಾನೆ ಮತ್ತು ಚನ್ನಬಸವನಿಗೆ ಸಹಾಯ ಮಾಡಿದ್ದಾನೆ. ಇವನು ತೀರಿಕೊಂಡಬಳಿಕ ಚನ್ನಬಸವನು ಧೈರ್ಯಗುಂದದೆ ವೈರಿಗಳೊಡನೆ ಹೋರಾಡುತ್ತ ಭಯಂಕರವಾದ ಅರಣ್ಯವನ್ನು ಪ್ರವೇಶಿಸಿ ಶಿವಶರಣರ ರಕ್ಷಣೆಯನ್ನು ಮಾಡಿದ್ದಾನೆ.

---

## ಕೂಗಿನ ಮಾರಿತಂದೆ.

ಬಿಜ್ಜಳನ ದಂಡಾಳುಗಳೊಡನೆ ಹೋರಾಡಿದ ಶಿವಶರಣರಲ್ಲಿ ಕೂಗಿನ ಮಾರಿತಂದೆಯು ಒಬ್ಬನಾಗಿದ್ದಾನೆ. ಅವನ ಮೂಲ ಗ್ರಾಮವು ಆವುದೆಂಬುದು ನಮಗೆ ತಿಳಿದಿಲ್ಲ. ಆದರೆ ಅವನು ಬಸವೇಶ್ವರನ ಕಾಲದಲ್ಲಿ ಕಲ್ಯಾಣಕ್ಕೆ ಬಂದು ಶಿವಾನುಭವ ಮಂಟಪದ ಸಂವಾದಗಳಲ್ಲಿ ಅಂಗ ವಹಿಸುತ್ತ ಇದ್ದುದು ತಿಳಿದುಬರುತ್ತದೆ. ಅವನು ವಚನಕಾರನೂ ಇದ್ದಾನೆ. ಅವನ ಮುದ್ರಿಕೆಯು 'ಮಹಾ ಮಹಿಮ ಮಾರೇಶ್ವರಾ' ಎಂದಿದೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ದೊರಕಿವೆ. ಅವನು ಇನ್ನೂ ಅನೇಕ ವಚನಗಳನ್ನು ಬಹುಶಃ ರಚಿಸಿರಬಹುದು. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ.

ಬಿಜ್ಜಳನು ಮಧುವರಸ ಹರಳಯ್ಯಗಳನ್ನು ವಧಿಸಿದಬಳಿಕ ಶಿವಶರಣರಿಗೆ ಒಂದು ಘೋರ ಪ್ರಸಂಗವು ಒದಗಿತು. ಆಗ ಯುದ್ಧವಾಗುವ

ದೆಂಬ ಭಯದಿಂದ ಬಹುಜನರು ಕಲ್ಯಾಣವನ್ನು ಬಿಟ್ಟು ಕೊಲಗಿಹೋಗ ಹತ್ತಿದರು. ಆಗ ಕೂಗಿನ ಮಾರಿತಂದೆಯೂ ಇನ್ನು ಕೆಲವು ಶಿವಶರಣರೂ ಓಡಿಹೋಗುವವರಿಗೆ ಧೈರ್ಯ ಹೇಳಿ ಉಳಿವಿಗೆ ಹೋಗಲು ಹುರಿದುಂಬಿಸಿದರು.

ಶಿವಶರಣರು ಕಲ್ಯಾಣವನ್ನು ಬಿಟ್ಟು ತೆರಳಲಾಗಿ ಬಿಜ್ಜಳನ ದಂಡಾಳುಗಳು ಅವರನ್ನು ಬೆನ್ನಟ್ಟಿದರು. ಆಗ ನಡೆದ ಯುದ್ಧಗಳಲ್ಲಿ ಕೂಗಿನ ಮಾರಿತಂದೆಯು ಮುಖ್ಯ ಭಾಗವನ್ನು ವಹಿಸಿದನು. ಅವನು ಶತ್ರುಗಳ ಸುಳಿವನ್ನು ಅರಿತುಕೊಂಡು ಶಿವಶರಣರಿಗೆ ಎಚ್ಚರು ಹೇಳುವದೇ ಅವನ ಮುಖ್ಯ ಕಾರ್ಯವಾಗಿತ್ತು. ಶತ್ರುಗಳು ಸಮೀಪಕ್ಕೆ ಬಂದಕೂಡಲೇ ಕೂಗಿನ ಮಾರಿತಂದೆಯು ಉಚ್ಚ ಧ್ವನಿಯಿಂದ ಕೂಗುಹಾಕುವನು. ಆಗ ಶಿವಶರಣರು ಯುದ್ಧಕ್ಕೆ ಸನ್ನದ್ಧರಾಗುವರು. ಹಾಗೆಯೇ ಅವನು ಬಲಶಾಲಿಯೂ ಆಗಿದ್ದನು. ರಣಾಂಗಣದಲ್ಲಿ ಮಡಿವಾಳ ಮಾಚಿದೇವ ಮೊದಲಾದವರ ಕೂಡ ಧೈರ್ಯದಿಂದ ಹೋರಾಡುವನು. ಈ ಪ್ರಕಾರ ಅವನು ಶಿವಶರಣರು ಉಳಿವಿಗೆ ಹೋಗುವವರೆಗೂ ಅವರಿಗೆ ಸಹಾಯುಮಾಡುತ್ತ ಬಂದನು.

ಕೂಗಿನ ಮಾರಿತಂದೆಯು ಮಾಡಿದ ಈ ಸಹಾಯುವನ್ನು ತೊರಗಲು ನಾಡಿನ ಜನರಿಗೆ ಚನ್ನಾಗಿ ಅವಗತವಾಗಿತ್ತೆಂದು ತೋರುತ್ತದೆ. ಇಲ್ಲಿ ಈಗಲೂ ಕೂಗಲೂರು ಎಂಬ ಗ್ರಾಮವಿದೆ. ಈ ಹೆಸರನ್ನು ಕೂಗಿನ ಮಾರಿತಂದೆಯ ನೆನಪಿಗಾಗಿ ಜನರು ಅದಕ್ಕೆ ಇಟ್ಟಿರಬಹುದು. ಈ ಭಾಗದಲ್ಲಿ ನಂದೀಹಳ್ಳಿ ಎಂಬ ಹೆಸರಿನ ಗ್ರಾಮವಿದೆ. ಅಲ್ಲಿ 'ಕೂಗು ಬಸವಣ್ಣ' ನೆಂಬ ಹೆಸರಿನ ದೇವಾಲಯವಿದೆ. ಕೂಗಿನ ಮಾರಿತಂದೆಯು ಈ ಗ್ರಾಮದಲ್ಲಿ ಕೆಲಕಾಲ ವಾಸಿಸಿರಬಹುದು. ಅಲ್ಲಿ ಶಿವಶರಣರು ಬಿಡಾರ ಬಿಟ್ಟಿರಬಹುದು. ಆಗ್ಗೆ ಕೂಗಿನ ಮಾರಿತಂದೆಯು ಅಲ್ಲಿದ್ದು ಅದರ ರಕ್ಷಣೆಯನ್ನು ಮಾಡುತ್ತ ಬಂದದ್ದರಿಂದ ಅವನಿದ್ದ ಸ್ಥಳದಲ್ಲಿ ಜನರು ಒಂದು ದೇವಾಲಯವನ್ನು ಕಟ್ಟಿಸಿ ಅದಕ್ಕೆ 'ಕೂಗು ಬಸವಣ್ಣನ ಗುಡಿ' ಎಂದು ಕರೆದಿರಬಹುದು. ಹೀಗೆ ಕೂಗಿನ ಮಾರಿತಂದೆಯು ಶಿವಶರಣರಿಗುಂಟಾದ ಈ ವಿಪತ್ಕಾಲದಲ್ಲಿ ತನ್ನ ಜೀವದ ಹಂಗುದೊರೆದು ಹೋರಾಡಿದ್ದಾನೆ. ಅವನ ಹೆಸರು ಈ ಸಂದರ್ಭದಲ್ಲಿ ಎಲ್ಲ ಶಿವಶರಣರ ಚರಿತ್ರೆಗಳಲ್ಲಿ ಬಂದಿರುತ್ತದೆ. ಅವನು ಒಬ್ಬ ಶ್ರೇಷ್ಠ ಶಿವಶರಣನೂ ಮಹಾಪುರುಷನೂ ಆಗಿದ್ದಾನೆ.

# (೧೦) ಶರಣಸ್ಥಲ.

**ವಿವರಣೆ:—** ಶರಣನು ಶಿವಭಾವವುಳ್ಳವನಾಗಿರುತ್ತಾನೆ. ಅವನು ಪೂರ್ಣ ಜ್ಞಾನಿಯಾಗಿ ಪರತತ್ವದಲ್ಲಿ ಸಮರಸನಾಗಿರುವನು. ಅವನು ಪಂಚಭೂತಗಳನ್ನುಳಿದು ದೇಹಭಾವವನ್ನು ನಷ್ಟಗೊಳಿಸಿರುತ್ತಾನೆ. ಅವನು ವಿಕಾರರಹಿತನು. ಈ ಪ್ರಕಾರ ಶರಣನು ವರ್ತಿಸುತ್ತಾನೆ.

## ವಚನಗಳು.

೬೯. ಮಹಾಕಾಶ ಮನೆಯಲ್ಲಿ ಪಂಚಕಾಲಿನ ನೆಲವು ಕಟ್ಟಿರಲಾಗಿ ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತು. ಅದರೊಳಗೆ ಮಧುರಜಲ ಮಂದಿರದಲ್ಲಿ ವಿಮಲಜಲತುಂಬಿ ಒಂದಕ್ಕೊಂದು ಹೊದ್ದದೆ ಕುಂಭ ಒಂದರಲ್ಲಿ ನಿಂದ ಭೇದವ ನೋಡಾ. ಆ ಗಡಿಗೆಯ ತೆಗೆವುದಕ್ಕೆ ಮಹದಾಕಾಶವನೇರುವದಕ್ಕೆ ನೆಲೆ ಇಲ್ಲ. ನೆಲ ಹಿಂದೆ ಮೊದಲಿಲ್ಲ. ಕುಂಭಕ್ಕಂಗವಿಲ್ಲ. ಒಳಗಣಭೇದವ ವಿವರಿಸಬಾರದು. ಇಂತೀ ಘಟಮಠ ಆಧಾರದಲ್ಲಿ ಪರಿಪೂರ್ಣನಾದೆಯಲ್ಲ ಸದಾಶಿವಮೂರ್ತಿ ಲಿಂಗವೇ ಅಪಿರಳನಾಗಿ.

ಟೀಕು:— ಸಕಲತತ್ವಂಗಳಿಗಾಶ್ರಯವಾಗಿರ್ಪ ಅಖಂಡಜ್ಞಾನ ಚಿತ್ತ ಶರಣಂಗೆ ಚಿದಾಲಯವಾಯಿತ್ತೆಂಬುದೀಗ ಮಹಾಕಾಶ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಾಲಯ ಮಧ್ಯದಲ್ಲಿ ಪಂಚಾಚಾರವನೊಳಕೊಂಡಿರ್ಪ ಜೀವಭಾವ ಸಂಬಂಧವಾಗಿಹುದೆಂಬುದೀಗ ಪಂಚಕಾಲಿನ ನೆಲವು ಕಟ್ಟಿರಲಾಗಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಪರಮಶಾಂತಿಯ ಜಲವನೊಳಕೊಂಡಿರ್ಪ ಚಿದ್ಭಾಂಡ ಒಪ್ಪುತ್ತಿಹುದೆಂಬುದೀಗ ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತು ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸಂಬಂಧವಾದ ಚಿದ್ಭಾಂಡದಲ್ಲಿ ತ್ರಿವಿಧ ಪಾದೋದಕ ಸಂಬಂಧವಾದ ತ್ರಿವಿಧ ಲಿಂಗ ಸಾಹಿತ್ಯವಾಗಿಹುದೆಂಬುದೀಗ ಅದರೊಳಗೆ ಮಧುರಜಲ ಮಂದಿರದಲ್ಲಿ ವಿಮಲಜಲ ತುಂಬಿ ಎಂಬ ಶಬ್ದಕ್ಕರ್ಥ. ಆ ಪಾದೋದಕ ಸ್ವರೂಪವಾದ ತ್ರಿವಿಧಲಿಂಗಗಳಾಚರಣೆಗೆ ಬೇರಾಗಿ ಆ ಲಿಂಗಂಗಳು ಚಿದ್ಭಾಂಡ ಒಂದರಲ್ಲಿ ಸಂಬಂಧವಾಗಿಹುದೆಂಬುದೀಗ ಒಂದಕ್ಕೊಂದು ಹೊದ್ದದೆ ಕುಂಭ ಒಂದರಲ್ಲಿ ನಿಂದ ಭೇದವ ನೋಡಾ ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವು ಶರಣನ ಸರ್ವಾಂಗದಲ್ಲಿ ಸಮರಸವಾದ ಬಳಿಕ

ಕ್ರಿಯಾಕಾರಕ್ಕೆ ತರಲಿಲ್ಲವೆಂಬುದೀಗ ಆ ಗಡಿಗೆಯು ತೆಗೆವುದಕ್ಕೆ ಎಂಬ ಶಬ್ದಕ್ಕರ್ಥ. ಆ ಚಿದಾಕಾಶವೇ ಶರಣನ ಒಳಹೊರಗೆ ಪರಿಪೂರ್ಣವಾಗಿ ವೇಧಿಸಿದಬಳಿಕ ಇನ್ನು ಚಿದಾಕಾಶಕ್ಕೆಯಿದ್ದಹೆನೆಂದೊಡೆ ಪ್ರಮಾಣಿಲ್ಲೆಂಬುದೀಗ ಮಹದಾಕಾಶವನೇರುವದಕ್ಕೆ ನೆಲೆ ಇಲ್ಲವೆಂಬ ಶಬ್ದಕ್ಕರ್ಥ. ಆ ಚಿದಾಲಯದಲ್ಲಿ ಸಂಬಂಧವಾಗಿರ್ಪ ಶಿವಭಾವಕ್ಕೆ ತಾನೆಂಬ ಮೂಲಾಹಂಕಾರವಿಲ್ಲವೆಂಬುದೀಗ ನೆಲ ಹಿಂದೆ ಮೊದಲಿಲ್ಲವೆಂಬ ಶಬ್ದಕ್ಕರ್ಥ. ಆ ಚಿದ್ಭಾಂಡ ಸ್ವರೂಪನಾದ ಶರಣಂಗೆ ದೇಹಭಾವವಿಲ್ಲವೆಂಬುದೀಗ ಕುಂಭಕ್ಕಂಗವಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನ ನಿಜಾಂತರಂಗದಲ್ಲಿ ಸಾಹಿತ್ಯವಾಗಿರ್ಪ ಪ್ರಾಣಲಿಂಗದ ನಿಜಸ್ವರೂಪವನು ವಾಕ್ಯಕ್ಕೆ ತಂದು ಹೇಳಲಿಲ್ಲವೆಂಬುದೀಗ ಒಳಗಣಭೇದವ ವಿವರಿಸಬಾರದೆಂಬ ಶಬ್ದಕ್ಕರ್ಥ. ಆ ಚಿದ್ಭಾಂಡವೆಂಬುದೀಗ ಘಟಶರಣನ ನಿಜಾಂತರಂಗದಲ್ಲಿರ್ಪ ಚಿದಾಲಯವೆಂಬುದೀಗ ಮಠ ಶಿವಭಾವ ಧರಿಸಿಕೊಂಡಿರ್ಪ ಚಿದಾತ್ಮನೆಂಬುದೀಗ ಆಧಾರ ಈ ತ್ರಿವಿಧದಲ್ಲಿ ಒಂದೇ ಬ್ರಹ್ಮವು ಪರಿಪೂರ್ಣವಾಗಿ ಭೇದಿಸಿತ್ತೆಂಬುದೀಗ ಇಂತೀ ಘಟ ಮಠ ಆಧಾರದಲ್ಲಿ ಪರಿಪೂರ್ಣವಾದೆಯಲ್ಲಾ ಸದಾಶಿವಮೂರ್ತಿಲಿಂಗವೇ ಅವಿರಳನಾಗಿ ಎಂಬ ಶಬ್ದಕ್ಕರ್ಥ.

೭೦. ಹೂವಿನ ಮೇಲಣ ತುಂಬಿ ಹೂವ ತಿಂದು ಗಂಧವನುಳುಹಿತ್ತು. ಉಳಿದ ಗಂಧ ತುಂಬಿಯು ತಿಂದು ತುಂಬಿದ ಗಂಧ ಒಂದೇಯಾಯಿತ್ತು. ಅದು ನಿರಂಗದಿರವು ಸದಾಶಿವಮೂರ್ತಿಲಿಂಗವು ತಾನೇ.

ಟೀಕು:— ಶರಣನ ಹೃದಯಕಮಲದಲ್ಲಿರ್ಪ ಪರಿಪೂರ್ಣ ಜ್ಞಾನನೆಂಬುದೀಗ ಹೂವಿನ ಮೇಲಣ ತುಂಬಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ತನ್ನ ಪರಿಪೂರ್ಣ ಜ್ಞಾನದಿಂ ಹೃದಯ ಕಮಲವನವಗ್ರಹಿಸಿ ಸದ್ವಾಸನ ಸ್ವರೂಪವಾದ ಪ್ರಾಣಲಿಂಗವನು ತನ್ನ ನಿಜಾಂತರಂಗದಲ್ಲಿ ಮೂರ್ತಿಗೊಳಿಸಿದನೆಂಬುದೀಗ ಹೂವ ತಿಂದು ಗಂಧವನುಳುಹಿತ್ತೆಂಬ ಶಬ್ದಕ್ಕರ್ಥ. ಅಂತರಂಗದಲ್ಲಿ ಉಭಯ ಸ್ವರೂಪವಾಗಿರ್ಪ ಪ್ರಾಣಲಿಂಗವು ಶರಣನ ಪರಿಪೂರ್ಣ ಜ್ಞಾನವನವಗ್ರಹಿಸಿತ್ತೆಂಬುದೀಗ ಉಳಿದ ಗಂಧ ತುಂಬಿಯು ತಿಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನಸ್ವರೂಪನಾದ ಶರಣನು ಪ್ರಾಣಲಿಂಗವನವಗ್ರಹಿಸಿ ಸದ್ವಾಸನ ಸ್ವರೂಪವಾದ ಪ್ರಾಣಲಿಂಗನ ಶರಣನವಗ್ರಹಿಸಿ ಎರಡು ಏಕವಾಗಿ ಒಂದೇ ಸ್ವರೂಪವಾದಲ್ಲಿ ಅಂಗರಹಿತವಾಯಿತ್ತೆಂಬುದೀಗ ತುಂಬಿದ ಗಂಧ ಒಂದೇ

ಯಾಯಿತ್ತು ಅದು ನಿಂಗೆದಿಗವು ಸದಾಶಿವಮೂರ್ತಿಲಿಂಗ ತಾನೆ ಎಂಬ ಶಬ್ದಕ್ಕರ್ಥ.

೭೧. ವಚನದ ರಚನೆಯ ಬಲ್ಲ ಹಿರಿಯರೆಲ್ಲರು ಮೂರು ಕ್ಕವನ ಮನೆಯ ಬಾಗಿಲ ಕಾಯ್ದಿದ್ದಾರೆ. ಹೇಳಿ ಕೇಳಿ ಬಲ್ಲತನವಾದೆನೆಂಬು ವರೆಲ್ಲರು ಬಾಗಿಲಲ್ಲಿಯೇ ಸಿಕ್ಕಿದರು. ಸ್ಥಾವರಾದಿಗಳು ಮೊದಲಾಗಿ ಇದಿರಿಟ್ಟು ಕರುಹೆಲ್ಲವು ತಾವಿದ್ದ ಠಾವಿಂಗೆ ತಂದು ಕೊಂಬುವದರಿಂದ ಕಡೆಯಿ. ಅರಿವುಳ್ಳ ಜ್ಞಾನಿಗಳೆಲ್ಲರು ಇದು ಕಾರಣ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮವೆಲ್ಲಿದ್ದರೂ ತಪ್ಪವು. ಹಲುಬಿ ಹರಿದಾಡಬೇಡ. ಸದಾಶಿವಮೂರ್ತಿಲಿಂಗದ ಒಲವರವಿಲ್ಲದೆ ನೆರೆ ನಂಬು.

೭೨. ಆಡಿನ ಮೊಲೆವಾಲ ಕೋಡಗನುಂಡು ಹಾಲ ಸಿಹಿ ತಲೆ ಗೇರಿ ಬಂದವರನೇಡಿಸುತ್ತ ನಿಂದವರ ಕಚ್ಚುತ್ತ ಹಿಂಗದು ನೋಡಾ ಕೋಡಗದಂವ. ಕೋಡಗನ ತಿಂದು ಆಡುವನೇ ಆರೂಢ ವಸ್ತು ಸದಾ ಶಿವಮೂರ್ತಿ ಲಿಂಗಕ್ಕೆ ಎಣೆವಿಲ್ಲದಂಗ.

ಟೀಕು:— ರಜೋ ಸಂಬಂಧವಾದ ಸ್ಥೂಲ ದೇಹದಲ್ಲಿರ್ಪ ಸಂಸಾರ ವಿಷಯ ರಸವ ಸ್ವೀಕರಿಸುತ್ತಿಹುದು ಮನಸ್ಸೆಂಬುದೀಗ ಆಡಿನ ಮೊಲೆ ವಾಲ ಕೋಡಗ ಉಂಡು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವು ಮನಸಿನ ವೃತ್ತಿ ಜ್ಞಾನದಲ್ಲಿ ಪ್ರವೇಶಿಸಿತ್ತೆಂಬುದೀಗ ಹಾಲ ಸಿಹಿ ತಲೆಗೇರಿ ಎಂಬ ಶಬ್ದಕ್ಕರ್ಥ. ಆ ಮನಸ್ಸು ದೇಹಿ ಸಂಬಂಧಿಗ ಳಾಗಿ ಪರಿಭವಕ್ಕೆ ಬಂದ ಜೀವರುಗಳ ಹಾಸ್ಯಾಪಮಾನವ ಮಾಡು ತ್ತಿಹುದೆಂಬುದೀಗ ಬಂದವರನೇಡಿಸುತ್ತ ಎಂಬ ಶಬ್ದಕ್ಕರ್ಥ. ಆ ಮನಸ್ಸು ಅಹಂಕಾರ ಭಾವದಲ್ಲಿರ್ಪ ಅದ್ವೈತ ಜ್ಞಾನಿಗಳ ಸಂಕಲ್ಪ ಭಾವ ದಿಂದವಗ್ರಹಿಸಿತ್ತೆಂಬುದೀಗ ನಿಂದವರ ಕಚ್ಚುತ್ತ ಎಂಬ ಶಬ್ದಕ್ಕರ್ಥ. ಆ ಮನಸ್ಸಿನ ದುರ್ವರ್ತನೆ ನಾಸ್ತಿಯಾಗದೆಂಬುದೀಗ ಹಿಂಗದು ನೋಡಾ ಕೋಡಗದಂವ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಶಿವಭಾವದಿಂ ಮನೋವರ್ತನೆಯು ನಿವೃತ್ತಿಯ ಮಾಡಿದನೆಂಬುದೀಗ ಕೋಡಗವ ತಿಂದು ಎಂಬ ಶಬ್ದಕ್ಕರ್ಥ. ಆ ಮನೋವರ್ತನೆಯುಳ್ಳ ಯುಲು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಅಂತರಂಗದ ಜ್ಞಾನ ಬಹಿರಂಗದ ಕ್ರಿಯೆಯಿಡಿದಾಚರಿಸಿ ಪರಶಿವ ತತ್ವ

ವಲ್ಲಿ ಸಮರಸವಾಗಿ ಎರವಿಲ್ಲದೆ ಚಿತ್ಪ್ರಭಾಂಗ ಸ್ವರೂಪನಾದನೆಂಬುದೀಗ ಆಡುವನೇ ಅರೂಪ ವಸ್ತು ಸದಾಶಿವಮೂರ್ತಿಲಿಂಗಕ್ಕೆ ಎರವಿಲ್ಲದಂಗ ಎಂಬ ಶಬ್ದಕ್ಕರ್ಥ.

೭೩. ಇರುವೆ ಅಂಜದೆ ಮದಸೊಕ್ಕಿದ ಆನೆಯ ತನ್ನ ಕಡೆ ಗಾಲಿನಲ್ಲಿ ಕಟ್ಟಿ ಸದಮದದಲ್ಲೆಳೆವುತ್ತಿದೆ. ಆನೆಯ ಕೊಂಬು ಮುರಿದು ಸುಂಡಿಲುಡಿಗಿ ಮದ ಸೋರಿ ಗಜಘಟವಳಿದು ಹೋಯಿತ್ತು. ಇರುವಿನ ಕಾಲು ಐಗಜವ ಕೊಂದು ಮೂರು ಹುಲಿಯ ಮುರಿದು ನನಗಿನ್ನಾರು ಅಡಹಿಲ್ಲ ಎಂದು ಸದಾಶಿವಮೂರ್ತಿ ಲಿಂಗದಲ್ಲಿಗೈಯ್ದಿತ್ತು.

ಟೀಕು:— ಚಿತ್ ಸ್ವರೂಪನಾದ ಶರಣನ ನಿಜಾಂತರಂಗದಲ್ಲಿರ್ಪ ಸೂಕ್ಷ್ಮವಾದ ಪರಿಪೂರ್ಣ ಜ್ಞಾನವೆಂಬುದೀಗ ಇರುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣ ಜ್ಞಾನಕ್ಕೆ ಸಕಲ ಮಾಯಾ ಪ್ರಪಂಚಿನ ಭಯ ವಿಲ್ಲವೆಂಬುದೀಗ ಇರುವೆ ಅಂಜದೆ ಎಂಬ ಶಬ್ದಕ್ಕರ್ಥ. ಅಹಂಕಾರ ಯುಕ್ತವಾದ ಪಂಚಭೂತಂಗಳ ತನ್ನ ಚರ್ಯಾಪಾದದಲ್ಲಿ ಬಂಧಿಸಿದ ಎಂಬುದೀಗ ಮದ ಸೊಕ್ಕಿದ ಆನೆಯ ತನ್ನ ಕಡೆಗಾಲಿನಲ್ಲಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಚರ್ಯಾಪಾದದಲ್ಲಿ ಬಂಧಿಸಿದ ಪಂಚ ಭೂತಂಗಳು ಮಡಿದಹಂಕಾರ ಸ್ವರೂಪವಾದ ಭಕ್ತಿಯಲ್ಲಿ ಕೂಡಿ ನಡೆವುತ್ತಿಹನೆಂಬುದೀಗ ಸದಮದದಲ್ಲಿ ಎಳೆವುತ್ತಿದೆಂಬ ಶಬ್ದಕ್ಕರ್ಥ. ಆ ಪಂಚ ಭೂತಂಗಳು ನಿವೃತ್ತಿಯಾಗಲು ಅಹಂಕಾರ ಮಮಕಾರವೆಂಬ ಕೊಂಬು ಭಗ್ನವಾಯಿತ್ತೆಂಬುದೀಗ ಆನೆಯ ಕೊಂಬು ಮುರಿದು ಎಂಬ ಶಬ್ದಕ್ಕರ್ಥ. ಅಹಂಕಾರ ಮಮಕಾರವಳಿದಲ್ಲಿ ದುರ್ಭಾವ ಹಸ್ತವು ಖಂಡಿಸಿತ್ತೆಂಬುದೀಗ ಸುಂಡಿಲುಡಿಗಿ ಎಂಬ ಶಬ್ದಕ್ಕರ್ಥ. ಆ ದುರ್ಭಾವವಳಿಯಲು ಅಷ್ಟಮದ ಮೊದಲಾದ ಸಂಸಾರ ವಿಷಯ ರಸವರತು ನಿರಸವಾಯಿತ್ತೆಂಬುದೀಗ ಮದ ಸೋರಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವರತು ಹೋಗಲು ಪಂಚಭೂತಂಗಳಿಗಾಶ್ರಯವಾದ ದೇಹ ಭಾವ ನಿವೃತ್ತಿಯಾಯಿತ್ತೆಂಬುದೀಗ ಗಜ ಘಟವಳಿದು ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನದ ಚರ್ಯಾಪಾದವು ಪಂಚಭೂತಂಗಳ ಸಂಹರಿಸಿತ್ತೆಂಬುದೀಗ ಇರುವಿನ ಕಾಲು ಐಗಜವ ಕೊಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನ ಸ್ವರೂಪನಾದ ಶರಣ ಉತ್ಪತ್ತಿ ಸ್ಥಿತಿಲಯಂಗಳ ಸಂಹರಿಸಿ ತನಗಾವ ಪ್ರಪಂಚು ಇದಿರಿಲ್ಲವಾಗಿ ತನ್ನ

ನಿಜವಸ್ತು ಪರಬ್ರಹ್ಮದಲ್ಲಿ ಸಮರಸಭಾವದಿಂದೆಯ್ದಿ ಏಕಾರ್ಥವಾಯಿತ್ತೆಂಬುದೀಗ ಮೂರು ಹುರಿಯ ಮುರಿದು ನನಗಿನ್ನಾರು ಅಡಹಿಲ್ಲಾ ಎಂದು ಸದಾಶಿವಮೂರ್ತಿಲಿಂಗದಲ್ಲಿಗೈಯ್ದಿತ್ತು ಎಂಬ ಶಬ್ದಕ್ಕರ್ಥ.

೬೪. ಕಣ್ಣಿನ ಮನೆಯಲ್ಲಿ ಗನ್ನದ ಗರತಿ ಹಡೆದುಂಬುತ್ತೈದಾಳೆ. ಅವಳ ಕೂಟವ ಕೂಡುವದಕ್ಕೆ ತಲೆ ಕೆಳಗಾಗಿ ಕಾಲು ಮೇಲಾಗಿ ಕೈಯ್ಯಪ್ರದಕ್ಷಿಣೆಯಾಗಿ ತರ್ಕೈಸಿಕೊಂಡು ಹಿಂದುಮುಂದಾಗಿ ಮುತ್ತನಿಕ್ಕಿ ಶಕ್ತಿಯ ಸುಖ ಲೇಸಾಯಿತ್ತು ಸದಾಶಿವಮೂರ್ತಿಲಿಂಗ ಬಚ್ಚಬಯಲು.

ಟೀಕು:— ಕಣ್ಣೆಂದೊಡೆ ಸುಜ್ಞಾನ ದೃಷ್ಟಿ. ಆ ಸುಜ್ಞಾನ ದೃಷ್ಟಿಯ ನೊಳಕೊಂಡಿರ್ಪ ಚಿದಾಲಯದಲ್ಲಿ ಎಂಬುದೀಗ ಕಣ್ಣಿನ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಕಾಯದಲ್ಲಿ ಸಕಲ ಪ್ರಪಂಚ ಹೊದ್ದದೆ ಚದುರಿನಿಂದಿರ್ಪ ಜ್ಞಾನಶಕ್ತಿ ಶಿವಸುಖ ಪ್ರಸಂಗ ಪ್ರಸಾದವ ಹಡೆದು ಹರುಷಾನದದಿಂ ಸ್ವೀಕರಿಸುತ್ತಿರ್ದಳೆಂಬುದೀಗ ಗನ್ನದ ಗರತಿ ಹಡೆದುಂಬುತ್ತೈದಾಳೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಶಕ್ತಿಯಲ್ಲಿ ಬೆರೆವುದಕ್ಕೆ ಎಂಬುದೀಗ ಅವಳ ಕೂಟವ ಕೂಡುವದಕ್ಕೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನವೆಂಬ ಶಿರಸ್ಸು ಸತ್ಕ್ರಿಯಾಚಾರದಲ್ಲಿ ಕೂಡಿ ಆ ಸತ್ಕ್ರಿಯಾಚಾರವನ ಸುಜ್ಞಾನದಲ್ಲಿ ಬೆರಸಿ ಎಂಬುದೀಗ ತಲೆ ಕೆಳಗಾಗಿ ಎಂಬ ಶಬ್ದಕ್ಕರ್ಥ. ಆ ಶರಣ ಸತಿಯ ಸದ್ಭಾವ ಹಸ್ತವು ಪೂರ್ವ ಕ್ರಿಯಾಚಾರವು ಮೀರಿಹುದೆಂಬುದೀಗ ಕೈಯ್ಯ ಪ್ರದಕ್ಷಿಣೆಯಾಗಿ ಎಂಬ ಶಬ್ದಕ್ಕರ್ಥ. ಆ ಶರಣನ ಸದ್ಭಾವ ಹಸ್ತದಿಂದ ಜ್ಞಾನಶಕ್ತಿಯನಾಲಿಂಗಿಸಿ ಕೊಂಡನೆಂಬುದೀಗ ತರ್ಕೈಸಿಕೊಂಡು ಎಂಬ ಶಬ್ದಕ್ಕರ್ಥ. ಆ ಜ್ಞಾನ ಶಕ್ತಿಯಲ್ಲಿ ಒಡಗೂಡಿರ್ಪ ಶರಣನು ತನ್ನ ಸುಜ್ಞಾನ ದೃಷ್ಟಿಯ ಮುಂದೆ ತೋರುವ ಪರಶಿವ ತತ್ವದಲ್ಲಿ ಸಮರಸವಾದನೆಂಬುದೀಗ ಹಿಂದುಮುಂದಾಗಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ತಾನಾದ ಶರಣನು ಶಿವೋಹಂ ಎಂಬ ಪಂಚಾಕ್ಷರಾಮೃತರಸವನು ಜ್ಞಾನಶಕ್ತಿಯ ಮುಖದಿಂ ಸ್ವೀಕರಿಸುತ್ತಿಹನೆಂಬುದೀಗ ಮುತ್ತನಿಕ್ಕಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನ ಶಕ್ತಿಯ ಸಮರಸಕೂಟದ ಸುಖವು ಶರಣಂಗ ಲೇಸಾಯಿತ್ತೆಂಬುದೀಗ ಶಕ್ತಿಯ ಸುಖ ಲೇಸಾಯಿತ್ತು ಸದಾಶಿವಮೂರ್ತಿಲಿಂಗ ಬಚ್ಚಬಯಲು ಎಂಬ ಶಬ್ದಕ್ಕರ್ಥ.

೭೫. ದತ್ತೂರದ ಬಿತ್ತಿನಲ್ಲಿ ಕಲ್ಪತರು ಹುಟ್ಟಿ, ಕಲ್ಪತರುವಿನಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು. ಇಟ್ಟಿಯ ಹಣ್ಣು ತೊಟ್ಟುಬಿಟ್ಟು ಬಿದ್ದಲ್ಲಿ ಅಮೃತಮಯವಾಯಿತ್ತು ಸದಾಶಿವಮೂರ್ತಿಲಿಂಗವನರಿತಲ್ಲಿ.

ಟೀಕು:— ಮದೋನ್ಮತ್ತ ದೇಹದ ಮಧ್ಯದಲ್ಲಿ ಮೂಲಾಹಂಕಾರ ಉದಯಿಸಿತ್ತೆಂಬುದೀಗ ದತ್ತೂರದ ಬಿತ್ತಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಧ್ಯದಲ್ಲಿ ಸದ್ವಿವೇಕ ವೃಕ್ಷ ಪ್ರಭಾವಿಸಿತ್ತೆಂಬುದೀಗ ಕಲ್ಪತರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜ್ಞಾನ ದಿಂದಾತ್ಮನು ಪರತತ್ವದಲ್ಲಿ ಬೆಂಸಲರಿಯದೆ ಭಿನ್ನಾಪೇಕ್ಷೆಯ ಮಂದು ಗೊಳ್ಳಲು ಅಲ್ಲಿ ಚತುರ್ವಿಧಫಲಂಗಳು ತೋರಿದವೆಂಬುದೀಗ ಕಲ್ಪತರು ವಿನಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಮಹಾಜ್ಞಾನ ಸ್ವರೂಪನಾದ ಶರಣನು ನಿಜದಿಂ ತಿಳಿದು ನೋಡಲು ಅಹಂಕಾರ ಮುಖ್ಯವಾದ ಚತುರ್ವಿಧ ಫಲಂಗಳು ನಿವೃತ್ತಿಯಾದವೆಂಬುದೀಗ ಇಟ್ಟಿಯ ಹಣ್ಣು ತೊಟ್ಟುಬಿಟ್ಟು ಬಿದ್ದಲ್ಲಿ ಎಂಬ ಶಬ್ದಕ್ಕರ್ಥ. ಆ ಭಿನ್ನಫಲಂಗಳು ನಿವೃತ್ತಿಯಾಗಿ ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಶರಣನು ಸಮರಸವನೆಯ್ದಿ ನಿತ್ಯಸ್ವರೂಪನಾದನೆಂಬುದೀಗ ಅಮೃತಮಯವಾಯಿತ್ತು ಸದಾಶಿವಮೂರ್ತಿಲಿಂಗವನರಿತಲ್ಲಿ.

೭೬. ಮಹಾವಿಕಾರಣ ಮಯವಾದಲ್ಲಿ ಹರಿವ ಶೋಣಿತದಲ್ಲಿ ಒಂದು ನೊಣ ಹುಟ್ಟಿತ್ತು. ಕಾಲೊಂದು ಅಂಗ ಮೂರು ಅಟ್ಟಿ ಒಂದೇ ಉದರ ನಾಲಿಗೆಯಲ್ಲಿ ನಾರಾಯಣ ಹುಟ್ಟಿ ನೊಣ ಸತ್ತಿತ್ತು. ಬ್ರಹ್ಮನ ಇರವಾಯಿತ್ತು. ವಿಷ್ಣುವಿನ ಲೋಕವಾಯಿತ್ತು. ರುದ್ರನ ಕಪಾಲವ ತುಂಬಿ ಬುದ್ಧಿವಂತರೆಲ್ಲರೂ ಕಪಾಲದ ಕೊಳಗನುಂಡು ಬುದ್ಧಿವಂತರಾಗಿರಿ. ಎನಗಾ ಹೊದ್ದಿಕೆ ಬೇಡ. ಸದಾಶಿವಮೂರ್ತಿಲಿಂಗ ಇದ್ದಂತೆ ಸಾಕು.

ಟೀಕು:— ಆತ್ಮ ಸಂಬಂಧವಾದ ಸಕಲ ಕರಣಂಗಳೆಲ್ಲವು ವಿಕಾರದಿಂ ಜೀವನ್ಮೃತವಾಗಿ ಮರವೆಯನೆಯ್ದುತ್ತಿಹವೆಂಬುದೀಗ ಮಹಾವಿಕಾರಣ ಮಯವಾದಲ್ಲಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳೆಲ್ಲ ಜೀವನ್ಮೃತವಾಗಿ ಮರವೆಯನೆಯ್ದಿದಲ್ಲಿ ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಮಾಯೆ ಹುಟ್ಟಿದಳೆಂಬುದೀಗ ಹರಿವ ಶೋಣಿತದಲ್ಲಿ ಒಂದು ನೊಣ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಮಾಯೆಗೆ ದುಶ್ಚರಿತ್ರನೆಂಬ ಚರಣ ಒಂದೇ ಎಂಬುದೀಗ ಕಾಲೊಂದು ಎಂಬ

ಶಬ್ದಕ್ಕರ್ಥ- ಆ ಮಾಯೆಗೆ ತನುತ್ರಯಂಗಳೇ ಶರೀರವಾಗಿಹವೆಂಬುದೀಗ ಅಂಗ ಮೂರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಪ್ರಪಂಚೆಂಬುವಕ್ಕೆ ಒಂದೇ ಎಂಬುದೀಗ ಅಟ್ಟೆ ಒಂದೇ ಶಬ್ದಕ್ಕರ್ಥ- ಅಂತಪ್ಪ ಮಾಯೆಯು ಭಿನ್ನಾಪೇಕ್ಷೆಯಲ್ಲಿ ಶುದ್ಧ ಸಾತ್ವಿಕ ಸಂಬಂಧವಾದ ಸಜ್ಞಾನವು ಉದಯವಾಯಿತ್ತೆಂಬುದೀಗ ಅದರ ನಾಲಿಗೆಯಲ್ಲಿ ನಾರಾಯಣ ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಿಂ ಮಾಯೆಯು ನಿವೃತ್ತಿಯಾಗಿ ಹೋಯಿತ್ತೆಂಬುದೀಗ ನೊಣ ಸತ್ತಿತ್ತೆಂಬ ಶಬ್ದಕ್ಕರ್ಥ. ಆ ಮಾಯೆಯು ನಿವೃತ್ತಿ ಮಾಡಿದನೆಂಬಹಂಕಾರದಿಂ ಬ್ರಹ್ಮನ ಸೃಷ್ಟಿಗೊಳಗಾದರೆಂಬುದೀಗ ಬ್ರಹ್ಮನ ಇರವಾಯಿತ್ತೆಂಬ ಶಬ್ದಕ್ಕರ್ಥ- ಅಂತು ಬ್ರಹ್ಮನ ಸೃಷ್ಟಿಗೊಳಗಾದರೂ ವಿಷ್ಣು ತತ್ವ ಸಂಬಂಧವಾದ ಪ್ರಾರಬ್ಧ ಭೋಗಕ್ಕೆ ಈಡಾದರೆಂಬುದೀಗ ವಿಷ್ಣುವಿನ ಲೋಕವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಪ್ರಾರಬ್ಧಭೋಗಕ್ಕೆ ಈಡಾದ ಆತ್ಮರು ರುದ್ರತತ್ವ ಸಂಬಂಧವಾದ ಭಿನ್ನಜ್ಞಾನದಲ್ಲಿ ಸಂಸಾರ ವಿಷಯರಸ ಸಂಪೂರ್ಣವಾಗಿಹವೆಂಬುದೀಗ ರುದ್ರನ ಕಪಾಲವ ತುಂಬಿ ಎಂಬ ಶಬ್ದಕ್ಕರ್ಥ. ಆ ಭಿನ್ನಜ್ಞಾನದಿಂದೊದಗಲ್ಪಟ್ಟ ಖಂಡಿತ ಫಲಪದಂಗಳ ಪಡೆದು ಭೋಗಿಸುತ್ತಿಹಳೆಂಬ ದೀಗ ಬುದ್ಧಿವಂತರೆಲ್ಲರೂ ಕಪಾಲದ ಕೋನುಂಡು ಎಂಬ ಶಬ್ದಕ್ಕರ್ಥ. ಅಂತು ದ್ವೈತಕ್ರಿಯೆಯಿಂ ಫಲಪದಂಗಳ ಪಡೆದು ಭೋಗಿಸುತ್ತಿಹರೆಲ್ಲರು ಖಂಡಿತ ಮುಕ್ತಿಯುಳ್ಳವರೆಂಬುದೀಗ ಬುದ್ಧಿವಂತರಾಗಿ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿರ್ಪ ಶರಣಂಗೆ ಅಭಿನ್ನ ಫಲಪದಂಗಳ ಬಯಕೆ ಇಲ್ಲೆಂಬುದೀಗ ಎನಗಾ ಹೊದ್ದಿಕೆ ಬೇಡ ಸದಾಶಿವಮೂರ್ತಿಲಿಂಗ ಇದ್ದಂತೆ ಸಾಕು ಎಂಬ ಶಬ್ದಕ್ಕರ್ಥ.

೭೭. ರಸದ ಭಾವಿಯಲ್ಲಿ ಅಸಿಯು ಮಡುವ ಕಲಕಿ ಕತ್ತರಿವಾಣಿಯು ಗೊತ್ತು ಕೊಯ್ದು ಕರೋತಿಯು ಕಣ್ಣ ಕಿತ್ತು ಅಶ್ವನ ಬೆತ್ತವ ಕಿತ್ತು ನಿಶ್ಚಯದಲ್ಲಿ ಆಡುವಾತನೇ ನಿಜವಸ್ತು ಸದಾಶಿವಮೂರ್ತಿಲಿಂಗವು.

ಟೀಕು:— ಪರಮಾಮೃತ ರಸವ ತುಂಬಿಕೊಂಡಿರ್ದ ಚಿತ್ಕೂಪವೆಂಬುದೀಗ ರಸದ ಬಾವಿಯಲ್ಲಿ ಎಂಬ ಶಬ್ದಕ್ಕರ್ಥ- ಆ ಪರಮಾಮೃತ ರಸವನೊಳಕೊಂಡಿರ್ಪ ಶರಣನು ಘಾತವ ಕಾಣಬಾರದೆ ಇರ್ಪ

ಅಜ್ಞಾನ ಸಂಬಂಧವಾದ ಸಂಸಾರ ವಿಷಯ ರಸನ ಪಾತುವ ನಿಸ್ಪತ್ರಿ ಮಾಡಿದನೆಂಬುದೀಗ ಅಸಿಯು ಮಡುವ ಕಲಕಿ ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ನಷ್ಟವಾದಲ್ಲಿ ತನ್ನ ನೋಂಕಿದವರ ಕಡಿದು ಕತ್ತರಿಸುವ ಅತಿ ವಿಷಾದದಂತಪ್ಪ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ಅಹಂಕಾರಯುಕ್ತವಾದ ದೇಹ ಭಾವವ ಭೇದಿಸಿದನೆಂಬುದೀಗ ಕತ್ತರಿ ನಾಣೆಯ ಗೊತ್ತು ಕೊಯ್ದು ಎಂಬ ಶಬ್ದಕ್ಕರ್ಥ. ಅಂತು ದೇಹ ಭಾವ ನಷ್ಟವಾದಲ್ಲಿ ಜೀವನ ಅಜ್ಞಾನ ದೃಷ್ಟಿ ನಷ್ಟವಾಯಿತ್ತೆಂಬುದೀಗ ಕರೋತಿಯ ಕಣ್ಣ ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಬಂಧವಾದ ಜೀವನು ಅಜ್ಞಾನಭಾವ ನಿವೃತ್ತಿಯಾಗಲು ಪ್ರಾಣವಾಯು ವಿಕಾರದಲ್ಲಿ ಸಂಚರಿಸುತ್ತಿಹ ಮನಸ್ಸ ಭೇದಿಸಿದನೆಂಬುದೀಗ ಅಶ್ವನ ಚಿತ್ತವ ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮನವಳಿದು ಉನ್ಮನಿ ತತ್ವ ಸ್ವರೂಪವಾದ ನಿರ್ಮಾಯ ಸ್ವರೂಪನಾದ ಶರಣನು ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಜ್ಞಾನಕ್ರಿಯ ವಿಡಿದಾಚರಿಸಿ ಪರವಸ್ತುವೆಯಾದನೆಂಬುದೀಗ ನಿಶ್ಚಯದಲ್ಲಿ ಆಡುವಾತನೇ ನಿಜವಸ್ತು ಸದಾಶಿವಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೭೮. ಬ್ರಹ್ಮವನರಿದ ಬಳಿಕ ಸುಮ್ಮನೆ ಇರಬೇಕು. ಬ್ರಹ್ಮಪ್ರಸಂಗಿಗಳು ಬಂದರೆ ಪರಬ್ರಹ್ಮದ ಪ್ರಸಂಗವ ಮಾಡಬೇಕು. ಹೀಗಲ್ಲದೆ ತನ್ನ ಅಗಮ್ಯವ ಮೆರೆಯಬೇಕೆಂದು ಬೀದಿಯ ಪಸಾರವಂತೆ ಆಗಬೇಡ. ಇದನರಿದು ಕಳ್ಳನ ಚೇಳೂರಿದಂತೆ ಸುಮ್ಮನೆ ಇರಬೇಕು ಸದಾ ಶಿವಮೂರ್ತಿಲಿಂಗವನರಿವುದಕ್ಕೆ

೭೯. ಪೃಥ್ವಿಜ್ಞಾನ ಪಿಪೀಲಿಕ ಸಂಬಂಧವಾಗಿಹುದು. ಅಪ್ಪುಜ್ಞಾನಮರ್ಕಟ ಸಂಬಂಧವಾಗಿಹುದು. ತೇಜಜ್ಞಾನ ಅಗ್ನಿ ಸಂಬಂಧವಾಗಿಹುದು. ವಾಯು ಜ್ಞಾನ ಗಂಧ ಸಂಬಂಧವಾಗಿಹುದು. ಆಕಾಶಜ್ಞಾನ ವಿಹಂಗ ಸಂಬಂಧವಾಗಿಹುದು. ತನೋಜ್ಞಾನ ಮಾರ್ಜಾಲ ಸಂಬಂಧವಾಗಿಹುದು. ಪರಿಪೂರ್ಣಜ್ಞಾನ ಕೂರ್ಮ ಸಂಬಂಧವಾಗಿಹುದು. ದಿವ್ಯಜ್ಞಾನ ಸರ್ವಮಯವಾಗಿ ನಾನಾ ಭೇದಂಗಳ ಭೇದಿಸುತ್ತಿಹುದು. ಇಂತೀ ಮನಜ್ಞಾನ ಭರಿತನಾಗಿ ದಶಗುಣ ಮರ್ಕಟನ ಮೆಟ್ಟಿ ಮುಟ್ಟಿನಿಂದು ಬಟ್ಟಬಯಲ ತುಟ್ಟತುದಿಯ ಸದಾಶಿವಮೂರ್ತಿ ಲಿಂಗವ ಕಳೆಕಳೆಗೊಳುತ್ತಿದೆ ಚಿತ್ತದ ನೆನಹಿನಲ್ಲಿ.

ದರ್ಪಣಾಕಾರ ಪ್ರಣವದಲ್ಲಿ ಈಶಾನ್ಯಮುಖ, ಅರ್ಧಚಂದ್ರಕ ಪ್ರಣವದಲ್ಲಿ ತತ್ಪುರುಷಮುಖ, ಕುಂಡಲಾಕಾರ ಪ್ರಣವದಲ್ಲಿ ಅಘೋರಮುಖ, ದಂಡಸ್ವರೂಪ ಪ್ರಣವದಲ್ಲಿ ವಾಮದೇವಮುಖ, ತಾರಕಸ್ವರೂಪದಲ್ಲಿ ಸದ್ಯೋಜಾತಮುಖ ಉಂಟಾಗುತ್ತವೆ.

ಈಶಾನ್ಯ ಮುಖದಲ್ಲಿ ಸಾಯುಜ್ಯಪ್ರಣವು, ತತ್ಪುರುಷ ಮುಖದಲ್ಲಿ ಸಾಕಲ್ಯಪ್ರಣವು, ಅಘೋರಮುಖದಲ್ಲಿ ಶಾಂಭವಪ್ರಣವು, ವಾಮದೇವ ಮುಖದಲ್ಲಿ ಸ್ವಾಸ್ಯಪ್ರಣವು ( ? ) ಸದ್ಯೋಜಾತ ಮುಖದಲ್ಲಿ ಸೌಖ್ಯ ಪ್ರಣವು ( ? ) ಉಂಟಾಗುತ್ತವೆ.

ಶಕ್ತಿ ಸ್ವರೂಪ ಪರವು ಪ್ರಣವುಗಳಿಂದಾದ ವಸ್ತುಗಳು:— ಅವು ತಾರಕಸ್ವರೂಪ ಪ್ರಣವು, ದಂಡಕಸ್ವರೂಪ ಪ್ರಣವು, ಕುಂಡಲಾಕಾರ ಪ್ರಣವು, ಅರ್ಧಚಂದ್ರಕ ಪ್ರಣವು, ದರ್ಪಣಾಕಾರ ಪ್ರಣವು, ಜ್ಯೋತಿಸ್ವರೂಪ ಪ್ರಣವು ಎಂದು ಇರುತ್ತವೆ. ಇವು ಶಿವಸಂಬಂಧದ ಪ್ರಣವುಗಳ ಕ್ರಮಕ್ಕೆ ವಿರುದ್ಧ ಕ್ರಮದಲ್ಲಿರುತ್ತವೆ.

ಶಿವಶಕ್ತಿರಹಿತ ಪ್ರಣವುಗಳಿಂದಾದ ವಸ್ತುಗಳು:— ಅಖಂಡ ಮಹಾಜ್ಯೋತಿ ಪ್ರಣವುದಲ್ಲಿ ಮೂರ್ತಿಬ್ರಹ್ಮಪ್ರಣವು, ಪಿಂಡ ಬ್ರಹ್ಮಪ್ರಣವು, ಕಲಾಬ್ರಹ್ಮಪ್ರಣವು, ಬ್ರಹ್ಮಾನಂದಪ್ರಣವು, ವಿಜ್ಞಾನಬ್ರಹ್ಮಪ್ರಣವು, ಪರಬ್ರಹ್ಮಪ್ರಣವು ಇವುಗಳು ಉಂಟಾಗುತ್ತವೆ.

ಆದಿಪ್ರಣವ:— ಓಂಕಾರವೆಂಬ ಅನಾದಿ ಪ್ರಣವದ ನೆನಹುಮಾತ್ರದಿಂದ ಆದಿ ಅಕಾರ, ಆದಿ ಉಕಾರ, ಆದಿ ಮಕಾರಗಳು ಉಂಟಾಗುತ್ತವೆ. ಇವು ಅನುಕ್ರಮವಾಗಿ ಚಿನ್ನಾದ ಚಿದ್ಬಿಂದು ಚಿತ್ಕಲೆಗಳಾಗಿವೆ. ಇವು ಮೂರು ಮತ್ತು ಮೂಲ ಚಿತ್ತು ಇವು ಕೂಡಿದಲ್ಲಿ ಓಂಕಾರ ಪ್ರಣವವು ಉಂಟಾಗುತ್ತದೆ. ಇದು ಆದಿಪ್ರಣವವು. ಅದು ನಿತ್ಯಪರಿಪೂರ್ಣ ಪರಂಜ್ಯೋತಿ ಪರಬ್ರಹ್ಮವೆಂದು ತಿಳಿಯಬೇಕು. ಇದಕ್ಕೆಯೇ ಗೋಳಕಾಕಾರ ಪ್ರಣವು, ಮೂಲ ಪ್ರಣವುಗಳೆಂಬ ಹೆಸರುಗಳಿವೆ.

ಷಡ್ವಿಧ ಪ್ರಣವುಗಳು:— ಇವು ಜ್ಯೋತಿಸ್ವರೂಪ ಪ್ರಣವು, ದರ್ಪಣಾಕಾರ ಪ್ರಣವು, ಅರ್ಧಚಂದ್ರಕ ಪ್ರಣವು, ಕುಂಡಲಾಕಾರ ಪ್ರಣವು,

ದಂಡಸ್ವರೂಪ ಪ್ರಣವು, ತಾರಕಸ್ವರೂಪ ಪ್ರಣವು ಹೀಗೆ ಇರುತ್ತವೆ. ಇವುಗಳಲ್ಲಿ ಪ್ರಣವದ ಮತ್ತು ಪಂಚಾಕ್ಷರಗಳ ಉದಯವು. ಇವು ಆರು ಆದಿಪ್ರಣವು ಅನಾದಿಪ್ರಣವು ಮತ್ತು ಚಿತ್ಕಲಾಪ್ರಣವು ಇವುಗಳಲ್ಲಿಯೂ ಕೂಡ ಆಯಾ ಸ್ವರೂಪಗಳಿಂದ ಇವೆ ಎಂದು ಭಾವಿಸಿ ಜಪಿಸಬೇಕು.

ಅಷ್ಟಾಕ್ಷರಗಳು:— ಇವು ಬ, ಸ, ವ; ಅ, ಉ, ಮ; ಹಂ, ಕ್ಷಂ ಎಂದು ಇವೆ. ಜಗತ್ತಿನ ಆಯಾ ಸ್ವರೂಪಗಳನ್ನು ಇವು ಸೂಚಿಸುತ್ತವೆ. ಈ ಸ್ವರೂಪಗಳ ಬಗ್ಗೆ ಈ ಮೊದಲಿಗೇ ಹೇಳಲ್ಪಟ್ಟಿದೆ.

ಐವತ್ತೆರಡಕ್ಷರಗಳ ಉತ್ಪತ್ತಿ:— ಗೋಳಕಾಕಾರ ಪ್ರಣವದ ಯಕಾರ ಬೀಜದಲ್ಲಿ ಅಕಾರದಿಂದ ಅಃಕಾರದ ವರೆಗೆ ಶೋಡಶಾಕ್ಷರಗಳ ಉತ್ಪತ್ತಿ, ವಕಾರ ಬೀಜದಲ್ಲಿ ಕಕಾರದಿಂದ ಠಕಾರದ ವರೆಗೆ ದ್ವಾದಶಾಕ್ಷರಗಳ ಉತ್ಪತ್ತಿ, ಶಿಕಾರ ಬೀಜದಲ್ಲಿ ಡಕಾರದಿಂದ ಫಕಾರದವರೆಗೆ ದಶಾಕ್ಷರಗಳ ಉತ್ಪತ್ತಿ, ಮಕಾರ ಬೀಜದಲ್ಲಿ ಬಕಾರದಿಂದ ಲಕಾರದ ವರೆಗೆ ಆರಕ್ಷರಗಳ ಉತ್ಪತ್ತಿ. ನಕಾರ ಬೀಜದಲ್ಲಿ ವಕಾರದಿಂದ ಸಕಾರದ ವರೆಗೆ ನಾಲ್ಕಕ್ಷರಗಳ ಉತ್ಪತ್ತಿ ಹೀಗೆ ಇರುತ್ತವೆ. ಈ ಅಕ್ಷರಗಳನ್ನು ಅರಿವಿನಿಂದ ಅರಿದರೆ ಅವು ಪುನಃ ನ ಮ ಶಿ ವಾ ಯ ಆರಕ್ಷರಗಳಾಗುತ್ತವೆ. ಮುಂದೆ ಆರಂಭದ ೧೬ ಸ್ವರಾಕ್ಷರಗಳು ಅಕಾರ ಪ್ರಣವದಲ್ಲಿ ಕಕಾರಾದಿ ಭಕಾರಾಂತ್ಯವಾದ ೨೫ ವಿಕಲಾಕ್ಷರಗಳು ಉಕಾರ ಪ್ರಣವದಲ್ಲಿ ಕಡೆಯ ಮಕಾರಾದಿ ಕ್ಷಕಾರಾಂತ್ಯವಾದ ೧೧ ವ್ಯಾಪಕಾಕ್ಷರಗಳು ಮಕಾರ ಪ್ರಣವದಲ್ಲಿ ಲಯವಾಗುತ್ತವೆ. ಇವುಗಳನ್ನು ಸಹ ಬೀಜಾಕ್ಷರಗಳೆಂತಲೂ ಒಮ್ಮೊಮ್ಮೆ ಕರೆಯುವದುಂಟು.

ಪಂಚಾಕ್ಷರ:— ನ ಮಃ ಶಿ ವಾ ಯ ಇದು ಪಂಚಾಕ್ಷರ ಮಂತ್ರವು. ಇದು ಪ್ರಣವರಹಿತವಾಗಿರುತ್ತದೆ. ಕೇವಲ ಶಕ್ತಿದ್ಯೋತಕವಾಗಿದೆ. ಹಾಗೆಯೇ ಪಂಚ ಬ್ರಹ್ಮದ ದ್ಯೋತಕವೂ ಇರುತ್ತದೆ.

• ಮೂಲಪಂಚಾಕ್ಷರ ಮಂತ್ರ:— ಓಂ ನ ಮಃ ಶಿ ವಾ ಯ ಇದು ಮೂಲ ಪಂಚಾಕ್ಷರ ಮಂತ್ರ. ಇದಕ್ಕೆ ಷಡಕ್ಷರಿ ಮಂತ್ರ. ಶಿವಷಡಕ್ಷರಿ ಮಂತ್ರ ಎಂದು ಬೇರೆ ಹೆಸರುಗಳೂ ಇವೆ. ಇದರ ಅಂಗಗಳನ್ನು

ಯುದೆ ಜಪಿಸಿದ್ದಾದರೆ ಅದು ನಿಷ್ಫಲವೆಂದು ವಚನಕಾರರ ಅಭಿಪ್ರಾಯವು. ಈ ಷಡಕ್ಷರವು ಜಗತ್ತನ್ನೆಲ್ಲ ವ್ಯಾಪಿಸಿರುತ್ತದೆ. ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವಿನ ವ್ಯಾಪಾರವು ಈ ಷಡಕ್ಷರಿಯಲ್ಲಿರುವ ಪ್ರಣವಾಕ್ಷರಗಳಿಂದ ಹೊರಡುವ ಶಕ್ತಿಗಳ ಮೂಲಕ ನಡೆಯುತ್ತಿದೆ. ಜಗತ್ತಿನಲ್ಲಿಯ ಎಲ್ಲ ವಸ್ತುಗಳನ್ನು ೫ ವಿಭಾಗಗಳನ್ನಾಗಿ ವಚನಕಾರರು ವಿಭಾಗಿಸುವದುಂಟು. ಈ ಪ್ರತಿಯೊಂದು ವಿಭಾಗದ ಮೇಲೆ ಒಂದೊಂದು ಪ್ರಣವವು ಪರಿಣಾಮ ಮಾಡುತ್ತದೆ. ಈ ಐದಕ್ಕೆಲ್ಲ ಪ್ರಾಣಮೂರ್ತಿಯಾಗಿರುವದು ಓಂಕಾರವು. ಪಂಚಾಕ್ಷರಗಳಿಗೆ ಈ ಪ್ರಣವವು ಕೂಡಿದಲ್ಲಿ ಅದು ಪ್ರಣವ ಪಂಚಾಕ್ಷರೀ ಮಂತ್ರವು ಅಥವಾ ಷಡಕ್ಷರೀ ಮಂತ್ರವು ಎಂದು ಹೇಳಲ್ಪಡುತ್ತಿದೆ. ಇದು ಆರು ಅವಯವಗಳುಳ್ಳದ್ದು. ಅವು ಅನುಕ್ರಮವಾಗಿ ಪರಮಾತ್ಮನ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತ್ರತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತಿತ್ವ ಈ ಗುಣಗಳನ್ನು ಸೂಚಿಸುತ್ತವೆ. ಇದರ ಅಕ್ಷರಗಳು ಯಾವ ಯಾವ ವಿಷಯಗಳನ್ನು ಸೂಚಿಸುತ್ತವೆಂಬುದನ್ನು ನಾವು ಹಿಂದೆಯೇ ವಿವರಿಸಿದ್ದೇವೆ.

ಪಂಚಾಕ್ಷರ ಮತ್ತು ಷಡಕ್ಷರಗಳ ಪರಸ್ಪರ ಸಂಬಂಧಃ— ಪಂಚಾಕ್ಷರವು ಕೇವಲ ಶಕ್ತಿ ಮಂತ್ರವು. ಆದರೆ ಷಡಕ್ಷರವು ಶಿವ ಮಂತ್ರವೆಂದು ಹೇಳಲ್ಪಡುತ್ತದೆ. ಶಕ್ತಿ ಮಂತ್ರದಲ್ಲಿ ಓಂಕಾರ ಸಂಬಂಧಿಸಿದಲ್ಲಿ ಅದು ಶಿವ ಮಂತ್ರ ಅಥವಾ ಶಿವಶಕ್ತಿ ಮಂತ್ರವೆಂದು ಹೇಳಲ್ಪಡುತ್ತದೆ. ಓಂಕಾರದ ಸಂಬಂಧದಿಂದ ಶಕ್ತಿಗಳು ವ್ಯವಸ್ಥಿತವಾಗಿ ಲಿಂಗದೊಡನೆ ಹರಿಯುವವು. ಇದನ್ನೇ ವೀರಶೈವರು ಜಪಿಸುವುದು.

ಮೂರು ಶರೀರಗಳಿಗೆ ಪ್ರಣವ ಸಂಬಂಧಃ— ಶರೀರಗಳು ಸ್ಥೂಲ, ಸೂಕ್ಷ್ಮ, ಕಾರಣಗಳೆಂದು ಇವೆ. ಸ್ಥೂಲ ಶರೀರದಲ್ಲಿ ಬಕಾರವು, ಸೂಕ್ಷ್ಮ ಶರೀರದಲ್ಲಿ ಸಕಾರವು, ಕಾರಣ ಶರೀರದಲ್ಲಿ ವಕಾರವು ಇರುತ್ತವೆ.

ನಾದಬಿಂದುಕಳೆಗಳಿಗೆ ಪ್ರಣವ ಸಂಬಂಧಃ— ನಾದದಲ್ಲಿ ಅಕಾರವು, ಬಿಂದುವಿನಲ್ಲಿ ಉಕಾರವು, ಕಳೆಯಲ್ಲಿ ಮಕಾರವು ಇರುತ್ತವೆ.

ಜೀವತ್ರಯುಗಳಿಗೆ ಪ್ರಣವ ಸಂಬಂಧಃ— ವಿಶ್ವ ತೈಜಸ, ಪ್ರಾಜ್ಞ ಇವು ಜೀವತ್ರಯುಗಳು. ವಿಶ್ವದಲ್ಲಿ ಅಕಾರವು, ತೈಜಸದಲ್ಲಿ ಉಕಾರವು ಪ್ರಾಜ್ಞದಲ್ಲಿ ಮಕಾರವು ಇರುತ್ತವೆ.

ಶೂನ್ಯ ಚಕ್ರಗಳಲ್ಲಿ ಪ್ರಣವ ಸಂಬಂಧಃ— ಬ್ರಹ್ಮ ರಂಧ್ರದಲ್ಲಿ ಓಂಕಾರ, ಅಕಾರ, ಬಕಾರಗಳು ಶಿಖಿಯಲ್ಲಿ ಕ್ಷಕಾರ ಉಕಾರ, ಸಕಾರ ಗಳು ಮತ್ತು ಪಶ್ಚಿಮ ಚಕ್ರದಲ್ಲಿ ಹಕಾರ, ಮಕಾರ, ವಕಾರಗಳು ಇರುತ್ತವೆ.

ಪಂಚಭೂತಗಳಿಗೆ ಪ್ರಣವ ಸಂಬಂಧಃ— ಪ್ರಕೃತಿ ಅಥವಾ ಆತ್ಮ ನಲ್ಲಿ ಓಂಕಾರವು. ಪೃಥ್ವಿಯಲ್ಲಿ ನಕಾರವು ಅಪ್ಪುವಿನಲ್ಲಿ ಮಕಾರವು ಅಗ್ನಿಯಲ್ಲಿ ಶಿಕಾರವು ವಾಯುವಿನಲ್ಲಿ ವಕಾರವು ಆಕಾಶದಲ್ಲಿ ಯಕಾರವು ಇರುತ್ತವೆ.

ಕರ್ಮೇಂದ್ರಿಯುಗಳಿಗೆ ಪ್ರಣವ ಸಂಬಂಧಃ—

(ಅ) ಇವು ವಾಕ್ಕು ಪಾಣಿ ಪಾದ ಪಾಯುಗುಹ್ಯಗಳಿವೆ. ವಾಕ್ಕಿನಲ್ಲಿ ಯಕಾರ ಪಾಣಿಯಲ್ಲಿ ವಕಾರ ಪಾದದಲ್ಲಿ ಶಿಕಾರ ಪಾಯುವಿನಲ್ಲಿ ಮಕಾರ ಮತ್ತು ಗುಹ್ಯದಲ್ಲಿ ನಕಾರ ಇರುತ್ತವೆ.

(ಬ) ಮಸ್ತಕ, ಮುಖ, ಹೃದಯ, ಗುಹ್ಯ ಮತ್ತು ಪಾದಗಳು ಶರೀರದ ಅವಯವಗಳು. ಮಸ್ತಕದಲ್ಲಿ ಯಕಾರವು, ಮುಖದಲ್ಲಿ ವಕಾರವು, ಹೃದಯದಲ್ಲಿ ಶಿಕಾರವು, ಗುಹ್ಯದಲ್ಲಿ ಮಕಾರವು, ಪಾದದಲ್ಲಿ ನಕಾರವು ಇರುತ್ತವೆ.

ಜ್ಞಾನೇಂದ್ರಿಯುಗಳಿಗೆ ಪ್ರಣವ ಸಂಬಂಧಃ—

(ಅ) ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ಹೃದಯೇಂದ್ರಿಯ ಇವು ಜ್ಞಾನೇಂದ್ರಿಯುಗಳು. ಶ್ರೋತ್ರಕ್ಕೆ ಯಕಾರ, ತ್ವಕ್ಕಿಗೆ ವಕಾರ, ನೇತ್ರಕ್ಕೆ ಶಿಕಾರ, ಜಿಹ್ವೆಗೆ ಮಕಾರ, ಘ್ರಾಣಕ್ಕೆ ನಕಾರ ಮತ್ತು ಹೃದಯೇಂದ್ರಿಯಕ್ಕೆ ಓಂಕಾರ ಸಂಬಂಧವಿರುತ್ತವೆ.

(ಬ) ಲಲಾಟ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ನಾಸಾಪುಟ ಇವು ಶರೀರದ ಅವಯವಗಳು. ಲಲಾಟದಲ್ಲಿ ಓಂಕಾರ, ಶ್ರೋತ್ರ

ದಲ್ಲಿ ಯಕಾರ, ತ್ವಕ್ಕಿನಲ್ಲಿ ವಕಾರ, ನೇತ್ರದಲ್ಲಿ ಶಿಕಾರ, ಜಿಹ್ವೆಯಲ್ಲಿ ಮಕಾರ, ನಾಸಾಪುಟದಲ್ಲಿ ನಕಾರ ಇವುಗಳು ಇರುತ್ತವೆ.

ವಿಷಯಗಳಿಗೆ ಪ್ರಣವ ಸಂಬಂಧಃ— ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಶರೀರ ವಿಷಯಗಳು. ಶಬ್ದಕ್ಕೆ ಯಕಾರ, ಸ್ಪರ್ಶನಕ್ಕೆ ವಕಾರ, ರೂಪಕ್ಕೆ ಶಿಕಾರ, ರಸಕ್ಕೆ ಮಕಾರ, ಗಂಧಕ್ಕೆ ನಕಾರ, ಸಂಬಂಧವಿರುತ್ತವೆ.

ಅಂತಃಕರಣಗಳಿಗೆ ಪ್ರಣವ ಸಂಬಂಧಃ— ಇವು ಚಿತ್ತು, ಬುದ್ಧಿ, ಅಹಂಕಾರ, ಮನ, ಜ್ಞಾನಗಳಿರುತ್ತವೆ. ಚಿತ್ತಿಗೆ ನಕಾರವು, ಬುದ್ಧಿಗೆ ಮಕಾರವು, ಅಹಂಕಾರಕ್ಕೆ ಶಿಕಾರವು, ಮನಕ್ಕೆ ವಕಾರವು, ಜ್ಞಾನಕ್ಕೆ ಯಕಾರವು ಸಂಬಂಧಪಡುತ್ತವೆ.

ವಾಯುಗಳಿಗೆ ಪ್ರಣವ ಸಂಬಂಧಃ— ಪ್ರಾಣ, ಅಪಾನ, ವ್ಯಾನ, ಉದಾನ ಸಮಾನ ಇವು ವಾಯುಗಳು. ಪ್ರಾಣಕ್ಕೆ ನಕಾರವು, ಅಪಾನಕ್ಕೆ ಮಕಾರವು, ವ್ಯಾನಕ್ಕೆ ಶಿಕಾರವು, ಉದಾನಕ್ಕೆ ವಕಾರವು, ಸಮಾನಕ್ಕೆ ಯಕಾರವು ಸಂಬಂಧಪಡುತ್ತವೆ.

ಸಪ್ತಧಾತುಗಳಿಗೆ ಪ್ರಣವ ಸಂಬಂಧಃ—

೧ನೇ ವಿಧಃ— ತ್ವಕ್ಕು, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ, ಇವು ಧಾತುಗಳು. ತ್ವಕ್ಕಿಗೆ ಓಂಕಾರ, ರುಧಿರಕ್ಕೆ ನಕಾರ, ಮಾಂಸಕ್ಕೆ ಮಕಾರ, ಮೇಧಸ್ಸಿಗೆ ಶಿಕಾರ. ಅಸ್ಥಿಗೆ ವಕಾರ, ಮಜ್ಜೆಗೆ ಯಕಾರ ಸಂಬಂಧಿಸುತ್ತವೆ.

(ಬ) ೨ನೇ ವಿಧಃ— ಚರ್ಮ, ಅಸ್ಥಿ, ಮಾಂಸ, ಮಜ್ಜೆ, ರಕ್ತ, ಪ್ರಾಣ ಇವು ಧಾತುಗಳು. ಚರ್ಮದಲ್ಲಿ ನಕಾರವು, ಅಸ್ಥಿಯಲ್ಲಿ ಮಕಾರವು. ಮಾಂಸದಲ್ಲಿ ಶಿಕಾರವು, ಮಜ್ಜೆಯಲ್ಲಿ ವಕಾರವು, ರಕ್ತದಲ್ಲಿ ಯಕಾರವು, ಪ್ರಾಣದಲ್ಲಿ ಓಂಕಾರವು, ಸಂಬಂಧಪಡುತ್ತವೆ.

ಶ್ಲೇಷ್ಮ, ಶುಕ್ಲ, ರಸ, ಪಿತ್ತ ಇವುಗಳಿಗೆ ಪ್ರಣವ ಸಂಬಂಧಃ— ಶ್ಲೇಷ್ಮಕ್ಕೆ ಯಕಾರ, ಶುಕ್ಲಕ್ಕೆ ಶಿಕಾರ, ರಸಕ್ಕೆ ನಕಾರ, ಪಿತ್ತಕ್ಕೆ ವಕಾರ ಸಂಬಂಧಪಡುತ್ತವೆ.

ಮನುಷ್ಯನಿಗೆ ಕ್ಷುಧೆ, ತೃಷೆ, ನಿದ್ರೆ, ಆಲಸ್ಯ, ಸಂಗ ಇವುಗಳಿರುತ್ತವೆ. ಕ್ಷುಧೆಯಲ್ಲಿ ನಕಾರವು, ತೃಷ್ಣೆಯಲ್ಲಿ ಮಕಾರವು, ನಿದ್ರೆಯಲ್ಲಿ ಶಿಕಾರವು, ಆಲಸ್ಯದಲ್ಲಿ ವಕಾರವು, ಸಂಗದಲ್ಲಿ ಯಕಾರವು ಸಂಬಂಧಪಡುತ್ತವೆ. ಇವುಗಳಿಂದ ಇಂಥವುಗಳ ಆಸಕ್ತಿಯನ್ನು ದೂರ ಮಾಡಬಹುದು.

ಮನುಷ್ಯನಿಗೆ ಮೋಹ, ಭಯ, ರಾಗ, ಲಜ್ಜೆ ದ್ವೇಷಗಳಿರುತ್ತವೆ. ಮೋಹದಲ್ಲಿ ಯಕಾರ, ಭಯದಲ್ಲಿ ವಕಾರ, ರಾಗದಲ್ಲಿ ಶಿಕಾರ, ಲಜ್ಜೆಯಲ್ಲಿ ಮಕಾರ, ದ್ವೇಷದಲ್ಲಿ ನಕಾರ ಸಂಬಂಧಪಡುತ್ತವೆ. ಇವುಗಳ ಮೂಲಕ ಈ ದೋಷಗಳನ್ನು ದೂರಮಾಡಬಹುದು.

ಪದಾರ್ಥಗಳಿಗೆ ಕಠಿಣ ಅಥವಾ ಮೃದು ಹೀಗೆ ಧರ್ಮಗಳಿರುತ್ತವೆ. ಕ್ಲಂ ಇದು ಕಠಿಣಕ್ಕೆ, ಕ್ಲಿಂ ಇದು ಮೃದುವಿಗೆ ಸಂಬಂಧವಿರುತ್ತವೆ.

ಮನುಷ್ಯನಿಗೆ ಅಸ್ತಿ, ಮಾಂಸ, ತ್ವಕ್ಕು, ನಾಡಿ, ರೋಮಗಳಿವೆ. ಇವುಗಳಲ್ಲಿ ಅಸ್ತಿಗೆ ನಕಾರ, ಮಾಂಸಕ್ಕೆ ಮಕಾರವು, ತ್ವಕ್ಕಿಗೆ ಶಿಕಾರವು, ನಾಡಿಗೆ ವಕಾರವು, ರೋಮಕ್ಕೆ ಯಕಾರವು ಸಂಬಂಧಪಡುತ್ತವೆ.

ಶರೀರದ ಪಾರ್ಶ್ವಗಳಿಗೆ ಪ್ರಣವ ಸಂಬಂಧಃ— ಶರೀರದ ಬಲಭಾಗದಲ್ಲಿ ಓಂಕಾರ, ಎಡಭಾಗದಲ್ಲಿ ಉಕಾರ, ಮುಂಭಾಗದಲ್ಲಿ ಅಕಾರ, ಹಿಂಭಾಗದಲ್ಲಿ ಮಕಾರ, ಊರ್ಧ್ವಭಾಗದಲ್ಲಿ ಹಕಾರಗಳಿರುತ್ತವೆ.

ಶರೀರಕ್ಕೆ ಪ್ರಣವ ಸಂಬಂಧಃ—

(ಅ) ಶರೀರಕ್ಕೆ ಮುಖ, ಎರಡು ಭುಜಗಳು, ದೇಹಮಧ್ಯ, ಎರಡು ಪಾದಗಳು ಇರುತ್ತವೆ. ಮುಖದಲ್ಲಿ ಓಂಕಾರ, ಎರಡು ಭುಜಗಳಲ್ಲಿ ವಕಾರ ಯಕಾರಗಳು, ದೇಹಮಧ್ಯದಲ್ಲಿ ಶಿಕಾರ, ಎರಡು ಪಾದಗಳಲ್ಲಿ ನಕಾರ ಮಕಾರಗಳಿರುತ್ತವೆ.

(ಇ) ಶರೀರಕ್ಕೆ ಬಲಪಾದ, ಎಡಪಾದ, ಮಧ್ಯಪಾದ, ಬಲಹಸ್ತ, ಎಡಹಸ್ತ, ಮತ್ತು ಮಸ್ತಕಗಳಿವೆ. ಬಲಪಾದದಲ್ಲಿ ವಕಾರ, ಎಡಪಾದ

ದಲ್ಲಿ ಮಕಾರ, ಮಧ್ಯನಾಭಿಯಲ್ಲಿ ಶಿಕಾರ, ಬಲಹಸ್ತದಲ್ಲಿ ವಕಾರ, ಎಡಹಸ್ತದಲ್ಲಿ ಯಕಾರ ಮತ್ತು ಮಸ್ತಕದಲ್ಲಿ ಓಂಕಾರಗಳಿರುತ್ತವೆ.

ಶರೀರದ ಉಪಾಂಗಗಳಲ್ಲಿ ಪ್ರಣವ ಸಂಬಂಧಃ—

(ಅ) ಬಲಹಸ್ತದ ಮಧ್ಯದಲ್ಲಿ ಓಂಕಾರ, ಹೆಬ್ಬೆರಳಿನಲ್ಲಿ ಯಕಾರ, ಉಳಿದ ನಾಲ್ಕು ಬೆರಳುಗಳಲ್ಲಿ ನ, ಮ, ಶಿ, ವ ಈ ಪ್ರಣವಗಳು ಸಂಬಂಧಿಸುತ್ತವೆ.

ಹಸ್ತದ ಮೇಲಭಾಗಕ್ಕೆ ಅಕಾರ, ಮುಂಗಯ್ಯಿಗೆ ಬಕಾರ, ಮೊಳಕೆಯ್ಯಿಗೆ ಉಕಾರ, ರಟ್ಟೆಯಲ್ಲಿ ಸಕಾರ, ಭುಜದಲ್ಲಿ ಮಕಾರ, ಹೆಗಲಲ್ಲಿ ವಕಾರ ಸಂಬಂಧಿಸುತ್ತವೆ.

(ಬ) ಉಭಯ ತಳಪಾದದಲ್ಲಿ ಓಂಕಾರ, ಉಭಯ ಪಾದಾಂಗುಷ್ಠದಲ್ಲಿ ಯಕಾರ, ಉಭಯ ನಾಲ್ಕು ಬೆರಳುಗಳಲ್ಲಿ ನ, ಮ, ಶಿ, ವ ಈ ನಾಲ್ಕು ಪ್ರಣವಗಳು ಸಂಬಂಧಿಸುತ್ತವೆ.

ಉಭಯ ಪಾದದ ಮೇಲು ಭಾಗದಲ್ಲಿ ಅಕಾರ, ಉಭಯ ಪಾದದ ಹರಡಿನಲ್ಲಿ ಉಕಾರ, ಉಭಯಪಾದ ದಂತದ ಹರಡಿನಲ್ಲಿ ಬಕಾರ, ಉಭಯ ಪಾದದ ಹಿಮ್ಮಡದಲ್ಲಿ ಮಕಾರ, ಉಭಯ ಕಣಕಾಲಲ್ಲಿ ನಕಾರ, ಉಭಯಪಾದ ಮೊಳಕಾಲಲ್ಲಿ ಹಕಾರ, ಕಿರುದೊಡೆಗಳಲ್ಲಿ ಅಕಾರ, ಹಿಂದೊಡೆಗಳಲ್ಲಿ ಉಕಾರ, ಉಭಯಾಂಗದಲ್ಲಿ ಮಕಾರ ಸಂಬಂಧಿಸುತ್ತವೆ.

ಉಭಯ ಬರಕಿಯಲ್ಲಿ ನಮಶ್ಶಿವಾಯ, ಉಭಯ ಮೊಲೆಯಲ್ಲಿ ಓಂಕಾರ; ಕಕ್ಷೆಯಲ್ಲಿ ಅಕಾರ, ಹೃದಯದಲ್ಲಿ ಉಕಾರ, ಕಂಠದಲ್ಲಿ ಮಕಾರ; ಉಭಯ ಬಗಲಲ್ಲಿ ಬಕಾರ, ಹೆಡಕಿನಲ್ಲಿ ಸಕಾರ, ಹೆಡಕಿನ ಎಡಬಲದಲ್ಲಿ ವಕಾರ; ಉಭಯಕರ್ಣದಲ್ಲಿ ಓಂಕಾರ, ಆಲಿಯಲ್ಲಿ ಯಕಾರ, ಕಿರಿಯಾಲಿಯಲ್ಲಿ ವಕಾರ; ಕರ್ಣ ಮತ್ತು ಊರ್ಧ್ವ ಭಾಗದ ನಯನಗಳಲ್ಲಿ ಅಕಾರ ಬಕಾರಗಳು, ಎಡಭಾಗದ ನಯನಗಳಲ್ಲಿ ಉಕಾರ ಸಕಾರಗಳು, ಉಭಯ ನಯನ ಮಧ್ಯದಲ್ಲಿ ಮಕಾರ ವಕಾರಗಳು, ಉಭಯ ಗಲ್ಲಗಳಲ್ಲಿ ಓಂಕಾರ ಇವುಗಳು ಸಂಬಂಧಪಡುತ್ತವೆ.

ಚಕ್ರಗಳಿಗೆ ಪ್ರಣವು ಸಂಬಂಧಃ— ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ, ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಕಾರ, ವಿಶುದ್ಧಿಯಲ್ಲಿ ಯಕಾರ, ಆಜ್ಞೆಯಲ್ಲಿ ಓಂಕಾರಗಳು ಇರುತ್ತವೆ.

ರೇಚಕದಲ್ಲಿ ಅಕಾರ, ಪೂರಕದಲ್ಲಿ ಉಕಾರ, ಕುಂಭಕದಲ್ಲಿ ಮಕಾರ ಸಂಬಂಧಿಸುತ್ತವೆ.

ಟೀಪುಃ— ಶಿವಶರಣರು ಶರೀರ, ಪದಾರ್ಥ, ಗುಣ ಮತ್ತು ಅವಯವ ಇವುಗಳು ಯಾವ ಪ್ರಣವುಕ್ಕೆ ಸಂಬಂಧಿಸಿವೆ ಎಂಬುದನ್ನು ಹೇಳುವಲ್ಲಿ ಅವರು ಕೆಲವೊಂದು ಕಾರಣವನ್ನು ಮುಂದಿಟ್ಟುಕೊಂಡು ಸಂಬಂಧವನ್ನು ಹೇಳುವದುಂಟು. ಪಂಚಭೂತಗಳಿಂದ ಜಗತ್ತಿನಲ್ಲಿಯ ಪ್ರತಿಯೊಂದು ಪದಾರ್ಥವು ಉತ್ಪನ್ನವಾಗುತ್ತದೆಂದು ಹಿಂದೂ ಜನರ ಮುಖ್ಯ ತತ್ವವಿದೆ. ಇದಕ್ಕನುಸರಿಸಿಯೇ ಶಿವಶರಣರಲ್ಲಿ ಪ್ರಣವು ಪಂಚಾಕ್ಷರಿಯ ರಚನೆ ಇದೆ. ಅದರ ಪ್ರತಿಯೊಂದು ಪ್ರಣವವು ಒಂದೊಂದು ಭೂತಕ್ಕೆ ಸಂಬಂಧಿಸಿದೆ. ಆದ್ದರಿಂದ ಪಂಚಭೂತಗಳ ಗುಣಗಳನ್ನು ಮೊದಲು ಅರಿತುಕೊಳ್ಳಬೇಕು. ಉದಾ॰— ಪೃಥ್ವಿಯ ತತ್ವವು ಎಲ್ಲಕ್ಕೂ ಸ್ಥೂಲವಾದದ್ದು. ಭೂತಗಳು ಮುಂದೆ ಸೂಕ್ಷ್ಮವಾಗುತ್ತವಾಗುತ್ತ ಆಕಾಶತತ್ವದ ವರೆಗೂ ಹೋಗುತ್ತವೆ. ಹೀಗೆ ಪೃಥ್ವಿ, ಅಪ್ಪು, ತೇಜ, ವಾಯು, ಅಕಾಶ ಇವುಗಳ ಗುಣಗಳಂತೆ ಪದಾರ್ಥಗಳಲ್ಲಿಯೂ ವಿಭಾಗಗಳು ಉಂಟಾಗಿವೆ. ಹೀಗೆ ಆಯಾ ಇಂದ್ರಿಯಗಳಲ್ಲಿ, ವಿಷಯಗಳಲ್ಲಿ, ಪದಾರ್ಥಗಳ ಗುಣಗಳಲ್ಲಿ, ರಚನೆಯಲ್ಲಿ ಕ್ರಿಯೆಗಳಲ್ಲಿ ಪಂಚಮಹಾಭೂತಗಳ ಪ್ರಕಾರ ಐದೈದು ವಿಭಾಗಗಳು ಕಲ್ಪಿಸಲ್ಪಟ್ಟಿವೆ. ಈ ವಿಭಾಗಗಳು ಮೊದಲು ಸ್ಥೂಲವಾಗಿದ್ದು ಬರಬರುತ್ತ ಅವು ಸೂಕ್ಷ್ಮವಾಗುತ್ತ ಹೋಗುತ್ತವೆ. ಹೀಗಾಗಲಿಕ್ಕೆ ಅವುಗಳಲ್ಲಿರುವ ಪಂಚಭೂತ ತತ್ವಗಳೇ ಕಾರಣಗಳಾಗಿವೆ. ಮಂತ್ರಗಳನ್ನು ಸಂಬಂಧಿಸುವಲ್ಲಿ ವಾಚಕರು ಈ ತೆರದ ಭೇದಗಳನ್ನು ಮೊದಲು ಅರಿತುಕೊಳ್ಳಬೇಕು. ಅರಿತುಕೊಂಡಲ್ಲಿ ಕೆಲವೊಂದು ಪದಾರ್ಥಕ್ಕೆ ಒಂದು ವಿಶಿಷ್ಟ ಪ್ರಣಮವನ್ನು ಏಕೆ ಶಿವಶರಣರು ಇಟ್ಟಿರುವರೆಂಬುದು ತಿಳಿಯುತ್ತದೆ. ಬೇರೆ ಬೇರೆ ಪ್ರಣಮಗಳಿಂದಲೇ ಆಯಾ ಗುಣಗಳು ಆಯಾ ಪದಾರ್ಥಗಳಲ್ಲಿ ಉಂಟಾಗಿರುತ್ತವೆಂದು ಅವರ ತತ್ವವಿದೆ. ಆದ್ದರಿಂದ ಆಯಾ ಪದಾರ್ಥಗಳನ್ನು ಆ

ಪ್ರಣವುಕ್ಕೆಯೇ ಸಂಬಂಧಿಸತಕ್ಕದ್ದು. ಹೀಗೆಯೇ ಶರೀರವು, ಶರೀರದ ಮುಖ್ಯ ಭಾಗಗಳು, ಅದರ ಅವಯುವಗಳು ಸಹ ಬೇರೆ ಬೇರೆ ಪ್ರಣವುಗಳಿಗೆ ಸಂಬಂಧಪಡುತ್ತವೆ. ಒಮ್ಮೊಮ್ಮೆ ಪದಾರ್ಥಗಳ ಕೆಲವೊಂದು ವರ್ಗವನ್ನು ಕಲ್ಪಿಸುವಲ್ಲಿ ಒಂದು ದೃಷ್ಟಿಯನ್ನಿಟ್ಟುಕೊಂಡು ಅದನ್ನು ರಚಿಸಿರುತ್ತಾರೆ. ಆದರೆ ಬೇರೊಂದು ವರ್ಗವನ್ನು ಕಲ್ಪಿಸುವಲ್ಲಿ ಬೇರೊಂದು ದೃಷ್ಟಿಯು ಅಥವಾ ಉದ್ದೇಶವು ಅವರಿಗೆ ಇರುವದರಿಂದ ಆಗ ಮೊದಲಿನ ವರ್ಗದಲ್ಲಿ ಕೆಲವೊಂದು ಸ್ಥಾನ ಹೊಂದಿದ ಪದಾರ್ಥವು ಬೇರೆ ವರ್ಗದಲ್ಲಿ ಬೇರೆ ಸ್ಥಾನ ವನ್ನು ಹೊಂದಬಹುದು. ಆದ್ದರಿಂದ ಪ್ರಣವುಗಳು ಆಯಾ ವರ್ಗಗಳ ಪ್ರಕಾರ ಬೇರೆ ಬೇರೆಯಾಗುತ್ತವೆಂಬುದನ್ನು ವಾಚಕರು ಲಕ್ಷಿಸಬೇಕು. ಮನುಷ್ಯನಿಗೆ ಅನೇಕ ತರದ ವಿಕಾರಗಳೂ ಇರುತ್ತವೆ. ಅವು ಗಳನ್ನು ದೂರಮಾಡುವಲ್ಲಿ ಅವುಗಳಿಗೂ ಕೂಡ ಪ್ರಣವುಗಳನ್ನು ಸಂಬಂಧಿಸಬೇಕು. ಇವು ಸಹ ಮಂತ್ರಸಂಬಂಧದಲ್ಲಿ ಬರುತ್ತವೆ. ಮನುಷ್ಯನು ಕ್ರಿಯಾರಹಿತನಾಗಬೇಕಾಗುತ್ತದೆ. ಅಂದರೆ ಅವನು ಯಾವ ಗುಣಗಳಿಗೂ ಕೂಡ ಅಲಿಪ್ತನಾಗಿರಬೇಕಾಗುತ್ತದೆ. ಇದರಿಂದ ಕರ್ಮವು ಅವನಿಗೆ ಅಂಟಿಕೊಳ್ಳುವದಿಲ್ಲ. ಇದು ಈ ಪ್ರಣವುಗಳನ್ನು ಸಂಬಂಧಿಸುವದರಿಂದ ಸಾಧ್ಯವಾಗುತ್ತದೆ. ಈ ತತ್ವವನ್ನು ಶಿವಶರಣರು ಅಂಗೀಕರಿಸಿ ಮಂತ್ರಸಂಬಂಧ ಮಾಡಿದ್ದಾರೆ. ಇದರಿಂದ ದುರ್ವ್ಯಾಪಾರ ಗಳು ಸಹ ಮನುಷ್ಯನಲ್ಲಿ ಅಡಗುವವೆಂದು ಅವರು ಭಾವಿಸಿರುತ್ತಾರೆ.

ಈ ಪ್ರಣವುಗಳಲ್ಲಿ ಬ, ಸ, ವ, ಅ, ಉ, ಮ ಎಂಬ ಸೂಕ್ಷ್ಮ ಪ್ರಣವುಗಳಿವೆ. ಅವುಗಳಲ್ಲಿ ಅ, ಉ, ಮ ಪ್ರಣವುಗಳು ಬ, ಸ, ವ ಪ್ರಣವುಗಳಿಗಿಂತ ಹೆಚ್ಚಿಗೆ ಸ್ಥೂಲವಾದವುಗಳು. ಆದ್ದರಿಂದ ಯಾವ ಕ್ರಿಯೆಗಳು ಇನ್ನಿತರ ಕ್ರಿಯೆಗಳಿಂದ ಅಥವಾ ಅವಯುವಗಳಿಂದ ಉತ್ಪನ್ನನಾಗೀುತ್ತವೆಯೋ ಅಂಥ ಮೂಲ ಕ್ರಿಯೆಗಳು ಅಥವಾ ಶರೀರದ ಮುಖ್ಯ ಭಾಗಗಳು ಅವುಗಳ ಉಪಭಾಗಗಳಿಗಿಂತಲೂ ಸೂಕ್ಷ್ಮ ವಾದವುಗಳು. ಇದಕ್ಕನುಸರಿಸಿ ಅ, ಉ, ಮ. ಬ, ಸ, ವ ಪ್ರಣವುಗಳನು ವಚನಕಾರರು ಇಟ್ಟಿದ್ದಾರೆ. ಅವು ಮೊದಲು ಶೂನ್ಯಸ್ಥಲಗಳಿಂದ ಹೊರ ಟಂಥವು ಇರುತ್ತವೆ. ಮೂಲ ಭಾಗಗಳಿಗೆ ಬ, ಸ, ವ ಪ್ರಣವುಗಳನ್ನು ಮತ್ತು ಉಪಭಾಗಗಳಿಗೆ ಅ, ಉ, ಮ ಪ್ರಣವುಗಳನ್ನು ಅವರು ಸಂಬಂಧಿಸುತ್ತಾರೆ.

ಹಾಗೆಯೇ ಮನುಷ್ಯನ ಸುತ್ತಲೂ ಅವನ ಗುಣಗಳಿಗೆ ಅನುಸಾರವಾಗಿ ಶಕ್ತಿಗಳು ಸಂಚರಿಸುತ್ತಿರುತ್ತವೆ. ಆದ್ದರಿಂದ ಅಲ್ಲಿಯೂ ಅವರು ಪ್ರಣವುಗಳನ್ನು ಇಟ್ಟಿದ್ದಾರೆ.

ಆದರೆ ಈ ಎಲ್ಲ ವಿಷಯಗಳಲ್ಲಿ ನಡೆಯುವವನ ಉಚ್ಚ ವರ್ತನೆ, ಉಜ್ವಲ ಭಾವನೆ, ಮನಸ್ಸಿನ ಏಕಾಗ್ರತೆ ಇವು ಅವಶ್ಯವಿರುವದರಿಂದ ಅವುಗಳ ಪ್ರಭಾವದಿಂದ ಮನುಷ್ಯನು ಹೀಗೆ ಮಂತ್ರಮಯನಾಗಿ ಆಚರಿಸುತ್ತಾನೆ. ಹೀಗೆ ಆಚರಿಸುತ್ತ ಅವನು ಆತ್ಮೋದ್ಧಾರವನ್ನು ಮಾಡಿಕೊಳ್ಳುತ್ತಾನೆ. ಹೀಗೆ ಮಂತ್ರದ ಬಗ್ಗೆ ಶಿವಶರಣರ ವಿಚಾರಗಳಿವೆ.

ಪಂಚ ಪಂಚಾಕ್ಷರಗಳು:— ಇವು ಮೂಲ ಪಂಚಾಕ್ಷರ, ಸ್ಥೂಲ ಪಂಚಾಕ್ಷರ, ಸೂಕ್ಷ್ಮ ಪಂಚಾಕ್ಷರ, ಮಾಯಾಖ್ಯ ಪಂಚಾಕ್ಷರ, ಪ್ರಸಾದ ಪಂಚಾಕ್ಷರ ಎಂದು ಐದು ಇರುತ್ತವೆ. ಇವುಗಳಲ್ಲಿ ಒಟ್ಟು ೩೮ ಪ್ರಣಮಗಳಿರುತ್ತವೆ. ಪಂಚಾಕ್ಷರಿಯ ಉಪಯೋಗವು ಧ್ಯಾನದಲ್ಲಿ, ಪೂಜೆಯಲ್ಲಿ, ನ್ಯಾಸದಲ್ಲಿ, ಆಚರಣೆಯಲ್ಲಿ, ನಿತ್ಯದ ನಡೆಯಲ್ಲಿ, ನಿಂತಲ್ಲಿ ಕುಳಿತಲ್ಲಿ ನೋಡಿದಲ್ಲಿ ಎಲ್ಲೆಲ್ಲಿಯೂ ಇರುತ್ತದೆ. ಅದರ ಮೂಲಕ ಮನುಷ್ಯನು ತನ್ನಲ್ಲಿ ಲಿಂಗವೃತ್ತಿಯನ್ನು ನೆಲೆಗೊಳಿಸುತ್ತಾನೆ. ನಿಷ್ಕಾಮಂತರು ಪರಮಾತ್ಮನ ನಾಮಸಂಕೀರ್ತನವನ್ನು ಮಾಡುವದುಂಟು. ಆದರೆ ವೀರಶೈವನು ಲಿಂಗಿಯಾದ್ದರಿಂದ ಅವನು ಪಂಚಾಕ್ಷರಗಳ ಉಪಯೋಗವನ್ನು ಮಾಡಿಕೊಳ್ಳುತ್ತಾನೆ. ಆದ್ದರಿಂದ ಅವುಗಳ ಸಂಬಂಧವನ್ನು ಅವನು ಅರಿತುಕೊಳ್ಳಬೇಕು. ಹೀಗೆ ಅರಿತು ಆಚರಿಸಿದಲ್ಲಿ ಅವನಲ್ಲಿ ದುಷ್ಟವಾಸನೆಗಳು ಉಂಟಾಗಲಾರವು. ಅವನಲ್ಲಿ ದುಷ್ಟ ಪ್ರವೃತ್ತಿಗಳು ಅಳಿಗುವವು. ಭೂತ ಪಿಶಾಚಿಗಳು ಅವನನ್ನು ಸಮೀಪಿಸಲು ಹಿಂಜರಿಯುತ್ತವೆ. ಪಂಚಾಕ್ಷರವು ಕೇವಲ ಆರಕ್ಷರದ ಮಂತ್ರವು. ಆದರೆ ಅದರ ಉಪಯೋಗವು ಷಟ್‌ಸ್ಥಲವನ್ನರಿತವನಿಗೆ ತಿಳಿಯುವದು. ಅವನು ಹೀಗೆ ಅರಿತು ಆಚರಿಸಿದಲ್ಲಿ ಈ ಮಂತ್ರಾಕ್ಷರಗಳು ಅವನ ಆಯಾ ಸ್ಥಾನಗಳಲ್ಲಿ ದೃಢಪಡುವವು. ಆಗ ಅವುಗಳಿಂದ ಆಯಾ ಶಕ್ತಿಗಳು ಹೊರಡುವವು. ಈ ಶಕ್ತಿಗಳ ಮೂಲಕ ಕರ್ಮಗಳು ಅವನನ್ನು ಮುಟ್ಟಲಾರವು. ಈ ಪ್ರಕಾರ ವೀರಶೈವನು ಪಂಚಾಕ್ಷರ ಮಂತ್ರ ಮೂಲಕ ಶಿವಸಾಮರಸ್ಯವನ್ನು ಹೊಂದುತ್ತಾನೆ.

ನವಪ್ರಣವುಗಳುಃ— ಅ, ಉ, ಮ, ಓಂ, ನ, ಮ, ಶಿ, ವಾ, ಯ, ಇವುಗಳು ನವಪ್ರಣವುಗಳು. ಇವುಗಳ ಭಾವವು ಹಿಂದೆ ವಿವರಿಸಲ್ಪಟ್ಟಿದೆ.

ಷಟ್‌ಸ್ಥಲದಲ್ಲಿ ಅ ಉ ಮಾಕ್ಷರಗಳ ಸಂಬಂಧಃ— ಷಟ್‌ಸ್ಥಲದಲ್ಲಿ ಏಕವಿಧ, ದ್ವಿವಿಧ, ತ್ರಿವಿಧ ಮತ್ತು ಷಡ್ವಿಧ ಹೀಗೆ ವಿಧಗಳಿವೆ. ಏಕವಿಧವು ಪರಬ್ರಹ್ಮವನ್ನು ಸೂಚಿಸುತ್ತದೆ. ದ್ವಿವಿಧವು ಶಿವ ಶಕ್ತಿ, ಅಂಗ ಲಿಂಗ, ಇವುಗಳನ್ನು ಸೂಚಿಸುತ್ತದೆ. ತ್ರಿವಿಧವು ಅನೇಕವಿದ್ದು ಅವು ಬಹು ಸೂಕ್ಷ್ಮವಾದವು. ಅಲ್ಲಿ ಅ, ಉ, ಮ ಸಂಬಂಧಪಡುತ್ತವೆ. ಷಡ್ವಿಧಕ್ಕೆ ಪ್ರಣವ ಸಹಿತ ಪಂಚಾಕ್ಷರಗಳು ಸಂಬಂಧಪಡುತ್ತವೆ.

ತ್ರಿವಿಧಗಳಲ್ಲಿ ಮುಖ್ಯವು ಯಾವವೆಂದರೆಃ— ತತ್ ತ್ವಂ ಅಸಿ; ಈಡಾ ಪಿಂಗಳ ಸುಷುಮ್ನ; ಸತ್ಕ್ರಿಯೆ ಸಮ್ಯಜ್ಞಾನ ತ್ರಿಕೂಟ; ಚಿದಂಗ ಚಿದ್ಘನಲಿಂಗ ತ್ರಿಕೂಟ; ಚಿನ್ನಾದ ಚಿದ್ಬಿಂದು ಚಿತ್‌ಕಳೆ; ನಾದ ಬಿಂದು ಕಳೆ; ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತ; ಕರುಣಜಲ ವಿನಯಜಲ ಸಮತಾಜಲ; ಲಿಂಗದರೂಪ ಪ್ರಣವಲಿಂಗದ ರುಚಿ ಉಭಯದ ತೃಪ್ತಿ; ತನವಿನ ಕುರುಹು ಉನ್ಮನಿಕುರುಹು ನಿಜದಿರವು; ಗುರು ಲಿಂಗ ಜಂಗಮವು; ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರು; ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ; ಸ್ವಯಜಂಗಮ ಚರಜಂಗಮ ಪರಜಂಗಮ; ಗುರುಪಾದೋದಕ ಲಿಂಗಪಾದೋದಕ ಜಂಗಮಪಾದೋದಕ; ಶುದ್ಧ ಪ್ರಸಾದ ಸಿದ್ಧಪ್ರಸಾದ ಪ್ರಸಿದ್ಧ ಪ್ರಸಾದ; ಕ್ರಿಯಾಭಸಿತ ಜ್ಞಾನಭಸಿತ ಚಿದ್ಘನಭಸಿತ; ನಮಃಶಿವಾಯಓಂ ಅಷ್ಟಾವರಣ ಪಂಚಾಚಾರ ಉಭಯದ ಕೂಟ; ಲಿಂಗದ ಪೀಠ ಊರ್ಧ್ವ ಪೀಠ ಗೋಮುಖ; ಲಿಂಗದ ವೃತ್ತ ಕಟಿ ವರ್ತುಳ; ಶಕ್ತಿಪೀಠ ಶಿವಪೀಠ ಉಭಯದಕೂಟ ಈ ಪ್ರಕಾರ ಗುಂಪುಗಳಿದ್ದು ಈ ಗುಂಪುಗಳಲ್ಲಿ ಷಟ್‌ಸ್ಥಲ ಶಾಸ್ತ್ರಕ್ಕೆ ಸಂಬಂಧಿಸಿದ ವಿಶಿಷ್ಟಾರ್ಥವುಳ್ಳ ಮೂರು ಮೂರು ಶಬ್ದಗಳವೆಯುಷ್ಟೇ. ಈ ಮೂರು ಅನುಕ್ರಮವಾಗಿ ಅ, ಉ, ಮ ಈ ಬೀಜಾಕ್ಷರಗಳಿಗೆ ಸಂಬಂಧಪಡುತ್ತವೆ.

ಇಷ್ಟಲಿಂಗಕ್ಕೆ ತ್ರಿವಿಧಗಳ ಸಂಬಂಧಃ— ಗುರು, ಲಿಂಗ ಜಂಗಮಗಳು; ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳು; ಸ್ವಯ ಚರ ಪರಗಳು, ಇವು ತ್ರಿವಿಧಗಳು ಇದ್ದು ಇವುಗಳಲ್ಲಿ ಮೂರು ಮೂರು ಭಾಗಗಳಿ

ವೆಯಷ್ಟೇ. ಈ ಭಾಗಗಳು ಅನುಕ್ರಮವಾಗಿ ಲಿಂಗದ ಪೀಠ, ಲಿಂಗದ ಮೇಲೂರ್ಧ್ವ, ಮತ್ತು ಲಿಂಗದ ಗೋಮುಖ ಇವುಗಳಿಗೆ ಸಂಬಂಧಿಸುತ್ತವೆ.

ಇಷ್ಟಲಿಂಗಕ್ಕೆ ಪಂಚಾಕ್ಷರ ಸಂಬಂಧಃ— ಗೋಳಕ, ಪೀಠ, ಕಂಠ, ಗೋಮುಖ, ವೃತ್ತ ಎಂದು ಇಷ್ಟಲಿಂಗದಲ್ಲಿ ಭಾಗಗಳಿವೆ. ಇವು ಅನುಕ್ರಮವಾಗಿ ನ,. ಮ, ಶಿ, ವಾ, ಯ ಈ ಪ್ರಣಮಗಳಿಗೆ ಸಂಬಂಧ ಪಡುತ್ತವೆ.

ಪಂಚಾಕ್ಷರಿಯ ಮಿಶ್ರ ಪಂಚೀಕರಣಃ— ಕರ್ಮೇಂದ್ರಿಯಗಳು, ಪಂಚ ವಿಷಯಗಳು. ಜ್ಞಾನೇಂದ್ರಿಯಗಳು, ವಾಯುಗಳು, ಕರಣೇಂದ್ರಿಯಗಳು ಇವು ಮನುಷ್ಯನ ಕ್ರಿಯೆಗಳಿಗೆ ಅವಶ್ಯವಾಗಿ ಬೇಕಾಗುವ ಸಾಧನಗಳಾಗಿವೆ. ಕರ್ಮೇಂದ್ರಿಯಗಳು ಹೆಚ್ಚಿಗೆ ಸ್ಥೂಲವಾಗಿದ್ದು ಮುಂದಿನವುಗಳು ಹೆಚ್ಚು ಹೆಚ್ಚಿಗೆ ಸೂಕ್ಷ್ಮವಾಗುತ್ತ ಹೋಗುತ್ತವೆ. ಈ ಐದು ಗುಂಪುಗಳು ನ, ಮ, ಶಿ, ವಾ, ಯ ಈ ಪಂಚಾಕ್ಷರಗಳಿಗೆ ಅನುಕ್ರಮವಾಗಿ ಸಂಬಂಧಪಡುತ್ತವೆ. ಇದು ಹೇಗೆಂದರೆ, ವಾಕ್ಕು, ಪಾಣಿ, ಪಾದ, ಗುಹ್ಯ, ವಾಯು ಇವು ಕರ್ಮೇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಇವು ಪಂಚ ವಿಷಯಗಳು, ಶ್ರೋತ್ರ, ಚರ್ಮ, ನೇತ್ರ, ಜಿಹ್ವೆ, ಘ್ರಾಣ ಇವು ಜ್ಞಾನೇಂದ್ರಿಯಗಳು, ಸಮಾನ, ಉದಾನ, ವ್ಯಾನ ಅಪಾನ, ಪ್ರಾಣ ಇವುಗಳು ವಾಯುಗಳು, ಅರಿವು, ಮನ, ಹಮ್ಮು ಬುದ್ಧಿ, ಚಿತ್ತ, ಇವು ಕರಣೇಂದ್ರಿಯಗಳು ಇವು ಅನುಕ್ರಮವಾಗಿ ನ, ಮ, ಶಿ, ವಾ, ಯ ಈ ಬೇರೆ ಬೇರೆ ಪ್ರಣಮಗಳಿಗೆ ಸಾಮೂಹಿಕವಾಗಿ ಸಂಬಂಧ ಪಡುತ್ತವೆ. ಈ ಎರಡನೇ ವಿಧ ಸಂಬಂಧಕ್ಕೆ ಪಂಚವಿಂಶತಿ ತತ್ವ ಸಂಬಂಧವೆಂಬ ಹೆಸರು. ಈಗಿನದಕ್ಕೆ ಮಿಶ್ರ ಪಂಚೀಕರಣ ಸಂಬಂಧವೆಂದು ಹೇಳುವದುಂಟು.

ಭಕ್ತನ ಅಂಗವು ಲಿಂಗಮಯವು :— ಮೇಲೆ ನಿರ್ದೇಶವಾದ ಪ್ರಕಾರ ಸಂಬಂಧಪಟ್ಟ ನ, ಮ, ಶಿ, ವಾ, ಯ ಈ ಪ್ರಣಮಗಳಿಗೆ ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಯಾಕಂದರೆ ಮಂತ್ರದಲ್ಲಿಯೇ ಲಿಂಗವಿದೆ. ಆದ್ದರಿಂದ

ಭಕ್ತನ ಚಿತ್ತ, ಬುದ್ಧಿ, ಹಮ್ಮು, ಮನು ಅರಿವು ಇವುಗಳಲ್ಲಿ ಅನುಕ್ರಮವಾಗಿ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಹಾಗೆಯೇ ಪ್ರಾಣ ಅಪಾನ, ವ್ಯಾನ ಉದಾನ ಸಮಾನ, ವಾಯುಗಳಲ್ಲಿ ಘ್ರಾಣ, ಜಿಹ್ವೆ, ನೇತ್ರ, ಚರ್ಮ, ಶ್ರೋತ್ರ ಈ ಜ್ಞಾನೇಂದ್ರಿಯಗಳಲ್ಲಿ, ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ವಿಷಯಗಳಲ್ಲಿ ವಾಯು, ಗುಹ್ಯ, ಪಾದ, ಪಾಣಿ, ವಾಕ್ಕು ಎಂಬ ಕರ್ಮೇಂದ್ರಿಯಗಳಲ್ಲಿ, ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ ಜಂಗಮಲಿಂಗ, ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಹೀಗೆ ಸಂಬಂಧಿಸುವದರಿಂದ ಭಕ್ತನ ಅಂಗವು ಲಿಂಗಮಯವಾಗುತ್ತದೆ. ಇದು ಭಕ್ತನಲ್ಲಿ ಮಂತ್ರ ಸಂಬಂಧವಾದ ಪರಿಣಾಮವು.

ಮಿಶ್ರ ಅಂಗಲಿಂಗ ಸಂಗಃ— ಹಿಂದೆ ನಿರ್ದೇಶಿಸಿದ ಪ್ರಕಾರ ಕರ್ಮೇಂದ್ರಿಯಗಳು, ಪಂಚ ವಿಷಯಗಳು. ಜ್ಞಾನೇಂದ್ರಿಯಗಳು, ವಾಯುಗಳು, ಕರಣೇಂದ್ರಿಯಗಳು ಇವುಗಳಿಗೆ ಸಾಮೂಹಿಕ ರೀತಿಯಿಂದ ಅನುಕ್ರಮವಾಗಿ ನ, ಮ, ಶಿ, ವಾ, ಯ ಈ ಪಂಚ ಪ್ರಣವಗಳು ಸಂಬಂಧಿಸುವವಷ್ಟೇ. ಹಾಗೆಯೇ ಅವು ಸಾಮೂಹಿಕ ರೀತಿಯಿಂದ ಅನುಕ್ರಮವಾಗಿ ಲಿಂಗಕ್ಕೆ ಸಂಬಂಧಿಸುತ್ತವೆ. ಆಗ ಆ ಲಿಂಗವು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳೆಂದು ಹೇಳಲ್ಪಡುತ್ತವೆ. ಹೀಗೆ ಇವು ಮಿಶ್ರಲಿಂಗಕ್ಕೆ ಸಂಬಂಧಿಸಿದಲ್ಲಿ ಮಿಶ್ರ ಅಂಗಲಿಂಗ ಸಂಗವೆಂದು ಹೇಳಲ್ಪಡುತ್ತದೆ.

ಭಕ್ತನಲ್ಲಿ ಗುರುಲಿಂಗ ಜಂಗಮಗಳುಃ— ಭಕ್ತನ ತನುವೇ ಗುರು, ಅವನ ಮನವೇ ಲಿಂಗ, ಅವನ ಭಾವವೇ ಜಂಗಮವು. ಭಕ್ತನ ಕರವು ಇಷ್ಟಲಿಂಗವು, ಮನವು ಪ್ರಾಣಲಿಂಗವು, ಭಾವವು ಭಾವಲಿಂಗವು.

ಭಕ್ತನಿಗೆ ತತ್ವಮಸಿ ಪದದ ಸಂಬಂಧಃ— ಭಕ್ತನ ಕಾಯವು ತತ್ ಪದವು, ಅವನ ಕಂಪೀಠದ ಇಷ್ಟವು ತ್ವಂ ಪದವು, ಈ ಎರಡರ ಸಂಗವು ಅಸಿ ಪದವು.

ಭಕ್ತನ ಕ್ರಿಯೆಯು ತತ್ ಪದವು, ಅವನ ಅಂತರಂಗದ ಜ್ಞಾನವು ತ್ವಂ ಪದವು. ಈ ಎರಡರ ಸಂಗವು ಅಸಿ ಪದವು.

ಭಕ್ತನ ಲಿಂಗವು ತತ್‌ಪದವು. ಆವನ ಪ್ರಾಣವು ತ್ವಂ ಪದವು. ಈ ಎರಡರ ಸಂಗವು ಅಸಿ ಪದವು.

ಭಕ್ತನ ಕುರುಹು ತತ್ ಪದವು. ಅವನ ಅರುಹು ತ್ವಂ ಪದವು, ಎರಡರ ಸಂಗವು ಅಸಿ ಪದವು.

ಶಬ್ದ ಚತುಷ್ಟಯ ಸಂಬಂಧಃ— ಪರೆ, ಪಶ್ಯತಿ, ಮಧ್ಯಮೆ. ವೈಖರಿ ಇವು ಶಬ್ದ ಚತುಷ್ಟಯಗಳು. ಚಿತ್ತಕ್ಕೆ ನಿಲುಕಲು ಅದು ಪರೆ, ಅದು ನೆನಹಿಗೆ ಬರಲು ಪಶ್ಯತಿ, ಜಿಹ್ವೆಗೆ ಬರಲು ಅದು ಮಧ್ಯಮೆ, ವಚನಕ್ಕೆ ಬರಲು ಅದು ವೈಖರಿಯು. ಕಣ್ಣಿನ ಕೊನೆಗೆ ಬರಲು ಅದು ಮಧ್ಯಮೆ, ತನುವಿಗೆ ಸೋಂಕಲು ಅದು ವೈಖರೀ.

ಲಿಂಗವ ನೆನೆಯಲು ಅದು ಪರೆ. ಲಿಂಗವನ್ನು ಕಣ್ಣಾರೆ ನೋಡಲು ಅದು ಪಶ್ಯತಿ. ಲಿಂಗವನ್ನು ನುತಿಸಲು ಅದು ಮಧ್ಯಮೆ. ಲಿಂಗವನ್ನು ಪೂಜಿಸಲು ಅದು ವೈಖರಿಯು.

ಲಿಂಗಾಂಗ ಕೂಟಃ— ವಾಮ ಕರಪೀಠದಲ್ಲಿಯ ಲಿಂಗವು ಮತ್ತು ನೇತ್ರದ ನೋಟ ಇವೆರಡು ಕೂಡಿದಲ್ಲಿ ಅದು ಬಹಿರಂಗ ಕೂಟ.

ಹೃದಯ ಪೀಠದ ಚಿಲ್ಲಿಂಗವು ಮತ್ತು ಮನಸ್ಸಿನ ನೆನಹು ಇವೆರಡು ಕೂಡಿದಲ್ಲಿ ಅದು ಲಿಂಗಾಂಗ ಕೂಟ

ಕರಪೀಠದ ಇಷ್ಟಲಿಂಗ ಮತ್ತು ಶಿರದಲ್ಲಿರುವ ಪರತತ್ವ ಮೂರ್ತಿ ಎನಿಸಿಕೊಳ್ಳುವ ಜಂಗಮ ಇವೆರಡು ಕೂಡಿದಲ್ಲಿ ಅದು ಲಿಂಗಾಂಗ ಕೂಟ.

ಮಂತ್ರ ಶಕ್ತಿಯನ್ನು ಬಲಪಡಿಸುವ ಅಕ್ಷರಗಳುಃ— ಮಂತ್ರವನ್ನು ಬಲಪಡಿಸುವದಕ್ಕೋಸ್ಕರ ಅದರೊಡನೆ ಕೆಲವು ಅಕ್ಷರಗಳನ್ನು ಉಚ್ಚರಿಸುವದುಂಟು. ಅವುಗಳ ಉಚ್ಚರಣೆಯಿಂದ ಆ ಮಂತ್ರ ಪಠಿಸುವವನ ಲಕ್ಷವು ಮಂತ್ರಕ್ಕೆ ಹೆಚ್ಚು ವೇಧಿಸುತ್ತದೆ. ಇದರಿಂದ ಮಂತ್ರದ ಬಲವು ಹೆಚ್ಚುತ್ತದೆಂದು ತಿಳಿಯಲ್ಪಡುತ್ತದೆ. ಇಂಥ ಅಕ್ಷರಗಳನ್ನು ಮಂತ್ರದ ಆರಂಭಕ್ಕಾಗಲಿ ಇಲ್ಲವೆ ಅಂತ್ಯಕ್ಕಾಗಲಿ ಜೋಡಿಸುವದುಂಟು. ವೀರಶೈವ ಧರ್ಮದಲ್ಲಿ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇವು

ಸಾಮಾನ್ಯವಾಗಿ ಮಂತ್ರಗಳೊಡನೆ ಜೋಡಿಸಲ್ಪಡುತ್ತವೆ. ಇವಲ್ಲದೆ ಬೇರೆ ಕೆಲವು ಅಕ್ಷರಗಳಿವೆ. ಅವು ಕ್ಷ, ಕ್ಷಿ, ಕ್ಷುಂ, ಈ, ಊಂ, ಶೀಂ, ಹುಂ, ಭಂ, ಫಟ್, ಹುಂ ಫಟ್, ವೌಷಟ್, ಸ್ವಾಹಾ, ಧಾವ್ನೆ ನಮಃ ಚಟ, ಚಟ ಚಟ ಪಚಟ, ಚಿಟ್ಟಿಖ, ಸ್ಫುರ ಸ್ಫುರಸ್ಫುರ, ಪ್ರಸ್ಫುರ, ಗ್ಲಂ, ಕ್ಲಿಂ ಈ ಬಗೆಯ ಅಕ್ಷರಗಳಿರುತ್ತವೆ. ಇವು ಸಿದ್ಧಿಗಳನ್ನು ಸಾಧಿಸುವ ಸಿದ್ಧರು ಶಾಕ್ತರು ಇಂಥ ಪಂಗಡದವರು ಉಪಯೋಗಿಸುತ್ತಿದ್ದಂತೆ ತೋರುತ್ತದೆ. ಇವುಗಳಲ್ಲಿ ಕೆಲವು ಮಾತ್ರ ವೀರಶೈವರ ಬಳಿಕೆಯಲ್ಲಿ ಬಂದಿರುವವು. ಆದರೆ ಇವುಗಳಲ್ಲಿ ಹ್ರಾಂ ಕಾರಾದಿ ಅಕ್ಷರಗಳು ಮಾತ್ರ ಅವರಲ್ಲಿ ಹೆಚ್ಚು ಬಳಿಕೆಯಲ್ಲಿವೆ.

ಶಿವಾಂಗ ಮಂತ್ರಃ— ಓಂ, ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಇದು ಶಿವಾಂಗ ಮಂತ್ರವೆಂದು ಹೇಳಲ್ಪಡುತ್ತಿದೆ. ಮಂತ್ರಾಕ್ಷರಗಳೆಂತಲೂ ಇವು ಹೇಳಲ್ಪಡುತ್ತವೆ. ಇವು ಶಿವಾದಿ ಷಟ್ ತತ್ವಗಳೆಂದು ಭಾವಿಸಲ್ಪಟ್ಟಿವೆ. ಈ ತತ್ವಗಳು ಯಾವವೆಂದರೆ— ಶಿವ, ಸದಾಶಿವ, ಈಶ, ಬ್ರಹ್ಮೇಶ, ಈಶ್ವರ, ಈಶಾನ್ಯ ಇವುಗಳೇ ಇರುತ್ತವೆ. ಇವು ಷಟ್ ಸಾದಾಖ್ಯ ಲಿಂಗಗಳು ಎಂದು ಕರೆಯಲ್ಪಡುತ್ತವೆ. ಅಂದರೆ ಇವು ಪರ ಶಿವನಲ್ಲಿ ಉದ್ಭವಿಸಿರುವ ಸಾದಾಖ್ಯಗಳ ದ್ಯೋತಕವಾಗಿವೆ. ಈ ಸಾದಾಖ್ಯಗಳಿಗೂ ಪಂಚಾಕ್ಷರೀ ಮಂತ್ರಕ್ಕೂ ನಿಕಟ ಸಂಬಂಧವಿದೆ. ಈ ಸಂಬಂಧದ ಮೂಲಕ ಈ ಅಕ್ಷರಗಳನ್ನು ಪಂಚಾಕ್ಷರೀ ಮಂತ್ರಕ್ಕೆ ಜೋಡಿಸಿ ಅನ್ನುವದರಿಂದ ಪಂಚಾಕ್ಷರೀ ಮಂತ್ರದ ಬಲವು ಹೆಚ್ಚುತ್ತದೆಂದು ಭಾವಿಸಲ್ಪಡುತ್ತದೆ.

ಷಟ್ ಪ್ರಸಾದಮಂತ್ರ:— ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇದು ಷಟ್ ಪ್ರಸಾದ ಮಂತ್ರವು. ಇದಕ್ಕೆ ಓಂಕಾರವು ಕೂಡಿದಲ್ಲಿ ಶಿವಾಂಗ ಮಂತ್ರವಾಗುತ್ತದೆ. ಇದರ ಅಕ್ಷರಗಳು ಷಟ್ ಸಾದಾಖ್ಯ, ಷಟ್ಕರಣ ಇವುಗಳನ್ನು ತೋರಿಸುತ್ತಿವೆ.

ಪಂಚ ಪ್ರಸಾದ ಮಂತ್ರಃ— ಓಂ ಹಂ ಹ್ರಾಂ ಹಂ, ಹ್ರೌಂ ಹಂಸ ಇದು ಪಂಚ ಪ್ರಸಾದ ಮಂತ್ರವೆಂದು ಹೇಳಲ್ಪಡುತ್ತದೆ. ಹಂಸ ಈ ಶಬ್ದವು ಇದರಲ್ಲಿ ಮಹತ್ವವಾದದ್ದು.

ಪಂಚಾಕ್ಷರೀ ಮಂತ್ರದ ವಿಧಗಳುಃ— ಇವು ಹಿಂದೆ ಹೇಳಿದ ಮೇರೆಗೆ ಮೂಲ ಪಂಚಾಕ್ಷರ, ಸ್ಥೂಲ ಪಂಚಾಕ್ಷರ, ಸೂಕ್ಷ್ಮ ಪಂಚಾ

ಕ್ಷರ, ಮಾಯಾಖ್ಯ ಪಂಚಾಕ್ಷರ, ಪ್ರಸಾದ ಪಂಚಾಕ್ಷರ ಎಂದು ಇರು ತ್ತವೆ. ಇವುಗಳನ್ನು ಲಿಂಗ ಮಧ್ಯದಲ್ಲಿ ಅನುಸಂಧಾನಿಸಿ ಸ್ಮರಿಸುವುದೇ ಧ್ಯಾನವೆಂದು ಹೇಳಲ್ಪಡುತ್ತಿದೆ.

ಮೂಲ ಪಂಚಾಕ್ಷರಃ— ಓಂ ನಮಃ ಶಿವಾಯ ಇದು ಮೂಲ ಪಂಚಾಕ್ಷರವು. ಇದು ಅನೇಕ ವಿಧ ಪಂಚಾಕ್ಷರಗಳಲ್ಲಿ ಮುಖ್ಯ ವಾದುದು.

ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತೃತ್ವ, ಸರ್ವಾಂತರ್ಯಾ ಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತಿತ್ವ ಈ ಗುಣಗಳು ಪರಮಾತ್ಮನಲ್ಲಿರುವ ದನ್ನು ಈ ಮಂತ್ರವು ಸೂಚಿಸುತ್ತದೆ.

ಸ್ಥೂಲ ಪಂಚಾಕ್ಷರಃ— ಓಂ, ಹ್ರಾಂ, ಹ್ರೀಂ ಹ್ರೂಂ, ನಮಃ ಶಿವಾಯ ಇದು ಸ್ಥೂಲ ಪಂಚಾಕ್ಷರವು. ಒಂಬತ್ತು ಅಕ್ಷರಗಳುಳ್ಳದ್ದು. ಇದು ಉದಾರತ್ವ, ಅನುಪ್ರವೇಶತ್ವ, ನೇಮಕತ್ವ, ರುದ್ರತ್ವ, ಶ್ರುತ್ಯಾ ಚಾರತ್ವ ಈ ಗುಣಗಳು ಪರಮಾತ್ಮನಲ್ಲಿರುವದನ್ನು ಈ ಮಂತ್ರವು ಸೂಚಿಸುತ್ತದೆಂದು ತಿಳಿಯಲ್ಪಟ್ಟಿದೆ.

ಸೂಕ್ಷ್ಮ ಪಂಚಾಕ್ಷರಃ— ಓಂ, ಹ್ರೀಂ, ಶಿವಾಯ ಇದು ಸೂಕ್ಷ್ಮ ಪಂಚಾಕ್ಷರ ಮಂತ್ರ. ಇದು ವಟಬೀಜದಂತೆ ಬಹು ಸೂಕ್ಷ್ಮ ವಾದದ್ದು.

ಮಾಯಾಖ್ಯ ಪಂಚಾಕ್ಷರಃ— ಓಂ, ಹ್ರೀಂ, ಹ್ರೂಂ, ನಮಃ ಶಿವಾಯ, ಇದು ಮಾಯಾಖ್ಯ ಪಂಚಾಕ್ಷರವು. ಇದರಲ್ಲಿ ೮ ಅಕ್ಷರಗಳಿವೆ.

ಪ್ರಸಾದ ಪಂಚಾಕ್ಷರಃ— ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ನಮಃ ಶಿವಾಯ ಇದು ಪ್ರಸಾದ ಪಂಚಾಕ್ಷರಿಯು. ಈ ಮಂತ್ರವು ಬ್ರಹ್ಮ ಸ್ಥಾನದ ಮಧ್ಯವಳಯದ ಸಹಸ್ರದಳ ಕಮಲಕರ್ಣಿಕೆಯಲ್ಲಿರುವ ಪಂಚ ಪತ್ರದಲ್ಲಿ ವಾಸಿಸುತ್ತದೆಂದು ತಿಳಿಯಲ್ಪಡುತ್ತದೆ. ಇದರಲ್ಲಿ ೧೦ ಅಕ್ಷ ರಗಳಿವೆ.

ಷಟ್ ತ್ರಿಂಶನ್ಮಂತ್ರಗಳುಃ— ಇವು ಬೀಜಾಕ್ಷರ ಮಂತ್ರ, ಕೀಲಕ ಮಂತ್ರ, ನ್ಯಾಸಾಕ್ಷರ ಮಂತ್ರ, ವದನಾಕ್ಷರ ಮಂತ್ರ, ಶಕ್ತಿಷಡಂಗ

From,
Shivanubhava
Office
Bijapur.

**BOOK-POST.**

ಶ್ರೀ. ರಾ॥ ರಾ॥

R. N. B. 2554




ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ. ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

R. N. B. 2554

# ಶಿವಾನುಭವ

ಸಂಪುಟ ೨೬ ] [ ಸಂಚಿಕೆ ೭

ಸಂಪಾದಕ

**ಫ. ಗು. ಹಳಕಟ್ಟಿ,**

ಬಿಎ. ಎಲ್. ಎಲ್. ಬಿ.



ವಾ.ಚಂ. ೫-೧೨-೦ ] **ವಿಜಾಪುರ.** [ ಜುಲೈ ೧೯೫೨

# ವಿಷಯಾನುಕ್ರಮಣಿಕೆ.





---


ಶಿವಾನುಭವ ಮಾಸಪತ್ರಿಕೆ,
ವಿಜಾಪುರ.
ವಾರ್ಷಿಕ ಚಂದಾ ೫—೧೨—೦

# ಶಿವಾನುಭವ

| ವರ್ಷ ೨೬ | ಜುಲೈ ೧೯೫೨ | ಸಂಚಿಕೆ ೭ |
| --- | --- | --- |

## ಗಾಯತ್ರಿ ಮಂತ್ರವು.

[ ಲೇಖಕರು- ಶ್ರೀಯುತ ಬ. ಚಿ. ಪಟ್ಟೇದ-ಒಂಟಮುರಿ.]

…………●…………

ಇಲ್ಲಿ ಮೊದಲು ಗಾಯತ್ರಿಯೆಂದರೇನೆಂಬುದನ್ನು ನಾವು ಸರಿಯಾಗಿ ಅರಿತುಕೊಳ್ಳಬೇಕು. ಸರ್ವಸಾಧಾರಣವಾಗಿ ಜನರ ಲಕ್ಷವು ಗಾಯತ್ರಿ ಅಂದರೆ 'ಆಕಳು' ಎಂಬುದರ ಕಡೆಗೆಯೇ ಹೋಗುವದು. ಇದರ ಹೊರತಾಗಿ ಪರಮೇಶ್ವರಿಯ ನಾಮಾವಳಿಯಲ್ಲಿಯೂ ಗಾಯತ್ರಿ ಎಂದು ಬಂದಿದೆ. ಆದುದರಿಂದ ಇದು ಶಕ್ತಿದೇವಿಗೆ ಸಂಬಂಧಿಸಿದ ಮಂತ್ರವಿರಬಹುದೆಂದು ಕೆಲರು ಭಾವಿಸಬಹುದು. ಆದರೆ ಆ ಶಕ್ತಿದೇವಿಯ ಕಾರ್ಯವು ಅಗಾಧವಾದುದಿರುವುದು. ಅದೆಲ್ಲಾ ಇದರಲ್ಲಿ ಬಂದಿಲ್ಲ. ಅದರದೊಂದು ಅಂಶ ಮಾತ್ರ ಇಲ್ಲಿರುವುದು. ಇಲ್ಲಿ ಬಂದಿರುವ ಗಾಯತ್ರಿಯ ಅರ್ಥವು ಹೀಗಿದೆ.

### ಗಾಯತ್ರಿ ಮಂತ್ರದ ಅರ್ಥ.

ಗಾಯ ( ಗಾಯನ ) ಅಂದರೆ ಹಾಡು. ತ್ರಿ ಅಂದರೆ ಮೂರು ಮೂರ್ತಿಗಳು. ( ಬ್ರಹ್ಮ, ವಿಷ್ಣು, ರುದ್ರರು. ) ಆದಕಾರಣ ಗಾಯತ್ರಿ ಮಂತ್ರವೆಂದರೆ ತ್ರಿಮೂರ್ತಿಗಳಿಗೆ ಸಂಬಂಧಿಸಿದ ಒಂದು ಮಂತ್ರವೆಂದರಿಯಬೇಕು. ಇದರಲ್ಲಿ ಅವರ ವಿಷಯಕವಾದ ಕಲ್ಪನೆಯು ಹೊಳೆಯುವಂತೆ ಸೂತ್ರರೂಪವಾಗಿ ಹೇಳಲ್ಪಟ್ಟಿದೆ. ಆ ಮಂತ್ರವು ಹೀಗಿದೆ.

# ವಿಷಯಾನುಕ್ರಮಣಿಕೆ.








**ಶಿವಾನುಭವ ಮಾಸಪತ್ರಿಕೆ,**

**ವಿಜಾಪುರ.**

**ವಾರ್ಷಿಕ ಚಂದಾ ೫—೧೨—೦**




# ಶಿವಾನುಭವ

| | | |
|---|---|---|
| ವರ್ಷ ೨೬ | ಜುಲೈ ೧೯೫೨ | ಸಂಚಿಕೆ ೭ |

## ಗಾಯತ್ರಿ ಮಂತ್ರವು.

[ ಲೇಖಕ:- ಶ್ರೀಯುತ ಬ. ಚಿ. ಪಟ್ಟೇದ-ಒಂಟಮುರಿ.]

............●............

ಇಲ್ಲಿ ಮೊದಲು ಗಾಯತ್ರಿಯೆಂದರೇನೆಂಬುದನ್ನು ನಾವು ಸರಿ ಾಗಿ ಅರಿತುಕೊಳ್ಳಬೇಕು. ಸರ್ವಸಾಧಾರಣವಾಗಿ ಜನರ ಲಕ್ಷವು ಯತ್ರಿ ಅಂದರೆ 'ಆಕಳು' ಎಂಬುದರ ಕಡೆಗೆಯೇ ಹೋಗುವದು. ಇದ ೆ ಪರಮೇಶ್ವರಿಯ ನಾಮಾವಳಿಯಲ್ಲಿಯೂ ಗಾಯತ್ರಿ ಎಂದು ಬಂದಿದೆ. ುವರಿಂದ ಇದು ಶಕ್ತಿದೇವಿಗೆ ಸಂಬಂಧಿಸಿದ ಮಂತ್ರವಿರಬಹುದೆಂದು ರು ಭಾವಿಸಬಹುದು. ಆದರೆ ಆ ಶಕ್ತಿದೇವಿಯ ಕಾರ್ಯವು ಅಗಾಧ ದುದಿರುವುದು. ಅದೆಲ್ಲಾ ಇದರಲ್ಲಿ ಬಂದಿಲ್ಲ. ಅದರದೊಂದು ಅಂಶ ಾತ್ರ ಇಲ್ಲಿರುವುದು. ಇಲ್ಲಿ ಬಂದಿರುವ ಗಾಯತ್ರಿಯ ಅರ್ಥವು ುತಿದೆ.

### ಗಾಯತ್ರಿ ಮಂತ್ರದ ಅರ್ಥ.

ಗಾಯ ( ಗಾಯನ ) ಅಂದರೆ ಹಾಡು. ತ್ರಿ ಅಂದರೆ ಮೂರು ಮೂರ್ತಿಗಳು. ( ಬ್ರಹ್ಮ, ವಿಷ್ಣು, ರುದ್ರರು. ) ಆದಕಾರಣ ಗಾಯತ್ರಿ ಮಂತ್ರವೆಂದರೆ ತ್ರಿಮೂರ್ತಿಗಳಿಗೆ ಸಂಬಂಧಿಸಿದ ಒಂದು ಮಂತ್ರವೆಂದರಿಯ ೇಕು. ಇದರಲ್ಲಿ ಅವರ ವಿಷಯಕವಾದ ಕಲ್ಪನೆಯು ಹೊಳೆಯುವಂತೆ ಸೂತ್ರರೂಪವಾಗಿ ಹೇಳಲ್ಪಟ್ಟಿದೆ. ಆ ಮಂತ್ರವು ಹೀಗಿದೆ.

ಋತಂ ಸತ್ಯಂ ಪರಬ್ರಹ್ಮಂ ।
ಪುರುಷಂ ಕೃಷ್ಣ ಪಿಂಗಲಂ ॥
ಊರ್ಧ್ವರೇತಂ ವಿರೂಪಾಕ್ಷಂ ।
ವಿಶ್ವ ಏ ವೈ ವೈವ ನಮಃ ॥ ೧

ಇದರೊಳಗೆ ವಿಶ್ವ ಶಬ್ದದಮೇಲೆ ಏವ ಏವ ಏವ ಎಂದು ಮೂ ಸಾರೆ ನಿಶ್ಚಯಾರ್ಥ ಪದವು ಬಂದಿದೆ. ಆದ್ದರಿಂದ ಇದರ ಅನ್ವಯು ಕೆಳಗಿನಂತೆ ಆಗುವದು.

ಋತಂ ಸತ್ಯಂ ಪರಬ್ರಹ್ಮಂ ವಿಶ್ವ ಏವ
ಕೃಷ್ಣ ಪಿಂಗಲಂ ಪುರುಷಂ ವಿಶ್ವ ಏವ
ಊರ್ಧ್ವ ರೇತಂ ವಿರೂಪಾಕ್ಷಂ ವಿಶ್ವ ಏವ ನಮಃ

ನಮಃ ಅಂದರೆ (ಈ ತ್ರಿಮೂರ್ತಿಗಳನ್ನು ಕುರಿತು) ನಮಸ್ಕಾರವು.

## ತ್ರಿಮೂರ್ತಿಗಳು ದೇವರೇಕೆ ?

ಈ ಮೂರ್ತಿಗಳನ್ನು ನಾವು ದೇವರೆಂದು ತಿಳಿಯುತ್ತೇವೆ. ದಿ (ಪ್ರಕಾಶಿಸು) ಧಾತುವಿನಿಂದ ದೇವ ಶಬ್ದವಾಗಿದೆ. ಆದುದರಿಂದ ಪ್ರ ಮಯತ್ವವಿಲ್ಲದೆ ದೇವತ್ವವಿಲ್ಲ. ಇಂತಹ ಪ್ರಕಾಶಮಯ ವಸ್ತುಗಳು ದಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ಅಗ್ನಿ, ದೀಪ ಮೊದಲಾದವುಗ ಅಂತೆಯೇ ಆರಂಭಕಾಲದಲ್ಲಿ ಅವುಗಳನ್ನೇ ದೇವರೆಂದು ಭಾವಿಸಿರು ಸ್ವಾಭಾವಿಕವದೆ. ಇವೆಲ್ಲವುಗಳಲ್ಲಿ ಸೂರ್ಯನಿಗೆ ಅಗ್ರೇಸರತ್ವವು ಆದಕಾರಣ ಆರ್ಯರಲ್ಲಿ ಅನೇಕರು ಅವನನ್ನೇ ದೇವರೆಂದು ಇಂ ಗ್ರಹಿಸುತ್ತಿರುವದು ಎಲ್ಲರಿಗೂ ಗೊತ್ತುಂಟು. ಸೂರ್ಯನ ವಿಷಯ ಹೆಚ್ಚಿನ ವಿವರಣೆಯು ಮುಂದೆ ಬರುವದು. ಈ ರವಿಯು ಉಗ್ರವಾ ತೇಜಸ್ಸುಳ್ಳವನು. ಆದರೆ ಚಂದ್ರನು ಶಾಂತವಾದ ಬೆಳಕುಳ್ಳವನು. ಕಾರಣ ಶಿವನು ಅವನನ್ನು ತನ್ನ ತಲೆಯಲ್ಲಿ ಧರಿಸಿಕೊಂಡನೆಂದು ಹೇ ತ್ತಾರೆ. ಇದರ ಅರ್ಥವು ಶಿವನು ಯಾವಾಗಲೂ ಶಾಂತತೆಯಲ್ಲಿ ಇರುತ್ತಾನೆಂದು ಆಗುವದು. ಇವರಿಬ್ಬರ ತರುವಾಯ ಅಗ್ನಿಯು ದೇ

ಯಾಗಿದ್ದಾನೆ. ತಾರೆಗಳು ಚಂದ್ರನ ಪತ್ನಿಯರೆಂದು ನಂಬಿದ್ದಾರೆ. ದೀವಿಗೆ ಹಚ್ಚುವ ಸಂಜೆಯ ಸಮಯವು 'ಸಿರಿ ಬರುವ ಹೊತ್ತು' ಎಂದು ತಿಳಿಯಲ್ಪಡುತ್ತದೆ. ಇಲ್ಲಿ 'ಸಿರಿ' ಎಂಬುದು ದೀಪವನ್ನನುಲಕ್ಷಿಸಿರುತ್ತದೆ. ಇದು ರಾತ್ರಿಯ ಕತ್ತಲಲ್ಲಿ ತನ್ನ ಬೆಳಕನ್ನು ಪಸರಿಸಿ ಜನರ ಕಾರ್ಯಗಳಿಗೆ ಸಹಾಯಕವಾಗುವದು. ಇವೆಲ್ಲವುಗಳ ಬೆಳಕು ಅದೆಷ್ಟಿದ್ದರೂ ಅದೆಲ್ಲ ಮರ್ಯಾದಿತವೇ ಇರುವದು.

## ಜ್ಞಾನವು ಮಹಾ ಪ್ರಕಾಶವು.

ಇವೆಲ್ಲಕ್ಕಿಂತಲೂ ಕಲ್ಪನಾತೀತವಾದ ಮಹಾ ಪ್ರಕಾಶವನ್ನು ಕೊಡುವ ಇನ್ನೊಂದು ವಸ್ತುವಿದೆ. ಅದು ಜ್ಞಾನವು. ಈ ಜ್ಞಾನದ ಬೆಳಕು ಮಾತ್ರ ಮರ್ಯಾದೆಗೆ ಸಿಕ್ಕುವಂತಹದಲ್ಲ.

"ನಹಿ ಜ್ಞಾನಾಯ ಸದೃಶಂ ಪವಿತ್ರಮಿಹ ವಿದ್ಯತೇ" ಎಂದು ಭಗವದ್ಗೀತೆಯು ಅದರ ಮಹತ್ವವನ್ನು ಕೊಂಡಾಡಿದೆ. "ಪ್ರಜ್ಞಾನಂ ಬ್ರಹ್ಮ" ಎಂದು ಉಪನಿಷತ್‌ಕಾರರು ಹೊಗಳಿರುವರು. ಜ್ಞಾನದ ಬೆಳಕನ್ನು ಕೋಟಿ, ಅದೇಕೆ, ಅನೇಕ ಕೋಟಿ ಸೂರ್ಯ ಪ್ರಕಾಶ, ಎಂದು ಜ್ಞಾನಿಗಳು ಬಣ್ಣಿಸಿರುವರು. ಸೂರ್ಯನ ಬೆಳಕಿಗೆ ನಡುವೆ ಏನಾದರೂ ಅಡ್ಡ ಬಂದರೆ ಅದರ ತೋರಿಸುವಿಕೆ ಕುಂಠಿತವಾಗುತ್ತದೆ. ಇನ್ನು ಭವಿಷ್ಯದಲ್ಲಿ ವರ್ತಿಸಬಹುದಾದ ಸಂಗತಿಗಳನ್ನು ತೋರಿಸುವದಂತೂ ದೂರೇ ಉಳಿಯಿತು. ಆದರೆ ಜ್ಞಾನವು ಆ ಕಾರ್ಯವನ್ನು ಸಹಜ ಲೀಲಾಮಾತ್ರವಾಗಿ ಜರುಗಿಸುವದು. ಆದುದರಿಂದ ಜ್ಞಾನದ ಪ್ರಕಾಶವು ಅತ್ಯಂತ ಮಿಗಿಲಾದುದು. ಅಂತೇ ಅದಕ್ಕೆ 'ಮಹಾದೇವ' ಎಂಬ ಹೆಸರು ಪ್ರಾಪ್ತವಾಗಿದೆ.

## ದೇವರು ಒಬ್ಬನೇ.

ಇಂತಹ ಮಿಗಿಲಾದ ದೇವರು ಜಗತ್ತಿನಲ್ಲಿ ಅನೇಕರಿಲ್ಲ. "ಜಗಕೆಲ್ಲ ಒಬ್ಬನೇ ದೇವ" ಎಂದು ಸರ್ವಜ್ಞನೂ 'ದೇವನೊಬ್ಬ ನಾಮ ಹಲವು' ಎಂದು ಶ್ರೀ ಬಸವೇಶ್ವರನೂ ಹೇಳಿದ್ದಾರೆ. 'ಏಕಮೇವಾ ದ್ವಿತೀಯಂ' ಎಂದು ಶ್ರುತಿಗಳು ಉದ್ಘೋಷಿಸುತ್ತವೆ. ಇಂತಹ ಒಬ್ಬನೇ ದೇವರು

ಸೃಷ್ಟಿಯಲ್ಲಿ ಮಾಡುವ ಕಾರ್ಯಗಳು ಮೂರುವಿಧವಾಗಿವೆ. ಅವು ಉತ್ಪತ್ತಿ ಸ್ಥಿತಿಲಯಗಳು. ವಿಶ್ವವನ್ನು ಸೃಷ್ಟಿಸುವದೇ ಉತ್ಪತ್ತಿ. ರಕ್ಷಿಸುವದೇ ಸ್ಥಿತಿ. ನಾಶಗೊಳಿಸುವದೇ ಲಯ. ಈ ಕಾರ್ಯಗಳ ಯೋಗದಿಂದ ಆ ದೇವರಿಗೆ ಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ ( ಶಿವ ) ರೆಂಬ ಹೆಸರುಗಳು ಪ್ರಾಪ್ತವಾದವು. ಪೃಥ್ವಿ ( ನೆಲ ) ಅಪ್ಪು ( ಜಲ ) ಅಗ್ನಿ ಈ ಮೂರು ಮಹಾಭೂತಗಳಿಗಾದರೂ ಇವರೇ ಅಧಿದೇವತೆಗಳಾಗಿರುವರು. ಆದುದರಿಂದ ಇವರು ಆ ಮಹಾಭೂತಗಳ ಚೈತನ್ಯರೂಪದಿಂದ ವಾಸಿಸಿ ಅವುಗಳ ದ್ವಾರವಾಗಿ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುವರು. ಅದರ ವಿವರವು ನಾಲ್ಕನೆಯ ಚರಣದ ಸೃಷ್ಟೀಕರಣದಲ್ಲಿ ಬರುವದು.

ದೇವರು ಒಬ್ಬನೇ ಇರುವದರಿಂದ ಈ ಮೂರು ಭೇದಗಳು ನಿಜವಾಗಿ ಅವನಲ್ಲಿ ಇಲ್ಲೇ ಇಲ್ಲ. ಆತನು ಅದೃಷ್ಟನಾಗಿರುವದರಿಂದ ಈ ಮೂರ್ತಿಗಳು ಸಹ ಅದೃಷ್ಟರೇ. ಆದರೆ ಪರಬ್ರಹ್ಮನು ( ಪರಶಿವನು ) ನಿಜವಾಗಿ ನಿರವಯನೂ ನಿಃಶೂನ್ಯನೂ ಆಗಿದ್ದರೂ ತನ್ನ ಚಿತ್ತಿನ ಯೋಗದಿಂದ ಅವನು ಬೇರೆ ಬೇರೆ ವಿಧದಲ್ಲಿ ಸತ್‌ಸ್ವರೂಪಕ್ಕೆ ಇಳಿದಿರುವನು. ಆದಕಾರಣ ಮೂರ್ತಿ ಸಾದಾಖ್ಯ ರೂಪದಲ್ಲಿ ನಾವು ತ್ರಿಮೂರ್ತಿಗಳನ್ನು ಅರಿಯಲು ಶಕ್ತರಾಗಿದ್ದೇವೆ. ಸತ್ ಸ್ವರೂಪದ ಅತ್ಯಂತ ಸ್ಥೂಲ ಆಕಾರವೆಂದರೆ ನಾವು ನೋಡುವ ಈ ವಿಶ್ವವು. ಇಲ್ಲವೆ ಜಗತ್ತು. ಆದುದರಿಂದಲೇ ಪರಬ್ರಹ್ಮ ಪುರುಷ ವಿರೂಪಾಕ್ಷರೆಲ್ಲರೂ ವಿಶ್ವವೇ ಎಂದು ಮಂತ್ರದಲ್ಲಿ ಹೇಳುತ್ತದೆ. ಜಗತ್ತಿನ ನಿರೀಕ್ಷಣೆ ಮಾಡಿ ಅನುಭವದಿಂದ ಅವರನ್ನು ಅರಿಯಬೇಕಾಗಿದೆ. ಇರಲಿ. ಇನ್ನು ಮಂತ್ರಾರ್ಥವನ್ನು ಕೆಳಗೆ ವಿವರಿಸೋಣ.

( ಈ ವಿವರಣೆಯಲ್ಲಿ ಕೆಲ ಸಂಗತಿಗಳು ಹೆಚ್ಚಾಗಿ ಬೆಳೆದಿರುತ್ತವೆ. ಅವು ಅಪ್ರಾಸಂಗಿಕವೆನಿಸಬಹುದು. ಆದರೆ ಅವು ಅಷ್ಟು ವಿಶದವಾಗಿರದಿದ್ದರೆ ವಿಷಯವು ಸರಿಯಾಗಿ ಒಡಮೂಡಲಾರದೆಂದು ಹಾಗೆ ಮಾಡಿರುತ್ತದೆ)

## ಪರಬ್ರಹ್ಮ

'ಋತಂ ಸತ್ಯಂ ಪರಬ್ರಹ್ಮಂ' ಎಂದು ಮೊದಲನೆಯ ಚರಣದಲ್ಲಿವೆ. ಇವರೊಳಗಿನ ಋತಂ ಮತ್ತು ಸತ್ಯಂ ಎಂಬೆರಡರ ಅರ್ಥವು ತಿಳಿಯಬೇಕಾಗಿದೆ.

ಋತಂ = ಸುಪ್ರಕಾಶಿತವು (ತೇಜಸ್ವಿ) ಆದುದು.
ಸತ್ಯಂ = ಸತ್ (ಅಸ್ತಿತ್ವ) ಸ್ವರೂಪವನ್ನು ಹೊಂದಿರುವದು.

ಇದರಿಂದ ಸತ್ತೆನಿಸುವ ವಸ್ತುವು ಎಂದೆಂದೂ ನಾಶವಾಗದೆ ಸ್ಥಿರವಾಗಿ ನಿತ್ಯದಲ್ಲಿಯೂ ಇರುವ ವಸ್ತುವೆಂದ ಹಾಗಾಯಿತು. ಹೀಗೆ ಪ್ರಕಾಶಮಯವಾಗಿಯೂ ಸತತಮಯವಾಗಿಯೂ ಇರುವ ಒಡವೆಯೇ ಪರಬ್ರಹ್ಮವೆಂಬುದು ಈಗ ಸ್ಪಷ್ಟವಾಯಿತು. ಪರಬ್ರಹ್ಮವು ವಿಶ್ವದ ಮೂಲ ಕಾರಣವೂ ವಿಶ್ವಾಧಾರವೂ ಆದ ವಸ್ತುವು. ಈ ಪರವಸ್ತುವಿನಿಂದುದಿಸಿದ ಮೂಲ ಚಿತ್ತುವಿನಿಂದಲೇ ತ್ರಿಮೂರ್ತಿಗಳಾದರು. ಆದುದರಿಂದ ಅವರು ಪರಬ್ರಹ್ಮ (ಪರಶಿವ) ನಿಗೆ ಸರಿಬಾರರು. ಅಂತೇ ಬ್ರಹ್ಮನು ಭೇದದೃಷ್ಟಿಯಿಂದ ಪರಬ್ರಹ್ಮನಲ್ಲ. ಆದರೂ ಸಾಮಾನ್ಯವಾಗಿ ಇವೆರಡರ ಅರ್ಥವೂ ಒಂದೇ ಎಂದು ನಂಬುವುದುಂಟು ಇದರಂತೆಯೇ ಪರಶಿವ, ಶಿವ (ಸದಾಶಿವ) ಇವರಿಬ್ಬರ ವಿಷಯವಾಗಿಯೂ ತಿಳಿಯಬೇಕು.

## ಪರಬ್ರಹ್ಮನ ಸ್ವರೂಪ.

(೧) ಬ್ರಹ್ಮಣತ್ವಾತ್. ಬ್ರಹ್ಮ ಅಂದರೆ ದೊಡ್ಡತನದಿಂದಲೇ ಅದಕ್ಕೆ ಬ್ರಹ್ಮ (ದೊಡ್ಡದು) ಎಂಬ ಹೆಸರು ಬಂದಿದೆ. 'ಅಣೋರಣೀಯಾನ್ ಮಹತೋ ಮಹೀಯಾನ್' ಹಾಗು 'ಅಣುರೇಣು ತೃಣ ಕಾಷ್ಠ ಭರಿತಂ' ಎಂದು ಬ್ರಹ್ಮನನ್ನು ವರ್ಣಿಸಿರುವದರಿಂದ ಕೆಳಗಿನ ಮೂರು ಸಂಗತಿಗಳು ಅದರೊಳಗಿಂದ ನಿಷ್ಪನ್ನವಾಗುತ್ತವೆ. ಅವು:—
(೧) ಬ್ರಹ್ಮವು ಸರ್ವವ್ಯಾಪಿಯಾಗಿದೆ. ಎಲ್ಲ ಒಡವೆಗಳು ಬ್ರಹ್ಮದಿಂದಲೇ ಹುಟ್ಟಿರುವದರಿಂದ ಕಲ್ಲು, ಕಟ್ಟಿಗೆ, ಮಣ್ಣು, ಧಾತುಗಳು, ಮೊದಲಾದ ಎಲ್ಲ ಪದಾರ್ಥಗಳಲ್ಲಿ ಅದು ತುಂಬಿ ನಿಂತಿದೆ. ಆದುದರಿಂದ ಅವುಗಳ ಮೂರ್ತಿಗಳನ್ನು ಮಾಡಿ ಹಿಂದುಗಳು ಪೂಜಿಸುತ್ತಾರೆ.

(೨) ಏಕಮೇವಾದ್ವಿತೀಯಂ ಬ್ರಹ್ಮ—ಜಗತ್ತಿನೊಳಗಿನ ಎಲ್ಲ ವಸ್ತುಗಳು ಬ್ರಹ್ಮದಿಂದಲೇ ಹುಟ್ಟಿರುವದರಿಂದ ಅವೆಲ್ಲ ಮೂಲತಃ ಒಂದೇ ವಸ್ತುವಿದ್ದಂತಾಯಿತು. ಆದುದರಿಂದ ವಿಶ್ವವು ಅದೆಷ್ಟೇ ದೊಡ್ಡದಿರಲಿ. ಅಸಂಖ್ಯ ಭಿನ್ನ ಭಿನ್ನ ಒಡವೆಗಳಿಂದ ಕೂಡಿರಲಿ. ಅವೆಲ್ಲ ಒಂದೇ ಅಂದರೆ

ಏಕಮೇವಾದ್ವಿತೀಯವಿದ್ದಂತಾಯಿತು. ನಿಜವಾಗಿ ನಾವು ಅದರ ಈ ಗುಣವನ್ನು ಮರೆತುದರಿಂದಲೇ ನಮಗೆ ದುಃಖ ಪ್ರಾಪ್ತಿಯಾಗಿದೆ. ಜಗತ್ತು ತನ್ನ ಮಾಯೆಯಿಂ ನಮ್ಮ ಚಿತ್ತುವನ್ನು ಅಪಹರಿಸಿ ತನ್ನ ಮೋಹಜಾಲ ದಲ್ಲಿ ಹಿಡಿದುಬಿಟ್ಟದುದೇ ಇದಕ್ಕೆ ಕಾರಣವಾಗಿದೆ. ಅದರಿಂದ ನಮ್ಮಲ್ಲಿ ಅಹಂಕಾರ ಮಮಕಾರ ( ಆಶೆಗಳು ) ಉದ್ಭವಿಸಿ ಭವಚಕ್ರದಲ್ಲಿ ತಿಕ್ಕಿ ಮುಕ್ಕಿ ಶೋಕಸಾಗರದಲ್ಲಿ ಮುಳುಗಿಸಿ ಕಷ್ಟಪಡಿಸುತ್ತಿರುವವು. ಆದ ಕಾರಣ ಪುನಃ ನಾವು ಎಚ್ಚತ್ತು ಅರಿವನ್ನು ತಾಳಿ ಭವಿತ್ವವನ್ನು ನೀಗಿ ಪರಶಿವ ಸ್ವರೂಪವನ್ನು ಹೊಂದಲಿಕ್ಕೆ ಒಳಿತಾಗಿ ಶ್ರಮಿಸಬೇಕಾಗುವದು. ಷಟ್‌ಸ್ಥಲ ಮಾರ್ಗವೊಂದೇ ಇದಕ್ಕೆ ಮಿಗಿಲಾದ ಸಾಧನವಾಗಿರುವದು.

(೩) ಬ್ರಹ್ಮವು ತ್ರಿಪುಟಿಮಯವಾಗಿ ಅವುಗಳನ್ನು ಒಂದುಗೂಡಿಸು ವದು. ದಾನ ಸೇವೆ ಹಿಂಸೆ ಮೊದಲಾದ ಕಾರ್ಯಗಳಲ್ಲಿ ಮಾಡುವವನೊಬ್ಬ ಹೊಂದುವವನೊಬ್ಬ ನಡುವಿನ ಸಾಧನ ರೂಪವಸ್ತುವೊಂದು, ಈ ಮೂರು ಇರು ತ್ತವೆ. ಇದರಂತೆಯೇ ಬಡಿಯುವವ, ಬಡಿಸಿಕೊಳ್ಳುವವ, ಬಡಿಯುವ ಸಾಧನ ಈ ಮೂರು, ಹಾಗು ನೋಡುವವ, ನೋಡಿಸಿಕೊಳ್ಳುವವ ನೋಡುವ ಸಾಧನ ಈ ಮೂರು, ಇದರಂತೆಯೇ ಉಣ್ಣುವವ, ಉಣ್ಣಿಸಿಕೊಳ್ಳುವವ, ಉಣ್ಣುವ ಪದಾರ್ಥ ಈ ಮೂರು, ಈ ತ್ರಿಕ (ತ್ರಯಿ) ಗಳು ಬೇರೆ ಬೇರೆ ಯಲ್ಲ. ' ಅವೆಲ್ಲ ಒಂದೇ ಇರುವವು.' ಎಂದು ತಿಳಿಯುವದೇ ತ್ರಿಪುಟಿಯು ಒಂದಾಗುವಿಕೆ. ಏಕಮೇವಾದ್ವಿತೀಯತ್ವವನರಿತವರಿಗೆ ಇದು ತನ್ನಿಂದ ತಾನೇ ಲಭಿಸುವದು. ಆ ಮೂರು ಪದಾರ್ಥಗಳು ಒಂದೇ ಒಂದಾದ ಶಿವಸ್ವರೂಪವಿರುವವು. ಆದುದರಿಂದಲೇ ಜೀವರಿಗೆ ಪಾಪ ಪುಣ್ಯಗಳ ಸೋಂಕು ( ಕಾರ್ಮಿಕ ಮಲವು ) ಇಲ್ಲದಂತಾಗುವದು.

## ಪರಬ್ರಹ್ಮವು ಪವಿತ್ರವಾದುದು

ಈ ಪರಬ್ರಹ್ಮವು ( ಪ್ರಜ್ಞಾನವು ) ಭಗವದ್ಗೀತೆಯಲ್ಲಿ ಹೇಳಿದಂತೆ ಬಹು ಪವಿತ್ರವಾಗಿರುವದು, ಅದನ್ನು ಪವಿತ್ರತೆಯಲ್ಲಿ ಸರಿಗಟ್ಟುವ ಅಥವಾ ಮೀರಿಸುವ ಬೇರಾವ ಪದಾರ್ಥವೂ ಜಗತ್ತಿನಲ್ಲಿ ಇಲ್ಲವೇ ಇಲ್ಲ. ಯಾಕಂ ದರೆ ಯಾವ ವಸ್ತುವನ್ನು ತೆಗೆದುಕೊಂಡರೂ ಅದು ಹೆಚ್ಚಾಗಲಿ ಕಡಿಮೆ

ಯಾಗಲಿ ಗುಣದೋಷಗಳೆರಡರಿಂದಲೂ ಕೂಡಿಕೊಂಡಿರುತ್ತದೆ. ದೋಷ ಮಿಶ್ರಿತವಾದುದರಿಂದ ಅವಾವುವೂ ಪವಿತ್ರವಾಗಲಾರವು. ಪ್ರಜ್ಞಾನದಲ್ಲಿ ಮಾತ್ರ ಇಂತಹ ಯಾವ ದೋಷಕ್ಕೂ ಎಡೆಯಿಲ್ಲ. ಆದುದರಿಂದ 'ನ ಹಿ ಜ್ಞಾನಾಯ ಸದೃಶಂ ಪವಿತ್ರಮಿಹ ವಿದ್ಯತೇ' ಎಂಬುದೇ ಸಂಸಿದ್ಧವು.

## ಮನುಷ್ಯನು ಮಿಗಿಲಾದವನು.

ಬ್ರಹ್ಮದಿಂದ ಉದ್ಭವಿಸಿದ ಅಸಂಖ್ಯ ವಸ್ತುಗಳಲ್ಲಿ ಪ್ರಾಣಿಕೋಟಿಯು ಅದರಲ್ಲಿಯೂ ಮನುಷ್ಯ ಪ್ರಾಣಿಯು ಮಿಗಿಲಾದುದು. ಏಕೆಂದರೆ ಅವನಲ್ಲಿ ಸ್ವತಃ ದೇವತ್ವದ (ಸುಜ್ಞಾನದ) ವಾಸ್ತವ್ಯವು ಗೋಚರವಾಗುತ್ತದೆ. ಇಂತಹ ಸುಜ್ಞಾನವುಳ್ಳ ಶರಣ ಸತ್ಪುರುಷರು ಜಗತ್ತಿಗೆ ವಂದನೀಯವಾಗಿರುವರು. ಅಂತೆಯೇ ಜೈನರು ತೀರ್ಥಂಕರರನ್ನೂ ಮಹಾವೀರ (ಜಿನ) ಸ್ವಾಮಿಯನ್ನೂ ಆದರದಿಂದ ಪೂಜಿಸುವರು. ಅವರ ಮೂರ್ತಿಗಳನ್ನು ತಮ್ಮ ಬಸದಿಗಳಲ್ಲಿ ಸ್ಥಾಪಿಸಿಕೊಂಡು ಆರಾಧಿಸುತ್ತಿರುವರು. ಆ ಮೂರ್ತಿಗೆ ಬ್ರಹ್ಮದೇವ (ಭರಮಪ್ಪ) ಎಂದು ಕರೆಯುವರು.

## ಪುರುಷ.

ಪುರುಷಂ ಕೃಷ್ಣ ಪಿಂಗಲಂಃ - ಇದು ಮಂತ್ರದೊಳಗಿನ ಎರಡನೆಯ ಚರಣವಾಗಿದೆ. ಇದರಲ್ಲಿ ಪುರುಷ, ಕೃಷ್ಣ, ಪಿಂಗಲ ಈ ಮೂರು ಶಬ್ದಗಳ ಅರ್ಥ ವಿವರಣೆ ಬೇಕು.

ಪುರುಷ = ಮನುಷ್ಯ (ಗಂಡಸು). ಇದಕ್ಕೆ ಉತ್ತಮ ಶಬ್ದವು ಉತ್ತರಾಪೇಕ್ಷಣವಾದರೆ ಪುರುಷೋತ್ತಮ ಎಂದಾಗುವದು.

ಪುರುಷೋತ್ತಮ— ಪುರುಷನು ಶರೀರ ಬಲದಿಂದಲೂ ಬುದ್ಧಿ ಬಲದಿಂದಲೂ ಉತ್ತಮ ಸ್ಥಿತಿಯನ್ನು ಹೊಂದಿದಾಗ (ಪ್ರಾಯಕ್ಕೆ ಬಂದಾಗ) ಪುರುಷೋತ್ತಮನೆನಿಸುವನು. ಪುರುಷೋತ್ತಮನೆಂದರೆ ವಿಷ್ಣುವು ಎಂದು ಕೋಶಗ್ರಂಥ ಹೇಳುವದು.

ಕೃಷ್ಣ = ಕಪ್ಪು [ಅಜ್ಞಾನ (ಮಾಯಾ) ಮಯ ಅಸತ್ತು]

**ಪಿಂಗಲಂ** = ಪಿಂಗಲಕ್ಕೆ (ಪೀತವರ್ಣದ ಪೃಥ್ವಿಗೆ) ಮೋಹಿಸಿದವನು.

ಪುರುಷ ಕೃಷ್ಣ ಪಿಂಗಲಂಃ— ಪುರುಷೋತ್ತಮನು (ವಿಷ್ಣುವು ಮಾಯಾ ಮಯವಾದ ಭೂಲೋಕಕ್ಕೆ ಮೋಹಿಸಿದವನು.)

'ಇಲ್ಲಿ ಬಂದಿರುವ ಪುರುಷ ಶಬ್ದವು ಪುರುಷೋತ್ತಮ ಶಬ್ದದ ಸಂಕ್ಷಿಪ್ತ ರೂಪವು. ವಿಷ್ಣು ಶಬ್ದವೇ ಮೂಲತಃ ವಿಶ್= (ಪ್ರವೇಶಿಸು) ಎಂಬ ಧಾತುವಿನಿಂದ ಹುಟ್ಟಿರುತ್ತದೆ. ಆತನು ಪ್ರಪಂಚವನ್ನು ಮೋಹಿಸಿ ಅದನ್ನು ಪಡೆದು ಭೋಗಿಸಲಿಕ್ಕೆ ಆತುರಪಟ್ಟವನು. ಅಂತೇ ಜಗತ್ತಿನ ರಕ್ಷಣ ಕಾರ್ಯಗಳನ್ನು ವಹಿಸಿರುವನು. ವಿಷ್ಣುವಿಗೆ ಲಕ್ಷ್ಮೀಪತಿ, ಕ್ಷೀರ ಸಾಗರವಾಸಿ, ಶೇಷಶಾಯಿ, ಪಕ್ಷಿವಾಹನ, ಅಸುರಾರಿ, ಚತುರ್ಭುಜ ಮೊದಲಾದ ಹೆಸರುಗಳು ಪರಿಶೋಭಿಸುತ್ತವೆ. ಅವುಗಳನ್ನು ಕುರಿತು ಕೆಳಗೆ ತುಸುಮಟ್ಟಿಗೆ ಆಲೋಚಿಸುವ.

(ಅ) ಲಕ್ಷ್ಮೀಪತಿ— ವಿಷ್ಣುವಿಗೆ ಲಕ್ಷ್ಮೀದೇವಿಯು ಸತಿಯಾಗಿದ್ದಾಳೆ. ಜಗತ್ತಿನೊಳಗಿನ ಉತ್ತಮೋತ್ತಮ ವಸ್ತುಗಳ ಸಂಗ್ರಹವೇ ಈ ಲಕ್ಷ್ಮೀ ದೇವಿಯು. ಮುಖ್ಯವಾಗಿ ಹೊನ್ನು ಹೆಣ್ಣು ಮಣ್ಣುಗಳು ಸಂಪತ್ತೆಂದೆನಿಸುವವು. ಇವಕ್ಕೆ ಶ್ರೀ (ಸಿರಿ) ಎಂತಲೂ ವಿಷ್ಣುವಿಗೆ ಶ್ರೀಪತಿ ಇಲ್ಲವೆ ರಮಾರಮಣನೆಂತಲೂ ಸಂಬೋಧಿಸುವರು. ಈ ಸಿರಿದೇವಿಯನ್ನು ಆತನು ಅತ್ಯಂತ ಪ್ರೇಮದಿಂದ ಕಾಪಾಡುವನು.

(ಆ) ಕ್ಷೀರಸಾಗರವಾಸಿ— ಇದರ ಅರ್ಥವು ಹಾಲುಸಮುದ್ರದಲ್ಲಿರುವವನು ಎಂದಾಗುವದು. ಆದರೆ ಅಂತಹ ಸಮುದ್ರವು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಆದುದರಿಂದ ಹೈನದ (ಹಾಲು ಬೆಣ್ಣೆಗಳ) ಉಪಯೋಗವನ್ನು ಮನಮುರಿ ಮಾಡುವವರಲ್ಲಿಯೇ ತೊಡಗಿದವರೆಂದು ಹೇಳಬಹುದು.

ಕೃಷ್ಣಾವತಾರ ನೋಡಿರಿ, ಅಥವಾ,

ಕ್ಷೀ= ಕ್ಷಯವಾಗುವ, ನಾಶವಾಗುವ, ಅಸತ್ತಾಗಿರುವ ಪದಾರ್ಥ.

ರ = ಅಂತಹ ಅಧ್ರುವ ವಸ್ತುಗಳ ಸಮುದಾಯದಲ್ಲಿ ರಮಿಸುವವ (ಆರಾಮುಪಡೆವವ)

ಸಾಗರವಾಸಿ = ತರುಣರೆಲ್ಲರೂ ಅಂತಹರೇ. ಆದುದರಿಂದ ಅವರೆಲ್ಲ ರಲ್ಲಿ ಸಾಮುದಾಯಿಕವಾಗಿ ಇರುವವ, ಅವನೇ ಪುರುಷ ( ವಿಷ್ಣು ) ( ಇಲ್ಲಿ ಸಾಗರ ಶಬ್ದಕ್ಕೆ ಸಮುದಾಯವೆಂದು ಹೇಳಿರುತ್ತದೆ. )

(ಇ) ಶೇಷಶಾಯಿಃ— ಐದು ಹೆಡೆಯ ಮಹಾಶೇಷದ ಮೇಲೆ ಮಲಗಿದವನು. ಇಲ್ಲಿ ಜಗತ್ತಿನ ಪಂಚ ವಿಷಯಗಳೇ ಪಂಚಹೆಡೆಯ ಘಟಸರ್ಪವು. ಅವು ಯಾವಾಗ ಯಾವ ರೀತಿಯಿಂದ ನಾಶ ಮಾಡುವವೆಂಬ ನಿಯಮವೇ ಇಲ್ಲ. ಇಂತಹ ದುರ್ಘಟ ಸರ್ಪದಂತಿರುವ ಪ್ರಪಂಚವನ್ನು ಯುವಕರು ಬಹು ಪ್ರೇಮದಿಂದ ಸ್ವೀಕರಿಸುವರು.

(ಈ) ಗರುಡವಾಹನಃ— ಗರುಡವು ಒಂದು ಬಲಿಷ್ಠವಾದ ಸುಂದರ ಪಕ್ಷಿಯು. ಅದರ ಮೇಲೇರಿ ವಿಷ್ಣುವು ಎಲ್ಲೆಡೆಯಲ್ಲಿಯೂ ಸಂಚರಿಸುತ್ತಿರುವನೆಂದು ಪುರಾಣಗಳು ಹೇಳುತ್ತಿರುವವು. ಪ್ರಾಯದ ಜನರಾದರೂ ತರತರದ ಕಲ್ಪನಾಮಯ ಆಕಾಶದಲ್ಲಿ ಮನೋರೂಪ ಹಕ್ಕಿಯನ್ನು ಹತ್ತಿಕೊಂಡು ಸಂಚರಿಸುತ್ತಿರುವದರ ಅನುಭವವು ಎಲ್ಲರಿಗೂ ಬಂದಿರುವದಷ್ಟೇ.

(ಉ) ಅಸುರಾರಿಃ— ಜಗತ್ತಿನ ಪರಿಪಾಲನ ಕಾರ್ಯವನ್ನೇ 'ವಿಷ್ಣುವು' ಕೈಕೊಂಡುದರಿಂದ ದುಷ್ಟರಾದ ರಾಕ್ಷಸರನ್ನು ಸಂಹರಿಸುವದರಲ್ಲಿ ಆತನು ಹೆಸರಾಗಿದ್ದಾನೆ. ಸಜ್ಜನರ ಸಂರಕ್ಷಣೆಗಾಗಿ ಇಂತಹ ದುರ್ಜನರನ್ನು ನಿಗ್ರಹಿಸದಿದ್ದರೆ ನಿರ್ವಾಹವೇ ಇಲ್ಲ. ಅಂತೇ ಬಹು ಜನ. ಅನೇಕೆ, ಎಲ್ಲ ರಾಕ್ಷಸರನ್ನು ಅವನು ಕೊಲ್ಲುವನು. ಪ್ರಾಯಸ್ಥರಾದರೂ ಸದಾ ಕಾಲದಲ್ಲಿಯೂ ಕೂಡ ಇದೇ ಸಂರಕ್ಷಣ ಕಾರ್ಯವನ್ನು ನಿರ್ವಹಿಸಲು ಹೆಣಗುತ್ತಿರುವರು. ದೇಶ ರಕ್ಷಣೆಗಾಗಿ ಸೈನಿಕರಾಗಿರುವದನ್ನು ಎಲ್ಲರೂ ಪ್ರತ್ಯಕ್ಷ ಕಾಣುತ್ತಿರುವರು.

(ಊ) ಚತುರ್ಭುಜಃ— ವಿಷ್ಣುವು ನಾಲ್ಕು ತೋಳಿನನು. ಧರ್ಮ ಅರ್ಥ ಕಾಮ ಮೋಕ್ಷವೆಂಬವೇ ಆ ನಾಲ್ಕು ಕರಗಳು. ಇವಕ್ಕೆ ಪುರುಷಾರ್ಥವೆನ್ನುವರು. ಇವನ್ನು ಸಂಪಾದಿಸುವದೇ ಪುರುಷನ ಮುಖ್ಯ ಕರ್ತವ್ಯ. ಪ್ರಾಯಸ್ಥರು ಸಹ ಈ ನಾಲ್ಕರ ಪ್ರಾಪ್ತಿಗಾಗಿಯೇ ತಾವು ಸಹ ಚತುರ್ಭುಜರಾಗುವರು. ಅಂದರೆ ವಿವಾಹಿತರಾಗಿ ಪತ್ನೀಸಹಿತ ನಾಲ್ಕುಕರಗಳುಳ್ಳವರಾಗುವರು. ಪ್ರಪಂಚದಲ್ಲಿ ಪರಸ್ಪರ ಸಹಾಯ ಸಹಾನುಭೂತಿಯಿಂದ ನಡೆದು ಪುರುಷಾರ್ಥ ಗಳಿಸುವದೇ ಲಗ್ನ ಸಮಾರಂಭದ ಮುಖ್ಯೋದ್ದೇಶವಿರುವದು.

## ವಿಷ್ಣುವಿನ ಬಗೆ'

ಈ ಪುರುಷಾರ್ಥಗಳನ್ನು ವಿವರಿಸುವ ಪೂರ್ವದಲ್ಲಿ ವಿಷ್ಣುವಿನ ಬಗೆಗೆ ಉತ್ಪನ್ನವಾಗುವ ಇನ್ನೊಂದು ವಿಷಯುವನ್ನು ಚರ್ಚಿಸುವದು ಯೋಗ್ಯವೆನಿಸುತ್ತದೆ. ಮೇಲಿನ ಸಂಗತಿಗಳಿಂದ ಆ ಸದ್ವಸ್ತುಗಳನ್ನು ಬೆಂಬಳಿಸಿದ ವಿಷ್ಣುವು ಜಾಣನಲ್ಲ, ಅಜ್ಞಾನಿಯು ಎಂದು ಭಾಸವಾಗುವದು. ಆದರೆ ಹಾಗೆ ಆತನೇನು ನಿಜವಾಗಿಯೇ ಅಜ್ಞಾನಿ ಇರುವನೇ? ಛೇ ಎಂದೂ ಅಲ್ಲ, ಭ್ರಾಂತಿಯ ಆರೋಪಣೆ ಆತನನ್ನು ಎಷ್ಟುಮಾತ್ರವೂ ಸೋಂಕದು. ನೋಡಿರಿ, ಮೇಲಿನ ವಿಚಾರವು ಕೇವಲ ತಾತ್ವಿಕ ದೃಷ್ಟಿಯಿಂದ ಹುಟ್ಟಿದ್ದು. ಅದು ಒಂದು ಮಗ್ಗುಲಾಯಿತು. ಅದಕ್ಕೆ ಇನ್ನೊಂದು ಲೌಕಿಕ ಮಗ್ಗುಲಿರುವದು. ಮನುಜರೆಲ್ಲರು ದೇಹಧಾರಿಗಳು. ಶರೀರ ಪೋಷಣೆಯು ಜಗತ್ತಿನೊಳಗಿನ ವಸ್ತುಗಳಿಂದಲೇ (ಅನ್ನ ನೀರುಗಳಿಂದಲೇ) ಆಗುವದಷ್ಟೇ. ಅವು ಚಿಕ್ಕವರಿಗೂ ತರುಣರಿಗೂ ಮುಪ್ಪಿನವರಿಗೂ ಎಲ್ಲರಿಗೂ ಬೇಕೇಬೇಕು. ಅವನ್ನು ಪಡೆದು ಅವರಿಗೆ ಪೂರೈಸುವದು ಯುವಕರ ವಿನಾ ಇನ್ನಾರಿಗೆ ಸಾಧ್ಯವದೆ? ಹಾಗೆ ಅವರು ಮಾಡದಿದ್ದರೆ ಸೃಷ್ಟಿಯ ಪಾಲನೆ ಪೋಷಣವು ವಿಷ್ಣುವಿನಿಂದ ಈಡೇರಲಾರದು. ಜಗವೆಲ್ಲ ಅಳಿದುಹೋಗುವ ಹೊತ್ತು ಒದಗುವದು. ಆದುದರಿಂದ ಪೃಥ್ವಿಯ ನಾಶವಂತ ವಸ್ತುಗಳನ್ನು ಸಹ ಪುರುಷೋತ್ತಮನು ಅವಶ್ಯವಿದ್ದಷ್ಟು ಸಂಗ್ರಹಿಸಲೇಬೇಕು. ಈ ವಿಚಾರ ಸರಣಿಯಿಂದ ವಿಷ್ಣು ದೋಷರಹಿತನಾಗುವನು. ಅವನು ಅಜ್ಞಾನಿಯೂ ಅಲ್ಲ, ಮಾಯಾ ವಿಶಿಷ್ಟನೂ ಅಲ್ಲ, ಭ್ರಾಂತನೂ ಅಲ್ಲ.

ಆದರೆ ಇಲ್ಲಿ ಒಂದು ಮಾತು ಲಕ್ಷದಲ್ಲಿಡತಕ್ಕದ್ದಿರುವದು. ಅದು:- ವಿಷ್ಣುವು ಜಗತ್ತಿನ ಅಸತ್ ಪದಾರ್ಥಗಳನ್ನು ಭೋಗಿಸಬೇಕೆಂದು ಹೇಳಿ ಅದಕ್ಕೊಂದು ಮಿತಿಯಿದೆ. ಹಾಗು ಅವುಗಳ ಸಂಗ್ರಹಕ್ಕೊಂದು ಮರ್ಯಾದೆಯುಂಟು. ಆಯಾಯ ಕಾಲದಲ್ಲಿ ತನಗೆ ಅವಶ್ಯವಿದ್ದಷ್ಟೇ ಕೂಡಹಾಕಿಕೊಂಡು ಅಳತೆಯಿಂದಲೇ ಉಪಭೋಗಿಸುತ್ತಿರಬೇಕು. ಆ ಪದಾರ್ಥಗಳನ್ನು ದೇವರು ಸಕಲರ ಸಂರಕ್ಷಣೆಗೆಂದು ಕೊಟ್ಟಿರುತ್ತಾನ. ಅತ್ಯಾಶೆಗೆ ಬಿದ್ದು ಒಬ್ಬನೇ ಹೆಚ್ಚಾಗಿ ಸಂಗ್ರಹಿಸಿದರೆ ಉಳಿದವರಿಗೆ ಅವು ಸಿಗಲಿಕ್ಕೆ ಅಡ್ಡಿಯಾಗಿ ಕಷ್ಟಕ್ಕೆ ಕಾರಣವಾಗುತ್ತದೆ. ಅಮಿತವಾಗಿ ಸೇವಿಸುವದರಿಂದ ಆರೋಗ್ಯಕ್ಕೆ ಹಾನಿ ಸಂಭವಿಸುವದು. ಯಾರಾದರೂ ಹೆಚ್ಚಾಗಿ ಸಂಗ್ರಹಿಸಿ ಅದರ ಮೇಲೆ ತಮ್ಮ ಬಾಧ್ಯತೆಯನ್ನು ಹೇಳುತ್ತ ಹೋಗುವದು ತೀರ ಹುಚ್ಚುತನ. ಅದರಿಂದ ಸಮಾಜದಲ್ಲಿ ಅನರ್ಥಗಳುಂಟಾಗುವವು.

ಇನ್ನು ಮೇಲೆ ಹೇಳಿದ ಪುರುಷಾರ್ಥಗಳತ್ತ ತೆರಳುವಾ. ಕ್ರಮವಾಗಿ ಕೆಳಗೆ ನೋಡುವದು.

ಧರ್ಮ :- ಅನ್ಯರಿಗೂ ತನಗೂ ಕೂಡಿಯೇ ಸುಖವಾಗುವಂತೆ ವರ್ತಿಸುವದೇ ಧರ್ಮವು. ತನ್ನ ಸುಖ ಸಾಧಿಸುವ ಸಲುವಾಗಿ ಯಾರಿಗೂ ಪೀಡೆಯನ್ನು ಸಹಸಾ ಮಾಡಲಾಗದು. ಅದು ಅಧರ್ಮ. ಒಂದುವೇಳೆ ತನ್ನ ಸ್ವಾರ್ಥವನ್ನು ಕಳೆದುಕೊಂಡು ಪರರಿಗೆ ಸುಖವಾಗುವಂತೆ ನಡೆಯ ಬೇಕು. ಹಾಗಾದರೆ ಪರಮ ಧರ್ಮವಾಗುವದು.

ಅರ್ಥ :- ಅರ್ಥವೆಂದರೆ ಪದಾರ್ಥ. ಜಗತ್ತಿನೊಳಗಿನ ನಾನಾ ವಿಧ ವಸ್ತುಗಳೇ ಅರ್ಥ. ಅವು ದೇಹ ರಕ್ಷಣೆಗೆ ಅವಶ್ಯವಾಗಿವೆ. ಆದರೂ ಅವನ್ನು ಧರ್ಮದ ತಳಹದಿಯ ಮೇಲೆಯೇ ಪಡೆಯತಕ್ಕುದು.

ಕಾಮ :— ಭೂಲೋಕದೊಳಗೆ ತರ ತರದ ಪದಾರ್ಥಗಳನ್ನು ಉಪಭೋಗಿಸಬೇಕೆಂಬ ಅಪೇಕ್ಷೆಯೇ ಕಾಮವು. ದೇಹಿಗೆ ಇಂಥ ಇಚ್ಛೆ ಯಾಗುವದು ಸ್ವಾಭಾವಿಕ. ಅವುಗಳ ಸೇವನೆಯಿಂದಲೇ ತನುವಿನ ಪೋಷಣವಾಗುವದು.

ಮೋಕ್ಷ :- ಮೋಕ್ಷವೆಂದರೆ ದೇವರ ಕೃಪೆಯನ್ನು ಪಡೆದು ಆತ ನಲ್ಲಿ ವಿಲೀನವಾಗುವದು. ಬರಿಯ ವಿಷಯ ಭೋಗಕ್ಕೂ ಶರೀರ ರಕ್ಷ ಣೆಗೂ ಈ ಜನ್ಮವಿಲ್ಲ. ಮೋಕ್ಷ ಗಳಿಸದಿದ್ದರೆ ಮಾನವ ಜನ್ಮವೇ ವ್ಯರ್ಥ ವಾಗಿ ಬಿಡುವದು.

ಧರ್ಮದ ಅವಲಂಬನದಿಂದಲೇ ನಮಗೆ ಬೇಕಾಗುವ ಒಡವೆಗಳ ನ್ನೆಲ್ಲ ದೊರಕಿಸ ತಕ್ಕುದಿರುವದಿಲ್ಲವೇ ? ಸ್ವತಃ ದೇಹ ಶ್ರಮಮಾಡಿ ಆ ವಸ್ತುಗಳನ್ನು ಸಂಪಾದಿಸಿದರೆ ಮಾತ್ರ ಅವು ತನ್ನವಾಗುವವು. ಭಿಕ್ಷೆ ಬೇಡಿ ಇಲ್ಲವೇ ಕಳವು ಮಾಡಿ ಅಥವಾ ಪರರನ್ನು ವಂಚಿಸಿ ಪಡೆದ ವಸ್ತುಗಳು ಅನ್ಯಾಯದಿಂದ ಬಂದಂತಹವುಗಳು. ಅವು ಅಧರ್ಮಮೂಲಕ ವಾದವುಗಳು.

ಹೀಗೆ ಸ್ವತಃ ದುಡಿದು ಗಳಿಸಿದ ಪದಾರ್ಥಗಳನ್ನು ಸಹ ಮಿತಿ ಯಿಂದಲೇ ವೆಚ್ಚಮಾಡಬೇಕು. ಅಷ್ಟರಿಂದಲೇ ತನ್ನ ಬಯಕೆಯನ್ನ

ಪೂರ್ತಿಗೊಳ್ಳಿಸಿಕೊಳ್ಳಬೇಕು ಒಣ ಆಶೆಗೆ ಬಿದ್ದು ಹೆಚ್ಚಾಗಿ ಸೇವಿಸಬಾರದು. ಹಾಗಾದರೆ ಆರೋಗ್ಯವಳಿದು ಬೇನೆ ಬೇಸರಿಕೆಗೆ ಅವಕಾಶವಾಗುವದು. ಅದರಿಂದ ಬಳಲಿ ಬೆಂಡಾಗುವನು. ಅಶಕ್ತತೆ ಹೆಚ್ಚುವದು ದೇವರ ಕೃಪೆ ಪಡೆಯಲಿಕ್ಕೆ ಪ್ರತಿಕೂಲವಾಗುವದು. ಭಕ್ತಿ ಪೂಜಾದಿಗಳನ್ನು ನೆರವೇರಿಸಲಿಕ್ಕೂ ಗುರು ಜಂಗಮರಿಗೆ ಸೇವೆ ಸಲ್ಲಿಸಲಿಕ್ಕೂ ಗ್ರಂಥಾದಿಗಳ ನೋದಿ ಜ್ಞಾನಾರ್ಜನೆ ಮಾಡಲಿಕ್ಕೂ ದೇಹವು ಸುದೃಢವಾದುದಿರಬೇಕು. ಇಂತಹದರಿಂದಲೇ ಮೋಕ್ಷ ಪಡೆಯಲಾಗುವದ. "ನಾಯಮಾತ್ಮಾ ಬಲಹೀನೇನ ಲಭ್ಯತೇ" ಎಂದು ಪೂರ್ವಿಕರಾದ ಅನುಭಾವಿಗಳು ಸಾರಿದ್ದಾರೆ. ರೂಪಕ್ಕೆ ಅನುಕೂಲವೂ ಅನುರೂಪವೂ ಆಗುವಂತೆಯೇನವನ್ನು ಕಾಮನೆಗಳಿರುವದು ಅವಶ್ಯವಿದೆ.

ಈ ಪುರುಷಾರ್ಥಗಳನ್ನು ಯೋಗ್ಯ ರೀತಿಯಿಂದ ಪಡೆಯಲಿಕ್ಕೆ ಮಾನವನನ್ನು ಯಾವಾಗಲೂ ಎಚ್ಚರಿಸುವ ಸಲುವಾಗಿಯೇ ವಿಷ್ಣುವು ತನ್ನ ಕರಗಳಲ್ಲಿ ಕ್ರಮವಾಗಿ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸುವನು. ಶಂಖ ಊದುವದೆಂದರೆ ಮೇಲಿಂದ ಮೇಲೆ ಧರ್ಮದಿಂದ ನಡೆ ಎಂದು ಎಚ್ಚರಿಸುವದು. ಈ ಉಪದೇಶವನ್ನು ಅಲಕ್ಷಿಸಿ ಪರರನ್ನು ಮೋಸಗೊಳಿಸಿ ಅವರ ಒಡವೆಗಳನ್ನಪಹರಿಸಿಕೊಂಡು ಮನ ಬಂದಂತೆ ಭೋಗಿಸುತ್ತ ಅವುಗಳಲ್ಲಿಯೇ ಆಸಕ್ತನಾದರೆ "ಮುಂದೆ ಭವ ಚಕ್ರಕ್ಕೆ ಒಳಗಾಗುವೆ" ಎಂಬುದನ್ನು ಸೂಚಿಸುವ ಸಲುವಾಗಿಯೇ ಚಕ್ರವಿಡಿದಿರುವನು. ಈ ರೀತಿ ವಿಷಯಗಳನ್ನು ಮಿತಿಮೀರಿ ಭೋಗಿಸುವದರಿಂದ ಮನುಷ್ಯನು ದುಃಖಕ್ಕೆ ಒಳಗಾಗುವನು. ಈ ದುಃಖ ಭೋಗಿಸುವದೇ ಡೊಣ್ಣೆಯ ( ಗದೆಯ ) ಪೆಟ್ಟಿಗೆ ಗುರಿಯಾದಂತೆಯೇ ಸರಿ. ಇದರ ನೆನಪು ಮಾಡಿಕೊಡುವ ಉದ್ದೇಶದಿಂದಲೇ ಗದೆಯು ಧರಿಸಲ್ಪಟ್ಟಿರುವದು. ನಾಲ್ಕನೆಯ ಹಸ್ತದಲ್ಲಿ ಪದ್ಮ ( ಕಮಲ ) ಇರುವದು. ಅದು ಬಾಹ್ಯದಲ್ಲಿ ಮನೋಹರವೂ ತೀರ ಮೃದುವಾದುದೂ ಇದ್ದು ಒಳಗೆ ಸುಗಂಧವನ್ನು ಸಂಗ್ರಹಿಸುತ್ತದೆ. ಅದರಂತೆಯೇ ಮುಮುಕ್ಷುವು ಹೊರಗೆ ಸಕಲರಿಗೂ ಬೇಕಾಗಿ ಪ್ರೀತಿ ವಿಶ್ವಾಸಗಳಿಂದ ನಡೆಯಬೇಕು. ಅಂತರಂಗದಲ್ಲಿ ಸುಗುಣ ಸುವಿಚಾರಗಳ ಸುವಾಸವು ಇಡುಗಿ ಹೊರಸೂಸುತ್ತಿರಬೇಕು. ಅಂದರೇನೇ ಅವನು ಮೋಕ್ಷವನ್ನು ಹೊಂದುವನು. ಇದನ್ನು ಈ ಪದ್ಮವು ಬೋಧಿಸುವದು.

ಇದರಂತೆಯೇ ಇನ್ನೂ ಅನೇಕ ಹೆಸರುಗಳನ್ನು ಪರೀಕ್ಷಿಸಿದರೂ ವಿಷ್ಣುವು ಪ್ರಾಯಕ್ಷನೆಂದೇ ವಿದಿತವಾಗುವದು. ಇರಲಿ, ಇನ್ನು ಪುರಾಣ ಪುರುಷಾದಿ ಶಬ್ದಗಳನ್ನು ನಿರೀಕ್ಷಿಸೋಣ.

ಪುರಾಣ ಪುರುಷಃ— (೧) ಮನುಷ್ಯ ಪ್ರಾಣಿಯುದ್ಭವಿಸಿದಂದಿನಿಂದ ಒಂದೇ ಶಿವನಾಗಿ ಅದರಲ್ಲಿ ವಾಸಿಸುವ ಆತ್ಮ(ಜ್ಞಾನ) ಪುರಾಣ ಪುರುಷ.

(೨) ವರ್ತಮಾನ ಜನ್ಮದಲ್ಲಿ ತನ್ನಲ್ಲಿರುವ ಆತ್ಮವನ್ನು ಅರಿತು ಅದರ ಸ್ಥಿತಿಗಳನ್ನು ಸರಿಯಾಗಿ ತಿಳಿದುಕೊಂಡ ಅನುಭಾವಿಯಾದ ವಯಾತೀತ (ಮುದುಕ) ಈತನೇ ನಾರಾಯಣ. (ನಾರ+ಅಯನ) ನೆನಿಸುವನು. ನಾರ= ಜ್ಞಾನ (ಇದು ನರನ ವೈಶಿಷ್ಟ್ಯ) ಆದಕಾರಣ ಜ್ಞಾನ ಮುಖನಾಗಿ ಸಾಗಿದವನೇ ನಾರಾಯಣನು.

ಯಜ್ಞಪುರುಷಃ— (೧) ಯಜ್ಞದಲ್ಲಿ (ಪೂಜೆಯಲ್ಲಿ) ಸಮರ್ಪಿಸುವ ವಸ್ತುಗಳನ್ನೆಲ್ಲ ಸ್ವೀಕರಿಸುವ ಪರಬ್ರಹ್ಮ ಸ್ವರೂಪಿಯಾದ ಕಾರಣ ಪುರುಷ.

(೨) ತಾನು ಆರೆಂಬುದರ ಸತ್ಯ ಸ್ವರೂಪವನ್ನು ಒಳಿತಾಗಿ ಮನಗಂಡು ತದನುಸಾರ ವರ್ತಿಸುವ ಸರ್ವರಿಗೂ ಸೇವ್ಯನಾದ ಪುರುಷ.

ನರಕಾಂತಕ (ನರ ಇಲ್ಲವೆ ನರಕವನ್ನು ಅಂತಗೊಳಿಸಿದವ) ನರ (ನರಕ) ವೆಂದರೆ ಮನುಷ್ಯ ಶರೀರ. ಅದನ್ನು ಹೊರಗೆ ಭಾಂಡ ಸ್ವರೂಪವಾಗಿರಿಸದೆ ಒಳಗಿನ ಪ್ರಾಣಲಿಂಗ (ಜೀವಾತ್ಮ) ದಲ್ಲಿ ವಿಲೀನಗೊಳಿಸಿ ಭಾಂಡ ಭಾಜನವೆರಡನ್ನೂ ಏಕರೂಪಗೊಳಿಸಿದವನೇ ನರಕಾಂತಕ ಶ್ರೀಕೃಷ್ಣನು. ಸುಜ್ಞಾನಿಯಾದಾಗಲೇ ನರಸುರನ (ಪೀಡೆಯು ಸ್ವರೂಪವಾದ ನರದೇಹದ) ವಧೆ ಮಾಡಿದನು. ಅಂದರೆ ಅದನ್ನು ಒಳಗಿನ ಆತ್ಮದಲ್ಲಿಯೇ ಏಕೀಭವಿಸಿದನು.

ವಿಶ್ವಂಭರಃ— ಇಡೀ ವಿಶ್ವವನ್ನೆಲ್ಲ ತಾನೊಬ್ಬನೇ ವ್ಯಾಪಿಸಿ ನಿಂತಿರುವೆನೆಂಬ ತಾತ್ವಿಕ ಜ್ಞಾನ ಪಡೆದವನೇ (ತನ್ನ ಸ್ವರೂಪವೇ ವಿಶ್ವವೆಂಬೆಂದು

ಅರಿತು ಆಚರಿಸುವವನೇ ) ವಿಶ್ವಂಭರನು. ಈತನ ಕ್ರಿಯಾಚಾರಗಳೆಲ್ಲ ಸಹಜವಾಗಿ ಘಟಿಸುತ್ತಿರುವವು.

ಅಚ್ಯುತಃ— ತಾನು ಪಡೆದ ಮೇಲ್ತರಗತಿಯು ಸ್ಥಾನದಿಂದ ಹಿಂಜರಿಯದವ, ಚ್ಯುತಿಯನ್ನು ಹೊಂದದವ. ಏಕಮೇವಾದ್ವಿತೀಯತ್ವವನನುಭವಿಸುವವ.

ಹೀಗೆ ವಿಷ್ಣುವಿನ ಪರಮೋಚ್ಚ ಸ್ವರೂಪವೂ ಉಂಟು. ತರುಣನು ಮುಂದೆ ಊರ್ಧ್ವರೇತನಾದಾಗಲೇ ಈ ಸ್ಥಿತಿಯು ಪ್ರಾಪ್ತವಾಗುವದು.

ವಿಷ್ಣುವಿನ ದಶಾವತಾರಗಳಲ್ಲಿ ರಾಮ ಕೃಷ್ಣಪೆಂಬೆರಡು ಅವತಾರಗಳು ಬಹು ಮಹತ್ವದವಾಗಿವೆ ರಾಮನು ಮೂಲತ: ಸಾತ್ವಿಕೋತ್ತಮನೂ ಜ್ಞಾನಿಯೂ ಆದ ಪುರುಷನು. ಶ್ರೀಕೃಷ್ಣನು ಮುತ್ಸದ್ದಿಯೂ ಜ್ಞಾನಘನನೂ ಆದ ಸತ್ಪುರುಷನು. ಇವರಿಬ್ಬರನ್ನೂ ವೇದ ಧರ್ಮಗಳು ಇಂದಿಗೂ ಮೂರ್ತಿರೂಪದಿಂದ ಆರಾಧಿಸುತ್ತಿರುವವು.

ಇನ್ನು ಸೂರ್ಯನನ್ನು ವಿಷ್ಣುವೆಂದು ಬಗೆದುದನ್ನು ವಿಚಾರಿಸುವ. ಸೂರ್ಯನಿಗೂ ಸಹ 'ಪುರುಷ' ಎಂಬ ಹೆಸರುಂಟು. ಆತನು ಸರ್ವಥಾ ಪ್ರಾಯಸ್ಥನಾಗಿಯೇ ಇರುವನು. ಆತನೂ ಜಗತ್ತಿನ ಸಂರಕ್ಷಣ ಕಾರ್ಯವನ್ನು ತಾನಾಗಿಯೇ (ದೇವರ ಪ್ರೇರಣೆಯಿಂದಲೇ) ಧಾರಣ ಮಾಡಿದ್ದಾನೆ. ಆರ್ಯರು ಉತ್ತರ ಧ್ರುವ ಪ್ರದೇಶದಲ್ಲಿದ್ದಾಗಿನಿಂದಲೇ ಸೂರ್ಯನನ್ನು ಪೂಜಿಸುತ್ತಿರುವರು. ಆತನು ದಿನಕರನೂ ದಿವಾಕರನೂ ಆಗಿರುವದಲ್ಲದೆ ಅವನಿಂದಲೇ ಮಾಸ, ಋತು, ಅಯನ ವರ್ಷಗಳೂ ಉದ್ಭವಿಸುತ್ತವೆ. ಇವೆಲ್ಲವನ್ನು ನೋಡಿ ವೇದ ಧರ್ಮಗಳು ಅವನನ್ನು ವಿಷ್ಣುವೆಂದು ಕರೆದರು. ಈಗಲೂ ಕೂಡ ದಿನಾಲು ಸೂರ್ಯ ನಮಸ್ಕಾರ ಹಾಕುವರು. ಮುಂಜಾವಿನಲ್ಲಿ ಆತನಿಗೆ ಅರ್ಘ್ಯೋದಕವನ್ನೀಯುವರು.

ಆರ್ಯರು ಬಹುಶಃ ಯಾವಾಗಲೂ ಹೊರದೃಷ್ಟಿಯುವರು. ಅವರು ಉತ್ತರದೇಶವನ್ನೆಲ್ಲ ಆಕ್ರಮಿಸಿ ದಕ್ಷಿಣದಲ್ಲಿ ಬಂದಮೇಲೆ ದ್ರವಿಡರ ಸಹವಾಸದಿಂದ ಮಹಾದೇವ ( ಶಿವ ಅಥವಾ ಲಿಂಗ ) ನನ್ನು ಅರಿತರು. ಒಳದೃಷ್ಟಿಯುಕಡೆಗೆ ಹೊರಳಿದರು. ಹಾಗು ಶಿವನ ಭಕ್ತಿಗೆ ಮೆಚ್ಚಿದರು. ಆಮೇಲಿನ ತರುಣರು ( ವಿಷ್ಣು ಸ್ವರೂಪರು ) ಸಹ ಶಿವನನ್ನು ಪೂಜಿಸ

ಹತ್ತಿದರು. ವಿಷ್ಣುವಿನ ಪೂಜೆಯು ಹೊರವಸ್ತುಗಳಿಂದ ನೆರವೇರಿಸಲ್ಪಡು ತ್ತಿತ್ತು. ಅದು ಜಗದೊಳಗಿನ ಸುಂದರವೂ ಸುಗಂಧಯುಕ್ತವೂ, ಆದ ಪದಾರ್ಥಗಳಿಂದಲೂ ಸವಿ ಸವಿ ನೈವೇದ್ಯದಿಂದಲೂ ಈಡೇರುತ್ತಿತ್ತು. ಆದರೆ ಮಹಾದೇವನನ್ನು ಅಂತಹವುಗಳಿಂದಲೇ ಅರ್ಚಿಸಿದರೆ ಅವನ ಒಲು ಮೆಯು ಎಂದೂ ಆಗದು, ಅದಕ್ಕೆ ಆಂತರಿಕ ಜ್ಞಾನ ದೃಷ್ಟಿಯೇ ಬೇಕು, ಎಂದು ತಿಳಿದು ಆ ದೃಷ್ಟಿಕಮಲವನ್ನೇ ಶಿವಪಾದಕ್ಕೆ ವಹಿಸಿದರು. ಹೀಗೆ ಪ್ರಾಯಶ್ಚರು ಶಿವನ ಅರ್ಚನೆಗೆ ಒಲಿದುದನ್ನೇ ನಿಜಗುಣ ಶಿವಯೋಗಿ ಗಳು "ಹರಿಯ ನಯನದ ಕುರುಹುವಿಡಿದಿಹುದೀಗ ಗುರು ಶಂಭುಲಿಂಗ ನಿನ್ನ ದಿವ್ಯ ಪಾದ" ಎಂದು ವರ್ಣಿಸಿದ್ದಾರೆ. ಈ ಮೇರೆಗೆ ತನ್ನ ಭಕ್ತ ರೆಲ್ಲರೂ ಹೊಸದಾಗಿ ಮಹಾದೇವನ ಆರಾಧನೆ ಕೈಕೊಂಡುದನ್ನು ಸೂರ್ಯನು ಕಂಡು ತಾನೂ ಅವನನ್ನು ಪೂಜಿಸಹತ್ತಿದನು. ರವಿಯು ಸಹ ಸಹಸ್ರ ಕಮಲಗಳನ್ನು (ಕಿರಣಗಳನ್ನು) ಧರಿಸುವಾಗ ಒಂದು ಕಿರಣ ತೋರ ದಿರಲು ತನ್ನ ಕಣ್ಣನ್ನು ಕಿತ್ತು (ಒಳಗಿರುವ ಕೇಂದ್ರವನ್ನೇ ತೆಗೆದು) ಶಿವನ ಅಂಘ್ರಿಗೆ ಧರಿಸಿದನು. ಅದಕ್ಕೆ ಮಹಾದೇವನು ಸಂತುಷ್ಟನಾಗಿ ರವಿಗೆ ಚಕ್ರಾಯುಧವನ್ನು ವರವಾಗಿ ಕರುಣಿಸಿದನು. ಈ ಚಕ್ರದಲ್ಲಿಯೇ (ಕಾಲಚಕ್ರದಲ್ಲಿಯೇ) ಸಿಲುಕಿ ಜಗವೆಲ್ಲವೂ ಸಣ್ಣಾಗಿ ವಿನಾಶವಾಗುತ್ತಿರು ವುದು. ಆ ಚಕ್ರವನ್ನೇ ಜನರು ಕಾಲ ಅಥವಾ ಯಮನೆಂದು ತಿಳಿದಿರು ವರು. ಹೀಗೆ ವಿಷ್ಣುವು ಶಿವನನ್ನು ಅಧಿದೇವತೆಯನ್ನು ಮಾಡಿಕೊಂಡು ದನ್ನೇ ಶಿವಭಕ್ತರು "ವಿಷ್ಣುವಲ್ಲಭಾ ವಿರೂಪಲೋಚನಾ ವಿಶಾಲ್ಯಾಲಾ ತವಚರಣಂ" ಎಂದು ಮಹಾದೇವನನ್ನು ಹಾಡಿಕೊಂಡಿದ್ದಾರೆ. ಇರಲಿ. ಇನ್ನು ವಿರೂಪಾಕ್ಷನ ವಿಷಯವನ್ನು ನೋಡೋಣ.

## ವಿರೂಪಾಕ್ಷ

ಊರ್ಧ್ವರೇತಂ ವಿರೂಪಾಕ್ಷಂ ಎಂದು ಮಂತ್ರದ ಮೂರನೆಯ ಚರಣವು ಸಾರುತ್ತದೆ. ಇಲ್ಲಿ ಊರ್ಧ್ವರೇತ ವಿರೂಪಾಕ್ಷ ಶಬ್ದಗಳ ಅರ್ಥವು ಅಷ್ಟೇನೂ ಕಠಿಣವಿರದಿದ್ದರೂ ಕೆಳಗೆ ಅವನ್ನು ಸಹ ವಿವ ರಿಸುತ್ತದೆ.

ಊರ್ಧ್ವ ರೇತಂ :— ಮೇಲ್ಮುಖನಾದ (ಅಸತ್ತೆನಿಸುವ ಪೃಥ್ವಿಯ ಕಡೆ ಒಲಿಯದೆ ಸತ್ತೆನಿಸುವ ದೇವನತ್ತ ಹರಿಯುತ್ತಿರುವ) ರೇತಸ್ಸುಳ್ಳ ವನು. ರೇತಸ್ಸು ಅಂದರೆ ವೀರ್ಯ ಅಥವಾ ಸಾಮರ್ಥ್ಯ.

**ವಿರೂಪಾಕ್ಷ :**— ( ವಿರೂಪ+ಅಕ್ಷ+ಅ ) ಆಕಾರ ಹೊಂದಿ ತೋರ ದಿರುವ ( ಅದೃಶ್ಯವಾದ ) ಕಣ್ಣುಳ್ಳವನು.

ಊರ್ಧ್ವರೇತಸ ಸಾಮರ್ಥ್ಯವೆಲ್ಲ ಯಾವಾಗಲೂ ಶಾಶ್ವತ ವಸ್ತುವಿನತ್ತ ಸಾಗುತ್ತದೆ. ಅಂತಹ ವಸ್ತುವಿಗೆ ಸತ್ತು ಇಲ್ಲವೆ ಶಿವನು ಅಥವಾ ಸುಜ್ಞಾನವೆನ್ನುತ್ತಾರೆ. ಸಾಮಾನ್ಯ ಜನರ ಲಕ್ಷಣವು ತಮ್ಮ ಮುಂದಿರುವ ಪೃಥ್ವಿಯ ಕಡೆ ಅಂದರೆ ಹೊನ್ನು ಹೆಣ್ಣು ಮಣ್ಣು ಮುಂತಾದ ನಾನಾವಿಧ ಪದಾರ್ಥಗಳಿರುವ ಸಂಸಾರದ ಕಡೆ ಹೋಗುತ್ತದೆ. ಅವರು ಅವುಗಳ ಮಾಯೆಗೊಳಗಾಗಿ ಅವನ್ನೇ ದೊರಕಿಸಿ ಭೋಗಿಸಿ ಅವೇ ಸುಖವು ಮೇಲಾದುದೆಂದು ನಂಬುವರು. ಅವೆಲ್ಲ ನಾಶವಂತವಾದುದರಿಂದ ಕೊನೆಗೆ ದುಃಖಕ್ಕೆ ಒಳಗಾಗುವರು. ಅವುಗಳಿಗಿಂತ ಮಿಗಿಲಾದ ಪರಮಾನಂದ ಸುಖವು ಶಿವನಲ್ಲಿರುವುದೆಂಬುದನ್ನು ಅವರು ಅರಿಯರು. ಅದು ಸಹಜಾನಂದವು. ಇನ್ನೊಂದನ್ನವಲಂಬಿಸಿದುದಲ್ಲ. ಅದು ತನ್ನಲ್ಲಿಯೇ ತೋರುವದು. ಈ ಸುಖವು ನಿತ್ಯವಾದುದು. ಈ ಸ್ಥಿರ ವಸ್ತುವಿನ ಕಡೆಗೆ ಹೊರಳಿದವರು ಶಾಶ್ವತ ಸುಖಿಗಳಾಗುವರು. ಇವರೇ ಊರ್ಧ್ವರೇತರು (ಮುಖಿಗಳು)

ವಿರೂಪಾಕ್ಷಿಯು ಆಕಾರಕ್ಕೆ ಬಾರದಿರುವ ಕಣ್ಣು ನಮ್ಮವೆರಡೂ ಕಣ್ಣುಗಳು ಹೊರಗೆ ತೋರುವಂತಹವಿರುವವು. ಆದರೆ ಈ ಅದೃಶ್ಯವಾದ ಕಣ್ಣು ಯಾವದು ಅದು ಎಲ್ಲಿರುವದು, ಎಂದು ಸಹಜವಾಗಿಯೇ ಪ್ರಶ್ನೆಯುದ್ಭವಿಸುವದು. ಆ ನಯನವು ಜ್ಞಾನ ನೇತ್ರವು ಅದು ಹಣೆಯಲ್ಲಿರುವುದು ಅಂತೇ ಶಿವನು (ಜ್ಞಾನವು) ಫಾಲಾಕ್ಷನೆಂದು ಹೆಸರಾಗಿರುವನು. ಫಾಲ ಇಲ್ಲವೆ ಭಾಲ ವೆಂದರೆ ಹಣೆ. ಹಣೆಯು ಹಿಂಭಾಗದಲ್ಲಿ ಮಿದುಳಿನೊಳಗೆ ಜ್ಞಾನವು ಭರಿತವಾಗಿದೆ. ಅದರ ನೆರವಿನಿಂದಲೇ ನಾವು ಇಡೀ ಜಗತ್ತನ್ನು ( ಅದರೊಳಗಿನ ಎಲ್ಲ ವಸ್ತುಗಳು ಸಹಿತ ) ನಾಮ ರೂಪ ಗುಣರಹಿತಗೊಳಿಸಿ ಸತ್ ಚಿತ್ ಆನಂದ ( ಸಚ್ಚಿದಾನಂದ ) ವೆಂದರೆ ಆತ್ಮ ಸ್ವರೂಪಕ್ಕೆ ತರುವೆವು. ಅಗ್ನಿಯು ಸುಡುವ ವಸ್ತುವಾಗಿದೆಯಷ್ಟೆ. ಅದರಂತೆ ಈ ಅಗ್ನಿರೂಪದ ಪ್ರಜ್ಞಾನವಾದರೂ ತೋರುವ ತೋರಿಕೆಯನ್ನೆಲ್ಲ ( ಅಸತ್ತನ್ನೆಲ್ಲ ) ಸುಟ್ಟು ಆ ಸ್ಥಳದಲ್ಲಿ ಏಕಮೇವಾದ್ವಿತೀಯತ್ವವನ್ನು ಸ್ಥಾಪಿಸುವದು. ಈ ಏಕಮೇವಾದ್ವಿತೀಯತ್ವವೇ ಪರಶಿವನು. ಹೀಗೆ ಶಿವನೂ ತಾನೂ ಜಗವೂ ಈ ಮೂರೂ ಒಂದೇ ಒಂದು ಅಥವಾ

ತಾನೇ ತಾನಾಗಿ ಹೋಗುವವರಿಂವ ತಾನಾರೆಂಬುವನ್ನು ಅರಿತಂತಾಗುವದು. ಅದೇ ಕೈವಲ್ಯ ಮೋಕ್ಷವು.

" ಶತಾಯುರ್ವೈ ಪುರುಷಃ " ಎಂಮ ಹೇಳಿದ್ದರೂ ಮನುಷ್ಯನಿಗೆ ಮುಖ್ಯವಾಗಿ ಪ್ರಾಪಂಚಿಕ ದೃಷ್ಟಿಯಿಂದ ಅದರೊಳಗಣ ಆರಂಭದ ೬೦ ವರ್ಷಗಳು ಮಾತ್ರ ಮಹತ್ವದವು. ಅವನ್ನು ಬಾಲ್ಯ (ಬ್ರಹ್ಮಚರ್ಯ) ಯೌವನ ( ಪೌರುಷ ) ವಾರ್ಧಿಕ ( ಇಳಿಹರೆಯ ) ಎಂಬ ಮೂರು ಸ್ಥಿತಿಗಳಲ್ಲಿ ವಿಭಾಗಿಸಿ ಪ್ರತಿಯೊಂದರಲ್ಲಿ ಇಪ್ಪತ್ತು ವರ್ಷಗಳನ್ನು ಸೇರಿಸಿದ್ದಾರೆ. ಅವಕ್ಕೆ ಬ್ರಹ್ಮಭಿಸ್ಕೆ, ವಿಷ್ಣುಭಿಸ್ಕೆ, ರುದ್ರಭಿಸ್ಕೆ ಎಂತಲೂ ಹೆಸರಿರುವವು. ಭಿಸ್ಕೆಯೆಂದರೆ ವಿಭಾಗ. ಬ್ರಹ್ಮ ವಿಭಾಗದಲ್ಲಿ ಹೊರಗೆ ದೇಹವೂ ಒಳಗೆ ಮನಸ್ಸೂ ಬೆಳೆದು ಕಾರ್ಯ ಕ್ಷಮತೆಯನ್ನು ಹೊಂದುವವು. ಆಗ ಅವನು ಬ್ರಹ್ಮಚಾರಿ ಎಂದು ಕರೆಯಲ್ಪಡುವನು. ವಿಷ್ಣುವಿಭಾಗದಲ್ಲಿ ಯುವಕರು ಲಗ್ನವಾಗಿ ಪ್ರಪಂಚದಲ್ಲಿ ಪ್ರವೇಶಿಸಿ ಹೆಂಡಿರು ಮಕ್ಕಳನ್ನೂ ತಾಯ್ತಂದೆಗಳನ್ನೂ ರಕ್ಷಿಸುವ ಹೊಣೆ ಹೊರುವನು. ಅತಿಥಿ ಅಭ್ಯಾಗತರನ್ನೂ ( ಗುರುಜಂಗಮಾದಿಗಳನ್ನೂ ) ಪೂಜಿಸುವನು. ಆಗ ಅವನಿಗೆ ಒದಗುವ ತರತರದ ಅನುಭವಗಳಿಂದ ಎಚ್ಚತ್ತು ಜಾಣನಾಗುವನು. ಸಂಸಾರದ ಸುಖದುಃಖಗಳನುಂಡು ಅದರ ನಿಜವಾದ ಬೆಲೆಯನ್ನರಿಯುವನು. ರುದ್ರ ವಿಭಾಗದಲ್ಲಿ ( ಇಳಿಹರೆಯದಲ್ಲಿ ) ಅವನು ತನಗೆ ವಿಷ್ಣುವಿಭಾಗದಲ್ಲಿ ಬಂದ ಅನುಭವದಿಂದ ಕಣ್ತೆರೆದು ತನ್ನ ಸಾಮರ್ಥ್ಯ ( ರೇತಸ್ಸನ್ನು ) ಮೇಲ್ಮುಖಗೊಳಿಸಿ ( ದೇವರತ್ತ ತಿರುಗಿಸಿ ) ಪ್ರಗತಿಯನ್ನು ಹೊಂದುತ್ತ ಜ್ಞಾನ ಘನನಾಗಿ ರುದ್ರತ್ವ ( ವಿರೂಪಾಕ್ಷತ್ವ ) ಕ್ಕೆ ಏರುವನು. ಈ ಮೂರು ಸ್ಥಿತಿಗಳನ್ನೇ ಪಿಂಡಾಂಡ ಗತತ್ರಿ=ಮೂರ್ತಿ ಸ್ವರೂಪವೆಂದು ಭಾವಿಸಲಡ್ಡಿಯಿಲ್ಲ.

ಹೀಗೆ ೬೦ ವರ್ಷಗಳು ಗತಿಸಿದ ಮೇಲೆ ಮುಂದಿನ ೪೦ ವರ್ಷಗಳು ಬಲಗುಂದಿದವುಗಳಾಗುತ್ತ ನಡೆದರೂ ಹೆಚ್ಚು ಅನುಭವ ಸಂಪನ್ನವಾಗುವವು. ಅವನ್ನು ವೃದ್ಧಾಪ್ಯ ಜರಠತ್ವದಲ್ಲಿ ಎಣಿಸಬಹುದು. ಆಗ ಸನ್ಯಾಸ ( ಸಕಲ ವಸ್ತುಗಳನ್ನು ಸದ್ವಸ್ತುವಿನಲ್ಲಿ ಸೇರಿಸಿಕೊಂಡು ನಡೆಯುವದು ) ದಲ್ಲಿ ಇಲ್ಲವೆ ಜಂಗಮತ್ವದಲ್ಲಿ ಕಳೆಯಬೇಕೆಂದು ಹೇಳಿರುವರು. ಜಂಗ

ಮತ್ತವು ಸ್ವಯಜಂಗಮ, ಚರಜಂಗಮ, ಪರಜಂಗಮವೆಂದು ಮೂರು ವಿಧವಾಗುವದು. ಸನ್ಯಾಸಿ (ಚರಜಂಗಮ) ಯಾಗಿ ದೇಶ ಸಂಚರಿಸುತ್ತ ಯೋಗ್ಯರಾದವರಿಗೆ ಸದುಪದೇಶ ಮಾಡುತ್ತ ತಾನು ಸ್ವತಃ ದೇವರಲ್ಲಿ ಐಕ್ಯಪಡೆಯುವ ಸಾಹಸ ಮಾಡುತ್ತ ಶೇಷಾಯುಷ್ಯವನ್ನು ಅವನು ಕಳೆಯಬೇಕಾಗುವದು.

ಸಂರಾಂಶವೇನೆಂದರೆ:— ಪುರುಷನು (ವಿಷ್ಣುವು) ಪ್ರೌಢತ್ವದಲ್ಲಿ (ಪ್ರಾಜ್ಞಸ್ಥಿತಿಯಲ್ಲಿ) ಮೇಲ್ಮುಖಿಯಾಗಿ, ಉಳಿದ ಆಯುಷ್ಯದಲ್ಲಿ ದೇವರೊಳ್ಳೈಕ್ಯ ಪಡೆಯುವನೆಂಬುದು ಕಂಡು ಬರುತ್ತದೆ. ಹೀಗೆ ಜ್ಞಾನಿಯಾಗುತ್ತ ನಡೆದ ವಿಷ್ಣುವೇ ನಾರಾಯಣ (ನಾರ+ಅಯನ) ನಾಗುವನು. ತತ್ವದ ಕಡೆ ದೃಷ್ಟಿಯುಳ್ಳವನು ಆತ್ಮ ಸಾಕ್ಷಾತ್ಕಾರ ಹೊಂದುವನು.

ಕೆಳಗಿನ ಅನುಭವಾಮೃತದೊಳಗೆ ಬಂದ ಪದ್ಯವನ್ನು ನೋಡಿರಿ.

" ವರುಷ ನೂರಾಯುಷ್ಯವದರೊಳಗಿರುಳು ಕಳೆದೈವತ್ತು ಮಿಕ್ಕಾ ।
ದ್ದರಲಿ ವಾರ್ಧಿಕ ಬಾಲ್ಯ ಕೌಮಾರದೊಳು ಮೂವತ್ತು ॥
ಇರದೆ ಸಂದುದು ಬಳಿಕಲಿಪ್ಪತ್ತೊರುಷವದರೊಳಗಾದುದಂತಾ ।
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥ "

ಇವರಲ್ಲಿ ಶ್ರೀ ಮಹಾಲಿಂಗ ರಂಗ ಸ್ವಾಮಿಗಳು ಮೇಲೆ ಹೇಳಿದ "ಶತಾಯುರ್ವೈ ಪುರುಷಃ" ಎಂಬುದರಲ್ಲಿ ಹೇಳಿದುದನ್ನೇ ಉಲ್ಲೇಖಿಸಿರುವರು. ಹೀಗಿದ್ದರೂ ಆ ಷಷ್ಟಿ ವರ್ಷಗಳ ಹೆಸರುಗಳನ್ನು ಕಾಲಮಾನದಲ್ಲಿ ಜ್ಯೋತಿಷಿಗಳು ಅದು ಹೇಗೆ ಬಳಸುತ್ತ ಬರುವರೋ ತಿಳಿಯದು.

ಈ ಮೇರೆಗೆ ಮುಂಚಿನ ಮೂರು ಚರಣಗಳ ವಿವರಣೆಯಲ್ಲಿ ಮನುಷ್ಯನೇ ತ್ರಿಮೂರ್ತಿ ಸ್ವರೂಪನೆಂಬುದು ಬಂದೇ ಹೋಗಿದೆ. ಮೊದಲನೆಯದರಲ್ಲಿ ತೀರ್ಥಂಕರರೂ ಮಹಾವೀರ (ಜಿನ) ಸ್ವಾಮಿಯೂ ಬ್ರಹ್ಮದೇವನ ರೂಪವಾಗಿ ಪೂಜೆ ಹೊಂದುತ್ತಿರುವರೆಂಬುದನ್ನು ಹೇಳಿರುತ್ತದೆ. ಎರಡನೆಯದರಲ್ಲಿ ರಾಮ ಕೃಷ್ಣರು ವಿಷ್ಣುವಿನ ಅವತಾರವೆಂದು ಪೂಜೆಗೊಳ್ಳುತ್ತಿರುವದು ಬಂದಿದೆ. ಇದರಂತೆಯೇ ಮೂರನೆಯದಾದ ವಿರೂಪಾಕ್ಷನವು ಮಹಾ ಜ್ಞಾನಿಗಳಿಂದೊಡಗೂಡಿರುತ್ತದೆ. ಶರಣರೂ ಜಂಗ

ಮಾದೂ ಪರಮಹಂಸರೂ ಅದರಲ್ಲಿ ಸಮಾವಿಷ್ಟರಾಗುವರು. ಆದುದರಿಂದ ತ್ರಿಮೂರ್ತಿಗಳು ಮನುಷ್ಯನನ್ನೇ ಅವಲಂಬಿಸಿದ ಹಾಗಾಯಿತು. ಈ ಮನುಜನಾದರೋ ವಿಶ್ವವೃಕ್ಷದ ಸುಮಧುರ ಫಲವಾಗಿರುವನು.

ಹಿಂದೂ ಜನರಲ್ಲಿ ವಿಷ್ಣು ವಿರೂಪಾಕ್ಷರೀರ್ವರೇ ದೇವರೆಂದು ಪೂಜೆಗೊಳ್ಳುತ್ತಿರುವರು. ವಿಷ್ಣುವು ಪ್ರಪಂಚಿಕರ ದೈವತವು. ಶಿವನು (ವಿರೂಪಾಕ್ಷನು) ಪಾರಮಾರ್ಥಿಕ ದೈವತವು. ವಿಷ್ಣುವು ಸಹ ನಾರಾಯಣನಾಗಿ ಕೊನೆಗೆ ವಿರೂಪಾಕ್ಷನಲ್ಲಿಯೇ ಪರ್ಯವಸಾಯಿಯಾಗುವನು. ಇವರಿಬ್ಬರಲ್ಲಿಯೂ ಅದಾವ ಭೇದವೂ ಇಲ್ಲ. ಆದುದರಿಂದಲೇ ಲಕ್ಷ್ಮೀಶನು ತನ್ನ ಜೈಮಿನಿ ಭಾರತದಲ್ಲಿ ಒಂದೆಡೆಗೆ "ಹರಿಹರ ವಿಭೇದಮಂ ಮಾಡಿದನ ಗತಿಯಾಗಲಿ" ಎಂದು ಹೇಳಿದ್ದಾನೆ.

## ನಾಲ್ಕನೆಯ ಚರಣ.

ಮೇಲಿನ ಮಂತ್ರದ ಕೊನೆಯ ಪಾದವು "ವಿಶ್ವ ಏವೈವ ನಮಃ" ಎಂದಿರುವದು. ಆರಂಭಕ್ಕೆ ಕೊಟ್ಟ ಅನ್ವಯದಲ್ಲಿ ಹೇಳಿದಂತೆ ನೋಡಿದರೆ ವಿಶ್ವವೇ ಬ್ರಹ್ಮನೂ, ವಿಷ್ಣುವೂ, ವಿರೂಪಾಕ್ಷನೂ ಆಗಿರುವದೆಂಬುದು ನಿಃಸಂದೇಹವಾಗಿ ಅದರಲ್ಲಿ ಪ್ರತಿಪಾದಿಸಲ್ಪಟ್ಟುದು ಕಂಡುಬರುತ್ತದೆ. ಇಲ್ಲಿ ವಿಶ್ವವೆಂದರೆ ಜಗತ್ತು ಅರ್ಥಾತ್ ಪೃಥ್ವಿಯೆಂದು ಅರ್ಥಮಾಡುವದು ಹೆಚ್ಚು ಸಮಂಜಸವು. ಏಕೆಂದರೆ ಅದರಲ್ಲಿ ಮನುಷ್ಯ ಪ್ರಾಣಿಯೇ ಅತ್ಯಂತ ಮೇಲ್ತರಗತಿಯದಾಗಿರುವದು. ಆ ಕಾರಣ ಮನುಜನೇ ಬ್ರಹ್ಮಾದಿ ತ್ರಿಮೂರ್ತಿ ಎಂದುದು ಅಯಥಾರ್ಥವೆನ್ನಲಿಕ್ಕೆ ಅವಕಾಶವೇ ಇಲ್ಲ.

ಈ ಮಾನವ ಪ್ರಾಣಿಯಂತೂ ಒತ್ತಟ್ಟಿಗಿರಲಿ. ಸಾಕ್ಷಾತ್ ಸೃಷ್ಟಿಯನ್ನೇ ತೆಗೆದುಕೊಂಡರೂ ಸಹ ಅದಾದರೂ ಹುಟ್ಟಿಸುವ ಪಾಲಿಸುವ ವಿಲೀನಗೊಳಿಸುವ ಕಾರ್ಯಗಳನ್ನು ಮಾಡುತ್ತಿರುವುದೆಂಬುದನ್ನು ಮನಗಾಣಬಹುದು. ಅದರ ಸಲುವಾಗಿ ಪ್ರಾಣಿಕೋಟಿ, ವನಸ್ಪತಿಕೋಟಿ, ಖನಿಜಕೋಟಿಗಳನ್ನು ಕುರಿತು ಕೆಳಗೆ ಸ್ಪಷ್ಟೀಕರಿಸಿರುತ್ತದೆ.

ಪ್ರಾಣಿಕೋಟಿ:— ಮನುಷ್ಯ, ಪಕ್ಷಿಗಳು, ಕ್ರಿಮಿಕೀಟಕಗಳು ಮೊದಲಾದವು ತಮ್ಮ ತಮ್ಮ ಸಂತತಿಯನ್ನು ಮುಂದುವರಿಸುವಲ್ಲಿಯೇ ತೀರ ನಿಮಗ್ನವಾಗಿರುವದನ್ನು ಎಲ್ಲರೂ ಅರಿತೇ ಇರುವರು.

ವನಸ್ಪತಿಕೋಟಿ:— ಗಿಡಮರಗಳು, ಬಳ್ಳಿಗಳು, ಹುಲ್ಲು, ಕರಿಕೆ ಮುಂತಾದವು ಸಹ ವಿನಷ್ಟವಾಗದೆ ತಮ್ಮ ಬೀಜವನ್ನು ಕಾಯ್ದುಕೊಂಡೇ ಬಾಳುತ್ತವೆ. ಬಿಸಿಲುಗಾಲಲ್ಲಿ ಕರಿಕೆ, ಹುಲ್ಲು ಮೊದಲಾದವು ಕಾಣದಂತಾದರೂ ಅವುಗಳ ಬೀಜಗಳು ಆ ಒಣಭಾಗದಲ್ಲಿಯೇ ಚೈತನ್ಯವಿಡಿದುಕೊಂಡು ಇದ್ದೇ ಇರುತ್ತವೆ. ಅದರಂತೆಯೇ ಮಳೆಯಾದೊಡನೆ ಅವೆಲ್ಲ ಮೊಳೆದು ಬೆಳೆದು ಪೂರ್ಣ ರೂಪ ತಾಳುವವು.

ಖನಿಜಕೋಟಿ:— ಇವು ಜೀವವಿಲ್ಲದ ಪದಾರ್ಥಗಳೆಂದು ಜನರ ಸರ್ವ ಸಾಧಾರಣವಾಗಿ ತಿಳಿಯುವದುಂಟು. ಆದರೆ ಅದು ತಪ್ಪು ತಿಳುವಳಿಕೆ. ಆ ಕಲ್ಲು ಮಣ್ಣುಗಳಿಗೆ ಜೀವ (ಚೈತನ್ಯ) ವಿಲ್ಲದಿದ್ದರೆ ನಾಟ ಬೆಳೆಯುತ್ತಿರುವ ವನಸ್ಪತಿಗಳಿಗೆ ಅವು ಗೊಬ್ಬರ ರೂಪದಿಂದ ಆಹಾರವನ್ನು ಪೂರೈಸಿ ಅದು ಹೇಗೆ ಅವನ್ನು ಅಭಿವೃದ್ಧಿಗೊಳಿಸುತ್ತಿದ್ದವು? ಆದುದರಿಂದ ಅವುಗಳಲ್ಲಾದರೂ ಗುಪ್ತ ಚೈತನ್ಯ (ಜೀವ) ವು ಉಂಟೇ ಉಂಟು. ಇದರಂತೆಯೇ ಭಂಗಾರ ಬೆಳ್ಳಿ ಮೊದಲಾದ ಧಾತುಗಳು ಕಲ್ಲೆಣ್ಣೆ, ಉಪ್ಪು, ಅರದಾಳ, ಪಟಕ, ಮೊದಲಾದ ಪದಾರ್ಥಗಳು ಉತ್ಪತ್ತಿಯಾದರೂ ಜಗತ್ತಿನಲ್ಲಿ ಸತತವಾಗಿ ನಡೆದೇ ಇರುವದು. "ಅವು ತೀರಿದವು ಇನ್ನು ಮೇಲೆ ಎನಿತೆನಿತೂ ಸಿಗಲಾರವು" ಎಂಬ ಸ್ಥಿತಿಯು ಒದಗುವದೇ ಇಲ್ಲ. ಒತ್ತಟ್ಟೇ ತೀರಿದರೂ ಮತ್ತೊತ್ತಟ್ಟಿಗೆ ಅವುಗಳ ಖನಿಗಳು ಸಿಗುವವು. ಇದರಿಂದ ಪೃಥ್ವಿಯು ಬ್ರಹ್ಮನ ಕಾರ್ಯವನ್ನು ಅವ್ಯಾಹತವಾಗಿ ನಡೆಸುತ್ತ ಬರುತ್ತಿರುವುದೆಂಬುದು ಸಹಜವಾಗಿ ಗೊತ್ತಾಗುವದು.

ಮೇಲಿನ ಮೂರು ಕೋಟಿಗಳು ಒಂದೇ ಸವನೆ ಕಾಲತ್ರಯದಲ್ಲಿಯೂ ಇರುತ್ತಿರುವುದರಿಂದ ಅವುಗಳ ಪಾಲನ ಪೋಷಣೆಯು ವಿಷ್ಣುವಿನ ಭಾರವನ್ನಾದರೂ ಭೂದೇವಿಯೂ ಸೂರ್ಯನೂ ವಹಿಸಿರುವರೆಂಬುದು ತಾನೇ ಸಿದ್ಧವಾಗುವದು.

ಇದೇ ಮೇರೆಗೆ ವಿರೂಪಾಕ್ಷನ ( ರುದ್ರನ ) ಕರ್ತವ್ಯವನ್ನಾದರೂ ವಸುಂಧರೆಯು ಸಾಗಿಸಿಯೇ ಇರುವಳು. ಮನುಷ್ಯಾದಿ ಸಕಲ ಪ್ರಾಣಿಗಳು ಗಿಡಮರುಗಳಾದಿಯಾಗಿ ಎಲ್ಲ ವನಸ್ಪತಿಗಳೂ ಕಾಲಚಕ್ರಕ್ಕೊಳಗಾಗಿ "ಯದ್ದೃಷ್ಟಂ ತನ್ನಷ್ಟಂ" ಎಂಬಂತೆ ನಾಶವಾಗುತ್ತಲೇ ಇರುವವು.

ಖನಿಜ ಪದಾರ್ಥಗಳು ಸಹ ಗಾಳಿ ಚಳಿ ಮಳೆ ಬಿಸಿಲುಗಳಿಂದಲೂ ಜನರು ನಿತ್ಯದಲ್ಲಿ ಅವುಗಳನ್ನು ಬಳಿಸುತ್ತಿರುವುದರಿಂದಲೂ ಅವು ಸಹ ಒಂದೇ ಸವನೆ ಸವಿಯುತ್ತಲೇ ಇರುವವು. ಆ ಕಾರಣ ಅವಾದರೂ ವಿನಾಶವಾಗುತ್ತಿರುವವೆಂಬುದು ಸಹಜವದೆ.

ಈ ವಿವೇಚನೆಯಿಂದ ಬ್ರಹ್ಮಾಂಡಗತ ತ್ರಿಮೂರ್ತಿಗಳ ಕಾರ್ಯವು ಎಡೆಬಿಡದೆ ನಡೆದಿರುವದೆಂಬುದು ಹೊಳೆಯದೆ ಇರಲಾರದು. ಈ ಬರೆಹದಲ್ಲಿ ಉಭಯ ವಿಧ (ಬ್ರಹ್ಮಾಂಡ ಗತ ಪಿಂಡಾಂಡ ಗತ) ತ್ರಿಮೂರ್ತಿಗಳ ಬಗೆಗೂ ನಿರೂಪಣೆ ಬಂದಿದೆ.

## ಸಿಂಹಾವಲೋಕನ

ಪುರುಷ, ಪುರುಷೋತ್ತಮ, ಪುರಾಣಪುರುಷ, ಯಜ್ಞಪುರುಷ ವಿಶ್ವಂಭರ, ಅಚ್ಯುತ ಈ ಹೆಸರುಗಳನ್ನು ಪರೀಕ್ಷಿಸಿ ನೋಡಿದರೆ ಥಟ್ಟನೆ ಮನದಲ್ಲಿ ವೀರಶೈವರ ಷಟ್‌ಸ್ಥಲಗಳು ಬಂದು ನಿಲ್ಲುತ್ತವೆ. ಪುರುಷನೇ ವೀರಶೈವ ಸಾಮಾನ್ಯ ಮನುಷ್ಯ (ಈಶ್ವರ) ಪುರುಷೋತ್ತಮನೇ ಯುವಕ ಮಹೇಶ್ವರನು, ಪುರಾಣಪುರುಷನೇ ತನ್ನಲ್ಲಿ ಶಿವನೇ ಇರುವನೆಂದು ಪೂಜಿಸುತ್ತಿರುವ ಪ್ರಸಾದಿಯು, ಯಜ್ಞಪುರುಷನೇ ಸೇವ್ಯ ಪ್ರಸಾದಿಯಾಗಿರುವ ಪ್ರಾಣಲಿಂಗಿಯು, ವಿಶ್ವಂಭರನೇ ಸಹಜ ಲೀಲಾ ವಿಲಾಸದಿಂದ ವರ್ತಿಸುವ ಶರಣನು, ಅಚ್ಯುತನೇ ಸಾಮರಸ್ಯವನ್ನು ಹೊಂದಿದ ಐಕ್ಯನು ನರನು ವಿಷ್ಣುಭಕ್ತನೇ ಇರಲಿ, ಅವನು ಷಟ್‌ಸ್ಥಲಗಳನ್ನು ಸ್ವಾಯತ್ತವಾಗಿ ಮಾಡಿಕೊಳ್ಳದಿದ್ದರೆ ಅವನಿಗೆ ಪೂರ್ಣತ್ವವಿಲ್ಲ. ಜನ್ಮಸಾಫಲ್ಯವಿಲ್ಲ.

ಮೊದಲು ಬ್ರಹ್ಮನೇ ಪುರುಷನಾದನು. ಬಳಿಕ ವಿರುಪಾಕ್ಷತ್ವ ಹೊಂದಿ, ಪರಬ್ರಹ್ಮತ್ವನೊಳಗೊಂಡನು. ಇದರಿಂದ ಬೀಜದಲ್ಲಿ ವೃಕ್ಷವೂ ವೃಕ್ಷದಲ್ಲಿ ಬೀಜವೂ ಇರುವಂತೆ ದೇವನಲ್ಲಿ ಭಕ್ತನೂ ಭಕ್ತನಲ್ಲಿ ದೇವನೂ ಇದ್ದೇ ಇರುವನೆಂಬುದು ನಿರ್ವಿವಾದವಾಗಿ ಸಿದ್ಧವಾಗುವದು.

---

# ಶ್ರೀ ಪ್ರಭುದೇವರ ಪ್ರಭಾವ.

(ಲೇ:- ಶ್ರೀ. ಸಿ. ನಾ. ಮಹಾಂತಣ್ಣವರು ಹೊನ್ನೂರು.)

ಸಕಲ ಜೀವರುಗಳು ( ಜೀವಿಗಳು ) ಮಾಯಾಜಾಲದ ಬಲಿಯಲ್ಲಿ ಸಿಲುಕಿ, ಅಹಂಕಾರ ಮಮಕಾರಗಳೆಂಬ ದುರ್ಭಾವದ ಧೂಳಿಯೊಳು ಧುಮುಕಿ, ಹುಟ್ಟುಸಾವುಗಳೆಂಬ ಚಕ್ರದೊಳು ತಿರುತಿರುಗಿ, ಮರುಮರುಗಿ, ಒರಲೊರಲಿ ತೆರಲುವವನ್ನು ಸುವಿಚಾರಿಗಳು ಆಗಾಗ್ಗೆ ಆತ್ಮಾನುಭವದಿಂದಲೂ ಸ್ವಾತ್ಮಾನುಭವದಿಂದಲೂ ತಿಳಿತಿಳಿದು, ತಾವು ಈ ಭವಚಕ್ರದಿಂದ ಓರೆಯಾಗಿ ಸ್ಥಲನಿರ್ದೇಶಂಗಳೊಳು ಸುಳಿಸುಳಿದು, ಮೀರಿದ ಸ್ಥಲದ ಕಡೆಗೆ ಮೋರೆದಿರುಹಿ, ಅನುಭಾವದ ಅನುವನ್ನು ಅರಿತರಿತು, ತಮ್ಮಂಥ ಶಿವಾನುಭಾವಿಗಳ ಸಂಘದೊಳು ಬೆರೆತು ಆ ಸಂಘದೊಳು ನಿರ್ಮಾಯ, ನಿರಾವರಣ, ನಿರುಪಾಧಿ, ನಿರ್ದ್ವಂದ್ವ, ನಿಶ್ಚಿಂತ, ನಿರಾಮಯ, ನಿರವಧಿ, ನಿಸ್ಸೀಮ, ನಿರ್ಲೇಪ, ನಿಸ್ಸಂಗಿ, ನಿಷ್ಕ್ರಿಯೆ, ನಿರ್ನಾಮ, ನಿರಂಗ, ನಿರ್ಜಾತ, ನಿಷ್ಕಲ, ನಿಶ್ಶೂನ್ಯ, ನಿರಂಜನ, ನಿರಾಕಾರದೊಳು ನಿಂದು, ನಿಜಾತ್ಮರಾದ ಶರಣ ಸಂಕುಳದೊಳಗೆ. ಸಹಜಾನುಭಾವಿಗಳಾಗಿ ಸಹಜಾನಂದದಿಂದ ಅನುಪಮಿಗಳಾಗಿ ಅನುಮಿಷರೆಂದೆನಿಸಿದ ಶ್ರೀ ಮಹಾಪ್ರಭುವಿನ ಚಿದ್ರೂಪ, ಚಿನ್ಮಯ ಚಿತ್ಪ್ರಕಾಶಾಂಶಗಳನ್ನು ಅರಿತು ಬೆರೆಯುವದು ಸಹೃದಯಿಗಳಿಗೆ ಸಹಜವು.

ಸಹಜಾನಂದದ ಸಮಯ. ಕೈಲಾಸದೊಳು ನವರತ್ನಖಚಿತವಾದ ಸಭಾಮಂಟಪದೊಳು ಜರಗುತಲಿರುವ ಪಾರ್ವತಿಪರಮೇಶ್ವರರ ಕಡುಬೆಡಗಿನ ಸಭೆಯ ಸಂಧಾನ. ಸಕಲದೇವತೆಗಳ ಆಗಮನ. ಏಳುನೂರಾ ಎಪ್ಪತ್ತು ಅಮರಗಣಂಗಳ ಮಣಿಮಂಟಪ. ಕಿನ್ನರರು ಕಿಂಪುರುಷರು ರಂಭೋರ್ವಶಿಯರ ಜಂಭಾಟ, ವೇಳೆಗೆ ಸರಿಯಾಗಿ ಬಂದು ಸಭೆಯನ್ನಲಂಕರಿಸುವ ಸ್ವರ್ಗಾಧಿಪತಿಗಳ ಸುಳಿದಾಟ, ಸಭಾಮಂಟಪವು ತುಂಬಿ ತುಳುಕುವಷ್ಟರಲ್ಲಿ ಶಿವಶಕ್ತಿಯರ ಮಹಾಪೀಠದ ಹೊಳೆದಾಟ. ಆಗ ಕುಲುಕುಲು ನಗುವ ಶಿವಪಾರ್ವತಿಯರ ದೃಷ್ಟಿಪಥದಲ್ಲಿ ಸಗುಣಾಲಂಕೃತನಾದ ಪ್ರಭುವಿನ ಏಂಟಾಟದ ನೋಟವು ಮುಂದರಿಯಲು, ಅದನ್ನು ನೋಡಿದ

ಪಾರ್ವತಿಯ ಇವರಾರೆಂಬ ಪ್ರಶ್ನೆಗೆ:— ಮಾಯಾ ಕೋಳಾಹಳ ಮೂರ್ತಿ ಅಲ್ಲಮನೆಂಬ ಅಭಿಧಾನದ ಮೂರ್ತಿ, ನಿತ್ಯನಿರಂಜನ ಮೂರ್ತಿ, ಲೋಕಚಾರ ಶ್ರುತ್ಯಾಚಾರಗಳಿಗೆ ವಿಲಕ್ಷಣಾಚಾರದ ಮೂರ್ತಿಯೆಂಬ ಶಿವನ ಹೊಗಳಾಟ. "ಹಾಗಾದರೆ, ಈತನ ಮಾಯಾ ವಿಜಯವನ್ನು ಮೃತ್ಯುಲೋಕದಲ್ಲಿ ನೋಡೋಣ"ವೆಂಬ ಚಿಚ್ಛಕ್ತಿಯ ಚಲದಾಟ. ಆಗ್ಗೆ ಅಲ್ಲಮನು ಸರ್ವಸಭಾ ಪ್ರಭೃತಿಗಳಿಂದ ಹೊಗಳಿಸಿಕೊಳ್ಳುತ್ತ ಶಿವನ ಸಾಮೀಪ್ಯದೊಳಾಗಮಿಸಿ ದೀರ್ಘದಂಡಾತುರತೆಯ ಆಡಂಬರದ ಪ್ರಭುವರನ ಜಿಹ್ವಾಸ್ಪೃಶ್ಯ ಪಾದಪಂಕಜದ ಭೃಂಗಾಟ. ಕರುಣಾಮಯ ಕೃಪಾಸಾಗರನು ಪಾರ್ವತಿಯ ಒಲವಿನಂತೆ ಅಲ್ಲಮನನ್ನು ಕುರಿತು:— "ನೀನು ಮರ್ತ್ಯಲೋಕಕ್ಕಿಳಿದು ಪಾರ್ವತಿಯ ಅಂಶವಾದ ಮಯಾದೇವಿಯನ್ನು ಜಯಿಸಿ ನಿರ್ಮಾಯ ಪ್ರಭುವೆಂಬ ಅಭಿಧಾನವನ್ನು ಸಾರ್ಥಕಗೊಳಿಸಬೇಕೆಂಬ ಅನುಜ್ಞೆಯನೀಯಲು" ಅದಕ್ಕೆ ಪ್ರಭುವರನು:— "ನಿಮ್ಮಿಂದ ದೂರಾದ ನನಗೆ ಆಶ್ರವೇನೆಂದು ವಿಜ್ಞಾಪಿಸಲು" ಆಗ ಜಗದೀಶನು:— 'ಲೋಕದ ಗುರುವು ನೀನಾಗಿ, ನಿನ್ನ ಗುರುವು ನಾನಾಗಿ ಆಕಾಶದೊಳಗಿನ ವಾಯುವಿನಂತೆ, ಹಣ್ಣೊಳಗಿನ ರುಚಿಯಂತೆ, ಪ್ರಾಣಿಗಳ ಚೈತನ್ಯದಂತೆ, ನಿನ್ನಲ್ಲಿ ಸದಾ ಸನ್ನಿಹಿತನಾಗಿರುವೆನೆಂದು ಕೃಪಾಮಯವಾದ ಅಭಯ ಹಸ್ತದ ತಾಕಲಾಟ. ಕೇಳುವದೇನು?

ಭರತಖಂಡದ ಬೆಳವಲನಾಡಮೊಳು ಬಳ್ಳಿಗಾವಿಯೆಂಬ ರಾಜಧಾನಿ. ಆ ರಾಜಧಾನಿಯೊಳು ನಿರಹಂಕಾರ-ಸುಜ್ಞಾನಿಗಳೆಂಬ ರಾಜದಂಪತಿಗಳು. ವೀರಶೈವ ಮತಮಾರ್ಗಿಗಳಾಗಿ, ಸುಶೀಲರಾಗಿ ಅಸೊತ್ತಿಗೆಯ ಪ್ರಪಂಚದಲ್ಲಿದ್ದರೂ ನಿಃಪ್ರಪಂಚಿಗಳಂತೆ, ಸುಖಸಾಮ್ರಾಜ್ಯಾಧಿಪತಿಗಳಾಗಿ ಸುಶೋಭಿಸುತಲಿರ್ದರು. ಹೀಗಿರಲು ಸುಜ್ಞಾನಿಗೆ ಪುತ್ರಾಪೇಕ್ಷೆಯಾಗಿ ನಿರಹಂಕಾರನಿಗೆ ತನ್ನ ಮನಮುಪ್ರೆಯನ್ನು ಮೂಡಿಸಿದಳು. ಅದಕ್ಕೆ ಅವನು, ಹಿಂದೆ ಆಗಿಹೋದ ಪುತ್ರ ಕಾಮೇಷ್ಟಿಗಳ ಕತೆಗಳನ್ನು ಕಡುಜಾಣತನದಿಂದ ಉಸುರಿದನು. ಇವೆಲ್ಲ ದುಷ್ಟ ಪುತ್ರರ ದುರಾಚಾರಗಳ ವರ್ಣನೆಯಾಯಿತು. ನನಗೆ ಸತ್ಪುತ್ರರ ಸಚ್ಛೀಲತೆಯನ್ನು ವಿವರಿಸಬೇಕೆಂದು ವಿಜ್ಞಾಪಿಸಲು, ಆತನು ಸದಾಚಾರಿಗಳಾದ ಸತ್ಪುತ್ರರ ಸದ್ಗುಣಗಳನ್ನು ವಿಸ್ತರಿಸಲು ಆಗ ಸುಜ್ಞಾನಿಯು ಸತ್ಪುತ್ರ ಫಲವಾಗಲು ಉಪಾಯವೇ

ನೆಂದು ಕೇಳಲು, ಈ ಫಲಪ್ರಾಪ್ತಿಗಾಗಿ ನಾವೀರ್ವರು ಕಾಡಿಗೆ ಹೋಗಿ ವಿಶ್ವೇಶ್ವರನನ್ನು ಕುರಿತು ತಪವನ್ನಾಚರಿಸುವುದೇ ಸನ್ಮಾರ್ಗವೆಂದು ಬೋಧಿಸಲು, ಆಗ ಸುಜ್ಞಾನಿಯು ಪ್ರಾಣನಾಥನ ಹೇಳಿಕೆಯಂತೆ ಕರವೂರವೆಂಬ ದಟ್ಟಡವಿಗೆ ಹೋಗುವದನ್ನು ನಿಶ್ಚಯಿಸಿ ಸರ್ವಸಿದ್ಧತೆಯಂಗೆಯ್ದಳು. ಆ ಅಡವಿಗೆ ಹೋಗಿ ದೀರ್ಘಕಾಲದ ಲಿಂಗಾನುಸ್ಥಾನದಿಂದ ಲಿಂಗಾಂಗ ಸಾಮರಸ್ಯದ ಅನುವು ದೊರೆತು, ವಾಯ್ವಾಹಾರಿಗಳಾಗಿರಲು ಮುಂದೆ ಅವರ ಶಿವಯೋಗಸಾಧನಕ್ರಿಯೆಯು ನಿಜಸಮಾಧಿಗೆ ಮುಟ್ಟಲು, ಅವರ ಮೇಲೆ ಹುತ್ತ ಬೆಳೆದು ಕಾಣದಾದರು. ಇವರೀರ್ವರ ಸ್ಥಿತಿಯನ್ನರಿತ ಮಹಾದೇವನು ತನ್ನ ತನ್ನತ್ತಣಿಂದ ಪ್ರಭುದೇವನನ್ನು ಕಳುಹಲು, ಆತನು ಹದಿನಾಲ್ಕು ಲೋಕಗಳನ್ನೆಲ್ಲ ಸಂಚರಿಸಿ, ಜಂಬೂದ್ವೀಪದ ಛಪ್ಪನ್ನ ದೇಶದೊಳು ಒಪ್ಪಂಬೆತ್ತ ಬೆಳವಲನಾಡಿಗೆ ಬಿಜಯಂಗೈದು, ಬಳ್ಳಿಗಾವಿಯನ್ನು ನಿರೀಕ್ಷಿಸಿ ದಟ್ಟಡವಿಯೊಳ್ ನೆಟ್ಟ, ಹುತ್ತಿನೊಳು ಹುದುಗಿರ್ದ ನಿರಹಂಕಾರ ಸುಜ್ಞಾನಿಗಳ ನಡುವೆ ಚಿದಂಗನಾಗಿ ಚಿದ್ರೂಪನಾಗಿ ಚಿತ್ಪ್ರಕಾಶಪುಳ್ಳ ಶಿಶುವಾಗಿ ಹುಲಬತೊಡಗಿದನು. ನಂತರ ಆ ಶಿಶುವಿನ ಕರದ ಇಷ್ಟಲಿಂಗವ ದೃಷ್ಟಿಸಿ ಆಶ್ಚರ್ಯಚಕಿತರಾಗಿ ಆ ಲಿಂಗವನ್ನು ರತ್ನಖಚಿತವಾದ ಸಜ್ಜೆಯಲ್ಲಿ ಸಜ್ಜುಗೊಳಿಸಿ ಲಿಂಗಸೂತ್ರವನ್ನು ಅಂಗದೊಳು ಸಂಬಂಧಿಸಿದರು. ಆ ಶಿಶುವು ರಾಜಮನೆತನದಲ್ಲಿ ರಾರಾಜಿಸುತ್ತ ಬಾಲ್ಯ ಕೌಮಾರಾವಸ್ಥೆಗಳನ್ನು ದಾಟಿ ತಾರುಣ್ಯಾವಸ್ಥೆಗೆ ಬರುವಷ್ಟರಲ್ಲಿ ಸಕಲವಿದ್ಯಾವಿಶಾರದನಾಗಿ ಪ್ರೌಢಾವಸ್ಥೆಯ ಸುಳಿವನ್ನು ಸಂದರ್ಶಿಸಲಾರಂಭಿಸಿದನು.

ಶ್ರೀ ಪಾರ್ವತಿದೇವಿಯು ತನ್ನ ಹಟವನ್ನು ಸಾಧಿಸಲು ತನ್ನಂಶವಾದ ಮಾಯೆಗೆ:— "ನೀನು ಭೂಲೋಕಕ್ಕೆ ಹೋಗಿ ಬನವಾಸಿ ನಾಡಿನ ರಾಜನ ಮಗಳಾಗಿ ಜನಿಸಿ, ಮಾಯಾದೇವಿಯೆಂಬ ಅಭಿಧಾನದಿಂದ ಬೆಳೆಯುತ್ತ ಸರ್ವ ರತಿಕಲಾಪ್ರೌಢೆಯಾಗಿ ನಿನ್ನ ರೂಪ ಲಾವಣ್ಯ ವಿಭ್ರಮೆಗಳಿಂದ ಅಲ್ಲಮನನ್ನು ಮರುಳುಗೊಳಿಸಿ ಲಗ್ನವಾಗಿ ಆತನ ನಿಷ್ಕಾಮ್ಯತೆಯನ್ನು ನೀರುಮಾಡಿ ಮರಳಿಬಾ." ಎನ್ನಲು ಅದರಂತೆ ಬನವಾಸಿ ನಾಡಿನ ಮಮಕಾರ ಮೋಹಿನಿಯರೆಂಬ ದಂಪತಿಗಳ ಉದರದೊಳುದ್ಭವಸಿ ಸಂಭೋರ್ವಶಿಯರಂತೆ ರೂಪಾತಿಶಯದಿಂದ ಬೆಳೆಯುತೊಡಗಿ ಕೌಮಾ

ಶರ್ಾವಸ್ಥೆಯು ದಾಟಿ ತಾರುಣ್ಯಾವಸ್ಥೆಗೆ ಬಂದುಬಿಟ್ಟಳು. ಅವಳ ತಂದೆಗೆ ಮಾಯಾದೇವಿಗೆ ತಕ್ಕ ವರನನ್ನು ಶೋಧಮಾಡಬೇಕೆಂಬ ಆಕಾಂಕ್ಷೆಯು ಆವರಿಸಿತು. ಇದನ್ನರಿತ ಆ ರಾಜನ ಗುರುವಾದ ಅಹಂಕಾರನು ಮಾಯಾ ದೇವಿಗೆ:— " ಮಧುಕೇಶ್ವರನನ್ನು ನಿತ್ಯದಲ್ಲಿ ಪೂಜಿಸೆಂದು ಹೇಳಲು, ಆಕೆಯು ಸಕಳೆಯೆಂಬ ಗೆಳತಿಯ ಸಹಕಾರದಿಂದ ಪೂಜಾವ್ರತವನ್ನು ಕೈಕೊಂಡಳು. ಹಾಗು ಆಕೆಯ ತಾರುಣ್ಯಾವಸ್ಥೆಯು ದಿನದಿನಕ್ಕೆ ಬಲಿಯುಹತ್ತಿತು.

ಇತ್ತ ಅಲ್ಲಮನಿಗೆ ಬೆಳ್ಳಗಾವಿಯ ಅರಸೊತ್ತಿಗೆಯ ಅನುಭೋಗವು ಸಾಕೆನಿಸಿ, ಅವನು ತನ್ನ ತಂದೆ ತಾಯಿಗಳಿಗೆ ತನ್ನ ಮನೋಭಿಷ್ಟವಾದ ವೈರಾಗ್ಯಾನಂದವನ್ನು ಪರಿಪರಿಯಿಂದ ವಿವರಿಸಿ ಅವರ ಅಪ್ಪಣೆ ಪಡೆದು, ಅಕಾಯನಾಗಿ ಅಲ್ಲಲ್ಲಿ ಪವಿತ್ರ ಸ್ಥಳಗಳನ್ನೀಕ್ಷಿಸುತ್ತ ಬನವಾಸಿ ನಾಡಿಗೆ ಬರುವವನಾಗಿ ಶತಕಾಮರ ರೂಪು ತಾಳಿ ಮಧುಕೇಶ್ವರ ದೇವಾಲಯಕ್ಕೆ ಬರಲು ಆ ಲಿಂಗವು ಅಂತರಂಗದ ಈತನ ಯೋಗ್ಯತೆಗೆ ಸ್ಫೂರ್ತಿಗೊಂಡು ಆತನನ್ನು ಎದುರ್ಗೊಂಡು ಹೋಗಿ ತನ್ನ ಆಲಯದಲ್ಲಿರುವಂತೆ ಅರುಹಲು ಅಲ್ಲಮನು ಪ್ರತಿದಿನ ಮದ್ದಲೆಯು ಬಾರಿಸುವ ವಿದ್ಯೆಯೊಳು ನಿರತನಾಗಿ, ಮಧುಕೇಶ್ವರನನ್ನು ಆನಂದಗೊಳಿಸುತಲಿದ್ದನು. ಮಧುಕೇಶ್ವರನ ಪೂಜಾ ಸಕ್ತಳಾದ ಮಾಯಾದೇವಿಯು ಅಲ್ಲಮನ ರೂಪಾತಿಶಯಕ್ಕೆ ಬೆರಗಾಗಿ ತನ್ನ ತಂದೆಯ ಅನುಜ್ಞೆ ಪಡೆದು ಅಲ್ಲಮನನ್ನು ಮೋಹಗೊಳಿಸಬೇಕೆಂದು ಮಧು ಕೇಶ್ವರನ ಮುಂದೆ ಭಕ್ತಿವಿಲಾಸವನ್ನು ಬೆಳಿಸಹತ್ತಿದಳು. ದಿನದಿನಕ್ಕೆ ಆಕೆಯ ಕಾಮಲತೆಯು ಅಲ್ಲಮನನ್ನು ಸುತ್ತುಹಾಕಿ ಅತ್ತಿತ್ತ ಅಲಿದಾಡದಂತೆ ಮಾಡಲು ಸಕಾಯನಾದ ಅಲ್ಲಮನು ಅಕಾಯನಾಗಿ ಅಲ್ಲಿಯೇ ಸ್ಥಳಾಂತರವಾಗಿ ನಿಲ್ಲುವನು. ಅವಳ ಮನೋವಲ್ಲರಿಯ ಹಬ್ಬುವಿಕೆಯು ತಬ್ಬಹತ್ತಿ, ಇದನ್ನು ತನ್ನ ಗೆಳತಿಯಾದ ಸಕಲೆಗೆ ತಿಳಿಸಲು, ಅಲ್ಲಮನ ಮುಂದೆ ಆಕೆಯ ಚದು ರಾಟವೂ ನಿಂತಿತು. ಇದನ್ನೆಲ್ಲ ನೋಡುತ್ತಿದ್ದ ಪಾರ್ವತಿಯು ಅಂತರ್ದೃಷ್ಟಿಯು ಸಹಿಸದೆ ತನ್ನಲ್ಲಿ ರತಿವಿಲಾಸದೊಳು ವಿಶಾರದೆಯಾದ ವಿಮಳೆಯನ್ನು ಕಳುಹಲು ಆಕೆಯಿಂದಲೂ ಅಲ್ಲಮನ ಚಿತ್ತಸ್ಥೈರ್ಯವು ಚ್ಯುತಿಗೊಳಲಿಲ್ಲ. ಜ್ಞಾನಪ್ರಕಾಶ ಸ್ಥಲಾನುಭವಿಗೆ ಮಾಯೆಯ ಭಯವೇನು ?

ಶಾರ್ದೂಲ:—ದ್ವೈತ ಭ್ರಾಂತಿಯುದಿಲ್ಲ ಭಾವಿಸೆ ಶಿವಾದ್ವೈತತತ್ವಮುಂ ರಾಗ ವಿ।



ಖ್ಯಾತಜ್ಞಾನಿಗೆ ಮಾಯೆ ತಾನಳಿದು ಸರ್ವಂ ಬ್ರಹ್ಮರೂಪಾಂತಾ।

ನೇ ತೋರ್ಕುಂ ನಿಬಿಡ ಪ್ರಕಾಶದೆಯಿದಂತಿಂತೆಂದು ಪೇಳಲ್ಕೆವಾ!
ಜಾತೀತಂ ಘನ ಚಿತ್ಪ್ರಭಾಮಯನವಂ ಶ್ರೀ ಸಿದ್ಧಲಿಂಗೇಶ್ವರಂ॥೧॥

ವಿಶ್ವಧರ್ಮವಾದ ವೀರಶೈವ ಮತದಲ್ಲಿ ತ್ಯಾಗಾಂಗಿಗಳನ್ನೂ ಭೋಗಾಂಗಿಗಳನ್ನೂ ಯೋಗಾಂಗಿಗಳನ್ನೂ ಅಲ್ಲಲ್ಲಿ ಆಯಾ ಚಷ್ಮೆಗಳಿಂದ ನೋಡಬಹುದು. ಆದರೆ ಮಹಾ ಬಯಲೊಳಗಾದ ನಿರವಯಲ ಸ್ವರೂಪಿಗಳನ್ನು ಕಾಣುವದು ಕಡುಕಷ್ಟ. ಅಂಥವರ ಅಂತಸ್ಥವನ್ನರಿಯಲು ಶಿವಶರಣ ಮಾರ್ಗಾನುಯಾಯಿಗಳಿಂದೇ ಹೇಳಲು ಯಾವತರದ ಅಭ್ಯಂತರವಿಲ್ಲ. ಶ್ರೀ ಪ್ರಭುದೇವರು ಮಾಯಾದೇವಿಯ ಮೋಹದ ಜಾಲಕ್ಕೆ ಸಿಕ್ಕದೆ ಆಕೆಯ ಕನ್ಯಾಸಂದಣಿಯೊಳು ನಿರಾಟವಾಡಿದರೂ ಮಾರನಾಟಕ್ಕೆ ಮನಂಬುಗದೆ. ಮಾರಾಂತಕನೊಳು ಸ್ಥಿರಚಿತ್ತಿಯಾಗಿ ಬೇರೆ ಬೇರೆ ನಾಡುಗಳನ್ನೆಲ್ಲ ತಿರುಗಿ ಕ್ರಿಯಾಚಾರ ಜ್ಞಾನಾಚಾರ ಯೋಗಾಂಗಗಳನ್ನು ಸದ್ಭಕ್ತರೊಳು ಬೀರುತ್ತ ಶಿವಯೋಗಿಗಳನ್ನು ಕಾಣುತ್ತ ಸೊನ್ನಲಾಪುರದ ಸಿದ್ಧರಾಮನ ಪರಾಂಬರಿಕೆಯೊಳಿರುತ್ತ ಆತನಾಚರಿಸುತ್ತಿದ್ದ ಧ್ಯಾನ ಧಾರಣ ಸಮಾಧಿಗಳನ್ನು ಸುವಿಚಾರಿಸಿ ಶಿವಭಕ್ತಿ, ಶಿವಪೂಜೆ, ಶಿವಕ್ರಿಯೆ, ಶಿವಧ್ಯಾನ ಶಿವಜ್ಞಾನದ ಮಾರ್ಗಗಳನ್ನು ನೆರೆಗೊಳಿಸುತ್ತ ಶಿವಯೋಗ ಸಂಧಾನದ ತೆರಹನರುಹುತ್ತ ಶಿವಯೋಗಾನಂದದಲ್ಲಿ ಈರ್ವರು ಇರುತ್ತಿರಲು ಸಿದ್ಧರಾಮನ ಶಿವಯೋಗ ಸಹಾಸವನ್ನು ಕಂಡರಿದು ಪ್ರಭುದೇವರಃ—"ಕಾಯದೊಳಗೆ ಕರಣವಿಲ್ಲ ಭಾವದೊಳಗೆ ಭ್ರಮೆಯಿಲ್ಲ. ನವನಾಳದೊಳಗೆ ಸುಳಿವು ಮುನ್ನಿಲ್ಲ. ಬ್ರಹ್ಮರಂಧ್ರದಲ್ಲಿ ಅರಿವರತ ಶಿವಯೋಗಿ ಗುಹೇಶ್ವರನ ಶರಣ ಸಿದ್ಧರಾಮಯ್ಯ ನಿಮ್ಮ ಕಂಡೆನ್ನ ಭವನ್ನಾಸ್ತಿಯಾಯಿತ್ತು. ॥ ೧ ॥

ಮತ್ತಂ ॥ ಯೋಗ, ಶಿವಯೋಗವೆಂದೆಂಬರು, ಯೋಗದ ಹೊಲಬನಾರು ಬಲ್ಲರಯ್ಯ? ಹೃದಯ ಕಮಲ ಪತ್ರದಲ್ಲಿ ಭ್ರಮಿಸುವನ ಕಳೆದಲ್ಲದೆ ಯೋಗವೆಂತಪ್ಪುದೋ ? ಐವತ್ತೆರಡಕ್ಕರದ ಲಿಪಿಯ ನೋಡಿ ಓದಿ, ಆರು ನೆಲೆಯ ಮೇಲಿಪ್ಪ ಮಣಿಮಾಡದೊಳಗೆ ಇರಬಲ್ಲಡೆ, ಅದು ಯೋಗ. ಸೋಹಂ ಎಂಪೆಂಬ ಸುಳುಹು ಅಡಗಿ ಮನ ನಷ್ಟವಾಗಿ ಇರಬಲ್ಲೆ. ಕಾರಣ ಗುಹೇಶ್ವರನ ಶರಣ ಸಿದ್ಧರಾಮಯ್ಯ ನಿನಗೆ ನಮೋ ನಮೋ ಎಂದು ಬದುಕಿದೆನು. ॥ ೨ ॥

ಶ್ರೀ ಪ್ರಭುದೇವನ ವಚನಗಳನಾಲಿಸಿದ ಶ್ರೀ ಸಿದ್ಧರಾಮನು:—
“ಯೋಗದ ಹೊಲಬನಾನೆತ್ತ ಬಲ್ಲೆನಯ್ಯಾ? ಯೋಗ, ಶಿವಶಕ್ತಿ ಸಂಪುಟ ವಾಗಿಪ್ಪುದಲ್ಲದೆ, ಶಿವಶಕ್ತಿ ವಿಯೋಗವಪ್ಪ ಯೋಗವಿಲ್ಲವಯ್ಯಾ, ಹೃದಯ ಕಮಲದೊಳಗೆ ಭ್ರಮಿಸದಿಪ್ಪಾತನಿಗಲ್ಲದೆ, ಎನಗೆ ಬೇರೆ ಸ್ವತಂತ್ರವುಂಟೇ? ಕಪಿಲಸಿದ್ಧ ಮಲ್ಲಿಕಾರ್ಜುನ” || ೩ ||

ಸಿದ್ಧರಾಮನ ರಾಜಯೋಗದ ಮನ್ನಣೆವನರಿದ ಶಿವಯೋಗೀಂದ್ರನಾದ ಅಲ್ಲಮನು ವೀರಶೈವ ತತ್ವಗಳನ್ನು ವೇದಾಂತ ತತ್ವಗಳಿಗೆ ಸಂಬಂಧಿಸಿ ಷಟ್‌ಸ್ಥಲ ಸಿದ್ಧಾಂತವನ್ನು ಸುಗಮವಾಗಿ ಬೋಧಿಸಲಾರಂಭಿಸಿದನು. ವಿಶ್ವಾತ್ಮನ ಆತ್ಮ ವಿಚಾರದಲ್ಲಿ ಪರತತ್ವವೇ ಆತ್ಮ. ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿಗಳೆಂಬ ಆರು ತತ್ವಗಳಿಂದ ತೋರ್ಪಡಿಸುವದಷ್ಟೇ. ಮುಖ್ಯ ತತ್ವವಾದ ತೃಪ್ತಿಕರವಾದ ಜ್ಞಾನಾತ್ಮನಾದ ನಿಜಾತ್ಮನೇ ಮಹಾ ಲಿಂಗವಾಗಿ, ಮುಂದೆ ಕ್ರಮವಾಗಿ ತನ್ನಲ್ಲಿ ನಾದಾಂಶವಾದ ಆಕಾಶ ತತ್ವದ ಕರ್ಣವೇ ಪ್ರಸಾದಲಿಂಗವಾಗಿ ವಾಯು ತತ್ವದ ತ್ವಚೆಯೇ ಜಂಗಮಲಿಂಗ ವಾಗಿ, ಅಗ್ನಿ ತತ್ವದ ನೇತ್ರವೇ ಶಿವಲಿಂಗವಾಗಿ ಅಪ್ಪು ತತ್ವದ ಜಿಹ್ವೆಯೇ ಗುರುಲಿಂಗವಾಗಿ ಪೃಥ್ವಿ ತತ್ವದ ನಾಶಿಕವೇ ಆಚಾರಲಿಂಗವಾಗಿರ್ಪುವು. ಷಡಂಗ ಷಡ್ಲಿಂಗಗಳನ್ನು ವಿವರಿಸುತ್ತ ಅಂಗ ಲಿಂಗ ಸಕೀಲುಗಳನು ಗಮನಿಸುತ್ತ ಯೋಗದೊಳು ಪರಮಯೋಗವಾದ ಗುಹ್ಯಕ್ಕೆ ಗುಹ್ಯವಾದ ಮಂತ್ರಗೋಪ್ಯವನ್ನು ೨೭ ಪದ್ಯಗಳಲ್ಲಿ ಜ್ಞಾನಾನುಭವಾನಂದಗಳನ್ನು ನಿಜ ದಲ್ಲಿ ಉಂಟುಮಾಡಿದನು.

ಬ್ರಹ್ಮಾಂಶಿಕನಪ್ಪ ಆತ್ಮನು ಪಂಚಬ್ರಹ್ಮದಿಂದ ಹುಟ್ಟಿದ ಪಂಚ ಭೌತಿಕ ದೇಹದಿಂದ ಕೂಡಿರುವನು. ಆ ದೇಹದಲ್ಲಿ ಹೃದಯಕಮಲದ ಎಂಟೆಸಳುಗಳು ಸಂಚಲ ಗುಣರೂಪಗಳಾಗಿರುವವು. ಅಷ್ಟದಳಗಳ ಗುಣ ವಿಡಿದು ಅಷ್ಟಮದಗಳಿಂದ ದೇಹವು ತಾನೆಂದು, ಜೀವನು ತಾನಾಗಿ ಸತ್ತು ಹುಟ್ಟುತ್ತಿರುವನು. ಹೀಗಿರುವ ದೇಹದಲ್ಲಿ ಜ್ಞಾನೋದಯವಾಗಿ ಆ ಜ್ಞಾನಾಗ್ನಿಯಿಂದಲೇ ಆ ದೇಹಗುಣಗಳಾದ ಅಷ್ಟಮದಗಳನ್ನು ದಹಿಸಿ, ಜ್ಞಾನ ಮುಖದಿಂದ ದೇಹಭಾವವಳಿದು ಶಿವಭಾವ ಧ್ಯಾನದಿಂದ ಜನನ ಮರಣಗಳೆಂಬ ಭವಸಾಗರವನ್ನು ದಾಟತಕ್ಕದ್ದು. ಈ ಜ್ಞಾನದಿಂದ ಮನ ಕರಣಂಗಳ ಸಂಚಲವ ನಿಲಿಸಿ, ಚಿತ್ತವ ಸುಸ್ಥಿರಂಗೊಳಿಸಲು ಸಮ್ಯಜ್ಞಾನ

ವುಂಟಾಗುವದು. ಆರು ಲಿಂಗಗಳಲ್ಲಿ ಆರು ಕಲೆಗಳು ಸಮರಸವಾಗಲು ಶರಣನು ಷಡಕ್ಷರ ಮಂತ್ರ ಸ್ವರೂಪನಾಗಿಯೂ ಸರ್ವಜ್ಞಾನದೃಷ್ಟಿ ಸ್ವರೂಪನಾಗಿಯೂ ಇರುತ್ತಿರಲು, ಅಂತರಂಗದಲ್ಲಿದ್ದ ಲಿಂಗ ಕಲಾರೂಪ ನಾದ ಶ್ರೀಗುರುವು ಆರಕ್ಷರದ ಮಂತ್ರಜ್ಞಾನ ದೃಷ್ಟಿಯಿಂದ ನೋಡಿ ಕಡೆದು ತೆಗೆದು ಹಸ್ತದಲ್ಲಿ ಕೊಟ್ಟು ಇಷ್ಟಲಿಂಗವೆಂಬ ರತ್ನವು ಚಿತ್ಪ್ರಭಾ ಕಳೆಯೆಂಬ ಅಮೃತ ಫಲ ಸ್ವರೂಪವಾಗಿ ಭೇದ್ಯವಾಗುತ್ತಿರುವಲ್ಲಿ ತನ್ನಲ್ಲಿ ರುವ ಲಿಂಗವನ್ನು ಭೇದಿಸಿ ಕಂಡು ಜ್ಞಾನ ಕ್ರಿಯೆಯಿಂದ ಬೆರಿಸಿ, ಭೇದ ಭಾವವಳಿದು ಆ ಲಿಂಗವೇ ಆಗಿ ಉಪಾಸ್ಯ ಉಪಾಸ್ಯಕತ್ವವೆಂಬ ಎರಡು ರೂಪವುಳ್ಳ ಒಂದೇ ನಿಜವಸ್ತು ಆಗಿರುವನು. ಎಂಬುದಾಗಿ ಇಷ್ಟಲಿಂಗದ ಸೃಷ್ಟಿಯನ್ನು ಸ್ಪಷ್ಟವಾಗಿ ಗಟ್ಟಿಗೊಳಿಸುವ ಅಟ್ಟಹಾಸದ ಪದ್ಯವಿದು.

ಐದು ಮುಖ ಐದು ಕಲೆ ಐದು ಸಮರಸವೊಂದು ।
ನಾದ ಬಿಂದುವಿನ ಕಳೆ ಶಿವ ಕಳೆಯೊಳು ।।
ಐದೆಯಾರಕ್ಕರದ ಅದ್ಭುತ ಮಣಿಫಲದ ।
ಭೇದ್ಯ ಭೇದಕವುಪ್ಪ ನಿಜವಿಪ್ಪುದು ೧॥

ಸಿದ್ಧರಾಮನಿಗೆ ಗುರುವು ಪ್ರಭುದೇವನಾಗಿ ಅಖಂಡ ಚಿಜ್ಯೋತಿ ಲಿಂಗವನ್ನು ಭಾವ ಮನ ದೃಷ್ಟಿಗೆ ಪ್ರತ್ಯಕ್ಷ ಮಾಡಿಕೊಟ್ಟು ಭಕ್ತಿ ಯುಕ್ತವಾದ ಆತ್ಮನಿಗೆ ಇಂದ್ರಿಯ ಮುಖಗಳಲ್ಲಿ ಲಿಂಗವನ್ನು ನೋಡಿ ಸುತ್ತ, ವಾಸಿಸುತ್ತ ಮುಟ್ಟುತ್ತ ಸರ್ವೇಂದ್ರಿಯ ಸುಖಂಗಳನ್ನು ಲಿಂಗಕ್ಕ ರ್ಪಿಸುತ್ತ ಶರಣ ಸತಿ, ಲಿಂಗ ಪತಿ ಭಾವದಿಂದ ಲಿಂಗಭೋಗೋಪಭೋಗಿ ಯಾಗಿ ಅರಿವ ಅರುಹಿಸಿಕೊಳ್ಳುವ ಎರಡು ವಸ್ತುವೂ ಒಂದೇ ಲಿಂಗವೆಂದು ಮಹಾಜ್ಞಾನದಿಂದ ಅರಿದು ಎರಡೆಂಬುದನ್ನು ಅಳಿದು ಅಭಿನ್ನ ಜ್ಞಾನದಿಂದ ಲಿಂಗದಲ್ಲಿ ಭಿನ್ನವಳಿದು ನೋಡಿದುದೆಲ್ಲ ಮುಟ್ಟಿದುದೆಲ್ಲ ತನ್ನ ತಾನೇ ಲಿಂಗಾರ್ಪಿತವಾಗುತ್ತ ಅರ್ಪಿಸುವೆನೆಂಬ ಸಂಕಲ್ಪ, ಅರ್ಪಿಸುವದಿಲ್ಲೆಂಬ ವಿಕಲ್ಪ, ಈ ಸಂಶಯಗಳನ್ನು ನಷ್ಟಗೊಳಿಸಿ, ಭವದುಃಖಕ್ಕೆ ಹೋರಗಾಗಿ ಲಿಂಗವನೊಳಕೊಂಡ ಪರಿಯನರುಹಿದ ಪರಿಣಾಮವಿದು.

ಮಂತ್ರಃ — ಕಂದ—

ಸತ್ಯಂ ಸ್ವರ್ಗದ ಮಾರ್ಗಂ ।
ಸತ್ಯಂ ಸುಜ್ಞಾನದ ಸದನಂ ವದನಂ ಕೇಳ್ ॥

ಸತ್ಯಂ ಸರ್ವರ ಪ್ರಾಣಂ ।
ಸತ್ಯಂ ಸದ್ಯೋನ್ಮುಕುತಿಯ ಮೂಲಂ ಶಿಲಂ ||೧||

ಜ್ಞಾನಂ ಜಗದಾರಾಧ್ಯಂ ।
ಜ್ಞಾನಂ ಸುಗತಿಯ ಸಹಾಯಃ ಸಂಪದಮುಲ್ತೇ ॥
ಜ್ಞಾನಂ ಭಕ್ತಿಯ ಬಳಗಂ ।
ಜ್ಞಾನಂ ನಿಜಸುಖ ನಿಲಯದ ಧೇನುಂ ಧಾನುಂ ||೨||

ಸಾಕಾರದ ಸೊಗಡಿಲ್ಲದೆ ।
ಲೋಕಪವಿತ್ರವನೆಸಗಲು ಜಂಗಮರೂಪಿಂ ||
ಬೇಕೆನಿಸದ ಬೇಡೆನಿಸದ ।
ಸಾಕೆನಿಸದ ಪರಿಯೊಳಿರುವ ಪ್ರಭುವರ ದೇವಂ ||೩||

ಮಾಯಾಮೋಹವಿದೂರಂ ||
ಕಾಯಾಕಾಯುಸ್ಥಲ ಪ್ರವೃತ್ತಿ ಧುರೀಣಂ ॥
ಛಾಯಾರಹಿತ ಶರೀರಂ ।
ಲೀಯಂ ನಿಶ್ಶೂನ್ಯಲಿಂಗಪ್ರಭುವರ ದೇವಂ ||೪||

ಮೀರಿದ ಸ್ಥಲದಾರೂಪಂ ।
ತೋರುವ ಜಗದಾಂತರದೊಳು ಝುಗಝುಗಿಸುತಿರಲ್ ||
ಮಾರಾರಿಯು ದಯವಿರುತಿರೆ ।
ವಾರಿಜ ಭವಾಂಡಕರಗತವಾಗುತ್ತಿರ್ಕುಂ ||೫||

ಮತ್ತಂ:— ವಚನ:— ಬೆಳ್ಳಗಾವಿಯೆಂಬ ಪಟ್ಟಣವೇ ಶರೀರವಯ್ಯ, ಚಿತ್‌ಕರಣಂಗಳೊಳು ಶೋಭಿಸುವ ಸುಜ್ಞಾನ ನಿರಹಂಕಾರಗಳೆ ಅಲ್ಲಮನ ತಾಯಿತಂದೆಗಳಯ್ಯ. ರವ್ಯವಾದ ಕರವೂರವೆಂಬ ದಟ್ಟಡವಿಯೇ ಕರಸ್ಥಲವಯ್ಯ. ಮಮಕಾರ ಮೋಹಿನಿಯರೇ ಅರಿಷಡ್ವರ್ಗದ ಅಧಿದೇವತೆಗಳಯ್ಯ. ಅರಿಷಡ್ವರ್ಗದ ಇಂದ್ರಜಾಲವೇ ಮಾಯಾದೇವಿಯಯ್ಯ. ಈ ಇಂದ್ರಜಾಲದ ಬಲಿಗೊಳಗಾಗದ ಕಡುಗಲಿಯೇ ಶ್ರೀ ಅಲ್ಲಮಪ್ರಭುವೆಂಪ ನಮ್ಮ ಸಿದ್ಧೇಶ್ವರಾ ||೧||

ತನುವಿಡಿದು ಸತ್ಕ್ರಿಯೆಯನಾಚರಿಸಿ ಸದ್ರೂಪನಾಗಿ ಗುರುವಿನಿಂ ಜ್ಞಾನಪಾದೋದಕವ ಕಂಡು, ಮನವಿಡಿದು ಮಂತ್ರಾಚರಣೆಯಿಂ ಚಿದ್ರೂಪನಾಗಿ ಲಿಂಗದಿಂ ಸುಜ್ಞಾನ ತೀರ್ಥದೋಳೋಲಾಡಿ. ಭಾವವಿಡಿದು ಭಾವಾಚಾರದಿಂ ಚಿತ್ಪ್ರಕಾಶಾಂಗನಾಗಿ ಜಂಗಮದಿಂ ಮಹಾಜ್ಞಾನರೂಪ ಸತ್ಯ ತೀರ್ಥ ಸನ್ನಿಹಿತನಾಗಿರಿಸಿ ತ್ರಿವಿಧಜ್ಞಾನದ ಭೇದಾಭೇದವ ತಿಳಿಯದ ಸ್ಥಳದೊಳು ಇಳಿಸಿ ಉಳಿಸಯ್ಯ ಕಳಾತೀತ ಇಳಾಮಂಡಲಾಂತರಾಳದ ಸಿದ್ಧೇಶ್ವರಾ ॥೨॥

ಚಿಜ್ಜ್ಯೋತಿಯೊಳು ಚಿತ್ತವನಡಗಿಸಿದವಂಗೆ ಮೃತ್ಯುವಿನ ಹಂಗೇಕೆ ? ಘನಲಿಂಗದೊಳು ಲೀನವಾದಂಗೆ ತನುಮನದ ಹಂಗೇಕೆ? ಪಾದೋದಕ ಪ್ರಸಾದದೊಳಿದ್ದವಂಗೆ ಹಸಿವೆ ತೃಷೆಗಳ ಹಂಗೇಕೆ? ತಾನೇ ತಾನಾಗಿರುವ ಏಕೋಭಾವಂಗೆ ಅನೇಕದ ಹಂಗೇಕೆ? ನಿರಾಕಾರದೊಳು ನಿಂತ ನಿಜಾತ್ಮಗೆ ಜಗದ ಹಂಗೇಕೆ? ಹೇಳಾ ಸಿದ್ಧೇಶ್ವರಾ ॥೩॥

ಸಾಕಾರದ ಸಂಸಾರವು ಸಾಕಾಗಿ ನಿರಾಕಾರದೊಳು ನಿಂದು, ನಿಜಾತ್ಮನಾಗಿ ನಿರ್ಗುಣಿಯಾಗಿ ಮಹಾಜ್ಞಾನೋದಧಿಯೋಪಾದಿಯ ಘನಲಿಂಗದ ಸ್ವಾನುಭಾವದೊಳು, ನೀರೊಳಗಿನ ಈಸನ್ನರಿಯದ ನೀರೊಳಗಿನ ಮೀನದ ಮರಿಯಂತೆ ಅರುಹಿನ ಕುರುಹಿನೊಳು ಸ್ವೈವೆರಗಾಗಿ, ಅರುಹು ಕುರುಹುಗಳನೇ ಮರೆದು, ಮರೆತೆನೆಂಬ ಅರಿವಿಲ್ಲದ ಇರುವಿನೊಳು ಇಳಿಸಿ ಉಳಿಸಯ್ಯ ಎನ್ನ ಸಿದ್ಧೇಶ್ವರಾ ॥೪॥

ನಾದ ಬಿಂದು ಕಳೆಗಳಿಲ್ಲದಂದು, ಆದಿ ಅನಾದಿ ಇಲ್ಲವಂದು, ವಾದ ವಶ್ಯಗಳಿಲ್ಲದಂದು, ಮೋದ ಖೇದಗಳಿಲ್ಲದಂದು, ಓದು-ಬೋಧಗಳಿಲ್ಲದಂದು, ಸಾಧ್ಯಸಾಧಕರಿಲ್ಲದಂದು, ಭೇದ್ಯ ಭೇದಕರಿಲ್ಲದಂದು ನೀವೇ ನೀವಾಗಿ ಇದ್ದಿರಯ್ಯ ಸಿದ್ಧೇಶ್ವರಾ ॥೫॥

---

# ಪ್ರಭುದೇವ.

....೦....

ದೇವದೇವನಾಜ್ಞೆಯಿಂದ
ಇಳೆಯತಲಕೆ ಇಳಿದುಬಂದ
ಪರಮಪಾವನಾಂಗನು !
ಜಗದ ಜನರ ಮರಹು ಕಳೆದು-
ಮಾಯೆಯನ್ನು ಬಿಸುಟನಿಂತ
ಸುಜನ ಬಂಧುವು !! ॥೧॥

ಧರಣಿಯಲ್ಲಿ ಶೈವಭಕ್ತಿ
ಅಮಲಕೀರ್ತಿ ಬೆಳಗಲೆಂದು–
ಧರೆಗೆ ಬಂದನು !!
ಮನದ ಮಲಿನ ದುಡಿಗೆಯನ್ನು
ಮಾಯಾ ಮೋಹ ಪಾಶವನ್ನು
ಕಡಿದು ನಿಂದನು !! ॥೨॥

ಕಲ್ಯಾಣ ಮಂಟಪಕೆ-
ಬಸವೇಶನ ಉತ್ಸಾಹಕೆ
ಅವತಾರವಾದನು !
ಸತ್ಯಸಂಧನಾಗಿ ಜಗದಿ
ನಿತ್ಯ ಶರಣ ಸೇವೆಯಲ್ಲಿ
ಜಗದಿನಿಂದನು !! ॥೩॥

ನಿತ್ಯ-ಪರತತ್ವಬೋಧೆಯನ್ನು
ಅಕ್ಕ ಮೊದಲಾದ ಶಿವಶರಣರಿಗೆ
ಪೇಳುತಿರ್ದನು !
ಹೊನ್ನು, ಹೆಣ್ಣು ಮಾಯೆಯಲ್ಲ
ಮಣ್ಣು ಮೊದಲೆ ಮಾಯೆಯಲ್ಲ
ಆಸೆ ಮಾಯೆ ಎಂದನು !! ॥೪॥

ಜಗದ ದುಃಖ ನನ್ನ ದುಃಖ
ಜಗದ ಸುಖವೆ ನನ್ನ ಸುಖವು-
ಎಂದು ಬಾಳ್ದನು !
ದೇವದೇವನಂಘ್ರಿಗಳಿಗೆ-
ಭೃತ್ಯಭಾವದಿಂದ ಬಾಗಿ
ನಮಿಸುತಿರ್ದನು !! ||೫||

ಪ್ರಭುವು ಎಮಗೆ ಜಗದ್ಗುರುವು-
ಪ್ರಭುವು ಎಮಗೆ ದಯಾ ಗುರು-
ಶಾಂತಿ ಶಾಂತಿ ದಾಯಕ !!
ಪ್ರಭುವು ಎಮಗೆ ಜೀವಜ್ಯೋತಿ !
ಪ್ರಭುವು ಎಮಗೆ ದಯಾ ಮೂರ್ತಿ-
ಆವನೆ ನಮಗೆ ಮುಕ್ತಿದಾಯಕ !! |೬|

— ಗುರುಸಿದ್ಧಶಿವಾಚಾರ್ಯರು,
ಗುರುವಿನಪುರಮಠ.

# ಶಿವಶರಣರ ತತ್ವದಿಂದ ಜನಜೀವನದ ಮೇಲಾದ ಅದ್ಭುತ ಪರಿಣಾಮ.

( ಲೇಖಕರುः- ಶ್ರೀಯುತ ಅನ್ನದಾನೀಶ್ವರ ವಿರಕ್ತಮಠ. )

---

ಶಿವಶರಣರ ತತ್ವದಿಂದ ಜನಜೀವನವು ಮಾರ್ಪಟ್ಟು ಸುಂದರವಾದ ಸಂಸ್ಕೃತಿಯೇ ರೂಪತಾಳಿತು. ಶಿವಶರಣರ ವಚನಗಳಲ್ಲಿ "ಗುರುಲಿಂಗ ಜಂಗಮ ದಾಸೋಹ" ಎಂಬ ತತ್ವವು ಆಗಾಗ್ಗೆ ವ್ಯಕ್ತವಾಗುತ್ತದೆ. ಲಿಂಗವೆಂದರೆ ಪರಮಾತ್ಮ. ಪರಮಾತ್ಮನು ಇಷ್ಟಲಿಂಗ ರೂಪನೂ ಅಹುದು, ಅವ್ಯಕ್ತ ಚೈತನ್ಯ ಶಕ್ತಿಯೂ ಅಹುದು. "ಜಗದಾದಿಶಕ್ತಿಯೊಳು ಬೆರಸಿ ಒಡನಾಡುವ ಶ್ರೀ ಗುರುಚೆನ್ನ ಮಲ್ಲಿಕಾರ್ಜುನ" ಎಂಬುದಾಗಿ ಅಕ್ಕಮಹಾದೇವಿಯು ಭಕ್ತಿ ಪರವಶಳಾಗಿ ಹಾಡಿರುವಳು. ಅಂದರೆ ಶಿವಶಕ್ತಿಯುಕ್ತವಾದ ವಿಶ್ವಾತ್ಮವೇ ಲಿಂಗವು. ಅದೇ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ. ಬಸವಣ್ಣನಂತಹರು ಗುರುಗಳು. ಚೆನ್ನಬಸವಣ್ಣನಂತಹರು ಲಿಂಗಸ್ವರೂಪಿಗಳು. ಪ್ರಭುದೇವನಂತಹರು ಜಂಗಮರು. ಭಕ್ತಿಯುಕ್ತ ಸೇವಾಧರ್ಮದ, ಸಮಾಜಸೇವೆಯ ದೀಕ್ಷೆಯಿದ್ದ ಅಧ್ಯಾತ್ಮಾನುಭವದ ಬಸವಣ್ಣನು ಗುರುಸ್ವರೂಪನಲ್ಲದೇ ಬೇರಾರು ? ಲಿಂಗತತ್ವಾನುಭಾವದಲ್ಲಿ, ಷಟ್‌ಸ್ಥಲದ ಸಕೀಲಾನುಸಂಧಾನದಲ್ಲಿಯೂ ಸಿದ್ಧಿಯಲ್ಲಿಯೂ ಪಾರಂಗತನೂ ತನ್ಮಯನೂ ಆದ ಚೆನ್ನಬಸವಣ್ಣನು ಲಿಂಗವಲ್ಲದೇ ಬೇರಾವುದು ? ವೈರಾಗ್ಯ ಚಕ್ರವರ್ತಿಯೂ, ವೇದಾಂತ ಸಿದ್ಧಾಂತಗಳೆರಡನ್ನೂ ಸಮನ್ವಯ ಮಾಡಿದ ಸಮರಸಯೋಗಿ ಶಿವಯೋಗಿ ಅಲ್ಲಮಪ್ರಭುವು ಜಂಗಮವಲ್ಲದೇ ಬೇರಾರು? ಇಂತಹ ಗುರುಲಿಂಗ ಜಂಗಮರಿಗೆ ತನು, ಮನ, ಧನಗಳನ್ನು ಅರ್ಪಣ ಮಾಡಿದರೆ ಅದಕ್ಕೆ ಗುರುಲಿಂಗ ಜಂಗಮ ದಾಸೋಹ ಎಂಬ ಹೆಸರು ಸಲ್ಲುತ್ತದೆ. ಈ ತತ್ವವು ಪ್ರಪಂಚ ಪಾರಮಾರ್ಥಗಳೆರಡನ್ನೂ ಸಮನ್ವಯಗೊಳಿಸಿತು. ಗುರುಲಿಂಗ ಜಂಗಮ ದಾಸೋಹದಿಂದ ಸದ್ಭಕ್ತನು ದೈವೀ ಸಂಪತ್ತಿಯನ್ನುಗಳಿಸಿ ದೈವಿಸ್ಫೂರ್ತಿಯಿಂದ ಪ್ರಪಂಚವನ್ನು ಸಾಗಿಸುತ್ತ ಆದರ್ಶ ಜೀವಿಯಾಗಿ ಜಗದಲ್ಲಿಯ ಸತ್ಯ, ಸೌಂದರ್ಯ, ಕಲ್ಯಾಣಗಳನ್ನನುಭವಿಸಿ ಆನಂದಮಯನಾಗುವನು. ಗುರುಲಿಂಗ ಜಂಗಮ ದಾಸೋಹ

ದಿಂದ ಆಚರಿಸುವ ಸದ್ಭಕ್ತರಿಂದ ಕೂಡಿದ ಸಮಾಜವು ಶಿವಸಮಾಜ ವಾಗುವದು. ಜ್ಞಾನದ, ಶಕ್ತಿಯ ಸಮಾಜವಾಗುವದು. ಇಂಥ ದೈವೀ ಮಾನವ ಸಮಾಜವು ಪ್ರಭುರಾಜ್ಯವನ್ನು ಭೂಲೋಕದಲ್ಲಿ ಸತ್ಯಯುಗ ವನ್ನು ಸ್ಥಾಪಿಸಬಲ್ಲುದು. ಆದರೆ ಗುರುಗಳದೊಂದು ಜಾತಿಯಿಲ್ಲ. ಜಂಗಮ ರದೊಂದು ಜಾತಿಯಿಲ್ಲ. ಲಿಂಗವೆಂದರೆ ಶಿಲೆಯಲ್ಲ. ಪೇಟೆಯಲ್ಲಿ ಕೊಂಡು ತರುವದಲ್ಲ. ಗುರುಲಿಂಗ ಜಂಗಮ ದಾಸೋಹದಿಂದ ಸುಂದರ ಭಕ್ತ ಬಂಧುಗಳ ಸಮಾಜವು ಕಟ್ಟಲ್ಪಡುವದೇನೋ ನಿಜ. ೧೨ ನೇ ಶತಮಾನ ದಲ್ಲಿ ಅಂತಹ ಸಮಾನತೆಯ ಸಮಾಜ ನಿರ್ಮಾಣವೂ ಆಗಿತ್ತು. ಆದರೆ ಕಾಲಕ್ರಮದಲ್ಲಿ ಗುರುಲಿಂಗ ಜಂಗಮ ದಾಸೋಹದ ತಿರುಳು ಅಂತ ರ್ಧಾನವಾಗಿ ಹುರುಳು ಹೋಳೆಯದೆ ಬರೀ ಯಾಂತ್ರಿಕವಾಗಿ ಭಕ್ತ ಮಹೇಶ ಭೇದವೆಂಬ ಜಾತಿಯ ಭಾವನೆಯಿಂದ, ಹೆಚ್ಚುಕಡಿಮೆಯೆಂಬ ಹುಚ್ಚು ಕಲ್ಪನೆಯಿಂದ ಆಚರಣೆಯು ಸಾಗುತ್ತ ಬಂದು ಇಂದು ಸಮಾ ಜವನ್ನು ಕ್ಷಯರೋಗದಂತೆ ಕ್ಷಯಿಸುತ್ತಿರುವದು. ಸಮಾಜವು ಒಳಗೆ ಹುಳ ಹತ್ತಿದ ಗಿಡದಂತೆ ಅಶಕ್ತವಾಗಿಬಿಟ್ಟಿರುವದು. ನಿಜವಾದ ಯೋಗ್ಯತಾಸಂಪನ್ನ ರಾದ ಅಂದರೆ ಅಧ್ಯಾತ್ಮಿಕ ಅನುಭಾವದ ತಳಹದಿಯಮೇಲೆ ವಿಶ್ವಬಾಂ ಧವ್ಯವನ್ನು ಸ್ಥಾಪಿಸುವ ಸ್ತ್ರೀಪುರುಷರನ್ನು ಮಠಗಳಿಗೆ ಆರಿಸದಿದ್ದರೆ, ಈಗಿನಂತೆ ನಿರ್ಜೀವ ಗುರುಲಿಂಗ ಜಂಗಮ ದಾಸೋಹವು ಸಾಗಿದರೆ, ಸಮಾಜದ ಭದ್ರತೆ ಶಾಂತಿ ತುಷ್ಟಿ ಪುಷ್ಟಿಗಳು ಮಾಯವಾಗುವದರಲ್ಲಿ ಸಂದೇಹವೇ ಇಲ್ಲ. ಶಿವಶರಣರ ತತ್ವದ ಪ್ರಕಾರ ನಿಜವಾದ ಗುರುಲಿಂಗ ಜಂಗಮ ದಾಸೋಹದ ಆಚರಣೆಯು ಸಾಗಿದರೆ ನಮ್ಮ ಸಮಾಜವು ದೈವೀ ಸಮಾಜವಾಗುವದರಲ್ಲಿ ಯಾವ ಪ್ರತ್ಯವಾಯವೂ ಇಲ್ಲ.

ಶಿವಶರಣರ ತತ್ವದಿಂದ ಜಂಗಮರಿಗೆ ಬಹು ಮಾನ ಮನ್ನಣೆ ಪೂಜೆ ದಕ್ಷಿಣಾ ಲಾಭ ಕೀರ್ತಿ ಅಧಿಕಾರಗಳು ಸಮಾಜದವರಿಂದ ಸಲ್ಲ ಲಿಕ್ಕೆ ಹತ್ತಿದವು. ಕಲ್ಯಾಣ ಕ್ರಾಂತಿಯ ಕಾಲದಲ್ಲಿ ಜಂಗಮರು ಶಿವ ಶರಣರ ತತ್ವಗಳನ್ನು ತ್ರಿಕರಣಪೂರ್ವಕವಾಗಿ ಸ್ವಂತ ನಡೆಯಿಂದ, ಅರು ಹುಮಯವಾದ ಷಡಾಚರಣೆಯಿಂದ, ಅದ್ಭುತವಾಗಿ ಪ್ರಚಾರಮಾಡಿದರು. ಇಷ್ಟೇ ಅಲ್ಲ; ಮಹಾತ್ಮರ ಸತ್ಯಾಗ್ರಹದಂತೆ ಎಷ್ಟೋ ಜಂಗಮರು ಸತ್ಯಾ ಗ್ರಹ ಮಾಡಿ ಸಮಾಜದ ಅನಿಷ್ಟ ಅನಾಚಾರಗಳನ್ನೂ ಅರಿಷ್ಟ ಸಾಂಪ್ರ

ದಾಯಗಳನ್ನೂ ಮೂಢ ಅಂಧಾನುಕರಣದ ರೂಢಿಗಳನ್ನೂ ನಿವಾರಿಸಿದರು. ಸ್ವಂತ ಕಷ್ಟದಿಂದ ಸಮಾಜ ಸೇವೆಯನ್ನು ಮಾಡಿದರು. ತಪಸ್ಸುಮಾಡಿದರು. ಈಗಿನಂತೆ ಆಳುಗಳನ್ನು ಪಗಾರದ ಆಳುಗಳನ್ನು ಇಟ್ಟುಕೊಂಡು ಜಡವತ್, ಯಂತ್ರವತ್, ಚೈತನ್ಯ ಹೀನರಾಗಿ ಬ್ರಹ್ಮನ ಆಚರಣೆಯಿಲ್ಲದೇ ಅರ್ಥಾತ್ ಬ್ರಹ್ಮಚರ್ಯದ ಅನುಸಂಧಾನವಿಲ್ಲದೇ ಲೌಕಿಕ ಜಡಜೀವಿಗಳಂತೆ, ಆಲಸೀ ತಾಮಸವೃತ್ತಿಯ ಶ್ರೀಮಂತರಂತೆ, ಡಾಂಭಿಕ ಲಿಂಗ ಪೂಜೆಯನ್ನು ದ್ವೈತ ಭಾವದಿಂದ ಮಾಡುತ್ತ ಜೀವನವನ್ನು ಅರ್ಥರಹಿತವಾಗಿ ಮಾಡಿಕೊಂಡು ೧೨ ನೇ ಶತಮಾನದ ಬಸವಣ್ಣನ ಜಂಗಮರನೇಕರು ಕಾಲಹರಣ ಮಾಡುತ್ತಿರಲಿಲ್ಲ. ಜಂಗಮವೆಂದರೆ ಆದರ್ಶ ಲಿಂಗವಂತನು. ಜಂಗಮವೆಂದರೆ ನಿಜಬ್ರಹ್ಮಚಾರಿಯು. ಜಂಗಮವೆಂದರೆ ಚೈತನ್ಯ ಮೂರುತಿ. ಜಂಗಮವೆಂದರೆ ಜ್ಞಾನಶಕ್ತಿ. ಜಂಗಮವೆಂದರೆ ನಿಜ ಶರಣನು. ಜಂಗಮವು ಸದ್ಗುರುವು, ಜಂಗಮದ ದರ್ಶನದಿಂದ ಜನ್ಮ ಪಾವನ. ಅಹಹ! ಪ್ರಭುಲೀಲೆಯ ಜಂಗನು ಅಲ್ಲಮನು ಎಲ್ಲ ಜಾತಿಯ ಜನರಿಗೂ ಆದರ್ಶ ಮಹಾ ವಿಶ್ವವಿಭೂತಿಯಲ್ಲವೇ? ಅಂತಹ ಜಂಗಮ ತತ್ವಕ್ಕೆ ಶರಣು! ಕಲ್ಯಾಣದಿಂದ, ಉಳಿವಿಯಿಂದ ಬಂದ ಜಂಗಮರೆಂದರೆ ಸಮಾಜಕ್ಕೆ ಪ್ರಾಣವಾಯು ಬಂದಂತೆ ಆನಂದವಾಗುತ್ತಿತ್ತು. ಅಲ್ಲವೇ? ಆದರೆ ಈಗ? ದೇವನೇ ಬಲ್ಲ!!!

ಅಹಹ! ಶಿವಶರಣರು ಎಂಥ ಅನುಪಮ ವಿಶ್ವಬಂಧುಗಳು! ಅವರ ತತ್ವಗಳಂತೆ ನಡೆದರೆ ಜಗತ್ತಿಗೆ-ಮಾನವ ಸಮಾಜಕ್ಕೆ, ಉಜ್ವಲ ಭವಿಷ್ಯವು ಕಟ್ಟಿಟ್ಟದ್ದು! ಶಿವಶರಣರು ತಮ್ಮ ಭೌತಿಕ ದೇಹವು ಮಣ್ಣುಗೂಡಿದರೂ, ದೈವಿಕ ತತ್ವಗಳು ಉಜ್ವಲವಾಗಿದ್ದು ಜಗತ್ತು ಸುಖಶಾಂತಿಗಳಿಂದ ಬದುಕಲೆಂದು ಕಾಲಜ್ಞಾನದ ವಚನಗಳನ್ನು ಸಹ ದಿವ್ಯಜ್ಞಾನದಿಂದ ಬರೆದಿರುವರು. ಇಷ್ಟೇಅಲ್ಲ. ಕಾಲಜ್ಞಾನವನ್ನು ವಚನರೂಪವಾಗಿ ಜನಸಾಮಾನ್ಯರಿಗೆ ಸಾರಿ ಅವರಿಗೆ ಅರುಹು ಕೊಟ್ಟು ತುಂಬು ಜೀವನದಿಂದ ಪ್ರಕಾಶಿಸಲೆಂದು— ಜಗತ್ತಿಗೆ ಉಜ್ವಲ ಜೀವನದ ಬೆಳಕು ಆರದಿರಲೆಂಬ ಸದ್ಧೇತುವಿನಿಂದ— ಕಾಲಜ್ಞಾನವನ್ನು ಸಾರುವ ಅಯ್ಯನವರ—ಜಂಗಮಮೂರ್ತಿಗಳ—ವ್ಯವಸ್ಥೆಯನ್ನೂ ಸಹ ಮಾಡಿಟ್ಟುಹೋಗಿರುವರು! ೧೨ನೇ ಶತಮಾನದಲ್ಲಿ ಸಾರುವ ಅಯ್ಯನವರು ಲೋಕಶಿಕ್ಷಣ, ಲೋಕ

ಜಾಗ್ರತಿ, ಲೋಕಸಂಘಟನೆಯ ಕಾರ್ಯವನ್ನೂ ಮಾಡಿದರು. ಏತರ ಬಲದಿಂದ? ಶಿವಶರಣರ ಆಧ್ಯಾತ್ಮಿಕ ಅನುಭಾವದ ದಿವ್ಯ ತೇಜಸ್ಸಿನ ಪ್ರೇರಣೆಯ ಬಲದಿಂದಲ್ಲದೇ ಮತ್ತೇನು? ಸಾರುವ ಅಯ್ಯನವರ ಪವಿತ್ರ ಕಾಯಕವಲ್ಲಿಯೂ ಈಗ ಸುಧಾರಣೆಯಾಗಬೇಕಾಗಿದೆ. ಸುಸಂಘಟಿತ ಶಿಸ್ತನ್ನೂ, ಪಾವಿತ್ರ್ಯವನ್ನೂ, ಜ್ಞಾನದ ಬೆಳಕನ್ನೂ ಈಗಿನ ಸಾರುವ ಅಯ್ಯನವರಲ್ಲಿ ತುಂಬಿದರೆ ಸಮಾಜಸುಧಾರಣೆಯು ಆಗಲಿಕ್ಕೆ ಸಹಾಯವಾಗುವದು.

ಹುಟ್ಟಿದಾಗ, ಲಗ್ನದಾಗ, ಸತ್ತಾಗ ಮುಂತಾದ ಸಂದರ್ಭಗಳಲ್ಲಿ ಸಹ ಶಿವಶರಣರ ಆಧ್ಯಾತ್ಮಿಕ ಭಾವನೆಯು ಪ್ರೇರೇಪಕ ಭಾವನೆಯು ಕಾರ್ಯಮಾಡುವಂತೆ ಸಮಾಜದಲ್ಲಿ ವ್ಯವಸ್ಥೆಗೊಳಿಸಲ್ಪಟ್ಟಿದೆ. ಶಿವಶರಣರ ಆಧ್ಯಾತ್ಮಿಕ ಪ್ರಭಾವವು ಜನಜೀವನದಲ್ಲಿ ಹೇಗೆ ಇಳಿದಿದೆ ನೋಡಿರಿ!

ವ್ಯಾಪಾರಸ್ಥರು ಲೆಕ್ಕ ಬರೆಯುವಾಗ "ಓಂ ಶ್ರೀಗುರು ಬಸವಲಿಂಗಾಯನಮಃ" ಎಂದು ಬರೆದು ನಂತರ ಲೆಕ್ಕ ಬರೆಯಲಿಕ್ಕೆ ಪ್ರಾರಂಭಿಸುವ ಪದ್ಧತಿಯು ಈಗಲೂ ಕೆಲವು ಶಿಷ್ಟಜನರಲ್ಲಿ ರೂಢಿಯಲ್ಲಿದೆ. ಮಲಗುವಾಗ "ಓಂ ಶ್ರೀಗುರು ಬಸವಲಿಂಗಾಯ ನಮಃ" ಏಳುವಾಗ "ಓಂ ಶ್ರೀಗುರು ಬಸವಲಿಂಗಾಯ ನಮಃ" ಬೇರೆ ಕಾಲಗಳಲ್ಲಿ ಬಸವಾ, ಬಸವಾ ಎಂದು ಭವಾಂಬೋಧಿಯನ್ನು ದಾಟುವ ಸಾಂಪ್ರದಾಯವನ್ನು ಮಡಿವಾಳಮಾಚಿದೇವನ ವಚನದಲ್ಲಿ, ಸರ್ವಜ್ಞನ ವಚನದಲ್ಲಿ, ಶಿವಕವಿಗಳ ಕಾವ್ಯಗಳಲ್ಲಿ, ಸಾಮಾನ್ಯ ಜನ ಜೀವನದಲ್ಲಿ ಇಂದಿಗೂ ನಾವು ಕಾಣಬಹುದು. ಒಂದು ಕಾಲದಲ್ಲಿ ಲೋಕಶಾಲೆಗಳಾಗಿದ್ದ ಮಠಗಳಲ್ಲಿ ಶಿಕ್ಷಕರಾಗಿದ್ದ ಅಯ್ಯನವರು "ಓಂ ಶ್ರೀಗುರು ಬಸವಲಿಂಗಾಯ ನಮಃ" ಎಂದುದಾಗಿ ಪಾಠ ಪ್ರಾರಂಭಮಾಡುತ್ತಿದ್ದರು. ಅಪ್ಪ, ಅವ್ವ, ಅಣ್ಣ, ಅಕ್ಕ ಮುಂತಾದ ಬಂಧುಭಾವ ದ್ಯೋತಕವಾದ ಹೆಸರುಗಳು ಶಿವಶರಣರ ತತ್ವದ ಪ್ರತಿಭೆಯನ್ನೇ ತೋರಿಸುತ್ತವೆ. ಶಿವಶರಣರ ಮುಂಚೆ ಈ ಹೆಸರುಗಳು ರೂಢಿಯಲ್ಲಿರಲಿಲ್ಲ. ಈ ಮಾತು ಈಗಿನ ಸಮತಾವಾದಿಗಳ "ಭಾಯಿ" ಎನ್ನುವದನ್ನು ನೆನಪಿಗೆ ತರುವದಿಲ್ಲವೇ?

ಶಿವಶರಣರು ಕೇವಲ ಅಧ್ಯಾತ್ಮಕ್ಕೆ ಅಂಟಿಕೊಂಡು ವ್ಯವಹಾರವನ್ನು ಮರೆಯಲಿಲ್ಲ. ವ್ಯವಹಾರವನ್ನು ಶಿವಮಯವಾಗಿ, (ಕಲ್ಯಾಣಮಯವಾಗಿ)

ಮಾಡಿದರು. "ಶಿವಭಕ್ತರ ನೋವೇ ಅದೇ ಲಿಂಗದ ನೋವು" ಎಂದು ಬಸವಣ್ಣನು ನುಡಿದಿರುವನು. ಬೇರೊಂದು ಸಂದರ್ಭದಲ್ಲಿ ಭಕ್ತರಿಗೆ ಬಡ್ಡಿಯನ್ನು ತೆಗೆದುಕೊಂಡು ದುಡ್ಡು ಕೊಡಬಾರದೆಂದೂ, ಬಡ್ಡಿಯಿಲ್ಲದೇ ದುಡ್ಡು ಅರ್ಪಣಮಾಡಬೇಕೆಂದೂ ಬಸವಣ್ಣನು ಹೇಳಿದ್ದಾನೆ. "ತ್ರಿವಿಧ ದಾಸೋಹವಿಲ್ಲದೆ ವೇದವೇದಾಂತವ ಓದಿದರೇನು? ಸಂಗೀತವ ಹಾಡಿದರೇನು? ನವಿಲಿನಂತೆ ಕುಣಿದರೇನು?" ಎಂದು ಸಮಾಜಸೇವೆಯ ಸ್ವರೂಪವನ್ನೇ ಆಧ್ಯಾತ್ಮಕ್ಕೆ ಕೊಟ್ಟಿರುತ್ತಾರೆ. "ಬಂದ ಭಕ್ತಂಗೆ ಕೈ ಮುಗಿವಾತನೇ ಭಕ್ತ" ಎಂದು ಬಸವಣ್ಣನು ವಿನಯವನ್ನು ಬೋಧಿಸುತ್ತಾನೆ. "ಭಕ್ತನಿಗಿಂತ ಹಿರಿಯರಿಲ್ಲ. ಎನಗಿಂತ ಕಿರಿಯರಿಲ್ಲ." ಎಂದು ಬಸವಣ್ಣನು ಸಮಾಜ ಸಭ್ಯತೆಯ ದಾರಿಯನ್ನೇ ಚೀನೀ ದೇಶದ ಕಾನ್ಫುಶಿಯಸ್ಸನಂತೆ ತೋರಿದ್ದಾನೆ. ಆದರೆ ರಕ್ತ ಸಂಬಂಧಕ್ಕೆ ಅತೀವ ಮಹತ್ವ ಕೊಟ್ಟ ಕಾನ್ಫುಶಿಯಸ್ಸನಿಗೂ ಸಹ ಆದರ್ಶನಾಗಿದ್ದಾನೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" ಇತ್ಯಾದಿಯಾಗಿ ಅನೇಕ ವಚನಗಳನ್ನುದಾಹರಿಸಿ ಒಂದು ಸ್ವತಂತ್ರ ಲೇಖವನ್ನೇ ಬರೆದು ಆದರ್ಶ ಸಮಾಜವನ್ನು ಹೇಗೆ ಶಿವಶರಣರು ಕಟ್ಟಿದರೆಂಬದನ್ನೂ ಅಧ್ಯಾತ್ಮಕ್ಕೂ ಸಮಾಜಸೇವೆಗೂ ಹೇಗೆ ಸಮನ್ವಯ ಮಾಡಿದರೆಂಬದನ್ನೂ ಸಿದ್ಧಮಾಡಿ ತೋರಿಸಬಹುದು. ಮಹಾತ್ಮಾ ಗಾಂಧಿಯ ಸತ್ಯಾಗ್ರಹ, ಮಹಮ್ಮದ ಪೈಗಂಬರನ ಏಕದೇವತೋಪಾಸನೆ, ಯೇಸು ಕ್ರಿಸ್ತನ ಬಂಧುಪ್ರೇಮ, ಬುದ್ಧನ ಅಹಿಂಸಾ ಧರ್ಮ, ಇಜಿಪ್ತ ದೇಶದ ಏಕನಾತನ ಮೂರ್ತಿಪೂಜಾ ನಿರಸನ ತತ್ವ, ಅಕಬರನ ತಾಳ್ಮೆ ಮತ್ತು ಚತುರತೆ, ಝೋರಾಷ್ಟ್ರರನ ಒಳ್ಳೆಯದೇ ಜಯಹೊಂದುವದೆಂಬ ಆತ್ಮವಿಶ್ವಾಸ, ಗ್ರೀಕದೇಶದಲ್ಲಿ ಪ್ಲೇಟೋನ ತತ್ವಜ್ಞಾನಿಯು ಆಡಳಿತ ನಡಿಸಲು ಸಮರ್ಥನೆಂಬ ತತ್ವ, ಮುಂತಾದ ಎಲ್ಲ ಮಹಾವಿಭೂತಿಗಳ ತತ್ವಗಳೂ ಶಿವಶರಣರ ತತ್ವಗಳಲ್ಲಿ ಅಡಕವಾಗಿವೆಯೆಂದು ಸಿದ್ಧಮಾಡಲು ವಚನಗಳನ್ನುದಾಹರಿಸಬಹುದು.

ಬಸವಣ್ಣನ ಸಮಾಜಸೇವೆಯು ಬಹುಮುಖವಾದದ್ದಾಗಿದ್ದಿತು. ಆರ್ಥಿಕ ಸಮತಾವಾದದ ಸೂತ್ರಗಳೂ ಶರಣರ ತತ್ವಗಳಲ್ಲಿವೆ. ಇಷ್ಟೇ ಅಲ್ಲ, ಸಮಾಜದಲ್ಲಿ ಧನದ ಹಂಚುವಿಕೆಯು ಸರಿಯಾಗಿ ನಡೆಯುವಂತೆ ಶಿವಶರಣರು ಕಾಯಕಗಳ ವ್ಯವಸ್ಥೆಯನ್ನೇ ಮಾಡಿರುವರು. ಹೀನವೆಂದು ಜಾತಿ

ವಾದಿಗಳಿಂದ ತಿಳಿಯಲ್ಪಡುತ್ತಿದ್ದ ಒಕ್ಕಲತನ, ಕೈಗಾರಿಕೆ, ಕೂಲಿ, ಕಟ್ಟಿಗೆ ಹೊರೆ ಮಾರುವದು, ನೇಕಾರಿಕೆ, ಸಮಗಾರನ ಚರ್ಮಗಾರಿಕೆ, ಹೊಲೆಯನ ಕಸ ಬಳಿಯುವದು ಮುಂತಾದ ಉದ್ಯೋಗಗಳಿಗೆ ಶಿವಶರಣರ ತತ್ವದಿಂದ ಘನತೆ ಬಂದು ಸಮಾಜ ಜೀವನಕ್ಕೆ ಅವಶ್ಯವಾದ ಯಾವ ಉದ್ಯೋಗವೂ ಗೌರವಾಸ್ಪದವಾದದ್ದೆಂಬ ಭಾವನೆ ಸಮಾಜದಲ್ಲಿ ಬೆಳೆದು ಬಂತು. ಎಲ್ಲ ಉದ್ಯೋಗದ ಜನರಿಗೂ ಸಮಾಜದಲ್ಲಿ ಸ್ಥಾನವನ್ನು ಕಲ್ಪಿಸಿ ಅವರು ಉನ್ನತಿಹೊಂದುವಂತೆ ಶರಣರು ಉದ್ಯೋಗ ಗೌರವ ತತ್ವವನ್ನು (*Dignity of labour*) ಜನಾಂಗದಲ್ಲಿ ರೂಢ ಮೂಲಗೊಳಿಸಿದರು. ಮುಖ್ಯಮಂತ್ರಿಯ ಕೆಲಸ ಮಾಡುತ್ತಿದ್ದ ಬಸವಣ್ಣನು ಮಾದಾರ ಚನ್ನಯ್ಯ, ಸಮಗಾರ ಹರಳಯ್ಯ, ಮೇದಾರ ಕೇತಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ ಮುಂತಾದ ಎಲ್ಲ ಉದ್ಯೋಗಗಳ ಜನರಿಗೂ ತನಗಿಂತ ಹೆಚ್ಚಿನವರೆಂದು ನಮಸ್ಕರಿಸುತ್ತಿದ್ದನು. ಈ ಭಾವನೆಯು ನಮ್ಮ ಈಗಿನ ಕಾಂಗ್ರೆಸ್ ಮಂತ್ರಿಗಳಲ್ಲಿದ್ದರೆ ರಾಜಕೀಯ ಪರಿಸ್ಥಿತಿಯು ಎಷ್ಟೋ ಸುಧಾರಿಸಬಹುದು. ಈಗಿನ ಲಿಂಗವಂತ ಸಮಾಜದಲ್ಲಿ ಸಮಾಜ ಜೀವನಕ್ಕೆ ಬೇಕಾದ ಎಲ್ಲ ಉದ್ಯೋಗಗಳ ಜನರೂ ಇದ್ದಾರೆ. ಇದು ಶಿವಶರಣರ ತತ್ವ ಜ್ಯೋತಿಯ ಫಲವೇ ಸರಿ.

ಶಿಖಾಯಜ್ಞೋಪವೀತಗಳು ಧಾರ್ಮಿಕ ಚಿನ್ಹಗಳಾಗಿವೆಯೆಂದು ವೈದಿಕ ಬ್ರಾಹ್ಮಣರು ಹೇಳುತ್ತಾರೆ. ಆದರೆ ಬ್ರಾಹ್ಮಣ ಸ್ತ್ರೀಯರು ಅವುಗಳನ್ನೇಕೆ ಧರಿಸುವದಿಲ್ಲ? ಸ್ತ್ರೀಯಳು ಹೀನಳೆಂಬ ವರ್ಣವಾದಿಗಳ ಕಲ್ಪನೆಯು ಹಿಂದೂ ಸಮಾಜ ಪುರುಷನ ಪಾರ್ಶ್ವಬೇನೆಯಾಗಿ ಪರಿಣಮಿಸಿತು. ಈ ಹೀನ ಕಲ್ಪನೆಯು ಜಗತ್ತಿನ ಪ್ರಗತಿಯ ವೈರಿಯಾಯಿತು. ಆದರೆ ಶರಣರ ತತ್ವಗಳ ಪುಣ್ಯದಿಂದ ಲಿಂಗವಂತ ಸಮಾಜದಲ್ಲಿ ಸ್ತ್ರೀಯಳು ಧಾರ್ಮಿಕ ಸ್ವಾತಂತ್ರ್ಯಕ್ಕೆ ಅರ್ಹಳಾಗಿ ಇಂದಿಗೂ ಗೌರವ ಸ್ಥಾನದಲ್ಲಿದ್ದಾಳೆ. ಪುರುಷರಂತೆ ಸ್ತ್ರೀಯಳು ಲಿಂಗ ಧರಿಸಿ ಪೂಜಿಸುತ್ತಾಳೆ. ಆವರೆ ಶಿವಶರಣರ ಕಾಲವಲ್ಲಿ ಸ್ತ್ರೀಯರು ವಚನಗಳನ್ನು ಬರೆಯುತ್ತಿದ್ದರು. ಅಷ್ಟು ವಿದ್ಯಾವಂತರೂ, ಅನುಭಾವಿಗಳೂ ಆಗಿದ್ದರು. ಅದರಂತೆ ಈಗ ಲಿಂಗವಂತ ಸ್ತ್ರೀಯರು ವಿದ್ಯಾಭ್ಯಾಸಕ್ಕೂ ಶಿವಾನುಭಾವಕ್ಕೂ ಅನುಕೂಲತೆಯನ್ನು ಒದಗಿಸಿ ಸಂಸ್ಕೃತಿ ಸಂವರ್ಧನಕ್ಕೆ ಅನುವು ಮಾಡಿ ಕೊಡಬೇಕಾಗಿದೆ.

ಜಾತಿ ಕುಲ ವರ್ಣ ವಾದಿಗಳ ಶೂದ್ರನು ಹೀನನೆಂಬ ಕಲ್ಪನೆಯನ್ನು ಶಿವಶರಣರು ಧಿಃಕರಿಸಿದರು. ಬಸವಣ್ಣನು " ಅಪ್ಪನು ನಮ್ಮ ಮಾದರ ಚನ್ನಯ್ಯ " ಎಂದು ಸಾರಬೇಕಾದರೆ ಹಾಗೆ ಸಾರಿ ನಡೆಯಬೇಕಾದರೆ ಅವನಲ್ಲಿ ಎಂಥ ಜಾತ್ಯಾತೀತ ಆಧ್ಯಾತ್ಮಿಕ ಭಾವನೆಯಿದ್ದಿರಬೇಕು! ವಿಚಾರಿಸಿರಿ. ಇಷ್ಟೇಅಲ್ಲ. ಬ್ರಾಹ್ಮಣ ಮಧುವಯ್ಯನಿಗೂ ಸಮಗಾರ ಹರಳಯ್ಯನಿಗೂ ಬೀಗತನ ಮಾಡಿಸಿದರು ಶರಣರು. ಬ್ರಾಹ್ಮಣ-ಶೂದ್ರ ಎಂಬ ಜಾತಿಯ ಕೊಳೆಯನ್ನು ಭಕ್ತಿಯ ದಿವ್ಯ ಜ್ಯೋತಿಯಿಂದ ತೊಳೆದು ಜನಾಂಗಕ್ಕೆ ಮಹೋಪಕಾರ ಮಾಡಿದ್ದಾರೆ. ಲಿಂಗವಂತರು ಇದನ್ನು ಎಂದೂ ಮರೆಯಬಾರದು. ಮುಂದುವರೆದು ಆ ದಿಸೆಯಲ್ಲಿ ಸಾಗಬೇಕು.

ಶಿವಶರಣರಿಗಿಂತಲೂ ಪೂರ್ವದಲ್ಲಿ ಲಿಂಗ ಮತ್ತು ಯಜ್ಞೋಪವೀತ ಗಳೆರಡನ್ನೂ ಧರಿಸುವ ಜನರಿದ್ದರು. ಆದರೆ ಬಸವಣ್ಣನವರು ಯಜ್ಞದ ಕರ್ಮಮಾರ್ಗವನ್ನೂ ಯಜ್ಞೋಪವೀತವನ್ನೂ ತೆಗೆದು ಕೇವಲ ಲಿಂಗ ಧಾರಣೆಯನ್ನು ಸಮಾಜದಲ್ಲಿ ಸ್ಥಾಪಿಸಿದನು. ಲಿಂಗಧಾರಣೆಯಿಂದ ಭಕ್ತಿ ಮಾರ್ಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಬಂತು. ಇಂದಿಗೂ ಲಿಂಗವಂತ ಸಮಾಜದಲ್ಲಿ ಭಕ್ತಿಮಾರ್ಗಕ್ಕೇ ಹೆಚ್ಚು ಮಹತ್ವವಿದ್ದುದನ್ನು ಕಾಣಬಹುದು. ಆದರೆ ಯಜ್ಞದ ಕರ್ಮಮಾರ್ಗವನ್ನು ಕೆಲವು ಅಂಧ ಸನಾತನೀ ಮನೋವೃತ್ತಿಯ ಲಿಂಗಾಯತರು ಪುನಃ ಸ್ಥಾಪಿಸಲಿಕ್ಕೆ ಹವಣಿಸುತ್ತಿದ್ದರೂ ಸಹ ಅದು ಪ್ರಚಾರಕ್ಕೇ ಬರುವದಕ್ಕೆ ಇಂದಿನ ರಾಷ್ಟ್ರೀಯ ವಾತಾವರಣವು ಅಡ್ಡಬರುತ್ತಿದೆ.

ರಾಷ್ಟ್ರೀಯತೆಯ ತತ್ವಗಳು ಶರಣರಲ್ಲಿವೆ. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಶರಣರ ವಿಶ್ವಬಾಂಧವ್ಯವಂತೂ ವಚನಗಳಲ್ಲಿ ಹೊಳೆಯುತ್ತಿದೆ.

ಈ ವರೆಗೆ ೨ ಲೇಖಾಂಕಗಳಲ್ಲಿ ವಿವರಿಸಿರುವ ಮಹತ್ವದ ಪ್ರಗತಿಪರ ಸಂಗತಿಗಳನ್ನು ದೂರೀಕರಿಸುವದೂ ಲಿಂಗವಂತ ಸಮಾಜದ ಕರ್ತವ್ಯವೆಂಬುದನ್ನು ಸೂಚಿಸಿ ಶಿವಶರಣರ ಸಂಸ್ಕೃತಿ ಸಂವರ್ಧನಕ್ಕೆ ವೈಯಕ್ತಿಕವಾಗಿ, ಸಾಂಘಿಕವಾಗಿ ಸಹಾಯಕರಾಗಬೇಕೆಂದು ಬೇಡುತ್ತೇವೆ.

---

## ಏಕೆ ಕೊರಗುವೆ?

ಏಕಿಂತು ಪರಿತಪಿಸುವೆ ಮನ್ಮಾನಸವೆ
ಕೈಮುಗಿದು ಬೇಡುವೆನು ಕೊರಗಬೇಡಿಂತು ||

ಹಣವಿಲ್ಲವೆಂದು ಚಿಂತೆಮಾಡುವೆಯ ?
ಲಲನೆಯರ ಕುರಿತು ಧ್ಯಾನ ಮಾಡುವೆಯ ?
ಆದರಿಸುವರಿಲ್ಲವೆಂದು ಕೊರಗುವೆಯ ?
ಮುಂದೇನು ಗತಿ ಎಂದು-ಬಿಸಿಸುಯ್ವೆಯ ?

ಕವಿಯಾಗಬೇಕೆಂದಿರುವೆಯಾ ?
ಆತ್ಮಸಂಯಮಿಯಾಗುವೆಯಾ ?
ಕಾಯ ಸುಖಬೇಕೆಂದು ಪರಿತಪಿಸುವೆಯಾ ?
ರಸಿಕನೆನಿಸಿಕೊಳ್ಳಬೇಕೆಂದಿರುವೆಯಾ ?

ನಿನ್ನೊಳಗೆ ಏನಿಹುದು ಪೇಳೆನ್ನ ಮನವೇ ?
ಕೈಮುಗಿದು ಬೇಡುವೆನು ಕೊರಗಬೇಡಿಂತು ?
ಮಿಥ್ಯಸುಖವ ಮರೆದು–ನೆನೆ-
ಹರಮನ-ಪಡೆವೆ ಪರಮಪದವ !!

— ಗುರುಸಿದ್ಧ ಶಿವಾಚಾರ್ಯರು,
ಗುರುವಿನಪುರಮಠ.

# ಶೂಲದ ಬ್ರಹ್ಮಯ್ಯ.

ಬಿಜ್ಜಳನಿಗೆ ಗರುಡಭೂಪನೆಂಬುವನು ಮಾಂಡಲಿಕನಾಗಿ ಪನ್ನಾತ ಪುರವೆಂಬಲ್ಲಿ ರಾಜ್ಯವಾಳುತ್ತಿದ್ದನು. ಅವನ ಮನೆಯ ಹಡಪಿಗನಾದ ರಾಮನಾಥನೆಂಬವನು ಆ ರಾಜನ ಆಭರಣವನ್ನು ಕದ್ದು ಜಂಗಮನಾದ ಬ್ರಹ್ಮಯ್ಯನ ಮನೆಯಲ್ಲಿಟ್ಟನು. ಅದನ್ನು ರಾಜನ ಆಳುಗಳು ನೋಡಿ ಬಿಜ್ಜಳನಲ್ಲಿ ಫಿರ್ಯಾದ ಮಾಡಲು, ಬಿಜ್ಜಳನು ಬ್ರಹ್ಮಯ್ಯನನ್ನು ಕರಿಸಿ ಕೇಳಲಾಗಿ ಅಲ್ಲಿಯೇ ಇದ್ದ ಬಸವನು ಜಂಗಮರು ಹೀಗೆ ಕಳವು ಮಾಡುವದುಂಟೇ ಎಂದು ಅಂದನು. ಆದರೆ ಬಿಜ್ಜಳನು ಅದನ್ನು ಕೇಳದೆ ಬ್ರಹ್ಮಯ್ಯನನ್ನು ಶೂಲಕ್ಕೇರಿಸಿದನು. ಆದರೆ ಇದರಿಂದ ಬ್ರಹ್ಮಯ್ಯನು ಮರಣ ಹೊಂದಲಿಲ್ಲ. ಇಷ್ಟೆ ಅಲ್ಲ, ಅವನಲ್ಲಿ ನೆಟ್ಟ ಶೂಲದ ತುದಿಯು ಚಿಗಿತು ಟೊಂಗೆಯಾಗಿ ಬೆಳೆಯಿತು. ಎಲ್ಲರೂ ನೋಡಿ ಚಕಿತರಾಗಿ ಇವನು ಮಹಾತ್ಮನೆಂದು ಹೊಗಳಿದರು. ಆದರೆ ಮುಂದೆ ಶೂಲದ ಬ್ರಹ್ಮಯ್ಯನು ಕಲ್ಯಾಣಕ್ಕೆ ಬಂದು ಅಲ್ಲಿಯೇ ವಾಸಮಾಡಹತ್ತಿದನು.

ಕೆಲದಿವಸಗಳಾದಮೇಲೆ ಬಿಜ್ಜಳನು ಹರಳಯ್ಯ ಮಧುವಯ್ಯಗಳನ್ನು ಕೊಲ್ಲಿಸಿದ್ದರಿಂದ ಶರಣರು ಬಿಜ್ಜಳನನ್ನು ಕೊಂದುಹಾಕಿದರು. ಕಲ್ಯಾಣದಲ್ಲಿ ಭೀಕರ ಕದನಗಳುಂಟಾದವು. ಆ ಸಮಯದಲ್ಲಿ ಶೂಲದ ಬ್ರಹ್ಮಯ್ಯನು ಶಿವಶರಣರಿಗೆ ಧೈರ್ಯವನ್ನು ಹೇಳುತ್ತ ಅವನೂ ಮಡಿವಾಳ ಮಾಚಿದೇವ, ಚನ್ನಬಸವ ಮೊದಲಾದವರೂ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ೭೭೦ ಅಮರ ಗಣಂಗಳನ್ನು ಕೂಡಿಕೊಂಡು ಉಳಿವಿಗೆ ಚಿತ್ತೈಸಿದರು. ಬಿಜ್ಜಳನ ದಂಡಾಳುಗಳು ಅವರನ್ನು ಬೆನ್ನಟ್ಟಲು ತೊರಗಲ್ಲು ನಾಡಿನಲ್ಲಿ ಭೀಕರ ಕಾಳಗಗಳಾದವು. ಆಗ ಶೂಲದ ಬ್ರಹ್ಮಯ್ಯನು ಶರಣರಿಗೆ ಮುಂದಾಳುವಾಗಿ ನಿಂತು ಬಿಜ್ಜಳನ ಸೈನ್ಯದೊಂದಿಗೆ ಅನೇಕ ಕಡೆಗೆ ಕಾದಿ ಅದನ್ನು ಹಿಮ್ಮೆಟ್ಟಿಸಿದನು. ಮುಂದೆ ಶರಣರೊಡನೆ ಅವನು ಉಳಿವಿಗೆ ಹೋಗಿ ಅಲ್ಲಿಯೇ ಸಮಾಧಿಸ್ಥನಾದನು.

# ಬಂಕನಾಥ

ಶಿವಶರಣರು ತೊರಗಲ್ಲು ನಾಡನ್ನು ಪ್ರವೇಶಿಸಿ ಬಿಜ್ಜಳನ ದಂಡಾಳು ಗಳ ಕೂಡ ಹೋರಾಡುತ್ತಿರಲು ಅಲ್ಲಿದ್ದ ಅನೇಕ ಶಿವಶರಣರು ಇವರ ನ್ನೊಡಗೊಂಡು ವೈರಿಗಳೊಡನೆ ಕಾದಾಡಲು ಸಿದ್ಧರಾದರು. ಇವ ರಲ್ಲಿ ಬಂಕನಾಥನು ಮುಖ್ಯನಾಗಿದ್ದನು. ಅವನು ಪ್ರಸಾದಿಕನಾದ್ದ ರಿಂದ ಪ್ರಸಾದಿ ಲೆಂಕಬಂಕಣ್ಣನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದಾನೆ. ಅವನು ವಚನಕಾರನೂ ಇದ್ದು "ದಹನ ಚಂಡಿಕೇಶ್ವರ ಲಿಂಗ" ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾನೆ.

ಈ ಕಾಲದಲ್ಲಿ ಬಂಕಯ್ಯನು ಶಿವಶರಣರಿಗೆ ಮುಂದಾಳುವಾಗಿ ತೊರ ಗಲ್ಲು ನಾಡಿನಲ್ಲಿ ಬಿಜ್ಜಳನ ಸಂಡಿನೊಡನೆ ಹೋರಾಡಿದನು. ಅವನು ಇಂಚಲ ಗ್ರಾಮದಲ್ಲಿ ನಿಂತುಕೊಂಡಿದ್ದನು. ಅಲ್ಲಿಯೇ ಅವನ ಸಮಾ ಧಿಯು ಇದೆ. ಅಲ್ಲಿ 'ಬಂಕನಾಥನ ಗುಡಿ' ಯು ಎಂದು ಈಗಲೂ ಪ್ರಸಿದ್ಧವಾಗಿದೆ.

---

# ಉಳಿವಿಗೆ ಪ್ರಯಾಣ

ಶಿವಶರಣರು ಕಾತರವಳ್ಳಿಯಲ್ಲಿ ಶೂರತನದಿಂದ ಹೋರಾಡಿದರೂ, ಶತ್ರುಗಳ ಸೈನ್ಯವು ಪ್ರಬಲವಾದ್ದರಿಂದ ಅವರು ಮೆಲ್ಲಗೆ ಕಾಡಿನಲ್ಲಿ ಸರಿ ಯುತ್ತ ಸರಿಯುತ್ತ ಬೆನ್ನಟ್ಟಿ ಬರುತ್ತಿದ್ದ ಶತ್ರುಗಳನ್ನು ತಡೆಯುತ್ತ ತಡೆ ಯುತ್ತ ಮೆಲುಗೈ, ಯಲ್ಲಾಪುರ, ಉಳವಿಯುವರೆಗೂ ಬಂದರು. ಈ ಕಾಲದಲ್ಲಿ ಕಿನ್ನರೀ ಬ್ರಹ್ಮಯ್ಯ ಮತ್ತು ಚನ್ನಬಸವೇಶ್ವರರು ಅವರಿಗೆ ಮುಖ್ಯಸ್ಥರಾಗಿದ್ದರು. ಶಿವಶರಣರಿಗೆ ಈ ದುಃಸ್ಥಿತಿಯು ಪ್ರಾಪ್ತವಾಗಲು ಅವರಿಗೆ ಸಹಾಯಮಾಡಲು ಕೆಲವು ಪ್ರಯತ್ನಗಳಾದುದು ಕಂಡುಬರು ತ್ತದೆ. ಹೀಗೆ ಸಹಾಯಮಾಡಲು ಮಡಿವಾಳ ಮಾಚಿದೇವನ ಗುರುವಾದ ಹಿಪ್ಪರಿಗೆಯ ಮಲ್ಲಿಕಾರ್ಜುನ, ರುದ್ರಮುನಿ, ಕಕ್ಕಯ್ಯ, ನುಲಿಯ ಚಂದಯ್ಯ

ಇವರು ಮುಖ್ಯರಾಗಿದ್ದರು. ಅವರು ಉಳಿವಿಯಲ್ಲಿ ಚನ್ನಬಸವನನ್ನು ಸಂದರ್ಶಿಸಿ ಅವನನ್ನು ಪ್ರೋತ್ಸಾಹಿಸಿದರು. ಈ ಮಹಾನುಭಾವರ ಚರಿತ್ರೆಗಳನ್ನು ಬರೆಯುವ ಮೊದಲು ಈ ಯುದ್ಧಗಳಿಗೆ ಮೂಲ ಕಾರಣರಾದ ಮಧುವರಸ ಮತ್ತು ಹರಳಯ್ಯ ಮತ್ತು ಬಿಜ್ಜಳನನ್ನು ಘಾತಿಸಿದ ಜಗದೇವ ಮತ್ತು ಮಲ್ಲಿಬೊಮ್ಮಯ್ಯ ಇವರ ವೃತ್ತಾಂತಗಳನ್ನು ಹೇಳುವದು ಅವಶ್ಯವಾಗಿರುತ್ತದೆ.

---

## ಹರಳಯ್ಯ-ಮಧುವಯ್ಯಗಳು.

ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಧುವರಸನು ಸಮಸ್ತ ವಿನಿಯೋಗದವರಿಗೆ ಅಧಿಪತಿಯಾಗಿ ಅವನ ಸೇವೆ ಮಾಡುತ್ತಾ ಇದ್ದನು. ವಿನಿಯೋಗದವರು ಅಂದರೆ ಕಾರಕೂನರ ಮೇಲೆ ನಿಯಮಿಸಲ್ಪಟ್ಟವರು. ಮಧುವರಸನು ಈ ಸ್ಥಾನದಲ್ಲಿ ಇದ್ದುದರಿಂದ ಅವನು ಅರಸನ ದರ್ಬಾರದಲ್ಲಿ ಬಹಳ ವರ್ಚಸ್ಸುಳ್ಳವನಾಗಿದ್ದನು. ಮತ್ತು ರಾಜನ ಪೂರ್ಣ ಮನ್ನಣೆಯನ್ನು ಹೊಂದಿದವನಾಗಿದ್ದನು. ಮಧುವರಸ ಅಥವಾ ಮಧುವಯ್ಯನೆಂದು ನಾಡಿನಲ್ಲಿ ಅವನು ಪ್ರಸಿದ್ಧನಾಗಿದ್ದನು. ಅವನ ಮೂಲ ಗ್ರಾಮವು ಮಂಗಳವಾಡವೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಬಿಜ್ಜಳನು ಮೊದಲು ಮಂಗಳವಾಡದಲ್ಲಿದ್ದುಕೊಂಡು ಮುಂದೆ ಅವನು ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿ ಕಲ್ಯಾಣದಲ್ಲಿ ಆಳಹತ್ತಿದ ಬಳಿಕ ಮಧುವರಸನೂ ಅವನೊಡನೆ ಮಂಗಳವಾಡದಿಂದ ಅಲ್ಲಿಗೆ ಹೋಗಿ ಅವನ ಆಸ್ಥಾನದಲ್ಲಿ ಕೆಲಸ ಮಾಡುತ್ತಿದ್ದಂತೆ ತೋರುತ್ತದೆ. ಅವನು ಬ್ರಾಹ್ಮಣನಾಗಿದ್ದರಿಂದ ಬ್ರಾಹ್ಮಣ ಧರ್ಮದಂತೆಯೇ ಆಚರಿಸುವನು.

ಹೀಗಿರುವಲ್ಲಿ ಹರಳಯ್ಯನೆಂಬ ಮಚ್ಚೆಗಾರನು ಪಾದರಕ್ಷೆಗಳನ್ನು ಹೊಲಿಯುವ ಕಾಯಕವನ್ನು ಮಾಡುತ್ತ ಕಲ್ಯಾಣ ಪಟ್ಟಣದಲ್ಲಿಯೇ ವಾಸಿಸುತ್ತಿದ್ದನು. ಆಗ ಕಲ್ಯಾಣ ಪಟ್ಟಣದಲ್ಲಿ ಬಹುಜನ ಶಿವಾನುಭವಿಗಳು ನೆರೆದು ಶಿವಾನುಭವದ ತತ್ವಗಳನ್ನು ಪ್ರಸಾರ ಮಾಡುತ್ತಿದ್ದುದರಿಂದ ಹರಳಯ್ಯನು ಅವುಗಳ ಬಗ್ಗೆ ಭಕ್ತಿಯನ್ನು ತಾಳಿ ವೀರಶೈವ ದೀಕ್ಷೆಯನ್ನು

ಹೊಂದಿ ಲಿಂಗಜಂಗಮ ದಾಸೋಹ ಕಾರ್ಯಗಳನ್ನು ನಡಿಸುತ್ತ ಬಂದನು. ಆದರೂ ಅವನು ಪಾದರಕ್ಷಿಗಳನ್ನು ಹೊಲಿಯುವ ಕಾಯಕವನ್ನು ಮಾಡುತ್ತಲೇ ಇದ್ದನು. ಅದನ್ನು ಮಾಡಿದರೂ ಅವನು ಲಿಂಗದಲ್ಲಿ ಸರ್ವಾರ್ಪಿತ ಭಾವವುಳ್ಳವನಾಗಿ ಸರ್ವಾಚಾರ ಸಂಪತ್ತಿನಾಚರಣೆಯನ್ನು ಪಾಲಿಸುತ್ತ ಬಂದನು. ಪ್ರತಿದಿನ ಜಂಗಮಾರ್ಚನೆಯಲ್ಲಿರುವನು. ಕಲ್ಯಾಣಿಯಮ್ಮನು ಅವನ ಹೆಂಡತಿಯ ಹೆಸರು. ಅವಳೂ ಸಹ ಶಿವಾನುಭವಿಯಾಗಿ ಹರಳಯ್ಯನ ಆಚರಣೆಗಳಲ್ಲಿ ಅವನಿಗೆ ಅನುಕೂಲಳಾಗಿ ವರ್ತಿಸುತ್ತ ಬಂದಳು. ಕಲ್ಯಾಣದಲ್ಲಿಯ ಶಿವಶರಣರಾದರೂ ಹರಳಯ್ಯನ ಲಿಂಗಾನುಭವವನ್ನು ತಿಳಿದವರಾಗಿ ಅವನಿಗೆ ಅತ್ಯಂತ ಮನ್ನಣೆಯನ್ನು ಕೊಡುವವರಾಗಿದ್ದರು. ಬಸವೇಶ್ವರನಾದರೂ ಹರಳಯ್ಯನನ್ನು ಯಾವಾಗಲೂ ಅತ್ಯಂತ ಆದರದಿಂದ ಕಾಣುವನು.

ಹೀಗಿರಲು ಒಂದು ದಿನ ಹರಳಯ್ಯನು ಪಟ್ಟಣದ ಬೀದಿಯಿಂದ ಹೋಗುತ್ತಿರುವಾಗ ಇದಿರಿಗೆ ಬಸವೇಶ್ವರನನ್ನು ಕಂಡು ಅವನಿಗೆ "ಶರಣು ಬಸವಣ್ಣ" ಎಂದು ನುಡಿದು ನಮಸ್ಕರಿಸಿದನು. ಅದಕ್ಕೆ ಬಸವೇಶ್ವರನು- "ಶರಣು ಶರಣಾರ್ಥಿ ಹರಳಯ್ಯ" ಎಂದು ನುಡಿದು ಅವನಿಗೆ ತಿರುಗಿ ನಮಸ್ಕಾರ ಮಾಡಿದನು. ಅದನ್ನು ನೋಡಿ ಹರಳಯ್ಯನು ಮನೆಗೆ ಬಂದು ಚಿಂತಾಕ್ರಾಂತನಾಗಿ ಕುಳಿತುಕೊಂಡು ತನ್ನ ಹೆಂಡತಿಗೆ—"ನಾನು ಶರಣು" ಎಂದು ಒಮ್ಮೆ ಅಂದದ್ದಕ್ಕೆ ಬಸವೇಶ್ವರನು 'ಶರಣು, ಶರಣಾರ್ಥಿ' ಎಂದು ಎರಡು ಬಾರಿ ಅಂದನು. ಇದರಿಂದ ಬಸವಣ್ಣನ ಶರಣು ಒಂದು ಹೆಚ್ಚಾಯಿತು. ಬಸವಣ್ಣನು ಪ್ರಧಾನಿಯು, ರಾಜ್ಯವನ್ನಾಳುವವನು. ಇಂಥವನಿಂದ ನಾನು ಹೀಗೆ ನುಡಿಸಿಕೊಳ್ಳುವದೆಂದರೆ ನಾನು ಏನಾದರೂ ಪಾಪ ಮಾಡಿರಬೇಕು ಎಂದು ಚಿಂತೆಯಿಂದ ನುಡಿದನು. ಅದಕ್ಕೆ ಹೆಂಡತಿ ಕಲ್ಯಾಣಮ್ಮನು— ನೀವು ಈ ಪಾಪ ಕಳೆಯಲಿಕ್ಕೆ ಒಂದು ಉಪಾಯ ಹೇಳುವೆನು. ನೀವು ಒಂದು ಜೋಡು ಚಮ್ಮಾವುಗೆಯನ್ನು ಮಾಡಿ ಬಸವಣ್ಣನಿಗೆ ಮೆಟ್ಟಿಸಬೇಕು. ಅಂದರೆ ಹೆಚ್ಚಾದ 'ಶರಣು' ಸಮನಾಗುವದು ಮತ್ತು ಆ ನಿಮ್ಮ ಪಾಪ ಹೋಗುವದು. ಎಂದು ಹೇಳಲು, ಹರಳಯ್ಯನು ಹಾಗೆಯೇ ಆಗಲಿ ಎಂದು ಒಂದು ಚೆಲುವಾದ ಜೋಡನ್ನು ಮಾಡಿ ಬಸವಣ್ಣನಿಗೆ ಕೊಡಲು ಅವನು ಅರಮನೆಗೆ ಹೋದನು. ಬಸವಣ್ಣನು ಅವನಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಂಡು, ಈ ಜೋಡು ಬಹಳ

ಅಪಹಾಸ್ಯವಾದುದು, ಇದನ್ನು ನಾನು ಮೆಟ್ಟುವದಿಲ್ಲ, ನೀನೇ ಇದನ್ನು ತೆಗೆದುಕೊಂಡು ಹೋಗಿ ಮಾಹೇಶ್ವರರಿಗೆ ಅರ್ಪಿಸಿಬಿಡು, ಎಂದು ಹೇಳಿ ಅದಕ್ಕಾಗಿ ಅವನಿಗೆ ಕೊಡತಕ್ಕ ಕಾಯಕ ಅಂದರೆ ಬೆಲೆಯನ್ನು ಕೊಟ್ಟು ಅವನಿಗೆ ನಮಸ್ಕರಿಸಿ ತಿರುಗಿ ಕಳಿಸಿದನು.

ಹರಳಯ್ಯನು ಆ ಮುಚ್ಚಿಯ ಜೋಡನ್ನು ತೆಗೆದುಕೊಂಡು ಬೀದಿಯಲ್ಲಿ ಬರುವಾಗ ದರ್ಬಾರಿನ ವಿನಿಯೋಗವವರಿಗೆ ಅಧಿಪತಿಯಾದ ಮಧುವರಸನು ಹರಳಯ್ಯನನ್ನು ಕಂಡು ನಿನ್ನ ಕಂಕುಳದಲ್ಲಿರುವದು ಅದೇನೆಂದು ಕೇಳಲು, ಅವನು- ಶಿವಭಕ್ತರಿಗೆ ನೇಯಿಸಿ ಮಾಡಿದ ಪಾದರಕ್ಷೆ, ಎಂದು ಹೇಳಲು ಅವನು ಈ ಜೋಡನ್ನು ಶಿವಭಕ್ತರಷ್ಟೇ ಏಕೆ ? ಸರ್ವರೂ ಮೆಟ್ಟಿದರೇನಾಗುವದು ? ಎಂದು ಹೇಳಿ ಅವು ಬಹು ಸುಂದರವಾದವುಗಳೆಂಬುದನ್ನು ನೋಡಿ ಅವನು ಬಲಾತ್ಕಾರದಿಂದ ಅವುಗಳನ್ನು ಸೆಳೆದುಕೊಂಡು ಮನೆಗೆ ಒಯ್ದು ಅವುಗಳನ್ನು ಉಪಯೋಗಿಸಹತ್ತಿದನು.

ಹೀಗೆ ಉಪಯೋಗಿಸಹತ್ತಿರಲು ಕೆಲವು ದಿವಸಗಳಲ್ಲಿಯೇ ಮಧುವರಸನಿಗೆ ಕುಷ್ಟರೋಗವು ಬಂದೊದಗಿತು. ಅದರಿಂದ ಅವನ ಮೈಯ್ಯಲ್ಲಿ ಊಪು ಹೆಚ್ಚಾಗಿ ಕೀವು ನೆತ್ತರ ಸುರಿಯಹತ್ತಿತು. ವೈದ್ಯರ ಕಯ್ಯಿಂದ ಎಷ್ಟು ಉಪಚರಿಸಿಕೊಂಡರೂ ಬೇನೆಯು ವಾಸಿಯಾಗದೆ ಹೋಯಿತು. ಹೀಗೆ ಅವನು ಬೇನೆಯಿಂದ ಬಹಳ ಬಳಲಹತ್ತಿದನು.

ಹೀಗಿರಲು ಒಂದುದಿನ ಅವನ ದಾಸಿಯಾದ ಮಹದೇವಿ ಎಂಬುವಳು ತನ್ನ ಒಡೆಯನ ಜಳಕಕ್ಕೆ ನೀರು ತರಲಿಕ್ಕೆ ಹೋಗಿರಲು ದಾರಿಯಲ್ಲಿ ಜೊಂಪೆಯಾಟವು ನಡೆದದ್ದು ಅದನ್ನು ನೋಡುತ್ತ ಅಲ್ಲಿಯೇ ನಿಂತುಕೊಂಡಳು. ಮುಂದೆ ಮೋಡಗವಿದು ಮಳೆಯಾಗಹತ್ತಿತು. ಆಗ ಅವಳು ಕತ್ತಲೆಯಲ್ಲಿ ಬಾವಿಗೆ ಹೋಗಲಂಜಿ ಅಲ್ಲಿ ನೆರೆಯಲ್ಲಿದ್ದ ಹರಳಯ್ಯನ ಮನೆಯ ಬಚ್ಚಲನೀರು ಗುಂಡಿಯಲ್ಲಿ ನಿಂತಿದ್ದನ್ನು ನೋಡಿ ಅವಳು ಅದನ್ನು ತನ್ನ ಕೊಡದಲ್ಲಿ ತುಂಬಿಕೊಂಡು ಮಧುವರಸನ ಸ್ನಾನದ ನೀರಿನಲ್ಲಿ ಕೂಡಿಸಿ ಅದರಿಂದ ಅವನನ್ನು ಎರೆದಳು.

ಅವಳು ಹೀಗೆ ಆ ನೀರಿನಿಂದ ಸ್ನಾನಮಾಡಿಸಲು ಮಧುವರಸನ ಮೈಯ್ಯಲ್ಲಿದ್ದ ಉರಿಪು ಕೂಡಲೆ ನಿಂತುಹೋಯಿತು. ಮರುದಿನವೆನ್ನು

ವಷ್ಟರಲ್ಲಿ ಅವನ ಕುಷ್ಟರೋಗವು ಹೋಗಿಬಿಟ್ಟು ಅವನು ದಿವ್ಯ ಶರೀರ ಯಾದನು.

ಆಗ ಇದು ದಾಸಿಯು ತಂದ ನೀರಿನ ಪರಿಣಾಮವೆಂದು ಮಧು ವರಸನಿಗೆ ತೋರಿತು. ಅವನು ಆಕೆಯನ್ನು ಕರೆದು ಸ್ನಾನಕ್ಕೆ ಆ ನೀರು ಎಲ್ಲಿಂದ ತಂದೆ? ಅಂಜಬೇಡ, ನಿಜವಾದುದನ್ನು ಹೇಳು ಎಂದು ಕೇಳಲು ಅವಳು ಆ ನೀರನ್ನು ಹರಳಯ್ಯನ ಬಚ್ಚಲ ಗುಂಡಿಯಿಂದ ತಂದೆನೆಂದು ಅಂಜಂಜುತ್ತ ನಿಜವಾದ ಸಂಗತಿಯನ್ನೇ ಹೇಳಿದಳು. ಅದನ್ನು ಕೇಳಿ ಮಧುವರಸನು-- ಹರಹರಾ, ಈ ಶಿವಶರಣನ ಬಚ್ಚಲ ನೀರು ಮಿಂದ ಹೀಗಾಯಿತಲ್ಲ! ಅವನ ದರ್ಶನ ಮಾಡಿ ಶರಣೆಂದರೆ ಇಷ್ಟ ಫಲವು ದಿಟವೆಂದು ಅವನಿಗೆ ತೋರಿತು. ಆಗ ಅವನು ಹರಳಯ್ಯನ ಮನೆಗೆ ಹೋಗಿ ನಮಸ್ಕರಿಸಿ ಅವನನ್ನು ಕೊಂಡಾಡಿ ಹರಳಯ್ಯನ ನಿರೂಪದಿಂದ ವೀರಶೈವ ದೀಕ್ಷೆಯನ್ನು ತೆಗೆದುಕೊಂಡನು. ಮತ್ತು ಲಿಂಗ ಪೂಜೆಯಲ್ಲಿ ನಿರತನಾಗಿ ಶಿವಾನುಭಾವಿಯಾಗಿ ಕಾಲಕಳೆಯಹತ್ತಿದನು.

ಆಮೇಲೆ ಅವನು ಶಿವಾನುಭವ ಮಂಟಪಕ್ಕೆ ನಿತ್ಯ ಬರುವನು ಮತ್ತು ಅಲ್ಲಿ ನಡೆಯುತ್ತಿದ್ದ ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುವನು. ಹೀಗೆ ಮಧುವರಸನು ಜ್ಞಾನಿಯೂ ಉಚ್ಚ ಶಿವಾನುಭವಿಯೂ ಆದನು. ಅವನು ಶಿವಾನುಭವ ಮಂಟಪವಲ್ಲಿ ನಡೆಯುತ್ತಿದ್ದ ಗೋಷ್ಠಿಗಳನ್ನು ಕೇಳುತ್ತ ತನ್ನ ಅನುಭವವನ್ನು ವಚನಗಳ ಮೂಲಕ ಹೇಳಹತ್ತಿದನು. 'ಅರ್ಕೇಶ್ವರಾ' ಎಂಬುದೇ ಅವನ ವಚನಗಳ ಮುದ್ರಿಕೆಯಾಗಿದೆ. ಈ ವಚನಗಳು ಬಹು ಉದಾತ್ತವಾದವುಗಳು. ಮತ್ತು ಅರ್ಥಪೂರ್ಣವಾದವು ಗಳು ಇವೆ. ನಾವು ಅವುಗಳಲ್ಲಿ ಕೆಲವುಗಳನ್ನು ಶಿವಾನುಭವ ಗ್ರಂಥ ಮಾಲೆಯಲ್ಲಿ ಪ್ರಕಟಿಸಿದ್ದೇವೆ. ಅವುಗಳಿಗೆ ಒಂದು ಟೀಕೆಯು ಇದ್ದು ಅದರ ಮೇಲಿಂದ ಅವು ಎಷ್ಟು ಗೂಢಾರ್ಥವುಳ್ಳವಾಗಿವೆಂಬುದು ತಿಳಿದು ಬರುತ್ತದೆ.

ಈ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿ ಅಗಸರವನಾದ ಮಡಿ ವಾಳ ಮಾಚಿದೇವನು, ಹಡಪಿಗನಾದ ಅಪ್ಪಣ್ಣನು, ಢೋರಕುಲದವನಾದ ಕಕ್ಕಯ್ಯನು, ಅಕ್ಕಸಾಲಿಗರಾದ ಕಿನ್ನರೀ ಬ್ರಹ್ಮಯ್ಯ ಮತ್ತು ವರದಾನಿ ಗುಡ್ಡಮ್ಮಗಳು, ಉಚ್ಚ ಮಠಾಧಿಕಾರಿಯಾದ ನಿರ್ಲಜ್ಜ ಶಾಂತಯ್ಯನು,

ಸೋದರರಾದ ಮೊರಸ ಮೇಮಯ್ಯ ಮತ್ತು ಕೇತಯ್ಯಗಳು, ಗಾಯಕನಾದ ಗಟ್ಟಿವಾಳಯ್ಯನು, ಕಂಕರಿಯನ್ನು ಬಾರಿಸುವ ಕಂಕರೀ ಕಕ್ಕಯ್ಯನು, ಕಟ್ಟಿಗೆ ತಂದು ಮಾರುವ ಮೋಳಿಗೆಯ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯಮ್ಮನು, ಉಚ್ಚ ಮಠಾಧಿಕಾರಿ ಎನಿಸಿಕೊಂಡ ರುದ್ರಮುನಿಯು, ಬೇಡರವನಾದ ನನ್ನಯ್ಯನು, ಜ್ಞಾನಿಯಾದ ಅಲ್ಲಮಪ್ರಭುವು, ಉಚ್ಚ ಶಿವಾನುಭಾವಿಗಳಾದ ಮಹಾದೇವಿಯಕ್ಕ, ನೀಲಾಂಬಿಕೆ ನಾಗಲಾಂಬಿಕೆ ಮತ್ತು ಕಾಶ್ಮೀರದ ಬೊಂತಾದೇವಿಯರು, ರಾಜಋಷಿ ಎನಿಸಿಕೊಂಡ ಸಕಲೇಶ ಮಾದರಸನು, ಕಲ್ಲುಕುಟಿಕರಾದ ಒಡ್ಡರಿಗೆ ಅಧಿಪತಿಯಾದ ಸಿದ್ಧರಾಮನು, ಹೀಗೆ ಅನೇಕ ಜಾತಿಯವರಾದ ಅನೇಕ ವೃತ್ತಿಗಳನ್ನು ಪಾಲಿಸುವಂಥ ಶಿವಾನುಭವಿಗಳೂ, ವಚನಕಾರರೂ ವಚನಕಾರ್ತಿಯರೂ ಬಸವೇಶ್ವರನಿಗೆ ಸಮಕಾಲೀನರಾಗಿ ಅವನ ಸನ್ನಿಧಿಯಲ್ಲಿ ಶಿವಾನುಭವ ಸದ್ಗೋಷ್ಠಿಗಳನ್ನು ನಡಿಸುತ್ತಿದ್ದರು. ಇಂಥ ಮಹಾನುಭಾವರಲ್ಲಿ ಹರಳಯ್ಯ ಮಧುವಯ್ಯಗಳು ಸೇರ್ಪಡೆಯಾಗಿ ಗುರುಲಿಂಗ ಜಂಗಮಗಳ, ತ್ರಿಲಿಂಗಗಳ, ಪಾದೋದಕ ಪ್ರಸಾದಗಳ, ಲಿಂಗ ಮಂತ್ರಗಳ, ಲಿಂಗದ ನೆಲೆಕಲೆಗಳ ಸಂಬಂಧಗಳನ್ನು ಅರಿತುಕೊಂಡು ಆಚರಿಸುತ್ತಲಿದ್ದರು. ಅವರೆಲ್ಲರೂ ತಮ್ಮ ಆಚರಣೆಯ ರೀತಿಗಳನ್ನು ತಮ್ಮ ವಚನಗಳಲ್ಲಿ ಸುಬೋಧವಾಗಿ ವಿವರಿಸಿದ್ದಾರೆ. ಅವುಗಳನ್ನು ನಾವು ಪ್ರಸಿದ್ಧಿಸುತ್ತಬಂದಿದ್ದೇವೆ. ಇಂಥ ವಾತಾವರಣದಲ್ಲಿ ಆಕುಂಚಿತ ಜಾತಿವಿಷಯಕ ವಿಚಾರಗಳೂ, ಉಚ್ಚ ನೀಚ ಭಾವಗಳೂ ಹೇಗೆ ಉಳಿಯುವವು? ಅವು ಉಳಿಯಲಾರವು. ಎಲ್ಲರಲ್ಲಿಯೂ ಸಮತಾಭಾವವು ನೆಲೆಗೊಂಡಿತ್ತು. ಇಂಥವರಲ್ಲಿ ಹರಳಯ್ಯ ಮಧುವಯ್ಯಗಳು ಸೇರಿಕೊಂಡು ಶಿವಾನುಭವದ ನಡೆಯಂತೆ ನಡೆಯಲಾರಂಭಿಸಿದರು. ಆ ಉಭಯತರಲ್ಲಿ ಇವನು ಬ್ರಾಹ್ಮಣನು, ಆತನು ಮೊಚ್ಚೆಗೂಲೆಯುವವನು ಎಂಬ ಕುಲಭೇದವು ಅಳಿದುಹೋಗಿತ್ತು. ಅವರಲ್ಲಿ ಮಧುವರಸನ ಕಠಿಣ ಬೇನೆಯು ಹರಳಯ್ಯನ ಸಾನ್ನಿಧ್ಯದಿಂದ ದೂರಾಗಿತ್ತು. ಇದರಿಂದ ಮಧುವರಸನು ಅವನ ವಿಷಯವಾಗಿ ಸ್ವಾಭಾವಿಕವಾಗಿ ಕೃತಜ್ಞತಾಭಾವವನ್ನು ತಾಳಿದವನಾಗಿದ್ದನು. ಆದ್ದರಿಂದ ಮಧುವರಸನಲ್ಲಿ ಹರಳಯ್ಯನೊಡನೆ ಬೀಗತನ ಮಾಡಬೇಕೆಂಬ ಅಭಿಲಾಷೆಯು ಉಂಟಾಯಿತು. ಆಗ ಮಧುವರಸನು ತನ್ನ ಸುತೆಯನ್ನು ಹರಳಯ್ಯನ ಸುತ

ನಿಗೆ ಕೊಟ್ಟು ಲಗ್ನ ಮಾಡಿದನು. ಈ ಲಗ್ನವನ್ನು ಬಸವಾದಿ ಪ್ರಮಥರು ಒಪ್ಪಿಕೊಂಡು ಲಗ್ನದ ಉತ್ಸವವನ್ನು ಬಹು ವಿಜೃಂಭಣೆಯಿಂದ ನಡಿಸಿದರು.

ಇದು ಬಸವಾದಿ ಪ್ರಮಥರ ಮತ್ತು ಶಿವಶರಣರ ಆರಂಭದ ಕಾಲವಾಗಿತ್ತು. ಆಗ ಜೈನ, ಬ್ರಾಹ್ಮಣ, ವೀರಶೈವ ಇವರಲ್ಲಿ ಈಗ ಹೇಗೆ ಭಿನ್ನತೆಗಳು ತೋರಿಬರುತ್ತವೆಯೋ ಹಾಗೆ ಆಗ ಇರಲಿಲ್ಲ. ಈ ಮೂರು ಸಮಾಜಗಳಲ್ಲಿ ಪರಸ್ಪರವಾಗಿ ಮತಾಂತರಗಳು ಆಗಿಂದಾಗ್ಗೆ ಆಗುತ್ತಿದ್ದವು. ಮಧುವರಸನು ಪ್ರಮಥ ಮಾರ್ಗವನ್ನು ಸ್ವೀಕರಿಸಿದ್ದರೂ ಅವನು ಬ್ರಾಹ್ಮಣನೆಂಬ ಭಾವವು ಬ್ರಾಹ್ಮಣ ಸಮಾಜದಲ್ಲಿ ಹೋಗಿದ್ದಿಲ್ಲ. ಅವನು ಶ್ರೇಷ್ಠ ಕುಲದವನು, ಹರಳಯ್ಯನು ನೀಚ ಕುಲದವನು ಎಂದು ಆಗಿನ ಕಾಲದ ಬ್ರಾಹ್ಮಣರು ತಿಳಿದುಕೊಂಡು, ಹರಳಯ್ಯನ ಕೂಡ ಲಗ್ನ ಸಂಬಂಧ ಮಾಡಿದ ಮಧುವರಸನನ್ನು ಕುರಿತು ಬ್ರಾಹ್ಮಣರು ದೊಡ್ಡ ಚಳವಳಿಯನ್ನು ನಡಿಸಿದರು. ಅವರು ಬಿಜ್ಜಳನಲ್ಲಿ ಮೊರೆಇಟ್ಟರು. ಅವರು ಅವನಿಗೆ— ನಿನ್ನ ಪ್ರಧಾನಿಯಾದ ಬಸವನು ಕಲ್ಯಾಣವನ್ನು ಹೊಲೆಗಲಿಸಹತ್ತಿದ್ದಾನೆ, ರಾಜ್ಯದಲ್ಲಿ ಸದಾಚಾರವು ಹೋಗಿಬಿಟ್ಟಿದೆ, ರಾಜನಿಗೆ ಇದರಿಂದ ದೋಷ ಪ್ರಾಪ್ತಿಯು, ಇದು ಅಧರ್ಮವು. ಆದ್ದರಿಂದ ಹರಳಯ್ಯ ಮಧುವರಸರಿಗೆ ಕಠಿಣ ಶಿಕ್ಷೆಯನ್ನು ವಿಧಿಸಬೇಕು, ಅವರು ಮಹಾಪಾಪಿಷ್ಠರು ಎಂದು ನಾನಾ ಪರಿಯಾಗಿ ಬಿಜ್ಜಳನಲ್ಲಿಗೆ ಹೋಗಿ ಹೇಳಿಕೊಂಡರು. ಬಿಜ್ಜಳ ರಾಜನಿಗೆ ಅವರ ದೂರು ಯೋಗ್ಯವೆಂದು ತೋರಿತು. ಆಗ ಅವನು ಬಸವ, ಚನ್ನಬಸವ, ಮಡಿವಳ ಮಾಚಿದೇವ ಮೊದಲಾದವರನ್ನು ಕರಿಸಿಕೊಂಡು ಈ ರೀತಿ ನೀವು ಅಧರ್ಮವನ್ನೇಕೆ ನನ್ನ ರಾಜ್ಯದಲ್ಲಿ ನಡಿಸುತ್ತಾ ಇದ್ದೀರಿ, ಎಂದು ಪ್ರಶ್ನೆಮಾಡಿದನು.

ಆಗ ಶಿವಶರಣರಿಗೂ ಬಿಜ್ಜಳನಿಗೂ ದೀರ್ಘ ಚರ್ಚೆಗಳಾದವು. ಈ ಶರೀರ ಸಂಬಂಧವು ಅಧರ್ಮವಲ್ಲೆಂದು ಚನ್ನಬಸವೇಶ್ವರನು ಆಗಮೋಪನಿಷದ್ಗ್ರಂಥಗಳ ಆಧಾರಗಳನ್ನು ಬಿಜ್ಜಳನಿಗೆ ತೋರಿಸಿಕೊಟ್ಟನು. ಅವನು ಪಂಡಿತನಾಗಿದ್ದನು. ಬಸವೇಶ್ವರನೂ ಮಡಿವಾಳ ಮಾಚಿದೇವನೂ ಲಿಂಗಧಾರಣೆಯಿಂದ ಪೂರ್ವಾಶ್ರಯವು ಹೇಗೆ ನಾಶವಾಗುತ್ತದೆ, ಅದರಿಂದ ಭಕ್ತನ ಮೊದಲಿನ ಕುಲವು ಹೇಗೆ ಹೋಗಿಬಿಡುತ್ತದೆ, ಉದ್ಯೋಗ

ಮಾತ್ರದಿಂದ ಹೆಚ್ಚು ಕಡಿಮೆ ಎಣಿಸಕೂಡದು. ಭಕ್ತನ ಕಾಯಕವು ಲಿಂಗ ಪ್ರಸಾದದ ಮೂಲಕ ಯಾವಾಗಲೂ ಉಚ್ಚತರದ್ದು. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶಿವಶರಣರೆಲ್ಲರೂ ಕುಲಜರು. ಅವರಲ್ಲಿ ಕುಲಭೇದವೆಂಬುದಿಲ್ಲ, ಎಂದು ಹೇಳಿ ಇದನ್ನು ಸಿದ್ಧಪಡಿಸಲು ಅವರು ಅನೇಕ ಉಕ್ತಿಗಳನ್ನೂ ಉಪನಿಷತ್ತು ಪುರಾಣ ಗ್ರಂಥಗಳಲ್ಲಿಯ ಪ್ರಮಾಣಗಳನ್ನೂ ತೆಗೆದುಕೊಂಡು ಬಿಜ್ಜಳನ ಮುಂದಿಟ್ಟರು.

## ಎಳಹೂಟೆಯು ಶಿಕ್ಷೆ

ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಬಿಜ್ಜಳನು ಹರಳಯ್ಯ ಮತ್ತು ಮಧುವರಸರು ತಪ್ಪುಗಾರರು, ಅವರು ಅಧರ್ಮದಿಂದ ನಡೆದರು, ಅದರಿಂದ ರಾಜ್ಯಕ್ಕೆ ಅನರ್ಥವಾಗುವದು, ಎಂದು ಉದ್ಘೋಷಿಸಿ ಅವರಿಬ್ಬರನ್ನು ಎಳಹೂಟೆಯಿಂದ ಎಳಿಸಿ ಕೊಂದುಹಾಕಿದರೆಂದು ತನ್ನ ಸೇವಕರಿಗೆ ಆಜ್ಞಾಪಿಸಿದನು. ಈ ತೀರ್ಪನ್ನು ಕೇಳಿ ವರ್ಣಾಶ್ರಮ ಧರ್ಮಿಗಳು ತಮ್ಮ ಹರ್ಷವನ್ನು ವ್ಯಕ್ತಪಡಿಸಿದರು. ಶಿವಶರಣರು ಉದ್ವೇಗವನ್ನು ಹೊಂದಿದವರಾದರು. ಬಿಜ್ಜಳನು ಅನ್ಯಾಯವನ್ನು ಮಾಡಿದನೆಂದು ಎಲ್ಲರೂ ತಳಮಳಿಸಿದರು.

ಬಿಜ್ಜಳನ ಈ ತೀರ್ಪು ಮುಂದೆ ಅವನ ವಂಶದವರ ನಾಶಕ್ಕೆಯೇ ಕಾರಣವಾಯಿತೆಂದು ಇತಿಹಾಸವು ಹೇಳುತ್ತಿದೆ. ಆದರೆ ಇದರಿಂದ ಕರ್ನಾಟಕ ಸಮ್ರಾಜಗಳಲ್ಲಿ ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯುಂಟಾಯಿತು.

ಎಳಹೂಟೆಯಿಂದ ಕೊಲ್ಲಿಸುವದು ಅತ್ಯಂತ ಕ್ರೂರ ಶಿಕ್ಷೆಯಾಗಿದೆ. ಇದರಲ್ಲಿ ಎರಡು ಪುಷ್ಟವಾದ ಹೋರಿಗಳನ್ನು ನೊಗಕ್ಕೆ ಹೂಡಿ ಅದಕ್ಕೆ ಅಪರಾಧಿಯನ್ನು ಹಗ್ಗದಿಂದ ಕಟ್ಟಿ ಆ ಹೋರಿಗಳನ್ನು ಬಹು ತ್ವರಿತವಾಗಿ ಓಡಿಸುತ್ತಾರೆ. ಇದರಿಂದ ಅಪರಾಧಿಯ ಶರೀರವು ತಗ್ಗು ಮಿಟ್ಟಿಗಳಿಗೆ ತಾಕಿ ನುಗ್ಗುನುಗ್ಗಾಗಿ ಗಾಯಗೊಂಡು ಅಪಾಯವನ್ನು ಹೊಂದುವದು. ಮತ್ತು ಇದರಿಂದ ಅವನು ಸತ್ತುಹೋಗುವನು. ಆನೆಯ ಕಾಲಿನಿಂದ ಕೊಲ್ಲಿಸುವದಕ್ಕಿಂತಲೂ ಇದು ಬಹು ಕ್ರೂರವಾದ ಶಿಕ್ಷೆಯು. ಬಿಜ್ಜಳನು ಈ ಶಿಕ್ಷೆಯನ್ನು ವಿಧಿಸಿದಕೂಡಲೆ, ಸೇವಕರು ಹರಳಯ್ಯ ಮಧುವಯ್ಯ

ಗಳನ್ನು ಹಿಡಿತಂದು ಉಭಯ.ತರನ್ನು ನೊಗಕ್ಕೆ ಕಟ್ಟಿ ಪುಷ್ಟವಾದ ಎರಡು ಹೋರಿಗಳನ್ನು ಹೂಡಿ ಓಡಿಸಿದರು. ಆದರೆ ಅವು ಓಡುತ್ತಿರುವಾಗ್ಗೆ ಈ ಉಭಯ ಶಿವಶರಣರ ಶರೀರಗಳು ಅಂತರಿಕ್ಷದಲ್ಲಿ ಹಾರಾಡುತ್ತ ಹೋದವೇ ಹೊರ್ತು ಅವು ನೆಲಕ್ಕೆ ಹತ್ತಲಿಲ್ಲ. ಇಷ್ಟು ತ್ವರಿತ ಗತಿಯಿಂದ ಆ ಹೋರಿಗಳು ಓಡಿದವು. ಇದರಿಂದ ಅವರ ಶರೀರಕ್ಕೆ ಎಷ್ಟುಮಾತ್ರವೂ ಅಪಾಯವಾಗಲಿಲ್ಲ. ಅವರು ಜೀವಂತ ಸುರಕ್ಷಿತವಾಗಿ ಉಳಿದರು. ಆಗ ಬಿಜ್ಜಳನು ಸೇವಕರಿಗೆ ನೀವು ಈ ಗೂಳಿಗಳಿಗೆ ಸರಿಯಾಗಿ ಓಡಲಿಕ್ಕೆ ಕಲಿಸಿಲ್ಲ. ಇವುಗಳನ್ನು ಬಿಟ್ಟು ಎಳಹೂಟೆಯು ಬೇರೆ ಎರಡು ಹೋರಿಗಳನ್ನು ತಂದು ಹೂಡಿರೆಂದು ಆಜ್ಞೆಮಾಡಿದನು. ಆ ಪ್ರಕಾರ ಹೊಸಲಾಗಿ ಅವೂ ಕೂಡ ಮೊದಲಿನ ಹೋರಿಗಳಂತೆಯೇ ತ್ವರಿತವಾಗಿ ಓಡಿದ್ದರಿಂದ ಶಿವಶರಣರ ಶರೀರಗಳಿಗೆ ಎಷ್ಟು ಮಾತ್ರವೂ ಗಾಯವಾಗಲಿಲ್ಲ. ಆಗ ಬಿಜ್ಜಳನು ಶಿವಶರಣರು ಮೋಸಗಾರರು. ಆದ್ದರಿಂದ ಇವರ ಕಣ್ಣು ಕೀಳಿಸಿರೆಂದು ಆಜ್ಞೆ ಮಾಡಿದನು.

ಆಗ ಅವನ ಸೇವಕರು ಉಭಯುತರನ್ನು ಎಳಹೂಟೆಯಿಂದ ಕೆಳಗಿಳಿಸಿ ಅವರ ಕಣ್ಣುಗಳನ್ನು ಆಯುಧಗಳಿಂದ ಕಿತ್ತಿ ತೆಗೆದರು. ಆಗ ಅಲ್ಲಿ ಬಸವೇಶ್ವರ, ಮಡಿವಾಳ ಮಾಚಿದೇವ ಮೊದಲಾದ ಶಿವಶರಣರು ಪ್ರತ್ಯಕ್ಷವಾಗಿ ನಿಂತಿದ್ದರು. ಕಣ್ಣುಗಳನ್ನು ಕೀಳಲು ಶರಣರ ಆಶೀರ್ವಾದ ಬಲದಿಂದ ಆ ಉಭಯುತರ ಕಣ್ಣುಗಳು ತಿರುಗಿ ಬಂದವು. ಮತ್ತು ಅವರು ಮೊದಲಿನಂತೆಯೇ ಆದರು. ಅದನ್ನು ನೋಡಿ ಬಿಜ್ಜಳನು ಮತ್ತಿಷ್ಟು ಕ್ರೋಧಾವಿಷ್ಟನಾಗಿ ಇವೆಲ್ಲ ಈ ಶಿವಶರಣರ ಕಪಟೋಪಾಯಗಳು. ಆದ್ದರಿಂದ ಇನ್ನು ಮೇಲೆ ಈ ಉಭಯುತರನ್ನು ಶೂಲಕ್ಕೇರಿಸಿರೆಂದು ಆಜ್ಞಾಪಿಸಿದನು.

ಈ ಪ್ರಕಾರ ಬಿಜ್ಜಳನು ನಿರಪರಾಧಿಗಳಾದ ಶಿವಶರಣರಿಗೆ ಅನೇಕ ತರದಿಂದ ಪೀಡೆಗಳನ್ನು ಕೊಡುತ್ತಿರಲಾಗಿ ಇದರ ಅರಿವು ಪರಮಾತ್ಮನಿಗೆ ಉಂಟಾಯಿತು. ಆಗ ಆಕಾಶದಲ್ಲಿ ಪುಷ್ಪಕ ವಿಮಾನವೊಂದು ಬಂದು ಅದರಲ್ಲಿ ಶಿವಗಣಂಗಳು ಹರಳಯ್ಯ ಮಧುವಯ್ಯಗಳನ್ನು ಎತ್ತಿ ತೆಗೆದುಕೊಂಡು ಶಿವನ ಸಭೆಯಲ್ಲಿ ಶಿವನ ಮತ್ತು ಶಿವಗಣಂಗಳ ನೆರೆಯಲ್ಲಿ ಇರಿಸಿದರು. ಆಗ ಈ ಘೋರ ಪೀಡೆಯನ್ನು ನೋಡುತ್ತ ನಿಂತಿದ್ದ ಪಟ್ಟಣ

ದಲ್ಲಿಯು ಲಕ್ಷಾವಧಿ ಜನರು ಇದನ್ನು ನೋಡಿ ದುಃಖಿತರಾದರು, ತಳಮಳಿಸಿದರು ಮತ್ತು ಈ ಶರಣರನ್ನು ಕೊಂಡಾಡುತ್ತಲೇ ಹೋದರು.

ಈ ಪ್ರಕಾರ ಶಿವಶರಣರ ಚರಿತ್ರೆಗಳಲ್ಲಿ ಹರಳಯ್ಯ ಮಧುವಯ್ಯಗಳು ವಿಮಾನದಿಂದ ಕೈಲಾಸಕ್ಕೆ ಹೋದರೆಂಬ ವರ್ಣನೆಗಳಿವೆ. ಆದರೆ ಅವರ ಬಗ್ಗೆ ಜನತೆಯಲ್ಲಿ ಆದರ ಭಾವವು ಕಡಿಮೆಯಾಗಬಾರದೆಂದು ಕೈಲಾಸಕ್ಕೆ ಶರೀರ ಸಹಿತ ಹೋದರೆಂಬ ಪವಾಡವನ್ನು ಗ್ರಂಥಗಳಲ್ಲಿ ವರ್ಣಿಸಿದ ಹಾಗೆ ನಮಗೆ ತೋರುತ್ತದೆ. ಆದರೆ ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಿ ನೋಡಲಾಗಿ ಬಿಜ್ಜಳನು ಈ ಉಭಯ ಶಿವಶರಣರಿಗೆ ಬಹಳ ಹಿಂಸೆಯನ್ನು ಕೊಟ್ಟು ಅವರನ್ನು ಕೊಲ್ಲಿಸಿದನೆಂದು ಊಹಿಸಲು ಅವಕಾಶವಿದೆ. ಈ ಕಾರಣದಿಂದ ಬಿಜ್ಜಳನು ಮುಂದೆ ಶಿವಶರಣರಿಂದ ವಧಿಸಲ್ಪಟ್ಟನು ಮತ್ತು ರಾಜ್ಯದಲ್ಲಿ ಮಹತ್ತರವಾದ ಒಂದು ರಾಜ್ಯಕ್ರಾಂತಿಯುಂಟಾಯಿತು.

## ಬಸವೇಶ್ವರನು ಕಪ್ಪಡಿಸಂಗಮಕ್ಕೆ ಹೋದದ್ದು.

ಹೀಗೆ ಬಿಜ್ಜಳನು ಹರಳಯ್ಯ ಮಧುವರಸರನ್ನು ಪೀಡಿಸಿ ಕೊಂದು ಹಾಕಿದ್ದನ್ನು ಬಸವೇಶ್ವರನು ಕಣ್ಣಾರೆ ಕಂಡು ಕೋಮಲಹೃದಯವಾದ ಅವನಿಗೆ ಅತ್ಯಂತ ವ್ಯಸನವಾಯಿತು. ತಾಪದಿಂದ ಉಮ್ಮಳಿಸಿದನು. ಹೀಗೆ ಅನ್ಯಾಯವಾಗಿ ಶರಣರನ್ನು ಘಾತಿಸಿದ್ದಕ್ಕಾಗಿ ತಳಮಳಿಸಿದನು. ಆಗ ಅವನಲ್ಲಿ ಇನ್ನುಮೇಲೆ ಇಂಥ ಪಟ್ಟಣದಲ್ಲಿರಬಾರದೆಂಬ ಮನಸ್ಸಾಯಿತು. ಇದು ಸ್ವಾಭಾವಿಕವಾಗಿದೆ. ಅವನು ಕೂಡಲಸಂಗಮನಾಥನಿಗೋಸ್ಕರ ಬಾಲ್ಯದಿಂದ ಭಕ್ತಿಯನ್ನು ತಾಳಿದವನು. ಆದ್ದರಿಂದ ಅವನಲ್ಲಿಗೆ ಹೋಗಿ ಅವನಲ್ಲಿ ಐಕ್ಯವನ್ನು ಹೊಂದಬೇಕೆಂಬ ಅಪೇಕ್ಷೆಯುಂಟಾಯಿತು. ಕೂಡಲೆ ಅವನು ಕಲ್ಯಾಣವನ್ನು ಬಿಡಲು ನಿರ್ಧರಿಸಿದನು.

ಅವನು ಕಲ್ಯಾಣವನ್ನು ಬಿಡುವ ಮುಂದೆ ಅನೇಕ ಉತ್ಪಾತಗಳಾದವು. ರಾಜನ ಆನೆ ಕುದುರೆಗಳು ಪರಸ್ಪರ ಹೋರಾಟವಾಡಿದವು. ಹೋರಾಡಿ ಮರಣಹೊಂದಿದವು. ಪಟ್ಟಣಿಗರಲ್ಲಿ ಹೊಡೆದಾಟಗಳು ಪ್ರಾರಂಭವಾದವು. ಕೊಲೆಸುಲಿಗೆಗಳು ನಡೆದವು. ಬಿರುಗಾಳಿ ಬೀಸಿತು. ಗೂಬೆಗಳು ಘೂತ್ಕರಿಸಿದವು. ಹೀಗೆ ನಿಸರ್ಗವು ರೌದ್ರಸ್ವರೂಪವನ್ನು ತಾಳಿತು.

ಶಿವಶರಣರನ್ನು ಘಾತಿಸಿದ್ದರಿಂದ ಇಂಥ ಉತ್ಪಾತಗಳಾದವೆಂದು ಜನರು ತಿಳಿದರು. ಪಟ್ಟಣವನ್ನು ಬಿಡುವಾಗ್ಗೆ ಬಸವೇಶ್ವರನು ನಿರಪರಾಧಿಗಳನ್ನು ಕೊಂದುಹಾಕಿದ ಬಿಜ್ಜಳನ ವಂಶವು ಹಾಳಾಗಲಿ ಕಲ್ಯಾಣವು ನಾಶವಾಗಲಿ ಎಂದು ಶಪಿಸಿ ಪಟ್ಟಣವನ್ನು ಬಿಡಲು ಉದ್ಯುಕ್ತನಾದನು.

ಆಗ ಅಸಂಖ್ಯ ಶಿವಶರಣರು ಅವನೊಂದಿಗೆ ಪಟ್ಟಣವನ್ನು ಬಿಟ್ಟು ಹೋದರು. ಅವನೊಂದಿಗೆ ಅವರು ಪಯಣಮಾಡುತ್ತ ಕೂಡಲಸಂಗಮೇಶ್ವರನಲ್ಲಿಗೆ ಬಂದರು. ಬಸವೇಶ್ವರನು ಪಟ್ಟಣವನ್ನು ಬಿಡುವ ಮುಂಚೆ ಶಿವಾನುಭವಮಂಟಪದಲ್ಲಿ ಶಿವಶರಣರನ್ನೆಲ್ಲ ನೆರಿಸಿ ಅವರಿಗೆ— ನಾನು ಕೂಡಲ ಸಂಗಮನಿದ್ದಲ್ಲಿಗೆ ಹೋಗುವೆನು. ನೀವೆಲ್ಲರೂ ಕಲ್ಯಾಣದಲ್ಲಿಯೇ ಇರಬೇಕು. ನನ್ನ ಸ್ಥಾನದಲ್ಲಿ ಚನ್ನಬಸವೇಶ್ವರನನ್ನು ನೇಮಿಸಿದ್ದೇನೆ. ಆತನ ಮಾತನ್ನು ನೀವು ಕೇಳಬೇಕು. ಅವನು ಜ್ಞಾನಿಯು, ಎಂದು ಹೇಳಿ ಚನ್ನಬಸವೇಶ್ವರನಿಗೆ— ನೀನು ಮಡಿವಾಳಮಾಚಿದೇವನ ಸಲಹೆಯಂತೆ ನಡಿಯಬೇಕು. ನಿನ್ನ ಮಾತೆಯಾದ ನಾಗಲಾಂಬಿಕೆಯು ಇಲ್ಲಿಯೇ ಇರುವಳು. ಅವಳ ಮಾತನ್ನು ಮೀರದಿರು ಎಂದು ಹೇಳಿದನು. ಮತ್ತು ಶಿವಶರಣರೆಲ್ಲರಿಗೆ ಉದ್ದೇಶಿಸಿ ನುಡಿದುವೇನೆಂದರೆ— ಶಿವಶರಣರನ್ನು ಬಿಜ್ಜಳನು ಅನ್ಯಾಯವಾಗಿ ಕೊಲ್ಲಿಸಿದ್ದಾನೆ. ಇದಕ್ಕೆ ತಕ್ಕ ಶಾಸನವನ್ನು ಅವನಿಗೆ ನೀವು ಮಾಡಬೇಕೆಂದು ಆಜ್ಞಾಪಿಸಿದನು. ಹೀಗೆ ಹೇಳಿ ಕೃಷ್ಣಾ ಮಲಾಪಹಾರೀ ನದಿಗಳ ಸಂಗಮ ಸ್ಥಳದಲ್ಲಿದ್ದ ಕಪ್ಪಡಿಸಂಗಮನಾಥನನ್ನು ಹಾರೈಸುತ್ತ ಪಟ್ಟಣವನ್ನು ಬಿಟ್ಟು ಹೊರಟನು.

ಆಗ ಅಸಂಖ್ಯಾತ ಜನರು ಅವನ ಬೆನ್ನುಹತ್ತಿದರು ಬಸವೇಶ್ವರನು ಕಪ್ಪಡಿಸಂಗಮಕ್ಕೆ ಹೋದಬಳಿಕ ಅವನು ಪರಮಾತ್ಮನನ್ನು ಕುರಿತು— ಪರಮಾತ್ಮನೇ, ಇನ್ನುಮೇಲೆ ನಾನು ಈ ಜಗದಲ್ಲಿರಲಾರೆನು. ವೀರಶೈವ ಮತವನ್ನು ಉದ್ಧರಿಸುವ ಕಾರ್ಯವು ನನ್ನಿಂದ ಆಗುವದು ಮುಗಿಯಿತು, ನಾನು ಏನೂ ಮಾಡಲಾರೆನು. ಇನ್ನುಮೇಲೆ ನನ್ನನ್ನು ಸ್ವೀಕರಿಸು ಎಂದು ಪ್ರಾರ್ಥಿಸಿದನು. ಆಗ ಸಂಗಮನಾಥ ಲಿಂಗದೊಳಗಿಂದ ಪರಮಾತ್ಮನು ತಲೆದೋರಿದನು ಮತ್ತು ಆ ರೂಪಿನಲ್ಲಿಯೇ ಬಸವೇಶ್ವರನು ಲಯವಾದನು.

---

## ಜಗದೇವ ಮಲ್ಲಿ ಬೊಮ್ಮಣ್ಣಗಳು

ಹರಳಯ್ಯ ಮಧುವಯ್ಯಗಳನ್ನು ಎಳಹೂಟೆಯಿಂದ ಬಿಜ್ಜಳನು ಎಳಿಸುತ್ತಿರುವಾಗ ಅಸಂಖ್ಯ ಜನರು ಅಲ್ಲಿ ನಿಂತು ನೋಡುತ್ತಾ ಇದ್ದರು. ಅವ

ರಲ್ಲಿ ಜಗದೇವ ಮತ್ತು ಮಲ್ಲಿಬೊಮ್ಮಣ್ಣಗಳೆಂಬ ಈರ್ವರು ಸಹೋದರರು ಇದ್ದರು. ಎಳಹೂಟೆಯು ಮುಗಿದ ಬಳಿಕ ಈ ಉಭಯತರು ತಮ್ಮ ಮನೆಗೆ ಬರಲು, ಇಷ್ಟು ತಡವೇಕೆಂದು ಅವರ ತಾಯಿಯಾದ ಸೋಮವ್ವೆಯು ಅವರನ್ನು ಕೇಳಲು ಅವರು ಬಿಜ್ಜಳನು ಕಡುಪಾತಕನು, ಅವನು ಇಬ್ಬರನ್ನು ಎಳೆಹೂಟೆಯಲ್ಲಿ ಎಳಿಸಿದ್ದನ್ನು ನಾವು ನೋಡಿದೆವು, ಎಂದು ಅಂದರು. ಆಗ ಸೋಮವ್ವೆಯು ಅವರು ಭಕ್ತರೋ ಭವಿಗಳೋ ಎಂದು ಕೇಳಲಾಗಿ ಅವರು—ಆ ಉಭಯತರು, ಬಸವೇಶ್ವರನ ಮೋಹದ ಸತ್ಯ ಶರಣರು ಎಂದು ನಡೆದು ಆದ ಸಂಗತಿಗಳನ್ನೆಲ್ಲ ಸವಿಸ್ತಾರವಾಗಿ ಹೇಳಿದರು. ಆಗ ಸೋಮವ್ವೆಯು ಸಿಟ್ಟಿನಿಂದ ಅಬ್ಬರಿಸುತ್ತ—ಹರಹರಾ, ಇಂದು ನಾನು ಭಕ್ತ ದ್ರೋಹವನ್ನು ಕೇಳಿದೆನು. ನೀವು ಉಭಯತರು ಸಮರ್ಥರು, ಬಲಾಢ್ಯರು. ನೀವು ಹೀಗೆ ಸುಮ್ಮನೆ ಅವರನ್ನು ಹಿಂಸಿಸಿದ್ದನ್ನು ನೋಡುತ್ತ ನಿಂತಿರಾ? ಭಕ್ತರನ್ನು ನೋಯಿಸಿದ ಬಿಜ್ಜಳನನ್ನು ನೀವು ಕೊಲ್ಲುವವರೆಗೆ ನಾನು ನಿಮ್ಮ ಅನ್ನವನ್ನು ನೆಲದಮೇಲೆ ಚೆಲ್ಲುವೆನು. ಅಲ್ಲಿಂದಲೇ ನೀವು ಅದನ್ನು ನಾಯಿಗಳಂತೆ ತಿನ್ನಿರಿ ಎಂದು ನುಡಿದಳು. ಆಗ ಅವರೀರ್ವರು—ನಮ್ಮ ತಾಯಿಯು ನಮಗೆ ಲೇಸಾದ ವ್ರತವನ್ನು ಹಾಕಿಕೊಟ್ಟಳು. ಬಿಜ್ಜಳನನ್ನು ಕೊಂದುಹಾಕುವವರೆಗೆ ನಾವು ಹೀಗೆಯೇ ಉಣ್ಣುವೆವು ಎಂದು ಪ್ರತಿಜ್ಞೆಮಾಡಿದರು. ಮುಂದೆ ಅವರು ಕಡೆವರೆಗೂ ಅದರಂತೆಯೇ ನಡೆದರು.

## ಶಿವಶರಣರಲ್ಲಿ ಜಾತಿಭೇದವಿರಲಿಲ್ಲ.

ಈ ವರೆಗೆ ನಡೆದ ಸಂಗತಿಗಳನ್ನು ಲಕ್ಷಿಸಿದಲ್ಲಿ ಬಸವೇಶ್ವರನ ಕಾಲದಲ್ಲಿ ಸ್ಪೃಶ್ಯಾಸ್ಪೃಶ್ಯತೆಯೂ ಜಾತಿವಿಷಯಕ ಭೇದಭಾವಗಳೂ ಸಂಪೂರ್ಣವಾಗಿ ನಿಂತುಹೋಗಿದ್ದವೆಂದು ಕಂಡುಬರುತ್ತದೆ. ಜಗದೇವಮಲ್ಲಿಬೊಮ್ಮಣ್ಣಗಳ ತಾಯಿಯ ವರ್ತನೆಯನ್ನು ನೋಡಿದಲ್ಲಿ ಈ ಸ್ಥಿತಿಯು ಸ್ತ್ರೀಯರಲ್ಲಿಯೂ ಕೂಡ ಉಂಟಾಗಿದ್ದದ್ದು ತಿಳಿದುಬರುತ್ತದೆ. ಅಷ್ಟಾವರಣಗಳ ಆಚರಣೆಗಳು, ಶಿವಾನುಭವವು, ರೂಢವಾದಲ್ಲಿ ಇಂಥ ಭೇದಾಭೇದಗಳು ತಾವಾಗಿಯೇ ಅಳಿದುಹೋಗುತ್ತವೆ. ಗುರುಲಿಂಗಜಂಗಮಗಳ ತಿಳಿವಳಿಕೆ, ಮಂತ್ರ ಮತ್ತು ಪಾದೋದಕ ಪ್ರಸಾದಗಳ ಜ್ಞಾನವಿದ್ದಲ್ಲಿ ಜಾತಿಭೇದವು ಉಳಿಯಲಾರದು. ಈ ರೀತಿಯ ಉಚ್ಚ ಧಾರ್ಮಿಕ ವಾತಾವರ

ಣವು ಬಸವೇಶ್ವರನ ಕಾಲದಲ್ಲಿ ಶಿವಶರಣರಲ್ಲಿ ಉಂಟಾಗಿತ್ತೆಂದು ಕಂಡು ಬರುತ್ತದೆ. ಇದರಿಂದ ಇವನು ಬ್ರಾಹ್ಮಣ, ಇವನು ಹೊಲೆಯನು, ಎಂಬ ಭೇದವು ಆಗ ಉಳಿದಿದ್ದಿಲ್ಲ. ಇವಳು ಸ್ತ್ರೀಯಳು, ಇವನು ಪುರುಷನು, ಇಕೆಯು ಕಡಿಮೆ, ಇವನು ಹೆಚ್ಚು, ಎಂಬ ವಿಚಾರಗಳು ಇರಲಿಲ್ಲ. ಮಹಾದೇವಿಯಕ್ಕ, ಬೊಂತಾದೇವಿ, ನೀಲಮ್ಮ ಇವರ ಚರಿತ್ರೆಗಳಿಂದ ಇದು ಕಂಡುಬರುತ್ತದೆ. ಮಧುವರಸ ಹರಳಯ್ಯಗಳಲ್ಲಿ ಅಂತರ್ಜಾತೀಯ ಲಗ್ನ ವಾದರೂ ಶಿವಶರಣರಾರೂ ಅದನ್ನು ಆಕ್ಷೇಪಿಸಲಿಲ್ಲ. ಬಿಜ್ಜಳರಾಜನು ಇದರ ಸಲುವಾಗಿ ಅವರನ್ನು ಘೋರವಾಗಿ ಶಿಕ್ಷಿಸಿದನು. ಆದರೆ ಶರಣ ರೆಲ್ಲರೂ ತಮ್ಮ ಜೀವದ ಹಂಗುದೊರೆದು ಅವರಿಗೋಸ್ಕರ ಕಾದಾಡಲು ಸಿದ್ಧರಾದರು. ಎಳಹೂಟೆಯನ್ನು ಸುಮ್ಮನೆ ನೋಡುತ್ತ ನಿಂತ ಜಗದೇವ ಮಲ್ಲಿ ಬೊಮ್ಮಣ್ಣಗಳ ತಾಯಿಯು ಅವರಿಗೆ ಊಟಕ್ಕೆ ಹಾಕಲಿಲ್ಲ. ಇಂಥ ಮಹತ್ತರವಾದ ಸಾಮಾಜಿಕ ಕ್ರಾಂತಿಯು ಶಿವಶರಣರ ಕಾಲದಲ್ಲಿ ಆದಂತೆ ನಮ್ಮ ದೇಶದಲ್ಲಿ ಬೇರೆ ಎಲ್ಲಿಯೂ ಆದದ್ದು ಕಂಡುಬರುವದಿಲ್ಲ. ಇದು ಶಿವ ಶರಣರು ಬೋಧಿಸಿದ ಶಿವಾನುಭವದ ಮತ್ತು ಅವರ ರಚಿಸಿದ ವಚನ ಶಾಸ್ತ್ರದ ಪರಿಣಾಮವಾಗಿದೆ.

---

## ಚನ್ನಬಸವನ ಆಧಿಪತ್ಯ.

ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದಬಳಿಕ ಅವನ ಸಲಹೆಯ ಪ್ರಕಾರ ಚನ್ನಬಸವೇಶ್ವರನು ಅವನ ಸ್ಥಾನವನ್ನು ಸ್ವೀಕರಿಸಿ ಕಾರ್ಯ ಮಾಡಹತ್ತಿದನು. ಆದರೆ ಶಿವಶರಣರ ಮನಸ್ಸಿನಲ್ಲಿ ಸಮಾಧಾನವಿರಲಿಲ್ಲ. ಬಿಜ್ಜಳರಾಜನ ವಿರುದ್ಧ ದ್ವೇಷವು ಅವರ ಮನಸ್ಸಿನಲ್ಲಿ ತಾಂಡವವಾಡುತ್ತಿತ್ತು. ಇದರಿಂದ ರಾಜನಿಗೆ ರಾಜ್ಯವನ್ನು ನಡಿಸುವದು ಕಠಿಣವಾಗಹತ್ತಿತು. ಆಗ ಬಿಜ್ಜಳನು ಮಡಿವಾಳಮಾಚಿದೇವ ಮತ್ತು ಚನ್ನಬಸವೇಶ್ವರರನ್ನು ಬರಮಾಡಿಕೊಂಡು ಬಸವೇಶ್ವರನ ತರುವಾಯ ಚನ್ನಬಸವೇಶ್ವರನು ಪ್ರಧಾನಿ ಪಟ್ಟವನ್ನು ಸ್ವೀಕರಿಸಿ ಆಡಳಿತೆಯನ್ನು ಸಾಗಿಸಲಿ ಎಂದು ಹೇಳಿದನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಬಿಜ್ಜಳನ ಅಂಕಿತದಲ್ಲಿ ರಲು ಯಾವ ಶಿವಶರಣನೂ ಬಯಸಲಿಲ್ಲ.

ಬಿಜ್ಜಳರಾಜನು ತನ್ನ ಅಳಿಯನನ್ನು ಈ ಕಾಲದಲ್ಲಿ ಬರಮಾಡಿ ಕೊಂಡು ಅವನಿಗೆ ದಂಡನಾಯಕನ ಸ್ಥಾನವನ್ನು ಕೊಟ್ಟನು. ಅವನು ಎರೆ

ಯಂಬರಗೆ (ಯಲಬುರ್ಗಿ) ಎಂಬಲ್ಲಿದ್ದ ಸಾಮಂತ ರಾಜನು. ಅವನಿಗೆ ತನ್ನ ಮಗಳು ಸಿರಿಯಾದೇವಿಯನ್ನು ಕೊಟ್ಟು ಲಗ್ನಮಾಡಿದ್ದನು. ಹೀಗೆ ರಾಜನು ತನ್ನ ಸೈನ್ಯವನ್ನು ಹೆಚ್ಚಿಸಹತ್ತಿದನು.

## ಯುದ್ಧ ಸಿದ್ಧತೆ.

ಇತ್ತ ಶಿವಶರಣರಾದರೂ ತಮ್ಮ ಸಿದ್ಧತೆಯನ್ನು ಮುಂದುವರಿಸುತ್ತ ಇದ್ದರು ಅವರ ಕಡೆಗೆ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ೭೭೦ ಅಮರ ಗಣಂಗಳು ಹೀಗೆ ಸುಮಾರು ೧೩ಸಾವಿರ ಜನರು ಚನ್ನ ಬಸವೇಶ್ವರನಿಗೆ ಸಹಾಯಕರಾಗಿ ನಿಂತರು. ಇಷ್ಟು ಜನರನ್ನು ಕೂಡಿಸಲು ಅವನಿಗೆ ಸಹಾಯಮಾಡಿದವರು ರೇವಣಸಿದ್ಧೇಶ್ವರನ ಮಗ ರುದ್ರಮುನಿದೇವ, ಮೋಳಿಗೆ ಮಾರಯ್ಯ. ಬಸವೇಶ್ವರನ ಅಕ್ಕನಾದ ಅಕ್ಕನಾಗಮ್ಮ, ಮಡಿವಾಳ ಮಾಚಿದೇವ, ಅವನ ಗುರುವಾದ ಮಲ್ಲಿಕಾರ್ಜುನ, ಸೊನ್ನಲಿಗೆಯ ಸಿದ್ಧರಾಮ ಇವರು ಮುಖ್ಯರಾಗಿದ್ದರು. ಇವರಿಂದ ಪ್ರೋತ್ಸಾಹಿತರಾಗಿ ಬಹು ಜನರು ಬಿಜ್ಜಳನ ದಂಡಾಳುಗಳಕೂಡ ಕಾದಾಡಲು ಸಿದ್ಧರಾದರು.

ಈ ಕಾಲದಲ್ಲಿ ಶಿವಶರಣರು ಬಹು ದೊಡ್ಡ ಪ್ರಮಾಣದಿಂದ ಅನ್ನ ಸಂಗ್ರಹ ಮಾಡತೊಡಗಿದರು. ಇದೇಕೆಂದು ಅವರಿಗೆ ಕೇಳಿದಲ್ಲಿ ಉಳವಿಯ ಮಹಾಮನೆಯಲ್ಲಿ ಒಂದು ಮಹತ್ತರವಾದ ಗಣಪರ್ವವನ್ನು ಮಾಡಬೇಕಾಗಿದೆ, ಅದಕ್ಕೋಸ್ಕರ ನಾನಾವಿಧ ಆಹಾರ ಪದಾರ್ಥಗಳನ್ನು ಸಂಗ್ರಹಿಸುತ್ತಲಿದ್ದೇವೆಂದು ಹೇಳುವರು. ಇದೇ ಕಾಲಕ್ಕೆ ಶಿವಶರಣರು ಯುದ್ಧವನ್ನು ಎಲ್ಲಿ ಮಾಡಬೇಕು, ಕಡೆಯ ರಕ್ಷಣ ಸ್ಥಳವಾವುದು, ಯಾವ ಯಾವ ಮಾರ್ಗಗಳ ಮೇಲಿಂದ ಹಾಯ್ದು ಉಳಿವಿಯ ಕಾಡು ಪ್ರದೇಶವನ್ನು ಪ್ರವೇಶಿಸಬೇಕು, ಇವೇ ಮೊದಲಾದ ವಿಷಯಗಳನ್ನು ನಿರ್ಧರಿಸಿದಂತೆ ತೋರುತ್ತದೆ. ಇದಕ್ಕೆ ಅವರಿಗೆ ೩—೩॥ ತಿಂಗಳು ಹಿಡಿಯಿತೆಂಬ ಉಲ್ಲೇಖಗಳು ಗ್ರಂಥಗಳಲ್ಲಿ ದೊರೆಯುತ್ತವೆ.

## ಬಿಜ್ಜಳನ ಕೊಲೆ

ಇಷ್ಟರಲ್ಲಿ ಬಹುಜನರು ಕಲ್ಯಾಣವನ್ನು ಬಿಟ್ಟು ಹೊರಗೆ ಪಯಣ ಮಾಡಿದ್ದರು. ಬಿಜ್ಜಳನ ದಂಡಾಳುಗಳು ಅವರಿಗೆ ತೊಂದರೆ ಮಾಡಬಹು

ದೆಂದು ಮಡಿವಳ ಮಾಚಿದೇವನಿಗೆ ತೋರಿತು. ಆಗ ಅವನು ಅವರನ್ನು ಆಂಜನೇಯ ಹೊಳೆಯವರೆಗೆ ಸಾಗಿಸಿ! ಹಿಂದಿರುಗಿ ಕಲ್ಯಾಣಕ್ಕೆ ಬಂದು ಚನ್ನ ಬಸವೇಶ್ವರನನ್ನು ಕೂಡಿಕೊಂಡನು. ಅಷ್ಟರಲ್ಲಿ ಚನ್ನಬಸವನು ಬಿಜ್ಜಳನ ವಧೆ ಮಾಡುವದನ್ನು ನಿಶ್ಚಯಿಸಿ ಅದಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡಿದ್ದನು. ಜಗದೇವ ಮೊಲ್ಲಿಬೊಮ್ಮಣ್ಣಗಳು ತಾವು ಮೊದಲು ಪಂಜುಗಾರರಾಗಿ ಬಿಜ್ಜಳನಲ್ಲಿ ಕೆಲವು ಕಾಲ ನೌಕರಿಯನ್ನು ಮಾಡುವೆವು, ಆಮೇಲೆ ಗೊತ್ತುಮಾಡಿದ ದಿವಸ ಹೆಗ್ಗಡತಿ ಹೊನ್ನಮ್ಮನ ಚಾವಡಿಯ ಇದಿರಿಗೆ ೨ ಸಾವಿರ ಸೈನಿಕರು ಪಹರೆ ಮಾಡುತ್ತಿದ್ದರೂ ಪಲ್ಲಕ್ಕಿಯಲ್ಲಿ ಬರುತ್ತಿದ್ದ ಬಿಜ್ಜಳನನ್ನು ಸಂಹರಿಸುವೆವೆಂದು ಗೊತ್ತುಮಾಡಿಕೊಂಡರು. ಮಡಿವಾಳ ಮಾಚಿದೇವನು ಅದಕ್ಕೆ ಒಪ್ಪಿ ಜಗದೇವ ಮಲ್ಲಿಬೊಮ್ಮಣ್ಣಗಳಿಗೆ— ಹೀಗೆ ನೀವು ಗುಪ್ತವಾಗಿ ಕಪಟತನದಿಂದ ಬಿಜ್ಜಳನನ್ನು ಕೊಲ್ಲದೆ ನೀವಾರೆಂಬುದನ್ನು ಉದ್ಘೋಷಿಸುತ್ತ ಅವನನ್ನು ಹೊಡೆದುಹಾಕಬೇಕೆಂದು ಹೇಳಿ, ಹಾಗೆ ಅವರಿಂದ ವಚನ ತೆಗೆದುಕೊಂಡನು.

## ಕಲ್ಯಾಣದಲ್ಲಿ ಹೋರಾಟಗಳು.

ಜಗದೇವ ಮಲ್ಲಿಬೊಮ್ಮಣ್ಣಗಳು ಪಂಜುಗಾರರಾಗಿ ಬಿಜ್ಜಳನನ್ನು ವಧಿಸಿದ ಸಂಗತಿಯನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಹೀ[illegible] ಅವರು ವಧಿಸಿದಕೂಡಲೆ ಅವರು ಸಮೀಪದಲ್ಲಿದ್ದ ತಮ್ಮ ಮನೆಗೆ ಹೋ[illegible] ತಮ್ಮ ತಾಯಿಗೆ ನಮಸ್ಕರಿಸಿ—ನಾವು ಬಿಜ್ಜಳನನ್ನು ಕೊಂದು ತಮ[illegible] ವ್ರತವನ್ನು ಪೂರೈಸಿದ್ದನ್ನು ತಿಳಿಸಿದರು. ಅವಳು ಅವರನ್ನು ಹರಿ[illegible] ತಿರುಗಿ ಕಳಿಸಿದಳು. ಅಷ್ಟರಲ್ಲಿ ಒಂದು ಪುಷ್ಪಕ ವಿಮಾನವು ಬಂದು ಆ ಉಭಯತರನ್ನೂ ಅವರ ತಾಯಿ ಸೋಮವ್ವೆಯನ್ನೂ ಎತ್ತಿಕೊಂಡ[illegible] ಕೈಲಾಸಕ್ಕೆ ಹೋಯಿತು. ಹೀಗಾಗುತ್ತಿರುವಲ್ಲಿ ಮಡಿವಾಳ ಮಾಚಿದೇವನ[illegible] ತನ್ನ ಸೈನಿಕರೊಂದಿಗೆ ಚಾವಡಿಗೆ ಬಂದು ಬಿಜ್ಜಳನ ೨ ಸಾವಿರ ಭಟರೊಂದಿ[illegible] ಕಾದಾಡಹತ್ತಿದನು. ಆಗ ಬಿಜ್ಜಳನ ದಂಡಾಳುಗಳು ಚನ್ನಬಸವಣ್ಣ[illegible] ಅರಮನೆಯನ್ನು ಮುತ್ತಿದ್ದರಿಂದ ಮಡಿವಾಳ ಮಾಚಿದೇವನು ಹಿಂದಿರು[illegible] ಬಂದು ಚನ್ನಬಸವೇಶ್ವರನಿಗೆ ಸಹಾಯಮಾಡಿದನು. ಆಗ ಬಿಜ್ಜಳ[illegible]ಸಿನಲ್ಲಿ ದಂಡು ಮುರಿದೋಡಿಹೋಯಿತು.

R N. B. 2554

# ಶಿವಾನುಭವ

ಸಂಪುಟ ೨೬ ]                                        [ ಸಂಚಿಕೆ. ೮

ಸಂಪಾದಕ

ಫ. ಗು. ಹಳಕಟ್ಟಿ,

ಬಿ.ಎ. ಎಲ್. ಎಲ್. ಬಿ.



ವಾ.ಚಂ. ೫-೧೨-೦ ]          ವಿಜಾಪುರ.          [ ಅಗಸ್ಟ ೧೯೫೨

# ವಿಷಯಾನುಕ್ರಮಣಿಕೆ.



---


ಶಿವಾನುಭವ ಮಾಸಪತ್ರಿಕೆ,

ವಿಜಾಪುರ.

ವಾರ್ಷಿಕ ಚಂದಾ ೫—೧೨—೦

# ಶಿವಾನುಭವ


| ವರ್ಷ ೨೬ | ಅಗಸ್ಟ ೧೯೫೨ | ಸಂಚಿಕೆ ೮ |
| --- | --- | --- |


## ವೀರಶೈವರ ಉದಾತ್ತ ಸಾಂಸ್ಕೃತಿಕ ಕೊಡುಗೆ.


( ಲೇಖಕರು :— ಶ್ರೀ. ಅನ್ನದಾನೀಶ್ವರ ವಿರಕ್ತಮಠ. )


ನಿಜಭಕ್ತಿಯ ಜೀರ್ಣೋದ್ಧಾರವು ಮಠಗಳ ಜೀರ್ಣೋದ್ಧಾರವೆಂದೂ, ಮಠಗಳಿಗೊಂದು ಸುಯೋಜಿತ ಕಾರ್ಯಕ್ರಮ ಬೇಕೆಂದೂ, ಆಯಾಯ ಮಠಗಳ ಶಿವಯೋಗಿಗಳ ಚರಿತ್ರೆ ಮತ್ತು ಚಿತ್ರಗಳನ್ನು ತಯಾರಿಸಿ ಪ್ರಚುರಪಡಿಸುವದು ಪ್ರಾಮುಖ್ಯವಾದ ಕಾರ್ಯಕ್ರಮವೆಂದೂ "**ಕರ್ನಾಟಕ ಬಂಧು**" ವಾರ ಪತ್ರಿಕೆಯಲ್ಲಿ ನಮ್ಮ ಒಂದನೇ ಲೇಖಾಂಕದಲ್ಲಿ ಸ್ಥೂಲವಾಗಿ ವಿವರಿಸಿದ್ದೇವೆ.

ಈ ಲೇಖಾಂಕದಲ್ಲಿ ನಮ್ಮ ಕವಿಗಳ, ಶರಣರ, ಶಿವಯೋಗಿಗಳ, ಮಹಾತ್ಮರ, ಕನ್ನಡ ಸಾಹಿತ್ಯದ ಉಜ್ವಲ ಸೇವಾ ಪರಂಪರೆಯ ಬಗ್ಗೆ ಸೂಚಿಸ ಬಯಸುತ್ತೇವೆ. ಅಪರ ಉದಾತ್ತ ಸಾಂಸ್ಕೃತಿಕ ಕೊಡುಗೆಯನ್ನು ಕುರಿತು ವೀರಶೈವರಿಗೆ ಮುಖ್ಯವಾಗಿ ನಮ್ಮ ಮಠಗಳ ಸ್ವಾಮಿಗಳಿಗೆ ಸ್ಫೂರ್ತಿಯುದಯವಾಗಿ ಕಾರ್ಯಪ್ರವೃತ್ತಿಯುಂಟಾಗಲೆಂದು ಬಯಸುತ್ತೇನೆ. ವೀರಶೈವ ಕವಿಗಳು ಜೈನ, ಬ್ರಾಹ್ಮಣ ಕವಿಗಳಿಗೆ ಕಡಿಮೆ ಇಲ್ಲದಷ್ಟು ಕನ್ನಡ ತಾಯಿಯ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಿರುತ್ತಾರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ವಚನ, ರಗಳೆ, ತ್ರಿಪದಿ, ಷಟ್ಪದಿ, ಸಾಂಗತ್ಯ ಮುಂತಾದ ರೂಪಗಳಲ್ಲಿ ವೀರಶೈವರು ಮಾಡಿರುವ ಕಾರ್ಯವು ಅಮೋಘವಾಗಿದೆ. ಭಾರತೀಯ, ಅದೇಕೆ ? ಜಾಗತಿಕ ಸಾಹಿತ್ಯದಲ್ಲಿ-ಆ ಸಾಹಿತ್ಯಾಕಾಶದಲ್ಲಿ-ವೀರಶೈವ

ತಾಯಿಯವರು ಬಹು ಸಂಖ್ಯಾತರಾಗಿದ್ದು ಜಾಜ್ವ ಮಾನವಾದ ನಕ್ಷತ್ರಗ ಳಂತೆ ಮಿನಗುತ್ತಿದ್ದಾರೆಂಬುದು ಹೆಮ್ಮೆಯ ವಿಷಯವಾಗಿದೆ.

## ವಚನ ಸಾಹಿತ್ಯ ಮತ್ತು ಸಂಸ್ಕೃತಿ

ವಿಶ್ವಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆಯಲರ್ಹವಾದ ವಚನ ಸಾಹಿತ್ಯವು ಭಾರತೀಯರಿಗೆ ಪ್ರಾಮುಖ್ಯವಾಗಿ ಕನ್ನಡಿಗರಿಗೆ ಜ್ಞಾನದನಿಧಿಯೂ, ಭಕ್ತಿಯಕಣಿಯೂ, ಭಾವದ ಜನ್ಮಭೂಮಿಯೂ, ಕ್ರಿಯೆ ಗಳ ವಿದ್ಯುದಾಗರವೂ, ಯೋಗದ ಹೃದಯವೂ, ಸ್ಫೂರ್ತಿಯ ಝರಿಯೂ, ಆನಂದದ ಬುಗ್ಗೆಯೂ, ಲೌಕಿಕ ಪಾರಮಾರ್ಥಿಕ ಸುಂದರ ಸಾಮರಸ್ಯದ ಸೂತ್ರವೂ, ಆಗಿ ನಿರಂತರ ಶೋಭಿಸುತ್ತಿದ್ದು ವಿಶ್ವೈಕ್ಯ, ವಿಶ್ವ ಕಲ್ಯಾಣಗ ಳಿಗೆ ಶಾಶ್ವತ ಪ್ರೇರಕಶಕ್ತಿಯಾಗಿದೆಯೆಂಬ ವಿಚಾರವು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿದೆ. ತೇಜಸ್ವಿಯಾದ, ಶಕ್ತಿಶಾಲಿಯಾದ, ಸುಂದರವಾದ, ಮಧುರ ವಾದ, ಸ್ವಯಂ ಪ್ರಕಾಶಮಯವಾದ, ಸ್ಫೂರ್ತಿಯ ಆನಂದ ರಸದಿಂದ ಸೂಸುತ್ತಿರುವ ಗದ್ಯ ಕಾವ್ಯಗಳಾಗಿರುವ ಕನ್ನಡ ವಚನಗಳ ರೂಪದಲ್ಲಿ ಶಿವ ಶರಣರು, ಶಿವಶರಣೆಯರು, ಶಿವಯೋಗಿಗಳು, ಮಹಾತ್ಮರು ಹೊಸದೊಂದು ಪದ್ಧತಿಯ ಶೈಲಿಯ, ರುಚಿಯ, ಶಕ್ತಿಯ, ಸಂಸ್ಕೃತಿಯ, ಕನ್ನಡ ಸಾಹಿತ್ಯ ವನ್ನು ನಿರ್ಮಾಣಮಾಡಿ ಭಾಷಾಜನಕರೆಂಬ ಕೀರ್ತಿಯನ್ನು ಪಡೆದಿರುವ ಸಂಗ- ತಿಯು ಎಲ್ಲ ಕನ್ನಡಿಗರಿಗೆ ಸದಭಿಮಾನಕ್ಕೆ ಯೋಗ್ಯವಾದ ವಿಚಾರವಾಗಿದೆ. ಧಾರ್ಮಿಕ, ನೈತಿಕ, ತಾತ್ವಿಕ' ಸಾಮಾಜಿಕ, ಬೌದ್ಧಿಕ, ಆಚಾರ, ವಿಚಾರ, ಉಚ್ಚಾರಗಳನ್ನು ಸುಲಭವಾಗಿ, ಸ್ಪಷ್ಟವಾಗಿ, ಹೃದಯ ಮಿಡಿಯುವಂತೆ, ಮನ ಕರಗುವಂತೆ, ಜ್ಞಾನ ಭಕ್ತಿಯ ಸೆಲೆಯೊಡೆಯುವಂತೆ, ಜನಸಾಮಾನ್ಯರಿಗೆ ತಿಳಿಸಿ-ವರ್ಗರಹಿತ, ವರ್ಣರಹಿತ, ಶೋಷಣರಹಿತ ಜಾತ್ಯಾತೀತ ಸುಂದರ ಸಮತೆಯ ಸರ್ವೋದಯ ಸಮಾಜವನ್ನು ಕಟ್ಟಲಿಕ್ಕೆ ಕನ್ನಡಿಗರಿಗೆ, ವೀರಶೈ ವರಿಗೆ, ಮುಖ್ಯವಾಗಿ ಧಾರ್ಮಿಕ ಮಠಗಳ ಒಡೆಯರಾಗಿರುವ ವಿರಕ್ತರಿಗೆ ಮತ್ತು ಪಟ್ಟಾಧ್ಯಕ್ಷರಿಗೆ ಕನ್ನಡ ವಚನ ಸಾಹಿತ್ಯದಂಥ ಮತ್ತೊಂದು ಸಾಹಿ ತ್ಯವು ಸಿಗಲಾರದು.

## ಶರಣರಿಗೆ ಸಲ್ಲಿಸಬೇಕಾದ ಸ್ವಾಮಿಗಳ ಕಾಣಿಕೆ

ಇಂಥ ಜ್ಞಾನದೀಪವನ್ನು ಕೈಯಲ್ಲಿಹಿಡಿದುಕೊಂಡು ಅಜ್ಞಾ ಸಮಾಜದ ಅಂಧ ತಮಸ್ಸನ್ನು ಅಡಗಿಸಲಿಕ್ಕೆ ನಮ್ಮ ವಿರಕ್ತ ಪಟ್ಟಾಧ್ಯಕ್ಷರು ಕನ್ನಡ

ನಾಡಿನಲ್ಲಿ ತಮ್ಮ ಮಠಗಳಿಂದ ಹೊರಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ವಿನೋಬಾ ಭಾವೆಯವರಂಥ ಸ್ವಾರ್ಥತ್ಯಾಗಿಗಳಾದ, ಕ್ರಿಯಾಯೋಗಿಗಳಾದ, ಸಂಘಟಿಕರು ಇಂದು ಕರ್ನಾಟಕಕ್ಕೆ ಬೇಕಾಗಿದ್ದಾರೆ. ವಿನೋಬಾ ಭಾವೆಯವರು ಭೂಧಾನ ಯಜ್ಞಕ್ಕೆ ಹೊರಟಿದ್ದಾರೆ. ನಮ್ಮ ವೀರಶೈವ ಸ್ವಾಮಿಗಳು ಸಮಾಜದಲ್ಲಿಯ ವರ್ಣಗಳ, ಜಾತಿ-ಕುಲಗೋತ್ರಗಳ, ಕೀಳು ಮೇಲುಗಳ, ಸ್ಪೃಶ್ಯಾಸ್ಪೃಶ್ಯತೆಯ ಭೀಕರ ಕರ್ಮದ ಕತ್ತಲೆಯು, ಜನ್ಮದಿಂದ, ಉದ್ಯೋಗದಿಂದ ಬಂದಿರುವ ಜಾತಿಯ ಹೇಯ ಕಲ್ಪನೆಯು, ವೀರಶೈವರಲ್ಲಿಯ ತಳಬುಡವಿಲ್ಲದ ಅಜ್ಞಾನಜನ್ಯ ಒಳಪಂಗಡಗಳ, ಸಹಭೋಜನ ಶರೀರ ಸಂಬಂಧಕ್ಕೆ ವಿರೋಧವಾಗಿರುವ ದುಷ್ಟ ಶಕ್ತಿಗಳ, ಭಕ್ತ ಭಕ್ತಭೇದ, ಭಕ್ತ-ಮಹೇಶ್ವರಭೇದ, ಗುರು-ವಿರಕ್ತಭೇದ, ವಿರಕ್ತ-ವಿರಕ್ತ ಸಮಯ ಭೇದ, ಇತ್ಯಾದಿಭೇದ ಭ್ರಾಂತಿಯು, ಹೋಳೀಮಾಡಿ ಶಿವನ-ಕಲ್ಯಾಣಶಕ್ತಿಯ-ಹಬ್ಬವನ್ನು ಮಾಡಲಿಕ್ಕೆ ಸಂಚಾರ ಮಾಡಬೇಕಾಗಿದೆ.

೧೨ ನೇ ಶತಮಾನದಲ್ಲಿ ಬಸವ, ಚನ್ನಬಸವ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ, ಸತ್ಯಕ್ಕ, ಕೇಶಿರಾಜ, ದೇವರ ದಾಸಿಮಯ್ಯ, ಸೊಡ್ಡಳ ಬಾಚರಸ, ಉರಿಲಿಂಗದೇವ ಮುಂತಾದ ಶರಣ-ಶರಣೆಯರು, ಶಿವಯೋಗಿಗಳು, ಮಹಾತ್ಮರು ೨೦ ನೇ ಶತಮಾನದವರಾದ ನಮ್ಮಿಂದ ಸಾಧ್ಯವಾಗದಂಥ ಶಾಂತ ಕ್ರಾಂತಿಯನ್ನು ಮಾಡಿ ಲಿಂಗೈಕ್ಯರಾಗಿದ್ದಾರೆ. ಬ್ರಾಹ್ಮಣನಾದ ಮಧುವಯ್ಯನ ಮಗಳನ್ನು ಅಸ್ಪೃಶ್ಯನಾದ ಹರಳಯ್ಯನ ಮಗನಿಗೆ ಕೊಡಿಸಿ ಅಭೂತ ಪೂರ್ವವಾದ ರೀತಿಯಲ್ಲಿ ವರ್ಣಜಾತಿಗಳ ಹುಟ್ಟನ್ನೇ ಅಡಗಿಸಲಿಕ್ಕೆ ತ್ರಿಕರಣ ಪೂರ್ವಕವಾಗಿ ಯತ್ನಿಸಿ-ಹೋಗಿರುತ್ತಾರೆ. ಅವರು ಬಿಟ್ಟು ಹೋಗಿರುವ ಮಹಾಕಾರ್ಯವನ್ನು ನಮ್ಮ ಸ್ವಾಮಿಗಳು ಮುಂದುವರಿಸುವದು ಶರಣರಿಗೆ ಸಲ್ಲಿಸತಕ್ಕ ಅವರ ಕಾಣಿಕೆಯೆಂದೇ ಹೇಳಬೇಕು. ಬಸವಣ್ಣನು ಒಳಗೂ ಹೊರಗೂ ಶೂನ್ಯಸಿಂಹಾಸನವನ್ನು ಸ್ಥಾಪಿಸಿ ಪ್ರಭುದೇವರ ಅಧ್ಯಕ್ಷತೆಯಲ್ಲಿ, ಅವರ ಸಾಕ್ಷಿಯಾಗಿ, ಸಮಾಜಕಾರ್ಯವನ್ನು ಮಾಡಿದಂತೆ, ನಮ್ಮ ವಿರಕ್ತ ಸ್ವಾಮಿಗಳು ವೀರಶೈವರ ಒಳಗೂ ಅಂದರೆ ಹೃದಯದಲ್ಲಿ, ಹೊರಗೂ ಅಂದರೆ ವೀರಶೈವ ಸಮಾಜದಲ್ಲಿ ಪ್ರಭುದೇವರ ಜ್ಞಾನಭಕ್ತಿಯ ವಿಚಾರಗಳನ್ನು ಸ್ಥಾಪಿಸಿ,-ಜ್ಞಾನೋತ್ತರ ಭಕ್ತಿಯ ಬೆಳಕಿನಲ್ಲಿ ಸಮಾಜದ ಬಾಳನ್ನು ರೂಪಿಸಬೇಕಾಗಿದೆ. ಅನುಭಾವ ಮಂಟಪದಲ್ಲಿ ವಿರಕ್ತ ಮಠಗಳ ಹುಟ್ಟು! ಅಂದರೆ ಭಕ್ತಿಜ್ಞಾನಗಳ ಅನುಭಾವದಲ್ಲಿ ಗಟ್ಟಿಗೊಂಡು ನೆಲೆ ನಿಂತ

ದ್ದೇ ವಿರತಿಯು. ಇಂಥ ವಿರತಿಯುಳ್ಳ ವಿರಕ್ತ ಸ್ವಾಮಿಗಳು ನಿಂತಸ್ಥಾನಗಳೇ ವಿರಕ್ತಮಠಗಳು. ಭಕ್ತಿಜ್ಞಾನಗಳ ಅನುಭಾವದ ತಳಹದಿಯ ಮೇಲೆ ನಿಂತ ವಿರತಿಯೇ ವಿರಕ್ತಮಠದ ಧ್ವಜಪತಾಕೆಯು!

## ಶಿವಯೋಗದ ಆದರ್ಶ

ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿದ ಶಿವಾನುಭಾವವು ಶಿವಯೋಗವು! ಇಂಥ ಶಿವಯೋಗ ಸಾಧನೆಯು ವಿರಕ್ತ ಜಂಗಮರ ಜೀವ ಜೀವಾಳವು. ಕಲ್ಯಾಣದ ಅನುಭಾವ ಮಂಟಪದ ವಾತಾವರಣವು ವಿರಕ್ತಮಠಗಳಲ್ಲಿ ತುಂಬಿದ ವಿನಃ ಶಿವಯೋಗಸಾಧನೆಯು ಸಾಧ್ಯವಿಲ್ಲ. ಶಿವಾನುಭಾವವಿಲ್ಲದ ವಿರಕ್ತರು ಜೀವನ್ಮುಕ್ತರಲ್ಲ. ಜೀವನ್ಮೃತರೇ ಸರಿ. ಇಂಥ ಜೀವನ್ಮೃತರಿಂದ ಸಮಾಜದಲ್ಲಿಯ ಕೊಳೆಯನ್ನು ಕಳೆದು ಲಿಂಗಕಳೆಯನ್ನು ತುಂಬುವದು ಸರ್ವಥಾ ಸಾಧ್ಯವಿಲ್ಲ. ಸಮಾಜದಲ್ಲಿ ಜ್ಞಾನ, ಚೈತನ್ಯ, ಪ್ರೇಮ, ಶಕ್ತಿಗಳನ್ನು ತುಂಬುವದು ಚಿತ್ಕಲಾಚೈತನ್ಯ ಮೂರುತಿಯಾದ ಕ್ರಿಯಾಮೂರ್ತಿಗಳಿಂದಲೇ ಸಾಧ್ಯ! ಇದುವೇ ಕ್ರಿಯಾಮೂರ್ತಿಗಳಾಗುವದರ ಗುಟ್ಟು! ಆದುದರಿಂದ ವಿರಕ್ತಸ್ವಾಮಿಗಳು ಸ್ವಯ, ಚರ, ಪರ ಎಂಬ ಜಂಗಮದ ಮೂರು ಅವಸ್ಥೆಗಳನ್ನು ಅನುಭವಿಸಲೇ ಬೇಕು. ಸ್ವಯ ಜಂಗಮನು ಶಿವಯೋಗಿಯ ಸೇವೆಮಾಡಿ ಆತನ ಕರುಣ ಪ್ರಸಾದವನ್ನು ಪಡೆಯಲೇಬೇಕು. ಶಿವಯೋಗಿಯ ಬೆಳಕಿನಾಶ್ರಯದಲ್ಲಿ ಮಠದ ವ್ಯವಸ್ಥೆಯಲ್ಲಿ ತ್ರಿಕರಣಪೂರ್ವಕವಾಗಿ ದುಡಿಯಬೇಕು. ಆ ಮೇಲೆ ವಿಶಾಲ ಜಗತ್ತಿನಲ್ಲಿ ಸಂಚರಿಸಿ ಸಮಾಜದ ಕೊಳೆಯನ್ನರಿತು ಕಳೆಯಲು ಯತ್ನಿಸಬೇಕು. ತನ್ನ ಸ್ವಾರ್ಥತ್ಯಾಗವನ್ನು ಅಂದರೆ ವೈರಾಗ್ಯವನ್ನು ಗಟ್ಟಿಗೊಳಿಸಬೇಕು. ಇದುವೇ ಚರ ಜಂಗಮದ ಸ್ಥಲ. ಐಕ್ಯಸ್ಥಲದ ಹೃದಯದ ಮಹಾಲಿಂಗಾನುಭಾವವು ಗಟ್ಟಿಗೊಂಡುದೇ ಶಿವಯೋಗವು. ಅಂತಪ್ಪ ಶಿವಯೋಗಿಯೇ ಪರ ಜಂಗಮನು. ಪರ ಜಂಗಮನಾದ ಶಿವಯೋಗಿಯಿಂದಲೇ ವಿರಕ್ತಮಠವು! ವಿರಕ್ತಮಠದ ನಿಜವಾದ ವ್ಯಕ್ತಿ-ಸಮಾಜದ ಕಲ್ಯಾಣ ಕಾರ್ಯಗಳು ಇಂತಪ್ಪ ಜಂಗಮನ, ವಿರತನ, ಶಿವಯೋಗಿಯ ದರ್ಶನ ಮಾತ್ರದಿಂದ ಸಾಧ್ಯವಾಗುತ್ತವೆ. ಈ ಮಾತಿಗೆ ಅಥಣಿ ಮಹಾಶಿವಯೋಗಿಗಳ ಪರಮ ಜೀವನ ಚರಿತೆಯೇ ದಿವ್ಯ ಸಾಕ್ಷಿ.

## ಮಠಗಳು ಜ್ಞಾನಭಾಂಡಾರಗಳಾಗಬೇಕು.

ನಮ್ಮ ವಿರಕ್ತಸ್ವಾಮಿಗಳು ವಚನ ಸಾಹಿತ್ಯದ ಎಲ್ಲ ಗ್ರಂಥಗಳನ್ನು ಮಠಗಳಲ್ಲಿ ಸಂಗ್ರಹಿಸಬೇಕು. ಆಚಾರ್ಯರ ವಚನಗ್ರಂಥಗಳನ್ನು ಕೂಡಿಸಿಡಬೇಕು.

ಮಠಗಳಲ್ಲಿದ್ದ ಅಚ್ಚಾಗದೇ ಇದ್ದ ತಾಡವೋಲೆಯ ಗ್ರಂಥಗಳನ್ನು ಅಚ್ಚು ಮಾಡಿಸಬೇಕು. ಸಂಚಾರದಲ್ಲಿ ತಾಳೀಗರಿಯ ಹಳೇವಚನ ಪುಸ್ತಕಗಳನ್ನು ಸಂಗ್ರಹಿಸಬೇಕು. ಕಲ್ಯಾಣ ಸೀಮೆಯಲ್ಲಿ ತಾಳೀಗರಿಯ ವಚನ ಗ್ರಂಥಗಳು ಹೆಚ್ಚಾಗಿ ಸಿಗುತ್ತವೆ. ಅವುಗಳ ಸಂಗ್ರಹ, ಸಂಶೋಧನೆಗಳು ನಡೆಯುವಂತೆ ವಿರಕ್ತಸ್ವಾಮಿಗಳು ಯತ್ನಿಸಬೇಕು. ಈಗ ಲಬ್ಧವಿದ್ದ ವಚನ ಸಾಹಿತ್ಯದ ಆಳವಾದ ಅಭ್ಯಾಸಮಾಡಿ ತತ್ವ ಪ್ರಸಾರ ಮಾಡಬೇಕು. ಈಗಿನ ಕಾಲದಲ್ಲಿ ತುಲನಾತ್ಮಕ ಅಭ್ಯಾಸದ ಮಹತ್ವವು ಬಹಳವಿರುವದರಿಂದ ಆ ಕಡೆಗೆ ವಿರಕ್ತ ಜಂಗಮ ಮೂರ್ತಿಗಳು ಲಕ್ಷಕೊಡಬೇಕು.

## ಉಜ್ವಲ ಸಾಹಿತ್ಯದ ಪರಂಪರೆ.

೧೨ ನೇ ಶತಮಾನದಲ್ಲಿ ವಚನ ಕಾರರಂತೆ ವೀರಶೈವ ಕವಿಗಳೂ ಮಹಾ ಕಾವ್ಯಗಳನ್ನು ಬರೆದಿರುವರು. ಹರೀಶ್ವರ ಕವಿಯು ಗಿರಿಜಾಕಲ್ಯಾಣ ಮತ್ತು ಉಳಿದ ಗ್ರಂಥಗಳನ್ನು ಬರೆದಿರುವನು. ರಾಘವಾಂಕನು ಹರಿಶ್ಚಂದ್ರ ಕಾವ್ಯ ಮತ್ತು ಉಳಿದ ಗ್ರಂಥಗಳನ್ನು ಷಟ್ಪದಿಯಲ್ಲಿ ಬರೆದಿರುವನು. ಕೆರೆಯ ಪದ್ಮರಸನು ದೀಕ್ಷಾಬೋಧೆಯನ್ನು ರಗಳೆಯ ಛಂದಸ್ಸಿನಲ್ಲಿ ಬರೆದಿರುವನು. ಪಾಲ್ಕುರಿಕೆ ಸೋಮನಾಥನು ಶೀಲಸಂಪಾದನೆ ಮತ್ತು ಇತರ ಗ್ರಂಥಗಳನ್ನು ಬರೆದಿರುವನು. ಈ ಕವಿಯು ತೆಲುಗು ಭಾಷೆಯಲ್ಲಿಯೂ ಗ್ರಂಥಗಳನ್ನು ಬರೆದಿರುವನು. ವೀರಶೈವರಿಗೆ ಮುಖ್ಯವಾಗಿ ಸ್ವಾಮಿಗಳಿಗೆ ತೆಲುಗು ಸಾಹಿತ್ಯದ ಅಭ್ಯಾಸಬೇಕೆಂಬುದು ಸಿದ್ಧವಾದ ಮಾತೇಸರಿ. ೧೩ ನೇ ಶತಮಾನದಲ್ಲಿ ಸೋಮರಾಜನು ಉದ್ಭಟ ಕಾವ್ಯವನ್ನು ಬರೆದಿರುವನು. ೧೪ ನೇ ಶತಮಾನ ದಲ್ಲಿ ಭೀಮಕವಿಯು ಬಸವ ಪುರಾಣವನ್ನು, ಪದ್ಮಣಾಂಕ ಕವಿಯು ಪದ್ಮರಾಜ ಪುರಾಣವನ್ನೂ ಬರೆದಿರುವರು. ೧೫ನೇ ಶತಮಾನದಲ್ಲಿ ದೇಪರಾಜನು ಪ್ರೇಮ ಗೀತೆಗಳನ್ನೂ, ಚಾಮರಸನು ಪ್ರಭುಲಿಂಗ ಲೀಲೆಯನ್ನೂ ಬರೆದಿರುವರು. ಗುರುಬಸವ ಕವಿಯು ಶಿವಯೋಗಾಂಗ ಭೂಷಣ ಮತ್ತು ಇತರ ಗ್ರಂಥಗಳನ್ನು ಬರೆದಿರುವನು. ಚಂದ್ರಕವಿಯು ವಿರುಪಾಕ್ಷಸ್ಥಾನವನ್ನೂ, ಬೊಮ್ಮರಸನು ಸೌಂದರ ಪುರಾಣವನ್ನೂ, ಕಲ್ಲರಸನು ಮದನ ತಿಲಕವನ್ನೂ ಬರೆದಿರುವರು. ನೀಲಕಂಠಾಚಾರ್ಯನು ಆರಾಧ್ಯ ಚರಿತ್ರೆಯನ್ನೂ ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರ ಪುರಾಣವನ್ನೂ ಬರೆದಿರುವನು. ಸಿಂಗಿರಾಜನು ಮಳೆ ಬಸವರಾಜ ಚರಿತ್ರೆಯನ್ನೂ ನಿಜಗುಣ ಶಿವಯೋಗಿಯು ಅನುಭವಸಾರ ಮತ್ತು ಇತರ ಗ್ರಂಥಗಳನ್ನು ಬರೆದಿರುವರು. ಸುರಂಗ ಕವಿಯು ತ್ರಿಷಷ್ಟಿ

ಪುರಾತನ ಚರಿತ್ರೆಯನ್ನು ಬರೆದಿರುವನು. ೬೩ ಪುರಾತನರು ತಮಿಳು ನಾಡಿನಲ್ಲಿ ಹೆಚ್ಚಾಗಿ ಪ್ರಕಾಶರಾಗಿರುವರು. ಭಕ್ತಿಯ ಲೀಲಾ ವಿಲಾಸವನ್ನು ಅಲ್ಲಿ ಕಾಣಬಹುದು. ವೀರಶೈವರಿಗೆ ಮುಖ್ಯವಾಗಿ ಮಠದ ಸ್ವಾಮಿಗಳಿಗೆ ತಮಿಳು ಸಾಹಿತ್ಯದ ಜ್ಞಾನವೂ ಅತ್ಯಾವಶ್ಯಕವಾಗಿದೆ.

೧೬ ನೇ ಶತಮಾನವು ಪ್ರಾಮುಖ್ಯವಾಗಿ ವೀರಶೈವ ಸಾಹಿತ್ಯದ ಉತ್ಕರ್ಷ ಕಾಲವಾಗಿದೆ. ವಿರಕ್ತ ತೋಂಟದಾರ್ಯನು ಸಿದ್ಧೇಶ್ವರ ಪುರಾಣವನ್ನೂ, ಕರ್ನಾಟಕ ಶಬ್ದ ಮಂಜರಿ ಮತ್ತು ಇತರ ಕಾವ್ಯಗಳನ್ನೂ ಬರೆದು ವಿರಕ್ತರಿಗೆ ಸ್ಫೂರ್ತಿಯನ್ನು ಕೊಟ್ಟಿರುವನು.

## ಆದರ್ಶ ಪಟ್ಟಾಧ್ಯಕ್ಷ

ಹಿರಿಯ ಮಠದ ಪಟ್ಟಾಧ್ಯಕ್ಷನಾದ ವಿರುಪಾಕ್ಷ ಪಂಡಿತನು ಚೆನ್ನಬಸವ ಪುರಾಣವನ್ನು ಬರೆದು ಈಗಿನ ಎಲ್ಲ ಪಟ್ಟಾಧ್ಯಕ್ಷರಿಗೆ ಮಾರ್ಗದರ್ಶಿಯಾಗಿರುತ್ತಾನೆ. ೧೬ ನೇ ಶತಮಾನದ ಗುರು ವಿರಕ್ತರು ಎಷ್ಟು ಐಕ್ಯಭಾವದಿಂದಲೂ ತತ್ವನಿಷ್ಠರಾಗಿಯೂ ಸಮಾಜ ಕಾರ್ಯಮಾಡಿದರು ನೋಡಿರಿ ! ಸಮಾಜದಲ್ಲಿ ಐಕ್ಯತೆ, ತತ್ವಪ್ರೀತಿ ಇದ್ದರೆ ಮಹಾ ಕಾರ್ಯಗಳುದಯದಂಥ ಮಹತ್ತರ ಸಾಹಿತ್ಯ ಕೃತಾಕೃತಿಗಳು ನಿರ್ಮಾಣವಾಗಬಲ್ಲುವು. ಗುಬ್ಬಿಯ ಮಲ್ಲಣಾರ್ಯನು ಭಾವಚಿಂತಾರತ್ನ ಮತ್ತು ವೀಸಶೈವಾಮೃತ ಪುರಾಣವನ್ನು ಬರೆದಿರುವನು. ಮಹಾ ಕಾವ್ಯವಾಗಿರುವ ವೀರಶೈವಾಮೃತ ಪುರಾಣದಲ್ಲಿ ಎಲ್ಲಿಯೂ ಗುರು–ವಿರಕ್ತ ಭೇಧವಾಗಲೀ, ಭಕ್ತಮಹೇಶ್ವರ ಭೇಧವಾಗಲೀ ಹೇಳಲ್ಪಟ್ಟಿಲ್ಲ. ಇತ್ತೀಚಿಗೆ ಹುಟ್ಟಿದ ಭೇದ ಭ್ರಾಂತಿಯನ್ನು ಎಲ್ಲ ವೀರಶೈವರೂ ತಿರಸ್ಕರಿಸಲಿಕ್ಕೆ ಬೇಕು. ಇದೇ ಶತಮಾನದಲ್ಲಿ ನಂಜುಂಡನು ಕುಮಾರರಾಮ ಚರಿತೆಯನ್ನೂ, ಚೇರಮಾಂಕನು ಚೇರಕಾವ್ಯವನ್ನೂ, ವೀರಭದ್ರರಾಜನು ವೀರಭದ್ರ ವಿಜಯ ಮತ್ತು ಇತರ ಗ್ರಂಥಗಳನ್ನೂ ಬರೆದಿರುವರು.

## ಸ್ತ್ರೀಯರಿಗೆ ಮಾರ್ಗದರ್ಶನ

ಚನ್ನಬಸವಾಂಕನು ಮಹಾದೇವಿ ಅಕ್ಕನ ಪುರಾಣವನ್ನು ಬರೆದು ವೀರಶೈವರ ಲಕ್ಷ್ಯವನ್ನು ಸ್ತ್ರೀಯರ ಉನ್ನತಿಯತ್ತ ಎಳೆದಿರುವನು. ಮಹಾದೇವಿ ಅಕ್ಕನ ಬಳಗಗಳೆಂದು ಅಲ್ಲಲ್ಲಿ ಈಗ ಉದಯವಾಗಿವೆಯಷ್ಟೇ ! ಅವುಗಳ ಕಾರ್ಯದ ದಿಸೆಯನ್ನು ರಚನಾತ್ಮಕ ಕಾರ್ಯದ ಕಡೆಗೆ ತಿರುಗಿಸಬೇಕು. ನೈತಿಕ ಏಗೂ ಸಾಧನ ವಾಗುನಂತೆ ಮಾರ್ಪಡಿಸಬೇಕು. ಇದೇ ೧೬ ನೇ

ಶತಮಾನದಲ್ಲಿ ಕಿಕ್ಕೇರಿ ನಂಜುಂಡ ಕವಿಯು ಭೈರವೇಶ್ವರ ಕಾವ್ಯವನ್ನೂ, ಸದಾನಂದ ಯೋಗಿಯು ರಾಮನಾಥ ಚರಿತ್ರೆಯನ್ನೂ ಬರೆದಿರುವರು.

೧೭ ನೇ ಶತಮಾನದಲ್ಲಿ ಉಭಯಕವಿತಾ ವಿಶಾರದನಾದ ಷಡಕ್ಷರ ದೇವನು ರಾಜಶೇಖರ ವಿಳಾಸ, ವೃಷಭೇಂದ್ರವಿಜಯ, ಮತ್ತು ಶಬರಶಂಕರ ವಿಳಾಸ ಎಂಬ ಮಹಾಕಾವ್ಯಗಳನ್ನು ಬರೆದಿರುವರು. ಷಡಕ್ಷರದೇವನ ರಾಜ ಶೇಖರ ವಿಳಾಸವು ಇದೇ ಶತಮಾನದ ಲಕ್ಷ್ಮೀಶನ ಜೈಮಿನಿಭಾರತಕ್ಕಿಂತಲೂ ಮಿಗಿಲಾಗಿದೆಯೆಂದು ವಿಮರ್ಶಕರ ಅಭಿಪ್ರಾಯವಾಗಿದೆ. ವಿಶ್ವಕವಿಯಾದ ಸರ್ವಜ್ಞನು ತನ್ನ ಜಗನ್ಮಾನ್ಯ ವಚನಗಳನ್ನು ಇದೇ ಶತಮಾನದಲ್ಲಿ ಬರೆದು ಅಮರನಾಗಿರುವನು. ೧೨ನೇ ಶತಮಾನದ ಶರಣರ ತತ್ವಪ್ರಭಾವವು ೧೭ನೇ ಶತಮಾನದ ವರೆಗೆ ಹೇಗೆ ಬೆಳಗಿರುವದೆಂಬರನ್ನು ಸರ್ವಜ್ಞನ ವಚನಗಳಿಂದ ತಿಳಿಯಬಹುದು. ಹರೀಶ್ವರ ಕವಿಯು ಪ್ರಭುದೇವ ಪುರಾಣ, ಸಿದ್ಧನಂಜೇಶನ ರಾಘವಾಂಕ ಚರಿತ್ರೆ ಮತ್ತು ಗುರುರಾಜ ಚಾರಿತ್ರಗಳು ಶರಣರ ಭಕ್ತಿ ಪರಂಪರೆಯನ್ನು ಸಾರುತ್ತವೆ. ಸಿಜ್ಜೆಯ ಸಿದ್ಧಲಿಂಗಾರ್ಯನ ಮಳೆಯರಾಜ ಚರಿತ್ರೆ, ಪರ್ವತೇಶ್ವರನ ಚತುರಾಚಾರ್ಯ ಪುರಾಣ, ಮುಮ್ಮಡಿತಮ್ಮನ ಶಂಕರ ಸಂಹಿತೆ, ಪ್ರಾಸಭೂಷಣನ ಗುರುಭಕ್ತಾಂಡಾರಿಯ ಚರಿತ್ರೆ ಈ ಕಾವ್ಯಗಳೂ ಇದೇ ಶತಮಾನದಲ್ಲಿ ಬರೆಯಲ್ಪಟ್ಟವೆ.

೧೮ ನೇ ಶತಮಾಂದಲ್ಲಿ ನೂರೊಂದ ಕವಿಯು ಸೌಂದರ ಕಾವ್ಯವನ್ನು ಬರೆದನು. ಶಂಕರ ಕವಿಯು ಜೋರಬಸವ ಚರಿತ್ರೆಯನ್ನು ಬರೆದು ಉದಾತ್ತವಾದ ಹೃದಯದ ಸಂಸ್ಕೃತಿಯ ಪರಂಪರೆಯನ್ನೂ ಸಾಗಿಸಿ ಶಿವಶರಣರ ತತ್ವ ಪ್ರಭಾವದ ಅದ್ಭುತ ಪರಿಣಾಮದ ನಿದರ್ಶನವಾಗಿರುವನು.

೧೯ ನೇ ಶತಮಾನದಲ್ಲಿ ಬಸಪ್ಪಶಾಸ್ತ್ರಿ ಮುಂತಾದವರು ಕನ್ನಡ ಸಾಹಿತ್ಯ ಸೇವೆಯ ಪರಂಪರೆಯನ್ನು ಮುಂದುವರಿಸಿದರು. ಈಗಿನ ೨೦ ನೇ ಶತಮಾನದಲ್ಲಿ ಶ್ರೀ. ಹಳಕಟ್ಟಿಯವರ ಸಾಹಿತ್ಯದ ಉಜ್ವಲಸೇವಾ ಪರಂಪರೆಯು ಸಾಗಿದೆ.

## ಸ್ವಾಮಿಗಳಲ್ಲಿ ಅರಿಕೆ

ಈ ಪ್ರಕಾರ ೧೨ನೇ ಶತಮಾನದಿಂದ ೨೦ನೇ ಶತಮಾದ ವರೆಗೆ ವೀರ ಶೈವ ಶರಣ ಶರಣೆಯರು, ಶಿವಯೋಗಿಗಳು, ಕವಿಗಳು, ಮಹಾತ್ಮರು ಮುಂತಾದ ವೀರಶೈವರು ನಿಜಭಕ್ತಿಯ ಜೀರ್ಣೋದ್ಧಾರ ಮಾಡಿ ತದ್ವಾರಾ

ಮಠಗಳ ಜೀರ್ಣೋದ್ಧಾರ ಮಾಡಿರುವರು. ಸಮಾಜದ ಜೀರ್ಣೋದ್ಧಾರವನ್ನು ಮಾಡಿದರು. ನಮ್ಮ ಗುರುವಿರಕ್ತರು ಹಿಂದಿನ ವೀರಶೈವರಂತೆ ವಚನಗಳನ್ನೂ ಕಾವ್ಯಗಳನ್ನೂ ಬರೆಯುವ ಶಕ್ತಿಯಿಲ್ಲದಿದ್ದರೂ ಅವುಗಳನ್ನು ಅಭ್ಯಾಸಮಾಡುವ ಮನಸ್ಸನ್ನಾದರೂ ಮಾಡಬೇಕು. ತಮಗೆ ತಿಳಿಯದಿದ್ದರೆ ತಿಳಿದ ಪಂಡಿತರಿಗೆ. ಆಶ್ರಯಕೊಟ್ಟು ಅವರಿಂದ ತಿಳಿದುಕೊಳ್ಳಬೇಕು. ಎಲ್ಲ ವೀರಶೈವ ಗ್ರಂಥಗಳನ್ನು ಮಠಗಳಲ್ಲಿ ಸಂಗ್ರಹಿಸಿ ಮಠಗಳನ್ನು ಜ್ಞಾನ ಭಾಂಡಾರಗಳನ್ನಾಗಿ ಮಾಡಬೇಕು. ಈ ಪ್ರಕಾರದ ಸಾಹಿತ್ಯೋಪಾಸನೆಯಿಂದ ಸಾಂಸ್ಕೃತಿಕ ಪರಂಪರೆಯು ಅವಿಚ್ಛಿನ್ನವಾಗಿ ಪ್ರವಹಿಸಲಿಕ್ಕೆ ಅನುಕೂಲವಾಗುವದು. ಪಾಪದ ತವರ್ಮನೆಯಾದ ಆಲಸ್ಯವನ್ನು ಹೊಡೆದೋಡಿಸಿ, ನೈತಿಕ ಶಕ್ತಿ ಸಂಪನ್ನರಾಗಿ, ಸಾಹಿತ್ಯ ಭಕ್ತಿಯಿಂದ ಸಂಸ್ಕೃತಿವಂತರಾಗಿ ಸಮಾಜ ಸೇವೆಯನ್ನು ಮಾಡುವ ಸುಬುದ್ಧಿಯು ನಮ್ಮ ಮಠಗಳಲ್ಲಿ ಎಲ್ಲೆಲ್ಲಿಯೂ ಮೂಡಿಬರಲಿ !

---

## ಕ್ಷಮಾಪಣೆ

ಹೋದ ತಿಂಗಳು ಅಸೆಂಬ್ಲಿಯ ಮತದಾರ ಪತ್ರಿಕೆಗಳನ್ನು ಮುದ್ರಣ ಮಾಡಬೇಕಾದ್ದರಿಂದ ಪ್ರೆಸ್ಸಿನ ಕೆಲಸಗಳನ್ನು ಅದರ ಸಲುವಾಗಿ ನಿಲ್ಲಿಸಬೇಕಾಯಿತು. ಆದರೂ ಶಿವಾನುಭವ ಪತ್ರಿಕೆಯನ್ನು ನಾವು ತಿಂಗಳಿನ ಅಂತ್ಯದಲ್ಲಿ ಹೊರಡಿಸಿದೆವು. ಲಿಸ್ಟಿನ ಕೆಲಸ ಆಗಸ್ಟ ೧ನೇ ವಾರದಲ್ಲಿ ಸಹ ನಡೆಯಿತು. ಪತ್ರಿಕೆಯನ್ನು ನಾವು ಎಂದಿನಂತೆ ತಿಂಗಳಿನ ಮಧ್ಯದಲ್ಲಿ ಹೊರಡಿಸಬೇಕೆಂದು ಉದ್ದೇಶಪಟ್ಟು ಸಕಾಲದಲ್ಲಿ ಹೊರಡಿಸಿದ್ದೇವೆ. ಇದಕ್ಕೋಸ್ಕರ ನಾವು ಈಗ ಕೆಲವು ಪುಟಗಳನ್ನು ಕಡಿಮೆ ಮಾಡಬೇಕಾಯಿತು. ಇದಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ. ಇನ್ನು ಮುಂದೆ ನಾವು ಪತ್ರಿಕೆಯನ್ನು ಯಥಾವತ್ತಾಗಿ ಸಕಾಲದಲ್ಲಿ ಪ್ರಸಿದ್ಧಿಸುತ್ತ ಹೋಗುವೆವು.

ಸಂಪಾದಕ, ಶಿವಾನುಭವ

ಆಗ ಕಲ್ಯಾಣದಲ್ಲಿ ಉತ್ಪಾತಗಳಾದವು. ಕೊಲೆ ಸುಲಿಗೆಗಳಾದವು. ಸುರಕ್ಷತೆಯು ಉಳಿಯಲಿಲ್ಲ. ಅಂತಃಕಲಹಗಳು ಪ್ರಜ್ವಲಿಸಿದವು. ಆಗ ರಾಜರಾರೂ ಕಲ್ಯಾಣದಲ್ಲಿ ಉಳಿಯಲಿಲ್ಲ. ಎಲ್ಲ ಕಡೆಗೆ ಅನಾಯಕತನ ವಾಯಿತು.

## ಉಳಿವಿಗೆ ಪ್ರಯಾಣ

ಈ ಸ್ಥಿತಿಯುಂಟಾಗಲು ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳಿವಿಯ ಕಾಡನ್ನು ಪ್ರವೇಶಿಸಲು ಅತ್ತ ಹೊರಟರು. ಆಳಿಯ ಬಿಜ್ಜಳನು ಅವರನ್ನು ಬೆನ್ನಟ್ಟಿದನು. ಮಾರ್ಗದಲ್ಲಿ ಅನೇಕ ಯುದ್ಧಗಳಾದವು. ಅವುಗಳಲ್ಲಿ ಶಿವಶರಣರು ಬಿಜ್ಜಳನ ದಂತನ್ನು ಹಿಮ್ಮೆಟ್ಟಿಸಿದರು. ಈ ವಿವರಗಳನ್ನು ನಾವು ಹಿಂದೆಯೇ ಕೊಟ್ಟಿದ್ದೇವೆ. ಆದರೆ ಬಿಜ್ಜಳನ ಸೈನಿಕರು ತಮ್ಮಮೇಲೇರಿ ಬರುವದನ್ನು ನಿಲ್ಲಿಸಲಾರದೆ ಹೋಗಲು ಶಿವಶರಣರು ಉಳಿವಿಯವರೆಗೆ ಹಿಂದಕ್ಕೆ ಸರಿಯುತ್ತ ಬಂದರು. ಈ ಪ್ರಕಾರ ಒಂದು ಘೋರ ಪ್ರಸಂಗವು ಶಿವಶರಣರಿಗೆ ಒದಗಿತು

ಈ ಸ್ಥಿತಿಯುಂಟಾದಕೂಡಲೆ ಮಡಿವಾಳ ಮಾಚಿದೇವನ ಗುರುವಾದ ಹಿಪ್ಪರಿಗೆಯ ಮಲ್ಲಿಕಾರ್ಜುನ, ಡೋಹರ ಕಕ್ಕಯ್ಯ, ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿದೇವ, ಮತ್ತು ಸುಲಿಯ ಚಂದಯ್ಯ ಇವರು ಚನ್ನಬಸವಣ್ಣನಿದ್ದಲ್ಲಿಗೆ ಉಳಿವಿಗೆ ಬಂದರು. ಅಷ್ಟರಲ್ಲಿ ಚನ್ನಬಸವೇಶ್ವರನು ಉಳಿವಿಯ ಮಹಾಮನೆಯಲ್ಲಿ ನಿಂತುಕೊಂಡು ಶತ್ರುಗಳೊಡನೆ ಹೋರಾಡುತ್ತಿದ್ದನು. ಆದರೆ ಇದರಲ್ಲಿ ಅವನಿಗೆ ಜಯ ಸಿಗುವದು. ಕಠಿಣವೆಂಬುದು ತೋರಿಬರಲು ಚನ್ನಬಸವೇಶ್ವರನೂ ಉಳಿದ ಶಿವಶರಣರೂ ಅಲ್ಲಿದ್ದ ಹೊನ್ನರಳಿ ಮರಕ್ಕೆ ಒಂದು ತೊಟ್ಟಿಲವನ್ನು ತೂಗುಹಾಕಿ ಒಬ್ಬೊಬ್ಬರು ಅದರಲ್ಲಿ ಕುಳಿತುಕೊಳ್ಳಲು ಆ ತೊಟ್ಟಿಲನ್ನು ತೂಗುವರು. ಅದು ಮೇಲಕ್ಕೆ ಹೋದಕೂಡಲೆ ಮೇಲೆ ಕಾಯುತ್ತ ನಿಂತಿದ್ದ ಶಿವಗಣಂಗಳು ಆ ಶಿವಶರಣರನ್ನು ವಿಮಾನದೊಳಗೆ ಎತ್ತಿಕೊಂಡು ಕೈಲಾಸಕ್ಕೊಯ್ದರು. ಕಡೆಗೆ ಹಡಪದ ರೇಚಯ್ಯನೊಬ್ಬನೇ ಉಳಿದನು.

ಈ ಕಾಲಕ್ಕೆ ಸಹಾಯಕ್ಕೆ ಬಂದಿದ್ದ ಮಲ್ಲಿಕಾರ್ಜುನದೇವ, ಕಕ್ಕಯ್ಯ, ಸುಲಿಯ ಚಂದಯ್ಯ, ರುದ್ರಮುನಿ ಇವರು ಪರಿಸ್ಥಿತಿಯು ಕಠಿಣವೆಂದು

ಭಾವಿಸಿ ಈ ಸ್ಥಳವನ್ನು ಬಿಟ್ಟು ಹಿಂದಕ್ಕೆ ತೆರಳಿದರು. ಮಲ್ಲಿ ಕಾರ್ಜುನ ದೇವನು ಹಿಪ್ಪರಿಗೆಗೆ ಮರಳಿಬಂದನು. ಕಕ್ಕಯ್ಯನು ಕಕ್ಕೇರಿ ಯಲ್ಲಿ ಸಮಾಧಿಸ್ಥನಾದನು. ಈ ಗ್ರಾಮವು ಖಾನಾಪುರ ತಾಲೂಕಿನಲ್ಲಿ ಇರುತ್ತದೆ. ರುದ್ರಮುನಿಯು ಕಲ್ಯಾಣಕ್ಕೆ ಮೊದಲು ಬಂದು ಆ ಮೇಲೆ ಶ್ರೀಶೈಲ ಪ್ರಾಂತಕ್ಕೆ ಹೋದನು. ನುಲಿಯ ಚಂದಯ್ಯನು ಉಳಿವಿಯಿಂದ ನಾಗಲಾಂಬಿಕೆಯನ್ನು ಕರೆದುಕೊಂಡು ಭದ್ರಾತೀರ ಪ್ರದೇಶಕ್ಕೆ ಬಂದನು. ಅಲ್ಲಿಯೇ ಈ ಉಭಯತರು ಸಮಾಧಿಸ್ಥರಾದರು. ಇವರೆಲ್ಲರ ಚರಿತ್ರೆಗಳನ್ನು ನಾವು ಮುಂದೆ ಕೊಡುತ್ತೇವೆ. ಇದಕ್ಕೂ ಪೂರ್ವದಲ್ಲಿ ಹರಳಯ್ಯ, ಮಧುವಯ್ಯ, ಜಗದೇವ ಮಲ್ಲಿಬೊಮ್ಮಣ್ಣ ಇವರ ಚರಿತ್ರೆ ಗಳನ್ನು ವಿವರಿಸುವಲ್ಲಿ ಕೆಲವು ಕಥಾಂತರಗಳಿದ್ದು ಅವುಗಳಲ್ಲಿ ಮುಖ್ಯ ವಾದವುಗಳನ್ನು ಮಾತ್ರ ನಾವು ಇಲ್ಲಿ ಕೊಡುತ್ತೇವೆ.

---

## ಕಥಾಂತರಗಳು.

**(೧) ಬಿಜ್ಜಳನ ಕೊಲೆಃ—** ಬಿಜ್ಜಳನ ಕೊಲೆಯಾಗಿರುವದಿಲ್ಲ, ಆದರೆ ಅವನು ತಾನಾಗಿಯೇ ರಾಜ್ಯತ್ಯಾಗ ಮಾಡಿದನೆಂದು ಕೆಲವರ ಅಭಿಪ್ರಾಯವಿದೆ. ಆದರೆ ಅವನ ಕೊಲೆಯಾಗಿದ್ದದ್ದನ್ನು ಜೈನ ಮತ್ತು ವೀರಶೈವ ಗ್ರಂಥಕಾರರು ಹೇಳಿದ್ದಾರೆ. ಅವನು ರಾಜ್ಯತ್ಯಾಗ ಮಾಡಿದ ನೆಂದು ಅವರು ಎಲ್ಲಿಯೂ ಹೇಳಿರುವದಿಲ್ಲ. ಆದ್ದರಿಂದ ನಾವು ಈ ವಿವರಣೆಯೇ ಸತ್ಯವೆಂದು ತಿಳಿದು ಈ ಚರಿತ್ರೆಗಳಲ್ಲಿ ಉಲ್ಲೇಖಿಸಿದ್ದೇವೆ. ನಾವು ಈ ವಿಷಯವನ್ನು ಕುರಿತು ಬಸವೇಶ್ವರನ ಚರಿತ್ರೆಯಲ್ಲಿ ವಿಸ್ತಾರ ವಾಗಿ ನಿರೂಪಿಸಿವೆವು.

**(೨) ಬಿಜ್ಜಳನ ಕೊಲೆಮಾಡಿದವರು ಯಾರು ಮತ್ತು ಹೇಗೆ?** ಈ ವಿಷಯವಾದರೂ ವಾದಗ್ರಸ್ತವಿದೆ. ಈ ಬಗ್ಗೆ ವೀರಶೈವ ಗ್ರಂಥಗಳಲ್ಲಿ ಕಥಾಂತರಗಳಿವೆ. ಬಸವ ಪುರಾಣದಲ್ಲಿ ಜಗದೇವ, ಮಲ್ಲಯ್ಯ ಮತ್ತು ಬೊಮ್ಮಣ್ಣ ಹೀಗೆ ಮೂರು ಜನರು ದರ್ಬಾರವನ್ನು ಪ್ರವೇಶಿಸಿ ಬಿಜ್ಜಳ ನನ್ನು ಘಾತಿಸಿದರೆಂದು ಹೇಳಿವೆ. ಆದರೆ ಹೀಗೆ ಮೂರೇ ಜನರು ಬಹಿ

ರಂಗವಾಗಿ ಅಲ್ಲಿ ಕೊಲೆ ಮಾಡುವದು ಸಂಭವನೀಯ ತೋರುವದಿಲ್ಲ. ಆದ್ದರಿಂದ ಈ ವಿವರಣೆಗಿಂತಲೂ ಇಬ್ಬರು ಜನರು ಪಂಜುಗಾರರಾಗಿ ಅಕಸ್ಮಾತ್ತಾಗಿ ಅವನನ್ನು ಹೊಡೆದರೆಂದು ಅನೇಕ ಗ್ರಂಥಗಳಲ್ಲಿ ಹೇಳಿದೆ. ಇದು ಹೆಚ್ಚಿಗೆ ಸಂಭವನೀಯವೆಂದು ತೋರಿದ್ದರಿಂದ ಇದನ್ನೇ ನಾವು ಅವಲಂಬಿಸಿ ಈ ಚರಿತ್ರೆಗಳಲ್ಲಿ ಕೊಟ್ಟಿದ್ದೇವೆ. ಬಸವಪುರಾಣದಲ್ಲಿ ಕೊಲೆ ಬಡಿಸಿದ ಮೂರ್ತಿಗೆ ದಾರಿಯನ್ನು ತೋರಿಸುತ್ತ ಒಂದು ಗೂಳಿಯು ದರ್ಬಾರವನ್ನು ಪ್ರವೇಶಿಸಿತೆಂತಲೂ ಹೇಳಿದೆ. ಆದರೆ ಈ ವಿವರಣೆಯು ಬೇರೆ ಯಾವ ಗ್ರಂಥದಲ್ಲಿಯೂ ಇರದ್ದರಿಂದ ನಾವು ಇದನ್ನು ಅನ್ನು ಸರಿಸಿಲ್ಲ.

(೩) **ಹರಳಯ್ಯನ ಕೊಲೆ:—** ಹರಳಯ್ಯ ಮಧುವಯ್ಯಗಳನ್ನು ಶಿವಗಣಂಗಳು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ ತೆಗೆದುಕೊಂಡು ಹೋದರೆಂದು ವೀರಶೈವ ಗ್ರಂಥಗಳಲ್ಲಿ ಹೇಳಿದೆ. ಆದರೆ ಅವರು ವಧಿಸಲ್ಪಟ್ಟರೆಂದು ನಾವು ಭಾವಿಸಿ ಅವರ ಚರಿತ್ರೆಯನ್ನು ಬರೆದಿದ್ದೇವೆ. ಇದು ಹೆಚ್ಚಿಗೆ ಸಂಭವನೀಯವಾಗಿದೆ. ಮತ್ತು ಇದು ನಡೆದ ಸಂಗತಿ ಎಂದು ನಮಗೆ ತೋರಿದ್ದರಿಂದ ಅದೇ ಪ್ರಕಾರ ನಾವು ನಿರೂಪಿಸಿದ್ದೇವೆ.

(೪) **ಹರಳಯ್ಯನು ಮುಚ್ಚೇ ಜೋಡು ಅರ್ಪಿಸಿದ್ದು:—** ಹರಳಯ್ಯನು ಮುಚ್ಚೇ ಜೋಡನ್ನು ಬಸವೇಶ್ವರನಿಗೆ ಅರ್ಪಿಸುವಾಗ ಅವನು ಮತ್ತು ಅವನ ಹೆಂಡತಿಯು ತಮ್ಮ ತಮ್ಮ ಚರ್ಮವನ್ನು ಸುಲಿದು ಅದರಿಂದ ಜೋಡನ್ನು ಮಾಡಿದರೆಂಬ ವರ್ಣನೆಗಳಿವೆ. ಆದರೆ ಈ ವೃತ್ತಾಂತವು ಎಲ್ಲ ಗ್ರಂಥಗಳಲ್ಲಿ ಇರುವದಿಲ್ಲ. ನಾವು ಈ ಚರಿತ್ರೆಗಳಲ್ಲಿ ಹೇಳಿದ್ದು ಹೆಚ್ಚಿಗೆ ಸಂಭವನೀಯ ತೋರಿದ್ದರಿಂದ ಆ ಪ್ರಕಾರ ನಾವು ವಿವರಿಸಿದ್ದೇವೆ.

(೫) **ಹರಳಯ್ಯನ ಗುಂಡಗಳು:—** ಈ ಹೆಸರಿನ ನೀರಿನ ಗುಂಡಗಳು ಅನೇಕ ಕಡೆಗೆ ಇರುತ್ತವೆ. ಹರಳಯ್ಯನ ಹೆಸರು ಇದ್ದ ಮಾತ್ರದಿಂದ ಈ ಸ್ಥಳಗಳಲ್ಲಿ ಹರಳಯ್ಯನು ಇದ್ದನೆಂದು ಹೇಳಲಿಕ್ಕೆ ಬರಲಾರದು. ಜನರು ಹರಳಯ್ಯನ ವಿಷಯವಾಗಿ ತಮ್ಮಲ್ಲಿರುವ ಆದರವನ್ನು ತೋರಿಸುವದಗೋಸ್ಕರ ಅವನ ಹೆಸರನ್ನು ಈ ಪ್ರಕಾರ ಇಟ್ಟಿದ್ದಾರೆಂದು ತೋರುತ್ತದೆ.

---

# ಹಡಪದ ರೇಚಯ್ಯ

ಹಡಪದ ರೇಚಯ್ಯನು ಉಳವಿಯ ಸಂಗ್ರಾಮದಲ್ಲಿದ್ದು ಶಿವಶರಣರು ತೊಟ್ಟಿಲಿನ ಮೂಲಕ ಕೈಲಾಸಕ್ಕೆ ಹೋದಬಳಿಕ ಅವರಲ್ಲಿ ಹಡಪದ ರೇಚಯ್ಯನೊಬ್ಬನೇ ಹಿಂದುಳಿದನು. ಅವನು ಕಲ್ಯಾಣದಿಂದ ಹೊರಟಬಳಿಕ ನಡೆದ ಯುದ್ಧಗಳಲ್ಲಿ ಯಾವಾಗಲೂ ಚನ್ನಬಸವಣ್ಣನಿಗೆ ಬೆಂಬಲವಾಗಿ ನಿಂತುಕೊಂಡು ಹೋರಾಡಿದನು. ಅವನು ಚನ್ನಬಸವೇಶ್ವರನ ಸ್ವಾಮಿನಿಷ್ಠ ಸೇವಕನಾಗಿದ್ದನು. ಅವನು ತನಗೆ ಕೊಟ್ಟ ಸಂದೇಶಗಳನ್ನು ಅವನು ಆಯಾ ಶರಣರಿಗೆ ತಪ್ಪದೇ ಮುಟ್ಟಿಸುವನು. ರಾಜಧಾನಿಯಲ್ಲಿ ನಡೆದ ಸಂಗತಿಗಳನ್ನು ಬಸವ ಚನ್ನಬಸವರಿದ್ದಲ್ಲಿಗೆ ಹೋಗಿ ಹೇಳುವನು. ಇದೇ ರೀತಿ ಅವನು ಯಾವಾಗಲೂ ಸೇವೆ ಮಾಡುತ್ತ ಬಂದನು

ಚನ್ನಬಸವೇಶ್ವರನು ಉಳವಿಯನ್ನು ಬಿಟ್ಟು ಕೈಲಾಸಕ್ಕೆ ಹೋಗುವಾಗ ಅವನು ರೇಚಯ್ಯನನ್ನು ಕರೆದು ನಮ್ಮ ಆವುಗೆಗಳು ಬಯಲ ಬಸವೇಶ್ವರನ ದೇವಾಲಯದಲ್ಲಿ ೧ ಮರೆತುಬಂದಿದ್ದೇವೆ. ಅವುಗಳನ್ನು ನೀನು ಅಲ್ಲಿಗೆ ಹೋಗಿ ತಗೆದುಕೊಂಡು ಬಾ ಎಂದು ಹೇಳಿ ಕಳುಹಿಸಿದನು. ಆ ಮೇರೆಗೆ ರೇಚಯ್ಯನು ಆ ಸ್ಥಳಕ್ಕೆ ಹೋಗಿ ಆವುಗೆಗಳನ್ನು ತೆಗೆದುಕೊಂಡು ಉಳವಿಗೆ ಬರುವಷ್ಟರಲ್ಲಿ ಅಲ್ಲಿ ಯಾರೂ ಇದ್ದಿದ್ದಿಲ್ಲ. ಎಲ್ಲರೂ ಶಿವಲೋಕಕ್ಕೆ ಹೋಗಿದ್ದರು. ರೇಚಯ್ಯನು ಇದನ್ನು ನೋಡಿ ಚನ್ನಬಸವನು ನನ್ನನೊಬ್ಬನನ್ನೇ ಏಕೆ ಬಿಟ್ಟು ಹೋದನೆಂಬುವದರ ಬಗ್ಗೆ ಬಹಳ ದುಃಖಿಸಿ

---

೧ ಈ ದೇವಾಲಯವು ಉಳವಿಯಿಂದ ೭-೮ ಮೈಲು ಅಂತರದಲ್ಲಿ ಇದೆ. ಯಾತ್ರಿಕರು ಇಲ್ಲಿಂದ ಚಕ್ಕಡಿಗಳನ್ನು ಉಳವಿಗೆ ಒಯ್ಯುವದು ಅಶಕ್ಯವಿದೆ. ಮಾರ್ಗವು ಅಷ್ಟು ಕಠಿಣವಾದದ್ದು ಆದ್ದರಿಂದ ಅವರು ಬಯಲು ಬಸವಣ್ಣನ ದೇವಾಲಯದಲ್ಲಿ ಎತ್ತುಗಳನ್ನೂ ಚಕ್ಕಡಿಗಳನ್ನೂ ಬಿಟ್ಟು ಉಳವಿಗೆ ಬರುತ್ತಾರೆ. ಬರುವ ಮುಂದೆ ಅವುಗಳನ್ನು ಕಾಯು ಎಂದು ಈ ಬಯಲು ಬಸವಣ್ಣನಿಗೆ ಬೇಡಿಕೊಳ್ಳುತ್ತಾರೆ. ಬಸವಣ್ಣನ ಅನುಗ್ರಹದಿಂದ ಅವಾವೂ ಕಳವಾಗಿ ಹೋಗುವದಿಲ್ಲ. ಯಾತ್ರಿಕರು ತಿರುಗಿ ಬರುವವರೆಗೂ ಅವು ಅಲ್ಲಿಯೇ ಇರುತ್ತವಂತೆ.

ದನು. ಆಗ ಅವನು ಮಹಾಮನೆಯ ಬಾಗಿಲಿಗೆ ಬಂದಾಗ್ಗೆ ಅದಕ್ಕೆ ಒಂದು ಪತ್ರವನ್ನು ಅಂಟಿಸಿದ್ದನ್ನು ನೋಡಿದನು. ಅದು ಚನ್ನಬಸವೇಶ್ವರನದೆಂದು ತಿಳಿಯಿತು. ಅದರಲ್ಲಿ ಚನ್ನ ಬಸವೇಶ್ವರನು ಅವನಿಗೆ— ನೀನು ಗಣತೃಪ್ತಿ ಮಾಡುತ್ತಿರುವಾಗ್ಗೆ ಎಲ್ಲರಿಗೂ ಬಿಳಿ ಎಲೆ ಕೊಟ್ಟು ಒಬ್ಬನಿಗೆ ಮಾತ್ರ ಕರಿ ಎಲೆ ಕೊಟ್ಟೆ. ಈ ತಪ್ಪಿಗಾಗಿ ನೀನು ಮರ್ತ್ಯದಲ್ಲಿದ್ದು ಜಂಗಮ ದಾಸೋಹ ಮಾಡುತ್ತ ಈ ದೋಷವನ್ನು ಕಳೆಯಬೇಕೆಂದು ಬರೆದದ್ದಾಗಿತ್ತು. ರೇಚಿದೇವನು ಅದೇ ಪ್ರಕಾರ ತನ್ನ ಜೀವವಿರುವ ವರೆಗೂ ಜಂಗಮ ದಾಸೋಹವನ್ನು ಮಾಡುತ್ತ ಮುಕ್ತನಾದನು. ಅವನ ಪೂರ್ವ ವೃತ್ತಾಂತವು ಏನೆಂದರೆ:—

ಆಂಧ್ರ ದೇಶದಲ್ಲಿ ಪೆನ್ನಾನಗರವೆಂಬ ಗ್ರಾಮವಿದೆ. ಅದನ್ನು ವೆಂಗಿ ಭೂಪಾಲನೆಂಬ ರಾಜನು ಆಳುತ್ತಿದ್ದನು. ಈತನಲ್ಲಿ ಹಡಪದ ರೇಚಯ್ಯನು ಹಡಪದ ಸೇವೆ ಮಾಡುತ್ತಾ ಇದ್ದನು. ಅವನು ವೀರಶೈವ ಧರ್ಮವನ್ನು ಪಾಲಿಸುತ್ತ ಕಾಯಕ ತಂದು ಜಂಗಮಾರ್ಚನೆಯಲ್ಲಿ ಇರುತ್ತಿದ್ದನು. ಅರಸನು ಒಂದು ದಿನ ವೈಹಾಳಿಗೆ ಹೋದಾಗ ಒಂದು ನದೀ ತೀರದಲ್ಲಿ ವಿಶ್ರಮಿಸುತ್ತಿದ್ದನು. ಅಲ್ಲಿ ಸಮೀಪದಲ್ಲಿ ದೇವರಿಗೆ ಬಿಟ್ಟ ಒಂದು ಗೂಳಿಯು ಒಬ್ಬ ಕುಡುಒಕ್ಕಲಿಗನ ಹೊಲವನ್ನು ಮೇಯುತ್ತಾ ಇದ್ದಿತು. ಅದನ್ನು ಆಳುಗಳು ನೋಡಿ ಅದನ್ನು ಹೊಡೆಯಲಿಕ್ಕೆ ಬರಲು ಗೂಳಿಯು ತಿರುಗಿ ಅವರ ಮೇಲೆ ಬಿದ್ದು ಕಾಡಾನೆಯಂತೆ ಘೂರ್ಮಿಸುತ್ತ ಎನುರಿಸಲು ಎಡ ಬಲದ ಹೊಲದವರು ಮತ್ತು ಆಳುಗಳು ಅದಕ್ಕೆ ಕಲ್ಲಿನಿಂದ ಹೊಡೆದು ಗುದಿಗೆಗಳಿಂದ ಬಡಿದು ಅದರ ಹಿಂಗಾಲು ಮುಂಗಾಲು ಕಟ್ಟಿ ಕೊಂದು ಹಾಕಿದರು. ಅರಸನು ಇದನ್ನು ನೋಡುತ್ತಾ ಸುಮ್ಮನೆ ಇದ್ದನು. ಅವನು ತನ್ನ ಗ್ರಾಮಕ್ಕೆ ಬಂದ ಬಳಿಕ ಗೂಳಿಯನ್ನು ಕೊಂದ ರೀತಿಯನ್ನು ಅವನ ಸತಿಯು ಅವನಿಗೆ ಕೇಳಲು ಅವನು ಗೂಳಿಯಾಕಾರವನ್ನು ನೆಲದ ಮೇಲೆ ಬರೆದು ಜನರು ಹೀಗೆ ಅದನ್ನು ಹೊಡೆದು ಬಡಿದು ಇರಿದು ಕೊಂದರೆಂದು ಆನಂದ ಪಟ್ಟು ಹೇಳುತ್ತಾ ಇದ್ದನು. ಅದನ್ನು ಸಮೀಪದಲ್ಲಿದ್ದ ರೇಚಯ್ಯನು ಕೇಳಿ ಅರಸನು ಆ ಗೂಳಿಯನ್ನು ಬಿಡಿಸದೆ ಇದ್ದದ್ದಕ್ಕೆ ಮತ್ತು ಒಕ್ಕಲಿಗರು ಗೂಳಿಯನ್ನು ಕೊಂದದ್ದಕ್ಕೆ ಖತಿಗೊಂಡು ಅರಸನ ಶಿರವನ್ನು ತತ್‌ಕ್ಷಣ ಹಾರಿಸಿ ಬಿಟ್ಟನು. ಇದನ್ನು ನೋಡಿ ಅರಸನ ಚತುರಂಗಬಲವೆಲ್ಲ ರೇಚಯ್ಯನ ಕೂಡ ಕದನಕ್ಕೆ ಬರಲಾಗಿ ರೇಚಯ್ಯನು ಅವರೊಡನೆ ಕಾದಿ ಅವರಲ್ಲನೇಕರನ್ನು ಸಂಹರಿಸಿದನು, ಮತ್ತು ಉಳಿದವರನ್ನು ಓಡಿಸಿದನು.

ರೇಚಯ್ಯನು ಈ ಪ್ರಕಾರ ವರ್ತಿಸಿದ್ದರಿಂದ ಪೆನ್ನಾಗರ ಪುರದಲ್ಲಿ ಅವನು ಇರುವದು ಅಶಕ್ಯವಾಯಿತು. ಆಗ ಅವನು ಆ ಪಟ್ಟಣವನ್ನು ಬಿಟ್ಟು ಕಲ್ಯಾಣಕ್ಕೆ ಬಂದು ನಿಂತುಕೊಂಡನು. ಮತ್ತು ಚನ್ನಬಸವೇಶ್ವರನ ಓಳಗದಲ್ಲಿ ಇರಲಿಕ್ಕೆ ಹತ್ತಿದನು. ಚನ್ನಬಸವೇಶ್ವರನಲ್ಲಿ ಬಹು ಜನ ಷಟ್‌ಸ್ಥಲ ಜ್ಞಾನಿಗಳು ಇರುತ್ತಿದ್ದು ಅವರಿಗೆ ವೀಳ್ಯೆಯನ್ನು ಗಳಿಗೆ ಮಾಡಿ ಕೊಡುವ ಕಾಯಕವನ್ನು ಹಿಡಿದು ಅಲ್ಲಿಯೇ ಇರಹತ್ತಿದನು.

ಹಡಪದ ರೇಚಣ್ಣನು ಷಟ್‌ಸ್ಥಲ ಜ್ಞಾನಿಯು. ಶಿವಾನುಭವ ಮಂಟಪದಲ್ಲಿ ನಡಿಯುತ್ತಿದ್ದ ವಿಚಾರಗಳನ್ನು ಯಾವಾಗಲೂ ಕೇಳುತ್ತ ಕಾಲಕಳೆಯುವನು. ಇದರಿಂದ ಅವನೂ ಷಟ್‌ಸ್ಥಲ ಜ್ಞಾನಿಯಾದದ್ದಲ್ಲದೆ ತಾನೂ ವಚನಗಳನ್ನು ರಚಿಸುವವನಾದನು. " ನಿಃಕಳಂಕ ಕೂಡಲ ಚನ್ನ ಸಂಗಮ ದೇವ " ಎಂಬುದೇ ಅವನ ಮುದ್ರಿಕೆಯಾಗಿದೆ. ಅವನ ಹತ್ತು ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಅವುಗಳನ್ನು ನಾವು ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ.

ಮುಂದೆ ಸ್ವಲ್ಪಕಾಲದಲ್ಲಿ ಶಿವಶರಣರಿಗೂ ಬಿಜ್ಜಳನಿಗೂ ಕಾಳಗಗಳು ಸಂಭವಿಸಿದವು. ಹಡಪದ ರೇಚಣ್ಣನು ತನ್ನ ಸ್ವಾಮಿಯಾದ ಚನ್ನಬಸವೇಶ್ವರನನ್ನು ಹಿಂಬಾಲಿಸುತ್ತ ಯುದ್ಧಗಳಲ್ಲಿ ಅವನಿಗೆ ಸಹಾಯ ಮಾಡುತ ಉಳಿವಿಯ ವರೆಗೂ ಬಂದನು. ಅಲ್ಲಿ ನಡೆದ ಕಾಳಗದಲ್ಲಿ ಹಡಪದ ರೇಚಯ್ಯನೊಬ್ಬನೇ ಉಳಿದನು. ಆದರೆ ಅವನು ತನ್ನ ಶೇಷಾಯುಷ್ಯವನ್ನು ಚನ್ನಬಸವೇಶ್ವರನ ಅಪ್ಪಣೆಯ ಮೇರೆಗೆ ಜಂಗಮ ದಾಸೋಹದಲ್ಲಿ ಕಳೆಯುತ್ತಾ ಬಂದನು.

ರೇಚಯ್ಯನು ತನ್ನ ದಾಸೋಹ ಕಾರ್ಯಗಳನ್ನು ಎಲ್ಲಿ ಮಾಡುತ ಬಂದನೆಂಬುದು ಒಂದು ವಿಚಾರಾರ್ಹವಾದ ವಿಷಯವಾಗಿದೆ. ಗ್ರಂಥಗಳಲ್ಲಿ ಈ ಬಗ್ಗೆ ಸ್ಪಷ್ಟ ಉಲ್ಲೇಖಗಳು ದೊರೆಯುವದಿಲ್ಲ. ಉಳಿವಿ ಮತ್ತು ಅದರ ಸುತ್ತಲಿನ ಪ್ರದೇಶವೆಲ್ಲ ಕಾಡಾಗಿದ್ದು ಅಲ್ಲಿ ಜನವಸತಿ ಇರುವದಿಲ್ಲ. ಆದರೆ ನೆರೆ ಸೀಮೆಗಳಾದ ಹಲಸಿಗಿ, ವೇಣು ಗ್ರಾಮ ಅಥವಾ ಬೆಳಗಾವಿ, ಕಕ್ಕೇರಿ ಇವು ಪುರಾತನ ಕಾಲದಿಂದ ಪ್ರಸಿದ್ಧಿಗೆ ಬಂದವುಗಳಾಗಿವೆ.

ಇಲ್ಲಿಯೇ ರೇಚಯ್ಯನು ಕಾಲಕಳೆದನೆಂದು ಸ್ಥಾನಿಕ ಐತಿಹ್ಯಗಳಿವೆ. ಮಾರ್ಕಂಡೇಯ ನದಿಯ ಮಗ್ಗುಲಲ್ಲಿರುವ ಕುಂದರಿಗಿ ನಾಡು, ಬೆಳಗಾವಿಯ ಹತ್ತರವಿರುವ ನಾಗಜರಿ ಪ್ರದೇಶ, ಅಂಕಲಿಗಿ ಹತ್ತಿರವಿರುವ ಬೆಳ್ಳಾರಿ ಹಳ್ಳವು ಹರಿಯುವ ಪ್ರದೇಶ ಇಲ್ಲಿ ರೇಚಯ್ಯನು ಕಾಲಕಳೆದನೆಂದು ಇತ್ತ ಕಡೆಯ ಜನರ ಹೇಳಿಕೆ ಇದೆ. ಈ ಭಾಗದಲ್ಲಿ ಅಂಕಲಿಗಿ ಸ್ವಾಮಿಗಳ ಮಠವು ಬಹಳ ಮಹತ್ವದ್ದಿದೆ. ಅದರ ಉಗಮವಾದರೂ ರೇಚಯ್ಯನ ಮೂಲಕವೇ ಆಗಿದೆಂಬ ಪ್ರತೀತಿಯೂ ಇದೆ.

ರೇಚಯ್ಯನು ವಚನಕಾರನಿದ್ದಾನೆ. ನಮಗೆ ದೊರೆದ ಅವನ ವಚನಗಳನ್ನು ಕೆಳಗೆ ಕೊಟ್ಟಿದ್ದೇವೆ. ಅವು ಅಶುದ್ಧವಾಗಿವೆ. ಆದ್ದರಿಂದ ಅವುಗಳನ್ನು ಒಟ್ಟಾಗಿ ಓದಿ ಅವುಗಳ ಭಾವವನ್ನು ತಿಳಿದುಕೊಳ್ಳಲು ವಾಚಕರು ಪ್ರಯತ್ನಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ.

## ರೇಚಯ್ಯನ ವಚನಗಳು

(೧) ಒಂದನಹುದೆನ್ನದೆ, ಒಂದನಲ್ಲಾ ಎನ್ನದೆ ಬಾಯಿಗೆ ಬಂದಂತೆ ಅಂದ ಚಂದವ ಸೇರಿಸಿ ಒಂದೊಂದ ನುಡಿಯದೆ, ಇದು ಬಂಧಮೋಕ್ಷ ಕರ್ಮವೆಂದು ದಂದುಗದ ಗಂಟನಿಕ್ಕಿಕೊಂಡಾಡದೆ ತಾ ನಿಂದಲ್ಲಿ ನಿಜಸುಖಿಯಾದಮೇಲೆ ಇತ್ಯಾದಿಗಳಲ್ಲಿ ಹೊತ್ತು ಹೊರಲೇತಕ್ಕೆ? ಶಿಲೆ ರಸವನುಂಡಂತೆ ಮರೀಚಿಕಾ ಜಲದಂತೆ, ಅಂಬುವಿನ ಸಂಭ್ರಮದಂತೆ ಕುಂಭದಲ್ಲಡಗಿದ ಸರ್ಪನ ಇಂದ್ರಿಯದಂತೆ ಈ ಗುಣ ಲಿಂಗಾಂಗಿಯ ನಿರ್ಗಮನ ನಿಃಕಳಂಕ ಕೂಡಲ ಚನ್ನ ಸಂಗಮ ದೇವ ತಾನಾದ ಶರಣ.

(೨) ಮರನ ದೇವರಿಗೆ ಉರಿಯ ಪೂಜೆಯುಂಟೇ? ಮಣ್ಣಿನ ಹರಿಗೋಲಲ್ಲಿ ತುಂಬಿದ ತೊರೆಯ ಹಾಯಲು ಬಹುದೇ? ಇಂತೀ ದೃಷ್ಟವ ಕಂಡು ಕಾಣಿಸಿದಲ್ಲಿ ಪ್ರಮಾಣಿಸಿದಲ್ಲಿಯು ಈ ತೆರನು. ಹಾಗೆ ಬರಿ ಹುಂಡರ ಆಚಾರ ಭ್ರಷ್ಟರ ಅರ್ಥಿಕಾರರ ಚರ್ಚಾ ಗೋಷ್ಠಿವಂತರ ಬಹು ಯಾಚಕರ ಪಗುಡಿ ಪರಿಹಾಸಕರ ತ್ರಿವಿಧದಲ್ಲಿ ಸೂತಕವನರಸುವ ವಿಶ್ವಾಸಘಾತಕರ ಅಪ್ರಮಾಣ ಪಾತಕರ ಭಕ್ತಿ ತೊಟ್ಟಲ್ಲಿ ಭಕ್ತರೆಂದರೆ ವಿಶಕ್ತಿ ತೊಟ್ಟಲ್ಲಿ ಕರ್ತನೆಂದಡೆ ದೀಕ್ಷೆಯ ಮಾಡಿದಲ್ಲಿ ಗುರುವೆಂದಡೆ ತಪ್ಪ ಕಂಡಲ್ಲಿ ಎತ್ತಿತೂರುವೆನು. ಗೋಷ್ಠಿಯಲ್ಲಿ ಚಿತ್ತ ಬಿಡದಿರ್ದಡೆ ಇದು ನಿಮಗೆ ನಿಶ್ಚಯ

ವಲ್ಲ ಎಂಬೆನು. ಮತ್ತೆಯೂ ಇವ ಕಟ್ಟಿ ಬಿಡಲಾರದಿರ್ದಡೆ ನಿಃಕಳಂಕ ಕೂಡಲ ಚನ್ನ ಸಂಗಮದೇವರಾದಡೂ ಎತ್ತಿ ಹಾಕುವೆನು.

( ೩ ) ಕಂಡ ಚಿತ್ತ ವಸ್ತುವಿನಲ್ಲಿ ಮಗ್ನವಾದ ಮತ್ತೆ ಸಂಸಾರ ವಿಷಯಕ್ಕೆ ಮತ್ತನಪ್ಪುದೇ ಪುನರಪಿಯಾಗಿ? ಇದ ನಿಶ್ಚಯ. ನಿಜ ಲಿಂಗಾಂಗ ನಿರ್ಲೇಪನ ಹೊಲಬು, ಮತ್ತೆ ಜಗದ ಮೊತ್ತದವನಲ್ಲ. ನಿಃಕಳಂಕ ಕೂಡಲ ಚನ್ನಸಂಗಮದೇವ ತಾನಾದ ಶರಣ.

( ೪ ) ಭಕ್ತನಂತೆ ತ್ರಿವಿಧ ಮಲಕ್ಕಿಕ್ಕುವನೆ ಚಿತ್ತವ? ವಿರಕ್ತ ನಂತೆ ಸರ್ವ ವ್ಯಾಪಾರಕ್ಕೆ ಮೊತ್ತದ ಇಂದ್ರಿಯ ವರ್ಗದಲ್ಲಿ ಸುಚಿತ್ತವ ಬಿಟ್ಟು ಮತ್ತೆ ವಿರಕ್ತನಪ್ಪನೇ? ಈ ಉಭಯದ ಭಾವವ ನಿಶ್ಚಯಿಸಿದಲ್ಲಿ ಕುಸುಮ ಗಂಧದಂತೆ ಮುಕುರ ಬಿಂಬದಂತೆ ಉರಿ ಕರ್ಪುರದಿಂವಿನ ತೆರ ದಂತೆ ನಿಃಕಳಂಕ ಕೂಡಲ ಚನ್ನಸಂಗಮದೇವ ತಾನಾದ ಶರಣ.

( ೫ ) ಹೊರಗಣ ಸಿಪ್ಪೆ ಒಳಗ ಮೆಲುವನ್ನಕ್ಕ ಉಭಯದ ಕೂಟ ಅಗಲಿಕೆ ಬಂದ ಮತ್ತೆ ರಸಾನ್ನವಲ್ಲದೆ ಹಿಪ್ಪೆಗೆ ಚಿತ್ತ ಒಪ್ಪ ಬಲ್ಲುದೇ? ಅರಿವನ್ನಬರ ಸ್ಥಳಕುಳಂಗಳ ಹೊಲ, ಹೊಲಬು ಹೆದನ ತಿಳಿದಲ್ಲಿ ಭಕ್ತಿ ಜ್ಞಾನ ವೈರಾಗ್ಯಂಗಳೆಂಬ ತ್ರಿವಿಧದ ಗೊತ್ತು ನಷ್ಟವಾದ ಶರಣಂಗೆ ತಥ್ಯ ಮಿಥ್ಯಕ್ಕೆ ಸಿಕ್ಕ ಮತ್ತಾವ ಗುಣಂಗಳಲ್ಲಿಯೂ ಹೊರದೃಷ್ಟಕ್ಕೆ ಬಾರ. ಆತ ನಿಶ್ಚಿಂತ ನೋಡಾ ನಿಃಕಳಂಕ ಕೂಡಲ ಚನ್ನಸಂಗಮ ದೇವಾ.

( ೬ ) ಪೃಥ್ವಿಯಲ್ಲಿ ಅಪ್ಪು ಸಾರವಿಲ್ಲದಿರೆ ಬೀಜವ ತಳಿಯ ಲಾಗಿ ಪ್ರತ್ಯಕ್ಷ ಅಂಕುರ ದೃಷ್ಟವಪ್ಪುದೇ? ಶ್ರದ್ಧೆ, ಸನ್ಮಾರ್ಗ, ಭಕ್ತಿ, ವಿಶ್ವಾಸವಿಲ್ಲದಿದ್ದರೆ ಸದ್ಭಕ್ತನಪ್ಪನೇ? ಇಂತೀ ದೃಷ್ಟ ಸಿದ್ಧಾಂತದಿಂದ ತಪ್ಪಿ ಕುಳಿತ ಮತ್ತೆ ದೃಷ್ಟಾಂತವ ನಿದಿರ ಕಯ್ಯಲ್ಲಿ ಕೇಳಲುಂಟೇ? ನುಂಗಬಾರದ ಘೃತ ಉಗಳಬಾರದ ಪ್ರಿಯ ಬಿಡಬಾರದ ಭಕ್ತಿ ವಿಶ್ವಾಸ ವಿಲ್ಲದ ಪೂಜೆ ಘನಸಿಂಧುವಿನಲ್ಲಿ ನಾನಾ ವರ್ಣವ ಕದಡಿದುತಾಯಿತ್ತು. ಇದನಿನ್ನಾರಿಗೆ ಉಸುರುವೆ ನಿಃಕಳಂಕ ಕೂಡಲ ಸಂಗಮದೇವ ನೀನೇ ಬಲ್ಲೆ.

( ೭ ) ಕಂಡ ಚಿತ್ತ ವಸ್ತುವಿನಲ್ಲಿ ಮಗ್ನವಾದ ಮತ್ತೆ ಸಂಸಾರ ವಿಷಯಕ್ಕೆ ಮತ್ತನಪ್ಪುದೇ? ಮತ್ತೆ ಭಕ್ತರ ಗೃಹರಾಜಾಧಾರದ ತಪ್ಪಲ

ಕಾಯುದ್ದದೆ ಆ ಬತ್ತ ತೊಟ್ಟುಬಿಟ್ಟ ಹಣ್ಣು ಕಟ್ಟೆ ಸತ್ತ ಬಿದಿರು ದೃಷ್ಟ ನಷ್ಟವಾದಂಗಕ್ಕೆ ಮತ್ತಪ್ಪುದೇ ? ಪುನರಪಿಯಾಗಿ ಇನು ನಿಶ್ಚಯ ನಿಜರು. ಲಿಂಗಾಂಗ ನಿರ್ಲೇಪನ ಹೊಲ ಪತ್ತೆ ಜಗದ ವೊತ್ತದವನಲ್ಲ. ನಿಃಕಳಂಕ ಕೂಡಲ ಚನ್ನ ಸಂಗಮ ದೇವ ತಾನಾದ ಶರಣ.

( ೮ ) ಗಜಗಮನ ಅಹಿಯ ಶರಸಂಧಾನ ಮಯೂರನ ಶಯನ. ಮಾರ್ಜಾಲನ ಧ್ಯಾನ ಕಂಠೀರವನ ಲಾಗು ಭಕ್ತ ಮೂರ್ತಿಯ ಅನುಸಂಧಾನ, ಅಳಿಂಧ ಭುಂಜನೆ ಮಕ್ಷುಕದ ಘೃತ ನೋಡಾ ! ಮೂಷಕನ ದ್ವಾರ ಭೇದ ಮರಿವಾಸವ್ವೈದುನ ಸಂಚಚೋರನ ಕಾಹು ಪಚಾರಕನ ವೇಳೆ ಸಾಹಿತ್ಯನ ಉಪಮೆ ಸಂಗೀತರ ಸಂಚು, ತಾಳಧಾರಿಯ ಕಳವು ವಾದ್ಯ ಭೇದಕನ ಮುಟ್ಟು ಗಾಣನ ಭಾವಜ್ಞನ ಚಿತ್ತ ಇಂತೀ ನಾನಾ ಗುಣಂಗಳ ಲಕ್ಷಾಲಕ್ಷಿತವಂ ತಿಳಿದು ದೃಷ್ಟ ಅನುಮಾನ ಮುಂತಾದ ನಾನಾ ಭೇದಂಗಳಲ್ಲಿ ವಿಚಾರಿಸಿ ಕಂಡು ನಾನಾರೆಂಬುದನೇಕೆಂದು ತಿಳಿದ ತನಗೂ ಇದಿರಿಂಗೂ ಪಡಿಪುಚ್ಚವಿಲ್ಲದೆ ಸಿಂಧುವಿನೊಳಗಾವ ಸಂಭ್ರಮಂಗಳ ಸಂಚಾರದಂಗವಲ್ಲಿ ಹೋಗಿ ನಿರಂಗವಾದಂತೆ ಅಂಗವಾತ್ಮನ ಸಂಗ ಈ ಯಂಗವೆಂದು ತಿಳಿದು ಆವ ಸ್ಥಲವನಂಗೀಕರಿಸಿದಲ್ಲಿ ಪರಿಪೂರ್ಣನಾಗಿ ಯೆನಹಿದಲ್ಲಿಯೂ ತಲೆವಿಡಿ ಇಲ್ಲದೆ ಏನ ಬಿಟ್ಟಲ್ಲಿಯೂ ಕುಳವಿಡಿ ಇಲ್ಲದೆ ಕರ್ಪೂರ ಮಹಾ ಗಿರಿಯ ಸುಟ್ಟಡೆ ಬಕುಡಿತ ಬೂದಿ ಇಲ್ಲದಂತೆ ಚಿತ್ತ ನಿಶ್ಚಯವಾದ ಸದ್ಭಕ್ತನ ಪರಮ ವಿರಕ್ತನ ಇರವು ಇದು ಎನ್ನೊಡೆಯ ಚನ್ನಬಸವಣ್ಣ ಹೇಳಿದ ತೆರನಿದು ಸಾಧ್ಯ ಮೂವರಿಗಾಯಿತ್ತು. ಅಸಾಧ್ಯವ ಸಂಗತ ನಿಃಕಳಂಕ ಕೂಡಲ ಚನ್ನ ಸಂಗಮ ದೇವರೆಂದವರಿಗೆ ಅಸಾಧ್ಯ ಸಾಧ್ಯವಾಯಿತ್ತು.

# ಹಡಪದಪ್ಪಣ್ಣ

ಹಡಪದಪ್ಪಣ್ಣನು ಬಸವೇಶ್ವರರ ಏಕನಿಷ್ಠ ಸೇವಕನಾಗಿ ಕಲ್ಯಾಣದಲ್ಲಿರುತ್ತಿದ್ದನು. ಹೇಗೆ ಹಡಪದ ರೇಚಯ್ಯನು ಚನ್ನಬಸವೇಶ್ವರನ ಸೇವಕನಾಗಿದ್ದನೋ ಹಾಗೆಯೇ ಹಡಪದಪ್ಪಣ್ಣನು ಬಸವೇಶ್ವರನ ಸ್ವಾಮಿನಿಷ್ಠ ಸೇವಕನಾಗಿದ್ದನು. ಅವನಾದರೂ ಜ್ಞಾನಿಯು- ವಚನಕಾರನೂ ಇದ್ದಾನೆ. ಅವನ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಸ್ವತಂತ್ರವಾಗಿ ಮುದ್ರಣಮಾಡಿದ್ದೇವೆ. ಅವೇ ಮೇರೆಗೆ ಅವನ ಹೆಂಡತಿಯಾದ ಹಡಪದ ಲಿಂಗಮ್ಮನು ಸಹ ವಚನಕಾರಳಿದ್ದಾಳೆ. ಈ ಎರಡೂ ಗ್ರಂಥಗಳು ಹೆಚ್ಚಿನ ತರಗತಿಯವಾಗಿವೆ. ಇದರ ಮೇಲಿಂದ ಬಸವೇಶ್ವರನ ಕಾಲದಲ್ಲಿ ಸಾಮಾನ್ಯ ಊಳಿಗದವರು ಸಹ ಎಷ್ಟು ಜ್ಞಾನಿಗಳಾಗಿದ್ದರೆಂಬುವು ತಿಳಿದುಬರುತ್ತದೆ. ಆದರೆ ಅವರು ಎಂದೂ ತಮ್ಮ ನಿತ್ಯದ ಕಾಯಕವನ್ನು ಬಿಟ್ಟಿರಲಿಲ್ಲ.

ಹಡಪದಪ್ಪಣ್ಣನು ಹಡಪವನ್ನೂ ಪನ್ನೀರ ಗಿಂಡಿಯನ್ನೂ ಹಿಡಿದುಕೊಂಡು ಬಸವೇಶ್ವರನನ್ನು ಓಲೈಸುವ ಕಾರ್ಯ ಮಾಡುತ್ತಿದ್ದನು. ಅವನು ಬಸವೇಶ್ವರನನ್ನು ಬಿಟ್ಟು ಒಂದು ಅರಗಳಿಗೆ ಇರುತ್ತಿದ್ದಿಲ್ಲ. ಬಸವೇಶ್ವರನ ಊಟವಾದಬಳಿಕ ಅವನಿಗೆ ವೀಳೆಯದ ಗಳಿಗೆ ಮಾಡಿ ಕೊಡುವನು. ಪಾದೋದಕದ ಅಗ್ಗವಣಿಯನ್ನು ಅವನ ಹಸ್ತಕ್ಕೆ ನೀಡುವನು. ಅಡಕೆಯನ್ನು ತಂದು ಪುಡಿಮಾಡಿ ಚರಲಿಂಗಕ್ಕೆ ಅರ್ಪಿಸುವನು. ಯಾವಾಗಲೂ ಪ್ರಸಾದ ಭಾವನೆಯುಳ್ಳವನಾಗಿ ಅರ್ಪಣ ಕಾಲದಲ್ಲಿ ಭವಿಗಳು ನೋಡಬಾರದೆಂದು ತನ್ನ ವಸ್ತ್ರವನ್ನು ಬಸವೇಶ್ವರನಿಗೆ ತೆರೆ ಹಿಡಿದು ಯಾರೂ ನೋಡದಂತೆ ಮಾಡುವನು. ಹೀಗೆ ಹಡಪದಪ್ಪಣ್ಣನು ಬಸವೇಶ್ವರನ ಆಚರಣೆಗಳಲ್ಲಿ ಅವನಿಗೆ ಅನುಕೂಲವಾಗಿ ವರ್ತಿಸುತ್ತ ಅವನಿಗೆ ಯಾವಾಗಲೂ ಸಹಾಯಕನಾಗಿ ಇರುತ್ತಿದ್ದನು.

ಪರವಾದಿಗಳು ಹಡಪದಪ್ಪಣ್ಣನ ಈ ರೀತಿಯನ್ನು ನೋಡಿ ಅವನಿಗೋಸ್ಕರ ಅತ್ಯಂತ ಮಾತ್ಸರ್ಯ ಬುದ್ಧಿಯುಳ್ಳವರಾಗಿದ್ದರು. ಅವನಿಗೆ ಯಾವಾಗಲೂ ಪರಿಹಾಸ ಮಾಡುವರು. ಗರುಡನ ಹಬ್ಬವು ನಡೆದಿರುತ್ತದೆ. ಆಗ ನಾಗರನ ಮೆರವಣಿಗೆಯನ್ನು ಮಾಡಿದಂದಯೇ ಸರಿ, ಎಂದು

ಹಾಸ್ಯಮಾಡುವರು. ಅಂದರೆ ಶ್ರೇಷ್ಠ ಸ್ಥಾನದಲ್ಲಿರುವವರ ಮುಂದೆ ಹೀಗೆ ಅಟ್ಟಹಾಸ ಮಾಡಿದರೆ ಅವರಿಗೆ ನಾಶವಾಗುವದೆಂಬ ಹೆದರಿಕೆಹಾಕುವರು. ಇಂಥ ಕ್ಷುಲ್ಲಕ ಸಂಗತಿಗಳನ್ನು ಪರವಾದಿಗಳು ಬಿಜ್ಜಳನಿಗೆ ಹೇಳುತ್ತಅಪ್ಪಣ್ಣನ ವಿರುದ್ಧವಾಗಿ ಅವನ ಮನಸ್ಸನ್ನು ಕಲುಷಿತ ಮಾಡಿದರು. ಒಂದು ದಿವಸ ಬಿಜ್ಜಳನು ಬಸವೇಶ್ವರನಿಗೆ— ನಿಮ್ಮಲ್ಲಿ ಹಡಪದಪ್ಪಣ್ಣನು ಊಳಿಗ ಮಾಡುತ್ತಾನಂತೆ. ಅವನನ್ನು ನಮ್ಮಲ್ಲಿಗೆ ಕಳಿಸು ಎಂದು ತಿಳಿಸಿದನು. ಅದಕ್ಕೆ ಬಸವಣ್ಣನು ನಾನು ಹೇಳಲು ತಕ್ಕವನಲ್ಲ. ನೀವೇ ಬೇಕಾದರೆ ಅವನನ್ನು ಇರಿಸಿಕೊಳ್ಳಿರಿ ಎಂದು ತಿಳಿಸಿದನು. ತನ್ನಲ್ಲಿಗೆ ಬರಲು ಬಿಜ್ಜಳನು ಅವನಿಗೆ ಹೇಳಿ ಕಳಿಸಿದನು. ಇದನ್ನು ಅಪ್ಪಣ್ಣನು ಮನ್ನಿಸಲಿಲ್ಲ.

ಒಂದು ದಿವಸ ಬಿಜ್ಜಳನ ಮನೆಯಲ್ಲಿ ಮದುವೆಯಾಯಿತು. ಆಗ ಮಾಂಡಲಿಕರೂ ರಾಜರೂ ರಾಜಕುಮಾರರೂ ಬಹುಜನರು ಕಲ್ಯಾಣದಲ್ಲಿ ನೆರೆದರು.ಆಗ ಬಿಜ್ಜಳನು ಬಸವೇಶ್ವರನಿಗೆ ಸಕಲ ಸಾಧನಗಳನ್ನು ಅವರೆಲ್ಲರಿಗೆ ಒದಗಿಸಿ ಕೊಡು ಎಂದು ಹೇಳಿದನು. ಮಂತ್ರಿಯಾದವನು ರಾಜನ ಅಪ್ಪಣೆಯನ್ನು ಮನ್ನಿಸಲೇಬೇಕೆಂಬುದು ನೀತಿಯಾಗಿದೆ. ಹಡಪದಪ್ಪಣ್ಣನು ಬಸವೇಶ್ವರನ ಊಳಿಗದವನಾಗಿ ಅವನಿಗೆ ಎಲೆ ಅಡಿಕೆ ಕೊಡುವ ಕಾರ್ಯ ಮಾಡುತ್ತಿದ್ದದರಿಂದ ಬಸವೇಶ್ವರನು ಅವನಿಗೆ ಈ ಕಾರ್ಯವನ್ನು ನೆರೆದ ಅತಿಥಿಗಳಿಗೆ ಮಾಡೆಂದು ಅಜ್ಞಾಪಿಸಿದನು. ಆದರೆ ಅಪ್ಪಣ್ಣನು ಬಸವೇಶ್ವರನ ಸನ್ನಿಧಿಯನ್ನು ಎಂದೂ ತಪ್ಪಿಸಬಾರದೆಂದು ಅವನ ನೇಮವಾಗಿತ್ತು. ಆದ್ದರಿಂದ ಅವನು ತನ್ನ ಶಿರವನ್ನು ಕತ್ತರಿಸಿ ಅದನ್ನು ಬಸವೇಶ್ವರನಲ್ಲಿ ಸೇವೆ ಮಾಡಲಿಕ್ಕೆ ಇಟ್ಟನು. ಮತ್ತು ತನ್ನ ಧಡವನ್ನು ಮಾಂಡಲಿಕರ ಸೇವೆ ಮಾಡಲಿಕ್ಕೆ ಹಚ್ಚಿದನು. ಆ ಧಡವು ಅಡಿಕೆಯನ್ನೊಡೆದು ರಾಶಿಯನ್ನು ಮಾಡಿ ಬಂದ ಅತಿಥಿಗಳಿಗೆ ಎಲೆ ಅಡಿಕೆ ಕೊಡುವ ಕಾರ್ಯ ಮಾಡಹತ್ತಿತು. ಈ ಕೆಲಸ ಮುಗಿದಬಳಿಕ ಶಿರವನ್ನು ಧಡಕ್ಕೆ ಹತ್ತಿಸಿ ತಮ್ಮ ಅಪ್ಪಣೆಯಂತೆ ಅತಿಥಿಗಳ ಸೇವೆ ಮಾಡಿದೆನೆಂದು ಹಡಪದಪ್ಪಣ್ಣನು ಬಸವೇಶ್ವರನಿಗೆ ಕೈಮುಗಿದನು. ಅದನ್ನು ಬಿಜ್ಜಳನು ನೋಡಿ ಆಶ್ಚರ್ಯ ಚಕಿತನಾಗಿ ಹಡಪದಪ್ಪಣ್ಣನ ಮಹಿಮೆಯನ್ನು ಹೊಗಳುವವನಾದನು.

ಆದರೆ ಓಲಗದಲ್ಲಿ ಬಸವೇಶ್ವರನ ವಿರೋಧಿಗಳು ಅನೇಕರಿದ್ದು ಅವರು ಬಸವೇಶ್ವರನು ಇಂದ್ರಜಾಲ ಮಹೇಂದ್ರಜಾಲ ಸಾಧಿಸಿದ್ದಾನೆ.

# ಹಡಪದಪ್ಪಣ್ಣ

ಹಡಪದಪ್ಪಣ್ಣನು ಬಸವೇಶ್ವರರ ಏಕನಿಷ್ಠ ಸೇವಕನಾಗಿ ಕಲ್ಯಾಣದಲ್ಲಿರುತ್ತಿದ್ದನು. ಹೇಗೆ ಹಡಪದ ರೇಚಯ್ಯನು ಚನ್ನಬಸವೇಶ್ವರನ ಸೇವಕನಾಗಿದ್ದನೋ ಹಾಗೆಯೇ ಹಡಪದಪ್ಪಣ್ಣನು ಬಸವೇಶ್ವರನ ಸ್ವಾಮಿನಿಷ್ಠ ಸೇವಕನಾಗಿದ್ದನು. ಅವನಾದರೂ ಜ್ಞಾನಿಯು- ವಚನಕಾರನೂ ಇದ್ದಾನೆ. ಅವನ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲಿಕೆಯಲ್ಲಿ ಸ್ವತಂತ್ರವಾಗಿ ಮುದ್ರಣಮಾಡಿದ್ದೇವೆ. ಅದೇ ಮೇರೆಗೆ ಅವನ ಹೆಂಡತಿಯಾದ ಹಡಪದ ಲಿಂಗಮ್ಮನು ಸಹ ವಚನಕಾರಳಿದ್ದಾಳೆ. ಈ ಎರಡೂ ಗ್ರಂಥಗಳು ಹೆಚ್ಚಿನ ತರಗತಿಯವಾಗಿವೆ. ಇದರ ಮೇಲಿಂದ ಬಸವೇಶ್ವರನ ಕಾಲದಲ್ಲಿ ಸಾಮಾನ್ಯ ಊಳಿಗದವರು ಸಹ ಎಷ್ಟು ಜ್ಞಾನಿಗಳಾಗಿದ್ದರೆಂಬುದು ತಿಳಿದುಬರುತ್ತದೆ. ಆದರೆ ಅವರು ಎಂದೂ ತಮ್ಮ ನಿತ್ಯದ ಕಾಯಕವನ್ನು ಬಿಟ್ಟಿರಲಿಲ್ಲ.

ಹಡಪದಪ್ಪಣ್ಣನು ಹಡಪವನ್ನೂ ಪನ್ನೀರ ಗಿಂಡಿಯನ್ನೂ ಹಿಡಿದುಕೊಂಡು ಬಸವೇಶ್ವರನನ್ನು ಓಲೈಸುವ ಕಾರ್ಯ ಮಾಡುತ್ತಿದ್ದನು. ಅವನು ಬಸವೇಶ್ವರನನ್ನು ಬಿಟ್ಟು ಒಂದು ಅರಗಳಿಗೆ ಇರುತ್ತಿದ್ದಿಲ್ಲ. ಬಸವೇಶ್ವರನ ಊಟವಾದಬಳಿಕ ಅವನಿಗೆ ವೀಳೆಯದ ಗಳಿಗೆ ಮಾಡಿ ಕೊಡುವನು. ಪಾದೋದಕದ ಅಗ್ಗವಣಿಯನ್ನು ಅವನ ಹಸ್ತಕ್ಕೆ ನೀಡುವನ. ಅಡಕೆಯನ್ನು ತಂದು ಪುಡಿಮಾಡಿ ಚರಲಿಂಗಕ್ಕೆ ಅರ್ಪಿಸುವನು. ಯಾವಾಗಲೂ ಪ್ರಸಾದ ಭಾವನೆಯುಳ್ಳವನಾಗಿ ಅರ್ಪಣ ಕಾಲದಲ್ಲಿ ಭವಿಗಳು ನೋಡಬಾರದೆಂದು ತನ್ನ ವಸ್ತ್ರವನ್ನು ಬಸವೇಶ್ವರನಿಗೆ ತೆರೆ ಹಿಡಿದು ಯಾರೂ ನೋಡದಂತೆ ಮಾಡುವನು. ಹೀಗೆ ಹಡಪದಪ್ಪಣ್ಣನು ಬಸವೇಶ್ವರನ ಆಚರಣೆಗಳಲ್ಲಿ ಅವನಿಗೆ ಅನುಕೂಲವಾಗಿ ವರ್ತಿಸುತ್ತ ಅವನಿಗೆ ಯಾವಾಗಲೂ ಸಹಾಯಕನಾಗಿ ಇರುತ್ತಿದ್ದನು.

ಪರವಾದಿಗಳು ಹಡಪದಪ್ಪಣ್ಣನ ಈ ರೀತಿಯನ್ನು ನೋಡಿ ಅವನಿಗೋಸ್ಕರ ಅತ್ಯಂತ ಮಾತ್ಸರ್ಯ ಬುದ್ಧಿಯುಳ್ಳವರಾಗಿದ್ದರು. ಅವನಿಗೆ ಯಾವಾಗಲೂ ಪರಿಹಾಸ ಮಾಡುವರು. ಗರುಡನ ಹಬ್ಬವು ನಡೆದಿರುತ್ತದೆ. ಆಗ ನಾಗರನ ಮೆರವಣಿಗೆಯನ್ನು ಮಾಡಿದಂದಯೇ ಸರಿ, ಎಂದು

ಹಾಸ್ಯಮಾಡುವರು. ಅಂದರೆ ಶ್ರೇಷ್ಠ ಸ್ಥಾನದಲ್ಲಿರುವವರ ಮುಂದೆ ಹೀಗೆ ಅಟ್ಟಹಾಸ ಮಾಡಿದರೆ ಅವರಿಗೆ ನಾಶವಾಗುವದೆಂಬ ಹೆದರಿಕೆಹಾಕುವರು. ಇಂಥ ಕ್ಷುಲ್ಲಕ ಸಂಗತಿಗಳನ್ನು ಪರವಾದಿಗಳು ಬಿಜ್ಜಳನಿಗೆ ಹೇಳುತ್ತಅಪ್ಪಣ್ಣನ ವಿರುದ್ಧವಾಗಿ ಅವನ ಮನಸ್ಸನ್ನು ಕಲುಷಿತ ಮಾಡಿದರು. ಒಂದು ದಿವಸ ಬಿಜ್ಜಳನು ಬಸವೇಶ್ವರನಿಗೆ— ನಿಮ್ಮಲ್ಲಿ ಹಡಪದಪ್ಪಣ್ಣನು ಊಳಿಗ ಮಾಡುತ್ತಾನಂತೆ. ಅವನನ್ನು ನಮ್ಮಲ್ಲಿಗೆ ಕಳಿಸು ಎಂದು ತಿಳಿಸಿದನು. ಅದಕ್ಕೆ ಬಸವಣ್ಣನು ನಾನು ಹೇಳಲು ತಕ್ಕವನಲ್ಲ. ನೀವೇ ಬೇಕಾದರೆ ಅವನನ್ನು ಇಟ್ಟುಕೊಳ್ಳಿರಿ ಎಂದು ತಿಳಿಸಿದನು. ತನ್ನಲ್ಲಿಗೆ ಬರಲು ಬಿಜ್ಜಳನು ಅವನಿಗೆ ಹೇಳಿ ಕಳಿಸಿದನು. ಇದನ್ನು ಅಪ್ಪಣ್ಣನು ಮನ್ನಿಸಲಿಲ್ಲ.

ಒಂದು ದಿವಸ ಬಿಜ್ಜಳನ ಮನೆಯಲ್ಲಿ ಮದುವೆಯಾಯಿತು. ಆಗ ಮಾಂಡಲಿಕರೂ ರಾಜರೂ ರಾಜಕುಮಾರರೂ ಬಹುಜನರು ಕಲ್ಯಾಣದಲ್ಲಿ ಸೇರಿದರು. ಆಗ ಬಿಜ್ಜಳನು ಬಸವೇಶ್ವರನಿಗೆ ಸಕಲ ಸಾಧನಗಳನ್ನು ಅವರೆಲ್ಲರಿಗೆ ಒದಗಿಸಿ ಕೊಡು ಎಂದು ಹೇಳಿದನು. ಮಂತ್ರಿಯಾದವನು ರಾಜನ ಅಪ್ಪಣೆಯನ್ನು ಮನ್ನಿಸಲೇಬೇಕೆಂಬುದು ನೀತಿಯಾಗಿದೆ. ಹಡಪದಪ್ಪಣ್ಣನು ಬಸವೇಶ್ವರನ ಊಳಿಗದವನಾಗಿ ಅವನಿಗೆ ಎಲೆ ಅಡಿಕೆ ಕೊಡುವ ಕಾರ್ಯ ಮಾಡುತ್ತಿದ್ದದರಿಂದ ಬಸವೇಶ್ವರನು ಅವನಿಗೆ ಈ ಕಾರ್ಯವನ್ನು ನೆರೆದ ಅತಿಥಿಗಳಿಗೆ ಮಾಡೆಂದು ಆಜ್ಞಾಪಿಸಿದನು. ಆದರೆ ಅಪ್ಪಣ್ಣನು ಬಸವೇಶ್ವರನ ಸನ್ನಿಧಿಯನ್ನು ಎಂದೂ ತಪ್ಪಿಸಬಾರದೆಂದು ಅವನ ನೇಮವಾಗಿತ್ತು. ಆದ್ದರಿಂದ ಅವನು ತನ್ನ ಶಿರವನ್ನು ಕತ್ತರಿಸಿ ಅದನ್ನು ಬಸವೇಶ್ವರನಲ್ಲಿ ಸೇವೆ ಮಾಡಲಿಕ್ಕೆ ಇಟ್ಟನು. ಮತ್ತು ತನ್ನ ಧಡವನ್ನು ಮಾಂಡಲಿಕರ ಸೇವೆ ಮಾಡಲಿಕ್ಕೆ ಹಚ್ಚಿದನು. ಆ ಧಡವು ಅಡಿಕೆಯನ್ನೊಡೆದು ರಾಶಿಯನ್ನು ಮಾಡಿ ಬಂದ ಅತಿಥಿಗಳಿಗೆ ಎಲೆ ಅಡಿಕೆ ಕೊಡುವ ಕಾರ್ಯ ಮಾಡಹತ್ತಿತು. ಈ ಕೆಲಸ ಮುಗಿದಬಳಿಕ ಶಿರವನ್ನು ಧಡಕ್ಕೆ ಹತ್ತಿಸಿ ತಮ್ಮ ಅಪ್ಪಣೆಯಂತೆ ಅತಿಥಿಗಳ ಸೇವೆ ಮಾಡಿದೆನೆಂದು ಹಡಪದಪ್ಪಣ್ಣನು ಬಸವೇಶ್ವರನಿಗೆ ಕೈಮುಗಿದನು. ಅದನ್ನು ಬಿಜ್ಜಳನು ನೋಡಿ ಆಶ್ಚರ್ಯಚಕಿತನಾಗಿ ಹಡಪದಪ್ಪಣ್ಣನ ಮಹಿಮೆಯನ್ನು ಹೊಗಳುವವನಾದನು.

ಆದರೆ ಓಲಗದಲ್ಲಿ ಬಸವೇಶ್ವರನ ವಿರೋಧಿಗಳು ಅನೇಕರಿದ್ದು ಅವರು ಬಸವೇಶ್ವರನು ಇಂದ್ರಜಾಲ ಮಹೇಂದ್ರಜಾಲ ಸಾಧಿಸಿದ್ದಾನೆ.

ಅವನು ಸಿದ್ಧಿಗಳನ್ನು ಸಾಧಿಸಿದವನು. ಆದ್ದರಿಂದ ಅವನು ಹೀಗೆ ಮಾಡು ವದು ಮಹತ್ವದ್ದಲ್ಲ. ಆದರೆ ಹಡಪದಪ್ಪಣ್ಣನು ವಿಷ್ಣುವು ಹೇಗೆ ಗೋಕುಲ ವನ್ನು ಎತ್ತಿ ಹಿಡಿದನೋ ಹಾಗೆ ಎತ್ತಿ ಹಿಡಿದರೆ ನಾವು ಅವನು ಮಹಿ ಮನೆಂಧು ತಿಳಿಯುವೆವು ಎಂದು ನುಡಿಯಲಾಗಿ ಹಡಪದಪ್ಪಣ್ಣನು ಹಾಗೆಯೇ ಆಗಲೆಂದು ತನ್ನ ಹೆಬ್ಬೆರಳಿನ ಮೇಲೆ ಒಂದು ವಿಸ್ತಾರವಾದ ಪರ್ವತವನ್ನು ಎತ್ತಿ ಹಿಡಿದನು. ಹೀಗೆ ಮಾಡಲು ೧೨ ಗಾವುದ ವಿಸ್ತಾರ ವಾಗಿ ಜನರಿಗೆ ಸೂರ್ಯ ದರ್ಶನವಾಗಲಿಲ್ಲ. ಆಗ ಬಿಜ್ಜಳನು ಈ ಪರ್ವ ತವು ಅವನ ಬೆರಳಿನ ಕೊನೆಯಮೇಲೆ ನಿಂತಿದೆ, ಅದನ್ನು ಅವನು ಬಿಟ್ಟರೆ ಜನರೆಲ್ಲ ನಾಶವಾಗುವರು, ಅದನ್ನು ಅವನು ಅದರ ಸ್ಥಳದಲ್ಲಿ ಇರಿಸ ಬೇಕೆಂದು ಬಿಜ್ಜಳನು ಬಸವಣ್ಣನಿಗೆ ಹೇಳಿಕೊಳ್ಳಲಾಗಿ ಅಪ್ಪಣ್ಣರು ಹಾಗೆಯೇ ಮಾಡಿದನು. ಆದರೆ ಹಾಗೆ ಮಾಡುವ ಪೂರ್ವದಲ್ಲಿ ಹಡಪದಪ್ಪಣ್ಣನು ಆ ಬೆಟ್ಟವನ್ನು ಒತ್ತಿ ನುಚ್ಚು ಮಾಡಿ ಉಫ್ ಎಂದು ಊದಲು ಅದು ಧೂಳಿಯಾಗಿ ಹಾರಿಹೋಯಿತು. ಅದನ್ನು ಭಕ್ತರು ಕಂಡು ಹಡಪ ದಪ್ಪಣ್ಣನು ಮಹಿಮನೆಂದು ಅವನನ್ನು ಕೊಂಡಾಡಿದರು. ಹೀಗೆ ಹಡಪ ದಪ್ಪಣ್ಣನು ಅನೇಕ ಮಹಿಮೆಗಳನ್ನೂ ಪವಾಡಗಳನ್ನೂ ಕಲ್ಯಾಣದಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿ ಮಾಡುತ್ತ ಶರಣರಲ್ಲಿ ಬಹಳ ಪ್ರಸಿದ್ಧ ನಾದನು.

ಹಡಪದಪ್ಪಣ್ಣನ ಗುರುವು ಚನ್ನ ಮಲ್ಲೇಶ್ವರನು. ಹೀಗೆ ಅವನು ತನ್ನ ವಚನಗಳಲ್ಲಿಯೇ ಹೇಳಿಕೊಂಡಿದ್ದಾನೆ. ಈ ಚನ್ನಮಲ್ಲೇಶ್ವರನು ಯಾರೆಂಬುದು ನಮಗೆ ತಿಳಿದಿಲ್ಲ. ಅವನಿಂದಲೇ ಹಡಪದಪ್ಪಣ್ಣನು ದೀಕ್ಷೆಯನ್ನು ಹೊಂದಿದ್ದಾನೆ.

“ಬಸವ ಪ್ರಿಯ ಕೂಡಲ ಚನ್ನ ಸಂಗಮದೇವಾ” ಎಂಬುದು ಅವನ ವಚನಗಳ ಮುದ್ರಿಕೆಯಾಗಿದೆ. ಈ ಮುದ್ರಿಕೆಯನ್ನು ಇಟ್ಟುಕೊಂಡು ಅವನು ಅನೇಕ ವಚನಗಳನ್ನು ರಚಿಸಿದ್ದಾನೆ.

ಈ ಪ್ರಕಾರ ಹಡಪದಪ್ಪಣ್ಣನು ಬಸವೇಶ್ವರನ ಊಳಿಗವನ್ನು ಮಾಡುತ್ತ ಕಲ್ಯಾಣದಲ್ಲಿರುತ್ತಿರಲು ಹರಳಯ್ಯ ಮಧುವರಸರ ವಧೆಯಾಯಿತು. ವಧೆಯಾದ್ದರಿಂದ ಅನೇಕ ಅನಾಹುತಗಳಾದವು. ಆಗ ಬಸವೇಶ್ವರನು ಇನ್ನುಮೇಲೆ ನಾನು ಕಲ್ಯಾಣದಲ್ಲಿರಲಾರೆನೆಂದು ಕೂಡಲಸಂಗಮ ಕ್ಷೇತ್ರಕ್ಕೆ

ಹೊರಟನು. ಅವನ ಕೂಡ ಹಡಪದಪ್ಪಣ್ಣನೂ ಇದ್ದನು. ಅವನನು ಬಿಟ್ಟು ಅವನು ಎಂದೂ ಇರುತ್ತಿದ್ದಿಲ್ಲ. ಬಸವೇಶ್ವರನು ಕೂಡಲಸಂಗ ಮಕ್ಕೆ ಬಂದಬಳಿಕ ಅವನು ತನ್ನ ಹೆಂಡತಿ ನೀಲಾಂಬಿಕೆಯು ಕಲ್ಯಾಣ ದಲ್ಲಿ ಇದ್ದಾಳೆ, ಅವಳನ್ನು ಕರೆದುಕೊಂಡು ಬರಬೇಕೆಂದು ಹೇಳಿ ಕಳು ಹಿದನು. ಆ ಪ್ರಕಾರ ಹಡಪದಪ್ಪಣ್ಣನು ಅವಳನ್ನು ಕರೆದುಕೊಂಡು ಕೃಷ್ಣಾ ನದಿಯ ದಂಡೆಯಮೇಲಿರುವ ತಂಗಡಿಗೆಗೆ ಬಂದನು. ಅಲ್ಲಿ ಅವರು ಬರುವಷ್ಟರಲ್ಲಿ ಬಸವೇಶ್ವರನು ಕೂಡಲ ಸಂಗಮೇಶ್ವರನಲ್ಲಿ ಐಕ್ಯ ನಾಗಿದ್ದನು. ಈ ಸುದ್ದಿಯು ಬಂದಕೂಡಲೆ ನೀಲಾಂಬಿಕೆಯು ತನ್ನ ಲಿಂಗ ದಲ್ಲಿ ಮತ್ತು ಹಡಪದಪ್ಪಣ್ಣನು ತನ್ನ ಲಿಂಗದಲ್ಲಿ ಬಯಲಾದರು. ಈ ಉಭಯತರು ಬಸವೇಶ್ವರನಿಗೆ ಪ್ರಾಣಪ್ರಿಯರು. ಅವರ ಜೀವ ಮತ್ತು ಬಸವೇಶ್ವರನ ಜೀವ ಒಂದೇ ಇದ್ದಹಾಗೆ ಅವರು ಆಚರಿಸುತ್ತಿದ್ದರು. ಈ ಉಭಯತರ ಸಮಾಧಿಗಳು ತಂಗಡಿಗಿ ಗ್ರಾಮದ ಬದಿಯಲ್ಲಿಯೇ ನದೀ ತೀರದಲ್ಲಿ ಇವೆ. ಅವುಗಳ ಮೇಲೆ ದೇವಾಲಯಗಳಿವೆ. ಪೂರ್ವಕಡೆಯ ದೇವಾಲಯವು ನೀಲಾಂಬಿಕೆಯದು. ಮತ್ತು ಪಶ್ಚಿಮಕಡೆಯ ದೇವಾ ಲಯವು ಹಡಪದಪ್ಪಣ್ಣನದು ಇದೆ. ಬಸವೇಶ್ವರನು ಸಾಮರಸ್ಯವನ್ನು ಹೊಂದುವ ಪೂರ್ವದಲ್ಲಿ ಹಡಪದಪ್ಪಣ್ಣನನ್ನು ಬರಮಾಡಿಕೊಂಡನೆಂಬ ಬಗ್ಗೆ ಉಲ್ಲೇಖಗಳು ಗ್ರಂಥಗಳಲ್ಲಿ ದೊರೆಯುತ್ತಿವೆ. ಹಾಗೆಯೇ ಅವ ನೊಡನೆ ನೀಲಾಂಬಿಕೆಯೂ ಬಂದಿದ್ದರ ಉಲ್ಲೇಖಗಳೂ ಇವೆ. ಆದ್ದರಿಂದ ಅವರ ಅಂತ್ಯವು ಕಲ್ಯಾಣದಲ್ಲಾಗದೆ ಕೃಷ್ಣಾ ತಟಾಕದಲ್ಲಿ ಕೂಡಲ ಸಂಗಮೇಶ್ವರ ದೇವಾಲಯಕ್ಕೆ ಸಮೀಪವಾಗಿ ೩ ಮೈಲುಗಳ ಮೇಲಿರುವ ತಂಗಡಿಗೆಯಲ್ಲಿ ಆಗಿದ್ದು ವಿಶ್ವಾಸಾರ್ಹವಾಗಿದೆ. ಈ ಉಭಯತರ ಹೆಸರಿ ನಿಂದ ಅಲ್ಲಿ ಆದ ದೇವಾಲಯಗಳು ನದಿಯ ವಿಶಾಲವಾದ ತಟಾಕದಲ್ಲಿ ಈಗ್ಗೆಯೂ ಕಂಗೊಳಿಸುತ್ತವೆ. ಅವು ಇದ್ದ ಸ್ಥಾನವು ಪುಣ್ಯ ಕ್ಷೇತ್ರವೆಂದು ಈಗಲೂ ಭಾವಿಸಲ್ಪಟ್ಟಿದೆ.

---

# ಲಿಂಗಮ್ಮನು.

ಹಡಪದಪ್ಪಣ್ಣನ ಹೆಂಡತಿಯು ಲಿಂಗಮ್ಮನು. ಆಕೆಯ ಗುರುವು ಚನ್ನಮಲ್ಲೇಶ್ವರನು. ಆದ್ದರಿಂದ ಸತಿಪತಿಗಳ ಗುರುವು ಒಬ್ಬನೇ ಇದ್ದಾನೆ. ಈತನನ್ನು ಕುರಿತು ಲಿಂಗಮ್ಮನು ತನ್ನ ವಚನಗಳಲ್ಲಿ ಅನೇಕ ಸಲ ಉಲ್ಲೇಖಿಸಿದ್ದಾಳೆ. ಅವಳ ವಚನಗಳ ಮುದ್ರಿಕೆಯು 'ಅಪ್ಪಣ್ಣಪ್ರಿಯ ಚನ್ನಬಸವೇಶ್ವರಾ' ಎಂದಿದೆ. ಅವಳು ತನ್ನ ಗಂಡನಾದ ಹಡಪದಪ್ಪಣ್ಣನು ತನಗೆ ಸಿಂಹಾಸನ ಅಂದರೆ ಆಧಾರವಾಗಿದ್ದಾನೆ, ಗುರುವಾದ ಚನ್ನಮಲ್ಲೇಶನು ಮನಸ್ಥಲಕ್ಕೆ ಪ್ರಾಣವಾಗಿದ್ದಾನೆ ಮತ್ತು ತಾನು ಚನ್ನಬಸವನ ಕರುಣದ ಶಿಶು ಎಂದು ಹೇಳಿಕೊಂಡಿದ್ದಾಳೆ. ಬಸವಾದಿಪ್ರಮಥರ ಕಾಲದಲ್ಲಿ ಪುರುಷರು ತಾವಷ್ಟೇ ಜ್ಞಾನಿಗಳಾಗಿರದೆ ತಮ್ಮ ಸತಿಯರೂ ಕೂಡ ಜ್ಞಾನಿಗಳಾಗಿರಲು ಅವರು ಉತ್ತೇಜನ ಕೊಡುತ್ತಿದ್ದುದು ಕಂಡುಬರುತ್ತದೆ. ಆದ್ದರಿಂದ ಶಿವಶರಣರು ಹೇಗೆ ವಚನಕಾರರಾಗಿರುವರೋ, ಹಾಗೆಯೇ ಅವರ ಪತ್ನಿಗಳೂ ವಚನಕಾರರಾಗಿರುವದನ್ನು ನಾವು ನೋಡುತ್ತೇವೆ. ಆದರೆ ಆ ವಚನಕಾರ್ತಿಯರಲ್ಲಿ ಹಡಪದ ಲಿಂಗಮ್ಮನು ಅತ್ಯುಚ್ಚಸ್ಥಾನವನ್ನು ಪಡೆದವಳಿದ್ದಾಳೆ. ಅವಳ ವಚನಗಳು ಮಿಗಿಲಾದವುಗಳು. ಮತ್ತು ಅವೆಲ್ಲವು ಒಂದು ವಿಶಿಷ್ಟತರದ ಭಾವವುಳ್ಳವು ಇರುತ್ತವೆ. ಅವು ಐಹಿಕವಾದುದರ ಆಚೆಗೆ ಇರುವ ಸ್ಥಿತಿಯನ್ನು ಬಹು ಸ್ಪಷ್ಟವಾಗಿ ವಿವರಿಸುತ್ತವೆ. ಅವುಗಳಲ್ಲಿ ಭಾವಲಿಂಗ ಅಥವಾ ನಿಃವಳು ಅಥವಾ ಬೇರು ಇವುಗಳ ವಿವೇಚನೆ ಮತ್ತು ಈ ಸ್ಥಿತಿಯುಂಟಾಗಲು ಮನುಷ್ಯನು ಹೇಗೆ ವರ್ತಿಸಬೇಕು ಎಂಬುದರ ವಿಚಾರಗಳನ್ನು ಆಕೆಯು ತನ್ನ ವಚನಗಳಲ್ಲಿ ಬಹು ಸ್ಫುಟವಾಗಿ ವಿವರಿಸುತ್ತಾಳೆ. ವಚನ ವಾಙ್ಮಯದಲ್ಲಿ ಲಿಂಗಮ್ಮನ ವಚನಗಳು ಅಲೌಕಿಕವಾದವುಗಳು. ಲಿಂಗಮ್ಮನು ತನ್ನ ಜೀವಿತದ ಕಾಲವನ್ನು ಹೇಗೆ ಕಳೆದಳು ಮತ್ತು ಅವಳು ಯಾವ ಯಾವ ಕಾರ್ಯಮಾಡಿದಳು ಎಂಬುದು ಇನ್ನೂ ನಮಗೆ ಗೊತ್ತಾಗಿರುವದಿಲ್ಲ. ಆಕೆಯ ವಚನಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ.

---

## ಪಡಿಹಾರಿಉತ್ತಣ್ಣ.

ಪಡಿಹಾರಿ ಉತ್ತಣ್ಣನು ಬಸವೇಶ್ವರನಿಗೆ ಒಬ್ಬ ಸ್ವಾಮಿನಿಷ್ಠಸೇವಕನಾಗಿದ್ದನು. ಅವನು ಬಸವೇಶ್ವರನಿಗೆ ದ್ವಾರಪಾಲಕನಾಗಿಯೂ ಕೂಡ ಕೆಲಸ ಮಾಡುತ್ತಿದ್ದನು. ಅವನಂಥ ನಂಬಿಗಸ್ಥ ಸೇವಕನು ದೊರೆಯುವದು ದುಸ್ತರವೆಂಬ ತಿಳಿವಳಿಕೆಯು ಬಸವೇಶ್ವರನ ಕಾಲದಲ್ಲಿ ಎಲ್ಲರಲ್ಲಿ ಉಂಟಾಗಿತ್ತು. ಬಸವೇಶ್ವರನು ತನ್ನ ಆಜ್ಞೆಗಳನ್ನು ಆಗಿಂದಾಗ್ಗೆ ಜನರಲ್ಲಿ ಹೊರಪಡಿಸಬೇಕಾಗುತ್ತಿತ್ತು. ಆಗ ಅವನು ಪಡಿಹಾರಿ ಉತ್ತಣ್ಣನ ಮೂಲಕ ಅವುಗಳ ಬಗ್ಗೆ ಡಂಗುರಹೊಡಿಸುವನು. ಇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಮಾದರೀ ಸೇವಕನಾಗಿದ್ದಾನೆ.

---

## ಕೊಂಡೇಮಂಚಣ್ಣ.

ಕೊಂಡೇಮಂಚಣ್ಣನು ಬಸವೇಶ್ವರನ ಬಗ್ಗೆ ಸುಳ್ಳು ಆರೋಪಗಳನ್ನು ಹೊರಿಸುವವನೆಂದು ವೀರಶೈವರಲ್ಲಿ ಪ್ರಸಿದ್ಧನಾಗಿದ್ದಾನೆ. ಬಸವೇಶ್ವರನ ವರ್ತನೆಯಲ್ಲಿ ಸ್ವಲ್ಪ ವ್ಯತ್ಯಾಸ ತೋರಿದ ಕೂಡಲೆ ಅವನು ಅದನ್ನು ಮಾರ್ಪಡಿಸಿ ಬಿಜ್ಜಳನಲ್ಲಿ ತಪ್ಪು ಗ್ರಹಿಕೆಗಳಾಗುವಂತೆ ಅವನಿಗೆ ಹೇಳುವನು ಮತ್ತು ಜನರಲ್ಲಿ ಸುದ್ದಿಗಳನ್ನು ಹರಡುವನು. ಆದರೆ ನಿಜಸ್ಥಿತಿಯು ಹೀಗಿರದೆ ಅವನ ಮೂಲಕವೇ ಬಸವೇಶ್ವರನು ಪ್ರಸಿದ್ಧಿಗೆ ಬಂದನೆಂದು ಕೆಲವು ಗ್ರಂಥಕಾರರ ಅಭಿಪ್ರಾಯವಿದೆ. ಇದಕ್ಕನುಸರಿಸಿ ಕೆಲವು ದಂತಕಥೆಗಳೂ ಉಂಟು.

ಶಿವನ ಒಡ್ಡೋಲಗದಲ್ಲಿ ನಾರದನು ಇದ್ದಾಗ್ಗೆ ಶಿವನು ಅವನಿಗೆ— ನೀನು ಭೂಮಿಯಲ್ಲಿ ಅವತರಿಸಿ ಕೊಂಡೇಮಂಚಣ್ಣನಾಗಿ ಹುಟ್ಟಿ ಬಸವೇಶ್ವರನಿಗೆ ಸಹಾಯಕನಾಗಿ ಕಾರ್ಯಮಾಡಲು ತಿಳಿಸಿದನು. ಆ ಪ್ರಕಾರ ಅವನು ಭೂಮಿಯಲ್ಲಿ ಅವತರಿಸಿ ಬಿಜ್ಜಳನಿಗೆ ನಿಯೋಗಿಯಾದನು. ಅವನು ಬಸವೇಶ್ವರನ ತಪ್ಪುಗಳನ್ನು ಹುಡುಕುವದರಲ್ಲಿಯೇ ಕಾಲಕಳೆಯುತ್ತಿದ್ದನು. ಅವು ಬಿಜ್ಜಳನ ದೃಷ್ಟಿಗೆ ಬೀಳಲಾಗಿ ಬಸವೇಶ್ವರನು ತನ್ನ ಮತ್ತು ಶಿವರಣರ ಸಮರ್ಥನೆ ಮಾಡಿ ಬಿಜ್ಜಳನಿಗೆ ನಿಜಸ್ಥಿತಿಯನ್ನು ಅರುಹಿಕೊಡು

ವನು. ಅವನು ಹೀಗೆ ಹೇಳಿ ಕೊಟ್ಟಬಳಿಕ ಬಿಜ್ಜಳನು ಶಿವಶರಣರಿಗೆ ಪ್ರೀತನಾಗಿ ಅವರನ್ನು ಮತ್ತಿಷ್ಟು ಹೆಚ್ಚು ಸನ್ಮಾನಿಸುವನು. ಹೀಗೆ ಒಂದು ರೀತಿಯಿಂದ ಮಂಚಣ್ಣನ ಮೂಲಕ ಬಸವೇಶ್ವರನ ಖ್ಯಾತಿಯು ನಾಡಿನಲ್ಲಿ ಬೆಳೆಯುತ್ತಲೇ ಬಂದಿತು. ಮಡಿವಾಳಮಾಚಿದೇವನು ಆನೆಯನ್ನು ಕೊಂದದ್ದು ಕಿನ್ನರೀಬ್ರಹ್ಮಯ್ಯನು ವಿಟನನ್ನು ಹೊಡೆದು ಕೊಂದುಹಾಕಿದ್ದು, ಗುಪ್ತ ಮಂಚಣ್ಣನನ್ನು ಬಸವೇಶ್ವರಾದಿಗಳು ಕೊಂದರೆಂದು ಹೇಳಿದ್ದು ಹೀಗೆ ಅನೇಕ ಆರೋಪಗಳು ಬಿಜ್ಜಳನ ಮುಂದೆ ಬರಲು ಬಸವನೂ ಶಿವಶರಣರೂ ನಿಜಸ್ಥಿತಿಯನ್ನು ಅವನಿಗೆ ಅರುಹಿ ತಮ್ಮ ನಡೆಯನ್ನು ಸಮರ್ಥಿಸಿ ಕೊಳ್ಳುವರು. ಇದರಿಂದ ಕೊಂಡೇಮಂಚಣ್ಣನ ಕಾರ್ಯಗಳು ಕಡೆಗೆ ಶಿವ ಶರಣರಿಗೆ ಅನುಕೂಲವಾಗಿಯೇ ಪರಿಣಮಿಸುವವು.

ಆದರೆ ಕೊಂಡೇಮಂಚಣ್ಣನು ಬಸವೇಶ್ವರನಿಗೋಸ್ಕರ ಗುಪ್ತಭಕ್ತಿ ಯುಳ್ಳವನಾಗಿದ್ದನೆಂದು ಆಖ್ಯಾಯಿಕೆಗಳು ಇವೆ. ಹಾಗೆ ಗ್ರಂಥಗಳಲ್ಲಿ ಉಲ್ಲೇಖಗಳೂ ಇವೆ. ಇವನು ಗುಪ್ತವಾಗಿ ೧೨ ಸಾವಿರ ಜಂಗಮರಿಗೆ ಊಟಹಾಕುತ್ತಿದ್ದನೆಂಬ ಉಲ್ಲೇಖಗಳಿವೆ ಅವನು ಹೀಗಿದ್ದುದು ನಿಜವಿರ ಬಹುದು. ಯಾಕೆಂದರೆ ಬಿಜ್ಜಳನಿಗೂ ಬಸವೇಶ್ವರನಿಗೂ ಅಸ್ವೈಕ್ಯತೆಯುಂಟಾ ಗಲು ಗುಪ್ತಮಂಚಣ್ಣನು ಬಿಜ್ಜಳನಪ್ರತಿಯೊಂದು ಕಾರ್ಯದ ಬಗ್ಗೆ ಸುದ್ದಿಗ ಳನ್ನು ಬಸವೇಶ್ವರನಿಗೆ ಗುಪ್ತವಾಗಿ ತಿಳಿಸಿ ಹೇಳುತ್ತಿದ್ದನೆಂದು ಮೂಲ ಬಸವ ಪುರಾಣದಲ್ಲಿ ಹೇಳಿದೆ. ಆದ್ದರಿಂದ ಬಸವೇಶ್ವರನು ಸಕಾಲದಲ್ಲಿ ಬಿಜ್ಜಳನ ಆಸ್ಥಾನದಿಂದ ಜೀವದಿಂದ ಪಾರಾಗಿ ಕಪ್ಪಡಿಸಂಗಮಕ್ಕೆ ಹೋಗಲು ಸಮರ್ಥ ನಾದನು. ಇಲ್ಲದಿದ್ದರೆ ಅವನು ರಾಜಧಾನಿಯಲ್ಲಿಯೇ ಘಾತಿಸಲ್ಪಡುವ ಸಂಭವ ವಿದ್ದಿತು. ಹೀಗೆ ಗುಪ್ತಮಂಚಣ್ಣನು ಬಸವೇಶ್ವರನಿಗೆ ಗುಪ್ತವಾಗಿ ಸಹಾಯಕ ನಾಗಿವರ್ತಿಸಿದ್ದಾನೆ. ಇದು ಕೆಳಗಿನ ಸಂಗತಿಯಿಂದಲೂ ದೃಢಪಡುತ್ತದೆ

---

## ಲಕ್ಷ್ಮಮ್ಮ.

ಲಕ್ಷ್ಮಮ್ಮನು ಕೊಂಡೇಮಂಚಣ್ಣನ ಪತ್ನಿಯು. ಅವಳು ವಚನಕಾರ ಳಿದ್ದಾಳೆ. ಅವಳ ಒಂದೇ ಒಂದು ವಚನವು ನಮಗೆ ದೊರೆತಿರುತ್ತದೆ. ಅವಳ ವಚನಗಳು ಇನ್ನೂ ಅನೇಕ ಇರಬಹುದು. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ. ಈ ವಚನಗಳನ್ನು ರಚಿಸುವವರು ಶಿವಶರಣರ ಸಲು ವಾಗಿ ಭಕ್ತಿಯುಳ್ಳವರೇ ಇದ್ದಾರೆಂದು ತಿಳಿದಲ್ಲಿ ಯಾವ ತಪ್ಪು ಇರ ಲಾರದು. ಲಕ್ಷ್ಮಮ್ಮನು ಹೀಗೆ ವಚನಗಳನ್ನು ರಚಿಸಬೇಕಾದರೆ ಅವಳ ಗಂಡನು ಶಿವಾನುಭವ ಶಾಸ್ತ್ರಕ್ಕೆ ಅನುಕೂಲನಾಗಿರಬೇಕೆಂಬ ಅನುಮಾ ನವು ಉಂಟಾಗುತ್ತದೆ. ಆದ್ದರಿಂದ ಲಕ್ಷ್ಮಮ್ಮನೂ ಅವಳ ಗಂಡನಾದ ಕೊಂಡೇಮಂಚಣ್ಣನೂ ಬಸವ ಚನ್ನಬಸವೇಶ್ವರರಿಗೋಸ್ಕರ ಅನುಕೂಲ ರಾಗಿ ವರ್ತಿಸುತ್ತಿದ್ದರೆಂದು ಹೇಳಲು ಯಾವ ಪ್ರತ್ಯವಾಯವೂ ಇರಲಾ ರದು. ಆ ವಚನವು ಯಾವದೆಂದರೆ—

"ಆಯುಷ್ಯ ತೀರಲು ಮರಣ ವ್ರತತಪ್ಪಲು ಶರೀರಕಡೆ. ಮೇಲು ವ್ರತವೆಂಬ ತೂತರ ಮೆಚ್ಚ ನಮ್ಮ ಅಗಜೇಶ್ವರ ಲಿಂಗವು"

ತಪ್ಪು ಮಾಡಿದರೆ ಪ್ರಾಯಶ್ಚಿತ್ತವಿಲ್ಲವೆಂಬ ಭಾವವು ಇದರಲ್ಲಿದೆ. ಹೀಗೆ ಈ ಉಭಯ ದಂಪತಿಗಳು ಬಸವನಿಗೋಸ್ಕರ ಗುಪ್ತಭಕ್ತಿಯುಳ್ಳವರಾಗಿದ್ದ ರೆಂದು ತೋರುತ್ತದೆ.

---

## ಶಿವಶರಣರ ಅರಣ್ಯಯುದ್ಧ.

ಅರಣ್ಯಗಳಲ್ಲಿ ಯುದ್ಧಗಳನ್ನು ನಡಿಸುವದು ಯಾವಾಗಲೂ ಕಷ್ಟಕರ ವಾದದ್ದು. ಅದಕ್ಕೆ ಅನೇಕತರದ ಪೂರ್ವ ಸಿದ್ಧತೆಗಳನ್ನು ಮಾಡಬೇಕಾಗು ತ್ತವೆ. ಸೈನ್ಯಕ್ಕೋಸ್ಕರ ಸಾಕಷ್ಟು ಆಹಾರಸಾಮಗ್ರಿಗಳು ಮೊದಲು ಬೇಕಾಗು ತ್ತವೆ. ಉಳಿವಿಯು ಕಾಳಗದ ಪೂರ್ವದಲ್ಲಿ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿ ಗಳು ಮತ್ತು ೭೭೦ ಅಮರಗಣಂಗಳು ಅಂತು ಸುಮಾರು ೧೩ ಸಾವಿರ ಸೈನ್ಯವು ಚನ್ನಬಸವೇಶ್ವರನ ಕಡೆಗೆ ಇದ್ದಿತೆಂದು ಉಲ್ಲೇಖಗಳಿವೆ. ಚನ್ನ ಬಸವೇಶ್ವರನ ದಂಡು ಉಳಿವಿಯ ಕಾಡನ್ನು ಪ್ರವೇಶಿಸುವ ಮೊದಲು, ತೊರಗಲ್ಲುನಾಡಿನಲ್ಲಿ ಆದ ಅನೇಕ ಯುದ್ಧಗಳ ಮೂಲಕ ಕೆಲಮಟ್ಟಿಗೆ ಕಡಿಮೆಯಾಗಿರಬಹುದು. ಆದರೂ ಅವನ ಕಡೆಗೆ ಉಳಿವಿಯ ಕಾಡನ್ನು

ಪ್ರವೇಶಿಸುವ ಮುಂಚೆ ಅನೇಕ ಸಹಸ್ರ ಜನರು ಇದ್ದಿರಬಹುದು. ಇಷ್ಟು ಜನರಿಗೆ ಸಾಕಾಗುವಷ್ಟು ಆಹಾರ ಸಾಮುಗ್ರಿಗಳನ್ನು ಯಾರು ಮತ್ತು ಎಲ್ಲಿಂದ ಪೂರೈಸುತ್ತಿದ್ದರೆಂಬುದು ಮಹತ್ವದ ಸಮಸ್ಯೆಯಾಗಿದೆ. ಈ ಕಾರ್ಯ ವನ್ನು ಶಿವಶರಣರಲ್ಲಿ ಅತ್ಯಂತ ವರ್ಚಸ್ಸುಳ್ಳ ಕೆಲವರು ಹಿಂದೆನಿಂತು ಮಾಡುತ್ತಿದ್ದರೆಂಬ ಅನುಮಾನವು ಉಂಟಾಗುತ್ತದೆ. ಅವರು ಯಾರೆಂದರೆ—

(೧) ಮಲ್ಲಿಕಾರ್ಜುನ— ಈತನು ಮಡಿವಾಳಮಾಚಿದೇವನ ಗುರುವು. (೨) ಘೋರರ ಕಕ್ಕಯ್ಯ— ಈತನನ್ನು ಬಸವೇಶ್ವರನು ಆಗಿಂದಾಗ್ಗೆ ತನ್ನ ವಚನಗಳಲ್ಲಿ ಸ್ಮರಿಸುತ್ತಾನೆ ಈತನು ಶಿವಶರಣರಲ್ಲಿ ಬಹಳ ಹಿರಿಯನು. ಮತ್ತು ಅತ್ಯಂತ ವರ್ಚಸ್ಸುಳ್ಳವನು. (೩) ರುದ್ರಮುನಿ— ಈತನು ರೇವಣ ಸಿದ್ಧೇಶ್ವರನ ಪುತ್ರನು. ರೇವಣಸಿದ್ಧೇಶ್ವರನ ತರುವಾಯ ನಾಡಿನಲ್ಲಿ ಅತ್ಯಂತ ಖ್ಯಾತಿಯನ್ನು ಹೊಂದಿದವನು. (೪) ಸೊನ್ನಲಾಪುರದ ಸಿದ್ಧರಾಮೇಶ್ವರನು— ಈತನು ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವನು. ಶಿವಶರ ಣರಲ್ಲಿ ಈ ನಾಲ್ವರು ಶಿವಶರಣ ಸೈನಿಕರನ್ನು ಯುದ್ಧಕಾಲದಲ್ಲಿ ಹುರಿದುಂಬಿ ಸುತ್ತ ಅವರಿಗೆ ಬಹಳ ಸಹಾಯ ಮಾಡುತ್ತ ಬಂದಿದ್ದಾರೆಂಬ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಅವರು ಉಳಿವಿಯ ಕಾಡಿನಲ್ಲಿ ಯುದ್ಧಮಾಡುತ್ತಿದ್ದ ತಮ್ಮ ಜೊತೆಗಾರರಿಗೆ ಬಹಳ ಸಹಾಯ ಮಾಡಿರುವರು. ಅವರ ಚರಿತ್ರೆ ಗಳನ್ನು ನಾವು ಮುಂದೆ ಬರೆಯುವೆವು.

ಬಸವೇಶ್ವರನು ಕಲ್ಯಾಣದಲ್ಲಿ ಪ್ರಧಾನಿಯಾಗಿದ್ದಾಗ್ಗೆ ಅವನು ಶೂನ್ಯ ಸಿಂಹಾಸನವನ್ನು ಸ್ಥಾಪಿಸಿ ಶ್ರೀಅಲ್ಲಮಪ್ರಭುದೇವರನ್ನು ಅದಕ್ಕೆ ಅಧಿಪತಿ ಯನ್ನಾಗಿ ಮಾಡಿದನೆಂದು ವೀರಶೈವರ ಎಲ್ಲ ಗ್ರಂಥಗಳಲ್ಲಿ ಉಲ್ಲೇಖ ಗಳಿವೆ. ಮುಂದೆ ಬಿಜ್ಜಳನು ಹರಳಯ್ಯ ಮಧುವರಸರನ್ನು ಎಳಹೂಟಿ ಯಿಂದ ಹಿಂಸೆ ಮಾಡಿದ ಬಳಿಕ ಕಲ್ಯಾಣದಲ್ಲಿ ಅನೇಕ ವಿಪ್ಲವಗಳುಂಟಾ ದವು. ಆಗ ಬಸವೇಶ್ವರನು ಕಪ್ಪಡಿಸಂಗಮೇಶ್ವರನಲ್ಲಿಗೆ ಹೋದನು. ಮತ್ತು ಅದೇ ಕಾಲಕ್ಕೆ ಅಲ್ಲಮಪ್ರಭುವೂ ಸಹ ಕಲ್ಯಾಣದಲ್ಲಿ ನಿಲ್ಲದೆ ಶ್ರೀಶೈಲಮಲ್ಲಿಕಾರ್ಜುನನ ಕ್ಷೇತ್ರಕ್ಕೆ ತೆರಳಿದನು. ಮತ್ತು ಅಲ್ಲಿ ಕದಳೀ ಬನವಲ್ಲಿದ್ದ ಮಠದಲ್ಲಿದ್ದ ಗುಹೇಶ್ವರಲಿಂಗದಲ್ಲಿ ನಿರ್ವಯಲಾದನು. ಆತನು ಶ್ರೀಶೈಲಕ್ಕೆ ತೆರಳುವ ಪೂರ್ವದಲ್ಲಿ ಆತನು ತನ್ನ ತರುವಾಯ ಶೂನ್ಯಸಿಂಹಾಸನಕ್ಕೆ ಚನ್ನಬಸವೇಶ್ವರನನ್ನು ಸಿಂಹಾಸನಾಧಿಪತಿಯನ್ನಾಗಿ ಮಾಡಿದನು.

ಈ ಕಠಿಣಕಾಲದಲ್ಲಿ ಚನ್ನಬಸವೇಶ್ವರನಿಗೆ ಸಿದ್ಧರಾಮೇಶ್ವರ, ಮಡಿವಾಳಮಾಚಿದೇವ, ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿ, ಮಡಿವಾಳ ಮಾಚಿದೇವನ ಗುರುವಾದ ಮಲ್ಲಿಕಾರ್ಜುನ ಮೋಳಿಗೆಮಾರಯ್ಯ, ಕಕ್ಕಯ್ಯ ಇವರೇ ಮುಖ್ಯ ಸಹಾಯಕರಾಗಿ ಕಾರ್ಯಮಾಡುತ್ತಿದ್ದರೆಂದು ಕಾಲಜ್ಞಾನ ವಚನಗ್ರಂಥಗಳಿಂದ ತಿಳಿದುಬರುತ್ತದೆ. ಇವರು ಅಲ್ಲಲ್ಲಿ ಅಡಗಿಕೊಂಡಿದ್ದ ಶಿವಶರಣರನ್ನು ಕಂಡು ಅವರನ್ನು ಬಿಜ್ಜಳ ದಂಡಾಳುಗಳ ಕೂಡ ಹೋರಾಡಲಿಕ್ಕೂ ಉಳಿವಿಗೆ ಹೋಗಲಿಕ್ಕೂ ಪ್ರೋತ್ಸಾಹಿಸಿದರು. ಆಗ ಸುಮಾರು ೧೩ ಸಾವಿರ ಜನರು ಬಿಜ್ಜಳನೊಡನೆ ಹೋರಾಡಲಿಕ್ಕೆ ಸಿದ್ಧರಾದರು. ಆಗ ಚನ್ನಬಸವೇಶ್ವರನೂ ಮಡಿವಾಳಮಾಚಿದೇವನೂ ಅವರನ್ನೊಡಗೊಂಡು ತೊರಗಲ್ಲುನಾಡು ಅಂದರೆ ಈಗಿನ ಬೈಲಹೊಂಗಲ ತಾಲೂಕನ್ನು ಪ್ರವೇಶಿಸಿದರು ಆಗ ಹಿಂದೆ ಹೇಳಿದಂತೆ ಬಿಜ್ಜಳನ ದಂಡಾಳುಗಳೊಡನೆ ಅನೇಕ ಕಾಳಗಗಳು ಸಂಭವಿಸಿದವು.

ಆದರೆ ಇದಕ್ಕೂ ಪೂರ್ವದಲ್ಲಿ ಅಂದರೆ ಚನ್ನಬಸವೇಶ್ವರನು ಕಲ್ಯಾಣ ಪಟ್ಟಣವನ್ನು ಬಿಡುವಮುಂಚೆ ಅವನು ತನ್ನ ತರುವಾಯ ಶೂನ್ಯ ಸಿಂಹಾಸನದ ಮೇಲೆ ಶ್ರೀಸಿದ್ಧರಾಮೇಶ್ವರನನ್ನು ಅಧಿಪತಿಯನ್ನಾಗಿ ನಿಯಮಿಸಿದರು. (ನಿರಂಜನ ವಂಶರತ್ನಾಕರ ನೋಡಿರಿ) ಆದ್ದರಿಂದ ಬೈಲಹೊಂಗಲ, ಖಾನಾಪುರ, ಕಲಘಟಗಿ ಹಲ್ಯಾಳ ತಾಲೂಕುಗಳಲ್ಲಿ ನಡೆದ ಕಾಳಗಗಳು ನಡೆದ ಕಾಲದಲ್ಲಿ ಸಿದ್ಧರಾಮೇಶ್ವರನು ಶಿವಶರಣರಿಗೆ ಬಹಳ ಸಹಾಯ ಮಾಡುತ್ತ ಬಂದಿದ್ದಾನೆ.

ಈ ಕಾಲದಲ್ಲಿ ಸಿದ್ಧರಾಮೇಶ್ವರನು ನಾಡಿನಲ್ಲಿ ಅತ್ಯಂತ ವರ್ಚಸ್ಸುಳ್ಳವನಾಗಿದ್ದನು. ಈ ಬಗ್ಗೆ ಅನೇಕ ಶಿಲಾಶಾಸನಗಳ ಆಧಾರಗಳೂ ಇವೆ. ಶಿವಮೊಗ್ಗಾ ಜಿಲ್ಲಾ ಸೊರಬ ತಾಲೂಕಿನಲ್ಲಿ ಕೋಳೀಸಾಲೆ ಎಂಬ ಗ್ರಾಮವಿದ್ದು ಅಲ್ಲಿರುವ ಶಿಲಾಶಾಸನದಲ್ಲಿ ಸಿದ್ಧರಾಮೇಶ್ವರನ ಮತ್ತು ಆತನ ಇಷ್ಟದೇವತೆಯಾದ ಕಪಿಲಸಿದ್ಧಮಲ್ಲಿಕಾರ್ಜುನನ ಉಲ್ಲೇಖಗಳಿವೆ. (ಕರ್ನಾಟಕಾ ಎಪಿಗ್ರಾಫಿಕಾ-ಶಿವಮೊಗ್ಗಾ ಜಿಲ್ಲಾ ಸೊರಬ ೫೬೧) ಈ ಶಾಸನವು ಮಹಾಮಂಡಲೇಶ್ವರ ಬೀರರಸನದಿರುತ್ತದೆ. ಹಾವೇರಿ ತಾಲೂಕು ಸಂಗೂರು ಗ್ರಾಮದಲ್ಲಿ ದೇವಗಿರಿ ಯಾದವರಾಜನಾದ ದೇವರಾಜನ ಶಿಲಾಶಾಸನವಿದ್ದು ಅದರಲ್ಲಿ ಸಿದ್ಧರಾಮೇಶ್ವರನ ಮತ್ತು ಕಪಿಲಸಿದ್ಧಮಲ್ಲಿಕಾ

ರ್ಜುನನ ಉಲ್ಲೇಖಗಳಿವೆ. ಹುಬ್ಬಳ್ಳಿಯ ಹತ್ತಿರ ಬುರುಡಸಿಂಗಿ ಎಂಬ ಗ್ರಾಮವಿದ್ದು ಅಲ್ಲಿರುವ ಶಿಲಾಶಾಸನದಲ್ಲಿ ಸಿದ್ಧರಾಮೇಶ್ವರನ ಉಲ್ಲೇಖ ವಿದೆ. ಇದು ಕದಂಬರಾಜರ ಶಿಲಾಶಾಸನವು. ಕದಂಬರಾಜರ ಕೆಲವು ಶಾಖೆಗಳು ಗೋವೆ, ಹಾನಗಲ್ಲು ಮತ್ತು ಹಲಸಿಗೆಯಲ್ಲಿ ರಾಜ್ಯವಾಳು ತ್ತಿದ್ದವು.

ಈ ಎಲ್ಲ ಶಿಲಾಶಾಸನಗಳು ೧೨೦೦ ರಿಂದ ೧೨೦೦ ರ ವರೆಗಿನವು ಇರುತ್ತವೆ. ಈ ಶಿಲಾಶಾಸನಗಳ ಮೇಲಿಂದ ಸಿದ್ಧರಾಮೇಶ್ವರನೂ ಚನ್ನ ಬಸವೇಶ್ವರ ಮೊದಲಾದ ಶಿವಶರಣರೂ ಈ ಭಾಗದಲ್ಲಿ ಬಹಳ ವರ್ಚ ಸ್ಸುಳ್ಳವರಾಗಿದ್ದರೆಂದು ಸ್ಪಷ್ಟವಾಗುತ್ತಿದೆ.

ಮೇಲೆ ಕಾಣಿಸಿದ ಎಲ್ಲ ಸ್ಥಳಗಳು ಈಗ ಹುಬ್ಬಳ್ಳಿ, ಕಲಘಟ್ಟಗಿ, ಖಾನಾಪುರ, ಹಲ್ಯಾಳ, ಶಿರ್ಶಿ ಈ ತಾಲೂಕಗಳಲ್ಲಿ ಇದ್ದು ಈ ಭಾಗವು ಬನವಾಸಿನಾಡೆಂದು ಪೂರ್ವಕಾಲದಲ್ಲಿ ಪ್ರಸಿದ್ಧವಾಗಿತ್ತು. ಬಿಜ್ಜಳನು ಚಾಲುಕ್ಯರ ಮಾಂಡಲಿಕನಾಗಿ ಇಲ್ಲಿ ಬಹುದಿವಸ ರಾಜ್ಯವಾಳಿದನು. ಅವನ ಕಾಲದಲ್ಲಿ ಬಹುಜನ ಶಿವಶರಣರು ಇಲ್ಲಿ ವಾಸಿಸುತ್ತ ಶಿವಾನುಭವವನ್ನು ಹಬ್ಬಿಸಿರಬಹುದು.

ಅಬ್ಬಲೂರಿನ ಏಕಾಂತದ ರಾಮಯ್ಯನು, ಪುಲಿಗೆರೆಯ ಸೋಮ ಯ್ಯನು, ಹೀಗೆ ಅನೇಕ ಶಿವಶರಣರು ಇಲ್ಲಿ ಉದಯವಾಗಿದ್ದಾರೆ. ಅಲ್ಲದೆ ರೇವಣಸಿದ್ಧೇಶ್ವರನ ಕ್ಷೇತ್ರವೂ ಈ ಭಾಗದಲ್ಲಿ ಉಂಟು. ಈ ಅನುಕೂಲ ಪರಿಸ್ಥಿತಿಯ ಮೂಲಕ ಶಿವಶರಣರು ಈ ಪ್ರಾಂತವನ್ನು ಪ್ರವೇಶ ಮಾಡಿ ಬಿಜ್ಜಳನ ದಂಡಾಳುಗಳ ಕೂಡ ಹೋರಾಡಲು ಸಿದ್ಧರಾಗಿರಬಹುದು. ಇವರು ಇಲ್ಲಿ ನಡಿಸಿವ ಕಾಳಗಗಳಲ್ಲಿ ರುದ್ರಮುನಿ, ಕಕ್ಕಯ್ಯ, ಮಲ್ಲಿ ಕಾರ್ಜುನ, ಇವರು ಬೆಂಬಲವಾಗಿ ನಿಂತುಕೊಂಡು ಶಿವಶರಣರಿಗೆ ಕಡೆಯ ವರೆಗೂ ಸಹಾಯ ಮಾಡಿದ್ದಾರೆಂದು ತೋರುತ್ತದೆ. ಈ ಮಹಾನುಭಾವರ ಚರಿತ್ರೆಗಳನ್ನು ನಾವಿಲ್ಲಿ ಕೊಡುತ್ತೇವೆ.

---

# ಮಲ್ಲಿಕಾರ್ಜುನ.

ಈತನು ವಿಜಾಪುರ ಜಿಲ್ಲಾ ಸಿಂದಗಿ ತಾಲೂಕಿನಲ್ಲಿರುವ ಹಿಪ್ಪರಿಗೆಯವನು. ಈತನು ಮಡಿವಾಳಮಾಚಿದೇವನ ಗುರುವೆಂದು ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಹರಳಯ್ಯ ಮಧುವಯ್ಯಗಳು ಹಿಂಸೆಯನ್ನು ಹೊಂದಿದ ಬಳಿಕ ಶಿವಶರಣರಿಗೆ ಧೈರ್ಯವನ್ನು ಹೇಳಿ ಉಳವಿಗೆ ಹೊರಡಲು ಪ್ರೋತ್ಸಾಹಿಸಿದವರಲ್ಲಿ ಈತನು ಮುಖ್ಯನಾಗಿದ್ದನು. ಕಾಲಜ್ಞಾನ ವಚನಗಳಲ್ಲಿ ಈ ಪ್ರಕಾರ ಉಲ್ಲೇಖಗಳಿವೆ. ಶಿವಶರಣರು ಉಳವಿಗೆ ಹೋದಬಳಿಕ ಈತನು ಅಲ್ಲಿಯ ವರೆಗೂ ಹೋಗಿ ಅವರಿಗೆ ಪ್ರೋತ್ಸಾಹವನ್ನು ಕೊಟ್ಟದ್ದಾನೆ. ಈತನ ಹೆಸರಿನ ದೇವಾಲಯವು ಹಿಪ್ಪರಿಗೆಯಲ್ಲಿ ಈಗಲೂ ಇದೆ. ಅದು ಬಹು ವಿಶಾಲವಾದ ಕಟ್ಟಡವಾಗಿದೆ. ಇದು ಹಿಪ್ಪರಿಗೆಯಲ್ಲಿ ಮುಖ್ಯ ದೇವಾಲಯವೆಂವೆನಿಸಿಕೊಳ್ಳುತ್ತಿದೆ ಅದರ ದೊಡ್ಡ ಜಾತ್ರೆಯಾಗುತ್ತದೆ. ಆದರೆ ಜಾತ್ರೆಯ ಕಾಲದಲ್ಲಿ ವೀರಶೈವರಿಗೆ ಸಂಬಂಧವಲ್ಲದ ಮೈಲಾರದೇವರ ಪೂಜಾಪದ್ಧತಿಗಳು ಸೇರ್ಪಡೆಯಾಗಿರುತ್ತವೆ. ಇವು ಹಿಂದಿನಿಂದ ಬಂದವುಗಳಾಗಿರಬೇಕೆಂದು ಈ ಶಿವಶರಣರ ಚರಿತ್ರೆಗಳಿಂದ ನಾವು ಊಹಿಸುತ್ತೇವೆ. ಇದರ ಗರ್ಭಗುಡಿಯ ದ್ವಾರದ ಮುಂದೆ ಒಂದು ಗೋಡೆಯನ್ನು ಕಟ್ಟಿದ್ದು ಅದನ್ನು ತೆಗೆದುಹಾಕಲು ಯಾರೂ ಧೈರ್ಯಮಾಡುವದಿಲ್ಲ. ಮುಸಲ್ಮಾನರ ಅಂಜಿಕೆಯ ಮೂಲಕ ಈ ಗೋಡೆಯುಂಟಾಗಿರಬಹುದು. ಆದರೆ ಗೋಡೆಯನ್ನು ತೆಗೆದುಹಾಕಿದಲ್ಲಿ ಜನತೆಗೆ ಏನಾದರೂ ಅಪಾಯವಾಗುವದೆಂಬ ಭೀತಿಯಿಂದ ಅದನ್ನು ಯಾರೂ ತೆಗೆದು ಹಾಕಿಲ್ಲ. ಮಲ್ಲಿಕಾರ್ಜುನನು ಯುದ್ಧಕಾಲದಲ್ಲಿ ಯುದ್ಧ ಭೂಮಿಗಳಿಗೆ ಆಗಿಂದಾಗ್ಗೆ ಹೋಗಿ ಶಿವಶರಣರಿಗೆ ಪ್ರೋತ್ಸಾಹಿಸುತ್ತಿದ್ದನೆಂದು ಅವನ ಬಗ್ಗೆ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಶಿವಶರಣರಲ್ಲಿ ಈತನು ಬಹಳ ವರ್ಚಸ್ಸುಳ್ಳವನಾಗಿದ್ದನು.

---

# ಕಕ್ಕಯ್ಯ

ಕಕ್ಕಯ್ಯನು ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದಾನೆ. ಅವನು ಬಸವೇಶ್ವರನಿಗೆ ಸಮಕಾಲೀನನಾಗಿದ್ದು, ಬಸವೇಶ್ವರನು ಅವನ ಕೂಡ ಅತ್ಯಂತ ಭಕ್ತಿಭಾವದಿಂದ ನಡೆದುಕೊಳ್ಳುತ್ತಿದ್ದನು. ಅವನು ಬಸವೇಶ್ವರನಕಿಂತ ಬಹಳ ಹಿರಿಯನಾಗಿದ್ದರಿಂದ ಬಸವೇಶ್ವರನು ಅವನನ್ನು ಅಪ್ಪ, ಕಿರಿಯಯ್ಯ, ಎಂಬ ಶಬ್ದಗಳಿಂದ ಸಂಬೋಧಿಸುತ್ತಾನೆ. ಅವನ ವಿಷಯವಾಗಿ ಬಸವೇಶ್ವನ ವಚನಗಳಲ್ಲಿ ೯ ಸಲ ಉಲ್ಲೇಖಗಳು ಬಂದಿವೆ. ಅವುಗಳಲ್ಲಿ ಕಕ್ಕಯ್ಯನು ಪ್ರಸಾದದ ರೀತಿಯನ್ನು ಚನ್ನಾಗಿ ತಿಳಿದವನೆಂದು ಬಸವೇಶ್ವರನು ಅವನನ್ನು ವರ್ಣಿಸಿದ್ದಾನೆ. ಒಂದು ವಚನದಲ್ಲಿ ಕಕ್ಕಯ್ಯನು ಕೀಳು ಜಾತಿಯವನಿದ್ದರೂ ಅವನು ಹೆಚ್ಚಿನವನೆಂದು ಅವನನ್ನು ಸ್ಮರಿಸುತ್ತಾನೆ. ಈ ವಚನಗಳು ಯಾವವೆಂದರೆ:—

(೧) ಸೆಟ್ಟಿ ಎಂಬೆನೇ ಸಿರಿಯಾಳನ? ಮಡಿವಾಳನೆಂಬೆನೇ ಮಾಚಯ್ಯನ? ಡೋಹರನೆಂಬೆನೇ ಕಕ್ಕಯ್ಯನ? ಮಾದರನೆಂಬೆನೇ ಚನ್ನಯ್ಯನ? ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯ.

(೨) ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಡೋಹರ ಕಕ್ಕಯ್ಯ, ಅಯ್ಯಗಳಯ್ಯ ನಮ್ಮ ಮಾದರ ಚನ್ನಯ್ಯ ಕೂಡಲ ಸಂಗಮ ದೇವಾ ನಿಮ್ಮ ಶರಣರು ಎನ್ನ ಸಲುಹುವರಾಗಿ.

ಕಕ್ಕಯ್ಯನು ಕರ್ನಾಟಕ ಪ್ರಾಂತದವನಲ್ಲ. ಅವನು ಮಾಳವದೇಶದವನು. ಅಂದರೆ ಮಹಾರಾಷ್ಟ್ರಿಗನು. ಅವನು ಅಲ್ಲಿ ಢೋರರ ಕುಲದಲ್ಲಿ ಹುಟ್ಟಿ ಸಬಳವನ್ನು ಹಿಡಿದು ಆ ದೇಶದ ಅರಸನನ್ನು ಓಲೈಸುತ್ತಿದ್ದನು. ಸಬಳವೆಂದರೆ ಢೋರರು ಚರ್ಮವನ್ನು ಸ್ವಚ್ಛಮಾಡುವಲ್ಲಿ ಉಪಯೋಗಿಸುವ ಒಂದು ತರದ ಆಯುಧವಾಗಿದೆ. ಶಂಕರ ದಾಸಿಮಯ್ಯನು ತನ್ನ ಪ್ರಚಾರ ಕಾರ್ಯದಲ್ಲಿ ಮಾಳವಾ ದೇಶದಲ್ಲಿ ಉಜ್ಜಯಿನಿಯ ವರೆಗೂ ಪ್ರವಾಸ ಮಾಡಿದ್ದನು. ಅವನು ಪರಮಾತ್ಮನಾರು ಎಂಬುದರ ತಿಳಿವಳಿಕೆಯನ್ನು ಜನರಲ್ಲಿ ಉಂಟುಮಾಡುತ್ತ ಕ್ಷುಲ್ಲಕ ದೇವತೆಗಳನ್ನು ನಿರಾಕರಿಸಬೇಕೆಂದು ಬೋಧಿಸುವವನಾಗಿದ್ದನು. ಅವನ ಬೋಧೆಯು ಪರಿಣಾ

ಮದ ಮೂಲಕ ಮಾಳವಾ ದೇಶದಲ್ಲಿ ವೀರಶೈವ ಧರ್ಮವು ಬೆಳೆದಿರ ಬೇಕೆಂದು ತೋರುತ್ತದೆ. ಶಂಕರದಾಸಿಮಯ್ಯನು ಬೋಧಿಸಿದ ವೀರಶೈವ ಧರ್ಮವು 'ನಾಗರಿಕ'ರ ಧರ್ಮವೆಂದು ಹಿಂದಿನಕಾಲದಲ್ಲಿ ಜನರು ತಿಳಿದಿದ್ದು ಈ ಶಬ್ದವು ವೀರಶೈವ ಸಮಾಜದಲ್ಲಿ ಉಪಯೋಗದಲ್ಲಿ ಆಗ ಬಂದಿತ್ತೆಂದು ತೋರುತ್ತದೆ.

ಈ ಪ್ರಕಾರ ಕಕ್ಕಯ್ಯನು ಮಾಳವಾ ದೇಶದಲ್ಲಿ ಇರುವಾಗ್ಗೆ ಅವನು ಬಸವೇಶ್ವರನ ಕೀರ್ತಿ ವಾರ್ತೆಯನ್ನು ಕೇಳಿ ಅವನಲ್ಲಿರಬೇಕೆಂಬ ಉತ್ಸಾಹಲವುಳ್ಳವನಾಗಿ ಕಲ್ಯಾಣ ಪಟ್ಟಣಕ್ಕೆ ಬಂದು ಅಲ್ಲಿ ವಾಸಮಾಡ ಹತ್ತಿದನು.

ಕಕ್ಕಯ್ಯನು ಕಲ್ಯಾಣಕ್ಕೆ ಬಂದ ಬಳಿಕ ಅಲ್ಲಿ ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುವನು. ಆಗ ಅವನು ತನ್ನ ಪೂರ್ವಾಶ್ರಯವನ್ನು ಬಿಟ್ಟುಕೊಟ್ಟು ವೀರಶೈವ ದೀಕ್ಷೆಯನ್ನು ಕೊಂಡಿದನು. ಮತ್ತು ಗುರುಲಿಂಗ ಜಂಗಮದ ರೀತಿಯಂತೆ ಆಚರಿಸುವವನಾದನು. ಆದ್ದರಿಂದ ಲಿಂಗ ಜಂಗಮರನ್ನು ಕಂಡಕೂಡಲೆ ಅವರಿಗೋಸ್ಕರ ಆದರ ಭಾವವನ್ನು ತಾಳಿ ಅವರನ್ನು ದೂರದಿಂದ ಕಂಡಕೂಡಲೆ ಅವರಿಗೆ ಕೈಮುಗಿಯುವನು. ಬಸವೇಶ್ವರನ ಕಂಡಾಗ್ಗೆಯಂತೂ ಅವನು—ನಾನು ನಿಮ್ಮ ಲೆಂಕರ ಲೆಂಕರ ಲೆಂಕ ಎಂದಂದು ಅವನಿಗೆ ನಮಸ್ಕರಿಸುವನು.

ಈ ಕಾಲದಲ್ಲಿ ಪರಮಾತ್ಮನೆಂದರೆ ಯಾರು ಮತ್ತು ಎಷ್ಟು ಜನರು ದೇವತೆಗಳಿದ್ದಾರೆ ಎಂಬುದರ ವಿಷಯವಾಗಿ ಜನರಲ್ಲಿ ಯಾವಾಗಲೂ ವಿವಾದಗಳುಂಟಾಗುತ್ತಿದ್ದವು. ಶಿವಶರಣರು ಪರಮಾತ್ಮನು ಒಬ್ಬನೇ ಇದ್ದಾನೆ, ಆವನು ಎಲ್ಲೆಡೆಯಲ್ಲಿಯೂ ತುಂಬಿಕೊಂಡಿದ್ದಾನೆಂದು ಪ್ರತಿಪಾದಿಸುವರು. ಇದಕ್ಕೆ ಪರವಾದಿಗಳು ಹಾಗಾದರೆ ಪರಮಾತ್ಮನನ್ನು ಜೋಳದ ರಾಶಿಯಲ್ಲಿ ಮತ್ತು ಸರ್ಪ ಮುಂತಾದವುಗಳಲ್ಲಿ ತೋರಿಸಿರೆಂದು ಆಹ್ವಾನ ಮಾಡುವರು. ಶಿವಶರಣರು ಹಾಗೆಯೇ ಮಾಡಿ ತೋರಿಸಿದ್ದಾರೆ. ಇಂಥ ಅನೇಕ ಉದಾಹರಣೆಗಳಿವೆ. ಹಾಗೆಯೇ ಈ ಕಾಲದಲ್ಲಿ ಶಿವನು ಶ್ರೇಷ್ಠನೋ, ವಿಷ್ಣುವು ಶ್ರೇಷ್ಠನೋ, ಎಂಬ ಬಗ್ಗೆಯೂ

ವಾಗ್ವಾದಗಳೇಳುತ್ತಿದ್ದವು. ಅವುಗಳಲ್ಲಿ ಶಿವಶರಣರು ಶಿವನೇ ದೈವವೆಂದು ವಾದಿಸಿ ಈ ವಿಷಯವಾಗಿ ಪವಾಡಗಳನ್ನು ಮಾಡುವರು. ಕಕ್ಕಯ್ಯನಾದರೂ ಶಿವನೇ ಶ್ರೇಷ್ಠನೆಂದು ವಾದಿಸುವವನಾಗಿದ್ದನು. ಆದ್ದರಿಂದ ಅವನು ಶಿವನಿಂದೆಯನ್ನು ಎಂದು ಸಹಿಸನು. ಇಂಥ ನಿಂದೆಯು ಅವನ ಕಿವಿಗೆ ಬಿದ್ದಕೂಡಲೆ ಅವನು ಅದಕ್ಕೆ ತಕ್ಕ ಪ್ರತಿಕಾರ ಮಾಡುವನು. ಆದ್ದರಿಂದ ಅವನು 'ಶಿವದ್ವೇಷಿಶಿರಃಕಮಲ ಕುಂಜರ' ಎಂಬ ಬಿರುದನ್ನು ಹೊಂದಿ ಪ್ರಸಿದ್ಧನಾಗಿದ್ದನು.

ಕಕ್ಕಯ್ಯನು ಶಿವಾನುಭವಿಯಾದ್ದರಿಂದ ಅವನು ಕಲ್ಯಾಣದಲ್ಲಿ ಶಿವಾನುಭವಮಂಟಪದಲ್ಲಿ ಸೇರ್ಪಡೆಯಾಗಿ ಅಲ್ಲಿ ನಡೆಯುತ್ತಲಿದ್ದ ಶಿವಾನುಭವ ಸದ್ಗೋಷ್ಠಿಗಳನ್ನು ಯಾವಾಗಲೂ ಕೇಳುವನು. ಅಲ್ಲಿ ಅವನು ತನ್ನ ಶಿವಾನುಭವದ ಜ್ಞಾನವನ್ನು ತನ್ನ ವಚನಗಳ ಮೂಲಕ ವಿವರಿಸಿ ಹೇಳುವನು. ಅವನು "ಅಭಿನವ ಮಲ್ಲಿಕಾರ್ಜುನ" ಎಂಬ ಮುದ್ರಿಕೆಯನ್ನಿಟ್ಟುಕೊಂಡು ಅನೇಕ ವಚನಗಳನ್ನು ರಚಿಸಿದ್ದಾನೆ. ಆದರೆ ಅವನ ಮೂರು ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವುಗಳನ್ನು ನಾವು ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಅದರಲ್ಲೊಂದರಲ್ಲಿ ಅವನು ತನ್ನ ಹೀನ ಕುಲವನ್ನುದ್ದೇಶಿಸಿ ನುಡಿದಿದ್ದಾನೆ. ಅವು ಹಿಂದಿನಕಾಲದ ಶಿವಶರಣರ ವಚನಗಳಂತೆಯೇ ಅರ್ಥಗರ್ಭಿತವಾಗಿರುತ್ತವೆ. ಅವನು ಇನ್ನೂ ಅನೇಕ ವಚನಗಳನ್ನು ರಚಿಸಿರಬಹುದು. ಆದರೆ ಅವು ನಮಗೆ ಉಪಲಬ್ಧವಾಗಿರುವದಿಲ್ಲ.

ಕಕ್ಕಯ್ಯನು ಶಿವಶರಣರ ಪದ್ಧತಿಯ ಪ್ರಕಾರ ಪ್ರಸಾದವನ್ನು ಸಾಧಿಸಿದವನಾಗಿದ್ದನು. ಅಂದರೆ ತನ್ನ ಇಂದ್ರಿಯ ವಿಷಯಗಳನ್ನು ಸದಾ ಪ್ರೀತ ಭಾವದಿಂದ ಆಯಾ ಲಿಂಗಗಳಿಗೆ ಅರ್ಪಿಸಿ ಆಚರಿಸುವವನಾಗಿದ್ದನು. ಇಂಥವನಲ್ಲಿ ಜಾತಿವಿಷಯಕ ಹೆಚ್ಚುಕಡಿಮೆ ಭಾವಗಳು ಉಳಿಯಲಾರವು. ಹೀಗೆ ಕಕ್ಕಯ್ಯನು ಆಚರಿಸಿದ್ದರಿಂದ ಅವನಲ್ಲಿ ಒಂದು ವಿಲಕ್ಷಣವಾದ ಲಿಂಗಚೈತನ್ಯವು ಉಂಟಾಗಿತ್ತು. ಪ್ರಸಾದದ ಮಹತ್ವವನ್ನು ಹೇಳುವಲ್ಲಿ ಶಿವಶರಣರು ಅವನ ಉದಾಹರಣೆಯನ್ನು ತೆಗೆದುಕೊಳ್ಳುವದುಂಟು.

ಕಲ್ಯಾಣ ಪಟ್ಟಣದಲ್ಲಿ ಪ್ರತಾಪನಾರಾಯಣನ ಗುಡಿಯೊಂದಿದ್ದು ಅಲ್ಲಿ ಒಬ್ಬ ವೈಷ್ಣವಾಚಾರ್ಯನು ವಿಷ್ಣುಪುರಾಣವನ್ನು ದಿನಾಲು ಹೇಳುವನು. ಒಂದು ದಿನ ಕಕ್ಕಯ್ಯನು ಪುರಾಣ ಕೇಳುತ್ತ ನಿಂತನು. ಪುರಾಣ ಕೇಳಲು ಬಹುಜನರು ನೆರೆದಿದ್ದರು. ಪುರಾಣ ಹೇಳುವಲ್ಲಿ ಪುರಾಣಿಕನು ಶಿವನು ಬ್ರಹ್ಮ

ಟೀಕು:— ಪೃಥ್ವಿಜ್ಞಾನ ನೂರೊಂದು ಸ್ಥಲದಾಚರಣೆಯಲ್ಲಿ ಕೂಡಿಹುದೆಂಬುದೀಗ ಪೃಥ್ವಿಜ್ಞಾನ ಪಿಪೀಲಿಕ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಅಪ್ಪು ಜ್ಞಾನ ಷಡ್ವಿಧ ಲಿಂಗಾಂಗ ಸ್ಥಳದಾಚರಣೆಯನೊಳಕೊಂಡಿಹುದೆಂಬುದೀಗ ಅಪ್ಪು ಜ್ಞಾನ ಮರ್ಕಟ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ತೇಜಜ್ಞಾನ ಚಿದಗ್ನಿ ಸ್ವರೂಪವಾಗಿ ಪ್ರಕಾಶಿಸುತ್ತಿಹುದೆಂಬುದೀಗ ತೇಜಜ್ಞಾನ ಅಗ್ನಿಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ವಾಯುಜ್ಞಾನ ಚಿದ್ವಾಸನ ಸ್ವರೂಪವಾಗಿಹುದೆಂಬುದೀಗ ವಾಯುಜ್ಞಾನ ಗಂಧಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಆಕಾಶಜ್ಞಾನ ಅಭೇದ್ಯವಾದ ಪರಶಿವ ತತ್ವವನವಗ್ರಹಿಸಿ ಹೊರೆ ಇಲ್ಲದೆ ಒಂದೇಯಾಗಿಹುದೆಂಬುದೀಗ ಆಕಾಶಜ್ಞಾನ ವಿಹಂಗ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ತಮಜ್ಞಾನ ಪರಶಿವ ತತ್ವವನರಿಯಬೇಕೆಂಬ ಏಕಾಗ್ರ ಚಿತ್ತದಲ್ಲಿರುತ್ತಿಹುದೆಂಬುದೀಗ ತಮಜ್ಞಾನ ಮಾರ್ಜಾಲ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಪರಿಪೂರ್ಣಜ್ಞಾನ ರೂಪು ರುಚಿ ತೃಪ್ತಿ ಮೊದಲಾದ ಸಕಲ ಪದಾರ್ಥವ ಲಿಂಗವೇ ಕೈಕೊಂಡು ಭೋಗಿಸಿ ತೃಪ್ತಿಯನೈಯ್ದಿತ್ತೆಂಬ ನೆನಹಿನಲ್ಲಿರುತ್ತಿಹುದೆಂಬುದೀಗ ಪರಿಪೂರ್ಣಜ್ಞಾನ ಕೂರ್ಮ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಲಿಂಗಾಂಗ ಸ್ಥಲ ಮೊದಲಾದ ಸರ್ವಾಚಾರ ಸಂಪತ್ತನು ಭೇದಿಸಿ ಅರಿಹುತ್ತಿಹುದೆಂಬುದೀಗ ದಿವ್ಯಜ್ಞಾನ ಸರ್ವಮಯವಾಗಿ ನಾನಾ ಭೇದಂಗಳ ಭೇದಿಸುತ್ತಿಹುದೆಂಬ ಶಬ್ದಕ್ಕರ್ಥ. ಶರಣನ ಉನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ಪರಿಪೂರ್ಣಜ್ಞಾನ ಸಮರಸವಾಯಿತ್ತೆಂಬುದೀಗ ಇಂತೀ ಮನಜ್ಞಾನ ಭರಿತನಾಗಿ ಎಂಬ ಶಬ್ದಕ್ಕರ್ಥ. ಆ ಶರಣ ದಶವಾಯು ವಿಕಾರದಲ್ಲಿ ಸಂಚರಿಸುತ್ತಿರ್ದ ಮನೋವರ್ತನೆಯ ಸತ್ಕ್ರಿಯಾಚರಣೆಯಿಂದ ಧ್ವಂಸವ ಮಾಡಿದನೆಂಬುದೀಗ ದಶಗುಣ ಮರ್ಕಟವ ಮೆಟ್ಟಿ ನಿಂದು ಎಂಬ ಶಬ್ದಕ್ಕರ್ಥ. ಚಿದಾಕಾಶ ಮಧ್ಯದಲ್ಲಿರ್ಪ ಚಿದ್ಘನ ಲಿಂಗವು ತೂರ್ಯಾವಸ್ಥೆಯ ಭಾವದಲ್ಲಿರ್ಪ ಶರಣನ ಉನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ತೊಳಗಿ ಬೆಳಗುತ್ತಿಹುದೆಂಬುದೀಗ ಬಟ್ಟ ಬಯಲ ತುಟ್ಟ ತುದಿಯ ಸದಾಶಿವ ಮೂರ್ತಿ ಲಿಂಗದ ಕಳೆ ಕಳಕಳಿಸುತ್ತಿದೆ. ಚಿತ್ತದ ನೆನಹಿನಲ್ಲಿ ಎಂಬ ಶಬ್ದಕ್ಕರ್ಥ.

೮೦. ಪೃಥ್ವೀಜ್ಞಾನ, ಅಪ್ಪುಜ್ಞಾನ, ತೇಜಜ್ಞಾನ, ವಾಯುಜ್ಞಾನ, ಆಕಾಶಜ್ಞಾನ, ತಮೋಜ್ಞಾನ, ಪರಿಪೂರ್ಣಜ್ಞಾನ, ದಿವ್ಯಜ್ಞಾನ ಇಂತೀ

ಜ್ಞಾನಂಗಳಲ್ಲಿ ಕಂಡು ದೇಹ ಧರ್ಮಂಗಳನಳಿದು ಪಿಂಡಪ್ರಾಣ ಅಂಗ ಲಿಂಗ ಸಂಯೋಗ ಸಂಪದದಲ್ಲಿ ನಿಂದು ನೋಡು. ಸದಾಶಿವಮೂರ್ತಿ ಲಿಂಗದಲ್ಲಿ ಕಳೆ ಬೆಳಗುತ್ತಿದೆ.

ಟೀಕು:— ಪೃಥ್ವೀಜ್ಞಾನ ಭಕ್ತಸ್ಥಲ ಸಂಬಂಧವಾಗಿಹುದೆಂಬುದೀಗ ಪೃಥ್ವೀಜ್ಞಾನವೆಂಬ ಶಬ್ದಕ್ಕರ್ಥ. ಅಪ್ಪುಜ್ಞಾನ ಮಾಹೇಶ್ವರಸ್ಥಲ ಸಂಬಂಧವಾಗಿಹುದೆಂಬುದೀಗ ಅಪ್ಪು ಜ್ಞಾನವೆಂಬ ಶಬ್ದಕ್ಕರ್ಥ. ತೇಜಜ್ಞಾನ ಪ್ರಸಾದಿಸ್ಥಲ ಸಂಬಂಧವಾಗಿಹುದೆಂಬುದೀಗ ತೆಜಜ್ಞಾನವೆಂಬ ಶಬ್ದಕ್ಕರ್ಥ. ವಾಯುಜ್ಞಾನ ಪ್ರಾಣಲಿಂಗಿ ಸಂಬಂಧವಾಗಿಹುದೆಂಬುದೀಗ ವಾಯುಜ್ಞಾನವೆಂಬ ಶಬ್ದಕ್ಕರ್ಥ. ಆಕಾಶಜ್ಞಾನ ಶರಣಸ್ಥಲ ಸಂಬಂಧವಾಗಿಹುದೆಂಬುದೀಗ ಆಕಾಶಜ್ಞಾನವೆಂಬ ಶಬ್ದಕ್ಕರ್ಥ. ತಮುಜ್ಞಾನ ಐಕ್ಯಸ್ಥಲ ಸಂಬಂಧವಾಗಿಹುದೆಂಬುದೀಗ ತಮುಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಸ್ಥಲಕುಲಾದಿಗಳನೊಳಕೊಂಡು ಸರ್ವಾಚಾರದಲ್ಲಿ ಸಂಬಂಧವಾಗಿಹುದೆಂಬುದೀಗ ಪರಿಪೂರ್ಣ ಜ್ಞಾನವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗಸ್ಥಲಂಗಳ ಭೇದಾದಿ ಭೇದಂಗಳನರುಹಿಸಿಕೊಳ್ಳುತ್ತಿಹುದೆಂಬುದೀಗ ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಪರಿಪೂರ್ಣ ಜ್ಞಾನಂಗಳಿಂ ಸ್ಥಲಸಂಬಂಧವನರಿದು ಎಂಬುದೀಗ ಇಂತೀ ಜ್ಞಾನಂಗಳಲ್ಲಿ ಕಂಡು ಎಂಬ ಶಬ್ದಕ್ಕರ್ಥ. ಇಂತಪ್ಪ ಸರ್ವಾಂಗಲಿಂಗಸಂಬಂಧಿಯಾದ ಶರಣಂಗೆ ದೇಹ ಪ್ರಾರಬ್ಧ ಭೋಗ ನಷ್ಟವಾಗಿ ಲಿಂಗಭೋಗೋಪಭೋಗಿಯಾಗಿರ್ದನೆಂಬುದೀಗ ದೇಹಧರ್ಮವನರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ದೇಹವಳಿದು ಜ್ಞಾನಕಾಯಸ್ವರೂಪವಾಯಿತ್ತೆಂಬುದೀಗ ಪಿಂಡವೆಂಬ ಶಬ್ದಕ್ಕರ್ಥ. ಆ ಶರಣನ ಪ್ರಸಾದವಳಿದು ಲಿಂಗಪ್ರಾಣವಾಯಿತ್ತೆಂಬುದೀಗ ಪ್ರಾಣವೆಂಬ ಶಬ್ದಕ್ಕರ್ಥ. ಆ ಶರಣನ ಭಕ್ತ್ಯಾದ್ಯೈಕ್ಯಾಂತವಾದ ಷಡ್ವಿಧ ಚಿದಂಗಗಳೆಂಬುದೀಗ ಅಂಗವೆಂಬ ಶಬ್ದಕ್ಕರ್ಥ. ಆ ಚಿದಂಗಗಳಲ್ಲಿ ಸಂಬಂಧವಾದ ಆಚಾರಾದಿ ಮಹಾಲಿಂಗಂಗಳೆಂಬುದೀಗ ಲಿಂಗವೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗವೆರಡರ ಕೂಟವೇ ಅಸಿಪದವಾದ ಕಾರಣ ಸಂಯೋಗವೆಂಬ ಶಬ್ದಕ್ಕರ್ಥ. ಈ ಲಿಂಗಾಂಗ ಸಮರಸ ಕೂಟದ ಮಹದೈಶ್ವರ್ಯದಲ್ಲಿ ಸುಸ್ಥಿರಭಾವಿಯಾಗಿ ನಿಂದು ತನ್ನ ನಿಜ ಸ್ವರೂಪ ಅವಿರಳಜ್ಞಾನದೃಕ್ಕಿನಿಂ ನಿರೀಕ್ಷಿಸುತ್ತಿರ್ದ ಶರಣನೆಂಬುದೀಗ ಸಂಪದದಲ್ಲಿ ನಿಂದು ನೋಡು ಸದಾಶಿವಮೂರ್ತಿಲಿಂಗದಲ್ಲಿ ಕಳೆ ಬೆಳಗುತ್ತಿದೆ ಎಂಬ ಶಬ್ದಕ್ಕರ್ಥ.

೬೧. ನಂಜಿನ ಭೂಮಿಯ ಮೇಲೆ ಸಂದೇಹದ ಕವರು ನೆಟ್ಟು ಮಂಜುಳ ಮೂರಂಗದ ಮುಂಡಿಯು ನೆಟ್ಟು ಸರಂಗದ ಸುಮನದ ಡೊಂಕರತ ಬೆಂಬರನ ಹಾಕಿ ಗತಿಮತಿಯೆಂಬ ಇಕ್ಕೆಲದ ಸೂರಿಗೆ ನಿಜ ನಿಶ್ಚಯವೆಂಬ ಹುಲು ಒಡುವ ಹಾಕಿ ಏರಿಸಿವಗಳು ಚಿತ್ತಶುದ್ಧವೆಂಬ ಮೂಗುತಿಗೋಲಿನಲ್ಲಿ ನಿಂದಿತ್ತು. ತೊಲಗದ ಕಟ್ಟು ವಿಶ್ವಾಸ ನಿಶ್ಚಯದಲ್ಲಿ ನಿಂದಿತ್ತು. ಸಂದೇಹ ನಿಂದು ಹಂಜರವೇರಿತ್ತು. ಕಡೆನಡು ಮೊದಲಿನ್ನದ ತ್ರಿಗುಣದ ಕಂತೆ ಕಟ್ಟಿ ಅರಿದು ಮರೆಯದ ಹುಲ್ಲು ಕವಿಸಿತ್ತು. ಮನೆ ಯಾಯಿತ್ತು. ಮನದ ಕೊನೆಯಲ್ಲಿ ಬಾಗಿಲು ಬಯಲಾಯಿತ್ತು. ಸದಾ ಶಿವಮೂರ್ತಿಲಿಂಗವು ನಿರಾಳವಾಯಿತ್ತು.

ಟೀಕು:— ಶಿವಜ್ಞಾನೋದಯವಾಗಿ ಸಕಲ ಮಾಯಾಪ್ರಪಂಚು ನಷ್ಟವಾದ ಶರಣನ ಚಿದ್ಭೂಮಿಯಲ್ಲಿ ಎಂಬುದೀಗ ನಂಜಿನ ಭೂಮಿಯ ಮೇಲೆ ಎಂಬ ಶಬ್ದಕ್ಕರ್ಥ. ಆ ಚಿದ್ಭೂಮಿಯಲ್ಲಿ ಸಂಕಲ್ಪ ವಿಕಲ್ಪ ವಳಿದು ದೃಢಸ್ತಂಭವ ನೆಲೆಗೊಳಿಸಿದನೆಂಬುದೀಗ ಸಂದೇಹದ ಕವರು ನೆಟ್ಟು ಎಂಬ ಶಬ್ದಕ್ಕರ್ಥ. ಆ ಸದ್ಭಾವದಲ್ಲಿ ನಿರ್ಧರವಾದ ಶರಣನು ಶ್ರೀಗುರುಕಾರುಣ್ಯದಿಂ ತನುತ್ರಯಂಗಳಿಗೆ ಚೈತನ್ಯವಾದ ಆತ್ಮತ್ರಯ ದಲ್ಲಿ ಗುರುಲಿಂಗಜಂಗಮದ ಸಂಬಂಧವ ಮಾಡಿದನೆಂಬುದೀಗ ಮಂಜುಳ ಮೂರಂಗ ಎಂಬ ಶಬ್ದಕ್ಕರ್ಥ. ಆ ಲಿಂಗತ್ರಯ ಸಂಬಂಧವಾದ ಶರ ಣನು ಕುಬುದ್ಧಿಯಳಿದು ಸುಬುದ್ಧಿಯನೇ ಕಂಬವ ಮಾಡಿದನೆಂಬು ದೀಗ ಮುಂಡಿಯು ನೆಟ್ಟು ಎಂಬ ಶಬ್ದಕ್ಕರ್ಥ. ಆ ಶರಣನ ಕುಮನ ವಳಿದ ನೇರಿತವಾದ ಸಮರಸವೆಂಬುದೀಗ ಸರಂಗದ ಸುಮನ ಎಂಬ ಶಬ್ದಕ್ಕರ್ಥ. ಅಂತು ಮನಬುದ್ಧಿಗಳೆರಡು ನಷ್ಟವಾದಲ್ಲಿ ಶರಣಲಿಂಗ ವೆಂಬುಭಯವಳಿದ ಬೆಂಬರನ ಹಾಕಿದನೆಂಬುದೀಗ ಡೊಂಕರತ ಬೆಂಬ ರನ ಹಾಕಿ ಎಂಬ ಶಬ್ದಕ್ಕರ್ಥ. ಅಂತು ಉಭಯವಳಿದು ಒಂದೇಯಾದ ಶರಣಂಗೆ ಜ್ಞಾನಕ್ರಿಯಾಚಾರವೆಂಬುಭಯವು ಇಕ್ಕೆಲದ ಸೂರಾಯಿತ್ತೆಂಬು ದೀಗ ಗತಿಮತಿ ಎಂಬ ಇಕ್ಕೆಲದ ಸೂರಿಗೆ ಎಂಬ ಶಬ್ದಕ್ಕರ್ಥ. ಆ ಜ್ಞಾನಕ್ರಿಯಲ್ಲಿ ತತ್ಪರನಾದ ಶರಣನಾ ಪರಶಿವ ಸ್ವರೂಪನು ಪರಬ್ರಹ್ಮ ಸ್ವರೂಪನು ಎಂಬ ನಿಶ್ಚಯವೀಗ ನಿಜ ನಿಶ್ಚಯ ವೆಂಬ ಹುಲು ಒಡುವ ಹಾಕಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ತಾನಾದ ಶರಣನ ಸಕಲ ಕರಣಂಗಳೆಲ್ಲ ಲಿಂಗಕರಣಂಗಳಾಗಿ ಲಿಂಗದಲ್ಲಿ ಏಕಾರ್ಥವಾದವೆಂಬು

ದೀಗ ಏರಿಸಿದಗಳು ಎಂಬ ಶಬ್ದಕ್ಕರ್ಥ. ಅಂತು ಕರಣಂಗಳ ಲಿಂಗದಲ್ಲಿ ಏಕಾರ್ಥವ ಮಾಡಿದ ಶರಣಂಗೆ ಸಂಕಲ್ಪ ವಿಕಲ್ಪ ಜ್ಞಾನವಿಲ್ಲದ ಸ್ವಸ್ಥವಾದ ಶಿವಜ್ಞಾನವೆಂಬ ಮೂಗುತಿ ಗೋಲಿನಲ್ಲಿ ನಿಂದಿತ್ತೆಂಬುದೀಗ ಚಿತ್ತಶುದ್ಧವೆಂಬ ಮೂಗುತಿಗೋಲಿನಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನದಲ್ಲಿ ನಿರ್ಧರವಾದ ಶರಣನ ಸಕಲ ಕರಣಂಗಳು ಭಿನ್ನ ವರ್ತನೆಗೆ ತೊಲಗದ ಹಾಗೆ ಸದ್ಭಾವದಿಂ ಸಂಬಂಧಿಸಿದನೆಂಬುದೀಗ ಗಳು ತೊಲಗದ ಕಟ್ಟು ಎಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳು ಸದ್ಭಾವದಲ್ಲಿ ಸನ್ನಿಹಿತವಾದ ಶರಣನ ಗುರುಲಿಂಗಜಂಗಮದಲ್ಲಿ ವಿಶ್ವಾಸ ನೆಲೆಗೊಂಡಲ್ಲಿ ಸಾಧ್ಯವಾಯಿತ್ತೆಂಬುದೀಗ ವಿಶ್ವಾಸ ನಿಶ್ಚಯದಲ್ಲಿ ನಿಂದಿತೆಂಬ ಶಬ್ದಕ್ಕರ್ಥ. ಆ ತ್ರಿವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಸಂಕಲ್ಪ ವಿಕಲ್ಪ ನಷ್ಟವಾಗಿ ಜ್ಞಾನಕ್ರಿಯಾಚಾರವೆಂಬ ಕಂಜರ ಸ್ಥಿರವಾಯಿತ್ತೆಂಬುದೀಗ ಸಂದೇಹ ನಿಂದು ಹಂಜರವೇರಿತ್ತೆಂಬ ಶಬ್ದಕ್ಕರ್ಥ. ಆ ಜ್ಞಾನಕ್ರಿಯಾಚಾರದಲ್ಲಿ ನಿರ್ಧರವಾದ ಶರಣಂಗೆ ಗುಣತ್ರಯಗಳು ನಷ್ಟವಾಗಿ ಇಷ್ಟ ಪ್ರಾಣ ಭಾವ ಲಿಂಗ ತ್ರಯ ಸಂಬಂಧವಾಯಿತ್ತೆಂಬುದೀಗ ಕಡೆ ನಡು ಮೊದಲೆನ್ನದ ತ್ರಿಗುಣದ ಕಂತೆ ಕಟ್ಟಿ ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯ ಸಂಬಂಧವಾದ ಶರಣ ಪರಶಿವತತ್ವವೇ ತನ್ನ ನಿಜವೆಂದರಿದು ಮರೆಯದೆ ಇರ್ದ ಹುಲ್ಲು ಕವಿಸಿತ್ತೆಂಬುದೀಗ ಅರಿದು ಮರೆಯದ ಹುಲ್ಲು ಕವಿಸಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನಸ್ವರೂಪನಾದ ಶರಣನು ಚಿದ್ಘನಲಿಂಗಕ್ಕೆ ಚಿದ್ಗೃಹವ ಮಾಡಿದ ತನ್ನ ನೆನಹಿನ ಅಗ್ರದಲ್ಲಿ ಎಂಬುದೀಗ ಮನೆಯಾಯಿತ್ತು ಮನದ ಕೊನೆಯಲ್ಲಿ ಎಂಬ ಶಬ್ದಕ್ಕರ್ಥ. ಚಿದ್ಗೃಹವ ಮಾಡಿದ ಚಿದ್ರೂಪನಾದ ಶರಣನ ಉನ್ಮನಿಸ್ವರೂಪವಾದ ಚಿದ್ದ್ವಾರವು ಚಿದ್ಘನ ಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ ಬಾಗಿಲ ಬಯಲಾಯಿತ್ತು ಸದಾಶಿವಮೂರ್ತಿಲಿಂಗವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೮೨. ಜೀವಜ್ಞಾನ, ಪರಮಜ್ಞಾನ, ಪ್ರಕಾಶಜ್ಞಾನ, ಪ್ರಜ್ವಲಿತ ಜ್ಞಾನ, ಪ್ರಭಾವಜ್ಞಾನ, ತೇಜೋಮಯಜ್ಞಾನ, ಪರಂಜ್ಯೋತಿಜ್ಞಾನ, ದಿವ್ಯಜ್ಞಾನ, ಸರ್ವಮಯಸಂಪೂರ್ಣಂಗಳಲ್ಲಿ, ತೋರುತ್ತಿಹ ತೋರಿಕೆ ಆಕಾಶಮಂಡಲದಲ್ಲಿ ತೋರುವ ಅರುಣನ ಕಿರಣ ಸರ್ವ ಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕಾಂಬ ತೆರನಂತೆ ಎನ್ನ ಪಿಂಡಮಂಡಲದಲ್ಲಿ ದಿವ್ಯ

ತೇಜೋ ವರುಣ ಕಿರಣ ಮಯವಾಗಿ ಒಂದರಲ್ಲಿ ನಿಂದು ಕಾಂಬುವು ಹಲವಾದಂತೆ ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬ ವಿಶ್ವ ರೂಪಾದೆಯಲ್ಲಾ ಭೇದ್ಯಕ್ಕೆ ಅಭೇದ್ಯನಾದೆಯಲ್ಲಾ ನಿನ್ನನೇನೆಂಬುದಕ್ಕೆ ತೆರಪಿಲ್ಲ. ಭಾಗೀರಥಿಯಂತೆ ಆರು ಸಿಂದರೂ ಪ್ರಮಾಣಾದಿಯಲ್ಲಾ. ಎನ್ನ ಮನಕ್ಕೆ ಕಾಷ್ಟಗಟ್ಟಿಯಾಗಿನಿಂದೆಯಲ್ಲಾ ಸದಾಶಿವಮೂರ್ತಿಲಿಂಗವೇ.

ಟೀಕು:— ಶ್ರದ್ಧಾಭಕ್ತಿ ಸಂಬಂಧವಾಗಿಹುದು ಭಕ್ತಸ್ಥಲವೆಂಬುದೀಗ ಜೀವಜ್ಞಾನವೆಂಬ ಶಬ್ದಕ್ಕರ್ಥ. ಸಮರಸಭಕ್ತಿ ಸ್ವರೂಪವಾಗಿಹುದು ಐಕ್ಯಸ್ಥಲವೆಂಬುದೀಗ ಪರಮಜ್ಞಾನವೆಂಬ ಶಬ್ದಕ್ಕರ್ಥ. ಭಕ್ತನ ಶ್ರದ್ಧಾ ಭಕ್ತಿಯನೊಳಕೊಂಡು ತೋರುತ್ತಿಹುದು ಆಚಾರಲಿಂಗವೆಂಬುದೀಗ ಪ್ರಕಾಶ ಜ್ಞಾನವೆಂಬ ಶಬ್ದಕ್ಕರ್ಥ. ಮಹೇಶ್ವರನ ನಿಷ್ಠಾಭಕ್ತಿಯನೊಳಕೊಂಡು ತೋರುತ್ತಿಹುದು ಗುರುಲಿಂಗವೆಂಬುದೀಗ ಪ್ರಜ್ವಲಿತ ಜ್ಞಾನವೆಂಬ ಶಬ್ದಕ್ಕರ್ಥ. ಪ್ರಸಾದಿಯ ಸಾವಧಾನ ಭಕ್ತಿಯನೊಳಕೊಂಡು ತೋರು ತ್ತಿಹುದು ಶಿವಲಿಂಗವೆಂಬುದೀಗ ಪ್ರಭಾವಜ್ಞಾನವೆಂಬ ಶಬ್ದಕರ್ಥ. ಪ್ರಾಣಲಿಂಗಿಯ ಅನುಭಾವ ಭಕ್ತಿಯನೊಳಕೊಂಡು ತೋರುತ್ತಿಹುದು ಜಂಗಮಲಿಂಗವೆಂಬುದೀಗ ತೇಜೋಮಯಜ್ಞಾನವೆಂಬ ಶಬ್ದಕ್ಕರ್ಥ. ಶರಣನ ಆನಂದಭಕ್ತಿಯನೊಳಕೊಂಡು ತೋರುತ್ತಿಹುದು ಪ್ರಸಾದ ಲಿಂಗವೆಂಬುದೀಗ ಪರಂಜ್ಯೋತಿ ಜ್ಞಾನವೆಂಬ ಶಬ್ದಕ್ಕರ್ಥ. ಐಕ್ಯ ಸಮ ರಸ ಭಕ್ತಿಯನೊಳಕೊಂಡು ತೋರುತ್ತಿಹುದು ಮಹಾಲಿಂಗವೆಂಬುದೀಗ ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಷಡ್ವಿಧಸ್ಥಲ ಮುಖ್ಯವಾದ ಸರ್ವಾಚಾರ ಸಂಪತ್ತಿನೊಳಗಾದ ಸಕಲವನು ಪರಿಪೂರ್ಣ ಜ್ಞಾನವ ಒಳ ಕೊಂಡಿಹುದೆಂಬುದೀಗ ಸರ್ವಮಯ ಸಂಪೂರ್ಣಂಗಳಲ್ಲಿ ತೋರುತ್ತಿಹ ತೋರಿಕೆ ಎಂಬ ಶಬ್ದಕ್ಕರ್ಥ. ಆಕಾಶದಲ್ಲಿ ತೋರುವ ಸೂರ್ಯಕಿರಣ ಪ್ರಕಾಶ ಪಿಂಡಬ್ರಹ್ಮಾಂಡದೊಳಗೆ ಸರ್ವ ಜೀವರುಗಳಿರುವ ಪ್ರಭಾವಿಸಿ ಕೊಡುವ ಹಾಗೆಂಬುದೀಗ ಆಕಾಶಮಂಡಲದಲ್ಲಿ ತೋರುವ ಅರುಣನ ಕಿರಣ ಸರ್ವ ಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕಾಂಬ ತೆರನಂತೆ ಎಂಬ ಶಬ್ದಕ್ಕರ್ಥ. ಆ ಶರಣ ಚಿತ್ಪಿಂಡ ಮಂಡಲ ಮಧ್ಯದಲ್ಲಿ ಚಿತ್ಸೂ ರ್ಯನು ಪ್ರಭಾವಿಸಿ ಒಳಹೊರಗೆ ಸರ್ವಾಂಗದಲ್ಲಿ ಪ್ರಕಾಶಿಸುತ್ತಿಹುದೆಂಬು ದೀಗ ಎನ್ನ ಪಿಂಡ ಮಂಡಲದಲ್ಲಿ ದಿವ್ಯತೇಜೋವರುಣ ಕಿರಣಮಯ ವಾಗಿ ಎಂಬ ಶಬ್ದಕ್ಕರ್ಥ. ಒಂದರಿಂದೆ ಹಲವು ಲೆಕ್ಕವು ಕಾಂಬಂತೆ

ಒಂದೇ ಪರಬ್ರಹ್ಮವು ತನ್ನ ಸ್ವಲೀಲೆಯಿಂ ಪಿಂಡಾದಿಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲಕುಳ ಸ್ವರೂಪವನೆಯ್ದಿತ್ತೆಂಬುದೀಗ ಒಂದರಲ್ಲಿ ನಿಂತು ಕಾಂಬುದು ಹಲವಾದಂತೆ ಎಂಬ ಶಬ್ದಕ್ಕರ್ಥ. ಅನೇಕ ಸ್ಥಲಕುಲಂಗಳನೊಳಕೊಂಡಿರ್ಪ ಪರಬ್ರಹ್ಮವು ಉನ್ಮನಿಸ್ವರೂಪವಾದ ಮನವನೊಳಕೊಂಡು ಶರಣನ ಹೃದಯಕಮಲ ಕರ್ಣಿಕಾವಾಸದಲ್ಲಿ ಪ್ರಾಣಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬನೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅನೇಕ ತತ್ವ ಬ್ರಹ್ಮಾಂಡಂಗಳಲ್ಲಿ ಚೈತನ್ಯಸ್ವರೂಪವಾಗಿ ವೇಧಿಸಿಹುದೆಂಬುದೀಗ ವಿಶ್ವರೂಪಾದೆಯಲ್ಲಾ ಎಂಬ ಶಬ್ದಕ್ಕರ್ಥ. ಆ ವಸ್ತುವ ಅಷ್ಟಾಂಗಯೋಗದಿಂ ಭೇದಿಸಿಹೆನೆಂದಡೆ ಅಭೇದ್ಯವಾಗಿಹುದೆಂಬುದೀಗ ಭೇದಕ್ಕೆ ಅಭೇದ್ಯನಾದೆಯಲ್ಲಾ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮನನು ಸಕಲನಿಷ್ಕಲವೆಂದು ಸಕಲ ನಿಷ್ಕಲಾತೀತವೆಂದು ಭಿನ್ನವಿಟ್ಟು ನುಡಿಯಬಾರದೆಂಬುದೀಗ ನಿನ್ನನೇನೆಂಬುದಕ್ಕೆ ತೆರಪಿಲ್ಲವೆಂಬ ಶಬ್ದಕ್ಕರ್ಥ. ಭಾಗೀರಥೀ ಸರ್ವರಿಗೂ ಒಂದೇ ಸಮಾನವಾಗಿಹ ಹಾಗೆ ಲಿಂಗಾಂಗಸಂಬಂಧಿಗಳಾದ ಶರಣ ಜನಂಗಳೆಲ್ಲಕ್ಕೂ ಪರಬ್ರಹ್ಮವು ಪರಿಪೂರ್ಣ. (ಸೂಚನೆ—ಮುಂದಿನ ಭಾಗ ಉಪಲಬ್ಧವಿಲ್ಲ.)

(೮೩) ಕಲ್ಲಿನ ಗಿರಿಯ ಹುಲ್ಲಿನ ಮೊನೆಯಲ್ಲಿ ಕುಕ್ಕಿ ಹುಲ್ಲೆಯು ಮರಿ ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತು ಬಲ್ಲಹನ ಬಲುಹ ಏನೂ ಇಲ್ಲದವ ಮುರಿದು ಈ ಸೊಲ್ಲಿನ ವಿವರವ ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗದಲ್ಲಿಗೆ.

ಟೀಕು:.... ಕಲುಹೃದಯವಾದ ದೇಹಮಧ್ಯದಲ್ಲಿ ಅಹಂಕಾರ ಹುಟ್ಟಿತ್ತೆಂಬುದೀಗ ಕಲ್ಲಿನ ಗಿರಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದ ಗಿರಿಯ ಸುಜ್ಞಾನಾಂಕುರದಲ್ಲಿ ಸಂಬಂಧವಾಗಿರ್ಪ ಭಕ್ತಿಯಿಂ ನಿವೃತ್ತಿ ಮಾಡಿದನೆಂಬುದೀಗ ಹುಲ್ಲಿನ ಮೊನೆಯಲ್ಲಿ ಕುಕ್ಕಿ ಎಂಬ ಶಬ್ದಕ್ಕರ್ಥ. ಅಂತು ಅಹಂಕಾರವಳಿದು ಚಿಚ್ಛಕ್ತಿಯಿಂದುದ್ಭವಿಸಿ ಚಿತ್‌ಸ್ವರೂಪನಾದ ಶರಣನು ಸಕಲ ತತ್ವಂಗಳನವಗ್ರಹಿಸಿ ಕೊಂಡಿರ್ಪ ಮಹಾಘನಲಿಂಗದಲ್ಲಿ ಒಡಗೂಡಿ ಕ್ರೀಡಾಪರನಾಗಿರ್ದನೆಂಬುದೀಗ ಹುಲ್ಲೆಯ ಮರಿ ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಅಂತ

ಲಿಂಗದಲ್ಲಿ ಕ್ರೀಡಾಪರನಾದ ಶರಣನು ಅಹಂ ಬ್ರಹ್ಮವೆಂಬ ಅದ್ವೈತ ಜ್ಞಾನದ ಅಹಂಕಾರವನು ಸಕಲ ಪ್ರಪಂಚು ಹೊದ್ದದ ಚಿತ್ಸ್ವರೂಪ ನಾದ ಶರಣ ನಿವೃತ್ತಿಮಾಡಿದನೆಂಬುದೀಗ ಬಲ್ಲಹನ ಬಲುಹ ಏನು ಇಲ್ಲದವ ಮುರಿದನೆಂಬ ಶಬ್ದಕ್ಕರ್ಥ. ಅಂತು ಅದ್ವೈತಜ್ಞಾನವ ನಿವೃತ್ತಿ ಮಾಡಿ ಶಿವೋಹಂ ಭಾವ ಘಟಿಸಿದ ಶರಣನ ಚರಿತ್ರವ ತ್ರಿವಿಧ ಲಿಂಗಾನು ಭಾವಿಗಳಿಂ ಬೆಸಗೊಳುತಿರ್ದನೆಂಬುದೀಗ ಈ ಸೊಲ್ಲಿನ ವಿವರವ ಕೇಳುವ ಬನ್ನಿ ಸದಾಶಿವಮೂರ್ತಿಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

---

## ತಾಮಸ ಜಂಗಮರು.

೮೪. ಜಂಗಮ ಲಿಂಗವಾದಲ್ಲಿ ಜಗದ ಜಂಗುಳಿಗಳ ಬಾಗಿಲ ಕಾಯದಿರಬೇಕು. ಒಡೆಯರ ಓಲಗವ ಬಂಟ ಕಾಯಬೇಕಲ್ಲದೆ ಬಂಟನ ವೇಳೆಯುವ ಒಡೆಯ ಕಾಯಬಲ್ಲನೇ ? ಇಂತಿದನರಿದು ರಾಜಮಂದಿರ ದಲ್ಲಿ ಗೃಹಸ್ಥಾಶ್ರಮದಲ್ಲಿ ವೇಳೆಯುವನರಿತು ಭುಂಜಿಸಿಹೆನೆಂಬ ದರ್ಶನ ಜಂಗುಳಿಗಳಿಗೆ ಜಂಗಮಸ್ಥಲವಿಲ್ಲವೆಂದೆ. ಸದಾಶಿವಮೂರ್ತಿ ಲಿಂಗವು ಅವರಂಗಕ್ಕೆ ಮುನ್ನವೇ ಇಲ್ಲವೆಂದೆ.

೮೫. ಬಾಗಿಲಲ್ಲಿ ತಡೆವಾತನ ಮನೆಯಲ್ಲಿ ಬಾಗಿ ಹೊಕ್ಕು ಉಂಡ ಜಂಗಮದ ಪಾದೋದಕ ಪ್ರಸಾದವೆಂದು ಕೊಂಡಾತಂಗೆ ಅಘೋರ ಪಾತಕವೆಂದೆ. ಅದೆಂತೆಂದೊಡೆ ತಾ ಸರ್ವಸಂಗದ ಅರಿವ ಕಂಡು ಭಕ್ತಿ ವಿರಕ್ತಿಯ ಕಂಡು ಇಂತೀ ಗುಹಂಗಳಲ್ಲಿ ಸನ್ನರ್ಧನಾಗಿ ಮತ್ತೆ ಉದ ರದ ಕಕುಲಿತೆಗೆ ಸದನ ಹೋಗಲಾಗದು. ಇಂತೀ ವಿರಕ್ತನ ಸ್ಥಲ. ಸದಾಶಿವಮೂರ್ತಿ ಲಿಂಗದಲ್ಲಾಗು ಜಾಗೆಯುನರಿಯಬೇಕು.

---

## (೧೧) ಐಕ್ಯಸ್ಥಲ

**ವಿವರಣೆ:—** ಐಕ್ಯಸ್ಥಿತಿಯಲ್ಲಿ ಮನುಷ್ಯನು ನಿವೃತ್ತಿ ಮಾರ್ಗವನ್ನು ಕೈಕೊಳ್ಳುತ್ತಾನೆ. (೮೬, ೮೭) ಆಗ ಅವನ ಮನಸ್ಸು ಸದ್ವಿವೇಕ ಸ್ವರೂಪವನ್ನು ಹೊಂದಿ ಶಿವಭಾವದಲ್ಲಿ ಸ್ಥಿರವಾಗುವದು. ಇಂದ್ರಿಯಗಳು ನಿವೃತ್ತಿಯಾಗುವವು. ಜೀವನಭಾವವು ದೂರಾಗುವದು. ಇದು ಬಚ್ಚ ಬಯಲು. (೮೮) ಆಗ ನಾದ ಬಿಂದು ಕಲೆಗಳು ಮೂಲ ಚಿತ್ತುವಿನಲ್ಲಿ ಬೆರೆದು ಸ್ವಯಂಭು ಸ್ಥಿತಿಯುಂಟಾಗುತ್ತದೆ. (೮೯) ಇದು ಕೇವಲ ಪ್ರಕಾಶಮಯವಾದ ಸ್ಥಿತಿಯು. ಇದೇ ಲಿಂಗೈಕ್ಯವು. (೯೦)

### ವಚನಗಳು.

೮೬. ಹರಿವ ಹಾವು ಕೊಂಬಿನ ಮೇಲಣ ಕೋಡಗ ಸಂಧಿಸಿ ಒಂದಕ್ಕೊಂದಂಜಿ ನಿಂದೈದಾವೆ. ಕೋಡಗ ನೋಡಲಮ್ಮದು. ಹಾವು ಹೋಗಲಮ್ಮದು. ಎರಡು ನಿಂದು ಜೋಗಿಗೆ ಲೇಸಾಯಿತ್ತು ಸದಾಶಿವ ಮೂರ್ತಿಲಿಂಗವನರಿತು.

ಟೀಕು:— ಸಕಲ ಪ್ರಪಂಚಿನ ವ್ಯವಹಾರದಲ್ಲಿ ಚರಿಸುತ್ತಿಹ ಶಂಕಾ ವಿಷಯ ಸಂಬಂಧಿಯಪ್ಪ ಜೀವನೆಂಬುದೀಗ ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೋಪ ಶಾಖೆಗಳಲ್ಲಿ ಲಂಘಿಸುತ್ತಿಹುದು ಮನಸ್ಸೆಂಬುದೀಗ ಕೊಂಬಿನ ಮೇಲಣ ಕೋಡಗವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂ ಸಮ್ಯಜ್ಞಾನೋದಯವಾಗಲು ಮನಸ್ಸು ಸದ್ವಿವೇಕ ಸ್ವರೂಪವನೆಯ್ದಿ ನಿವೃತ್ತಿ ಮಾರ್ಗದಿಂ ಸಮ್ಮುಖವಾದ ವೆಂಬುದೀಗ ಸಂಧಿಸಿಯೇ ಎಂಬ ಶಬ್ದಕ್ಕರ್ಥ. ಆ ಜೀವನ ಸುಜ್ಞಾನ ಪ್ರಕಾಶಕ್ಕೆ ಮನವಳುಕಿ ಆ ಮನಸ್ಸಿನ ಸದ್ವಿವೇಕ ಜೀವಗಳು ಎರಡು ಶಿವಭಾವದಲ್ಲಿ ಸುಸ್ಥಿರವಾದವೆಂಬುದೀಗ ಒಂದಕ್ಕೊಂದಂಜಿ ನಿಂದೈದಾವೆ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳ ಪ್ರವರ್ತನೆಯ ಅಜ್ಞಾನ ದೃಕ್ಕಿನಿಂ ನಿರೀಕ್ಷಿಸಲಮ್ಮದು ಮನಸ್ಸೆಂಬುದೀಗ ಕೋಡಗ ನೋಡಲಮ್ಮದೆಂಬ ಶಬ್ದಕ್ಕರ್ಥ. ಸಕಲ ಮಾಯಾ ಪ್ರಪಂಚಿಗೆ ಅಡಿಯಿಡಲಮ್ಮದು ಜೀವನೆಂಬುದೀಗ ಹಾವು ಹೋಗಲಮ್ಮದು ಎಂಬ ಶಬ್ದಕ್ಕರ್ಥ. ಸಜ್ಞಾನೋದಯವಾದ ಜೀವನು ಸದ್ವಿವೇಕ ಸ್ವರೂಪವಾದ ಮನಸ್ಸು ಎರಡು ಶಿವಭಾವದಲ್ಲಿ ಸುಸ್ಥಿರವಾಗಲು ಶಿವತತ್ವದಲ್ಲಿ ಸಮರಸೈಕ್ಯವನೆಯ್ದುವ ಶರ

ಮಂತ್ರ, ಲಿಂಗ ಷಡಕ್ಷರಮಂತ್ರ ಎಂದು ಆರು ವಿಧಗಳಾಗಿವೆ. ಇವೆಲ್ಲವೂ ಕೂಡ ೩೬ ಮಂತ್ರಗಳಾಗುತ್ತವೆ. ಇವುಗಳನ್ನು ವೀರಶೈವರು ತಮ್ಮಲ್ಲಿ ತೆಗೆದುಕೊಂಡಿರುತ್ತಾರೆ. ಪಂಚ ಪಂಚಾಕ್ಷರ ಮಂತ್ರಗಳು ಪರಮಾತ್ಮನ ಧ್ಯಾನದಲ್ಲಿ ಉಪಯುಕ್ತವಾದವುಗಳು. ಆದರೆ ಈ ಷಟ್ ತ್ರಿಂಶನ್ಮಂತ್ರಗಳು ಅವರ ಆಚರಣೆಯಲ್ಲಿ ಬೇಕಾದವುಗಳಿರುತ್ತವೆ. ಅವುಗಳ ಉಪಯೋಗವು ಅವರ ಅನೇಕ ಕ್ರಿಯೆಗಳಲ್ಲಿರುತ್ತದೆ.

ಬೀಜಾಕ್ಷರ ಮಂತ್ರ:— ಬ ಸ ವ ಅ ಉ ಮ ಇವುಗಳು ಬೀಜಾಕ್ಷರಗಳು. ಇವು ಹಿಂದೆ ವಿಸ್ತಾರವಾಗಿ ಹೇಳಲ್ಪಟ್ಟವೆ. ಅವು ಮೂಲ ಶಕ್ತಿಗಳು. ಇವು ಆರು ಅಕ್ಷರಗಳಿವೆ.

ಕೀಲಕಮಂತ್ರ:—ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರ: ಇವು ಆರು ಅಕ್ಷರಗಳು. ಕೀಲಕ ಮಂತ್ರ ಇದಕ್ಕೆ ಷಟ್ ಪ್ರಸಾದ ಮಂತ್ರವೆಂತಲೂ ಇನ್ನೊಂದು ಹೆಸರಿದೆ. ಕೀಲಕ ಮಂತ್ರ ಈ ಶಬ್ದದಲ್ಲಿ 'ದೃಢ ಪಡಿಸುವದು' ಎಂಬರ್ಥವಿದೆ. ಆದ್ದರಿಂದ ಈ ಅಕ್ಷರಗಳ ಕಾರ್ಯವು ಆಯಾ ಮಂತ್ರಗಳನ್ನು ತನ್ನಲ್ಲಿ ದೃಢಪಡಿಸುವದಿರುತ್ತದೆಂದು ತಿಳಿದುಬರುತ್ತದೆ.

ನ್ಯಾಸಾಕ್ಷರ ಮಂತ್ರ:— ಇದರಲ್ಲಿ ಆರು ಮಂತ್ರಗಳಿರುತ್ತವೆ. ಇದಕ್ಕೆ ಷಡಂಗ ಮಂತ್ರವೆಂದು ಬೇರೊಂದು ಹೆಸರಿದೆ. ಶರೀರದ ಭಾಗಗಳಲ್ಲಿ ಮಂತ್ರ ನ್ಯಾಸ ಮಾಡುವದೇ ಈ ಮಂತ್ರದ ಕಾರ್ಯವಾಗಿರುತ್ತದೆ.

ಓಂ ಹ್ರಾಂ ಹೃದಯಾಯನಮ: ಇದು ಹೃದಯಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರೀಂ ಶಿರಸೆ ಸ್ವಾಹಾ ಇದು ಶಿರೋಮಂತ್ರವೆಂದು ಹೇಳಲ್ಪಡುತ್ತದೆ.

ಓಂ ಹ್ರೂಂ ಶಿಖಾಯೈ ವೌಷಟ್ ಇದು ಶಿಖಾಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರೈಂ ಕವಚಾಯ ಘಂ ಇದು ಕವಚಮಂತ್ರವೆಂದು ಹೇಳಲ್ಪಿಡುತ್ತಿದೆ.

ಓಂ ಹ್ರೌಂ ನೇತ್ರತ್ರಯಾಯ ವೌಷಟ್ ಇದು ನೇತ್ರಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರ: ಅಸ್ತ್ರಾಯ: ಫಟ್ ಇದು ಅಸ್ತ್ರಮಂತ್ರವೆಂದು ಹೇಳಲ್ಪಡುತ್ತಿದೆ.

ಷಡಕ್ಷರ ಮಂತ್ರಃ—ಇದಕ್ಕೆ ಪಂಚಬ್ರಹ್ಮಮಂತ್ರವೆಂಬ ಬೇರೊಂದು ಹೆಸರು ಇದೆ. ಇದರಲ್ಲಿ ಆರು ಮಂತ್ರಗಳು ಸೇರ್ಪಡೆ ಯಾಗುತ್ತವೆ. ಪರಶಿವನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ಎಂಬ ಪಂಚಮುಖಗಳಿವೆಯಷ್ಟೇ. ಈ ಮಂತ್ರಗಳು ಈ ಪಂಚಮುಖಗಳಿಗೆ ಸಂಬಂಧಿಸುತ್ತವೆ. ಪಂಚಮುಖಗಳು ವಚನಶಾಸ್ತ್ರದಲ್ಲಿ ಅಂಗೀಕರಿಸಲ್ಪಟ್ಟಿವೆ. ಜಗತ್ತಿನ ಉತ್ಪತ್ತಿಯ ಕಾಲದಲ್ಲಿ ಆಗುವ ಆರು ವಿಧಗಳು ಅಥವಾ ಸಾದಾಖ್ಯಗಳು ಈ ಮುಖಗಳಲ್ಲಿಯೇ ಉಂಟಾಗುವವೆಂದು ಹೇಳಲ್ಪಡುವದುಂಟು. ಸ್ಥಾನಶುದ್ಧಿ, ಸಂಪ್ರೋಕ್ಷಣ, ಭಸ್ಮೋದ್ಧೂಳನ, ತ್ರಿಪುಂಡ್ರಧಾರಣ ಈ ಕಾರ್ಯಗಳಲ್ಲಿ ಈ ಮಂತ್ರಗಳ ಉಪಯೋಗವಿರುತ್ತದೆ. ದೀಕ್ಷಾ ಕಾಲದಲ್ಲಿ ಇವುಗಳು ಬಹಳಕಡೆ ಉಪಯೋಗಿಸಲ್ಪಡುತ್ತವೆ. ಮಂತ್ರನ್ಯಾಸದಲ್ಲಿಯೂ ಇವುಗಳ ಉಪಯೋಗವಿರುತ್ತದೆ. ಇದನ್ನು ಒಮ್ಮೊಮ್ಮೆ ಷಡಂಗಮಂತ್ರವೆಂತಲೂ ಸಹ ಕರೆಯುವದುಂಟು. ಇವು ಯಾವವೆಂದರೆಃ—

ಓಂ ಹ್ರಾಂ ನಾಂ ಸದ್ಯೋಜಾತಾಯ ನಮಃ—ಇದು ಪಾದಕ್ಕೆ ಸಂಬಂಧವಾಗುತ್ತದೆ.

ಓಂ ಹ್ರೀಂ ಮಾಂ ವಾಮದೇವಾಯ ನಮ:—ಇದು ಗುಹ್ಯಕ್ಕೆ ಸಂಬಂಧವಾಗುತ್ತದೆ.

ಓಂ ಹ್ರೂಂ ಶೀಂ ಅಘೋರಾಯ ನಮ:—ಇದು ಹೃದಯಕ್ಕೆ ಸಂಬಂಧಿಸುತ್ತದೆ.

ಓಂ ಹ್ರೈಂ ವಾಂ ತತ್ಪುರುಷಾಯ ನಮಃ—ಇದು ಮುಖಕ್ಕೆ ಸಂಬಂಧವಾಗುತ್ತದೆ.

ಓಂ ಹ್ರೌಂ ಯಾಂ ಈಶಾನಾಯ ನಮಃ—ಇದು ಶಿರಸ್ಸಿಗೆ ಸಂಬಂಧವಾಗುತ್ತದೆ.

ಓಂ ಹ್ರಃ ಹೃದಯಾಯನಮಃ—ಇದು ಸರ್ವಾಂಗದಲ್ಲಿ ಸಂಬಂಧವಾಗುತ್ತದೆ.

ಈ ಮಂತ್ರಗಳಿಗೆ ಅನುಕ್ರಮವಾಗಿ ಸದ್ಯೋಜಾತಮಂತ್ರ, ವಾಮದೇವ ಮಂತ್ರ, ಅಘೋರಮಂತ್ರ, ತತ್ಪುರುಷಮಂತ್ರ, ಈಶಾನಮಂತ್ರ, ಹೃದಯ ಮಂತ್ರ ಎಂದು ಹೆಸರುಗಳಿರುತ್ತವೆ. ಭಸ್ಮೋದ್ಧೂಳನ ಕಾಲದಲ್ಲಿ ಈ ಮಂತ್ರಗಳನ್ನು ನಿಶ್ಚಿತ ಸಂಖ್ಯೆಯಿಂದ ಉಚ್ಚರಿಸುತ್ತ ಆಯಾಯ ಸ್ಥಾನಗಳಲ್ಲಿ ಭಸಿತವನ್ನು ಸಂಬಂದಿಸಿಕೊಳ್ಳತಕ್ಕದ್ದು. ಅಂಗನ್ಯಾಸವು ಮಾತ್ರ ಮೇಲೆ ಉಹರಿಸಿದ ಮಂತ್ರದಲ್ಲಿ ಉಲ್ಲೇಸಲ್ಪಟ್ಟಿರುತ್ತದೆ.

ಶಕ್ತಿಷಡಂಗ ಮಂತ್ರಃ— ಇದರಲ್ಲಿಯೂ ಆರು ಮಂತ್ರಗಳು ಸೇರ್ಪಡೆಯಾಗುತ್ತವೆ. ಮನುಷ್ಯನು ಷಟ್ ಸ್ಥಲಕ್ಕನುಗುಣವಾಗಿ ಆಚರಿಸಿದಲ್ಲಿ ಅವನಲ್ಲಿ ಶಕ್ತಿಗಳು ಉಂಟಾಗಿ ಕೆಲವು ಪರಿಣಾಮಗಳು ಸಂಭವಿಸುತ್ತವೆ. ಆಗ ಈ ಶಕ್ತಿಷಡಂಗೆಮಂತ್ರವು ಉಪಯೋಗಿಸಲ್ಪಡುತ್ತದೆ. ಈ ಮಂತ್ರದ ಮೂಲಕ ಅವನಲ್ಲಿ ಆಯಾ ಶಕ್ತಿಗಳು ಸರಿಯಾದ ಮಾರ್ಗದಿಂದ ಚಲಿಸುತ್ತವೆ. ಈ ಮಂತ್ರಗಳು ಯಾವವೆಂದರೆ:—

ಓಂ ಹ್ರಾಂ ನಾಂ ಸರ್ವಜ್ಞ ಸರ್ವಶಕ್ತಿ ಧಾಮ್ನೇ ನಮಃ
ಓಂ ಹ್ರೀಂ ಮಾಂ ತೃಪ್ತಿಶಕ್ತಿ ಧಾಮ್ನೇ ನಮಃ
ಓಂ ಹ್ರೂಂ ಶೀಂ ಅನಾದಿಶಕ್ತಿ ಧಾಮ್ನೇ ನಮಃ
ಓಂ ಹ್ರೈಂ ವಾಂ ಸ್ವತಂತ್ರ ಶಕ್ತಿ ಧಾಮ್ನೇ ನಮಃ
ಓಂ ಹ್ರೌಂ ಯಾಂ ನಿತ್ಯ ಶಕ್ತಿ ಧಾಮ್ನೇ ನಮಃ
ಓಂ ಹ್ರಃ ಓಂ ಆಲುಪ್ತಾ ಶಕ್ತಿ ಧಾಮ್ನೇ ನಮಃ

ಈ ಪ್ರಕಾರ ಇದರಲ್ಲಿ ಆರು ಮಂತ್ರಗಳಿವೆ.

ಲಿಂಗ ಷಡಕ್ಷರ ಮಂತ್ರ:— ಇವಾದಲೂ ಆರು ಇರುತ್ತವೆ. ಇವು ಕೇವಲ ವೀರಶೈವ ಮಂತ್ರಗಳು. ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮ ಲಿಂಗ ಪ್ರಸಾದಲಿಂಗ ಮಹಾಲಿಂಗೆ ಇವುಗಳಿಗೆ ಇವು ಸಂಬಂಧಿಸುತ್ತವೆ ಇವು ಯಾವವೆಂದರೆ—

ಓಂ ಹ್ರಾಂ ನಾಂ ಆಚಾರಲಿಂಗಾಯ ನಮಃ
ಓಂ ಹ್ರೀಂ ಮಾಂ ಗುರುಲಿಂಗಾಯ ನಮಃ
ಓಂ ಹ್ರೂಂ ಶೀಂ ಶಿವಲಿಂಗಾಯ ನಮಃ
ಓಂ ಹ್ರೈಂ ವಾಂ ಜಂಗಮಲಿಂಗಾಯ ನಮಃ
ಓಂ ಹ್ರೌಂ ಯಾಂ ಪ್ರಸಾದಲಿಂಗಾಯ ನಮಃ
ಓಂ ಹ್ರಃ ಓಂ ಮಹಾಲಿಂಗಾಯ ನಮಃ

ಲಿಂಗ ಜಪದಲ್ಲಿ ಇವುಗಳು ಯಾವಾಗಲೂ ಉಪಯೋಗಿಸಲ್ಪಡುತ್ತವೆ.

ಉಪಾಧಿಭಕ್ತ, ನಿರುಪಾದಿಭಕ್ತ, ಸಹಜಭಕ್ತ:—ಉಪಾಧಿಭಕ್ತನು ಕ್ರಿಯಾದೀಕ್ಷೆಯುಕ್ತನಾಗಿರುತ್ತಾನೆ. ಈತನಿಲ್ಲಿ ಗುರುಮಂತ್ರವು ಸಲ್ಲುತ್ತದೆ. ನಿರುಪಾಧಿಭಕ್ತನು ಕ್ರಿಯಾದೀಕ್ಷೆಯನ್ನು ಹೊಂದುವದಲ್ಲದೆ ಗುರುಲಿಂಗಜಂಗಮದಲ್ಲಿ ತನ್ನದೆಲ್ಲವನ್ನು ನಿರ್ವಂಚಕತ್ವದಿಂದ ಸಮರ್ಪಿಸಿ ನಡೆನುಡಿ ಸಂಪನ್ನನಾಗಿರುತ್ತಾನೆ. ಈತನಿಗೆ ಲಿಂಗಮಂತ್ರವನ್ನು ಹೇಳುವುದು. ಹೀಗೆ ಉಭಯತರ ಆಚರಣೆಯನ್ನು ಹೊಂದಿದ್ದಲ್ಲದೆ ಸಮಸ್ತ ಭೋಗಾದಿಗಳನ್ನು ನೀಗಿದವನು ಸಹಜಭಕ್ತನು. ಈತನಿಗೆ ಜಂಗಮ ಮಂತ್ರವು ಸಲ್ಲುತ್ತದೆ.

ಗುರುಮಂತ್ರ, ಲಿಂಗಮಂತ್ರ, ಜಂಗಮಮಂತ್ರ:— ಶಕ್ತಿಪ್ರಣಮಮಂತ್ರಗಳು, ಶಿವಪ್ರಣಮಮಂತ್ರಗಳು, ಶಿವಶಕ್ತಿರಹಿತ ಪ್ರಣಮಮಂತ್ರಗಳು ಎಂದು ಮೂರುವಿಧ ಮಂತ್ರಗಳು ಇವೆ. ಈ ಪ್ರತಿಯೊಂದರಲ್ಲಿ ೧೨, ೧೨ ಪ್ರಣವಗಳು ಇರುತ್ತವೆ. ಶಕ್ತಿಪ್ರಣಮ ಮಂತ್ರಗಳು ಗುರುವಿಗೆ, ಶಿವಪ್ರಣವ ಮಂತ್ರಗಳು ಲಿಂಗಕ್ಕೆ, ಶಿವಶಕ್ತಿರಹಿತ ಪ್ರಣಮಮಂತ್ರಗಳು ಜಂಗಮಕ್ಕೆ ಸಂಬಂಧಪಡುತ್ತವೆ. ಈ ಪ್ರಣಮಗಳು ಭಕ್ತ, ಗುರು, ಜಂಗಮ ಹೀಗೆ ಬೇರೆ ಬೇರೆ ವರ್ಗದವರಿಗೆ ಬೇರೆ ಬೇರೆಯಾಗಿ ಸಂಬಂಧಪಡುತ್ತವೆಂದು ಭಾವಿಸಕೂಡದು. ಯಾಕಂದರೆ ಷಟ್‌ಸ್ಥಲಶಾಸ್ತ್ರದ ಪ್ರಕಾರ ಪ್ರತಿಯೊಬ್ಬನಲ್ಲಿ ಗುರು, ಲಿಂಗ ಜಂಗಮಗಳು ಇವೆ. ಈ ತ್ರಿವಿಧಗಳು ಅವನಲ್ಲಿ ಪ್ರಕಟವಾದಂತೆ ಅವನು ಉಪಾಧಿಭಕ್ತ, ನಿರುಪಾಧಿಭಕ್ತ, ಸಹಜಭಕ್ತ ಎಂದು ಕರೆಯಲ್ಪಡುತ್ತಾನೆ.

ನಿರಾಭಾರಿ ಜಂಗಮ ಶರಣಗಣಂಗಳು:— ಶುದ್ಧಪ್ರಸಾದ ಪ್ರಣವ ೧೨, ಸಿದ್ಧಪ್ರಸಾದ ಪ್ರಣವ ೧೨, ಪ್ರಸಿದ್ಧ ಪ್ರಸಾದ ಪ್ರಣವ ೧೨ ಹೀಗೆ ಒಟ್ಟು ೩೬ ಪ್ರಣವಗಳಿದ್ದು ಅವುಗಳನ್ನೊಳಗೂಡಿರುವವರೇ ನಿರಾಭಾರಿ ಜಂಗಮ ಶರಣ ಗಣಂಗಳು. ಶುದ್ಧಪ್ರಸಾದ ಪ್ರಣಮಗಳು ಆಚಾರಲಿಂಗ ಗುರುಲಿಂಗ ಗಳಿಗೆ ಸಂಬಂಧಿಸುತ್ತವೆ. ಇವುಗಳನ್ನು ಇಷ್ಟಲಿಂಗಕ್ಕೆ ಮಾಡುವದು. ಸಿದ್ಧ ಪ್ರಸಾದ ಪ್ರಣಮಗಳು ಶಿವಲಿಂಗ ಜಂಗಮಲಿಂಗಕ್ಕೆ ಸಂಬಂಧಿಸುತ್ತವೆ. ಇವನ್ನು ಪ್ರಾಣಲಿಂಗಕ್ಕೆ ಮಾಡುವದು. ಪ್ರಸಿದ್ಧ ಪ್ರಸಾದ ಪ್ರಣಮಗಳು ಪ್ರಸಾದಲಿಂಗ ಮಹಾಲಿಂಗಕ್ಕೆ ಸಂಬಂಧಿಸುತ್ತವೆ. ಇವನ್ನು ಭಾವಲಿಂಗಕ್ಕೆ ಮಾಡುವುದು.

ಟೀಪು:— ಅ, ಉ, ಮ; ಬ, ಸ, ವ; ಓಂ ನ ಮಃ ಶಿ ವಾ ಯ ಇವು ೧೨ ಪ್ರಣಮಗಳು. ಇವುಗಳ ಸ್ಥಾನಭೇದದಿಂದ ಶುದ್ಧಪ್ರಸಾದ ಪ್ರಣಮಳು, ಸಿದ್ಧಪ್ರಸಾದ ಪ್ರಣಮಗಳು. ಪ್ರಸಿದ್ಧಪ್ರಸಾದ ಪ್ರಣಮಗಳು ಉಂಟಾಗುತ್ತವೆಂದು ತಿಳಿಯುವುದು. ಅದೇ ಪ್ರಕಾರ ಶಕ್ತಿಪ್ರಣಮ ಮಂತ್ರ ಗಳು, ಶಿವಪ್ರಣಮ ಮಂತ್ರಗಳು, ಶಿವಶಕ್ತಿರಹಿತ ಪ್ರಣಮ ಮಂತ್ರಗಳು ಉಂಟಾಗುತ್ತವೆ. ಇವುಗಳ ವಿವರಗಳು ಮುಂದೆ ಹೇಳಲ್ಪಡುವವು.

ಪಂಚಾಸ್ತ್ರ ಮಹಾಮಂತ್ರಗಳು:—ಇವು ಶಿವಾಸ್ತ್ರ ಮಂತ್ರ, ಕ್ಷುರಿಕಾಸ್ತ್ರ ಮಂತ್ರ, ಪಾಶುಪತಾಸ್ತ್ರಮಂತ್ರ, ವ್ಯೋಮಾಸ್ತ್ರಮಂತ್ರ, ಅಘೋರಾಸ್ತ್ರಮಂತ್ರ ಎಂದಿರುತ್ತವೆ. ಅವುಗಳ ವಿವರ:—

(೧) ಶಿವಾಸ್ತ್ರಮಂತ್ರ:— ಇದು ಓಂ, ಹಃ, ಅನಂತಶಕ್ತಿ ಧಾಮ್ನೆ ಜ್ಯೋತಿರೂಪಾಯ ಎಂದಿರುತ್ತದೆ.

(೨) ಕ್ಷುರಿಕಾಸ್ತ್ರಮಂತ್ರ :— ಇದು ಓಂ ತಿಕ್ಷ್ಣಕ್ಷಿಭಿ ಚಿಚ್ಛಿದ ಕ್ಷುಂ ಕೃತ ಕ್ಷುರಿಕಾಸ್ತ್ರಾಯ ಫಟ್ ಎಂದಿರುತ್ತಿದೆ.

(೩) ಪಾಶುಪತಾಸ್ತ್ರಮಂತ್ರ:— ಇದು ಓಂ, ಶೀಂ, ಪಶು, ಹುಂ ಫಟ್ ಎಂದಿರುತ್ತದೆ.

(೪) ವ್ಯೋಮಾಸ್ತ್ರಮಂತ್ರ:— ಇದು ಓಂ, ಅಂ, ಈಂ, ಊಂ, ವ್ಯೋಮವ್ಯಾಪಿನೇ ವ್ಯೋಮಾಸ್ತ್ರಾಯ ಫಟ್ ಎಂದಿರುತ್ತದೆ.

(೫) ಅಘೋರಾಸ್ತ್ರಮಂತ್ರಃ— ಓಂ ಸ್ಫುರ ಸ್ಫುರಘೋರ ಘೋರ ತಮ ತನುರೂಪ ಚಟಚಟ ಪ್ರಚಟ ಪ್ರಚಟ ಕಹ ಕಹ ವಮ ವಮ ಬಂಧ ಬಂಧ ಘಾತಾಯ ಘಾತಾಯ ಹುಂ ಫಟ್ ಎಂದಿದೆ.

ಈ ಮಂತ್ರಗಳು ವೀರಶೈವಪರವಾದುವಲ್ಲ. ಆದರೂ ಇವು ರೂಢಿ ಯಿಂದ ಅವುಗಳಲ್ಲಿ ಮುಖ್ಯವಾಗಿ ಶಿವಾಸ್ತ್ರಮಂತ್ರವು ವೀರಶೈವರ ಕೆಲವು ವಿಧಿವಿಧಾನಗಳಲ್ಲಿ ಉಪಯೋಗಿಸಲ್ಪಡುವದುಂಟು.

ಸಿದ್ಧಿ ಮಂತ್ರಗಳುಃ— ಕೆಲವು ಮಂತ್ರಗಳನ್ನು ಸಾಧಕರು ಉಪ ಯೋಗಿಸುವದುಂಟು. ಆದರೆ ಅವು ವೀರಶೈವ ಪರವಾದುವಲ್ಲ. ಸಿದ್ಧಿಗಳನ್ನು ವೀರಶೈವರು ಮಾಡತಕ್ಕದ್ದಲ್ಲ. ಆಯಾ ಮಂತ್ರಗಳ ಕೆಳಗೆ ಕಾಣಿಸಿದ ಹೆಸರುಗಳೇ ಅವುಗಳಿಂದ ಆಗುವ ಸಿದ್ಧಿಗಳನ್ನು ಸೂಚಿಸುತ್ತವೆ.

(ಅ) ಪಂಚೋಪಾಸ್ತ್ರ ಮಂತ್ರಗಳುಃ— ಅವು ಐದು ಇರುತ್ತವೆ. ಯಾವವೆಂದರೆಃ— ಬ್ರಹ್ಮಾಸ್ತ್ರ ಮಂತ್ರ, ಗರುಡಾಸ್ತ್ರ ಮಂತ್ರ, ಅನಲಾಸ್ತ್ರ ಮಂತ್ರ, ಅರುಣಾಸ್ತ್ರಮಂತ್ರ, ಅಘೋರಾಸ್ತ್ರಮಂತ್ರ, ಎಂದಿವೆ. ಈ ಮಂತ್ರ ಗಳಿಂದ ಕೆಲವೊಂದು ಶಕ್ತಿಯನ್ನು ಉಂಟುಮಾಡಿ ಕೊಳ್ಳಬಹುದು.

(ಬ) ಸಂಜೀವನತ್ರಯ ಮಂತ್ರಃ— ಇವು ಮೂರು ಇವೆ. ಯಾವ ವೆಂದರೆಃ— ವಿದ್ಯಾಸಂಜೀವನಮಂತ್ರ, ಆತ್ಮಸಂಜೀ ವನಮಂತ್ರ, ಮೃತ ಸಂಜೀವನಮಂತ್ರ ಎಂದಿವೆ.

(ಕ) ಪಂಚಶಕ್ತಿ ಮಂತ್ರಗಳುಃ— ಅವು ಜೃಂಭಕ, ಪ್ರಸ್ವಾಪನ, ಅಪ್ರತಿಹತ, ನಿಶ್ಚೇಷ್ಟೀಕರಣ, ಜೀವಗ್ರಾಹ ಎಂದಿವೆ.

(ಡ) ಪಂಚಮಾಯಾಮಂತ್ರಗಳುಃ— ಇವು ಕಾಮರೂಪ, ಘೋರ ದರ್ಶನ, ಸಮ್ಮೋಹನ, ವಿಶ್ವರೂಪ, ಗುಲ್ಮಸೃಷ್ಟಿ, ಎಂದಿವೆ.

(ಇ) ಏಕಾದಶ ರೌದ್ರಾಸ್ತ್ರ ಮಂತ್ರಗಳುಃ— ಅವು ರುದ್ರಶೂಲ, ರುದ್ರಶಕ್ತಿ, ರುದ್ರಚಕ್ರ, ರುದ್ರವಜ್ರ, ರುದ್ರಪಾಶ, ರುದ್ರದಂಡ, ರುದ್ರ ಪಿನಾಕ, ರುದ್ರ; ನಾರಾಯಣ, ರುದ್ರಬಾಣ, ರುದ್ರಗದಾ, ರುದ್ರಖಡ್ಗ, ಎಂದಿವೆ.

ಇನಲ್ಲದೆ ಧನಮಂತ್ರಗಳು, ಉಪಶಕ್ತಿಮಂತ್ರಗಳು, ತಾಂತ್ರಿಕ ಸಿದ್ಧಿ ಮಂತ್ರಗಳು ಎಂದು ಬೇರೆ ಅನೇಕ ಮಂತ್ರಗಳಿವೆ. ಆದರೆ ಇವೆಲ್ಲವೂ ವೀರಶೈವರಿಗೆ ವ್ಯರ್ಜವಾದವುಗಳು. ಅವುಗಳ ನಾಮನಿರ್ದೇಶವನ್ನು ಮಾತ್ರ ಇಲ್ಲಿ ಮಾಡಿದ್ದೇವೆ.

ಅಜಪಗಾಯತ್ರೀಮಂತ್ರ:— ಪ್ರಾಣಾಯಾಮಪೂರ್ವಕವಾಗಿ ಇದನ್ನು ಎಲ್ಲಿ ವೈದಿಕರು ಜಪಿಸುವದುಂಟು. ಈ ಮಂತ್ರವೂ ಕೂಡ ವೀರಶೈವರಿಗೆ ಸಂಬಂಧಿಸಿದುದಲ್ಲ. ಇದು ಮೂಲದಲ್ಲಿ ಸೂರ್ಯನಿಗೆ ಸಂಬಂಧಿಸಿದ್ದಿದೆ. ವೈದಿಕ ಧರ್ಮಗಳಲ್ಲಿ ಇದರ ಮಹತ್ವವು ಬಹಳ ಇದ್ದದರಿಂದ, ಇದನ್ನು ಲಿಂಗಪರ ವಾಗಿ ಅರ್ಥಮಾಡಲು ಕೆಲವು ವೀರಶೈವ ಗ್ರಂಥಗಳಲ್ಲಿ ಪ್ರಯತ್ನಗಳು ಮಾಡ ಲ್ಪಟ್ಟಿದ್ದು ತೋರಿಬರುತ್ತದೆ. ಆದರೆ ಶಿವಶರಣರು ಈ ಮಂತ್ರವನ್ನು ಉಪ ಯೋಗಿಸುವದಿಲ್ಲ, ಅವರು ಯಾವಾಗಲೂ ಷಟ್‌ಸ್ಥಲಕ್ಕೆ, ಆಯಾ ಲಿಂಗಗ ಳಿಗೆ, ಪಂಚಾಕ್ಷರಗಳಿಗೆ ಸಂಬಂಧಪಟ್ಟ ಮಂತ್ರಗಳನ್ನೇ ಉಪಯೋಗಿಸುತ್ತಾರೆ. ಅದರ ಕೆಲವು ಸಂದರ್ಭಗಳಲ್ಲಿ ಮಾತ್ರ ಅಪವಾದಾತ್ಮಕವಾಗಿ ತಮ್ಮ ಮಂತ್ರ ಗಳಿಗೆ ವಿರೋಧವಲ್ಲದ ಸಹಾಯಕ ಮಂತ್ರಗಳನ್ನು ಉಪಯೋಗಿಸುವದುಂಟು.

ಬೀಜಾಕ್ಷರಗಳ ಸಮೂಹಗಳು:— ಶಿವಾನುಭವ ಶಾಸ್ತ್ರದಲ್ಲಿ ಬೀಜಾಕ್ಷರ ಗಳನ್ನು ಎರಡು ಗುಂಪುಗಳನ್ನಾಗಿ ಮಾಡಿದ್ದು ಕಂಡುಬರುತ್ತದೆ. ಒಂದು ಗುಂಪಿನಲ್ಲಿ ೮ ಬೀಜಾಕ್ಷರಗಳು ಇವೆ. ಅವು ಬ, ಸ, ವ, ಅ, ಉ, ಮ, ಹಂ, ಕ್ಷಂ, ಎಂದಿವೆ. ಎರಡನೆಯದರಲ್ಲಿ ೫೨ ಬೀಜಾಕ್ಷರಗಳು ಇವೆ. (ನಂ. ೨೦೫ ನೋಡಿರಿ)

ಪ್ರಣವಗಳ ಸಮೂಹಗಳು:— ಮೇಲ್ಕಂಡ ಬೀಜಾಕ್ಷರಗಳ ಸಮೂಹ ಗಳಂತೆಯೇ ಪ್ರಣವಗಳ ಸಮೂಹಗಳೂ ಶಿವಾನುಭವ ಶಾಸ್ತ್ರದಲ್ಲಿ ಕೆಲವು ಹೇಳಲ್ಪಡುತ್ತವೆ. ಅವು ಅನೇಕ ವಿಧವಾಗಿವೆ. ಹೇಗೆಂದರೆ:—

ತ್ರಿವಿಧಪ್ರಣವು, ಷಡ್ವಿಧಪ್ರಣವು, ನವವಿಧಪ್ರಣವು, ದ್ವಾದಶವಿಧ ಪ್ರಣವು, ಏಕವಿಂಶತಿಪ್ರಣವು, ೨೪ ಪ್ರಣವುಗಳು, ೩೬ ಪ್ರಣವುಗಳು, ೧೮ ಪ್ರಣವುಗಳು, ದಶಪಂಚಪ್ರಣವುಗಳು, ಏಕವಿಂಶತಿಪ್ರಣವುಗಳು ಇತ್ಯಾದಿ. ಶಿವಾನುಭವ ಶಾಸ್ತ್ರಕಾರರು ಈ ಪ್ರಕಾರ ಅನೇಕ ವಿಧವಾಗಿ ಮಂತ್ರ ವಿಷಯ ಗಳನ್ನು ಹೇಳಿರುತ್ತಾರೆ. ಪ್ರತಿಯೊಂದು ಪ್ರಣವವು ಕೆಲವೊಂದು ವಿಶಿಷ್ಟ

ವಿಷಯ ಅಥವಾ ತತ್ವದನ್ನು ಸೂಚಿಸುತ್ತದೆ. ಆ ವಿಷಯವು ಅಥವಾ ತತ್ವವು ಷಟ್‌ಸ್ಥಲ ಶಾಸ್ತ್ರಕ್ಕೆ ಸಂಬಂಧಿಸಿದ್ದಿರುತ್ತದೆ. ಈ ಸಂಬಂಧನನ್ನು ತಿಳಿದಲ್ಲಿ, ಕೆಲವೊಂದು ಪ್ರಣಮಗಳ ಗುಂಪು ಆವ ಆವ ವಿಷಯಗಳನ್ನು ನಿರೂಪಿಸುತ್ತ ದೆಂಬುದನ್ನು ಕಂಡುಹಿಡಿಯಬಹುದು. ವಾಚಕರು ಈ ವಿಷಯವನ್ನು ಸ್ವತಂತ್ರ ಗ್ರಂಥಗಳಲ್ಲಿಯೇ ಸಂದರ್ಭಾನುಸಾರ ತಿಳಿದುಕೊಳ್ಳಬೇಕು. ಈಗಿನ ಸಂಕ್ಷಿಪ್ತ ಗ್ರಂಥದಲ್ಲಿ ಇವುಗಳನ್ನು ತಿಳಿಸುವುದು ಶಕ್ಯವಿಲ್ಲ. ಹೀಗೆ ಈ ಎಲ್ಲ ರೀತಿಗಳನ್ನು ತಿಳಿದುಕೊಂಡು ಮಂತ್ರಾರ್ಥವನ್ನು ಲಕ್ಷಿಸಿ ಆಚರಿಸತಕ್ಕದ್ದು. ಮಂತ್ರಜಪ ದಲ್ಲಿ ಆ ಮಂತ್ರಾರ್ಥವನ್ನು ಲಕ್ಷಿಸಿ ತಮ್ಮ ವಿಧಿಗಳನ್ನು ನೆರವೇರಿಸಿದಲ್ಲಿ ಅವು ಪರಿಣಾಮಕಾರಿಗಳಾಗುವವು. ಇವುಗಳಲ್ಲಿ ಮುಖ್ಯವಾದವುಗಳು ಕೆಳಗೆ ಹೇಳ ಲ್ಪಟ್ಟವೆ. ಪ್ರತಿಯೊಬ್ಬ ವೀರಶೈವನು ಅವುಗಳ ಜ್ಞಾನವನ್ನು ಮಾಡಿಕೊಂಡು ಉಪಯೋಗಿಸತಕ್ಕದ್ದು.

ಶತಮಂತ್ರಾಕ್ಷರಗಳು:— ಇವು ಪೂರ್ಣ ವೀರಶೈವಪರವಾದವುಗಳು.

| ಹೆಸರು. | ಪ್ರಣಮ ಸಂಖ್ಯೆ. | |
|---|---|---|
| (೧) ಮೂಲ ಪಂಚಾಕ್ಷರ | ೬ | (ನಂ॥ ೨೦೮) |
| (೨) ಸ್ಥೂಲ ಪಂಚಾಕ್ಷರ | ೯ | (ನಂ॥ ೨೪೯) |
| (೩) ಸೂಕ್ಷ್ಮ ಪಂಚಾಕ್ಷರ | ೫ | (ನಂ॥ ೨೫೦) |
| (೪) ಮಾಯಾಖ್ಯ ಪಂಚಾಕ್ಷರ | ೮ | (ನಂ॥ ೨೫೧) |
| (೫) ಪ್ರಸಾದ ಪಂಚಾಕ್ಷರ | ೧೦ | (ನಂ॥ ೨೫೨) |
| (೬) ನಿರಂಜನ ಪ್ರಣವ, ಶೂನ್ಯ ಪ್ರಣವ, ನಿಷ್ಕಲ ಪ್ರಣವ, ಮತ್ತು ಮೂಲ ಪ್ರಣವಗಳು. | ೪ | |
| (೭) ಷಡಕ್ಷರ ಮಂತ್ರ | ೬ | (ನಂ॥ ೨೦೭) |
| (೮) ಬೀಜಾಕ್ಷರಗಳು | ೫೨ | (ನಂ॥ ೨೦೫) |

———

ಒಟ್ಟು ೧೦೦

# ಶಿವಾನುಭವ

ವರ್ಷ ೨೩ | ಸಪ್ಟಂಬರ ೧೯೫೨ | ಸಂಚಿಕೆ ೯

## ದಾಸೋಹಂಭಾವದ ಬೆಳಕು ಅಥವಾ ಸಾಮರಸ್ಯ ಜೀವನ

(ಲೇಖಕರು:— ಶ್ರೀ ಅನ್ನದಾನೀಶ್ವರ ವಿರಕ್ತಮಠ.)

### ಅಹಂಭಾವದ ಕತ್ತಲೆ

"ನಾನು ವಿರಕ್ತನು! ನಾನು ಪಟ್ಟಾಧ್ಯಕ್ಷನು! ನಾನು ಮಹೇಶ್ವರನು! ನಾನು ಸತ್ಕುಲ ಪ್ರಸೂತನು! ನಾನು ಪಂಡಿತನು! ನಾನು ವೇದ ವೇದಾಂತಾದಿ ಶಾಸ್ತ್ರ ಪಾರಂಗತನು! ನಾನು ಪೂಜ್ಯನು! ಭಕ್ತರು ನನಗಿಂತ ಕಡಿಮೆ. ಭಕ್ತರು ನನ್ನನ್ನು ಪೂಜಿಸತಕ್ಕದ್ದು. ನನಗಾಗಿ ಭಕ್ತರು! ನಾನು ಭಕ್ತರಿಗಾಗಿ ಅಲ್ಲ!" ಎಂಬೀತರದ ಭಾವವು ವಿರಕ್ತ ಪಟ್ಟಾಧ್ಯಕ್ಷರಲ್ಲಿ ಕಂಡುಬರುವದು ಸಮಾಜದ ಅವನತಿಯ ಚಿನ್ಹವು. ಈ ತರದ ಅಹಂಭಾವವು ಅಜ್ಞಾನ, ಅಹಂಕಾರ, ತಾಮಸಗುಣದ ದ್ಯೋತಕವು. ಇಂಥ ಅಹಂಭಾವವುಳ್ಳ ಮಠಾಧಿಪತಿಗಳು ಸ್ವತಃ ನಾಶವಾಗುವದಲ್ಲದೆ ತಮ್ಮನ್ನು ನಂಬಿದ ಸಮಾಜವನ್ನೂ ವಿನಾಶಪಥದಲ್ಲಿ ಕೆಗೆದುಕೊಂಡು ಹೋಗುವರು. ಕತ್ತಲೆಯಲ್ಲಿ ನೀಚ ಕಾರ್ಯಗಳು ಮಾಡಲ್ಪಡುವಂತೆ ಅಹಂಭಾವದ ಕತ್ತಲೆಯಲ್ಲಿ ಅಸತ್ಯದ ಅನಾಚಾರದ ಹೇಯ ಕೃತಿಗಳು ಜರಗುತ್ತವೆ. ಅಹಂಭಾವವು ದೇಹಾತ್ಮ ಮತಿಯನ್ನು ಹೆಚ್ಚಿಸುತ್ತದೆ. ದೇಹಸುಖವೇ ಶ್ರೇಷ್ಠವೆಂಬ ಆಸುರೀ ವೃತ್ತಿಯನ್ನು ಬೆಳೆಸುತ್ತದೆ. ಆಸುರೀ ಪ್ರವೃತ್ತಿಯು ಬಂಧ

ನಕ್ಕೂ, ದೈವೀ ಸಂಪತ್ತು ಮೋಕ್ಷಕ್ಕೂ ಕಾರಣಗಳಾಗಿವೆ. ಇಂಥ ಬಂಧನದಲ್ಲಿ ಬಿದ್ದ ಸ್ವಾಮಿಗಳು ಭೇದ ಭ್ರಾಂತಿಯಿಂದ ತುಂಬಿದವರಿರುತ್ತಾರೆ. ಭೇದ ಬುದ್ಧಿಯಿಂದ ಸ್ವಾರ್ಥೈಕ ವಿಚಾರಗಳು ಪ್ರಬಲವಾಗಿ ಆತ್ಮಮೋಕ್ಷವಾಗಲೀ ಸಮಾಜ ಕಲ್ಯಾಣವಾಗಲೀ ಜಗತ್ತಿನ ಪ್ರಗತಿಯಾಗಲೀ ಸಾಧ್ಯವಾಗುವದಿಲ್ಲ. ಹಿಂದಿನ ಶಿವಯೋಗಿಗಳು, ಶರಣರು, ಮಹಾತ್ಮರು ಅಹಂಭಾವದ ಕತ್ತಲೆಯನ್ನು ನಿರಹಂಕಾರ ಭಕ್ತಿಯೋಗದ ದಿವ್ಯ ಪ್ರಭೆಯಿಂದ ನೀಗಿ. ಆತ್ಮಮೋಕ್ಷ ಮತ್ತು ಮಾನವ ಸಮಾಜದ ಕಲ್ಯಾಣಗಳನ್ನು ತಮ್ಮ ಸಾಮರಸ್ಯ ಜೀವನದಿಂದ ಸಾಧಿಸಿ, ಆಚಂದ್ರಾರ್ಕವಾಗಿ ಸಂಸ್ಮರಣೀಯರಾಗಿ ಲಿಂಗೈಕ್ಯರಾಗಿರುವರು ಅವರ ನೆನಹು, ಸ್ಮರಣೆ ಕೀರ್ತನೆ, ಧ್ಯಾನಗಳು ಸಮಾಜಕ್ಕೆ ಪ್ರಾಣಸ್ವರೂಪವಾದವುಗಳಾಗಿವೆ.

## ದಾಸೋಹಂಭಾವದ ಬೆಳಕು

"ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ! ಬ್ರಹ್ಮವ ನುಡಿದು ಭ್ರಮಿತನಾದೆನಯ್ಯಾ!" ಎಂದು ಶ್ರೀ ಮದಲ್ಲಮ ಪ್ರಭುದೇವರು ಹೇಳಿರುವಂತೆ, ನಾನು ಬ್ರಹ್ಮನು ಎಂದು ಹೇಳುತ್ತ ಸಾಗಿದರೆ ಅಹಂಕಾರವು ಹೆಚ್ಚುತ್ತಾ ಹೋಗುತ್ತದೆ. ಅದ್ವೈತವನ್ನು ಬಾಕ್ಯದಲ್ಲಿ ಬಳಸಬೇಕೆಂದು ಶ್ರೀ ನಿಜಗುಣ ಶಿವಯೋಗಿಗಳು ಹೇಳಿರುವರು. ಬ್ರಹ್ಮದ ನಡೆಯಿಲ್ಲದೇ, ಬ್ರಹ್ಮದ ನುಡಿಯಿಂದ ದುರುಳ ವೇದಾಂತಿಗಳ ತಂಡವು ಬೆಳೆಯುತ್ತದೆ. ದುರುಳ ವೇದಾಂತಿಗಳು ಅನಾಚಾರಿಗಳೂ, ಒಣತಾರ್ಕಿಕರೂ ಡಾಂಭಿಕರೂ, ಆಗಿರುವರು. ಅವರಿಂದ ಸ್ವಪರ ಹಿತವಿಲ್ಲ. ಹಾಗಾದರೆ ಶ್ರೀ. ಪ್ರಭುದೇವರು ಮತ್ತು ಶ್ರೀ. ನಿಜಗುಣ ಶಿವಯೋಗಿಗಳು ದ್ವೈತದ ಭೇದ ಬುದ್ಧಿಯನ್ನೂ ಬ್ರಾಹ್ಮಣ್ಯದ ಕರ್ಮವನ್ನೂ ಬೋಧಿಸಿರುವರೇನು ? ಛೇ! ಸರ್ವಥಾ ಇಲ್ಲ! ಭೇದದಿಂದ ತುಂಬಿದ ಈ ಜಗತ್ತಿನಲ್ಲಿ ಅಭೇದ ಸಾಮರಸ್ಯದ ಅನುಭಾವ ಭಕ್ತಿಯೋಗವನ್ನೇ ಬೋಧಿಸಿರುವರು. ಸಾಧಿಸಿರುವರು. ಇಬ್ಬರೂ ಶಿವಯೋಗಸಿದ್ಧರು. ಶಿವಯೋಗವು ನಿರಹಂಕಾರ ಭಕ್ತಿಯ, ಸುಜ್ಞಾನದ, ಸದಾಚಾರದ ಬೀಡು! ಬಾಕ್ಯದಲ್ಲಿ ದಾಸೋಹಂಭಾವದಿಂದ ಪ್ರೇರಿತ ಸಮಾಜ ಕಲ್ಯಾಣಕ್ರಿಯೆಗಳನ್ನು ಮಾಡುತ್ತ ಅಂತರಂಗದಲ್ಲಿ ಲಿಂಗಾಂಗ ಸಾಮರಸ್ಯವನ್ನನುಭವಿಸುತ್ತ ಜಗತ್ತನ್ನು ಪಾವನ ಮಾಡಿದ ಸಮರಸ ಯೋಗಿಗಳು. ಅವರ ಸಮರಸವೇ ಜೀವನ! ದಾಸೋಹಂಭಾವದ ಬೆಳಕು ದಿವ್ಯವಾದುದು! ಭವ್ಯವಾದುದು! ನಾನು ಶಿವನು

ಎಂದು ನುಡಿದರೆ ಅಂತರಂಗದ ಗರ್ವ. ನಾನು ಶಿವನ ದಾಸನು ಎಂದು ನುಡಿದರೆ ಬಹಿರಂಗದ ಗರ್ವ. ಈ ಉಭಯ ಗರ್ವವನು ಶಿವಶರಣರು, ಶಿವಯೋಗಿಗಳು, ಮಹಾತ್ಮರು ಅತಿಗಳೆದಿದ್ದರು. ನಾನು ಶಿವನ ದಾಸನು ಎಂಬ ನುಡಿಗಿಂತ ನಾನು ಶಿವನ ದಾಸನು ಎಂಬ ಭಾವವು ತಾರಕವಾಗಿದೆ! ಏಕೆಂದರೆ ನುಡಿಯು ಸೂಕ್ಷ್ಮ ಅಹಂಕಾರಕ್ಕೆಳೆಸುವ ಸಂಭವವಿದೆ. ಆದಕಾರಣ ದಾಸೋಹಂಭಾವಕ್ಕೇನೇ ಶರಣರು ಬಹಳ ಮಹತ್ವಕೊಟ್ಟದ್ದು ಕಂಡು ಬರುತ್ತದೆ. 'ಬಾಗಿದ ತಲೆಯ, ಮುಗಿದ ಕೈಯಾಗಿರಿಸು' ಕೂಡಲ ಸಂಗಮದೇವಾ! ಎಂಬ ಶ್ರೀ ಬಸವಂಣನವರು ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ. 'ಎನಗಿಂತ ಕಿರಿಯರಿಲ್ಲ!' ಎಂಬ ಭಾವವು ಅಂಣ ಬಸವಂಣನ ಭಾವವು ಸಮಾಜ ಸೇವೆಗೆ ಪ್ರೇರಣೆ ಕೊಡತಕ್ಕ ದಿವ್ಯ ಪ್ರೇರೇಪಕ ಭಾವವು. ದಾಸೋಹಂಭಾವ ವೆಂದರೆ ನಾನು ಶಿವನ ದಾಸನು ಎಂಬ ಭಾವವು. ಶಿವನು ಅಣುರೇಣು ತೃಣಕಾಷ್ಟಗಳಲ್ಲಿ ತುಂಬಿರುವನು. ಅಂದರೆ ನಾನು ಸರ್ವ ಜಗತ್ತಿನ ಸೇವಕನು. ಇಂಥ ದಾಸೋಹಂಭಾವಿಗಳಾದ ಜಗತ್ತಿನ ಸೇವಕರು ಬಸವಂಣನು ನುಡಿದಂತೆ ಸಕಲ ಜೀವಾತ್ಮರಿಗೆ ಲೇಸನೇ ಬಯಸುವರು. ಲೇಸನೇ ಮಾಡುವರು. "ನಾನು ಜಗದ್ಗುರು. ಎನಗಿಂತ ಹಿರಿಯರಿಲ್ಲ" ಎಂಬ ಭಿಕ್ಷೆಗಾಗಿ ಭ್ರಮಿಸುತ್ತಿರುವ ಪಟ್ಟಾಧ್ಯಕ್ಷರಾಗಲೀ, "ನನ್ನ ಸಮಯ ಹಿರಿದು. ನಾನೇ ಹಿರಿಯನು. ನಾನು ನಿರಂಜನನು" ಎಂದು ರಂಜನೆಗೊಳಗಾದ ವಿರಕ್ತರಾಗಲೀ ಯಾವ ಜಗತ್ತಿನ ಸೇವಯನ್ನು ತಾನೇ ಮಾಡಬಲ್ಲರು? ಇಂಥವರಿಂದ ನಮ್ಮ ಮಠಗಳ ದಾಸೋಹಂಭಾವದ ಪ್ರಾಚೀನ ಬೆಳಕು ನಂದಿ, ಅಹಂಭಾವದ ಕತ್ತಲೆಯಲ್ಲಿ ಮಠಗಳು ಮುಸುಕಾಗಿ ಹೋಗಿರುತ್ತವೆ.

## ದಾಸೋಹ ಮಠಗಳು.

ಶಿವಶರಣರ ದಾಸೋಹಂಭಾವ ತತ್ವದಿಂದ ಜಗತ್ತಿಗೆ ಕಲ್ಯಾಣವಾಗಿದೆ. ಎಂಬ ಮಾತಿಗೆ ನಮ್ಮ ದಾಸೋಹ ಮಠಗಳೇ ಸಾಕ್ಷಿಗಳಾಗಿವೆ ಯೆಂದು ಹೇಳಬಹುದು. ದಾಸೋಹಂಭಾವದಿಂದ ಮಾನವ ಸಮಾಜ ಕಲ್ಯಾಣದ ಮಹಾಸಂಸ್ಥೆಗಳೇ ನಿರ್ಮಾಣವಾಗಿ ಹೋಗಿವೆ. ದಾಸೋಹಂಭಾವವುಳ್ಳ ಶರಣನು ಮಹಾಸಂಸ್ಥೆಯೇ ಸರಿ. ಶರಣರಿಂದ ಭವ್ಯವಾದ ದಾಸೋಹಮಠಗಳು ನಿರ್ಮಾಣವಾಗಿವೆ. ದಾಸೋಹ ಮಠಗಳಲ್ಲಿಯು

ಹಿಂದಿನ ಶರಣರು, ಶಿವಯೋಗಿಗಳು, ಮಹಾತ್ಮರು ಕ್ರಿಯಾಮೂರ್ತಿಗಳಾಗಿದ್ದರು. ಸೇವಾ ಮೂರುತಿಗಳಾಗಿದ್ದರು. ನಿರಹಂಕಾರದ ಭಕ್ತಿಯೋಗಿಗಳಾಗಿದ್ದರು. ಸಮಾಜಸೇವಕರಾಗಿದ್ದರು. ಭಕ್ತ ಮತ್ತು ಮಹೇಶ್ವರ ಎಂಬೆರಡು ಸ್ಥಲಗಳೇ ಹೊರತು ಎರಡು ಜಾತಿಗಳೆಂದು ಅವರು ಭಾವಿಸಿದ್ದಿಲ್ಲ. ಇಂದಿಗೂ ಎಷ್ಟೋ ಮಠಗಳಲ್ಲಿ ಭಕ್ತರೇ ವಿರಕ್ತಸ್ವಾಮಿಗಳಾಗಿರುವದು ಈ ಮಾತಿಗೆ ಸಾಕ್ಷಿಯಾಗಿ ನಿಂತಿರುವದು. ದಾಸೋಹ ಮಠಗಳಲ್ಲಿಯ ದಾಸೋಹ ಮೂರ್ತಿಗಳಾಗಿದ್ದ ಶಿವಯೋಗಿಗಳು ಸಮಾಜವನ್ನು ಹೇಗೆ ಉದ್ಧರಿಸುತ್ತಿದ್ದರು? ನೋಡೋಣ. ಅವರು ಶ್ರೀಮಂತ ಬಡವ, ಭಕ್ತ-ಮಹೇಶ್ವರ, ಅಧಿಕಾರಿ-ಭಿಕ್ಷುಕ, ಮುಂತಾದ ಭೇದವನ್ನು ಮಾಡುತ್ತಿದ್ದಿಲ್ಲ. ಬಣಜಿಗ, ಪಂಚಮಸಾಲಿ, ಶಿವಸಿಂಪಿ ಸಾದರು, ಹಡಪದವರು, ಮಡಿವಾಳರು ಇತ್ಯಾದಿ ಒಳಪಂಗಡಗಳ ಭೇದಗಳು ಜಂಗಮರ ಮಠಗಳಲ್ಲಿ ನಾಮಶೇಷವಾಗಿ ಸಮಾಜೈಕ್ಯವೂ ಕಲ್ಯಾಣವೂ ಸಹಜವಾಗಿ ಸಾಧ್ಯವಾಗುತ್ತಿತ್ತು. ಅವರಿಗೆ ಸಮಾಜದವರು ಅಪ್ಪನವರು, ಅಯ್ಯನವರು ಎಂದು ಆತ್ಮೀಯಭಾವದಿಂದ ಕರೆಯುತ್ತಿದ್ದರು. ಈಗಿನಂತೆ ಕೃತ್ರಿಮರೀತಿಯಲ್ಲಿ ಜಗದ್ಗುರುಗಳೆಂದು ಕರೆಯುತ್ತಿದ್ದಿಲ್ಲ. ಹಿರಿದುಕೊಂಡು ಬಂದು ಕರೆದುಕೊಂಡು ಉಂಡು ಎಂಬ ನೇಮಕ್ಕನುಸರಿಸಿ-ಮಠಕ್ಕೆ ಬಂದ ಅತಿಥಿಗಳನ್ನು ತಮ್ಮೊಡನೆ ಕರೆದುಕೊಂಡು ಸ್ವಾಮಿಗಳು ಸಹ ಪಂಕ್ತಿ ಭೋಜನ ಮಾಡುತ್ತಿದ್ದರು. ಪಂಕ್ತಿಭೇದವನ್ನು ಮಾಡುತ್ತಿದ್ದಿಲ್ಲ. ತಂದೆ ಮಕ್ಕಳು ಉಂಡಂತೆ ಸ್ವಾಮಿಗಳೂ ಭಕ್ತರೂ ಪ್ರಸಾದ ಸೇವಿಸುತ್ತಿದ್ದರು.

ಈ ದಾಸೋಹ ಮಠಗಳಲ್ಲಿ ಭಕ್ತರು ಭಕ್ತಿಯ ಲಿಂಗಪೂಜೆಯನ್ನು ಸ್ವಾಮಿಗಳಿಂದ ಕಲಿಯುತ್ತಿದ್ದರು. ಅರ್ಚನ, ಅರ್ಪಣಗಳಾದ ಮೇಲೆ ಅನುಭಾವವು ಸಾಗುತ್ತಿತ್ತು. ದಾಸೋಹಮಠಗಳು ಜ್ಞಾನ, ಭಕ್ತಿ, ಸದಾಚಾರ, ಸೇವೆ, ಇತ್ಯಾದಿ ಸಾಂಸ್ಕೃತಿಕ ಬೆಳವಣಿಗೆಯನ್ನೂ ಮಾಡುತ್ತಿದ್ದವು. ದಾಸೋಹಮಠಗಳ ಜೀರ್ಣೋದ್ಧಾರವೂ, ಸಮಾಜದ ನಿಜಭಕ್ತಿಯ ಜೀರ್ಣೋದ್ಧಾರವೂ ಕೂಡಿಯೇ ಸಾಗುತ್ತಿದ್ದವು. ದಾಸೋಹ ಮಠಗಳ ಪ್ರಭಾವದಿಂದ ಎಷ್ಟೋ ಭಕ್ತರು ತಮ್ಮ ಮನೆಗಳನ್ನೇ ಮಠಗಳಂತೆ ಪವಿತ್ರವಾಗಿ ಮಾಡಿಕೊಳ್ಳುತ್ತಿದ್ದರು. ಭಕ್ತನ ಮನೆಗೂ ಮಠವೆಂಬ ಹೆಸರು ಬಂದಿರುತ್ತದೆ. ದಾಸೋಹಮಠಗಳ ಸಾಮರಸ್ಯ ಜೀವನವು ಸಮಾಜದಲ್ಲಿ ಸಂಘಟನೆ, ಬಂಧುತ್ವ, ಸದಾಚಾರಗಳನ್ನು ಹರಡಲಿಕ್ಕೆ ಸಾಧನವಾಗಿದ್ದವು.

## ದಾಸೋಹಂಭಾವ ತತ್ವವಿವೇಚನೆ.

ಲಿಂಗವಂತರ ಷಟ್‌ಸ್ಥಲದಲ್ಲಿ ಶರಣಸ್ಥಲವಿದೆ. ಶರಣನು ಸರ್ವಾರ್ಪಣಭಾವದ ಶಿವದಾಸನು. ಶಿವಾರ್ಪಣವಿಲ್ಲದೆ ಶರಣನು ಭೋಗಿಸುವದಿಲ್ಲ. ಶರಣನು ಲಿಂಗಭೋಗೋಪಭೋಗಿಯು. ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಸಾಧಿಸುವ ರೀತಿಯಿದು. ಶುದ್ಧಾಂತಃಕರಣದ ಜೀವಿಯೇ ಅಂಗನು. ಈ ಭಕ್ತಜೀವಿಯೇ ಶರಣನಾಗುತ್ತಾನೆ. ಅಂಗಸ್ಥಲದಲ್ಲಿಯ ಶರಣನಿಗೂ, ಲಿಂಗಸ್ಥಲದಲ್ಲಿಯ ಪ್ರಸಾದಲಿಂಗಕ್ಕೂ ಸಂಬಂಧವಿದೆ. ಪ್ರಸಾದಲಿಂಗಸಂಬಂಧವುಳ್ಳ ಶರಣನೇ ಪ್ರಸಾದಿಕ ಜೀವನವನ್ನು ಪಡೆಯುತ್ತಾನೆ. ಪ್ರಸಾದಲಿಂಗಕ್ಕೆ ಅರ್ಪಿಸಿದ ಎಲ್ಲ ತನ, ಮನ, ಜೀವಗಳೂ ಪ್ರಸಾದರೂಪವಾಗುತ್ತವೆ. ಪ್ರಸಾದಿಕರೆಂದರೆ ಶರಣರು. ನಾವು ಘಾಟೀ ಪ್ರಸಾದಿಕರು ಶರಣರಲ್ಲ. ಶರಣಸ್ಥಲದಲ್ಲಿ ಮಾತು ಇದೆ. ಐಕ್ಯಸ್ಥಲದಲ್ಲಿ ಇಲ್ಲ. ಶರಣಸ್ಥಲದಲ್ಲಿ ಜಗದ್ಗುರುತ್ವವಿದೆ. ಶರಣನೇ ಜಗದ್ಗುರುವು. ತನ್ನ ಆಧ್ಯಾತ್ಮಿಕ, ನೈತಿಕ, ಸದಾಚಾರದ ಪ್ರಭಾವದಿಂದ ಜಗತ್ತನ್ನು ಸುಧಾರಿಸುವವನೇ ಶರಣನು. ಆದಕಾರಣ ಶರಣನು ಜಗದ್ಗುರುವು. ಇಂತಪ್ಪ ಶರಣನೇ ದಾಸೋಹಂಭಾವಿಯು. ಇಲ್ಲಿ ದಾಸ ಎಂಬ ಪದಕ್ಕೆ ಗುಲಾಮ ಎಂಬ ಅರ್ಥವಿಲ್ಲ. ದಾಸನೆಂದರೆ ಸೇವಕ. ಭಕ್ತ. ಶರಣ. ಸರ್ವವನ್ನೂ ಶಿವನಿಗೂ ಶಿವಸಮಾಜಕ್ಕೂ ಅರ್ಪಿಸಿದ ಲಿಂಗಾಂಗಿ. ಪರಮಸಮರಸಯೋಗಿ. ಗುಲಾಮನಿಗೆ ಆಶೆ, ಭಯಗಳಿವೆ. ದಾಸೋಹಂಭಾವಿಯಾದ ಶರಣನಿಗೆ ನಿರಾಶೆ, ನಿರ್ಭಯಗಳಿವೆ. ಗುಲಾಮನು ಪರಾವಲಂಬಿಯು. ದಾಸೋಹಂಭಾವಿಯು ಸ್ವತಂತ್ರನು. ಕಾಯಕದಿಂದ ದಾಸೋಹ ಮಾಡುವವನೇ ದಾಸೋಹಂಭಾವಿಯು. ಶರಣನು. ಗುಲಾಮನಿಗೆ ತತ್ವಪ್ರೀತಿಯಿಲ್ಲ. ಈ ದಾಸನಿಗೆ ತತ್ವಪ್ರೀತಿಯಿದೆ. ಭಕ್ತಿಯಿದೆ. ಈ ದಾಸನಲ್ಲಿ ಮನೋನೈರ್ಮಲ್ಯವೂ, ಬುದ್ಧಿಸ್ಥಿರತೆಯೂ, ತ್ಯಾಗಭಾವವೂ, ಪ್ರೇಮವೂ, ಯೋಗಿಗಳಿಗೆ ಅಗಮ್ಯವಾದ ಸೇವಾಧರ್ಮವೂ, ಲಿಂಗದೃಷ್ಟಿಯಿಂದ ಸಮಾಜ ಸೇವೆ ಮಾಡುವ ಕ್ರಿಯಾಶಕ್ತಿಯೂ ಇವೆ. ಆದರೆ ಗುಲಾಮನಲ್ಲಿ ಈ ಯಾವ ಗುಣಗಳೂ ಇಲ್ಲ. ದಾಸೋಹಂಭಾವಿಯ ವೈಶಿಷ್ಟ್ಯವೇನು? ಈ ದಾಸೋಹಂಭಾವಿಯು ಜಗದ ಸೇವೆಯನ್ನು ಮಾಡುತ್ತಿದ್ದರೂ ಅಂತರಂಗದಲ್ಲಿ ಶಿವಾದ್ವೈತಿಯು ಶಕ್ತಿವಿಶಿಷ್ಟವಾದ ಅದ್ವೈತದ ದಿವ್ಯಾನುಭವವುಳ್ಳವನು. ಶಿವನಾಗಿ ಜಗದ ಸೇವೆ

ಯನ್ನು ಮಾಡುವ ಜಂಗಮನೇ ಈ ದಾಸೋಹಂಭಾವಿಯು. ಶಿವಾನ್ಯ ಭಾವವಿಲ್ಲದ ಭೇದಭ್ರಾಂತಿಯ ಕರ್ಮಿಯು ದ್ವೈತಭಾವದಲ್ಲಿರುವನು. ಶಿವಾನುಭಾವವುಳ್ಳ, ಭೇದವಿಲ್ಲದ, ಕರ್ಮರಹಿತ, ಕ್ರಿಯಾಯುಕ್ತ, ಸಮಾಜ ಸೇವಕನು ದಾಸೋಹಂಭಾವಿಯು. ಈ ಬಸವ ವಚನವನ್ನು ನೋಡಿರಿ

"ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನಭಾವವರಿಯದೆ ಶಿವ ಶಿವ ಎನುತಿರ್ದೆನಯ್ಯ! "

ಸಮುದ್ರದಂತೆ ಶಿವನು. ಆಣೆಕಲ್ಲಿನಂತೆ ಶುದ್ಧ ಜೀವನು. ಆಣೆ ಕಲ್ಲು ಸಮುದ್ರದಲ್ಲಿ ಬಿದ್ದರೆ ಸಮರಸವಾಗುವದು. ಅದರಂತೆ ಶುದ್ಧ ಜೀವಿಯಾದ ಶರಣನು ಶಿವಾನುಭಾವದಲ್ಲಿ ಲೀನನಾಗಿ ಐಕ್ಯಸ್ಥಲದ ಬೆಳ ಕಿನಲ್ಲಿಯೇ ದಿವ್ಯ ಜೀವನವನ್ನು ಜೀವಿಸುತ್ತಿರುವನು. ಆದರೂ ಶಿವ ಶಿವ ಎಂದು ಅನ್ನುತ್ತಿರುತ್ತಾನೆ ನಾಲಿಗೆಯಿಂದ. ಆದರೆ ಭಿನ್ನಭಾವವಿಲ್ಲ. ಇದೇ ದಾಸೋಹಂಭಾವದ ವೈಶಿಷ್ಟ್ಯ. ದಿವ್ಯಾನುಭಾವವನ್ನು ಉಂಡು ಶರಣಸ್ಥಲದಲ್ಲಿ ನಿಂತು ಜಗತ್ತಿಗೆ ಉಣಿಸುತ್ತಿರುವವನೇ ದಾಸೋಹ ಮೂರುತಿಯು. ಇಂಥ ಸಾಮರಸ್ಯಜೀವನ ಸಮಾಜದಲ್ಲಿ ಪ್ರಕಾಶಿಸಲಿ?

---

## ಕಾಯಕದ ಕಲೆ

( ಲೇಖಕರು:— ಶ್ರೀ. ಎನ್. ಆರ್. ದೇಸಾಯಿ, ಮು.-ಸಿಂದಗಿ. )

### ಕಾಯಕದ ಅನುಗ್ರಹ

ವಿಶ್ವದ ಉತ್ಪತ್ತಿಯ ಮೂಲ ನೇಮವು ಕಾಯಕವು. ಕಾಯಕ ವಿಲ್ಲದೆ ಜೀವನದಲ್ಲಿ ಸ್ವಾದವೇ ಇಲ್ಲ; ಅಲ್ಲದೆ, ನಮ್ಮ ದೇಹ, ಮನಸ್ಸು ಅಥವಾ ನೀತಿಯ ಮೆಟ್ಟಿಲುಗಳು ಬೆಳೆದು ಪೂರ್ಣತ್ವವನ್ನು ಹೊಂದಲಾರವು. ಜೀವಿತದಲ್ಲಿ ಬೇರೆ ತೋರುವ ಸುಂದರ ಮಾಟಗಳಲ್ಲಿ ವ್ಯವಸಾಯವೂ ಒಂದಾಗಿರುವದು. ಇದು ಮನುಷ್ಯನ ಮನದ ಬಲವರ್ಧನಿಯಂತೆಯೂ ಇರುವದು. ದೇಹ ಮನಗಳ ಕ್ರಿಯಾ ಶಕ್ತಿಗೆ ಇದು ಮತ್ತಿಷ್ಟು ಉತ್ತೇ ಜನವನ್ನೂ ಕೊಡುವದು. ಕಾಯಕದಲ್ಲಿ ಇಂಥ ಅನುಗ್ರಹ ಶಕ್ತಿ ಇದ್ದಿ ಲ್ಲವಾದಲ್ಲಿ ಮನುಷ್ಯನ ದೇಹದ ಯಂತ್ರವೇ ತುಂಡರಿಸಿ ಬೀಳುತ್ತಿತ್ತು

ನೌಕರಿಯಿಂದ ನಿವೃತ್ತಿ (ಪೆನ್‌ಶನ್) ಹೊಂದಿದವರಲ್ಲಿ ಇಂಥ ಎಷ್ಟೋ ನೋಟಗಳನ್ನು ಕಾಣುತ್ತೇವೆ. ನಿಯಮಿತ ಕಾಯಕಗಳಿಲ್ಲದಂತಾದ ಕಾರಣ ಅವರ ನಿತ್ಯದ ಜೀವನದಲ್ಲಿ ತುಂಬಲಾರದ ಏನೋ ಒಂದು ಡೊಗರು ಬಿದ್ದಂತಾಗುವದು. ಹೀಗಾಗಿ ಅವರ ಆಯುಷ್ಯವೇ ಆಕುಂಚಿತವಾದಂತಾಗಿ ಅವರ ಆರೋಗ್ಯವೂ ಹುಮ್ಮಸವೂ ತೀವ್ರ ಗತಿಯಿಂದ ಇಳಿಮುಖ ಹೊಂದುವವು. ಉತ್ತಮ, ಪ್ರಾಮಾಣಿಕ ಹಾಗು ನಿಯಮಿತ ಕಾಯಕವೇ ದೇಹಮನಗಳ ಸಮತೋಲವನ್ನು ಕಾಯುವದು. ಅತಿಯಾಗಿ ದಣಿಯುವಿಕೆಯ ಪ್ರಸಂಗಗಳನ್ನು ಬಿಟ್ಟರೆ ದಣಿಸುವ ಕಾಯಕವೇ ಆರೋಗ್ಯವನ್ನೂ ಆಯುಷ್ಯದ ಬೆಳವಣಿಗೆಯನ್ನೂ ಹೆಚ್ಚಿಸುವದು. "ಕ್ರಿಯಾ ಮಂಥನದಲ್ಲಿ ಮಾತ್ರ ನೂರು ವರ್ಷ ಬಾಳಲು ಬಯಸಬಲ್ಲಿ." ಎಂದು ಹೇಳಿದ ಉಪನಿಷತ್ತಿನ ಉಕ್ತಿಯು ಎಷ್ಟು ನಿಜವಿದೆ!

ಹಿಂದಿನ ಮಹಾಪುರುಷರ ದೃಷ್ಟಾಂತವನ್ನು ಅವಲೋಕಿಸಿದಲ್ಲಿ ಸಾಧಾರಣವಾಗಿ ಅವರ ಜೀವನವು ನಾನಾಬಗೆಯ ಜೀವಾಳದ ಕಾರ್ಯಗಳಿಂದ ತುಂಬಿ ತುಳುಕತ್ತಿದ್ದುದು ಕಂಡು ಬರುವದು.

ಆಲಸ್ಯಮಯ ಮನವು ಭೂತನ ಕಮ್ಮಟವಂತಿರುವದು. ಮನುಷ್ಯನಿಗೆ ಮೈತುಂಬ ಕೆಲಸವಿಲ್ಲದಿದ್ದಲ್ಲಿ ಅವನು ಚಿಂತೆ, ಅಂಜಿಕೆ ಕುವಿಚಾರ ಮೊದಲಾದ ತರತರದ ನಿರಾಶಾಮಯ ವಿಕಾರಗಳಿಂದ ಸುತ್ತಲ್ಪಡುವನು. ದುಡಿತಕ್ಕಿಂತ ಹೆಚ್ಚಾಗಿ ಆಲಸ್ಯದಿಂದಲೇ ನಿರ್ವಿಣ್ಣ್ಯವಾದದ್ದು ಕಡೆಯಲ್ಲಿ ಕಂಡು ಬರುವದು. ಕೆಲಸವೇ ಇಲ್ಲದಿದ್ದಲ್ಲಿ ಜೀವನವೇ ಬಾಳಲಾರದ ಭವಣೆಯಾದೀತು! ವಿಶ್ವದ ಕ್ರಿಯೆಯಲ್ಲಿ ಯಾವನು ತನ್ನ ಪಾಲಿನ ಕಾರ್ಯವನ್ನು ಸಲ್ಲಿಸಲು ತಪ್ಪುವನೋ ಅವನಿಗೆ ಋಣಗೂಳಿ ಎಂದು ಅನ್ನಬೇಕಾಗುವದು. **ಜೀವಿತದಲ್ಲಿ ದುಡಿದದ್ದನ್ನು ಮಾತ್ರ ಭೋಗಿಸಲು ಜೀವಿಯು ಅರ್ಹನು. ಏನನ್ನೂ ಕೊಡದೆ ಏನನ್ನೂ ಪಡೆಯನು.** ಹೀಗಿದ್ದು ಯಾವದಕ್ಕಾಗಿ ಅದನ್ನು ದುಡಿದಿಲ್ಲವೋ ಅದನ್ನು ಪಡೆಯಲು ಬಯಸಿದರೆ, ತನ್ನಲ್ಲಿದ್ದುದನ್ನು ಕೂಡ, ಅಂದರೆ ತನ್ನ ಚಾರಿತ್ರ್ಯವನ್ನೂ ಅರ್ಹತೆಯನ್ನೂ ಕೂಡ ಕಳೆದು ಕೊಳ್ಳುವ ಪ್ರಸಂಗ ಬರಬಹುದು. ಸತತೋದ್ಯೋಗಿಯು ದುರಾಶೆ, ನಿರಾಶೆ, ಮತ್ಸರ, ಹಾಗೂ ಅಸೂಯೆಗಳ ಪೆಟ್ಟು ತಿಂದು ಮೇಲಿಂದ ಮೇಲೆ ತೊಳಲಾಡ ಬೇಕಾಗುವದು.

## ಕಾಯಕದಲ್ಲಿ ಪ್ರೀತಿ ಕಕ್ಕುಲತೆ

ಮನುಷ್ಯ ವರ್ಗಕ್ಕೆ ಕಾಯಕವು ಮಹದುಪಕಾರಿಯಾದುದರಿಂದ ಆದರದ ಭಾವನೆಯಿಂದ ಮಾತ್ರ ಅದರತ್ತ ನೋಡುವದು ತಿಳಿವಳಿಕೆಯ ಮಾತು. ಕಾಯಕವು ಎಂಥದೇ ಇರಲಿ ಅದನ್ನು ಸುಂದರವಾಗಿ ನೆರವೇರಿಸುವ ಮೊದಲನೇ ತತ್ವವೆಂದರೆ ಅದರಲ್ಲಿ ಕಕ್ಕುಲತೆಯನ್ನು ಹುಟ್ಟಿಸುವದೂ, ಅದರಲ್ಲಿ ಅಭಿರುಚಿಯನ್ನು ಹುಟ್ಟಿಸುವದೂ ಅದರಲ್ಲಿ ಆನಂದವನ್ನು ಹುಟ್ಟಿಸುವದೂ ಆಗಿರುವದು. ಕಾಯಕದಲ್ಲಿ ತಲ್ಲೀನ ಭಾವವನ್ನು ಅಳವಡಿಸುವದು ಕಾಯಕದ ಅಚ್ಚುಕಟ್ಟು ಹಾಗು ಯಶಸ್ಸಿನ ಮೂಲಮಾತು. ಹರಿದು ಹಂಚಿಹೋದ ವಿದ್ವದ್ಗುಣಗಳನ್ನು ಇದು ನಮ್ಮ ಕಾಯಕದಲ್ಲಿ ಏಕೀಕೃತವಾಗಿ ಮಾಡುವದು. ಕಾಯಕದಲ್ಲಿಯ ಜಾಡ್ಯವನ್ನೂ ಬೇಸರವನ್ನೂ ಹೊಡೆದೋಡಿಸುವದು. ಜಾಡ್ಯವು ಕಾಯಕವನ್ನು ಕೆಲಕಾಲದಲ್ಲಿ ಆನಂದಪ್ರದ ಕಾಯಕವನ್ನಾಗಿ ಮಾರ್ಪಡಿಸುವದು. ಕಾಯಕದಲ್ಲಿ ಅಭಿರುಚಿ ಇಲ್ಲದಿದ್ದಲ್ಲಿ ಆ ಕಾಯಕವಲ್ಲಿ ತಲೆ ಚಿಟ್ಟುಹಿಡಿಯುವದು. ಹೀಗಾಗಿ ದಣಿವು ಮತ್ತಿಷ್ಟು ಹೆಚ್ಚುವದು. ಅದರಿಂದ ಕಾಯಕದ ಮಾಟದಲ್ಲಿಯೂ ಕೊರತೆಯು ಉದ್ಭವಿಸುವದು.

ವಿಜ್ಞಾನವು ಯಂತ್ರವನ್ನು ಉಗಿಯನ್ನು ಹಾಗು ವಿದ್ಯುತ್ತನ್ನು ಮನುಷ್ಯನ ಸೇವಕನನ್ನಾಗಿ ಮಾಡಿಬಿಟ್ಟಿದೆ. ಎಷ್ಟೋ ಕ್ಷೇತ್ರಗಳಲ್ಲಿ ಮಾನವ ಬಲದ ಬದಲು ಯಾಂತ್ರಿಕ ಬಲವನ್ನು ನೆಲಗೊಳಿಸಿದೆ. ಆದಾಗ್ಯೂ ಮಾನವನು ನಿರುತ್ಸಾಹಿಯು ತನಗೆ ಬೇಡಾದ ಇಲ್ಲವೆ ಕಷ್ಟಕರವಾದ ಸಂಣಪುಟ್ಟ ಎಷ್ಟೋ ವ್ಯವಸಾಯಗಳನ್ನು ಮಾಡಲೇ ಬೇಕಾಗುವದು. ಇಂಥ ಕಾರ್ಯಗಳನ್ನು ಮಾಡುವದು ಯಾವನ ಪಾಲಿಗೆ ಬರುವದೋ ಅವನು ಆ ಕಾಯಕದಲ್ಲಿ ತಲ್ಲೀನನಾಗಿ ತನ್ನ ಮನವನ್ನೂ ಆತ್ಮನನ್ನೂ ಸಂಪೂರ್ಣವಾಗಿ ಅರ್ಪಿಸಬೇಕಾಗುವದು. ತನ್ನ ಕಾಯಕನ್ನು ಪ್ರೀತಿಸುತ್ತಿದ್ದಲ್ಲಿ ಮಾತ್ರ ಮುಂದಿನ ಮೇಲ್ಕಟ್ಟದಲ್ಲಿ ಅವನು ಮೊದಲ ಹೆಜ್ಜೆಯನ್ನಿಟ್ಟಂತೆ; ವ್ಯವಸಾಯದ ಹೋಬನದಂತೆ. ಮೋಟರದೊಳಗಿನ ಪ್ರತಿಯೊಂದು ಸ್ಕ್ರೂ ಮೊಳೆಯು ಉಪಯುಕ್ತ ಕಾರ್ಯ ನೀಡುವಂತೆ, **ಕಾಯಕವು ಎಷ್ಟೇ ಕ್ಷುಲ್ಲಕವಿರಲಿ ತನ್ನ ಪಾಲಿನ ಕಾರ್ಯವನ್ನು ಚೊಕ್ಕಟವಾಗಿ ನೆರವೇರಿಸುವವನು ಸಾಮಾಜಿಕ ಸುಧಾರಣೆಯಲ್ಲಿ ಬಹು ಅಮೋಲ್ಯ ಸೇವೆಯನ್ನು ನೀಡಿದಂತೆಯೇ ಸೈ!** ಎಂಥಕೀಳು

ಕಾಯಕವೇ ಇರಲಿ, ಈ ತತ್ವವನ್ನು ಮನನ ಮಾಡಿದಲ್ಲಿ ತನ್ನ ಕಾಯಕದಲ್ಲಿ ತಾನು ಸಾಮರಸ್ಯವನ್ನು ಪಡದೇ ಪಡೆಯುವನು.

ಮನುಷ್ಯನ ಕಾರ್ಯಭಾಗವು ಆತನ ಜೀವನದರ್ಧ ಭಾಗದಷ್ಟು ಇರುವದು. ಆ ಕಾರ್ಯದತ್ತ ತುಚ್ಛತೆ ಇಲ್ಲವೆ ವೈರಭಾವ ತಾಳಿ ನಡೆದಲ್ಲಿ ಅಥವಾ ನಿರ್ಲಕ್ಷ್ಯ ತಾಳಿದರೂ ಕೂಡ, ಈ ಅರ್ಧ ಆಯುಷ್ಯದಲ್ಲಿ ತಿಕ್ಕಾಟವೂ ಶಕ್ತಿನಾಶವೂ ಆದಂತೆ.

ಡಾಕ್ಟರ ಓ. ಎಸ್. ಮಾರ್ಡೆನ್‌ರು ಹೇಳುವದೇನಂದರೆ:—

“ಕಾಯಕಗಳಲ್ಲಿಯ ನಿಮ್ಮ ಪ್ರೀತಿಯು ನಿಮ್ಮ ಆಯುರಾರೋಗ್ಯವನ್ನು ಹುಟ್ಟಿಸುವದು; ಕಾರ್ಯಮಾಡುವ ನಿಮ್ಮ ಯೋಗ್ಯತೆಯನ್ನು ಹೆಚ್ಚಿಸುವದು. ಹಣ್ಣು ಹೂಗಳಿಗೆ ಬಿಸಿಲಿನ ಅವಶ್ಯಕತೆಯು ಹೇಗೋ ಹಾಗೆ ಕಾಯಕದಲ್ಲಿ ಆನಂದದ ಅವಶ್ಯಕತೆ ಮನಸ್ಸುಗೊಟ್ಟು ಮಾಡಿದಾಗ ಮಾತ್ರ ಮನುಷ್ಯನು ಹೆಚ್ಚಾಗಿಯೂ ಹೆಚ್ಚು ಉತ್ತಮವಾಗಿಯೂ ಕಾರ್ಯಗಳನ್ನು ಮಾಡಬಲ್ಲನು.”

ಕಾಯಕವು ಕಠಿಣವಿದ್ದಷ್ಟು ಅದರಲ್ಲಿ ಹೆಚ್ಚಾಗಿ ಕಕ್ಕುಲತೆಯನ್ನಿಟ್ಟು ಪ್ರೀತಿಸಬೇಕು. ಕಾಯಕವು ಕಠಿಣವಿದ್ದಷ್ಟೆಲ್ಲ ಆ ಕಾಯಕ ಮಾಡುವವರಲ್ಲಿಯೇ ಹೆಚ್ಚಾಗಿ ಸಾಹಸದ ಅನುಕಂಪವಿರುವದು. ಅದು ನಮ್ಮ ವಿದ್ವದ್ಗುಣಗಳನ್ನು ಪಡೆಯಲೂ ಹಾಗು ಹೆಚ್ಚಾಗಿ ಬೆಳಸಲೂ ಆಸ್ಪದವನ್ನೀಯುವದು.

ಕಾಯವೇ ಒಂದು ತರದ ಶಿಕ್ಷೆಯಿದೆ ಎಂದು ಗಣಿಸುವವರು ಅತ್ಯಲ್ಪ ಜನರಿರುವೆವು. ಪ್ರತಿದಿನ ಬೆಳಗಿನಲಿ ಎದ್ದು ಬಲುಮೆಯಿಂದ ಒತ್ತಾಯ ಪಡಿಸಲ್ಪಟ್ಟವರಂತೆ ಅಲ್ಲಿ ನಾವು ಅದರತ್ತ ನೋಡುವೆವು. ಕೆಲ ಕಾರ್ಯಗಳು ಬೇಡಾದವಿರುವವೆಂಬದು ನಿಜ. ಅವುಗಳನ್ನು ಮಾಡುವ ಕಾರ್ಯಪದ್ಧತಿಯ ಮೂಲಕ ಅವು ಮತ್ತಿಷ್ಟು ಹಾಗೆ ಕಾಣುವವು. ಆದಾಗ್ಯೂ ಅವುಗಳು ಶಿಕ್ಷೆಯಂತಿರುವವೆಂದು ಗಣಿಸುವದು ತಪ್ಪು. ನಮ್ಮ ಕಾಯಕದತ್ತ ವೈರಭಾವದಿಂದ ಕಾಣುವದು ಹೆಚ್ಚಾಗಿ ಅಪಾಯವನ್ನೇ ಎಸಗುವದು. ಗುಣಗುಟ್ಟುತ್ತ ಬೇಡಾದ ಭಾವದಿಂದ ಕಾರ್ಯ ಮಾಡುವಲ್ಲಿ, ಆಯೋಗ್ಯ ಮಟ್ಟಲದಿಂದ ಮೇಲ್ಮಟ್ಟಲಕ್ಕೆ ಎತ್ತರಿಸಲು ಅವಶ್ಯವಿದ್ದ ಗುಣಗಳನ್ನೆಲ್ಲ ನಿರುತ್ಸಾಹಮಯವಾದವುಗಳನ್ನಾಗಿಯೂ ಅಶಕ್ತಮಯವಾದವುಗಳನ್ನಾಗಿಯೂ ಮಾಡುವೆವು. ಕಾಯಕದಲ್ಲಿ ಒಲುಮೆ ಇಲ್ಲದಿದ್ದಲ್ಲಿ ನಿಶ್ಚಯ

ವಾಗಿ ಆ ಕಾಯಕವನ್ನು ಅರೆ ಮನಸ್ಸಿನಿಂದಲೇ ಮಾಡುವೆವು; ಆ ಕಾರಣ ಸರ್ವಸಾಧಾರಣವಾಗಿ ಕೆಡಿಸಿಕೊಂಡೇ ಮಾಡುವೆವು. ಹೀಗಾಗಿ ಇದು ತೀರ್ಗಡೆಯನ್ನೇ ಬಲವಾಗಿ ಪ್ರತಿಬಂಧಿಸುವದು; ತುಚ್ಛಿಸಿದ ಕಾರ್ಯಕ್ಕೇನೇ ಮತ್ತಿಷ್ಟು ಗಟ್ಟಿಯಾಗಿ ಅಂಟಿಸಿ ಕೂಡ್ರಿಸುವದು. ಆದ್ದರಿಂದ ಕಾಯಕವು- ಎಷ್ಟೇ ಬೇಸರಪಡುವಂಥದಿದ್ದರೂ, ಪಾಲಿಗೆ ಬಂದದ್ದು ಪಂಚಾಮೃತವೆಂದು ಅದರಲ್ಲಿ ನಮ್ಮ ಆತ್ಮವನ್ನು ಸಂಪೂರ್ಣ ನೆಲೆಯಿಟ್ಟು ಕಾರ್ಯ ಮಾಡುವದರಲ್ಲಿಯೇ ಜಾಣ್ಮೆ ಇದೆ.[1] ಎಲ್ಲಿಯವರೆಗೆ ಆ ಕಾರ್ಯ ಮಾಡುವದು ಅನಿವಾರ್ಯವೋ ಅಲ್ಲಿಯ ವರೆಗೆ ಆ ಕಾರ್ಯವನ್ನು ಆನಂದದಿಂದಲೇ ಸ್ವಾಗತಿಸಲು ನಿರ್ಧರಿಸಬೇಕು. ಈ ಮಾನಸಿಕ ಭಾವನೆಯೇ ಕೈಕೊಂಡ ಕಾರ್ಯದಲ್ಲಿ ಜಯಪಡೆಯಲು ಸಹಾಯಕರವಾಗುವದು. ಉತ್ತಮ ಕಾರ್ಯವನ್ನು ದೊರಕಿಸಿಕೊಳ್ಳಲು ಮುಂದಾದರೂ ಅನುವಾಗುವದು.

ಅಭಿರುಚಿ— ಅಭಿರುಚಿಗಳು ಒಂದಕ್ಕೊಂದು ಸಂಬಂಧವುಳ್ಳ ಪದಗಳು. **ಅಭಿರುಚಿಯೆಂಬುದು ಬಹುಭಾಗವಾಗಿ ಬಾಹ್ಯ ವಸ್ತುಗಳನ್ನು ಅವಲಂಬಿಸಿರುವದಿಲ್ಲ; ಆದರೆ ಆ ವಸ್ತುಗಳತ್ತ ಸಂಬಂಧವಿಟ್ಟು ನಡೆಯುವ ನಮ್ಮ ಮನೋಭಾವವನ್ನು ಅವಲಂಬಿಸಿದೆ.** ಒಬ್ಬನ ದೃಷ್ಟಿಯಲ್ಲಿ ನಿರುತ್ಸಾಹಮಯದಲ್ಲಿ ಬಹು ಉತ್ಸಾಹಪೂರಿತವಾಗಿ ಕಾಣಬಹುದು. "**ಚಲೋ-ಕೆಟ್ಟವೆಂಬವು ಇಲ್ಲವೇ ಇಲ್ಲ; ಆದರೆ ತಿಳುವಳಿಕೆಯು ಮಾತ್ರ ಹಾಗೆ ಮಾರ್ಪಡಿಸುವದು.**" ಕಾರಣ, ಅಭಿರುಚಿ ಎಂಬುದು ನಿರ್ದಿಷ್ಟ ಮಾನಸಿಕ-ವಸ್ತುವಾಗಿರದೆ ನಮ್ಮ ಮನೋನಿರ್ಧಾರಕ್ಕೆ ಬಹುಭಾಗವಾಗಿ ಒಳಪಟ್ಟು ಇರುವ ಭಾವವಾಗಿದೆ. ಇದನ್ನು

---

[1] ಕಾಯಕದಲ್ಲಿ ನಿರತನಾದಡೆ,
ಗುರು ದರುಶನವಾದರೂ ಮರೆಯಬೇಕು,
ಲಿಂಗ ಪೂಜೆಯಾದಡೂ ಮರೆಯ ಬೇಕು,
ಜಂಗಮ ಮುಂದಿದ್ದಡೆಯೂ ಹಂಗು ಹರಿಯಬೇಕು.
ಕಾಯಕವೇ ಕೈಲಾಸವಾದ ಕಾರಣ
ಅಮಳೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳು.

(ಆಯ್ದಕ್ಕಿ ಮಾರಯ್ಯ)

ಸಾಕಷ್ಟು ಹೆಚ್ಚುಕಡಿಮೆ ಬೆಳೆಸಿ ಸಂಪಾದಿಸಿಕೊಳ್ಳಲೂ ಬರುವದು. ಕೆಲವು ಅಭಿರುಚಿಗಳು ನಮ್ಮಲ್ಲಿಯೇ ಹುಟ್ಟಿದವುಗಳಿರುವವು. ಮಿಕ್ಕಿದವು ನಾವು ಹುಟ್ಟಿಸಿಕೊಂಡಂಥವುಗಳಿರುವವು. ಜೀವನದಲ್ಲಿ ಪ್ರಾಮುಖ್ಯವಾದ ಎಷ್ಟೋ ಅಭಿರುಚಿಗಳು ಈ ಎರಡನೆಯ ವರ್ಗಕ್ಕೆ ಸೇರಿದವುಗಳಿರುವವು. ಚಂಡಿನಾಟ, ಇಸ್ಪೇಟಿನಾಟ, ಓದುವ ಅಭ್ಯಾಸ ಮುಂತಾದವುಗಳು ಎಲ್ಲವೂ ನಾವು ಹುಟ್ಟಿಸಿಕೊಂಡ ಅಭಿರುಚಿಗಳು. ಒಂದು ಕಾಲದಲ್ಲಿ ಗಣಿತ, ಇತಿಹಾಸ ಅಥವಾ ಸಂಸ್ಕೃತದತ್ತ ವೈರಭಾವ ತಾಳಿದವರು ಮುಂದೆ ಮತ್ತೊಂದು ಕಾಲದಲ್ಲಿ ಅದೇ ವಿಷಯದಲ್ಲಿ ಹೆಚ್ಚು ಪ್ರೀತಿಯನ್ನು ಹುಟ್ಟಿಸಿಕೊಂಡು ಪ್ರಾವೀಣ್ಯತೆಯನ್ನು ಪಡೆದ ಎಷ್ಟೋ ಉದಾಹರಣೆಗಳನ್ನು ನೋಡಬಹುದು. ಸುದೈವಿಗಳಾದ ಕೆಲವರು ತಮ್ಮ ತಮ್ಮ ಮನ ಒಪ್ಪುವಂಥ ಕಾಯಕಗಳನ್ನು ಪಡೆಯಬಹುದು; ಆದರೆ ಮನೋನಿರ್ಧಾರವುಳ್ಳವನು ಮಾತ್ರ ತನ್ನ ಕಾರ್ಯದತ್ತ ಪ್ರೀತಿಯನ್ನು ತೀವ್ರವಾಗಿ ಹುಟ್ಟಿಸಿಕೊಂಡು ಅದರಲ್ಲಿ ಸಂಪೂರ್ಣ ಶ್ರೇಯಸ್ಸನ್ನು ಪಡೆದು ಆನಂದವನ್ನು ಹೊಂದುವನು.

ಹೀಗೆ ಅಭಿರುಚಿಯಿಲ್ಲದಿದ್ದಲ್ಲಿ ಕೂಡ ಅಭಿರುಚಿಯನ್ನು ಹುಟ್ಟಿಸಿಕೊಳ್ಳಬಹುದು. ಅದಕ್ಕಾಗಿ ಮಾನಸ ಶಾಸ್ತ್ರ-ಪಂಡಿತರು ಕೆಲವು ವ್ಯವಹಾರಿಕ ದಾರಿಗಳನ್ನು ಕೂಡ ಹೇಳಿದ್ದಾರೆ:—

ಮೊದಲನೇಯದಾಗಿ, ನಿಮ್ಮ ಕಾರ್ಯದಲ್ಲಿಯ ಉತ್ತಮ ನೋಟಗಳತ್ತ ನಿಮ್ಮ ಲಕ್ಷವನ್ನು ಕೇಂದ್ರೀಕರಿಸಿರಿ; ಅದರಿಂದಾಗಬಹುದಾದ ಲಾಭದತ್ತ ನೋಡಿರಿ; ಅದು ನಿಮ್ಮ ಸ್ವಂತಕ್ಕೂ ನೀವಿದ್ದ ಸಮಾಜಕ್ಕೂ ಎಷ್ಟು ಬೆಲೆಯುಳ್ಳದ್ದೂ ಮಹತ್ವವುಳ್ಳದ್ದೂ ಇದೆ ಎಂಬದನ್ನು ನೋಡಿರಿ; ನಿಮ್ಮ ಆ ಕಾರ್ಯದಲ್ಲಿ ಅಭಿರುಚಿಯನ್ನಿಟ್ಟು ಹೆಚ್ಚು ಶ್ರೇಯಸ್ಸಿನಿಂದ ನೆರವೇರಿಸಿದಲ್ಲಿ ಉದ್ಭವಿಸುವ ಲಾಭಗಳನ್ನು ಗಣಿಸಿರಿ. ಯಾವದೇ ಕಾರ್ಯವು ಸುಗಮವಾಗಿ ನೆರವೇರುವದೆಂಬ ಆಶಾಮಯ ಭಾವವು ಶ್ರೇಯಸ್ಸಿಗೂ ಸಾಹಸಕ್ಕೂ ಮಿತ್ರನಿದ್ದಂತೆ. ಕಾರಣ, ಯಾವಾಗಲೂ ಆಶಾಭಂತನಿರಬೇಕು! ಕಾರ್ಯವು ಆಲ್ಹಾದಕರ ವಸ್ತುವೆಂದು ಗಣಿಸಬೇಕು! ಕಾರ್ಯಪ್ರವೃತ್ತಿಯಲ್ಲಿಯೇ ಆನಂದವನ್ನು ಪಡೆಯಬೇಕು!

**ಎರಡನೇಯದಾಗಿ,** ನಿಮ್ಮ ಕಾರ್ಯದಲ್ಲಿ ನಿಜವಾದ ಅಭಿರುಚಿ ಇಲ್ಲದಿದ್ದಲ್ಲಿ, ಅಭಿರುಚಿಯ ಭಾವ ಹೊತ್ತು ನಡೆದರೆ ಕ್ಷಿಪ್ರದಲ್ಲಿಯೇ ನಿಜವಾದ ಅಭಿರುಚಿಯು ಹುಟ್ಟುವದು. ವಿಲಿಯಮ್ ಜೇಮ್ಸ್ ಎಂಬ ಅಮೇರಿಕೆಯ ಮಾನಸಶಾಸ್ತ್ರ ಪಂಡಿತನು:— ಕಾರ್ಯವು ಭಾವವನ್ನು ಹಿಂಬಾಲಿಸುವಂತೆ ಕಾಣುತ್ತದೆ. ಆದರೆ ನಿಜವಾಗಿ ಕಾರ್ಯವೂ ಭಾವವೂ ಕೂಡೆಯೇ ನಡೆಯುವವು. ಮನದ ಹತೋಟಿಗೆ ಒಳಪಟ್ಟು ಇರುವ ಕಾರ್ಯವನ್ನು ನಿಯಮಿತಗೊಳಿಸುವದರಿಂದ ಹತೋಟಿಯಿಲ್ಲದ ಭಾವವನ್ನು ಕೂಡ ತಾನಾಗಿಯೇ ನಿಯಮಿತಗೊಳಿಸಬಹುದು. ಕಾರಣ ಆನಂದೋದ್ರೇಕವು ನಷ್ಟವಾದಾಗ, ಆ ಆನಂದೋದ್ರೇಕವನ್ನು ತಿರುಗಿ ಪಡೆಯುವ ರಾಜಮಾರ್ಗವೆಂದರೆ, ಆನಂದಮಯ ಭಾವದಲ್ಲಿ ಎದ್ದು ಕೂಡ್ರುವದು, ಕಾರ್ಯಪ್ರವೃತ್ತನಾಗುವದು ಅಲ್ಲದೆ ಆನಂದೋದ್ರೇಕವು ಮೊದಲೇ ಉಂಟೆಂಬಂತೆ ಮಾತನಾಡುವದು.”

ನಿಮ್ಮ ಕಾರ್ಯದಲ್ಲಿ ಮೊದಲಿನಿಂದ ಅಭಿರುಚಿಯುಂಟೆಂಬಂತೆ ಕಾರ್ಯಪ್ರವೃತ್ತರಾಗಿರಿ; ಅದರಲ್ಲಿಯೇ ಹರ್ಷವನ್ನು ಪಡೆಯುವಂತೆ ಭಾವಿಸಿರಿ. ಇದರಿಂದ ತೋರಿಕೆಯ ಅಭಿರುಚಿಯು ಕೂಡ ನಿಜವಾದ ಅಭಿರುಚಿಯಾಗಿ ಮಾರ್ಪಡಿಸಿ, ನಿಮ್ಮ ಕಾರ್ಯದತ್ತ ಬಂದ ಮಾನಸಿಕ ಅಡತಡೆಗಳು ನಾಶವಾಗಿ ಅತ್ತ ಆಕರ್ಷಣೆಯ ಭಾವವು ಉದ್ಭವಿಸುವದು. ನೀವು ಅಪೇಕ್ಷಿಸಿದ್ದಕ್ಕಿಂತಲೂ ಶೀಘ್ರದಲ್ಲಿ ಆಶ್ಚರ್ಯಕರವಾಗಿ ಈ ಪರಿಣಾಮವನ್ನು ನೀವು ಕಾಣಬಹುದು.

**ಮೂರನೆಯದಾಗಿ,** ಯಾವ ವಿಷಯವು ಮೊದಲು ಚಿತ್ತಾಕರ್ಷಕವಾಗಿರುವದಿಲ್ಲವೋ ಅಲ್ಲದೆ ಬೇಡಾದದ್ದು ಕೂಡ ಆಗಿರುವದೋ ಅದೇ ವಿಷಯದಲ್ಲಿ ಆ ಕುರಿತು ಜ್ಞಾನ ಹೆಚ್ಚಿದಂತೆಲ್ಲ ಅಥವಾ ಅದರಲ್ಲಿ ಪ್ರಾವೀಣ್ಯತೆಯು ಹೆಚ್ಚಿದಂತೆಲ್ಲ ಅಭಿರುಚಿಯೂ ಹೆಚ್ಚುವದು. ಯಾವದೇ ವಿಷಯದತ್ತಿರುವ ಪ್ರೀತಿಯು ಸಾಹಸಕ್ಕೆ ಅನುವಾಗುತ್ತಿದ್ದಲ್ಲಿ ಹಾಗೂ ಆ ಬಗ್ಗೆ ಜ್ಞಾನವನ್ನೂ ಪ್ರಾವೀಣ್ಯತೆಯನ್ನೂ ಪಡೆಯಲು ಸಹಾಯಕರವಾಗುತ್ತಿದ್ದಲ್ಲಿ ಅವುಗಳು ಹೆಚ್ಚಾಗಿ ಬೆಳೆದು ತಿರುಗಿ ಆ ಪ್ರೀತಿಗೆನೇ ಪೋಷಕವಾಗುವವು. ಅಭಿರುಚಿಯೂ ಹಾಗೂ ಪ್ರಾವೀಣ್ಯತೆಯೂ ಒಂದನ್ನೊಂದು ಪ್ರೋತ್ಸಾಹಿಸುವವು. ಈ ಸಂಬಂಧವನ್ನಿಟ್ಟುಕೊಂಡು ಬೆಳೆ ಬೆಳೆದು ಅವು

ದ್ವಿಗುಣಿತವಾಗಿ ಬೆಳೆದು ಹೆಚ್ಚುವವು. ಮಾನವನು ತನ್ನ ಕಾರ್ಯದಲ್ಲಿ ಹೆಚ್ಚು ಅಭಿರುಚಿಯನ್ನಿಟ್ಟಷ್ಟು ಆ ಕಾರ್ಯದಲ್ಲಿ ಹೆಚ್ಚು ಪ್ರವೀಣನಾಗುವನು. ಅದನ್ನೇ ಬೇರೆ ಮಾತಿನಲ್ಲಿ, ಹೇಳಬೇಕೆಂದರೆ:— ಮನುಷ್ಯನು ತನ್ನ ಕಾರ್ಯದಲ್ಲಿ ಹೆಚ್ಚೆಚ್ಚು ಪ್ರಾವೀಣ್ಯತೆಯನ್ನು ಪಡೆದಷ್ಟು ಅವನ ಪ್ರೀತಿಯು ಅದರತ್ತ ಮತ್ತಿಷ್ಟು ಹೆಚ್ಚುವದು. ಕಾರಣ ಮೊದಲು ಮುಟ್ಟಲದಲ್ಲಿ ತೋರುವ ಜಿಗುಟುತನವು ಬೇಡಾದ ಎಷ್ಟೋ ಕಾರ್ಯಗಳನ್ನು ಬಯಕೆಯ ಮಾಟಗಳನ್ನಾಗಿ ಪರಿವರ್ತಿಸುವದು. ಪ್ರಕೃತಿಯಲ್ಲಿಯು ಯಾವದೇ ವಸ್ತುವು ಏಕೀಕೃತವಾದ ಬೆಳಕಿನಿಂದ ಸುಂದರವೂ ಆಕರ್ಷಕವೂ ಆಗಲಾರದಂಥದು ಇರುವದಿಲ್ಲವೆಂದು ವಿಜ್ಞಾನಿಗಳು ಹೇಳುವರು. ನಿಮ್ಮ ಕಾರ್ಯದತ್ತ ನಿಮ್ಮ ಮನಸ್ಸನ್ನು ಹೆಚ್ಚು ಕೇಂದ್ರೀಕರಿಸಿದಷ್ಟು ಹಾಗು ಅದರ ಮೇಲೆ ಸ್ವಾಮಿತ್ವವನ್ನು ಹೆಚ್ಚು ಬೀರಿದಷ್ಟು ಅದರಲ್ಲಿ ನೀವು ಹೆಚ್ಚೆಚ್ಚು ಆನಂದವನ್ನು ಪಡೆಯುವಿರಿ.

ಕಾರ್ಯವನ್ನು ಪ್ರೀತಿಸಬೇಕೆಂಬ ಭಾವನವನ್ನು ಅಲ್ಪ ಮಟ್ಟಲದಲ್ಲಿ ಗಣಿಸಬಾರದು. ಯಾಕಂದರೆ, ನಿಮ್ಮ ಕಾರ್ಯವನ್ನು ಪ್ರೀತಿಸಬೇಕೆನ್ನುವದರಲ್ಲಿ ನೀವು ನಿಮ್ಮ ಸಹಕಾರ್ಯಕಾರಿಗಳನ್ನೂ ನಿಮ್ಮ ಮೇಲಧಿಕಾರಿಗಳನ್ನೂ ನಿಮ್ಮ ಕೈಕೆಳಗಿನವರನ್ನೂ ಅಷ್ಟೇ ಏಕೆ, ನಿಮ್ಮ ಸುತ್ತಮುತ್ತಣ ವಾತಾವರಣವನ್ನೂ ಕಾರ್ಯದ ಕ್ಷೇತ್ರವನ್ನೂ ಕೂಡ ದ್ವೇಷಿಸಲಾರಿರಿ. ಈ ಎಲ್ಲವನ್ನೂ ನೀವು ಪ್ರೀತಿಸಲೇಬೇಕಾಗುವದು. ನಿಮ್ಮ ಕಾರ್ಯದಲ್ಲಿ ಪೂರ್ಣ ಆನಂದವನ್ನು ಪಡೆಯಬೇಕೆಂದಿದ್ದರೆ, ಕನಿಷ್ಠ ಪಕ್ಷದಲ್ಲಿ ಆ ಎಲ್ಲರ ಗೂಡ ಸಮಭಾವದಿಂದಲಾದರೂ ಇರಲೇಬೇಕಾಗುವದು. ಯಾರು ಹವೆಯ ಬಗ್ಗೆ ಸೌಕರ್ಯ ಕೊರತೆಯ ಬಗ್ಗೆ, ಕೈಕೆಳಗಿನವರ ಮೂರ್ಖತನದ ಅಥವಾ ಆಲಸ್ಯದ ಬಗ್ಗೆ, ಮೇಲಿನವರ ಸಿಡಿಮಿಡಿಯ ಬಗ್ಗೆ ಅಥವಾ ಸಹ-ಕಾರ್ಯಕಾರಿಗಳ ನಿಸ್ಪಹಾಯದ ಬಗ್ಗೆ ಸತತವಾಗಿ ದೂರಿಕೊಳ್ಳುತ್ತ ಕೂಡುವರೋ ಅವರು ಅರ್ಹತೆಯ ಒಂದು ಮೂಲ ತತ್ವವನ್ನೇ ಮುರಿದು ನಡದಂತೆ.

ನಮ್ಮ ನಾಡಿನೆದುರು ನಿಂತಿರುವ ಈಗಿನ ದೊಡ್ಡ ಸಮಸ್ಯೆಯೆಂದರೆ, ಕೆಲಸಗಾರರು ತಮ್ಮ ಕಾಯಕಗಳಲ್ಲಿ ಸ್ವಲ್ಪು ಹೆಚ್ಚು ಮನಸ್ಸನ್ನು ಹಾಕುವಂತೆ ಮಾಡುವದೂ ಮೇಲಿನವರಿಂದ ಸತತವಾಗಿ ಲಕ್ಷವನ್ನಿಡಿಸಿಕೊಳ್ಳದೆ ಅಲ್ಲವೆ ಒದಿಕೆಗಳನ್ನು ನಿರೀಕ್ಷಿಸದೆ ತಾವಾಗಿ ಸ್ವಲ್ಪು ಹೆಚ್ಚು ಕೆಲಸ

ವನ್ನೂ ಹೆಚ್ಚು ಸುಂದರ ಕೆಲಸವನ್ನೂ ಮಾಡಹಚ್ಚುವದಾಗಿದೆ. ನಮ್ಮ ಕೂಲಿಕಾರ ಮುಖಂಡರೂ ಶಿಕ್ಷಕ ವೃಂದವೂ ಪ್ರೊಫೆಸರರು ಮುಂತಾದ ಜನತೆಯ ನೇತೃಗಳಂತಿದ್ದವರು ಕಾರ್ಯದ ಈ ಮಹಾನೀತಿಯನ್ನು ದೇಶದಾದ್ಯಂತ ಬೀರಿದಲ್ಲಿ ಎಲ್ಲರಿಗಾಗಿ ದೊಡ್ಡ ಸತ್ಕಾರ್ಯ ಮಾಡಿದಂತಾಗುವದು.

## ಉಚ್ಚತೆಯಲ್ಲಿ ಕಕ್ಕುಲತೆ

ಕಾಯಕವನ್ನು ಸುಂದರವಾಗಿ ನೆರವೇರಿಸುವ ಎರಡನೇ ತತ್ವವೆಂದರೆ ಅದರ ಉಚ್ಚತೆಯಲ್ಲಿ ಕಕ್ಕುಲತೆಯನ್ನು ನೆಲೆಸುವದು. ಇದು ಕಾರ್ಯದ ಎಲ್ಲ ರಂಗಕ್ಕೂ ಅನ್ವಯಿಸುವದು. "ಮಾಡಲು ಯೋಗ್ಯವಿದ್ದದನ್ನು ಚನ್ನಾಗಿ ಮಾಡುವದೇ ಯೋಗ್ಯವು." ಎಂದು ನಾಣ್ಣುಡಿಯುಂಟು. ಮಾಡುವದೆಲ್ಲವನ್ನು ಮನಃ ಪೂರ್ವಕವಾಗಿ ಮಾಡಬೇಕಲ್ಲದೆ, ಅದಷ್ಟು ನಮ್ಮ ಮನವನ್ನು ಆ ಕಾರ್ಯದಲ್ಲಿ ಸಂಪೂರ್ಣವಾಗಿ ಲೀನಗೊಳಿಸಬೇಕು. ಅದನ್ನು ಪರಿಪೂರ್ಣವಾಗಿ ನೆರವೇರಿಸಲು ಎಷ್ಟೇ ಅಡೆತಡೆಗಳು ಬಂದರೂ ಬಿಡಬಾರದು. ಇದು ಪತ್ರಿಯೊಬ್ಬನು ರೂಢಿ ಮಾಡತಕ್ಕ ರಾಜಚಟವು. ನಮ್ಮ ಹಸ್ತಾಂತರ್ಗತ ಹಾಯ್ದದ್ದೆಲ್ಲವೂ ನಮ್ಮ ಮಾರಿಗೆಯ ಮಾಲು ಇದ್ದಂತೆ. ಕಾರಣ, ಅದರ ಉತ್ಕೃಷ್ಟತೆಯ ಬಗ್ಗೆ ನಮ್ಮ ಅರ್ಧಮುದ್ರೆ ಒತ್ತಿದಂತಿರಬೇಕು! ಆದರಿಂದ ಅದು ಉಚ್ಚತರಗತಿಯ ಕಾರ್ಯವೆಂದೂ ಪೂರ್ಣತ್ವವನ್ನು ಪಡೆದ ವಸ್ತುವೆಂದೂ ಶಕ್ಯ ವಿದ್ದಷ್ಟು ಪರಿಶ್ರಮ ಪಟ್ಟು ನಮ್ಮಿಂದ ತಯಾರಿಸಲ್ಪಟ್ಟಿದುದೆಂದೂ ಪ್ರಮಾಣವನ್ನು ಬೀರಲಿ!

ತಾವು ದುಡಿಯುವ ಕಾಯಕಕ್ಕಾಗಿ ಸಾಕಷ್ಟು ವೇತನವು ಸಿಗುವದಿಲ್ಲೆಂದು ತಿಳಿದು ಎಷ್ಟೋ ಜನರು ಅದರಲ್ಲಿ ಹೆಚ್ಚಿನ ಫಲವು ಅಂದರೆ ಬಡತಿಯು ಸಿಗುವವರೆಗೆ ಹೆಚ್ಚು ಶ್ರಮಬಟ್ಟಾಗಲಿ ಹೆಚ್ಚು ಉತ್ತಮವಾಗಿಯಾಗಲಿ ದುಡಿಯಲು ಸಿದ್ಧರಿರುವದಿಲ್ಲ. ಇದು ಎತ್ತಿನ ಮುಂಬದಿ ಗಾಡಿಯನ್ನು ಕೂಡಿದಂತೆಯೇ ಸರಿ! ಯಾಕಂದರೆ, ಬಡತಿಯನ್ನು ಯಾರು ಆ ಕಾರ್ಯಕ್ಕೆ ಮಿಕ್ಕಿದವರಿರುವರೋ ಅವರಿಗಾಗಿಉಂಟು; ಆ ಕಾರ್ಯಕ್ಕೆ ಅಯೋಗ್ಯರಿದ್ದವರಿಗಾಗಿ ಆಗಲಿ ಅಥವಾ ಆ ಕಾರ್ಯದ ಮಟ್ಟಕ್ಕಿರುವವರಿಗಾಗಿ ಆಗಲಿ ಕಡಿಮೆ ವೇತನವು ಕಾರ್ಯವನ್ನು ಅರ್ಧಮರ್ಧ ಮಾಡುವದಕ್ಕಾಗಿ ಆಗಲಿ ಅಲ್ಲ. ಅಥವಾ ಅಸಡ್ಡೆಯಾಗಿ ಮಾಡುವದಕ್ಕಾಗಿ ಆಗಲಿ ಇರುವ ನೆವವಲ್ಲ! ಶಕ್ಯವಿದ್ದಷ್ಟು ಉತ್ಕೃಷ್ಟ ಕಾರ್ಯವನ್ನು ಹುಟ್ಟಿಸಲು ಬೇಕಾದ

ಕಷ್ಟ ಸೋಸುವ ಚಟವು ಮೇಲ್ಮಟ್ಟಲಕ್ಕೆ ಹೋಗಲು ಇರುವ ಉತ್ಕೃಷ್ಟ ಸಿದ್ಧತೆಯಾಗಿದೆ! ಕಾರ್ಯನಿರ್ವಹಣೆಯಲ್ಲಿ ಕಷ್ಟ ಸೋಸುವವನೆಂದು ಹಾಗು ಚೊಕ್ಕ ಕೆಲಸ ಮಾಡುವವನೆಂದು ಹೆಸರುವಾಸಿಯಾಗುವದೂ ಸಂಪೂರ್ಣ ನಂಬಿಗೆಯನ್ನು ಗಳಿಸುವದೂ ಉತ್ತಮ ಕೈಗಾರಿಕನೆನ್ನಿಸಿಕೊಳ್ಳುವದೂ ಮನುಷ್ಯನು ತನ್ನ ತೇರ್ಗಡೆಗಾಗಿ ಪಡೆಯಬಹುದಾದ ಆದರ್ಶ ಪ್ರಶಂಸೆಗಳಾಗಿರುವವು. ಉತ್ತಮ ಕಾರ್ಯವು ತನ್ನ ಉತ್ಕೃಷ್ಟತೆಯನ್ನು ತಾನೇ ಬೀರುವದು! ಅದು ಆ ಕರ್ತೃವಿನ ಅರ್ಹತೆಯನ್ನು ತಾನೇ ಪ್ರಸಿದ್ಧಿಸುವದು!

ಮೇಲ್ಮಟ್ಟಲದಲ್ಲಿ ಯಾವಾಗಲೂ ಸಾಕಷ್ಟು ಪಡೆಯಲು ಸ್ಥಳವಿರುವದು. ಪ್ರತಿಯೊಂದು ಕ್ಷೇತ್ರದಲ್ಲಿ ಪ್ರಾಮುಖ್ಯ ಸ್ಥಳಕ್ಕಾಗಿ ಯೋಗ್ಯ. ಹುರುಪಿನ ಯುವಕ ಯುವತಿಯರನ್ನೂ, ಕೆಲಸದಲ್ಲಿ ಹುಮ್ಮಸವುಳ್ಳ ಅವಶ್ಯವಿದ್ದಲ್ಲಿ ಹೆಚ್ಚಿನ ಕೆಲಸವನ್ನು ನಿರ್ವಹಿಸಲು ಲವಲವಿಕೆಯುಳ್ಳ ಕೆಲಸಗಾರರನ್ನೂ, ಹೇಳಿಸಿಕೊಳ್ಳದಲೇ ಕಾರ್ಯನಿರ್ವಹಿಸುವವರನ್ನೂ, ಚೊಕ್ಕಟವಾಗಿಯೂ ವಿಶ್ವಾಸಪೂರಿತವಾಗಿಯೂ ಮಾಡುವವಲ್ಲದೆ ಆ ಕಾರ್ಯದಲ್ಲಿ ತಮ್ಮ ವೈಶಿಷ್ಟ್ಯವನ್ನು ತೋರುವಂಥವರನ್ನೂ ನೇಮಿಸಿಕೊಳ್ಳಲು ಆ ಆ ಒಡೆಯರು ಯಾವಾಗಲೂ ಹುಡುಕುತ್ತಲೇ ಇರುವರು. ಕಾಯಕದಲ್ಲಿ ಯಾವನು ಈ ಲಕ್ಷಣಗಳನ್ನು ತೋರುವನೋ, ಯಾವನು ಪ್ರತಿದಿನ ಅಲ್ಪಸ್ವಲ್ಪಾದರೂ ಹೊಸದನ್ನು ಕಲಿಯಲು ಪ್ರಯತ್ನಿಸುವನೋ, ಯಾವನು ಮುನ್ನಾದಿನಕ್ಕಿಂತ ಮರುದಿನ ಆ ಕಾಯಕವನ್ನು ಹೆಚ್ಚು ಸುಂದರವಾಗಿ ಮಾಡಲು ಪ್ರಯತ್ನಿಸುವನೋ ಅವನು ವಿಜಯ ಸೌಖ್ಯಗಳ ರಾಜಮಾರ್ಗದಲ್ಲಿದ್ದಂತೆ! ಅಂಥವನು ಮುಂದಿನ ದಿನಕ್ಕೆ ಚಿಂತಿಸುವ ಕಾರಣವಿಲ್ಲ!

ಉತ್ತಮ, ದುಡಿದ ಕಾಯಕವು ಅದು ತರುವ ಪ್ರತಿಫಲವನ್ನು ಬಿಟ್ಟರೂ ಚಾರಿತ್ರ್ಯದ ಕಟ್ಟಡದಲ್ಲಿ ಅತ್ಯವಶ್ಯ ವಸ್ತುವೆಂದು ಗಣಿಸಲ್ಪಡತಕ್ಕದ್ದು. ಕಾಯಕವನ್ನು ಕೀಳ ಮಟ್ಟಲದಲ್ಲಿ ಮಾಡಿದಲ್ಲಿ ಕೆಲಸಗಾರನು ತನ್ನ ಒಡೆಯನನ್ನು ವಂಚಿಸುವನಲ್ಲದೆ ತನ್ನನ್ನೂ ತಾನು ವಂಚಿಸಿಕೊಂಡತಯೇ ಸರಿ! ಅರ್ಥವಾರ್ಥ ಇಲ್ಲವೆ ಹಂಕು ಪರಕಾಗಿ ಮಾಡಿದ ಕಾಯಕದಿಂದ ಆ ಕಾಯಕ ಮಾಡಿದವನಿಗಾಗುವ ಹಾನಿಯ ಅರ್ಧದಷ್ಟು ಕೂಡ ಒಡೆಯನಿಗೆ ಹಾನಿತಟ್ಟಲಾರದು. ಒಡೆಯನು ಸ್ವಲ್ಪ ಹಣವನ್ನು ಮಾತ್ರ ಕಳೆದುಕೊಳ್ಳಬಹುದು. ಆದರೆ ಕೆಲಸ ಮಾಡುವವನು ತನ್ನ ಚಾರಿತ್ರ್ಯವನ್ನೂ ಸ್ವಾಭಿಮಾನವನ್ನೂ ಕಳೆದ ಕೊಳ್ಳಬೇಕಾಗುವದು. ತನ್ನ

ಮನುಷ್ಯತ್ವವನ್ನು ಕಳೆದು ಕೊಳ್ಳಬೇಕಾಗುವದು. ಕಾರ್ಯ ವಂಚನೆ ಯಕಿ ತೀರ ಹೆಚ್ಚಾಗಿ ಆ ಕಾರ್ಯವನ್ನು ಅಷ್ಟಕ್ಕಷ್ಟೇ ಬಾಹ್ಯತೋರಿಕೆ ಗಾಗಿ ಮಾಡುವದಕ್ಕಿಂತಲೂ ಹೆಚ್ಚಾಗಿ ಅಥವಾ ಆ ಕಾರ್ಯವನ್ನು ಅರ್ಧ ಮರ್ಧ ಮಾಡಿ ದೂಕುವದಕ್ಕಿಂತಲೂ ಹೆಚ್ಚಾಗಿ ಚಾರಿತ್ರವನ್ನು ಮತ್ತಾವದೂ ಹೀನಸಮಯವಾಗಿ ಮಾಡಲಾರದು. !

ಜಾಡ್ಯಮಯ ಕಾಯಕವು ಕೂಡ ಅಂದವಾಗಿ ಮಾಡಹತ್ತಿದಾಗ ಆನಂದವೀಯುವದು. ನಮ್ಮ ನಿತ್ಯನೈಮಿತ್ತಿಕ ಕಾರ್ಯಗಳಲ್ಲಿ ಮೇಲ್ಮೆಯನ್ನು ಪಡೆಯುವದೇ ನಮ್ಮ ಜೀವಿತದ ಸೌಖ್ಯದ ಮರ್ಮವಾಗಿದೆ.

ಹಣವಾಗಲಿ ಹುದ್ದೆಯಾಗಲಿ ಮನಃಶಾಂತಿಯ ಕಿರಣವನ್ನು ಹುಟ್ಟಿಸಲಾರವು; ಕಾರ್ಯದ ಉತ್ಕೃಷ್ಟತೆಯ ಮಾಟದಲ್ಲಿ ಹೊಂಚಿಮ್ಮುವ ವಿದ್ಯುತ್ತಿಯ ಕಂಪವನ್ನೂ ಉಚ್ಚತೆಯನ್ನೂ ಪ್ರಕಟಿಸಲಾರವು. ಮಾನವನು ಅಪ್ರತಿಮತೆಯನ್ನು ಪ್ರಕಟಿಸಲು ನಿರ್ಮಾಣವಾದ ಕಾರಣ ಯಾವದೇ ಕಾರ್ಯವನ್ನು ಅಪ್ರತಿಮ ಸುಂದರವಾಗಿ ಮಾಡುವದರಲ್ಲಿಯೇ ನೀಟವದೆ ಇದರಲ್ಲಿಯೇ ಬಲವರ್ಧನೆಯುಂಟು ಆರೋಗ್ಯವು ಹೆಚ್ಚುವದು; ಅರ್ಹತೆಯು ಬೆಳೆಯುವದು. ನಿತ್ಯವಲ್ಲಿ ಸತತವಾಗಿ ಎಲ್ಲೆಲ್ಲಿಯೂ ನಮ್ಮಿಂದಾದದನ್ನು ಸುಂದರವಾಗಿ ಕಾರ್ಯ ಮಾಡುವದರಲ್ಲಿ ಉಂಟಾಗುವ ಸೌಖ್ಯವು ಮತ್ತೆಲ್ಲಿಯೂ ಸಿಗಲಾರದು; ಉಚ್ಚತೆಯ ಒತ್ತಡದಿಂದ ಉದ್ಭವಿಸುವ ಮನಃಶಾಂತಿಯು ನಮ್ಮಿಂದ ನಿರ್ಮಿತವಾಗಿ ಅಪ್ರತಿಮತೆಯ ರಾಜಮುದ್ರೆಯನ್ನು ಹೊಂದುವವರಿಂದ ಹೊಮ್ಮುವ ಮನಃಶಾಂತಿಯು ಮತ್ತೆಲ್ಲಿಯೂ ಸಿಗಲಾರದು ಎಂದು ಒಬ್ಬ ಪ್ರಸಿದ್ಧ ಲೇಖಕನು ಬರೆಯುತ್ತಾನೆ.

ಮೆಲ್ಬುದ್ಧಿ ಹಾಗು ಅನುಭವ ಮಾತ್ರದಿಂದ ಕಾಯಕದಲ್ಲಿ ಉಚ್ಚತೆಯು ತಾನಾಗಿಬರುವದೆಂದು ಸಾಮಾನ್ಯ ತಿಳುವಳಿಕೆಯುಂಟು "ರೂಢಿಯು ಪೂರ್ಣತ್ವವನ್ನು ಅಳವಡಿಸುವದು" ಎಂಬುದು ಈಗ ಹಾರಿಹೋದವಿಶ್ವಾಸದ ಮತವಾಗಿದೆ ಸುಧಾರಿಸಬೇಕೆಂಬ ಚುರುಕಾದ ಉತ್ಕಟೇಚ್ಛೆಯೇ ಊರ್ಜಿತತೆಯ ನಿಜವಾದ ಮಾರ್ಗ; ಮಾಡಿದ್ದನ್ನೇ ಪುನಃ ಪುನಃ ಮಾಡುತ್ತ ಕೂಡ್ರುವದರಿಂದಲ್ಲ, ಎಂಬುದು ಮಾನಸ ಶಾಸ್ತ್ರ ಪ್ರಯೋಗದಿಂದ ಸಿದ್ಧವಾಗಿದೆ. ಕಲಿಯಬೇಕೆಂಬ ಉತ್ಕಟೇಚ್ಛೆ ಇಲ್ಲದಿದ್ದಲ್ಲಿ, ಅನುಭವವನ್ನು ಚಾಣಾಕ್ಷತನದಿಂದ ವಿಚಾರಿಸಿ ಪೃಥಃಕರಿಸಿ ನೋಡಿ ಬಾಳ್ವೆಯಲ್ಲಿ ಲಾಭ

ಪಡೆಯದಿದ್ದಲ್ಲಿ ಸುಧಾರಣೆಯು ಬದಲು ಅವರಲ್ಲಿಯು ತಪ್ಪು ತಡೆಗಳೇ ಒಪ್ಪ ಹಾಕಿದಂತಾಗಿ ನಟ್ಟು ಕೂಡ್ರುವವು. ಉಚ್ಚತೆಯನ್ನು ಬಯಸುವವರು ಆ ಆ ಕಾರ್ಯಗಳಲ್ಲಿ ಜ್ಞಾನವನ್ನೂ ಪದ್ಧತಿಯನ್ನೂ ಅಳವಡಿಸಿ ಕೊಳ್ಳಲೇ ಬೇಕು. ಮನಃಸಾಕ್ಷಿಯಾಗಿ ದೃಢಭಾವದಿಂದ ಆ ಆ ಕಾರ್ಯದಲ್ಲಿ ನೀಟವೂ ಪೂರ್ಣತೆಯೂ ವಿಶ್ವಾಸವೂ ಹುಟ್ಟುವಂತೆ ಮಾಡಲೇ ಬೇಕು; ಆ ಆ ಕಾರ್ಯಗಳು ಸಂಪೂರ್ಣತೆಯನ್ನು ಪಡೆಯುವ ವರೆಗೆ ಅವುಗಳನ್ನು ತಡೆತಡೆದು ವಿಮರ್ಶಿಸಿ ನೋಡಿ ತಿದ್ದಿಕೊಳ್ಳುವ ಪರಿಶ್ರಮವನ್ನು ಹೊರಲೇ ಬೇಕು.

ಸಾಮಾನ್ಯವಾಗಿ, ಮನುಷ್ಯನು ತನ್ನ ಶಕ್ತಿಯಲ್ಲಿ ನೂರಕ್ಕೆ ಹತ್ತರಷ್ಟು ಮಾತ್ರ ಉಪಯೋಗಿಸುತ್ತಾನೆಂದು ಮಾನಸ ಶಾಸ್ತ್ರ ಪ್ರವೀಣರು ಹೇಳುವರು. ಪ್ರತಿಯೊಬ್ಬ ಕೆಲಸಗಾರನು ಇನ್ನಿಷ್ಟು ಹೆಚ್ಚಾಗಿ ತನ್ನ ಬುದ್ಧಿಯನ್ನೂ ಸಾಹಸನನ್ನೂ ಆ ಆ ಕಾರ್ಯಗಳಲ್ಲಿ ತೊಡಕಿಸಿದರೆ ಹೊಂದಬಹುದಾದ ಪ್ರವೀಣತೆಯನ್ನೂ ಸೌಖ್ಯವನ್ನೂ ಚಾರಿತ್ರ್ಯಯ ಉಜ್ವಲವನ್ನೂ ಸ್ವಾಭಿಮಾನವನ್ನೂ ಗಣಿಸಿ ನೋಡಿರಿ !

## ಪ್ರವೀಣತೆಯ ವಿವೇಚನೆ.

"ಪ್ರವೀಣ ಕೆಲಸಗಾರನು." ಎಂದು ಗಣಿಸಲ್ಪಡುವ ಮೊದಲು ಆವನು ಕೆಳಗೆ ಕಾಣಿಸಿದ ಮಾತುಗಳನ್ನು ಪರಿಪೂರ್ಣವಾಗಿ ಮಾಡುತ್ತಿರಲೇಬೇಕು:—

೧. ಅವನ ಕಾರ್ಯವು ಉತ್ತಮ ತರಗತಿಯದಾಗಿರಬೇಕು. ಅಂದರೆ ಚೊಕ್ಕಾಗಿಯೂ ಸ್ವಚ್ಛವಾಗಿಯೂ ಕ್ರಮಬದ್ಧವಾಗಿಯೂ ಹಾಗೂ ತಪ್ಪಿಲ್ಲದಂತೆಯೂ ಆಗಿರಬೇಕು.

೨. ಅವನು ತನ್ನ ಕಾರ್ಯವನ್ನು ಸಾಕಷ್ಟು ಚಪಲತೆಯಿಂದ ಮಾಡುತ್ತಿರಬೇಕು. ಹತ್ತು ನಿಮಿಷದ ಕೆಲಸವನ್ನು ಹತ್ತೇ ನಿಮಿಷದಲ್ಲಿ ಮಾಡುತ್ತಿರಬೇಕಲ್ಲದೆ ಅರ್ಧ ತಾಸನ್ನು ತೆಗೆದುಕೊಳ್ಳಬಾರದು. ಅಂದರೆ ನಿಯಮಿತ ವೇಳೆಯ ಕಾರ್ಯದ ಪ್ರಮಾಣವು ಹೆಚ್ಚಾಗಿರಬೇಕು.

೩. ಅವನು ತನ್ನ ಕಾರ್ಯದಲ್ಲಿ ತನ್ನದೇ ಆದ ಹೊಸ ಹೊಸ ಲಕ್ಷಣಗಳನ್ನು ತೋರಿಸುತ್ತಿರಬೇಕು. ಮಾಡಿದ್ದನ್ನೇ ಮಾಡುತ್ತ ಕೂಡ್ರಬಾರದು. ಹೊಸ ಶೋಧಗಳನ್ನು ಹುಟ್ಟಿಸಬೇಕು. ಸಾಧನೆಗಳಲ್ಲಾಗಲಿ ಅಥವಾ ಕಾರ್ಯದ ಪದ್ಧತಿಯಲ್ಲಾಗಲಿ ಸುಧಾರಣೆಯನ್ನು ತೋರುತ್ತಿರಬೇಕು. ಅಲ್ಲದೆ ವೇಳೆ, ಕೆಲಸ ಹಾಗು ಹಣವು ಉಳಿತಾಯವಾಗುವ ದಾರಿಗಳನ್ನು ಪ್ರಚಾರದಲ್ಲಿ ತರಬೇಕು.

೪. ಅವನು ಆದಷ್ಟು ಅಲ್ಪ ಪರಿಶ್ರಮಪಟ್ಟು ಕಾರ್ಯ ಮಾಡುತ್ತಿರಬೇಕು. ಅಂದರೆ ಕಾರ್ಯ ಮಾಡುವಾಗ್ಗೆ ದಣುವು ಆಗಿದೆಯೋ ಇಲ್ಲವೋ ಎನಿಸುತ್ತಿರಬೇಕು. ಅರ್ಥಾತ್, ಬಹಳ ವೇಳೆಯ ವರೆಗೆ ದಣಿಯದಲೆ ಕಾರ್ಯ ಮಾಡಲು ಸಮರ್ಥನಾಗಬೇಕು.

---

ಕಪಾಲವನ್ನು ಹಿಡಿದು ಭಿಕ್ಷೆಬೇಡಿದನೆಂದು ಹೇಳಿದನೇ ಹೊರತು ಅವನನ್ನು ವಿಷ್ಣುವು ತಡೆಯಲು ಪರಶಿವನು ಕೋಪಿಸಿಕೊಂಡು ಅವನನ್ನು ತಿವಿದುಹಾಕಿದನೆಂಬುದನ್ನು ಹೇಳಲಿಲ್ಲ. ನಾರಾಯಣನು ಲೋಕಕಂಟಕವಾದ ಹಿರಣ್ಯಕಶ್ಯಪುವನ್ನು ಸಂಹರಿಸಿ ಲೋಕವನ್ನು ಕಾಪಾಡಿದನೆಂದು ಹೇಳಿದನೇ ಹೊರತು ಪರಶಿವನು ಶರಭಾವತಾರ ತಾಳಿ ಹಿರಣ್ಯಕಶ್ಯಪುವಿನ ರಕ್ತವನ್ನು ಪಾನಮಾಡಿ ಮದಾಂಧನಾಗಿದ್ದ ನರಸಿಂಹನನ್ನು ಕೊಂದದ್ದನ್ನು ಹೇಳಲಿಲ್ಲ. ವಿಷ್ಣುವು ಮತ್ಸ್ಯಾವತಾರ ತಾಳಿ ರಾಕ್ಷಸನನ್ನು ಕೊಂದು ನಾಲ್ಕು ವೇದಗಳನ್ನು ತಂದನೆಂದು ಮಾತ್ರ ಹೇಳಿದನೇ ಹೊರತು ಮತ್ಸ್ಯದ ಬಾಲವನ್ನು ಸೀಳಿ ಅದನ್ನು ತಲೆಗೆ ಸುತ್ತಿದನೆಂಬುದನ್ನು ಹೇಳಲಿಲ್ಲ. ನಾರಾಯಣನು ವಾಮನಾವತಾರ ತಾಳಿ ಬಲಿಚಕ್ರವರ್ತಿಯನ್ನು ತುಳಿದದ್ದನ್ನು ಮಾತ್ರ ಹೇಳಿದನೇ ಹೊರತು ಪರಶಿವನು ಆ ವಾಮನ ಮೂರ್ತಿಯನ್ನು ಸಂಹರಿಸಿ ಅವನ ಬೆನ್ನು ಮೂಳೆಯನ್ನು ಧರಿಸಿದನೆಂಬುದನ್ನು ಹೇಳಲಿಲ್ಲ. ಈ ಪ್ರಕಾರ ಪುರಾಣಿಕನು ವಿಷ್ಣುವಿನ ಪ್ರಾಶಸ್ತ್ಯವನ್ನು ತೋರಿಸುತ್ತ ಅಂತ್ಯದಲ್ಲಿ ಪರಶಿವನು ನಾರಾಯಣನ ಭಜಕನು ಎಂದು ನುಡಿದನು. ಅದನ್ನು ಕಕ್ಕಯ್ಯನು ಕೇಳಿ ಕೋಪವನ್ನು ತಾಳಿ ಅವನಿಗೆ— ಎಲೋ ಪುರಾಣಿಕನೇ. ರುದ್ರನೊಬ್ಬನೇ ದೇವನೆಂದು ಎಲ್ಲ ವೇದಗಳು ಸ್ಪಷ್ಟವಾಗಿ ಹೇಳುತ್ತಿವೆ. ಹೀಗಿರುವಾಗ ಪುರಾಣದ ಸಹಜಾರ್ಥವನ್ನು ಹೇಳದೆ ನಮ್ಮ ಪರಶಿವನನ್ನು ದೂಷಣೆ ಮಾಡುತ್ತಿರುವಿ, ಇಂಥ ನಿನ್ನನ್ನು ಈ ಕ್ಷಣದಲ್ಲಿಯೇ ಕೊಲ್ಲುವೆನೆಂದು ತನ್ನ ಕೈಯ್ಯಲ್ಲಿದ್ದ ಸಬಳದಿಂದ ಅವನನ್ನು ಇರಿದನು. ಆಗ ಆ ಪುರಾಣಿಕನು ಅಲ್ಲಿಯೇ ಗತಪ್ರಾಣನಾದನು.

ಇದನ್ನು ಬಿಜ್ಜಳನು ಕೇಳಿ ಕಕ್ಕಯ್ಯನನ್ನು ಕರೆಸಿ ಹೀಗೆ ನೀನು ನಿರಪರಾಧಿಯನ್ನು ಇರಿಯಬಹುದೇ ಎಂದೆನಲು ಕಕ್ಕಯ್ಯನು— ಅವನು ಶಿವದೂಷಣೆಯನ್ನು ಮಾಡಿದನು. ಅವನು ನಿರಪರಾಧಿಯಲ್ಲ. ಅಪರಾಧಿಯು ಎಂದು ಹೇಳಿ, ಇದಕ್ಕೆ ಅವನ ದೇಹ ಹುಳಿತುವೇ ಸಾಕ್ಷಿ ಎಂದು ನುಡಿದನು. ಆಗ ಅವನ ದೇಹವನ್ನು ನೋಡಲಾಗಿ ಕೀವು ಹುಳುಗಳು ಅದರಲ್ಲಿ ರಾಶಿಯಾಗಿ ತುಂಬಿದ್ದು ಕಂಡುಬಂದಿತು. ಇದನ್ನು ಬಿಜ್ಜಳನು ನೋಡಿ ಕಕ್ಕಯ್ಯನು ನಿಜವಾಗಿ ಮಹಿಮನು ಎಂದು ಅವನನ್ನು ಮನ್ನಿಸಿ ಕಳುಹಿದನು.

ಕಕ್ಕಯ್ಯನು ಹೀಗೆ ಕಲ್ಯಾಣಪಟ್ಟಣದಲ್ಲಿರುತ್ತಿರಲು ಮಧುವರಸ ಹರಳಯ್ಯಗಳನ್ನು ಬಿಜ್ಜಳನು ಎಳಹೂಟೆಯಿಂದ ಎಳಿಸಿ ಅವರನ್ನು ಘಾತಿಸಿದನು. ಆಗ ಕಲ್ಯಾಣಪಟ್ಟಣದಲ್ಲಿ ಕಲಹಗಳು ಪ್ರಾರಂಭಿಸಿದವು. ಉಭಯ ಪಕ್ಷಗಳು ಯುದ್ಧಕ್ಕೆ ಸನ್ನದ್ಧವಾಗಹತ್ತಿದವು. ರಾಜಧಾನಿಯಲ್ಲಿ ಶಾಂತತೆಯು ಉಳಿಯದಂತೆ ಆಯಿತು. ಆಗ ಬಸವೇಶ್ವರನು ತನ್ನ ಸ್ಥಾನವನ್ನು ಚನ್ನಬಸವೇಶ್ವರನಿಗೆ ಕೊಟ್ಟು ತಾನು ಕಪ್ಪಡಿಸಂಗಮ ಕ್ಷೇತ್ರಕ್ಕೆ ತೆರಳಿದನು. ಬಸವೇಶ್ವರನು ಹೋಗಲಾಗಿ ಚನ್ನಬಸವೇಶ್ವರನಿಗೆ ಇನ್ನು ಮುಂದೆ ಕಲ್ಯಾಣದಲ್ಲಿರುವದು ಸುರಕ್ಷಿತವೆನಿಸಲಿಲ್ಲ. ಆಗ ಅವನು ಉಳಿವಿಗೆ ಹೋಗಬೇಕೆಂದು ನಿಶ್ಚಯಿಸಿದನು.

ಈ ಸಮಯದಲ್ಲಿ ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳಿವಿಗೆ ಹೊರಡಲು ಪ್ರೋತ್ಸಾಹಿಸಿದವರಲ್ಲಿ ಕಕ್ಕಯ್ಯನು ಮುಖ್ಯನಾಗಿದ್ದಾನೆ. ಹರಳಯ್ಯನು ಅಸ್ಪೃಶ್ಯನು, ಅವನು ತನ್ನ ಸಮಾಜಕ್ಕೆ ಹೊಂದಿದವನು, ಆದ್ದರಿಂದ ಕಕ್ಕಯ್ಯನು ಈ ಕಾರ್ಯದಲ್ಲಿ ವಿಶೇಷ ಪ್ರಯತ್ನಪಟ್ಟಿದ್ದು ಸ್ವಾಭಾವಿಕವಿದೆ. ಈ ಕಾಲದಲ್ಲಿ ಚನ್ನಬಸವನಿಗೆ ಸಹಾಯವಾಗಿ ಮಡಿವಾಳ ಮಾಚಿದೇವ, ಸೊಡ್ಡಳ ಬಾಚರಸ, ಮೋಳಿಗೆಯ ಮಾರಯ್ಯ, ರುದ್ರಮುನಿ ಇವರೂ ಪ್ರಯತ್ನಿಸಿದ್ದರಿಂದ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳೂ ೭೭೦ ಅಮರಗಣಂಗಳೂ ಹೀಗೆ ಒಟ್ಟು ೧೨೭೭೦ ಜನರು ಯುದ್ಧಕ್ಕೆ ಅಣಿಯಾಗಿ ನಿಂತರು. ಆದರೆ ಬಿಜ್ಜಳನ ಕಡೆಗೆ ಒಂದೂ ಕಾಲು ಲಕ್ಷ ಸೈನ್ಯವು ಇದ್ದದರಿಂದ ಶಿವಶರಣರು ಅವರ ಮುಂದೆ ಕಲ್ಯಾಣಪಟ್ಟಣದಲ್ಲಿರುವದು ದುಸ್ತರವಾಗಹತ್ತಿತು. ಆಗ ಅವರು ಕಲ್ಯಾಣವನ್ನು ಬಿಟ್ಟು ತೊರಗಲು ನಾಡಿನ ಕಡೆಗೆ ತೆರಳಿದರು. ಇಲ್ಲಿ ಅನೇಕ ಯುದ್ಧಗಳಾದವು. ಕಡೆಗೆ ಕಾತರವಳ್ಳಿಯಲ್ಲಿ ತುಮುಲ ಕಾಳಗವೆಸಗಿತು. ಅಳಿಯ ಬಿಜ್ಜಳನು ಶಿವಶರಣರನ್ನು ಇಲ್ಲಿ ಪೂರ್ಣವಾಗಿ ಘಾತಿಸಬೇಕೆಂದು ಬಯಸಿದ್ದನು. ಆದರೆ ಅದು ಸಾಧ್ಯವಾಗಲಿಲ್ಲ. ಅವನು ತಾನೇ ರಣಾಂಗಣದಲ್ಲಿ ಮೂರ್ಛೆಯನ್ನು ಹೊಂದಿದನು. ಈ ಕಾಲದಲ್ಲಿ ಶಿವಶರಣರಲ್ಲಿ ಕಾದಾಡುವವರ ಸಂಖ್ಯೆ ಕಡಿಮೆ ಇದ್ದದರಿಂದ ಅವರಲ್ಲಿ ಒಂದು ತಂಡವು ಮುರಗೋಡ ತಡಕೋಡ ಮಾರ್ಗವಾಗಿ ಮೆಬುಗ್ಯೆ ಯಲ್ಲಾಪುರಕ್ಕೆ ತೆರಳಿತು. ಮತ್ತೊಂದು ತಂಡವು ಪಶ್ಚಿಮಕ್ಕೆ ಒಲಿದು ಈಗಿನ ಖಾನಾಪುರ ತಾಲೂಕನ್ನು ಪ್ರವೇ

ಶಿಸಿತು. ಇಲ್ಲಿ ಹಲಸಿಗೆಯ ಕದಂಬರು ರಾಜ್ಯವಾಳುತ್ತಿದ್ದರು. ಅವರ ರಾಜ್ಯದೊಳಗಿಂದ ಶಿವಶರಣರು ಹಾಯ್ದು ಮೇಲುಗೈ ಯಲ್ಲಾಪುರಕ್ಕೆ ನಡೆದರು. ಈ ಕಾಲದಲ್ಲಿ ಈ ತಂಡಕ್ಕೆ ಮುಖ್ಯಸ್ಥನಾಗಿದ್ದವನು ಕಕ್ಕಯ್ಯನು. ಅವನು ತೊರಗಲ್ಲು ನಾಡಿನಲ್ಲಿ ಶಿವಶರಣರ ದಂಡು ಇದ್ದಾಗ್ಗೆ ಅವರನ್ನು ಕೂಡಿಕೊಂಡಿರಬೇಕೆಂದು ತೋರುತ್ತದೆ. ಈತನು ಕಾಂತರವಳ್ಳಿಗೆ ಸಮೀಪವಾಗಿರುವ ಅರಣ್ಯ ಪ್ರದೇಶವನ್ನು ಪ್ರವೇಶಿಸಿ ಈಗಿನ ಕಕ್ಕೇರಿ ಗ್ರಾಮದಲ್ಲಿ ಬಿಡಾರಗೊಂಡಿದ್ದನು. ಹಲಸಿಗೆ ಗ್ರಾಮವು ಇಲ್ಲಿಂದ ೧೨ ಮೈಲು ದೂರವಿದೆ. ಆದರೆ ಕಕ್ಕಯ್ಯನು ಕಕ್ಕೇರಿಯಲ್ಲಿ ಇದ್ದಾಗ್ಗೆಯೇ ಅವನು ಮರಣಹೊಂದಿರಬೇಕೆಂದು ತೋರುತ್ತದೆ. ಅವನು ಅಲ್ಲಿದ್ದರ ಕುರುಹುಗಳು ಈಗಲೂ ಅಲ್ಲಿ ಇವೆ. ಈ ಗ್ರಾಮದಲ್ಲಿ ಕಕ್ಕಯ್ಯನ ದೇವಾಲಯವಿದೆ. ಆದರಲ್ಲಿ ಅವನ ಮೂರ್ತಿಯು ಸ್ಥಾಪಿತವಾಗಿರುತ್ತದೆ. ಸಮೀಪದಲ್ಲಿ ಕಕ್ಕಯ್ಯನ ಕೆರೆ, ಕಕ್ಕಯ್ಯನ ಭಾವಿ ಎಂಬ ಜಲಾಶಯಗಳಿವೆ. ಕಕ್ಕಯ್ಯನ ಸಮಾಧಿಯೂ ಇದೆ. ಇದರಿಂದ ಕಕ್ಕಯ್ಯನು ಶಿವಶರಣರನ್ನೊಡಗೊಂಡು ಕಲ್ಯಾಣದಿಂದ ಹೊರಟು ತೊರಗಲ್ಲು ನಾಡಿನ ಕಾಳಗಗಳಲ್ಲಿ ಭಾಗವಹಿಸುತ್ತ ಕಡೆಗೆ ಹಲಸಿಗೆಯ ಹತ್ತಿರದ ಘೋರಾರಣ್ಯವನ್ನು ಪ್ರವೇಶಮಾಡಿ ಆ ಪ್ರದೇಶದಲ್ಲಿದ್ದ ಕಕ್ಕೇರಿಯಲ್ಲಿ ಮೃತಿಯನ್ನು ಹೊಂದಿರಬೇಕೆಂದು ಕಂಡುಬರುತ್ತದೆ.

ಕಕ್ಕೇರಿ ಈ ಗ್ರಾಮದ ಹೆಸರು ಕಕ್ಕಯ್ಯನು ಅಲ್ಲಿ ಇದ್ದುದರಿಂದ ಅದಕ್ಕೆ ಇಂಥ ಹೆಸರು ಬಂದಿರಬೇಕು. ಇತ್ತಕಡೆಯ ನಾಡಿನ ಜನರು ಈ ಪ್ರಕಾರ ಕಕ್ಕಯ್ಯನ ಸ್ಮರಣಾರ್ಥವಾಗಿ ಈ ಗ್ರಾಮದಲ್ಲಿ ಅವನ ಹೆಸರಿನ ಅನೇಕ ಕುರುಹುಗಳನ್ನು ಸ್ಥಾಪಿಸಿರಬೇಕೆಂದು ತೋರುತ್ತದೆ.

ಈ ಪ್ರಕಾರ ಕಕ್ಕಯ್ಯನು ಶಿವಶರಣರಲ್ಲಿ ಅಗ್ರಗಣ್ಯನಾಗಿ ಶಿವಶರಣರ ಧರ್ಮದ ಪರಿಪಾಲನೆಗಾಗಿ ಹೋರಾಡುತ್ತ ಕಡೆಗೆ ಈ ಕಾರ್ಯದಲ್ಲಿಯೇ ತನ್ನ ದೇಹಬಿಟ್ಟನು.

ವೀರಶೈವರು ಯಾವಾಗಲೂ ಸ್ಮರಿಸತಕ್ಕ ಮಹಾಪುರುಷರಲ್ಲಿ ಇವನಾಗಿದ್ದಾನೆ. ನಮಗೆ ದೊರೆದ ಅವನ ಕೆಲವು ವಚನಗಳನ್ನು ನಾವು ಇಲ್ಲಿ ಉದಹರಿಸುತ್ತೇವೆ.

## ವಚನಗಳು.

(೧) ಕಷ್ಟ ಕುಲದಲ್ಲಿ ಹುಟ್ಟಿದೆನೆಂದು ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹ ಅಳಿಯಿತ್ತಯ್ಯ ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ. ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ. ಎನ್ನ ಅರುವಿನಲ್ಲಿ ಪ್ರಸಾದವ ನೆಲೆಗೊಳಿಸಿದ. ಇಂತೀ ತ್ರಿವಿಧ ಸ್ಥಾನವ ಶುದ್ಧವ ಮಾಡಿ ಚತುರ್ವಿಧ ಸಾರಾಯ ಸ್ಥಲವ ಸಂಬಂಧವ ಮಾಡಿದ ಸಂಗನಬಸವಣ್ಣನ ಕರುಣದಿಂದ ಪ್ರಭುದೇವರ ಶ್ರೀಪಾದವನು ಕಂಡು ಬದುಕಿದೆನು ಕಾಣಾ ಅಭಿನವ ಮಲ್ಲಿಕಾರ್ಜುನಾ

(೨) ಎನ್ನ ಸೂತಕ ನಿಮ್ಮ ಹಸ್ತಮುಟ್ಟಿದಲ್ಲಿ ಬಯಲಾಯಿತ್ತು. ಶುಕ್ಲ ಶೋಣಿತದಿಂದಾದ ಸೂತಕ ನೀವು ಮುಟ್ಟಲೊಡನೆ ಬಯಲಾಯಿತ್ತು. ತಟ್ಟುವ ಮುಟ್ಟುವ ಸುಖಂಗಳ ನಿಮ್ಮ ಮುಖಕ್ಕರ್ಪಿಸಿದಾಗವೆ ಎನ್ನ ಪಂಚೇಂದ್ರಿಯಂಗಳು ಬಯಲಾದವಯ್ಯ. ಎನ್ನಂತರಂಗದಲ್ಲಿ ಜ್ಞಾನಜ್ಯೋತಿ ಎಡೆಗೊಂಡಿತ್ತಾಗಿ ಒಳಗೂ ಬಯಲಾಯಿತ್ತು. ಸಂಸಾರ ಸಂಗದ ಅವಸ್ಥೆಯ ಮೀರಿ ಕ್ರಿಯಲ್ಲಿ ತರಹರವಾಯಿತ್ತಾಗಿ ಎನ್ನ ಬಾಹ್ಯಬಯಲಾಯಿತ್ತು ಅಭಿನವ ಮಲ್ಲಿಕಾರ್ಜುನಾ ನಿಮ್ಮ ಮುಟ್ಟಿದ ಕಾರಣ ಆಸು ಬಟ್ಟ ಬಯಲಾದೆ.

(೩) ನೆನೆಯಲರಿಯೆ, ನಿರ್ಧರಿಸಲರಿಯೆ, ಮಲವಿಲ್ಲಾಗಿ. ಭಾವಿಸಲರಿಯೆ, ಬೆರಸಲರಿಯೆ, ಭಾವನಿರ್ಭಾವವಾಯಿತ್ತಾಗಿ. ಧ್ಯಾನಮೌನವನರಿಯೆ ಧ್ಯಾನ ಧ್ಯಾನಾತೀತವಾಯಿತ್ತಾಗಿ. ಜ್ಞಾತೃಜ್ಞಾನ ಜ್ಞೇಯಂಗಳ ಮೀರಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾಗಿರ್ದೆನು.

ಈ ವಚನಗಳು ಮೂರೇ ಇದ್ದರೂ ಅವುಗಳಲ್ಲಿ ಶಿವಶರಣರ ತತ್ವಗಳು ಚನ್ನಾಗಿ ರೂಪುಗೊಂಡಿರುವದು ಸ್ಪಷ್ಟವಾಗಿರುತ್ತದೆ.

---

# ನೀಲಾಂಬಿಕೆ.

ನೀಲಾಂಬಿಕೆಯು ಬಸವೇಶ್ವರನ ಹೆಂಡತಿಯಾಗಿದ್ದಾಳೆ. ಬಸವೇಶ್ವರನಿಗೆ ಗಂಗಾಂಬಿಕೆ ಎಂಬ ಇನ್ನೊಬ್ಬ ಹೆಂಡತಿಯು ಇದ್ದಳು. ಬಸವೇಶ್ವರನ ತಾಯಿಯ ಹೆಸರು ಮಾದಲಾಂಬಿಕೆಯು. ಇವಳಿಗೆ ಬಲದೇವ ಮತ್ತು ಸಿದ್ಧಣ್ಣ ಎಂಬ ಇಬ್ಬರು ಸಹೋದರರಿದ್ದರು. ಇವರು ಚಾಲುಕ್ಯ ರಾಜ್ಯದಲ್ಲಿ ಮಂತ್ರಿಗಳಾಗಿ ಇಲ್ಲವೆ ಸೇನಾಪತಿಗಳಾಗಿ ಉಚ್ಚ ಪದವಿಯಲ್ಲಿದ್ದರು.

ಕಲಚೂರ್ಯ ವಂಶದ ರಾಜರು ಚಾಲುಕ್ಯರಿಗೆ ಮಾಂಡಲಿಕರಾಗಿ ಮಂಗಳವಾಡದಲ್ಲಿ ಅನೇಕ ವರ್ಷ ರಾಜ್ಯವಾಳಿದರು. ಇವರು ತರ್ದವಾಡಿ ನಾಡು ಎಂದರೆ ಈಗಿನ ವಿಜಾಪುರ ಜಿಲ್ಲೆಯ ಉತ್ತರ ಭಾಗವಾದ ಕೃಷ್ಣಾ ಮತ್ತು ಭೀಮಾನದಿಗಳ ಮಧ್ಯಪ್ರದೇಶ ಮತ್ತು ಇದರ ಸುತ್ತುಮುತ್ತಲಿನ ಭೂಪ್ರದೇಶಗಳಲ್ಲಿ ಬಿಜ್ಜಳ ರಾಜನ ಪೂರ್ವದಲ್ಲಿಯೇ ರಾಜ್ಯಸ್ಥಾಪನೆ ಮಾಡಿಕೊಂಡಿದ್ದರು. ಆದರೆ ಇವರು ಚಾಲುಕ್ಯರೊಡನೆ ಶರೀರಸಂಬಂಧವನ್ನು ಮಾಡಿಕೊಂಡು ಅವರೊಡನೆ ಹಿತವಾಗಿದ್ದರು.

ಈ ಕಲಚೂರ್ಯ ವಂಶದ ರಾಜರಲ್ಲಿ ಬಹು ವಿಖ್ಯಾತಿಯನ್ನು ಹೊಂದಿದವನು ಜೋಗಮನು. ಅವನು ಸುಮಾರು ಕ್ರಿ. ಶ. ೧೧೮೦ ರಲ್ಲಿ ಈ ಭಾಗದಲ್ಲಿ ರಾಜ್ಯವಾಳುತ್ತಿದ್ದನು. ಅವನ ತರುವಾಯ ಪೆರ್ಮಾಡಿಯು ರಾಜ್ಯವಾಳಿದನು. ಅವನು ೧೧೧೮ ರಿಂದ ೧೧೪೦ ರ ವರೆಗೆ ಚಾಲುಕ್ಯರಿಗೆ ಅಂಕಿತನಾಗಿ ರಾಜ್ಯವಾಳಿದನು. ಈತನ ಸಹೋದರಿಯಾದ ಸಾವಳದೇವಿಯು ಚಾಲುಕ್ಯರ ಪ್ರಸಿದ್ಧ ಚಕ್ರವರ್ತಿಯಾದ ೬ ನೇ ವಿಕ್ರಮಾದಿತ್ಯನ ಹೆಂಡತಿಯು. ಪೆರ್ಮಾಡಿಯ ಮಗನೇ ಬಿಜ್ಜಳನು. ಇವನು ಮೊದಲು ಅನೇಕ ವರ್ಷ ಬನವಾಸಿ ನಾಡನ್ನು ಚಾಲುಕ್ಯರಿಗೆ ಮಾಂಡಲಿಕನಾಗಿ ಆಳುತ್ತ ಕಡೆಗೆ ೧೧೫೫ ರಲ್ಲಿ ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ ಆದರ ಸರ್ವಾಧಿಪತಿಯಾಗಿಯೂ ೧೧೬೨ ರಲ್ಲಿ ಅದರ ಚಕ್ರವರ್ತಿಯಾಗಿಯೂ ಕಲ್ಯಾಣದಲ್ಲಿ ರಾಜ್ಯವಾಳಿದನು. ಬಸವೇಶ್ವರನೇ ಈತನಿಗೆ ಮುಖ್ಯ ಮಂತ್ರಿಯಾಗಿದ್ದನು.

ಬಿಜ್ಜಳನು ಚಕ್ರಾಧಿಪತ್ಯವನ್ನು ವಹಿಸುವ ಪೂರ್ವದಲ್ಲಿ ಅವನ ತಂದೆಯಾದ ಪೆರ್ಮಾಡಿಯು ಮಂಗಳವಾಡದಲ್ಲಿ ರಾಜ್ಯವಾಳುತ್ತಿದ್ದಾಗ

ಸಿದ್ಧಣ್ಣಮಂತ್ರಿಯು ಅಂದರೆ ಬಸವೇಶ್ವರನ ಸೋದರಮಾವನು ಅವನಲ್ಲಿ ದಂಡಾಧಿಪನಾಗಿ ಕೆಲಸ ಮಾಡುತ್ತಿದ್ದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿವೆ.

ಪೆರ್ಮಾಡಿ ರಾಜನು ಮೃತಿಯನ್ನು ಹೊಂದುವ ಕಾಲದಲ್ಲಿ ಅವನು ಸಿದ್ಧಣ್ಣ ಮಂತ್ರಿಯನ್ನು ತನ್ನಲ್ಲಿ ಬರಮಾಡಿಕೊಂಡು ತನ್ನ ಮಗ ಬಿಜ್ಜಳನು ಇನ್ನೂ ಸಣ್ಣವನಿದ್ದದರಿಂದ ಅವನಿಗೆ ಸಲಹೆಗಾರನಾಗಿ ನೀನಿರಬೇಕೆಂದು ಹೇಳಿ ಬಿಜ್ಜಳನನ್ನು ಅವನ ಕೈಯ್ಯಲ್ಲಿ ಕೊಟ್ಟು ಮೃತಿಯನ್ನು ಹೊಂದಿದನು.

ಸಿದ್ಧಣ್ಣ ಮಂತ್ರಿಯಾದರೂ ಬಿಜ್ಜಳನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನು ಅವನಿಗೋಸ್ಕರ ರಾಜ್ಯಪರಿಪಾಲನೆ ಮಾಡುತ್ತಬಂದನು. ಈತನ ಹೆಂಡತಿಯ ಹೆಸರು ಪದ್ಮಗಂಧಿಯು. ಇವರ ಮಗಳೇ ನೀಲಾಂಬಿಕೆಯು. ಇವಳು ಚಿಕ್ಕಂದಿನಿಂದಲೂ ಬಿಜ್ಜಳನ ಬದಿಯಲ್ಲಿದ್ದು ಅವನೊದನೆ ಬೆಳೆದು ಬಂದಳು.

ಹೀಗಿರುವಲ್ಲಿ ಬಸವೇಶ್ವರನು ಬಾಗೇವಾಡಿಯಲ್ಲಿ ಜನಿಸಿ ಮುಂದೆ ಮೌಂಜೀ ಬಂಧನ ಕಾಲದಲ್ಲಿ ತನ್ನ ಜಾತಿಬಾಂಧವರಿಂದ ಭಿನ್ನಮತವುಳ್ಳವನಾಗಲು ಕೂಡಲಸಂಗಮೇಶ್ವರ ದೇವಸ್ಥಾನಕ್ಕೆ ಬಂದು ಅಲ್ಲಿಯೇ ನಿಂತನು. ಈ ದೇವಸ್ಥಾನವಿದ್ದ ಸಂಗಮಗ್ರಾಮವು ಅವನ ತಾಯಿ ಮಾದಲಾಂಬಿಕೆಯ ತವರೂರಾಗಿರಬೇಕೆಂದು ನಾವು ಊಹಿಸುತ್ತೇವೆ. ಬಸವೇಶ್ವರನು ಅನೇಕ ವರ್ಷ ಇಲ್ಲಿ ದೇವರ ಸನ್ನಿಧಿಯಲ್ಲಿ ಕಾಲಕಳೆದನು. ಮುಂದೆ ಅವನು ಪರಮಾತ್ಮನ ಅಪ್ಪಣೆಯನ್ನು ಹೊಂದಿ ತನ್ನ ಸೋದರಮಾವನಾದ ಸಿದ್ಧಣ್ಣ ಮಂತ್ರಿಯು ಆಳುತ್ತಿದ್ದ ಮಂಗಳವಾಡ ಗ್ರಾಮಕ್ಕೆ ಬಂದನು.

ಬಸವೇಶ್ವರನು ಅತ್ಯಂತ ಕುಶಾಗ್ರಮತಿಯುಳ್ಳವನು. ಮಹಾಕವಿಯಾದ ಹರಿಹರನು ಹೇಳುವದೇನೆಂದರೆ, ಬಿಜ್ಜಳನ ಆಸ್ಥಾನದಲ್ಲಿದ್ದ ಗಣಕರ ಸಮೀಪದಲ್ಲಿ ಬಸವೇಶ್ವರನು ಬಂದಿರಲು ಅವನು ಗಣಕರು ತಪ್ಪು ಲೆಕ್ಕಮಾಡಿದ್ದನ್ನು ಗುರುತಿಸಿ ಅದನ್ನು ಸರಿಪಡಿಸಿಕೊಟ್ಟನು. ಇದು ಸಿದ್ಧಣ್ಣ ಮಂತ್ರಿಗೆ ತಿಳಿಯಲು ಅವನು ಅವನ ಬುದ್ಧಿವಂತಿಕೆಗೆ ಮೆಚ್ಚಿ ಅವನನ್ನು ಆಸ್ಥಾನದಲ್ಲಿ ಭಂಡಾರದ ಮೇಲೆ ಅಧಿಕಾರಿಯನ್ನಾಗಿ ಮಾಡಿಕೊಂಡನು.

ಮುಂದೆ ಸಿದ್ದಣ್ಣ ಮಂತ್ರಿಗೆ ಮರಣಸಮಯವು ಪ್ರಾಪ್ತವಾಯಿತು. ಆಗ ಅವನು ಬಿಜ್ಜಳನನ್ನು ಕರಿಸಿ ಅವನ ಕೈಯ್ಯಲ್ಲಿ ತನ್ನ ಮಗಳು ನೀಲಲೋಚನೆಯನ್ನು ಕೊಟ್ಟು ಅವಳನ್ನು ಪಾಲನೆ ಮಾಡಲು ಅವನಿಗೆ ವಿಜ್ಞಾಪಿಸಿಕೊಂಡನು. ಸಿದ್ದಣ್ಣ ಮಂತ್ರಿಯು ತೀರಿದ ಬಳಿಕ ಬಿಜ್ಜಳನು ತನ್ನಲ್ಲಿ ಕೆಲಸ ಮಾಡುತ್ತಿದ್ದ ಬಸವನನ್ನೇ ರಾಜ್ಯದಲ್ಲಿ ಮುಖ್ಯಾಧಿಕಾರಿಯನ್ನಾಗಿ ಮಾಡಿ ಅವನಿಗೆ ಎಲ್ಲ ಅಧಿಕಾರವನ್ನು ಒಪ್ಪಿಸಿದನು. ಮತ್ತು ನೀಲಾಂಬಿಕೆಯನ್ನು ಬಸವನಿಗೆ ಕೊಟ್ಟು ಲಗ್ನ ಮಾಡಿದನು. ಸಿಂಗಿ ರಾಜ ಪುರಾಣ ಮತ್ತು ಸಿದ್ಧರಾಮೇಶ್ವರನ ಮಂತ್ರಗೌಪ್ಯ ಇವುಗಳಲ್ಲಿ ಈ ಬಗ್ಗೆ ಬಂದ ವೃತ್ತಾಂತಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

## ಸಿಂಗಿರಾಜ ಪುರಾಣ.

"ಬಸವೇಶ್ವರನು ಆಕಾಶದಿಂದ ಬಿದ್ದ ಲಿಪಿಯನ್ನು ಓದಿದ ಬಳಿಕ ಅದರಂತೆಯೇ ಬಿಜ್ಜಳನಿಗೆ ಬಹಳ ದ್ರವ್ಯವು ದೊರಕಿತು. ಆಗ ಬಿಜ್ಜಳನು ಬಸವೇಶ್ವರನಿಗೆ ಬಹಳ ಮನ್ನಣೆಯನ್ನಿತ್ತು ಬಸವೇಶ್ವರನಿಗೆ ಒಂದು ಅರಮನೆಯನ್ನು ಕಟ್ಟಿಸಿಕೊಟ್ಟನು. ಅಲ್ಲಿ ನಾಗಲಾಂಬಿಕೆ ಮತ್ತು ಗಂಗಾಂಬಿಕೆಯವರು ವಾಸಮಾಡಹತ್ತಿದರು. ಬಸವೇಶ್ವರನು ಶರಣಗಣವನ್ನು ಪೂಜಿಸುತ್ತ ರಾಜ್ಯಕ್ರಮಗಳನ್ನು ಸರಿಯಾಗಿ ಮಾಡುತ್ತ ರಾಜನ ವಿಶ್ವಾಸಕ್ಕೆ ಪಾತ್ರನಾದನು. ರಾಜನು ಒಂದಾನೊಂದು ದಿನ ತನ್ನಲ್ಲೇ ತಾನು— "ಆಹಾ ನನ್ನ ರಾಜ್ಯಾಧಿಪತ್ಯವನ್ನು ಈತನಿಗೆ (ಬಸವನಿಗೆ) ವಹಿಸಿರುವೆನು. ಅದಕಾರಣ ನಮ್ಮ ತಾಯಿಯು ನಮ್ಮ ತಂದೆಯೊಡನೆ ಸಹಗಮನದ ಕಾಲದಲ್ಲಿ ನಮ್ಮ ತಮ್ಮ ಕರ್ಣದೇವನು ಶಿಶುವಾಗಿದ್ದನು. ಆಗ ಆವನಿಗೆ ಲೀಲೆಯಿಂದ ಮಂತ್ರಿಕುಲಪಾಲ ಸಿದ್ಧರದಣ್ಣಾಯಕನ ಅರಸಿಯಾದ ಪದ್ಮಗಂಧಿಯು ಹಾಲನ್ನು ಕೊಟ್ಟು ಸಲಹಿದಳು. ಆ ಪುಣ್ಯಶಾಲಿಯಾದ ಆಕೆಯ ಉದರದಲ್ಲಿ ನೀಲಲೋಚನೆ ಎಂಬುದಾಗಿ ಒಬ್ಬ ಮಗಳು ಜನಿಸಿರುವಳು. ಆ ನೀಲಲೋಚನೆಯನ್ನು ಈ ನೀಲಲೋಚನನಾದ ಬಸವನಿಗೆ ಕೊಟ್ಟು ವಿವಾಹವನ್ನು ಮಾಡಿಬಿಟ್ಟರೆ ನನಗೆ ತುಂಬಾ ಅನುಕೂಲವಾಗುವದು, ಎಂದು ಒಂದು ಅನುಬಂಧವನ್ನು ನೆನಿಸಿ ಬಸವೇಶಂಗೆ ಈ ವಿಷಯವೆಲ್ಲ ತಿಳಿಸಿ ಬಸವೇಶನ ಅಭಿಪ್ರಾಯಾನುಸಾರವಾಗಿ ಪಂಚಗಣಾಧೀಶ್ವರರಿಂದ ನೀಲಲೋಚನೆಗೆ ಶಿವದೀಕ್ಷಾ ಸಂಸ್ಕಾರವನ್ನು

ಮಾಡಿಸಿ ಅನಂತರ ಶುಭದಿವಸದಲ್ಲಿ ಕ್ರಮವಾಗಿ ಬಸವೇಶಂಗೆ ನೀಲ ಲೋಚನೆಯನ್ನು ಕೊಟ್ಟು ವಿವಾಹ ಮಹೋತ್ಸವವನ್ನು ಮಾಡಿದನು." ( ಸಿಂಗಿರಾಜ ಪುರಾಣವಿಜಯ ಪುಟ–೧೪೦ )

## ಸಿದ್ಧರಾಮೇಶ್ವರನ ಮಂತ್ರಗೋಪ್ಯ.

" ಬಸವರಾಜೇಂದ್ರನು ಬಿಜ್ಜಳನ ಗದ್ದಿಗೆಯ ಕೆಳಗೆ ೬೬ ಕೋಟಿ ದ್ರವ್ಯವನು ಮೆಟ್ಟಿ ನೋಡಿ ತೆಗೆಸಿದನು. ತೆಗಿಸಿದಲ್ಲಿ ಬಿಜ್ಜಳನ ಮುಂತಾದ ರಾಯ ರಾವುತ ಪಟುಭಟಮನ್ನೆಯರು ಪುರಜನ ಪರಿಜನ ಸಭಾಸ್ಥಾನ ವೆಲ್ಲವು ಈತನೆಂದಡೆ ಸೋಜಿಗದ ಪುರುಷನು ಎಂದು ಆಶ್ಚರ್ಯಂಬಟ್ಟು ಆ ಬಸವರಾಜೇಂದ್ರನಿಗೆ ವಂದನಂಗೈದು, ಚಾಳುಕ್ಯನಾಳಿಕೆಯ ಸಿದ್ದಣ್ಣ ಮಂತ್ರಿಯ ಪುತ್ರಿಯಾದ ನೀಲಲೋಚನೆಯಮ್ಮನೇ ಬಿಜ್ಜಳನಿಗೆ ಅಗ್ರಜೆ ಯಾಗಬೇಕು. ಅದೆಂತೆನೆಂಬಲ್ಲಿ ಚಾಳುಕ್ಯನು ಮೃತಿವನೆಯ್ದುವಲ್ಲಿ ತನ್ನ ಪುತ್ರನಾದ ಬಿಜ್ಜಳನನ್ನು ಆ ಸಿದ್ದಣ್ಣ ಮಂತ್ರಿಯ ಕಯ್ಯಲ್ಲಿ ಕೊಟ್ಟು ಮೃತ ನಾಗಿಹೋದಲ್ಲಿ ಆ ಸಿದ್ದಣ್ಣ ಮಂತ್ರಿಯು ಬಿಜ್ಜಳನಿಗೆ ಪಟ್ಟವಕಟ್ಟಿ ತಾನೇ ಪಟ್ಟವನಾಳುತ್ತಿರ್ದನು. ಆತನಿಗೆ ಅಂತ್ಯಕಾಲ ಒದಗಿತ್ತು. ಒದಗಿರುವಲ್ಲಿ ಆ ಬಿಜ್ಜಳನ ಕರೆದವನ ಕಯ್ಯಲ್ಲಿ ನೀಲಲೋಚನೆಯಮ್ಮನ ಕೊಟ್ಟು ನಿಮ್ಮ ಈ ಯಮ್ಮನು ಒಂದೇ ತಾಯ್ತೊಲೆಯುಂಡು ಬೆಳೆದವರು. ಅದು ಕಾರಣ ನಿನಗೆ ಅಗ್ರಜೆಯಾಗಬೇಕೆಂದು ಬಿಜ್ಜಳನಿಗೆ ಹೇಳಿ ಮೃತಿಯನೆಯ್ದಿ ದಾಗಲಿತ್ತ ಬಿಜ್ಜಳನು ಆ ನೀಲಲೋಚನೆಯಮ್ಮನ ತಮ್ಮಕ್ಕನೆಂದು ಕಂಡು ಪಾಲಿಸುತ್ತಿರಲು ನೀಲಲೋಚನೆಯ ಬಸವರಾಜೇಂದ್ರನಿಗೆ ಧಾರೆ ಎರೆದು ಕೊಟ್ಟು ತನ್ನರಮನೆ ಆಸ್ಥಾನ ರಾಜ ತೇಜ ದೇಶ ಕೋಶ ಬೊಕ್ಕಸ ಭಾಂಡಾರ ಆನೆ ರಥ ಪರಿವಾರವೆಲ್ಲಕ್ಕು ನೀನೇ ಅಧಿಕಾರಿಗಳು "ನೀವು ಕೊಟ್ಟು ಪಡಿಯಕ್ಕಿಯನೂಟವವ ಮಾಡಿಕೊಂಡು ನಾನು ನೀವೆಂತಿರಿಸಿ ದಂತಿಹೆನು. ಈ ಮಣಿಹವ ನೀವೇ ನಡಿಸುವುದೆಂದು ಕಿಂಕುರ್ವಾಣದಿಂ ಬಿನ್ನೈಸಲು " ( ಸಿದ್ಧರಾಮೇಶ್ವರ ಮಂತ್ರಗೋಪ್ಯ )

ಮೇಲಿನ ವಿವರಣೆಗಳಿಂದ ನೀಲಾಂಬಿಕೆಯು ಒಂದು ಉಚ್ಚ ಮನೆ ತನಕ್ಕೆ ಸೇರಿದವಳಾಗಿ ಬಿಜ್ಜಳೊಡನೆ ಲೆಳೆದು ಅವನ ಮಂತ್ರಿಯಾದ ಬಸವೇಶ್ವರನ ಪತ್ನಿಯಾಗಿದ್ದಳೆಂದು ತಿಳಿದುಬರುತ್ತದೆ.

ಬಸವೇಶ್ವರನ ಕಾಲದಲ್ಲಿ ಅನೇಕರು ಸ್ತ್ರೀ ವಚನಕಾರರಾಗಿದ್ದಾರೆ. ಅವನ ಇಬ್ಬರೂ ಪತ್ನಿಯರು, ನೀಲಾಂಬಿಕೆ ಮತ್ತು ಗಂಗಾಂಬಿಕೆಯರು ವಚನಕಾರರಿದ್ದಾರೆ. ನೀಲಾಂಬಿಕೆಯು ಬಸವಪ್ರಿಯ ಕೂಡಲಸಂಗಮ ದೇವಾ ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾಳೆ. ಗಂಗಾಂಬಿಕೆಯು ಗಂಗಾಪ್ರಿಯ ಕೂಡಲಸಂಗಮದೇವಾ ಎಂದು ವಚನ ಗಳನ್ನು ರಚಿಸಿದ್ದಾಳೆ.

ನೀಲಾಂಬಿಕೆಯು ಬಸವೇಶ್ವರನನ್ನು ಲಗ್ನವಾದ ಬಳಿಕ ಅವಳು ಬಸವೇಶ್ವರನ ಕಾರ್ಯಗಳಲ್ಲಿ ಅವನಿಗೆ ಅನುಕೂಲಳಾಗಿ ವರ್ತಿಸುತ್ತ ಬಂದಿದ್ದಾಳೆ. ಆದ್ದರಿಂದ ಬಸವೇಶ್ವರನು ಅವಳ ವಿಷಯದಲ್ಲಿ ಅತ್ಯಂತ ಅನುರಾಗವುಳ್ಳವನಾಗಿದ್ದನು. ಕಡೆಯ ವರೆಗೂ ಅವನು ಆಕೆಯು ತನ್ನ ಸಮೀಪವರ್ತಿಯಾಗಿರಬೇಕೆಂದು ಬಯಸಿದ್ದು ಕಂಡು ಬರುತ್ತದೆ.

ನೀಲಾಂಬಿಕೆಯು ಬಸವೇಶ್ವರನ ಕೂಡ ಲಗ್ನವಾಗುವ ಪೂರ್ವದಲ್ಲಿ ಸಂಗಮೇಶ್ವರನೆಂಬ ಗುರುವಿನ ಕಯ್ಯಲ್ಲಿ ದೀಕ್ಷೆ ಹೊಂದಿದಳೆಂದು ಗ್ರಂಥ ಗಳಲ್ಲಿ ಉಲ್ಲೇಖಗಳಿವೆ. ( ಬಸವೇಶ್ವರನ ಷಟ್‌ಸ್ಥಲ ವಚನ ಕಥಾಸಾರ)

ನೀಲಾಂಬಿಕೆಯನ್ನು ವೀರಶೈವ ಗ್ರಂಥಕಾರರು ಹೊಗಳಿದಷ್ಟು ಬೇರೆ ಯಾವ ಶರಣೆಯನ್ನು ಅವರು ಹೊಗಳಿದ್ದು ಕಂಡುಬರುವದಿಲ್ಲ. ಆಕೆಯ ಲಿಂಗಭಕ್ತಿ, ಬಸವೇಶ್ವರನ ವಿಷಯವಾಗಿ ಅವಳಲ್ಲಿದ್ದ ಪ್ರೀತಿ ಇವುಗಳನ್ನು ಅವರು ಬಹಳ ಹೊಗಳುತ್ತಾರೆ. ವೀರಶೈವ ಕವಿಗಳು ಅವಳಬಗ್ಗೆ ಸಣ್ಣ ದೊಡ್ಡ ನಾನಾ ತರದ ಕವನಗಳನ್ನು ರಚಿಸಿರುತ್ತಾರೆ. ನೀಲಾಂಬಿಕೆಯ ಬಗ್ಗೆ ಸಾಂಧ್ಯಗಳು, ಅಷ್ಟಕಗಳು, ರಗಳೆಗಳು, ಪದ್ಯಗಳು, ಮತ್ತು ಒಂದು ಕಾಲಜ್ಞಾನ ಹೀಗೆ ಒಂದು ವಾಙ್ಮಯವೇ ಉಂಟಾಗಿರುತ್ತದೆ. ಅನೇಕ ವಚನಕಾರರು ಬಸವೇಶ್ವರನನ್ನು ಸ್ತುತಿಸಿದಂತೆ ನೀಲಾಂಬಿಕೆಯನ್ನು ತಮ್ಮ ವಚನಗಳಲ್ಲಿ ಸ್ತುತಿಸಿರುತ್ತಾರೆ. ಇವುಗಳನೆಲ್ಲ ನಾವು ಸಂಗ್ರಹಿಸಿ ಅಚ್ಚು ಹಾಕಿಸಿದಲ್ಲಿ ಅವುಗಳದೊಂದು ದೊಡ್ಡ ಗ್ರಂಥವೇ ಆಗುವದು. ನೀಲಾಂಬಿಕೆಯು ವೀರಶೈವ ಶರಣ ಶರಣೆಯರಲ್ಲಿ ಇಷ್ಟು ಉಚ್ಚ ಸ್ಥಾನ ವನ್ನು ಹೊಂದಿರುತ್ತಾಳೆ.

ನಾವು ಹಿಂದೆ ಹೇಳಿದಂತೆ ಅವಳು ವಚನಗಳನ್ನು ರಚಿಸಿದ್ದಾಳೆ. ಅವಳ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. ಹೆಚ್ಚಿಗೆ ಸಂಶೋ

ಧನೆ ಮಾಡಿದಲ್ಲಿ ಆಕೆಯು ಅನೇಕ ವಚನಗಳು ದೊರೆಯು ಬಹುದು. ಈ ವಚನಗಳ ಮೇಲಿಂದ ಅವಳು ಸಂಸ್ಕೃತ ಭಾಷೆಯನ್ನು ಚನ್ನಾಗಿ ಬಲ್ಲವಳಾಗಿದ್ದಳೆಂದು ಅನುಮಾನ ಮಾಡಬಹುದಾಗಿದೆ. ಅವಳು ಬಿಜ್ಜಳನ ಮತ್ತು ಬಸವೇಶ್ವರನ ಆಸ್ಥಾನಗಳಲ್ಲಿ ಇದ್ದಾಗ ಇಂಥ ಧರ್ಮಗ್ರಂಥಗಳನ್ನು ಪರಿಶೀಲನೆ ಮಾಡಿರಬಹುದು.

## ವಚನಗಳು.

(೧) ಲಿಂಗ ಮುಂತಾದ ಭಕ್ತನು ಅಂಗದಮೇಲೆ ಲಿಂಗ ಹೋಯಿತ್ತೆಂದು ಸಂದೇಹಮಾಡಿ ಶಸ್ತ್ರ ಶೈಲ, ಸಮಾಧಿ, ಪಾಶ, ಕೊಳಲಾಗದು. ಅದೆಂತೆಂದೊಡೆ "ಭಕ್ತಸ್ಯ ಲಿಂಗ ದೇಹಸ್ಯ । ತದ್ಯೋಗಂ ಲಿಂಗ ವರ್ಜಯೇತ್ । ಶಸ್ತ್ರ ಶೈಲ ಜಲಂದೃಷ್ಟ್ವ । ಸಮಾಧಿ ಪಾಶವರ್ಜಯೇತ್ । ಇದಕ್ಕೆ ಮುಂದೆ--ಧ್ಯಾನಧಾರಣ ಸಮಾಧಿಯುಕ್ತರಬೇಕು. ಸಾಕ್ಷಿ ತಪೋ ಧ್ಯಾನ ಭಸ್ಮಸ್ರವ । ನಿಶ್ಚಿಂತಂ ನಿರುಪಾಧಿಕಂ । ಭುಕ್ತಿ ಮುಕ್ತಿ ಪ್ರಸಾದಂಚ । ಶಿವಲೋಕೇ ! ಮಹೀಯತೆ ! ಇಂತೆಂಬ ಶ್ರುತಿಯಮೀರಿ ಲಿಂಗ ಕ್ಷಾಸೆಯ ಮಾಡಿ ಲಿಂಗವ ಧರಿಸುವ ಶಿಷ್ಯ ಗುರು ದ್ರೋಹಿ. ಹಣದಾಸೆಯುಮಾಡಿ ಲಿಂಗವ ಧರಿಸುವ ಗುರು ಶಿವ ದ್ರೋಹಿ. ಅದೆಂತೆಂದೊಡೆ "ಲಿಂಗ ಬಾಹ್ಯವ್ರತಭ್ರಷ್ಟ । ಮುನರ್ಲಿಂಗಂತು ವರ್ಜಯೇತ್ । ಜಾಯ ನಿಷ್ಫಲಂ ಚೈವ । ರೌರವಂ ನರಕಂ ವ್ರಜೇತ್ । ಇಂತೆಂದುದಾಗಿ ಇವರಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕ ಪ್ರಸಾದವಿಲ್ಲ, ಮುಕ್ತಿ ಇಲ್ಲ, ಬಸವಪ್ರಿಯ ಕೂಡಲ ಸಂಗಮದೇವಾ.

(೨) ಇಷ್ಟಲಿಂಗವೇ ಬಸವಣ್ಣನೆಂದರಿದು ತಮ್ಮ ಇಷ್ಟ ಲಿಂಗದಲ್ಲಿ ನಿರವಯಲ ನೆಯ್ದಿದರು ಅಕ್ಕ ನಾಗಲಾಂಬಿಕೆಯರು. ಜಂಗಮ ಪ್ರಸಾದವ ಬಸವಣ್ಣನೆಂದರಿದು ತಮ್ಮ ಜಂಗಮ ಪ್ರಸಾದದಲ್ಲಿ ನಿರವಯಲನೆಯ್ದಿದ್ದರು ಅಕ್ಕ ಮಹಾದೇವಿಯಮ್ಮನವರು. ಪ್ರಸಾದಲಿಂಗವೇ ಬಸವಣ್ಣನೆಂದರಿದು ತಮ್ಮ ಪ್ರಸಾದಲಿಂಗದಲ್ಲಿ ನಿರವಯಲನೆಯ್ದಿದರು ಮುಕ್ತಾಯಕ್ಕಗಳು. ಆಚಾರಲಿಂಗವೇ ಬಸವಣ್ಣನೆಂದರಿದು ತಮ್ಮ ಆಚಾರಲಿಂಗದಲ್ಲಿ ನಿರವಯನೆಯ್ದಿದರು ಅಸಂಖ್ಯಾತ ಮಹಾಗಣಂಗಳೆಲ್ಲರು. ಗುಹೇಶ್ವರ ಲಿಂಗದಲ್ಲಿ ಪ್ರಭುವೇ ಸಾಕ್ಷಿಯಾಗಿ ಬಸಪ್ರಿಯ ಕೂಲ ಸಂಗಮದೇವಾ ಬಸವಣ್ಣನಿಂದ ನಿರವಯಲ ಲಿಂಗವ ಕಂಡೆನು.

(೩) ಬಸವಣ್ಣನೆಂಬ ಆಚಾರಲಿಂಗವ ಪಿಡಿದು ಅನುಮಿಷ ಬಸವಣ್ಣನಂತಾದ. ಮಡಿವಾಳಯ್ಯ ಬಸವಣ್ಣನೆಂಬ ಗುರುವ ಪಿಡಿದು ಬಸವಣ್ಣನಂತಾದ. ಚನ್ನ ಬಸವಯ್ಯ ಬಸವಣ್ಣನೆಂಬ ಲಿಂಗವ ಪಿಡಿದು ಬಸವಣ್ಣನಂತಾದ. ಸಿದ್ಧರಾಮಯ್ಯ ಬಸವಣ್ಣನೆಂಬ ಜಂಗಮವ ಪಿಡಿದು ಬಸವಣ್ಣನಂತಾದ. ಪ್ರಭುದೇವರು ಬಸವಣ್ಣನೆಂಬ ಗುಹೇಶ್ವರ ಲಿಂಗವ ಪಿಡಿದು. ಜ್ಯೋತಿರ್ಮಯನಾಗ. ಅಸಂಖ್ಯಾತ ಮಹಾಗಣಂಗಳೆಲ್ಲರ ಬಸವಣ್ಣನೆಂಬ ನಿರವಯ ಲಿಂಗವ ಪಿಡಿದು ಶರಣಸತಿ ಲಿಂಗ ಪತಿಯಾದರು, ಗುಹೇಶ್ವರ ಲಿಂಗವಲ್ಲಿ ಪ್ರಭುದೇವರ ಸಾಕ್ಷಿಯಾಗಿ. ಬಸವಪ್ರಿಯ ಕೂಡಲ ಸಂಗಮ ದೇವಾ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎನುತಿರ್ದೆನು.

(೪) ಬಸವಣ್ಣನೇ ಗುರುವೆಂದರಿಯರಲ್ಲಾ. ಬಸವಣ್ಣನೇ ಲಿಂಗವೆಂದರಿಯರಲ್ಲಾ. ಬಸವಣ್ಣನೇ ಜಂಗಮವೆಂದರಿಯರಲ್ಲಾ. ಬಸವಣ್ಣನೇ ಪ್ರಸಾದವೆಂದರಿಯರಲ್ಲಾ. ಬಸವಣ್ಣನೇ ಗುರುವೆಂದು ಅನುಮಿಷನು ನಡೆದು, ಬಸವಣ್ಣನೇ ಲಿಂಗವೆಂದು ಚನ್ನಬಸವಣ್ಣ ನಡೆದು, ಬಸವಣ್ಣನೇ ಜಂಗಮವೆಂದು ಪ್ರಭುದೇವರರಿದು, ಬಸವಣ್ಣನೇ ಪ್ರಸಾದವೆಂದು ಮರುಳ ಶಂಕರ ದೇವರರಿದು ಆಚರಿಸಿದರು. ಇದು ಕಾರಣ ಬಸವಣ್ಣನೇ ಗುರು, ಬಸವಣ್ಣನೇ ಲಿಂಗ, ಬಸವಣ್ಣನೇ ಜಂಗಮ, ಬಸವಣ್ಣನೇ ಪ್ರಸಾದವೆಂದರಿಯದ ಅನಾಚಾರಿಗಳನೆನಗೆ ತೋರಿಸದಿರಯ್ಯ ಗುಹೇಶ್ವರ ಲಿಂಗವಲ್ಲಿ ಪ್ರಭುವೇ ಸಾಕ್ಷಿಯಾಗಿ ಬಸವ ಪ್ರಿಯ ಕೂಡಲಸಂಗಮದೇವಾ.

ನೀಲಾಂಬಿಕೆಯು ಉಚ್ಚಸ್ಥಾನಧಲ್ಲಿದ್ದು ಬೆಳೆದವಳು. ಆದರೆ ಅವಳು ಬಸವೇಶ್ವರನ ಗೃಹಿಣಿಯಾದ ಬಳಿಕ ಅವಳು ಅವನ ಅರಮನೆಯಲ್ಲಿಯ ಕೆಲಸಗಳನ್ನು ದಕ್ಷತೆಯಿಂದ ಮಾಡುತ್ತಿದ್ದಳು. ಆ ಸ್ಥಾನದಲ್ಲಿ ಏನಾದರೂ ತೊಂದರೆಗಳಿದ್ದರೆ ಬಸವೇಶ್ವರನು ನೀಲಾಂಬಿಕೆಯನ್ನೇ ಮೊದಲು ಕರೆದು ಅವಳಿಗೆ ಒಪ್ಪಿಸಿ ಬಿಡುವನು. ಹೀಗೆ ಬಸವೇಶ್ವರನಿಗೆ ಸಹಾಯವಾಗಿ ಅವಳು ಅವನ ಅರಮನೆಯಲ್ಲಿರುತ್ತಿದ್ದಳು.

ಹೀಗಿರಲು ಹರಳಯ್ಯ ಮಧುವರಸರನ್ನು ಎಳಹೂಟೆಯಿಂದ ಕೊಂದುಹಾಕಬೇಕೆಂಬ ಘೋರವಾದ ಶಿಕ್ಷೆಯನ್ನು ಬಿಜ್ಜಳನು ವಿಧಿಸಿದನು. ಈ ಉಭಯತರು ಶಿವಶರಣರಲ್ಲಿ ಅತ್ಯಂತ ಮನ್ನಣೆಯನ್ನು ಹೊಂದಿದವರು. ಮತ್ತು ಶಿವಶರಣರ ತತ್ವಗಳ ಪ್ರಕಾರ ನಿರಪರಾಧಿಗಳು. ಬಿಜ್ಜಳನು

ಇವರನ್ನು ಹೀಗೆ ಕೊಲ್ಲಿಸಿದ್ದರಿಂದ ಕಲ್ಯಾಣ ಪಟ್ಟಣದಲ್ಲಿ ಅತ್ಯುಗ್ರ ಕ್ಷೋಭೆಯುಂಟಾಯಿತು. ಬಸವೇಶ್ವರನು ಅತ್ಯಂತ ಕೋಮಲ ಹೃದಯನು. ಅವನು ಹರಳಯ್ಯ ಮಧುವಯ್ಯಗಳು ಎಳಹೂಟೆಯಿಂದ ಎಳಿಸಲ್ಪಟ್ಟು ಮರಣ ಹೊಂದಿದ್ದನ್ನು ಪ್ರತ್ಯಕ್ಷವಾಗಿ ಕಂಡಿದ್ದನು. ಆಗ ಅವನ ಮನಸ್ಸು ತಲ್ಲಣಗೊಂಡಿತು ಕಲ್ಯಾಣವು ಪಾಪಿಷ್ಟರ ಪಟ್ಟಣವೆಂದು ಅವನಿಗೆ ತೋರಿತು. ಇಲ್ಲಿ ಇನ್ನು ಇರಬಾರದೆಂದು ಅವನಿಗೆ ಎನಿಸಿತು. ಆಕ್ಷಣವೇ ಅವನು ಕಲ್ಯಾಣವನ್ನು ಬಿಟ್ಟು ತಾನು ಚಿಕ್ಕಂದಿನಲ್ಲಿ ಕಾಲ ಕಳೆದಿದ್ದ ಕಪ್ಪಡಿ ಸಂಗಮನಾಥನ ನೆರೆಯಲ್ಲಿರಬೇಕೆಂದು ಬಯಸಿ ಅತ್ತ ಪ್ರಯಾಣವನ್ನು ಕೈಕೊಂಡನು.

ಕಲ್ಯಾಣವನ್ನು ಬಿಡುವದನ್ನು ನಿಶ್ಚಯಿಸಿದ ಕೂಡಲೆ ಬಸವೇಶ್ವರನು ಶೀಘ್ರಗತಿಯಿಂದ ಸಂಗಮಕ್ಕೆ ತೆರಳಿದನು. ಅವನೊಡೆ ಹಡಪದ ಅಪ್ಪಣ್ಣನು ಮಾತ್ರ ಯಾವಾಗಲೂ ಇರುವವನಾಗಿದ್ದನು. ಮುಂದೆ ಅವನು ತನ್ನ ಹೆಂಡತಿ ನೀಲಾಂಬಿಕೆ ಮತ್ತು ಗಂಗಾಂಬಿಕೆ ಇವರನ್ನು ಬರಮಾಡಿಕೊಳ್ಳಬೇಕೆಂದು ಬಯಸಿ ಉಭಯತರು ಕಪ್ಪಡಿ ಸಂಗಮನಾಥನಲ್ಲಿಗೆ ಬರಬೇಕೆಂದು ಅಪ್ಪಣ್ಣನಕೂಡ ಹೇಳಿ ಕಳುಹಿದನು. ಅವರಲ್ಲಿ ನೀಲಾಂಬಿಕೆಯು ಬಸವೇಶ್ವರನು ಹೇಳಿದ ಮೇರೆಗೆ ಕಲ್ಯಾಣವನ್ನು ಬಿಟ್ಟು ಕಪ್ಪಡಿಗೆ ಹೊರಟಳು. ಅವಳು ಮಾರ್ಗದಿಂದ ಹೋಗುತ್ತ ಈಗ ತಂಗಡಿಗೆ ಇರುವ ಗ್ರಾಮದ ವರೆಗೆ ಬಂದಳು. ಈ ಗ್ರಾಮವು ಸಂಗಮದಿಂದ ಎರಡು ಮೈಲುಗಳ ಮೇಲೆ ಇದೆ. ಇಲ್ಲಿಗೆ ಬರುವಷ್ಟರಲ್ಲಿ ಬಸವೇಶ್ವರನು ಕಪ್ಪಡಿ ಸಂಗಮನಾಥನಲ್ಲಿ ಅಡಗಿದನೆಂಬ ಸುದ್ದಿಯು ಬಂದಿತು. ಈ ಸುದ್ದಿಯನ್ನು ನೀಲಾಂಬಿಕೆಯು ಕೇಳಿದ ಕೂಡಲೆ ಲಿಂಗಪ್ರಾಣಿಯಾದ ಅವಳು ತನ್ನ ಲಿಂಗದಲ್ಲಿಯೇ ಬಯಲಾದಳು.

ಬಹು ಜನರು ಅವಳು ಕಲ್ಯಾಣದಲ್ಲಿಯೇ ಬಯಲಾದಳೆಂದು ತಿಳಿದಿದ್ದಾರೆ. ಆದರೆ ತಂಗಡಿಗೆಯಲ್ಲಿ ಅವಳ ಸಮಾಧಿಯು ಇದೆ. ಸಾಮಾನ್ಯವಾಗಿ ಜನರು ಪೂಜ್ಯರಾದವರ ಹೆಸರಿನಿಂದ ಸುಳ್ಳು ಸಮಾಧಿಗಳನ್ನು ಉಂಟು ಮಾಡುವ ಸಂಭವವಿಲ್ಲ. ಬಹುಕಾಲದಿಂದಲೂ ತಂಗಡಿಗೆಯಲ್ಲಿಯೇ ಈ ಸಮಾಧಿಯು ನೀಲಾಂಬಿಕೆಯದೆಂದು ಭಾವಿಸಿ ಅದು ಪುಣ್ಯಕ್ಷೇತ್ರವೆಂದು ಜನರು ತಿಳಿದಿದ್ದಾರೆ. ಆದ್ದರಿಂದ ಬಸವೇಶ್ವರನ ಅಪ್ಪಣೆಯ ಮೇರೆಗೆ ನೀಲಾಂಬಿಕೆಯು ಕಲ್ಯಾಣದಿಂದ ಹೊರಟು ಕಪ್ಪಡಿ ಸಂಗಮನಾಥಲ್ಲಿಗೆ

ಬರುವಷ್ಟರಲ್ಲಿ ಅವಳು ತಂಗಡಿಗೆ ಗ್ರಾಮದಲ್ಲಿ ತನ್ನ ಲಿಂಗದಲ್ಲಿ ಬಯಲಾದಳೆಂದು ನಮಗೆ ತೋರುತ್ತದೆ.

ಬಸವೇಶ್ವರನು ಕಪ್ಪಡಿಗೆ ಬರಲು ತಿಳಿಸಲು ಅವಳು ತನ್ನ ಪತಿಯ ಆಜ್ಞೆಯನ್ನು ಮೀರಲಾರದೆ ಅಲ್ಲಿಗೆ ನಡೆದು ಬಂದಳು. ಈ ಆಜ್ಞೆಯು ಬಂದಕೂಡಲೆ ಅವಳು ಒಂದು ಪದ್ಯವನ್ನು ತನ್ನ ಲಿಂಗವನ್ನು ಉದ್ದೇಶಿಸಿ ಹಾಡಿದ್ದಾಳೆ. ಅದು ಭಾವಪೂರ್ಣವಾಗಿದೆ. ಅದನ್ನು ನಾವು ಕೆಳಗೆ ಕೊಟ್ಟಿದ್ದೇವೆ.

## ನೀಲಾಂಬಿಕೆಯು ಲಿಂಗದಲ್ಲಿ ಅಡಗಿದಾಗ್ಗೆ ಹಾಡಿದ ಪದ.

ನೋಡು ನೋಡು, ನೋಡು, ನೋಡು, ನೋಡು ಲಿಂಗವೇ ।
ನೋಡು ಬಸವಯ್ಯ ಮಾಡಿದಾಟವ ॥ ಪಲ್ಲ ॥

ಹರಳಯ್ಯ ಮಧುವಯ್ಯನವರಿಗೆ ಎಳೆಹೂಟಿ
ದುರುಳ ಬಿಜ್ಜಳನು ಕೊಟ್ಟನಂತೆ
ಇರಬಾರದಲ್ಲೀಗ ಶರಣರಿಗರುಹೆಂದು
ಅರಸು ಬಸವರಾಜ ಹೇಳ್ದನಂತೆ ॥೧॥

ನುಡಿಯನಾಲಿಸು ಬೇಗ ಕೆಡೆವುದು ಕಲ್ಯಾಣ.
ಒಡೆಯ ಸಂಗಮನೊಳು ಬೆರೆವನಂತೆ
ತಡಮಾಡಬೇಡಿರಿ, ಮಡದಿಯರಿಗರುಹೆಂದು
ಒಡೆಯ ಬಸವರಾಜ ನುಡಿದನಂತೆ ॥೨॥

ಅಲ್ಲಿಗೆಯೆಮ್ಮನ್ನು ಬರಹೇಳಿದನಂತೆ.
ಅಲ್ಲಿರ್ಪ ಸಂಗಯ್ಯ ಈತನಲ್ಲವೇ ?
ಅಲ್ಲಿಲ್ಲಿ ಎಂತೆಂಬೊ ಉಭಯ ಸಂದೇಹವೇಕೆ?
ಬಲ್ಲ ಮಹಾತ್ಮರಿಗೆ ಗುಣವೇ? ನೀನು ॥೩॥

ಅಪ್ಪಣ್ಣಯ್ಯಗಳೆನ್ನ ಕರೆಯಬಂದ್ಪೋದರೆ
ಕಪ್ಪಡಿ ಸಂಗಮನಾಥ ಕೇಳೋ.

ಪುಷ್ಪಕ್ಕೆ ಪರಿಮಳ ಬೆರೆವಂತೆ ತಾಯಿ ಎನ್ನ
ಅಪ್ಪಿದ ಲಿಂಗ ಮಾತನಾಡೋ ॥೪॥

ಸಂಗನಬಸವಯ್ಯನೆಂತೆಂಬ ನಿರುತಕ್ಕೆ
ಹಿಂಗದೆ ಕರವೆತ್ತಿ ಪೊಗಳುತಿರೆ
ಸಂಗನಬಸವನು ಆತನೋ ಈತನೋ? ಎ
ನ್ನಂಗಯ್ಯದ ಲಿಂಗ, ಮಾತನಾಡೋ ॥೫॥

ಹೀಗೆ ಹಾಡುತ್ತ ಹಾಡುತ್ತ ನೀಲಾಂಬಿಕೆಯು ತನ್ನ ಲಿಂಗದಲ್ಲಿ ಅಡಗಿದಳು ಈ ನುಡಿಯನ್ನು ತಂಗಡಿಗೆಯ ಜನರು ಈಗಲೂ ಹಾಡುತ್ತಾರೆ. ಅವರು ಈ ಹಾಡನ್ನು ನಮಗೆ ಕಳಿಸಿ ಕೊಟ್ಟಿದ್ದು ಅದನ್ನು ನಾವು ಇದ್ದಕ್ಕಿದ್ದ ಹಾಗೆ ಇಲ್ಲಿ ಪ್ರಕಟಿಸಿದ್ದೇವೆ.

ನೀಲಾಂಬಿಕೆಯ ಐಹಿಕ ಕಳೇಬರವನ್ನು ಜನರು ಇಲ್ಲಿಯೇ ಭೂಗತಮಾಡಿ ಅದರ ಪೂರ್ವಕ್ಕೆ ನೀಲಾಂಬಿಕೆಯ ದೇವಾಲಯವನ್ನೂ ಅದರ ಪಶ್ಚಿಮಕ್ಕೆ ಹಡಪದ ಅಪ್ಪಣ್ಣಯ್ಯನ ದೇವಾಲಯವನ್ನೂ ಕಟ್ಟಿಸಿದ್ದಾರೆ. ಈ ಸ್ಥಾನವು ಪವಿತ್ರವಾದುದೆಂದು ಭಾವಿಸಿ ಜನರು ಅದನ್ನು ಯಾವಾಗಲೂ ಮನ್ನಿಸುತ್ತ ಬಂದಿದ್ದಾರೆ. ದೇವಾಲಯದ ಶಿಖರವು ಕೃಷ್ಣೆಯ ವಿಶಾಲವಾದ ಪಾತ್ರದ ಮಗ್ಗಲು ಬಹು ದೂರದಿಂದ ಕಾಣಿಸುತ್ತದೆ. ಯಾತ್ರಿಕರು ಅದನ್ನು ನೋಡಿ ನೀಲಾಂಬಿಕೆಯನ್ನು ಮೊದಲು ನೆನೆದು ಆಮೇಲೆ ಕೂಡಲಸಂಗಮನಾಥನ ದೇವಾಲಯಕ್ಕೆ ತೆರಳುತ್ತಾರೆ.

ತಂಗಿ ಅಡಗಿದ್ದರಿಂದ ಈ ಗ್ರಾಮಕ್ಕೆ ತಂಗಡಿಗಿ ಎಂಬ ಹೆಸರನ್ನು ಜನರು ಇಟ್ಟು ಅದನ್ನು ಈ ವರೆಗೆ ಕರೆಯುತ್ತ ಬಂದಿದ್ದಾರೆ.

# ಗಂಗಾಂಬಿಕೆ.

ಗಂಗಾಂಬಿಕೆಯು ಬಸವೇಶ್ವರನ ಎರಡನೆಯ ಹೆಂಡತಿಯು. ಮೊದಲಿನ ಹೆಂಡತಿಯಾದ ನೀಲಾಂಬಿಕೆಯ ಲಗ್ನವು ಮಂಗಳವಾಡದಲ್ಲಾಗಿತ್ತು. ಆಗ ಬಿಜ್ಜಳನು ತರ್ದೇವಾಡಿ ನಾಡಿನಲ್ಲಿ ಚಾಲುಕ್ಯರ ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಮುಂದೆ ಅವನು ಬನವಾಸಿ ನಾಡಿಗೆ ಮಾಂಡಲಿಕನಾಗಿ ನೇಮಿಸಲ್ಪಟ್ಟಿದ್ದರಿಂದ ಅವನು ಬನವಾಸಿಯಲ್ಲಿ ಆಳಹತ್ತಿದನು. ಆಮೇಲೆ ಅವನು ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ ಕಲ್ಯಾಣದಲ್ಲಿ ನಿರಂಕುಶನಾಗಿ ಪ್ರಭುತ್ವವನ್ನು ನಡಿಸಹತ್ತಿದನು. ಆಗ ಅವನಿಗೆ ಬಲದೇವನು ಮಂತ್ರಿಯಾಗಿದ್ದನು.

ಈ ಕಾಲದಲ್ಲಿ ಬಸವೇಶ್ವರನು ಕೂಡಲಸಂಗಮನ ಸ್ಥಾನದಲ್ಲಿ ವಾಸಿಸುತ್ತಿದ್ದನು. ಬಿಜ್ಜಳನು ಬನವಾಸಿ ನಾಡಿಗೆ ಹೋದಬಳಿಕ ಬಸವನು ಬಹುಶಃ ಅವನಲ್ಲಿ ಕೆಲ ದಿವಸ ನೌಕರಿ ಮಾಡಿ ಮುಂದೆ ಅದನ್ನು ಬಿಟ್ಟಿರಬಹುದು. ಅಥವಾ ಅಲ್ಲಿಗೆ ಹೋಗಿರಲಿಕ್ಕಿಲ್ಲ. ಆದರೆ ಅಷ್ಟರಲ್ಲಿ ಅವನು ಪ್ರಸಿದ್ಧನಾಗಿದ್ದನು. ಬಿಜ್ಜಳನು ಕಲ್ಯಾಣದಲ್ಲಿ ಚಕ್ರಾಧಿಪತಿಯಾಗಿ ಆಳಹತ್ತಿದಾಗ್ಗೆ ಅವನ ಮಂತ್ರಿಯಾದ ಬಲದೇವನು ಬಸವೇಶ್ವರನ ಮಹಿಮೆ, ಅವನ ಜಾಣತನ, ಅವನ ಯೋಗ್ಯತೆ, ಇವುಗಳನ್ನು ತಿಳಿದುಕೊಂಡು ಅವನಿಗೆ ತನ್ನ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿದನು. ಬಸವೇಶ್ವರನ ಮೊದಲಿನ ಹೆಂಡತಿಯಾದ ನೀಲಾಂಬಿಕೆಯು ಬಲದೇವನ ಸಹೋದರನಾದ ಸಿದ್ದಣ್ಣ ಮಂತ್ರಿಯ ಮಗಳಾಗಿದ್ದಳು. ಈ ಸಿದ್ದಣ್ಣನು ಮತ್ತು ಬಲದೇವನು ಸಹೋದರರಾಗಿದ್ದಲ್ಲದೆ, ಬಸವೇಶ್ವರನ ತಾಯಿಯಾದ ಮಾದಲಾಂಬಿಕೆಯೂ ಕೂಡ ಅವರಿಗೆ ಒಡಹುಟ್ಟಿದವಳಾಗಿದ್ದಳು. ಹೀಗೆ ಇವರೆಲ್ಲರೂ ಸಮೀಪದ ಆಪ್ತರಾಗಿ ಬಸವೇಶ್ವರನಲ್ಲಿ ಅನುರಾಗವುಳ್ಳವರಾಗಿದ್ದರು.

ಹೀಗಿರಲು ಬಲದೇವನು ಬಸವೇಶ್ವರನಿಗೆ ತನ್ನ ಮಗಳನ್ನು ಕೊಡಲು ನಿಶ್ಚಯಿಸಿ ಚಾರರನ್ನು ಕೂಡಲಸಂಗಮಕ್ಕೆ ಕಳುಹಿಸಿ ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡನು. ಬಸವೇಶ್ವರನು ಕಲ್ಯಾಣಕ್ಕೆ ಬಂದು ಸೊಡ್ಡಳ ಬಾಚರಸನ ಮನೆಯಲ್ಲಿ ಮೊದಲು ಇಳಿದನು. ಅಲ್ಲಿ ಪಂಚಗಣಾಧೀಶ್ವರರು ಗಂಗಾಂಬಿಕೆಗೆ ಶಿವದೀಕ್ಷೆಯನ್ನು ಮಾಡಿದರು. ಮುಂದೆ ಲಗ್ನ ಸಮಾರಂಭವೂ ಬಹಳ ವಿಜೃಂಭಣೆಯಿಂದ ನಡೆಯಿತು.

ಬಸವೇಶ್ವರನು ಕಲ್ಯಾಣಕ್ಕೆ ಬರುವಷ್ಟರಲ್ಲಿ ಅವನ ಮಹಿಮೆಯ ಮತ್ತು ಅವನ ಶಿವಯೋಗದ ಬಲ ಇವುಗಳ ವಾರ್ತೆಯು ಎಲ್ಲ ಕಡೆಗೂ ಪಸರಿಸಿತ್ತು. ಅವನು ಕಲ್ಯಾಣದಲ್ಲಿ ಇರಹತ್ತಿದ ಬಳಿಕ ಬಹುಜನ ಶಿವಾನುಭವಿಗಳು ಅವನಲ್ಲಿಗೆ ಆಗಿಂದಾಗ್ಗೆ ಬರಹತ್ತಿದರು.

ಬಸವನು ಒಂದು ದಿವಸ ಓಲಗದಲ್ಲಿ ರಾಜನ ಸಮ್ಮುಖದಲ್ಲಿದ್ದಾಗ್ಗೆ, ಆಕಾಶದಿಂದ ಒಂದು ಲಿಪಿಯು ಅರಸನ ಇದಿರಿಗೆ ಬಂದು ಬಿದ್ದಿತು. ಆದರೆ ಅದನ್ನು ಓದಿ ಅರ್ಥಮಾಡಲು ಓಲಗದಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ. ಆದರೆ ಅಲ್ಲಿದ್ದ ಬಸವೇಶ್ವರನು ಅದನ್ನು ಸುಲಭನಾಗಿ ಓದಿ ಚಾಲುಕ್ಯರ ಗದ್ದುಗೆಯ ಕೆಳಗೆ ಅಪಾರ ದ್ರವ್ಯವಿದೆಂಬ ಭಾವವು ಲಿಪಿಯಲ್ಲಿದೆಂದು ಹೇಳಿದನು. ಆ ಮೇರೆಗೆ ಬಿಜ್ಜಳನು ಸಿಂಹಾಸನದ ಕೆಳಗಿನ ಭೂಮಿಯನ್ನು ಅಗಿಸಲಾಗಿ ಅಲ್ಲಿ ಅವನಿಗೆ ಅಪಾರವಾಗಿ ಧನಕನಕ ವಜ್ರ ವೈಢೂರ್ಯಗಳು ದೊರೆದವು. ಇದಕ್ಕೆ ಬಿಜ್ಜಳನು ಬಸವೇಶ್ವರನಿಗೆ ಅತ್ಯಂತ ಪ್ರೀಯನಾಗಿ ಬಸವನು ಬಹಳ ಜಾಣನು ಅವನು ಮಹಿಮನು, ಎಂದು ಭಾವಿಸಿ ಅವನಿಗೆ ಪ್ರಧಾನಿ ಪಟ್ಟವನ್ನು ಕೊಟ್ಟನು

ಮುಂದೆ ಬಿಜ್ಜಳನು ಬಸವೇಶ್ವರನಿಗೆ ಒಂದು ಸುಂದರವಾದ ಅರಮನೆಯನ್ನು ಕಟ್ಟಿಸಿಕೊಟ್ಟನು. ಅಲ್ಲಿ ಅವನಕೂಡ ನಾಗಲಾಂಬಿಕೆ ಗಂಗಾಂಬಿಕೆ, ನೀಲಾಬಿಂಕೆ, ಇವರೆಲ್ಲರೂ ವಾಸಮಾಡಹತ್ತಿದರು. ಬಸವೇಶ್ವರನು ಹೀಗೆ ಉಚ್ಚಸ್ಥಾನದನ್ನು ಹೊಂದಿದ್ದರಿಂದ ಕಲ್ಯಾಣಕ್ಕೆ ನಾನಾ ದೇಶಗಳಿಂದ ವಿದ್ವಜ್ಜರೂ ರಸಿಕರೂ ಶಿವಾನುಭಾವಿಗಳೂ ಬಹು ಸಂಖ್ಯೆಯಿಂದ ಬರಹತ್ತಿದರು. ಆಗ ಅವನೆದುರಿನಲ್ಲಿ ಶಿವಾನುಬವದ ಬಗ್ಗೆ ವಾದ ವಿವಾದಗಳು ಯಾವಾಗಲೂ ಜರಗುತ್ತಿದ್ದವು. ಇವುಗಳೇ ಶಿವಾನುಭವ ಮಂಟಪವನ್ನು ಬಸವೇಶ್ವರನು ಸ್ಥಾಪಿಸಲು ಕಾರಣವಾದವು. ಅದರ ಮೂಲಕ ಷಟ್‌ಸ್ಥಲ ಶಾಸ್ತ್ರವು ಪ್ರಚುರ ಹೊಂದಿತು. ತ್ರಿಲಿಂಗಗಳೆಂವರೇನು, ಸಕೀಲಗಳು, ಅಷ್ಟಾವರಣ, ಏಕೋತ್ತರಗಳ ವಿಚಾರಗಳು ಬಹುದೀರ್ಘವಾಗಿ ಚರ್ಚಿಸಲ್ಪಡುತ್ತಿದ್ದವು. ವಚನಗಳನ್ನು ಅಲ್ಲಿ ನೆರೆದ ಶಿವಶರಣರು ರಚಿಸುವರು. ಮತ್ತು ಎಲ್ಲ ಕಡೆಗೆ ಅವುಗಳನ್ನು ಪ್ರಸಾರ ಮಾಡುವರು. ಈ ಕಾರ್ಯವು ಬಹು ಬಲವಾಗಿ ಸಾಗಹತ್ತಿತು.

ಣಂಗೆ ಮುಖವಾಯಿತ್ತೆಂಬುದೀಗ ಎರಡು ಹಿಂದ ಜೋಗಿಗೆ ಲೇಸಾಯಿತ್ತು ಸದಾಶಿವಮೂರ್ತಿ ಲಿಂಗವನರಿತು ಎಂಬ ಶಬ್ದಕ್ಕರ್ಥ.

೮೭. ಹಸಿದ ಹಾವಿನ ಹೆಡೆಯಲ್ಲಿ ಬಿಲವ ಮಾಡುತ್ತಿದೆ ಹೆಡೆಯಲ್ಲಿ ಹೆಬ್ಬಿಲ ಕಣ್ಣಿನ ಓವರಿಯಲ್ಲಿ ಹುಲ್ಲಿನ ಹಾಸಿಕೆಯು ಶಯನದ ಮನೆ ಮೂಗಿನ ವಾಸದಲ್ಲಿ ತುಪ್ಪದಾರಿ ಬಾಲದ ತುದಿಯಲ್ಲಿ ಹುಡುಪ ಹಾವ ಹಿಡಿವಲ್ಲಿ ಸಿಕ್ಕಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಚಿತ್ತ ನಿಂದಿತ್ತು.

ಟೀಕು:— ಶಂಕಾವಿಷ ಸಂಬಂಧಿಯಪ್ಪ ಜೀವನು ಆಶಾ ತೃಷ್ಣೆಯುಳ್ಳಿರ್ದನೆಂಬುದೀಗ ಹಸಿದ ಹಾವಿನ ಎಂಬ ಶಬ್ದಕ್ಕರ್ಥ. ಪಂಚೇಂದ್ರಿಯಂಗಳೇ ಆ ಜೀವಂಗೆ ಶಿರಸ್ಸಾಗಿಹವೆಂಬುದೀಗ ಹೆಡೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯ ದ್ವಾರಂಗಳಲ್ಲಿ ವಿಷಯ ಪ್ರಪಂಚವನೇ ಉಂಟು ಮಾಡಿ ಕೊಳ್ಳುತ್ತಿಹುದು ಮನಸ್ಸೆಂಬುದೀಗ ಬಿಲವ ತೋಡುತ್ತಿದೆ ಎಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳಲ್ಲಿ ಆಶೆ ಅತ್ಯಂತ ಘನತರವಾಗಿಹುದೆಂಬುದೀಗ ಹೆಡೆಯಲ್ಲಿ ಹೆಬ್ಬಿಲವೆಂಬ ಶಬ್ದಕ್ಕರ್ಥ. ಆ ಜ್ಞಾನ ದೃಷ್ಟಿಯು ಬೆಂಬಳಿಯಿಂ ಪಂಚವಿಷಯ ಸಂಬಂಧವಾದ ಅಂತರ್ಜೀಹವೇ ಆ ಮನಸ್ಸು ಮರವೆಯನೆಯ್ದುವದಕ್ಕೆ ಆಶ್ರಯವಾಯಿತ್ತೆಂಬುದೀಗ ಕಣ್ಣಿನ ಓವರಿಯಲ್ಲಿ ಹುಲ್ಲಿನ ಹಾಸಿಕೆಯು ಶಯನದ ಮನೆಯೆಂಬ ಶಬ್ದಕ್ಕರ್ಥ. ದುರ್ವಾಸನ ಸ್ವೀಕಾರವೆಂಬ ನಾಸಿಕವಿಡಿದು ನಾನಾ ದುಶ್ಚರಿತ್ರಂಗಳಲ್ಲಿ ಚರಿಸುತ್ತಿಹುದು ಮನಸ್ಸೆಂಬುದೀಗ ಮೂಗಿನ ವಾಸದಲ್ಲಿ ತಪ್ಪುದಾರಿಯೆಂಬ ಶಬ್ದಕ್ಕರ್ಥ. ಆ ಮನಸ್ಸು ಭವಪಾಶದಲ್ಲಿ ತಮೋಗುಣ ಸಂಬಂಧದಿಂ ಮರೆವೆಯನೆಯ್ದಿಹುದೆಂಬುದೀಗ ಬಾಲದ ತುದಿಯಲ್ಲಿ ಹುಡುಪನೆಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನ ಆ ಜೀವಭಾವವ ನಿವೃತ್ತಿ ಮಾಡಿ ಶಿವಭಾವ ಘಟಿಸಿದಲ್ಲಿ ಗುರು ಕಾರುಣ್ಯದಿಂ ಲಿಂಗಾಂಗ ಸಂಬಂಧವಾದಲ್ಲಿ ಮನವಳಿದು ಉನ್ಮನಿ ತತ್ವರೂಪವನೆಯ್ದಿ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ ಹಾವ ಹಿಡಿದಲ್ಲಿಯೇ ಸಿಕ್ಕಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಚಿತ್ತ ನಿಂದಿತ್ತು ಎಂಬ ಶಬ್ದಕ್ಕರ್ಥ.

೮೮. ಪೃಥ್ವಿ ಅಪ್ಪುವಿನಾಧಾರದಿಂದ ಬೀಜ ಒಡೆದು ಬೆಳೆವಂತೆ ಅರುಹು ಅರುಹಿಸಿಕೊಂಬ ಉಭಯದ ಮಧ್ಯದಲ್ಲಿ ಜ್ಞಾನ ಕುಸುಹಾಗಿ

ಚಿದ್ಘನ ವಸ್ತು ಪತಿಯಾಗಿ ಉಭಯ ಒಂದುಗೂಡಿ ಮೇಲನರಿತಲ್ಲಿ ಸದಾಶಿವಮೂರ್ತಿ ಲಿಂಗ ಬಚ್ಚ ಬಯಲು.

೮೮. ನಾದ ಬ್ರಹ್ಮಶಕ್ತಿಯಾಗಿ, ಬಿಂದು ವಿಷ್ಣುಶಕ್ತಿಯಾಗಿ, ಕಳೆ ರುದ್ರಶಕ್ತಿಯಾಗಿ, ತ್ರಿವಿಧ ಪ್ರಾಣ ಅತೀತಭೇದ ಚೇತನವಾಗಿ ಉಮಾಪತಿ ನಿರಸನ ಸ್ವಯಂಭು ಸದಾಶಿವಮೂರ್ತಿ ಲಿಂಗವು ತ್ರಿವಿಧನಾಮ ನಷ್ಟವಾಯಿತ್ತು.

೯೦. ಚಕ್ಷುಮಯನಾಗಿ, ಚಕ್ಷುರೂಪನಾಗಿ, ಚಕ್ಷುವಿಮೋಕ್ಷನಾಗಿ, ವಿಮೋಕ್ಷ ಸುಕ್ಷೇತ್ರವಾಸನಾಗಿ, ವಾಸದ ಮಧ್ಯದಲ್ಲಿ ಮೂರ್ತಿಯ ಬೆಳಗು ತೋರುತ್ತಿದೆ ಸದಾಶಿವಮೂರ್ತಿ ಲಿಂಗದಲ್ಲಿ.

---

## (೧೩) ಗುರು.

**ವಿವರಣೆ:—** ಗುರುವು ಕ್ರಿಯಾದೀಕ್ಷೆಯಿಂದ ಸ್ಥೂಲತನುವನ್ನು ನಿವೃತ್ತಿಮಾಡಿ ಭಕ್ತನಲ್ಲಿ ಲಿಂಗ ಸಾಹಿತ್ಯವನ್ನು ಮಾಡುವನು. ಮಂತ್ರ ದೀಕ್ಷೆಯಿಂದ ಸೂಕ್ಷ್ಮ ತನುವನ್ನು ನಿವೃತ್ತಿ ಮಾಡಿ ಪ್ರಾಣಲಿಂಗ ಸಾಹಿತ್ಯ ವನ್ನು ಮಾಡುವನು. ವೇಧಾ ದೀಕ್ಷೆಯಿಂದ ಹಸ್ತ ಮಸ್ತಕ ಸಂಯೋಗವನ್ನು ಮಾಡಿ ಕಾರಣ ದೇಹವನ್ನು ಅಳಿದು ಭಾವಲಿಂಗ ಸಂಬಂಧ ಮಾಡುವನು. (೯೧-೯೨) ಹೀಗೆ ಜೀವತ್ರಯಗಳನ್ನಳಿದು ಲಿಂಗತ್ರಯಗಳನ್ನು ಸಂಬಂಧಿಸುವನು. ಇದರಿಂದ ದುರ್ವರ್ತನೆಗಳಡಗುವವು. ಭಕ್ತನು ಶಿವ ಜ್ಞಾನ ಸ್ವರೂಪನಾಗುವನು. ಹೀಗೆ ಅಂಗವನ್ನು ಲಿಂಗವನ್ನಾಗಿ ಮಾಡಿದ ಗುರುವು ತನ್ನ ಶಿಷ್ಯನಲ್ಲಿ ಅವಿರಳ ಸಂಗವನ್ನು ಮಾಡುವನು. ಗುರುವು ನಿಷ್ಕಲಚಿತ್ ಶಕ್ತಿಯೆಂದೇ ಭಾವಿಸಬೇಕು. ಇದೇ ವೀರಶೈವ ಮಾರ್ಗವು. ಈತನು ಶುದ್ಧ ಶೈವ, ಮಾರ್ಗ ಶೈವ, ಪೂರ್ವ ಶೈವ ಇವುಗಳಿಗೆ ಹೊರಗಾಗಿರಬೇಕು. (೯೩) ಈತನು ತನ್ನ ಶಿಷ್ಯರಲ್ಲಿ ಭಿನ್ನಾಚಾರವುಳ್ಳವನಾಗಿರಬಾರದು. (೯೪) ಅವನು ಬರಿಯ ಮಾತಿನ ಮಾಲೆಯುವನಲ್ಲ. (೯೫) ಅವನು ಪ್ರಾಣಕ್ಕೆ ಉಪದೇಶವನ್ನು ಮಾಡಿ ಕಾಯಕ್ಕೆ ಲಿಂಗವನ್ನು ಕೊಡುವನು. ಕಾಯ ಶುದ್ಧಮಾಡಿ ಪ್ರಾಣಕ್ಕೆ ಅರಿವ ಕೊಡುವನು. (೯೬)

ಹೀಗೆ ಶಿಷ್ಯನು ಗುರುವಿನಲ್ಲಿ ಲಿಂಗವನ್ನು ಪಡೆಯಬೇಕು. ಇವನು ಪುನರ್ಜಾತನಾಗುವನು. (೯೭) ಇವನು ಪವಿತ್ರಾಚರಣೆಯಿಂದ ಆಚರಿಸಬೇಕು. ಇವು ಹೇಗೆಂಬುದು ೯೮ನೇ ವಚನದಲ್ಲಿ ಹೇಳಲ್ಪಟ್ಟಿದೆ.

## ವಚನಗಳು

೯೩. ಆ ದುರ್ಗದಲ್ಲಿರ್ದ ಧೊರೆಗಳ ವಿರೋಧವನರಿದು ಇದೇ ದುರ್ಗಕ್ಕೆ ಸಾಧ್ಯ ವೇಳೆ ಎಂಬುದನರಿದು ಮಾಯಾಮಲ ನಾಸ್ತಿ ಎಂಬ ಮನ್ನೆಯ ಕಾಳಗವ ಹಿಡಿದು ದುರ್ಗವ ಮುತ್ತಿ ಕೈಯ್ಯೊಳಗಾದರು ಮೂವರು ಧೊರೆಗಳು. ನರಪತಿಯ ಅಂಡವ ಕಿತ್ತು ಸುರಪತಿಯ ಕೈಯ್ಯ ಹಿಡಿದು ಸಿರಿಯುರಿಗೊಡೆಯನ ಕಣ್ಣ ಕಳೆದು ಅರಿಗಳಿಲ್ಲಾ ಎಂದು ಅಭಿಮುಖವ ನಷ್ಟವ ಮಾಡಿ ಊರ್ಧ್ವಮುಖವಾದ ಮಾಯಾ ಕೋಳಾಹಳ ಮಲಂ ನಾಸ್ತಿ ಮನ್ನಣೆಯ ಭಾವರಹಿತ ಅನುಪಮ ಚರಿತ ಸದಾಶಿವಮೂರ್ತಿಲಿಂಗಕ್ಕೆ ಅರಿಗಳಲ್ಲದೆ ನಿರಾಥಳವಾಯಿತ್ತು.

ಟೀಕು:— ಅಂತಪ್ಪ ಅಹಂಕಾರವನಾಶ್ರಯಿಸಿಕೊಂಡಿರ್ಪ ಜೀವತ್ರಯಂಗಳಲ್ಲಿ ಸಮ್ಯಜ್ಞಾನೋದಯವಾಗಲು ನಿವೃತ್ತಿ ಮುಖದಿಂ ವಿರೋಧವಾಗಿರ್ದ ಭೇದವ ಶರಣ ಸುಜ್ಞಾನ ದೃಷ್ಟಿಯಿಂ ಕಂಡು ವಿವೇಕಿಸುತ್ತಿರ್ದನೆಂಬುದೀಗ ಆ ದುರ್ಗದಲ್ಲಿರ್ದ ಧೊರೆಗಳ ವಿರೋಧವನರಿದು ಎಂಬ ಶಬ್ದಕ್ಕರ್ಥ. ಅಂತು ಸದ್ವಿವೇಕಮುಖದಿಂ ವಿವೇಕಿಸುತ್ತಿರ್ದ ಶರಣನ ನಿವೃತ್ತಿ ಮಾಡುವದಕ್ಕೆ ಇದೇ ತತ್ಕಾಲವೆಂದರಿದು ನಿರೂಪಿಸುತ್ತಿರ್ದನೆಂಬುದೀಗ ಇದೇ ದುರ್ಗಕ್ಕೆ ಸಾಧ್ಯ ವೇಳೆ ಎಂಬುದನರಿತು ಎಂಬ ಶಬ್ದಕ್ಕರ್ಥ. ಮಾಯಾ ಸಂಬಂಧವಾದ ಮಲತ್ರಯ ರಹಿತವಾದ ನಿರ್ಮಳಾಂಗ ಸ್ವರೂಪವಾದ ಶರಣನೆಂಬುದೀಗ ಮಾಯಾ ಮಲ ನಾಸ್ತಿ ಎಂಬ ಶಬ್ದಕ್ಕರ್ಥ. ದುರ್ಭಾವವಳಿದು ಶುದ್ಧಾಭಾವವುಳ್ಳಾತನೇ ಶರಣನೆಂಬುದೀಗ ಮನ್ನೆಯನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅಹಂಕಾರವನಾಶ್ರಯಿಸಿರ್ಪ ಜೀವತ್ರಯಂಗಳ ಸಂಹರಿಸಬೇಕೆಂದು ಪರಿಪೂರ್ಣಜ್ಞಾನವನು ಕೃತನ್ನಿಶಯ ಹಸ್ತದಲ್ಲಿ ದೃಢವಿಡಿದನೆಂಬುದೀಗ ಕಾಳಗವ ಹಿಡಿದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಪ್ರಕಾಶದಿಂದಹಂಕಾರವನವಗ್ರಹಿಸಿದನೆಂಬುದೀಗ ದುರ್ಗವ ಮುತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರವ ನಿವೃತ್ತಿಮಾಡಿ ಚಿದಹಂಕಾರವ ನಿವೃತ್ತಿ

ಮಾಡಿ ಚಿದಹಂಕಾರ ಸ್ವರೂಪನಾದ ಶರಣನ ಜೀವ ಭಾವದಲ್ಲಿ ಜೀವತ್ರಯಂಗಳು ಅಡಗಿದವೆಂಬುದೀಗ ಕೈಯ್ಯೊಳಗಾದರು ಮೂರು ಧೊರೆಗಳು ಎಂಬ ಶಬ್ದಕ್ಕರ್ಥ. ಆ ಶಿವಭಾವತ್ರಯಂಗಳನನುಗ್ರಹಿಸಿದ ಶರಣ ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನನಾಗಿ ಕ್ರಿಯಾದೀಕ್ಷೆಯಿಂ ವಿಶ್ವಂಗೆ ಸಂಬಂಧವಾದ ಸ್ಥೂಲತನುವ ನಿವೃತ್ತಿಯ ಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ ನರಪತಿಯ ಅಂತವ ಕಿತ್ತು ಎಂಬ ಶಬ್ದಕ್ಕರ್ಥ. ಮಂತ್ರದೀಕ್ಷೆಯಿಂದ ಸೂಕ್ಷ್ಮತನು ನಿವೃತ್ತಿಯಾಗಿ ಪ್ರಾಣಲಿಂಗ ಸಾಹಿತ್ಯವಾಗಲು ತೈಜಸನು ಭೋಕ್ತೃತ್ವವನುಂಬ ಮನೋಹಸ್ತವು ನಷ್ಟವಾಯಿತ್ತೆಂಬುದೀಗ ಸುರಪತಿಯ ಕೈಯ್ಯಹಿಡಿದು ಎಂಬ ಶಬ್ದಕ್ಕರ್ಥ. ವೇಧಾದೀಕ್ಷೆಯಿಂದ ಹಸ್ತ ಮಸ್ತಕ ಸಂಯೋಗವಾದಲ್ಲಿ ಕಾರಣ ದೇಹವಳಿದು ಭಾವಲಿಂಗ ಸಂಬಂಧವಾದಲ್ಲಿ ಆ ಪ್ರಾಜ್ಞ ಭಿನ್ನಜ್ಞಾನ ನಷ್ಟವಾಯಿತ್ತೆಂಬುದೀಗ ಸಿರಿಮುರಿಗೊಡೆಯನ ಕಣ್ಣ ಕಳೆದು ಎಂಬ ಶಬ್ದಕ್ಕರ್ಥ. ಅಂತು ಅಂಗತ್ರಯ ಮುಖ್ಯವಾದ ಜೀವತ್ರಯವಳಿದು ಲಿಂಗತ್ರಯ ಸಂಬಂಧವಾದ ಶರಣನ ಸಕಲ ಕರಣಂಗಳೆಲ್ಲ ಲಿಂಗ ಕರಣಂಗಳಾದ ಕಾರಣ ಶರಣಂಗೆ ವಿರೋಧವಿಲ್ಲದೆ ಹೋಯಿತ್ತೆಂಬುದೀಗ ಅರಿಗಳಿಲ್ಲ ಎಂಬ ಶಬ್ದಕ್ಕರ್ಥ. ಆ ಕರಣಂಗಳ ನಿವೃತ್ತಿ ಮಾಡಿದ ಶರಣನ ಪ್ರಪಂಚಿನತ್ತಭಿಮುಖವಾಗಿರ್ಪ ದುರ್ವರ್ತನೆ ನಿವೃತ್ತಿಯ ಮಾಡಿದನೆಂಬುದೀಗ ಅಭಿಮುಖವ ನಷ್ಟವ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಪಂಚ ನಷ್ಟವಾದಲ್ಲಿ ಶಿವಜ್ಞಾನ ಸ್ವರೂಪನಾಗಿರ್ದನೆಂಬುದೀಗ ಊರ್ಧ್ವಮುಖವಾದನೆಂಬ ಶಬ್ದಕ್ಕರ್ಥ. ಆ ಜ್ಞಾನಸ್ವರೂಪನಾದ ಶರಣನು ಆ ಜ್ಞಾನಸ್ವರೂಪಿಯಾದ ಮಾಯೆಯ ನಿವೃತ್ತಿಯ ಮಾಡಿ ಮಲತ್ರಯ ರಹಿತನಾಗಿರ್ಪನೆಂಬುದೀಗ ಮಾಯಾ ಕೋಳಾಹಳ ಮಲಂನಾಸ್ತಿ ಎಂಬ ಶಬ್ದಕ್ಕರ್ಥ. ಆ ನಿರ್ಮಲಸ್ವರೂಪನಾದ ಶರಣಂಗೆ ತಾನೆಂಬ ಭಾವ ನಷ್ಟವಾಗಿ ಉಪಮಾತೀತನಾಗಿರ್ದನೆಂಬುದೀಗ ಭಾವರಹಿತ ಅನುಪಮ ಚರಿತ ಸದಾಶಿವಮೂರ್ತಿ ಲಿಂಗಕ್ಕೆ ಅರಿಗಳಿಲ್ಲದೆ ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೯೨. ಊರ ಹೊರಗಣ ಹೊಲತಿಯು ಹಾರುವನೆರೆದು ತನ್ನಯ ಸೂತಕ ಹೋಯಿತ್ತು. ಹೊಲತಿಯ ಕುಲ ಹರಿದು ಹಾರುವ ಹೊಲತಿಯನಾಗಿ ಸದಾಶಿವಮೂರ್ತಿ ಲಿಂಗಕ್ಕೊಳಗಾದ.

ಟೀಕು:— ದೇಹ ಭಾವಕ್ಕೆ ಹೊರಗಾಗಿರ್ಪ ನಿಷ್ಕಲ ಚಿಚ್ಛಕ್ತಿ ಎಂಬುದೀಗ ಊರ ಹೊರಗಣ ಹೊಲತಿಯು ಎಂಬ ಶಬ್ದಕ್ಕರ್ಥ. ಪರಧನ ಪರಸ್ತ್ರೀಯರ ಬಯಸುತ್ತಿರ್ದ ಜೀವಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಿ ಗುರೂಪಾವಸ್ಥೆಯ ಮಾಡಲು ಆ ನಿಷ್ಕಲ ಚಿಚ್ಛಕ್ತಿಯೇ ಗುರುಸ್ವರೂಪವಾಗಿ ಬಂದು ದೀಕ್ಷಾತ್ರಯಂಗಳಿಂದಂಗಕ್ಕೆ ಲಿಂಗ ಸಂಬಂಧವ ಮಾಡಿದಲ್ಲಿ ಆ ಶ್ರೀಗುರು ತತ್ವದಲ್ಲಿ ಶಿಷ್ಯನವಿರಳ ಸಂಗವ ಮಾಡಲು ತನ್ನ ಮುನ್ನಿನ ಜೀವಭಾವ ಭ್ರಾಂತಿನ ಸೂತಕ ನಿವೃತ್ತಿಯಾಯಿತ್ತೆಂಬುದೀಗ ಹಾರುವನೆರೆದು ತನ್ನಯ ಸೂತಕ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶ್ರೀಗುರು ತಾನೆ ಪರಬ್ರಹ್ಮವೆಂಬ ಚಿದಹಂಕಾರವ ನಿವೃತ್ತಿಯ ಮಾಡಿದನೆಂಬುದೀಗ ಹೊಲತಿಯ ಕುಲ ಹರಿದು ಎಂಬ ಶಬ್ದಕ್ಕರ್ಥ. ಶಿವಾಪೇಕ್ಷೆಯ ಮುಂದುಗೊಂಡಿರ್ಪ ಶರಣನು ಸರ್ವ ಸೂತಕ ರಹಿತವಾದ ಪರಬ್ರಹ್ಮವೆಯಾದನೆಂಬುದೀಗ ಹಾರುವ ಹೊಲೆಯನಾಗಿ ಸದಾಶಿವಮೂರ್ತಿ ಲಿಂಗಕ್ಕೊಳಗಾದನೆಂಬ ಶಬ್ದಕ್ಕರ್ಥ.

೯೩. ವೀರಶೈವ ಗುರುವಾಗಿ ಶುದ್ಧಶೈವಕ್ಕೆ ಹೊರಗಾಗಬೇಕು. ಶುದ್ಧಶೈವ ಗುರುವಾಗಿ, ಮಾರ್ಗಶೈವಕ್ಕೆ ಹೊರಗಾಗಬೇಕು. ಮಾರ್ಗಶೈವ ಗುರುವಾಗಿ ಪೂರ್ವಶೈವಕ್ಕೆ ಹೊರಗಾಗಬೇಕು. ಇಂತೀ ಶೈವಂಗಳಲ್ಲಿ ಸನ್ನರ್ಥನಾಗಿ ತಿಳಿದು ಅಂಗಲಿಂಗಾತ್ಮನಲ್ಲಿ ನಿಂದು ಸಂಯೋಗವ ಮಾಡಬೇಕು. ಮಾಡಿದಲ್ಲಿ ಕೂಡಿದ ಕಾರಣ ಪರಶೈವವೆಂಬ ಹೆಸರಾಯಿತ್ತು ಸದಾಶಿವಮೂರ್ತಿ ಲಿಂಗವನಂತಲ್ಲಿ.

೯೪. ಲಿಂಗ ಹೊರತಾಗಿ ವಿಭೂತಿ ರುದ್ರಾಕ್ಷಿಯ ಕೊಟ್ಟು ಗುರುವಾಗಬಹುದೇ ಅಯ್ಯ? ಬೀಜವಿಲ್ಲದೆ ಅಂಕುರವಾಗಬಲ್ಲುದೇ? ಗಂಡನಿಲ್ಲದೆ ಮುಂಡೆಗೆ ಗರ್ಭ ನಿಂದಡೆ ಅವಳಾರಿಗೆ ಯೋಗ್ಯ? ಉಭಯವು ಕೇಡಾಯಿತ್ತು. ಇದನರಿತು ಮಾಡಿ ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೯೫. ಭಕ್ತ ತನ್ನಯ ಪಾಶವ ಗುರುಮುಖದಿಂದ ಕಳೆವ. ಗುರು ತನ್ನಯ ಪಾಶವ ಏತರಿಂದ ಕಳೆಯಬೇಕೆಂಬುದನರಿಯಬೇಕು. ಹಾಗರಿಯದೆ ಉಪಾಧಿಕನಾಗಿ ಮಾತಿನ ಮಾಲೆಯ ನುಡಿದು ಜ್ಞಾತೃ ಜ್ಞಾನ

ಜ್ಞೇಯವನರಿಯದೆ ಭಾವ ಶುದ್ಧವಿಲ್ಲವ ಆಚಾರ್ಯನ ಕೈಯಿಂದ ಕೊಂಡ ಪಾಷಾಣದ ಕುರುಹು ಅದೇತಕ್ಕು ಯೋಗ್ಯವಲ್ಲ ಎಂದೆ. ಪ್ರತಿಷ್ಠೆ ಘನದಿಂದಲ್ಲದೆ ಲಿಂಗ ಚೇತನವಿಲ್ಲ ಎಂದೆ ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೯೬. ಪ್ರಾಣಕ್ಕುಪದೇಶವ ಮಾಡಿ ಕಾಯಕ್ಕೆ ಲಿಂಗವ ಕೊಡಬೇಕು. ಕಾಯ ಶುದ್ಧವ ಮಾಡಿ ಪ್ರಾಣಕ್ಕರಿವ ತೋರಬೇಕು. ಇಷ್ಟವನರಿಯದೆ ದೀಕ್ಷೆಯ ಮಾಡಬಾರದು. ಕುರುಡನ ಕೈಯ್ಯಲ್ಲಿ ಕೂಳ ಕಲಿಸಿ ಪ್ರತಿಗುರುಡಂಗೂಡಿಸಿದಂತಾಯಿತ್ತು. ಮಲಭಾಂಡದ ಜೀವಿಯ ಕೈಯ್ಯಲ್ಲಿ ಅನುಜ್ಞೆಯ ಪಡೆದ ಶಿಷ್ಯಂಗೆ ಉಭಯದ ಕೇಡಾಯಿತ್ತು. ಇದನರಿದು ಅರಿವುಳ್ಳ ಶಿಷ್ಯನು ಶಿವಜ್ಞಾನ ಮಾರ್ಗವ ಬಲ್ಲ ಗುರುವಿನ ಕೈಯ್ಯಲ್ಲಿ ಆ ಲಿಂಗವ ಕೊಟ್ಟು ಮರಳಿ ಪಡೆಯಬೇಕಣ್ಣಾ. ಸದಾಶಿವ ಲಿಂಗ ಮೂರ್ತಿಯನರಿವುದಕ್ಕೆ ಇದೇ ಚಿಹ್ನ.

೯೭. ಪ್ರಥಮದೀಕ್ಷೆ ಪರಬ್ರಹ್ಮದೀಕ್ಷೆ ಅಂಗಲಿಂಗದೀಕ್ಷೆ ಪುನರ್ದೀಕ್ಷೆ ಇಂತೀ ದೀಕ್ಷಂಗಳಲ್ಲಿ ತಿಳಿಯಬೇಕು. ಪ್ರಥಮದೀಕ್ಷೆ ಮಾಡುವಲ್ಲಿ ಬ್ರಹ್ಮನ ಪಾಶವ ಹರಿಯಬೇಕು. ಪರಬ್ರಹ್ಮ ದೀಕ್ಷೆಯ ಮಾಡುವಲ್ಲಿ ವಿಷ್ಣುವಿನ ಪಾಶವ ಹರಿಯಬೇಕು. ಪುನರ್ದೀಕ್ಷೆಯ ಮಾಡುವಲ್ಲಿ ಘಟದಲ್ಲಿದ್ದಾತ್ಮನ ಕಳೆದು ಪುನರಪಿಯ ಮಾಡಿ, ಪುನರ್ದೀಕ್ಷೆಯ ಮಾಡಬೇಕು. ಅದೆಂತೆಂದೊಡೆ ಇದಕ್ಕೆ ದೃಷ್ಟ. ದ್ವಿಜರ ಗರ್ಭದಲ್ಲಿ ಜನಿಸಿದ ಪಿಂಡಕ್ಕೆ ಮಂತ್ರೋಚ್ಚರಣೆ ಮುಂಜೆಯಿಂದಲ್ಲದೆ ಭೂಸುರ ಕುಲವಿಲ್ಲ. ಇದನರಿತು ವಿಚಾರವ ಮಾಡಿ ಕೇಳಿ ಕಂಡು ಉಪದೇಶ ಗುರುವಾಗಬೇಕು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೯೮. ದೀಕ್ಷಾಗುರುವಾದಲ್ಲಿ ತ್ರಿವಿಧದಾಸೆ ಇಲ್ಲದಿರಬೇಕು. ಶಿಕ್ಷಾಗುರುವಾದಲ್ಲಿ ಅರಿಗಳಿಗಂಜದೆ ಪ್ರಾಣತ್ಯಾಗ ನಿಶ್ಚಯವಾಗಿರಬೇಕು. ಮೋಕ್ಷಾಗುರುವಾದಲ್ಲಿ ಸರ್ವದೋಷ ಸರ್ವೇಂದ್ರಿಯ ನಾಶವಾಗಿರಬೇಕು. ಇಂತೀ ಮೂರ ಮೀರಿ ಬೇರೊಂದರಲ್ಲಿ ನಿಂದು ತ್ಯಾಗಾಂಗ, ಭೋಗಾಂಗ, ಯೋಗಾಂಗ, ತ್ರಿವಿಧ ಲೇಪನಾಗಿ ನಿಂದುದೇ ನಿಜಗುರುಸ್ಥಲ. ಆ ಗುರುವಿನ ಕೈಯ್ಯ ಅನುಜ್ಞೆ ಪರಂಜ್ಯೋತಿ ಪ್ರಕಾಶ, ಅದು ನಿರವಯ ತತ್ವ, ಸದಾಶಿವಮೂರ್ತಿ ಲಿಂಗವು ತಾನೆ.

# (೧೩) ಲಿಂಗ.

**ವಿವರಣೆ:**— ಬ್ರಹ್ಮರಂಧ್ರದಲ್ಲಿ ಪರಮಾಮೃತ ಕೂಪವಿದೆ. ಅದ ರಲ್ಲಿ ಉಂಟಾಗಿದ್ದ ದೇಹದಲ್ಲಿ ಸುಜ್ಞಾನೋದಯವಾಗುವದು. ಇಂತಹ ಸುಜ್ಞಾನ ಗುರುವೇ ಕ್ರಿಯಾಘನ ಗುರುವಾಗಿ ಬಂದು ಅಂಗಕ್ಕೆ ಲಿಂಗ ಸಂಬಂಧವ ಮಾಡಿ ತನ್ನಾದಿಯನೆಚ್ಚರಿಸುವನು. ಆಗ ಗುರುವಮಾರ್ಗಾ ಚಾರವನ್ನು ಹಿಡಿದು ಶಿವತತ್ವದತ್ತ ಹೋಗುವನು. (೯೯) ಮನುಷ್ಯನಲ್ಲಿ ವಿಶ್ವ ತೈಜಸ ಪ್ರಾಜ್ಞ ಎಂಬ ಜೀವತ್ರಯಂಗಳಿದ್ದು ಸುಜ್ಞಾನವು ಪ್ರಭಾ ವಿಸಲು ಅವುಗಳ ಪ್ರಪಂಚು ನಿವೃತ್ತಿಯಾಗುವದು. ಆಗ ಸತ್ಕ್ರಿಯೆಗಳ ಮೂಲಕ ಇಷ್ಟಲಿಂಗ ಸಂಬಂಧವು, ಸುಜ್ಞಾನವು ನೆಲೆಗೊಳ್ಳಲು ಪ್ರಾಣ ಲಿಂಗ ಸಾಹಿತ್ಯವು ಅದೃಢವನ್ನು ದೂರಮಾಡಲು ತೃಪ್ತಿಲಿಂಗ ಸಂಬಂ ಧವು. (೧೦೦) ಆಗ ಗುರು ಶಿಷ್ಯರೆಂಬ ಉಭಯ ಭಾವವಳಿದು ಶಿವ ಬ್ರಹ್ಮಸ್ವರೂಪನಾಗುವನು.

### ವಚನಗಳು.

೯೯. ಶ್ರೀಶೈಲದ ಮಧ್ಯದಲ್ಲಿ ಒಂದು ಪರುಷದ ರಸದ ಭಾವಿ ಹುಟ್ಟಿತ್ತು. ಆ ಭಾವಿಯೊಳಗೆ ಕಬ್ಬಿಣದ ಅದುರು ಹುಟ್ಟಿ ಸಿದ್ಧರಸವ ನುಂಗಿತ್ತು. ಇದ್ದವನ ಸುದ್ದಿಯ ಸತ್ತವೆ ಹೇಳಿ ಕಾಣದವ ಕೇಳಿ ಹೋದ. ಸದಾಶಿವಮೂರ್ತಿ ಲಿಂಗ ಬಚ್ಚಬಯಲು.

ಟೀಕು:— ಬ್ರಹ್ಮರಂಧ್ರದ ಸಹಸ್ರದಳ ಕಮಲಕರ್ಣಿಕಾ ಮಧ್ಯ ದಲ್ಲಿ ಎಂಬುದೀಗ ಶ್ರೀಶೈಲದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಆ ಬ್ರಹ್ಮ ರಂಧ್ರದ ಸ್ಥಾನದಲ್ಲಿ ಪವಿತ್ರಸ್ವರೂಪವಾದ ಪರಮಾಮೃತ ಕೂಪ ಉದಿ ಸಿತ್ತೆಂಬುದೀಗ ಪರುಷ ರಸದ ಬಾವಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ಕೂಪವನೊಳಕೊಂಡಿರ್ಪ ಚಿದ್ಘನ ಲಿಂಗದಿಂದೆ ಅಜ್ಞಾನ ಸಂಬಂಧವಾದ ದೇಹಭಾವ ತೋರಿತ್ತು ಜೀವಂಗೆಂಬುದೀಗ ಆ ಭಾವಿಯೊ ಳಗೆ ಕಬ್ಬಿಣದ ಅದರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ಆ ಪರಮಾಮೃತ ರಸ ಬಿಂದುವನೊಳಕೊಂಡಿಹುದೆಂಬುದೀಗ ಸಿದ್ಧರಸವ ನುಂಗಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಸಂಬಂಧಿಯಾಗಿರ್ದ ಆತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು ಅಂತರಂಗದ ಸುಜ್ಞಾ ನೋದಯವಾಗಲು ಅಂತರಂಗದ ಸುಜ್ಞಾನ ಗುರುವೇ ಕ್ರಿಯಾಘನ ಗುರು

ವಾಗಿ ಬಂದು ಅಂಗಕ್ಕೆ ಲಿಂಗಸಂಬಂಧವ ಮಾಡಿ ತನ್ನಾದಿಯನೆಚ್ಚರಿಸಿ ಸುಜ್ಞಾನ ಬೋಧೆಯ ಕೇಳಿ ಆ ಗುರುಮಾರ್ಗಾಚಾರವಿಡಿದು ಶಿವ ತತ್ವದ ತ್ರಲೆಯುದ್ದುತ್ತಿರ್ದನೆಂಬುದೀಗ ಕಾಣದವ ಕೇಳಿ ಹೋದ ಸದಾಶಿವಮೂರ್ತಿ ಲಿಂಗ ಬಚ್ಚಬಯಲು ಎಂಬ ಶಬ್ದಕ್ಕರ್ಥ.

೧೦೦. ಮೂಳಿಯ ಮೊದಲಿನಲ್ಲಿ ಮೂವರು ಮಕ್ಕಳು ಹುಟ್ಟಿ ಒಬ್ಬ ಕಾಲಲ್ಲಿ ಬಲ್ಲಿದ, ಒಬ್ಬ ಕೈಯ್ಯಲ್ಲಿ ಬಲ್ಲಿದ, ಒಬ್ಬ ಬಾಯಲ್ಲಿ ಬಲ್ಲಿದ ಇಂತೀ ಮೂವರು ಮಕ್ಕಳ ಹೆತ್ತ ತಂದೆಯನಾಳುಮಾಡುತ್ತಿರ ಲಾಗಿ ಇವರು ಎನಗೆ ಹಗೆ ಮಕ್ಕಳಲ್ಲಾ ಎಂದು ಹಗೆಯೆಂಬುದನರಿದು ಹಿರಿಯ ಮಗನ ಕಾಲ ಮುರಿದು ನಡುವಣ ಮಗನ ಕೈ ಮುರಿದು ಕಿರಿಯ ಮಗನ ಬಾಯ ಮುಚ್ಚಿ ಗೋಣು ಮುರಿದು ಅವರ ಹಿಂಗಿ ನಾ ಬದು ಕಿದೆನೆಂದು ತ್ರಿವಿಧ ಸಂದಬಿಟ್ಟು ಸದಾಶಿವಮೂರ್ತಿಲಿಂಗದಲ್ಲಿ ಸಂದಿತ್ತು ಚಿತ್ತ.

ಟೀಕು:—ಅನಾಹತ ಕರ್ಣದ್ವಾರಂಗಳು ರಹಿತವಾಗಿರ್ಪ ಮಾಯೆಯು ತಾನೆಂಬ ಮೂಲಾಹಂಕಾರದಲ್ಲಿ ಎಂಬುದೀಗ ಮೂಳಿಯ ಮೊದಲಿನಲ್ಲಿ ಎಂಬ ಶಬ್ದಕ್ಕರ್ಥ. ಆ ಮಾಯಾ ಸಂಬಂಧವಾದ ಮೂಲಾಹಂಕಾರದಲ್ಲಿ ವಿಶ್ವ ತೈಜಸ ಪ್ರಾಜ್ಞರೆಂಬ ಜೀವತ್ರಯಂಗಳುದಯಿಸಿದವೆಂಬುದೀಗ ಮೂವರು ಮಕ್ಕಳು ಹುಟ್ಟಿದರೆಂಬ ಶಬ್ದಕ್ಕರ್ಥ. ಸ್ಥೂಲತನು ಸಂಬಂಧವಾದ ವಿಶ್ವನು ಮಚ್ಚರಿತ್ರದಲ್ಲಿ ಚರಿಸುತ್ತಿಹನೆಂಬುದೀಗ ಒಬ್ಬ ಕಾಲಲ್ಲಿ ಬಲ್ಲಿದನೆಂಬ ಶಬ್ದ ಕ್ಕರ್ಥ. ಸೂಕ್ಷ್ಮತನು ಸಂಬಂಧಿಯಪ್ಪ ತೈಜಸನು ಸಂಕಲ್ಪರೂಪವಾದ ಮನೋವರ್ತನೆಯಲ್ಲಿ ಕೂಡಿಹನೆಂಬುದೀಗ ಒಬ್ಬರ ಕೈಯ್ಯಲ್ಲಿ ಬಲ್ಲಿದ ನೆಂಬ ಶಬ್ದಕ್ಕರ್ಥ. ಕಾರಣತನು ಸಂಬಂಧಿಯಪ್ಪ ಪ್ರಾಜ್ಞನು ಭಿನ್ನಾ ಪೇಕ್ಷೆಯಲ್ಲಿ ಕೂಡಿಹನೆಂಬುದೀಗ ಒಬ್ಬ ಬಾಯಲ್ಲಿ ಬಲ್ಲಿದನೆಂಬ ಶಬ್ದ ಕ್ಕರ್ಥ. ಅಂತಪ್ಪ ಜೀವತ್ರಯಂಗಳ ಮಧ್ಯದಲ್ಲಿ ಆ ಶಿವಕೃಪೆಯಿಂ ಸುಜ್ಞಾನಪ್ರಭಾವಿಸಿ ಅಹಂಕಾರಯುಕ್ತವಾದ ಜೀವನು ಅನಿತ್ಯವಾದ ಮಾಯಾ ಪ್ರಪಂಚಿಗೆ ಸಿಲ್ಕಿದನಲ್ಲಾ ಎಂದು ಹಾಸ್ಯೋಪಮಾನವ ಮಾಡುತ್ತಿಹ ನೆಂಬುದೀಗ ಇಂತೀ ಮೂವರು ಮಕ್ಕಳು ಹೆತ್ತ ತಂದೆಯುನಾಳುಮಾಡು ತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಿಂದ ತನ್ನ ನಿಜವ ತಾನೆಚ್ಚತ್ತು ನೋಡಿಯೂ ಜೀವತ್ರಯಂಗಳು ಸಕಲ ಪ್ರಪಂಚ ನಿವೃತ್ತಿಯ ಮಾಡಿದ ಶರಣನು ಶ್ರೀಗುರೂಪಾವಸ್ಥೆಯ ಮಾಡಲು ಆ ಗುರು ಕರ್‍ರು

ಣಿಸಿ ವಿಶ್ವನ ಮುಕ್ತರಿತ್ರನೆಂಬ ಚರಣವ ಕ್ರಿಯಾಪೇಕ್ಷೆಯಿಂ ಭೇದಿಸಿ ಸತ್ಕ್ರಿಯಾಚಾರವ ನೆಲೆಗೊಳಿಸಿ ಇಷ್ಟಲಿಂಗ ಸಂಬಂಧವ ಮಾಡಿದನೆಂಬುದೀಗ ಹಿರಿಯ ಮಗನ ಕಾಲು ಮುರಿದು ಎಂಬ ಶಬ್ದಕ್ಕರ್ಥ. ಇಂತು ಸತ್ಕ್ರಿಯಾಚಾರವ ನೆಲೆಗೊಳಿಸಿ ತೈಜಸನ ಸಂಕಲ್ಪ ರೂಪವಾದ ಮನೋಹಸ್ತವ ಮಂತ್ರದೀಕ್ಷೆಯಿಂ ಭೇದಿಸಿ ಸುಜ್ಞಾನವ ನೆಲೆಗೊಳಿಸಿ ಪ್ರಾಣಲಿಂಗ ಸಾಹಿತ್ಯವ ಮಾಡಿದನೆಂಬುದೀಗ ನಡುವಣ ಮಗನ ಕೈಯ್ಯ ಮುರಿದು ಎಂಬ ಶಬ್ದಕ್ಕರ್ಥ. ಅಂತು ಮನೋಹಸ್ತ ನಷ್ಟವಾಗಿ ಸುಜ್ಞಾನ ನೆಲೆಗೊಂಡಲ್ಲಿ ಪ್ರಾಜ್ಞನ ಭಿನ್ನಾಪೇಕ್ಷೆಯನು ಅದೃಢವ ಕಂಡವನು ವೇಧಾದೀಕ್ಷೆಯಿಂ ನಷ್ಟವ ಮಾಡಿ ಭಾವವ ನೆಲೆಗೊಳಿಸಿ ತೃಪ್ತಿಲಿಂಗ ಸಂಬಂಧವ ಮಾಡಿದನೆಂಬುದೀಗ ಕಿರಿಯ ಮಗನ ಬಾಯ ಮುಚ್ಚಿ ಗೋಣು ಮುರಿದು ಎಂಬ ಶಬ್ದಕ್ಕರ್ಥ. ಅಂತು ಜೀವತ್ರಯಂಗಳು ನಷ್ಟವಾಗಿ ಮಹಾಘನ ಲಿಂಗದಲ್ಲಿ ಶರಣ ಮಹಾಜ್ಞಾನ ಪ್ರಕಾಶ ನಿಷ್ಪತ್ತಿಯಾಯಿತ್ತೆಂಬುದೀಗ ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧ ಸಂದು ಬಿಟ್ಟು ಸದಾಶಿವ ಮೂರ್ತಿ ಲಿಂಗದಲ್ಲಿ ಸಂದಿತ್ತು ಚಿತ್ತ ಎಂಬ ಶಬ್ದಕ್ಕರ್ಥ.

೧೦೧. ಮೂಷಕ ಮಾರ್ಜಾಲ ಕೂಡಿ ಭೇಗನ ಕಂಡು ನೀತಿಯ ಕೇಳಿ ಮೂಷಕ ನೆರೆದಲ್ಲಿ ಅಳಿಯಿತ್ತು. ಮಾರ್ಜಾಲ ನುನೆಗೆ ಹೋಯಿತ್ತು. ನಾ ನೀನೆಂಬುದು ನಿಂದಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ.

ಟೀಕು:— ದೇಹ ಸಂಬಂಧಿಯಾಗಿರ್ಪ ಜೀವನು ಮಾಯಾ ವಾಸನೆಯ ಕೂಡಿರ್ದಲ್ಲಿ ಶಿವಕೃಪೆಯಿಂ ಸುಜ್ಞಾನೋದಯವಾಗಲು ಜೀವ ಭಾವವಳಿದು ಸಜ್ಜೀವ ಸ್ವರೂಪವನೆಯ್ದಿ ಮನೋ ಮಾರ್ಜಾಲನ ವರ್ತನೆಯ ನಿವೃತ್ತಿ ಮಾಡಿ ಶಿವಭಾವ ಘಟಿಸಿ ಎರಡು ಏಕವಾಗಿ ಎಂಬುದೀಗ ಮೂಷಕ ಮಾರ್ಜಾಲ ಕೂಡಿ ಎಂಬ ಶಬ್ದಕ್ಕರ್ಥ. ಆ ಶಿವ ಭಾವದಲ್ಲಿ ಸನ್ನಿಹಿತವಾದ ಚಿತ್‌ಸ್ವರೂಪನಾದ ಶಿಷ್ಯನ ಆತ್ಮ ಚೈತನ್ಯವಾದ ಪರಮ ಶಾಂತಿಯ ಚಿದ್ಬಿಂದುವೇ ಗುರು ಸ್ವರೂಪವಾಗಿ ಬಂದು ಪ್ರತ್ಯಕ್ಷವಾದಲ್ಲಿ ಆ ಶಿಷ್ಯನು ಗುರೂಪಾವಸ್ಥೆಯ ಮಾಡುತ್ತಿರ್ದನೆಂಬುದೀಗ ಭೇಕನ ಕಂಡು ಎಂಬ ಶಬ್ದಕ್ಕರ್ಥ. ಆ ಶ್ರೀಗುರುವಿಂಗೆ ಉಪಾವಸ್ಥೆಯ ಮಾಡುತ್ತಿರ್ದ ಶಿಷ್ಯನು ತನ್ನ ನಿಜ ಸ್ವರೂಪವಾವುದೆಂದು ಬೆಸಗೊಂಡಲ್ಲಿ ಆ ಶಿಷ್ಯನ ಆತ್ಮಾಂತರ್ಗತವಾಗಿರ್ಪ ಪರಮ ಚಿತ್ಕಲೆಯನು ಭಾವ ಮನ ದೃಕ್ಕಿನಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವ

ಮಾಡಲು ಅಂಗದಲ್ಲಿ ಜ್ಞಾನಕ್ರಿಯಿಡಿದಾಚರಿಸಿ ಸಮರಸ ಭಾವದಿಂ ನಿಷ್ಪತ್ತಿಯಾದನೆಂಬುದೀಗ ನೀತಿಯು ಕೇಳ ಮೂಷಕ ನೆರೆದಲ್ಲಿ ಅಳಿಯಿತ್ತು ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾ ಲಿಂಗದಲ್ಲಿ ನಿಷ್ಪತ್ತಿಯನೆಯ್ದಿದ ಶಿಷ್ಯ ಉನ್ಮನಿ ತತ್ವಸ್ವರೂಪವಾದ ಮನಸ್ಸು ಅಂತರಂಗದಲ್ಲಿ ಸಾಹಿತ್ಯವಾಗಿರ್ಪ ಪ್ರಾಣಲಿಂಗದಲ್ಲಿ ಸಮರಸವನೆಯ್ದುತ್ತೆಂಬುದೀಗ ಮಾರ್ಜಾಲ ಮನೆಗೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಮನವು ಲಿಂಗದಲ್ಲಿ ಸಮರಸವನೆಯ್ದಲು ಗುರು ಶಿಷ್ಯರೆಂಬುಭಯ ಭಾವವಳಿದು ಶಿವಬ್ರಹ್ಮ ಸ್ವರೂಪವಾಯಿತ್ತೆಂಬುದೀಗ ನಾನೀನೆಂಬುದು ನಿಂದಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಎಂಬ ಶಬ್ದಕ್ಕರ್ಥ.

೧೧೦೨. ಮಹಾ ಧರೆಯಲ್ಲಿ ಮನೆಯ ಕಟ್ಟುವದಕ್ಕೆ ಕಾವಿಲ್ಲದ ಕೊಡಲಿಯಲ್ಲಿ ಹುಟ್ಟಿದ ಮರನ ತರಿದು ಎತ್ತಿಲ್ಲದ ಏರಿನಲ್ಲಿ ಹೂಡಿ ತಂದವ ನೀನಾರಣ್ಣಾ ? ನಾನೆಂಬುದಕ್ಕೆ ಮೊದಲೇ ನಾಮನಷ್ಟವಾಯಿತ್ತು. ಸದಾಶಿವಮೂರ್ತಿ ಲಿಂಗವು ಇಲ್ಲಿ ಸತ್ತು ಅಲ್ಲಿ ಹೆಣನಾಯಿತ್ತು.

**ಟೀಕು:—** ಅಖಂಡ ಚಿತ್ ಪೃಥ್ವಿಯಲ್ಲಿ ಶರಣ ತನ್ನ ಜ್ಞಾನಕಾಯವ ರಚಿಸುತ್ತಿರ್ದನೆಂಬುದೀಗ ಮಹಾ ಧರೆಯಲ್ಲಿ ಮನೆಯ ಕಟ್ಟುವದಕ್ಕೆ ಎಂಬ ಶಬ್ದಕ್ಕರ್ಥ. ಆ ಶರಣನು ಭಿನ್ನಭಾವವಲ್ಲದೆ ಇರ್ಪ ಶಿವಜ್ಞಾನದಲ್ಲಿ ಎಂಬುದೀಗ ಕಾವಿಲ್ಲದ ಕೊಡಲಿಯಲ್ಲಿ ಎಂಬ ಶಬ್ದಕ್ಕರ್ಥ. ಜನನಾಂಕುರವಿಲ್ಲದ ಸದ್ವಿವೇಕ ವೃಕ್ಷವ ಆ ಶಿವಜ್ಞಾನದಲ್ಲಿ ಆವಗ್ರಹಿಸಿದನೆಂಬುದೀಗ ಹುಟ್ಟಿದ ಮರನ ತರಿದು ಎಂಬ ಶಬ್ದಕ್ಕರ್ಥ. ಆತ್ಮತ್ರಯಂಗಳಿಲ್ಲದ ಅಭಿನ್ನಕ್ರಿಯಾಚಾರದಲ್ಲಿ ಆ ಸದ್ವಿವೇಕ ವೃಕ್ಷವ ಸಂಬಂಧಿಸಿದಾತ ಶ್ರೀಗುರುವೆಂದು ಶಿಷ್ಯ ಬೆಸಗೊಳುತ್ತಿರ್ದನೆಂಬುದೀಗ ಎತ್ತಿಲ್ಲದ ಏರಿನಲ್ಲಿ ಹೂಡಿ ತಂದವ ನೀನಾರಣ್ಣಾ ಎಂಬ ಶಬ್ದಕ್ಕರ್ಥ. ತಾನೆಂಬ ಅಹಂಕಾರದ ತಲೆದೋರುವದಕ್ಕೆ ಮೊದಲೇ ಶರಣ ಲಿಂಗವೆಂಬುಭಯ ನಾಮವಳಿಯಿತ್ತೆಂಬುದೀಗ ನಾನೆಂಬುದಕ್ಕೆ ಮೊದಲೇ ನಾಮನಷ್ಟವಾಯಿತ್ತೆಂಬುದೀ ಶಬ್ದಕ್ಕರ್ಥ. ಅಂತು ಉಭಯ ನಾಮವಳಿದು ಶರಣನ ಬಹಿರಂಗದ ಅಭಿನ್ನ ಕ್ರಿಯಾಚಾರದಲ್ಲಿ ಸ್ವರೂಪವಾದ ಇಷ್ಟಲಿಂಗವು ಸಂಬಂಧವಾಗಿಹುದೆಂಬುದೀಗ ಸದಾಶಿವಮೂರ್ತಿ ಲಿಂಗವು ಇಲ್ಲಿ ಸತ್ತು ಎಂಬ ಶಬ್ದಕ್ಕರ್ಥ. ಆ ಮಾರ್ಗ ಕ್ರಿಯೆಯಲ್ಲಿ ಸಂಬಂಧವಾದ

ಇಷ್ಟಲಿಂಗವು ಮೀರಿದ ಕ್ರಿಯೆಯನೊಳಕೊಂಡು ಅಂತರಂಗದಲ್ಲಿ ನಿವೃತ್ತಿಯಾಯಿತ್ತೆಂಬುದೀಗ ಅಲ್ಲಿ ಹೆಣನಾಯಿತ್ತೆಂಬ ಶಬ್ದಕ್ಕರ್ಥ. ತನ್ನಯ ಬಾಯ ಶೇಷವ ಲಿಂಗಕ್ಕೆ ತೋರಿ, ಲಿಂಗದ ಶೇಷವ ತಾ ಕೊಂಡೆನೆಂದು ಕೊಂಡುದು ಪ್ರಸಾದ, ಇದ್ದುದು ಸುಯಿಧಾನವೆಂದುಂಡು ಲಿಂಗಕ್ಕೆ ಕೊಡ್ವ ಲಹುದೇ ಅಯ್ಯ? ಅದು ಮುನ್ನವೇ ಲಿಂಗಾರ್ಪಿತ. ತನ್ನ ಸಂದೇಹಕ್ಕೆ ಕೊಟ್ಟು ಕೊಂಡಿಹೆನೆಂಬ ಭೇದವಲ್ಲದೆ ಇಂತೀ ಗುಣ ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೧೦೩. ಸ್ಥಾವರಲಿಂಗ ಪೂಜೆ ಶುದ್ಧ ಶೈವಪೂಜೆ. ವೀರಶೈವಲಿಂಗ ಪೂಜೆ ಅಂಗದ ಮೇಲೆ ಹಿಂಗದೆ ಧರಿಸಿಹುದು. ಇದೆಲ್ಲವು ಸರಿ. ವೀರ ಶೈವ ಪೂಜೆ ಎಂತೆಂದೊಡೆ ಇಷ್ಟಲಿಂಗ ಜೀವನಂಗ ಉಭಯವು ಕೂಡಿ ಲೀಯವಾಗಿದ್ದುದು, ಶೈವ ಭೇದಂಗಳಿಗೆ ಹೊರಗು, ಸದಾಶಿವಮೂರ್ತಿ ಲಿಂಗಕ್ಕೊಳಗು.

೧೦೪. ಬೀಜವಿಲ್ಲದ ಬೆಳೆಯುಂಟೇ ಅಯ್ಯ? ನಾದವಿಲ್ಲದ ಶಬ್ದ ಉಂಟೇ ಅಯ್ಯ? ದೃಷ್ಟಿ ಇಲ್ಲದ ಕಳೆಯುಂಟೇ ಅಯ್ಯ? ಅಂಗ ಸಾಹಿತ್ಯವಾಗಿ ಸರ್ವಸಂಗವನರಿಯಬೇಕಲ್ಲದೆ ಲಿಂಗ ಅಂಗದಲ್ಲಿ ಹೊಕ್ಕು ಸರ್ವಭೋಗಂಗಳ ಕಾಂಬುದಕ್ಕೆ ಇದೇ ದೃಷ್ಟ. ಭಂಗಾರದ ಒಡಲಿನಲ್ಲಿ ಬಣ್ಣ ನಿಂದು ಲೆಕ್ಕವಟ್ಟಕ್ಕೆ ಬಾಹಂತೆ ಅತ್ಮನ ದೃಷ್ಟವ ಕಂಡು ಮತ್ತೆ ಅಧ್ಯಾತ್ಮವೆನಲೇಕೆ? ಘಟದ ಮಧ್ಯದಲ್ಲಿ ನಿಂದು ನುಡಿವುದೇ ಕ್ರಿಯೆಂದೆ ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೧೦೫. ಪಂಚತತ್ವದಲ್ಲಿದ್ದು ಪರತತ್ವವನರಿಯಬೇಕು. ಅದಕ್ಕೆ ದೃಷ್ಟ. ಪಶುವಿನ ಹೊಟ್ಟೆಯಲ್ಲಿ ಕರುವಿದ್ದಡೆ ಕರೆವುದಕ್ಕೆ ಮನೋಹರ ಉಂಟೇ? ಅದು ಭಿನ್ನಭಾವವಾಗಿ ಇದಿರಿಟ್ಟು ಉಂಡಲ್ಲದೆ ಮೊಲೆ ತೊರೆಯವು. ಆ ತೆರನನರಿದಲ್ಲಿ ಅರಿವುದಕ್ಕೊಂದು ಕುರುಹುಬೇಕು. ಬಲ್ಲಿದ ವೀರನೆಂದಡೆ ಅಲಗಿನ ಮೊನೆಯಲ್ಲಲ್ಲದೆ ಗೆಲಬಹುದೇ? ಆ ಅರಿವ ಚಿತ್ತ ಕುರುಹಿನ ಘಟದಲ್ಲಿದ್ದು ಅರಿವುತಿದ್ದಿತಾದ ಕಾರಣ ಇದನರಿತಾತ್ಮವಾದವೆ ನಲಿಲ್ಲ. ಸದಾಶಿವಮೂರ್ತಿ ಲಿಂಗವನರಿವುದಕ್ಕೆ ಇದಿರಿಟ್ಟು ಕಳೆದುಳಿಯಬೇಕು.

# (೧೪) ಜಂಗಮ.

**ವಿವರಣೆ:—** ಯಾವುದು ವಸ್ತುವಿನಲ್ಲಿ ಚೈತನ್ಯಾತ್ಮಕವಾಗಿ ವ್ಯಾಪ ಹರಿಸುತ್ತದೋ ಅದೇ ಜಂಗಮವೆಂದು ಹೇಳಲ್ಪಡುತ್ತದೆ. ಈ ದೃಷ್ಟಿ ಯಿಂದ ಕಾಯವನ್ನು ಭಕ್ತನೆಂದು ಕರೆದರೆ ಜಂಗಮವು ಅದಕ್ಕೆ ಪ್ರಾಣ ವಾಗಿರುವದು. (೧೦೬) ಜಂಗಮವು ಜ್ಞಾನವಾಗಿ ಪದಾರ್ಥಗಳಲ್ಲಿ ಪ್ರೇರಣೆ ಮಾಡುತ್ತದೆ. ಆದುದರಿಂದ ಜಂಗಮನು ಉಚ್ಚವರ್ತನೆಯು ಳ್ಳವನಾಗಿರಬೇಕು. ಅಂದರೆ ಮಾತ್ರ, ಅವನು ಭಕ್ತನಲ್ಲಿ ಪರಿಣಾಮ ಮಾಡುವನು. ಜಂಗಮನ ವರ್ತನೆ ಹೇಗಿರಬೇಕೆಂಬದು ಮುಂದಿನ ವಚ. ನಗಳಲ್ಲಿ ಹೇಳಲ್ಪಟ್ಟಿರುತ್ತದೆ.

## ವಚನಗಳು.

೧೦೬. ಅಪ್ಪು ಚಿಪ್ಪಿನಲ್ಲಿ ನಿಂದು ಅಪ್ಪುವ ಬೆರಸದಂತೆ, ಮೃತ್ತಿಕೆ ತೇಜದಲ್ಲಿ ಬೆಂದು ಪೃಥ್ವಿಯ ಕೂಡದಂತೆ, ಹಾಗಿರಬೇಕು. ಭಕ್ತ ವಿರ ಕ್ತನ ಭೇದ ಇಷ್ಟಪ್ರಾಣದಿರವು ಇದು ನಿಶ್ಚಯ. ಲಿಂಗಾಂಗಕಾಯ ಭಕ್ತಪ್ರಾಣ ಜಂಗಮವಾದ ಸ್ವಾನುಭಾವಸಿದ್ಧಿ. ಈ ತೆರ ತಾನೆ ಸದಾ ಶಿವಮೂರ್ತಿಲಿಂಗವು.

೧೦೭. ಅರಿದು ಮಾಡುವುದು ಗುರುಭಕ್ತಿ, ಅರಿದು ಮಾಡುವುದು ಲಿಂಗಭಕ್ತಿ, ಅರಿದು ಮಾಡುವುದು ಜಂಗಮಭಕ್ತಿ, ಅರಿಕೆಯಿಂದ ಕಾಂಬುದು ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೦೮. ಉಪಾಧಿಯುಳ್ಳನ್ನಕ್ಕ ಗುರುವಲ್ಲ. ವೇಷವ ಹೊತ್ತು ಬಾಗಿಲ ಕಾಯುವನ್ನಕ್ಕ ಜಂಗಮವಲ್ಲ. ಶಕ್ತಿಸಹಿತ ಉಳ್ಳನ್ನಕ್ಕ ಲಿಂಗ ವಸ್ತುವಲ್ಲ. ಅದೆಂತೆಂದೊಡೆ ಏತರಲ್ಲಿರ್ದಡೂ ಶರೀರ ಬಲಿದು ತದ್ರೂಪ ಹಾಕಿದಂತಿರಬೇಕು. ಇದು ಅರಿವಿನ ಮೊದಲು ಸದಾಶಿವಮೂರ್ತಿ ಲಿಂಗದಿರವು.

೧೦೯. ಗುರು ಚರ ಮೂರ್ತಿ ಪೂಜಿಸಿಕೊಂಬಲ್ಲಿ ತನ್ನ ವಿವರವ ತಾವರಿಯಬೇಕು. ಹೆಣ್ಣು, ಹೊನ್ನು, ಮಣ್ಣು ಹೊರಗೆಂದು ಕೆಲವರಿಗೆ ಹೇಳಿ ಗನ್ನದಿಂದ ಗಳಿಸಿಕೊಡುವುದು ಅದು ತಾನೇ ಅನ್ಯಾಯವಲ್ಲವೇ? ಬಿಂದ ಕಟ್ಟಿದ ಬಂಟ ಭಾಷೆಗೆ ತಪ್ಪಿದಡೆ ರಾಜನ ಮುಖ ಕ್ಕರಿದಡೆ ಭಂಗ- ಇಂತಿದನರಿಯದೆ, ಮೂಗ ಕೊಯ್ದು ಮಾರಹಣ್ಣ ಮೇಲುವ ಎಣ್ಣೆಗಳ್ಳಗೇಕೆ ಗುರುಚರಸ್ಥಲ? ಇಂತಿವರೆಲ್ಲರು ಸದಾಶಿವ ಮೂರ್ತಿ ಲಿಂಗಕ್ಕೆ ಹೊರಗು.

೧೧೦. ಗುರುವಾದಡೂ ಮಲತ್ರಯದಾಸೆಯುಳ್ಳನ್ನಕ್ಕ ಮಲದೇಹಿ. ಲಿಂಗವಾದಡೂ ತನ್ನಿರವ ತಾನರಿಯದನ್ನಕ್ಕ ಭವಕ್ಕೊಳಗು. ಜಂಗಮವಾದಡೂ ತನ್ನಿರವ ತಾನರಿಯದನ್ನಕ್ಕ ಪ್ರಸಿದ್ಧಭಾವವಿಲ್ಲ. ಇಂತಿವನರಿದು ಪೂಜಿಸಬೇಕು. ತನ್ನಯ ಜನ್ಮ ನಿವೃತ್ತಿಯ ಮಾಡಿ ಕೊಳಬಲ್ಲಡೆ ಇದೇ ಸದ್ಭಕ್ತನಿರವು ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೧೧. ಗುರುವೆಂದು ಅನುಸರಣೆಯ ಮಾಡಿದಲ್ಲಿ ಲಿಂಗವಿಲ್ಲ. ಲಿಂಗವೆಂದು ಅನುಸರಣೆಯ ಮಾಡಿದಲ್ಲಿ ಜಂಗಮವಿಲ್ಲ. ಜಂಗಮವೆಂದು ಅನುಸರಣೆಯ ಮಾಡಿದಲ್ಲಿ ಪಂಚಾಚಾರ ಶುದ್ಧಕ್ಕೆ ಹೊರಗು. ತಾ ಮಾಡುವ ಭಕ್ತಿ ತನಗೆ ಹಾನಿಯಾದ ಕಾರಣ ಈ ತ್ರಿವಿಧಕ್ಕೆ ಅನುಸರಣೆಯ ಮಾಡಲಿಲ್ಲ ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೧೨. ಗುರುವಿಂಗೆ ಗುರುವಿಲ್ಲದೆ ಅರಿವ ಪರಿ ಇನ್ನೆಂತೋ? ಲಿಂಗಕ್ಕೆ ಕಳೆ ಇಲ್ಲದೆ ಅರಿವ ಪರಿ ಇನ್ನೆಂತೋ? ಜಂಗಮಕ್ಕೆ ಪದ ಫಲ ನಾಸ್ತಿಯಾದಲ್ಲದೆ, ಪ್ರಸಿದ್ಧವಹ ಪರಿ ಇನ್ನೆಂತೋ? ಇಂತೀ ಅರಿವನರಿದಲ್ಲಿ ಸದಾಶಿವಮೂರ್ತಿಲಿಂಗವನರಿದುದು.

೧೧೩. ಪಾಶವರತು ಗುರುವಾಗಬೇಕು. ವೇಷವರತು ಚರವಾಗಬೇಕು. ಭ್ರಾಮಕವರತು ಲಿಂಗವಾಗಬೇಕು. ಸಕಲಕೃತ ಭೇದವರತು ವಿರಕ್ತವಾಗಬೇಕು. ಇಂತೀ ಸಕಲ ಭ್ರಮೆಯಳಿದು ನಿಂದುದೇ ಸದಾಶಿವಮೂರ್ತಿಲಿಂಗವು ತಾನೆ.

೧೭೪. ಭಕ್ತಂಗೆ ಕ್ರಿಯೆ, ಜಂಗಮಕ್ಕೆ ನಿಷ್ಕ್ರಿಯೆ, ಎನ್ನಬಾರದು ನೋಡಾ. ಜಂಗಮವಾದರೆ ಸದ್ಭಕ್ತಿ ಸದಾಚಾರ ಸತ್ಕ್ರಿಯೆಗಳಲ್ಲಿರಬೇಕು. ಅದೆಂತೆಂದಡೆ ಪುರುಷನ ಆಚಾರ ಸತಿಗೆ ಕಟ್ಟು. ಜಂಗಮದ ಆಚಾರವು ಭಕ್ತನ ಸಂಪದದ ಬೆಳೆ. ಅವತಾರಕ್ಕೆ ವೇಷ ಅರುಹಿಂಗೆ ಆಚಾರ. ಆ ಜಂಗಮ, ಆ ಭಕ್ತ ಈ ಉಭಯದ ಇರವು ಅಂಗಪ್ರಾಣದಂತೆ, ಭಿನ್ನವಿಲ್ಲ ಕಾಣಾ. ಸದಾಶಿವಮೂರ್ತಿಲಿಂಗವು ತಾನೆ.

**ಸಮಾಪ್ತ.**

ನೂರೆಂಟು ಪ್ರಣವುಗಳು:— ಇವು ಕೂಡ ಪೂರ್ಣ ವೀರಶೈವಪರ ವಾದವುಗಳು.

(೧) ಬ, ಸ, ವ ೩
(೨) ಅ, ಉ, ಮ ೩
(೩) ಪಂಚಾಕ್ಷರ ೬

೧೨

ವೀರಶೈವರಲ್ಲಿ ಯಾವ ಮಂತ್ರ ತೆಗೆದುಕೊಂಡರೂ ಅದರಲ್ಲಿ ಈ ೧೨ ಪ್ರಣವುಗಳು ಮುಖ್ಯ ಸ್ಥಾನವನ್ನು ಹೊಂದಿರುತ್ತವೆ. ಈ ೧೨ ಪ್ರಣವುಗಳನ್ನು ಒಂಭತ್ತು ವೇಳೆ ಪುನಶ್ಚರಣೆ ಮಾಡಲು ನೂರೆಂಟು ಪ್ರಣವುಗಳಾಗುತ್ತವೆ. ಇವುಗಳಲ್ಲಿರುವ ಬ, ಸ, ವ ಅಕ್ಷರಗಳು ಆತ್ಮ ತ್ರಯುವನ್ನು ಸೂಚಿಸುತ್ತವೆ. ಅವು ಗುರುಲಿಂಗಜಂಗಮ ಸ್ವರೂಪ. ಅವು ಬಹುಸೂಕ್ಷ್ಮವು. ಅ, ಉ, ಮ ಅಕ್ಷರಗಳು ತನುತ್ರಯಗಳು. ಅವು ಇಷ್ಟ ಪ್ರಾಣ, ಭಾವಲಿಂಗಗಳ ಸ್ವರೂಪಗಳು. ಹೆಚ್ಚಿಗೆ ಸ್ಥೂಲವು. ಷಡಕ್ಷರೀ ಮಂತ್ರದ ಆಯಾ ಪ್ರಣವುಗಳು ಷಟ್ ತತ್ವಗಳನ್ನು ತೋರಿಸುತ್ತವೆ. ಅವೆ ಲ್ಲವೂ ಷಡ್ವಿಧಲಿಂಗಸ್ವರೂಪವು. ಇವುಗಳು ಹಿಂದೆ ವಿವರಿಸಲ್ಪಟ್ಟವೆ. ಇವುಗಳ ಧ್ಯಾನದಿಂದ ಶಿವಯೋಗವು ಲಭಿಸುತ್ತದೆ.

ವರ್ಣಗಳು:— ಮೇಲೆ ವಿವರಿಸಲ್ಪಟ್ಟ ಶತಮಂತ್ರಾಕ್ಷರಗಳು ಒಂದು ನೂರು ಮತ್ತು ನಂ|| ೨೫೩ ರಲ್ಲಿಯ ಷಟ್ ತ್ರಿಂಶನ್ಮಂತ್ರಯಗಳು ೩೬ ಈ ಉಭಯ ಕೂಡಿ ೧೩೬ ವರ್ಣಗಳಾಗುವವು- ಇವುಗಳ ಪೂರ್ಣ ಜ್ಞಾನ ವುಳ್ಳವನಾಗಿ ಆಚರಿಸುವವನೇ ಮಂತ್ರಶರೀರಿಯು, ಲಿಂಗಾಂಗಿಯು ಎಂದೆನಿಸಿಕೊಳ್ಳುತ್ತಾನೆ.

ಜಪದ ಉದ್ದೇಶವು:— ಕರಸ್ಥಲದಲ್ಲಿರುವ ಶಿವಲಿಂಗದ ಬಾಹ್ಯೋ ಪಚಾರಗಳಲ್ಲಿ ಲೋಲುಪ್ತನಾಗಿರಲು ಆ ಲಿಂಗವು ಅಂತರಂಗದಲ್ಲಿ ವೇಧಿಸಿ ಅಲ್ಲಿ ಬೇರೆಬೇರೆ ಲಿಂಗಗಳಾಗಿ ನೆಲೆಸೊಳ್ಳುವದು. ಈ ಕಾರ್ಯದಲ್ಲಿ ಲಿಂಗ ಜಪವು ಲಿಂಗಧ್ಯಾನಿಗೆ ಸಹಾಯಕವಾಗಿರುತ್ತದೆ. ಈ ರೀತಿಯನ್ನು ವೀರಶೈವನು ತಿಳಿದು ಆಚರಿಸುವದೇ ಜಪದ ಉದ್ದೇಶವು.

ಲಿಂಗಜಪಃ— ಚಕ್ರಗಳಲ್ಲಿ ಬೇರೆಬೇರೆ ದಳಗಳಿವೆ. ಈ ದಳಗಳಿ
ಕೆಲವೊಂದು ಸಂಖ್ಯೆಯ ಜಪಗಳಿದ್ದು ಅವೆಲ್ಲವೂಕೂಡಿ ೨೧೬೦೦ ಆಗುವ
ಇವುಗಳನ್ನಲ್ಲರಿತು ಆಚರಿಸುತ್ತಿರಲು ಆಗ ರೇಚಕವೇ ಪಂಚಾಕ್ಷರಿ, ಪೂ
ಕವೇ ಓಂಕಾರ, ಕುಂಭಕವೇ ಚಿತ್‌ಶಕ್ತಿರೂಪ ವಾಗುವದು. ಇ ರೀತಿಯ
ನ್ನರಿತು ಆಚರಿಸುವದೇ ಲಿಂಗ ಜಪವು ಅಥವಾ ಶಿವಜಪವು.

ಚಿದ್ರುದ್ರಾಕ್ಷಿ:— ಇದಕ್ಕೆ ಚಿದಕ್ಷಮಣಿ ಎಂತಲೂ ಹೆಸರಿದೆ- ಕ
ದಲ್ಲಿರುವ ಇಷ್ಟ ಲಿಂಗವು ಷಡಾಧಾರ ಚಕ್ರಗಳಲ್ಲಿ ಆರು ತೆರನಾದ ಲಿಂ
ವಾಗಿ ಪ್ರಕಟವಾಗುತ್ತದೆ. ಆಧಾರದಲ್ಲಿ ಚತುರ್ವಿಧ ಬಿಂದುಲಿಂಗ, ಸ್ವಾಧಿ
ಸ್ಠಾನದಲ್ಲಿ ಷಡ್ವಿಧಧಾತುಲಿಂಗ, ಮಣಿಪೂರಕದಲ್ಲಿ ದಶವಿಧ ಕ್ಷೇತ್ರಲಿಂ
ಅನಾಹತದಲ್ಲಿ ದ್ವಾದಶವಿಕೃತಿಲಿಂಗ, ವಿಶುದ್ಧಿಯಲ್ಲಿ ಷೋಡಶಕಳಾಲಿಂಗ
ಆಜ್ಞೆಯಲ್ಲಿ ಆತ್ಮವಿದ್ಯಾಲಿಂಗ ಎಂದು ಅದು ಕರೆಯಲ್ಪಡುತ್ತದೆ. ಅಂ
ರಂಗದಲ್ಲಿ ಹೀಗೆ ಲಿಂಗವು ಸ್ಥಾಪಿತವಾಗುವದರಿಂದ ವೀರಶೈವನು ಪ್ರಾಣ
ಲಿಂಗಿ ಎಂದೆನಿಸಿಕೊಳ್ಳುತ್ತಾನೆ. ಷಟ್ ಚಕ್ರಗಳಲ್ಲಿರುವ ಈ ಲಿಂಗಗಳಲ್ಲಿ
ರುದ್ರರು ಸಂಬಂಧಪಟ್ಟಿರುತ್ತಾರೆ. ಈ ರುದ್ರರು ಒಟ್ಟು ೫೦ ಜನರು
ಅಧಾರದಲ್ಲಿ ೪ ರುದ್ರರು, ಸ್ವಾಧಿಷ್ಠಾನದಲ್ಲಿ ೬ ರುದ್ರರು, ಮಣಿಪೂರಕದ
೧೦ ರುದ್ರರು, ಅನಾಹತದಲ್ಲಿ ೧೨ ರುದ್ರರು, ವಿಶುದ್ಧಿಯಲ್ಲಿ ೧೬ ರುದ್ರ
ಆಜ್ಞೆಯಲ್ಲಿ ಇಬ್ಬರು, ಹೀಗೆ ೫೦ ರುದ್ರರು ಇದ್ದಾರೆ. ಅವರು ಲೋಮ
ವಿಲೋಮದಲ್ಲಿ ಒಂದುನೂರು ರುದ್ರರಾಗುತ್ತಿದ್ದು ಅವರೊಡನೆ ಮಾಯಾ
ಪಂಚಾಕ್ಷರಿ ಓಂ, ಹ್ರಾಂ ಹ್ರೀಂ ನಮಃ ಶಿವಾಯ ಈ ಎಂಟು ಕೂಡ
ನೂರೆಂಟು ರುದ್ರ ಬೀಜಗಳಾಗುತ್ತವೆ. ಇವುಗಳೇ ಚಿದ್ರುದ್ರಾಕ್ಷಿಗ
ಎಂದೆನಿಸಿಕೊಳ್ಳುತ್ತವೆ.

ಈ ರುದ್ರರಿಗೆ ನೂರೆಂಟು ಶಕ್ತಿಗಳು ಸತಿಪತಿಭಾವದಿಂದಿರುತ್ತಾ
ಆಯಾ ಚಕ್ರಗಳಲ್ಲಿ ಎಷ್ಟು ಜನ ರುದ್ರರು ಇದ್ದಾರೋ, ಅಷ್ಟೇ ಸಂ
ಯಿಂದ ಶಕ್ತಿಯರೂ ಇದ್ದು ಮಾಯಾಖ್ಯೆಗೂಡಿ ೧೦೮ ಶಕ್ತಿಗಳಾಗಿ ರು
ರೊಡನೆ ಬೆರೆದು ಚಿದ್ಗ್ರಂಥಿಗಳೆಂದೆನಿಸಿಕೊಳ್ಳುತ್ತಾರೆ.

ಆಗ ಲಿಂಗವೇ ಮಂತ್ರ, ಮಂತ್ರವೇ ಚಿತ್ತು ಎಂದು ಅರಿ
ಜಪಿಸಲು ಪ್ರಾಣವಾಯುವಿಕಾರವಳಿಯುತ್ತದೆ, ಸುಜ್ಞಾನವೇ ಸೂತ್ರ
ಗುತ್ತದೆ. ಚಿದ್ರುದ್ರಾಕ್ಷಿಯು ಈ ತೆರನನ್ನು ಅರಿದು ಜಪಿಸುವದು.
ನ್ನರಿತು ಜಪಿಸಲು, ಭಕ್ತನಲ್ಲಿ ಲಿಂಗಶಕ್ತಿಯು ಉದ್ಭವಿಸುತ್ತದೆ.

ಕಂಠಸ್ಥಾನದಲ್ಲಿಯ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ವಿವರಿಸಿದಂತೆ ಇವೆ. ಇವರು ಸ್ವರಾಕ್ಷರ ಮೂರ್ತಿಗಳೆಂದು ಹೇಳಲ್ಪಡುತ್ತಾರೆ.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಶ್ರೀಕಂಠ | ಪೂರ್ಣೋದರಿ | ಅ |
| ಅನಂತ | ವಿರಜೆ | ಆ |
| ಸೂಕ್ಷ್ಮ | ಶಾಲ್ಮಲಿ | ಇ |
| ತ್ರಿಮೂರ್ತಿ | ಲೋಲಾಕ್ಷಿ | ಈ |
| ಅಮರೇಶ | ವರ್ತುಳಾಕ್ಷಿ | ಉ |
| ಅರ್ಘೀಶ | ದೀರ್ಘನಾಸಿಕೆ | ಊ |
| ಭಾರಭೂತಿ | ದೀರ್ಘಮುಖಿ | ಋ |
| ಅತಿಲೇಶ | ಗೋಮುಖಿ | ೠ |
| ಸ್ಥಾಣುಕ | ದೀರ್ಘ ಜಿಹ್ವೆ | ಌ |
| ಹರ | ಕುಂಡೋದರಿ | ೡ |
| ಝುಂಟೀಶ | ಊರ್ಧ್ವಕೇಶಿ | ಏ |
| ಜಾತುಕ | ವಿಕೃತಮುಖಿ | ಐ |
| ಸದ್ಯೋಜಾತ | ಜ್ವಾಲಾಮುಖಿ | ಓ |
| ಅನುಗ್ರಹೇಶ್ವರ | ಉಲ್ಕಾಮುಖಿ | ಔ |
| ಅಕ್ರೂರ | ಶ್ರೀಮುಖಿ | ಅಂ |
| ಮಹಾಸೇನ | ವಿದ್ಯಾಮುಖಿ | ಅಃ |

ಹೃದಯಸ್ಥಾನದಲ್ಲಿರುವ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ವಿವರಿಸಿದಂತೆ ಇವೆ. ಇವರು ವಿಕಲಾಕ್ಷರರಾದಿ ದೇವತೆಗಳು ಮತ್ತು ದ್ವಾದಶಾಕ್ಷರರು. ಇದು ಅನಾಹತ ಚಕ್ರವು.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಕ್ರೋಧೀಶ | ಮಹಾಕಾಳಿ | ಕ |
| ಚಂಡೇಶ | ಸರಸ್ವತಿ | ಖ |
| ಪಂಚಾಂತಕಶಿವೋತ್ತಮ | ಗೌರಿ | ಗ |
| ಶಿವೋತ್ತಮ | ಮಂತ್ರಶಕ್ತಿ | ಘ |
| ಏಕರುದ್ರ | ಆತ್ಮಶಕ್ತಿ | ಙ |

| | | |
|---|---|---|
| ಕೂರ್ಮ | ಭೂತಮಾತೆ | ಚ |
| ಏಕನೇತ್ರ | ಲಂಬೋದರಿ | ಛ |
| ಚತುರಾಸನ | ದ್ರಾವಿಣಿ | ಜ |
| ಅಜೇಶ | ನಗರಿ | ಝ |
| ಸರ್ವ | ಖೇಚರಿ | ಞ |
| ಸೋಮೇಶ | ಮಂಜರಿ | ಟ |
| ಲಾಂಗುಲಿ | ರೂಪಿಣಿ | ಠ |

ಉದರ ಸ್ಥಾನದಲ್ಲಿರುವ ರುದ್ರರು ಮತ್ತು ಶಕ್ತಿಯರು ಕೆಳಗೆ ವಿವರಿಸಿದಂತೆ ಇದ್ದಾರೆ. ಇವರು ೧೦ ಜನರು ಇದ್ದಾರೆ. ಇದುಮಣಿಪೂರಕ ಚಕ್ರವು.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ದಾರುಕ | ನಿರಜೆ | ಡ |
| ಅರ್ಧನಾರೀಶ್ವರ | ಕಾಲೋದರಿ | ಢ |
| ಸೋಮ | ಪೂತನಿ | ಣ |
| ಉಮಾಕಾಂತ | ಭದ್ರಕಾಳಿ | ತ |
| ಆಷಾಢದಂಡಿ | ಯೋಗಿನಿ | ಥ |
| ಸ್ಫುರ | ಶಂಖಿನಿ | ದ |
| ಅತ್ರಿರುದ್ರ | ಘರ್ಜಿನಿ | ಧ |
| ಮೀನರುದ್ರ | ಕಾಲರಾತ್ರಿ | ನ |
| ಮೇಷರುದ್ರ | ಕುರ್ದಿನಿ | ಪ |
| ಲೋಹಿತ | ಕಪರ್ದಿನಿ | ಫ |

ಗುಹ್ಯಸ್ಥಾನದಲ್ಲಿರುವ ಸಾಧಿಷ್ಠಾನ ಚಕ್ರದಲ್ಲಿರುವ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ಕಾಣಿಸಿದಂತೆ ಇವೆ.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಶಿಖಿ | ವಾಗ್ನಮೆ | ಬ |
| ಸಕಲಂಡ | ಜಯೆ | ಭ |
| ದ್ವಿಲಂಡ | ಸುಮುಖಿ | ಮ |

| | | |
|---|---|---|
| ಮಹಾಕಾಲ | ಈಶ್ವರಿ | ಯ |
| ಸಾಲ | ರೇವತಿ | ರ |
| ಭುಜಂಗೇಶ | ಮಾಧವಿ | ಲ |

ಗುದಸ್ಥಾನದಲ್ಲಿಯ ಆಧಾರಚಕ್ರದಲ್ಲಿರುವ ರುದ್ರರು ಮತ್ತು ಶಕ್ತಿಯರು ನಾಲ್ವರು. ಇವರ ಹೆಸರುಗಳು ಕೆಳಗೆ ಕಾಣಿಸಿದಂತೆ.

| ರುದ್ರರು. | ಶಕ್ತಿಯರು | ಅಕ್ಷರಗಳು. |
|---|---|---|
| ಪಿನಾಕೇಶ | ವಾರುಣಿ | ವ |
| ಖಡ್ಗೀಶ | ವಾಯುವಿ | ಶ |
| ಬಕ | ರಕ್ಷಾವಧಾರಿಣಿ | ಷ |
| ಶ್ವೇತಭೃಗ್ವೀಶ | ಸಹಜೆ | ಸ |

ಲಲಾಟಸ್ಥಾನದಲ್ಲಿ ಇಬ್ಬರು ರುದ್ರರು ಶಕ್ತಿಯರು ಇದ್ದಾರೆ. ಇದು ಆಜ್ಞಾನಚಕ್ರವು.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಶಿವ | ವ್ಯಾಪಿನಿ | ಹಂ |
| ಸಂವರ್ತಕ | ಮಾಯಾನ್ವಿತೆ | ಕ್ಷಂ |

ಸೂಚನೆ:— ಮೇಲೆ ಹೇಳಿದ ವಿವರಣೆಗಳು ಚಿದ್ರುದ್ರಾಕ್ಷಿಯ ವಿಷಯದಲ್ಲಿ ಬರುತ್ತವೆ. ಬಾಹ್ಯ ಇಷ್ಟ ಲಿಂಗದ ಮೂಲಕ ಅಂತರಂಗದಲ್ಲಿ ಲಿಂಗಗಳು ಪ್ರಕಟವಾಗುತ್ತವೆ. ಇದು ಲಿಂಗಧ್ಯಾನದ ಮೂಲಕ ಜರಗುತ್ತದೆ. ಹೀಗೆ ನೆಲೆಗೊಂಡ ಲಿಂಗಗಳ ಹೆಸರುಗಳು ಮೇಲೆ ಹೇಳಿದೆ ಅವೇ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಾಗಿರುತ್ತವೆ. ಹೀಗೆ ನೆಲೆಗೊಳ್ಳುವಲ್ಲಿ ಆ ಚಕ್ರಗಳಲ್ಲಿರುವ ದಳಗಳಲ್ಲಿ ರುದ್ರರೂ ಶಕ್ತಿಯರೂ ಇವರ ಸಂಗಮವಾಗುವದು. ಈ ಸಂಗಮವು ಜರಗಿದಲ್ಲಿ ಅದು ಚಿದ್ಗ್ರಂಥಿ ಎಂದು ಹೇಳಲ್ಪಡುತ್ತದೆ. ಸಾಮಾನ್ಯ ಜನರಲ್ಲಿಯ ಗ್ರಂಥಿಗಳಲ್ಲಿ ರಕ್ತ, ಸ್ನಾಯುಗಳನ್ನು ಮಾತ್ರ ಕಾಣಬಹುದು. ಆದರೆ ಲಿಂಗಜಪಗಳಿಂದ ಪಕ್ವವಾದ ಲಿಂಗಾಂಗಿಯ ಶರೀರದಲ್ಲಿರುವ ಈ ಗ್ರಂಥಿಗಳಲ್ಲಿ ಲಿಂಗಶಕ್ತಿಯು ಇರುತ್ತದೆ. ಆದ್ದರಿಂದ ಅವು ಚಿದ್ಗ್ರಂಥಿಗಳೆಂದು ಹೇಳಲ್ಪಟ್ಟಿರುತ್ತವೆ. ಇದು ವೀರಶೈವನ ಲಿಂಗ ಮಂತ್ರಜಪವು.

ಲಿಂಗಜಪಗಳಲ್ಲಿ ಅರ್ಪಣಭಾವವು:— ವೀರಶೈವರು ಲಿಂಗಾರ್ಪಣ ಭಾವದಿಂದ ತಮ್ಮ ಲಿಂಗಜಪಗಳನ್ನು ಮಾಡತಕ್ಕದ್ದು. ಅರ್ಪಣಭಾವ ದಿಂದ ಲಿಂಗವು ಅಂತರಂಗವನ್ನು ವೇಧಿಸುತ್ತದೆ. ಜಪಮಾಡುವದೆಂದರೆ ಕೇವಲ ನಾಮಸಂಕೀರ್ತನವಲ್ಲ. ಅದರೊಡನೆ ಆಯಾ ಲಿಂಗಗಳ ನೆನಹು ಮತ್ತು ಆ ನೆನಹಿನೊಡನೆ ಅರ್ಪಣಭಾವ ಇವುಗಳೂ ಇರತಕ್ಕದ್ದು. ವೀರ ಶೈವರಲ್ಲಿ ಲಿಂಗಜಪಗಳು ಈ ರೀತಿಯಾಗಿರುತ್ತವೆ.

ಲಿಂಗಜಪಗಳ ಭೇದಗಳು:— ಇವು ಮುಖ್ಯ ಎರಡುಇವೆ. ಈ ಒಂದೊಂದು ಭೇದದಲ್ಲಿ ಅನೇಕ ಉಪಭೇದಗಳೂ ಇರುತ್ತವೆ. ಮುಖ್ಯ ಭೇದಗಳು ಯಾವವೆಂದರೆ:— (೧) ಪ್ರಣವೋಚ್ಚರಣೆಗಳು ಇಲ್ಲಿ ಪ್ರಣ ವುಗಳ ಪುನಶ್ಚರಣೆ ಮಾತ್ರ ಇರುತ್ತದೆ. ಮನುಷ್ಯನಲ್ಲಿ ಹುದುಗಿರುವ ಅಂತಃಶಕ್ತಿಯನ್ನು ಒಟ್ಟಾಗಿ ಹೆಚ್ಚಿಸುವದೇ ಇವುಗಳ ಉದ್ದೇಶವು. (೨) ಪ್ರಣವುಗಳನ್ನು ಆಯಾ ಲಿಂಗಗಳಿಗೆ ಸಮರ್ಪಣ ಮಾಡುತ್ತ ಉಚ್ಚರಿ ಸುವದು. ಇಲ್ಲಿ ಅಂತಃಶಕ್ತಿಯನ್ನು ಆಯಾ ಲಿಂಗಗಳಿಗೆ ಸಮರ್ಪಿಸುವ ದಿರುತ್ತದೆ. ಹೀಗೆ ಇವುಗಳಲ್ಲಿ ಎರಡು ಮುಖ್ಯ ಭೇದಗಳನ್ನು ಮಾಡ ಬಹುದು.

ಪ್ರಣವೋಚ್ಚರಣೆ:— ವೀರಶೈವರಲ್ಲಿ ಅ, ಉ, ಮ; ಬ, ಸ, ವ, ಓಂ ನ ಮ: ಶಿ ವಾ ಯ ಹೀಗೆ ೧೨ ಮುಖ್ಯ ಪ್ರಣವುಗಳು ಇರುತ್ತವೆ. ಇವುಗಳ ಉಚ್ಚರಣೆಯ ಮುಖ್ಯ ವಿಧಗಳು ಯಾವವೆಂದರೆ:—

೧ನೇ ವಿಧ:—

ಬಾಂ ಸಾಂ ವಾಂ; ನಾಂ ಮಾಂ ಶಿಃಂ ವಾಃಂ ಯಾಂ ಓಂ; ಅಂ ಊಂ ಮಾಂ ಎಂದಿದೆ.

೨ನೇ ವಿಧವು:—

ಓಂ; ನಾಂ ಮಾಂ; ಅಂ ಬಾಂ ಹ್ರಾಂ ಹ್ರೀಂ, ನಮಃಶಿವಾಯ.
ಓಂ, ಶೀಂ ವಾಂ; ಊಂ ಸಾಂ ಹ್ರೂಂ ಹ್ರೈಂ, ನಮಃಶಿವಾಯ.
ಓಂ, ಯಾಂ; ಮಾಂ ವಾಂ ಹ್ರೌಂ ಹ್ರಂಃ ನಮಃಶಿವಾಯ.

ಒಂದನೇ ವಿಧವು ಸಾಮಾನ್ಯವಾದುದು. ಎರಡನೇ ವಿಧವು ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅನುಕ್ರಮವಾಗಿ ಸಂಬಂಧಿಸಿ ಹೇಳಲ್ಪಟ್ಟಿದೆ.

ಲಿಂಗಾರ್ಪಣ ಜಪಗಳು:— ಇದರಲ್ಲಿ ತ್ರಿಲಿಂಗಾರ್ಪಣ ಜಪವು, ನವಲಿಂಗಾರ್ಪಣ ಜಪವೆಂತಲೂ ಕಾಯಾರ್ಪಣ ಜಪವು, ಕರಣಾರ್ಪಣ ಜಪವೆಂತಲೂ ಭೇದಗಳು ಇರುತ್ತವೆ. ಅಲ್ಲದೆ ವೀರ ಶೈವರು ತಮ್ಮ ಅಂಗದ ಮೇಲೆ ಧರಿಸುವ ಇಷ್ಟಲಿಂಗಕ್ಕೆ ಸಂಬಂಧಿಸಿದ ಜಪವೂ ಒಂದು ಇತೆ.

ತ್ರಿಲಿಂಗಾರ್ಪಣ ಜಪವುಃ—

ಓಂ ಹ್ರಾಂ ನಾಂ ನಮಃ ಶಿವಾಯ ಆಚಾರಲಿಂಗಾಯನಮಃ
ಓಂ ಹ್ರೀಂ ಮಾಂ ನಮಃ ಶಿವಾಯ ಗುರುಲಿಂಗಾಯನಮಃ
ಇಷ್ಟಲಿಂಗವೇ ನಿಮಗರ್ಪಿತವು.

ಓಂ ಹ್ರೂಂ ಶೀಂ ನಮಃ ಶಿವಾಯ ಶಿವಲಿಂಗಾಯನಮಃ
ಓಂ ಹ್ರೈಂ ವಾಂ ನಮಃ ಶಿವಾಯ ಜಂಗಮಲಿಂಗಾಯನಮಃ
ಪ್ರಾಣಲಿಂಗವೇ ನಿಮಗರ್ಪಿತವು.

ಓಂ ಹ್ರೌಂ ಯಾಂ ನಮಃ ಶಿವಾಯ ಪ್ರಸಾದಲಿಂಗಾಯನಮಃ
ಓಂ ಹ್ರಃ ಓಂ ನಮಃ ಶಿವಾಯ ಮಹಾಲಿಂಗಾಯನಮಃ
ಭಾವಲಿಂಗವೇ ನಿಮಗರ್ಪಿತವು.

ನವಲಿಂಗಾರ್ಪಣ ಜಪಃ— ಇದರಲ್ಲಿ ಷಡ್ಲಿಂಗ ಜಪವೂ ಸೇರಿ ಕೊಂಡಿರುತ್ತದೆ. ಅದರಲ್ಲಿ ಎರಡು ವಿಧಗಳಿವೆ.

೧ನೇ ವಿಧಃ—

| | | | |
|---|---|---|---|
| ಓಂ | ಹ್ರಾಂ | ನಾಂ | ಆಚಾರಲಿಂಗಾಯನಮಃ |
| ಓಂ | ಹ್ರೀಂ | ಮಾಂ | ಗುರುಲಿಂಗಾಯನಮಃ |
| ಓಂ | ಹ್ರೂಂ | ಶೀಂ | ಶಿವಲಿಂಗಾಯನಮಃ |
| ಓಂ | ಹ್ರೈಂ | ವಾಂ | ಜಂಗಮಲಿಂಗಾಯನಮಃ |
| ಓಂ | ಹ್ರೌಂ | ಯಾಂ | ಪ್ರಸಾದಲಿಂಗಾಯನಮಃ |
| ಓಂ | ಹ್ರಃ | ಓಂ | ಮಹಾಲಿಂಗಾಯನಮಃ |
| ಓಂ | ಆಂ | | ಇಷ್ಟಲಿಂಗಾಯನಮಃ |
| ಓಂ | ಊಂ | | ಪ್ರಾಣಲಿಂಗಾಯನಮಃ |
| ಓಂ | ಮಾಂ | | ಭಾವಲಿಂಗಾಯನಮಃ |

ಇವುಗಳಲ್ಲಿ ಮೊದಲನೆಯ ಆರು ಷಟ್‌ಸ್ಥಲಕ್ಕೂ ಉಳಿದ ಮೂರು ಅವುಗಳಿಗೆ ಮೇಲಿರುವ ಶೂನ್ಯ ಸ್ಥಳಗಳಿಗೂ ಸಂಬಂಧಿಸುತ್ತವೆ-

೨ನೆ ವಿಧಃ— ಕೆಳಗಿನದರಲ್ಲಿ ಬ, ಸ, ವ; ಅ, ಉ, ಮ ಪ್ರಣವ ಗಳನ್ನೊಡಗೊಂಡು ಮಾಡತಕ್ಕ ಜಪದ ಕ್ರಮವಿದೆ. ಅದರಲ್ಲಿ ಪ್ರಣವ ಗಳಲ್ಲಿ ಮಂತ್ರಶಕ್ತಿಯನ್ನು ಹೆಚ್ಚಿಸುವದಕ್ಕೋಸ್ಕರ ಒಂದಕ್ಕಿಂತಲೂ ಹೆಚ್ಚು ಸಾರೆ ಅವು ಇಡಲ್ಪಟ್ಟಿವೆ. ಅದು ಹೇಗೆಂದರೆಃ—

(೧) ಓಂ ಬಾಂ ಓಂ ಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಆಚಾರಲಿಂಗಾಯನಮಃ.

(೨) ಓಂ ಬಾಂ ಓಂ ಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಗುರುಲಿಂಗಾಯನಮಃ

(೩) ಓಂ ಬಾಂ ಓಂ ಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಶಿವಲಿಂಗಾಯನಮಃ.

(೪) ಓಂ ಬಾಂ ಓಂ ಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಜಂಗಮಲಿಂಗಾಯನಮಃ

(೫) ಓಂ ಬಾಂ ಓಂಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ, ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಪ್ರಸಾದಲಿಂಗಾಯನಮಃ

(೬) ಓಂ ಬಾಂ ಓಂ ಸಾಂ ಓಂ ವಾ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ, ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಮಹಾಲಿಂಗಾಯನಮಃ-

(೭) ಓಂ ಬಾಂ ಓಂ ಸಾಂ ಓಂವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ; ಓಂ ಓಂ ಓಂ; ಅಂ ಓಂ ಊಂ ಓಂ ಮಾಂ ಇಷ್ಟಲಿಂಗಾಯನಮಃ-

(೮) ಓಂ ಬಾಂ ಓಂ ಸಾ ಓಂ ವಾಂ: ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ ಓಂ; ಆಂ ಓಂ ಊಂ ಓಂ ಮಾಂ ಪ್ರಾಣಲಿಂಗಾಯನಮಃ

(೯) ಓಂ ಬಾಂ ಓಂ ಸಾಂ ಓಂ ವಾಂ; ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ; ಓಂ ಓಂ ಓಂ; ಆಂ ಓಂ ಊಂ ಓಂ ಮಾಂ ಭಾವಲಿಂಗಾಯನಮಃ

ಕಾಯಾರ್ಪಣ ಜಪವುಃ—

(ಅ) ಭೋಜ್ಯವನ್ನು ಓಂ ಹ್ರಾಂ ನಾಂ ನಮಃಶಿವಾಯ ಈ ಮಂತ್ರ ದಿಂದ ಆಚಾರಲಿಂಗಕ್ಕೆ ಅರ್ಪಿಸುವದು.

(ಬ) ಖಾಧ್ಯವನ್ನು ಓಂ ಹ್ರೀಂ ಮಾಂ ನಮಃಶಿವಾಯ ಎಂಬ ಮಂತ್ರದಿಂದ ಗುರುಲಿಂಗಕ್ಕೆ ಅರ್ಪಿಸುವದು.

(ಕ) ಭಕ್ಷ್ಯವನ್ನು ಓಂ ಹ್ರೂಂ ಶೀಂ ನಮಃಶಿವಾಯ ಎಂಬ ಮಂತ್ರದಿಂದ ಶಿವಲಿಂಗಕ್ಕೆ ಅರ್ಪಿಸುವದು.

(ಡ) ಚೋಹ್ಯವನ್ನು ಓಂ ಹ್ರೈಂ ವಾಂ ನಮಃಶಿವಾಯ ಎಂಬ ಮಂತ್ರದಿಂದ ಜಂಗಮಲಿಂಗಕ್ಕೆ ಅರ್ಪಿಸುವುದು.

(ಇ) ಲೇಹ್ಯವನ್ನು ಓಂ ಹ್ರೌಂ ಯಾಂ ನಮಃಶಿವಾಯ ಎಂಬ ಮಂತ್ರದಿಂದ ಪ್ರಸಾದಲಿಂಗಕ್ಕೆ ಅರ್ಪಿಸುವುದು.

(ಫ) ಇಲ್ಲದಲ್ಲಿಯ ರೂಪವನ್ನು ಪರಿಣಾಮವೆಂಬ ದ್ರವ್ಯವನ್ನು ತೃಪ್ತಿ ಎಂಬ ಪದಾರ್ಥವನ್ನು ಓಂ ಹ್ರಃ ಓಂ ನಮಃ ಶಿವಾಯ ಎಂಬ ಮಂತ್ರದಿಂದ ಮಹಾಲಿಂಗಕ್ಕೆ ಅರ್ಪಿಸುವುದು.

ಕರಣಾರ್ಪಣ ಜಪವುಃ— ರೂಪು, ರುಚಿ, ತೃಪ್ತಿಗಳನ್ನು ಯಾವ ಜಪದಿಂದ ಅರ್ಪಿಸತಕ್ಕದ್ದೋ ಅದೇ ಕರಣಾರ್ಪಣ ಜಪವೆಂದು ಹೇಳಲ್ಪಡುತ್ತಿದೆ. ಅದು ಹೇಗೆಂದರೆ:—

ಓಂ ಹ್ರಾಂ ಹ್ರೀಂ. ಬಾಂ ಆಂ ನಾಂ ಮಾಂ ನಮಶ್ಶಿವಾಯ

ಎಂದು ರೂಪ ಪದಾರ್ಥವನ್ನು ಇಷ್ಟಲಿಂಗಕ್ಕೆ ಅರ್ಪಿಸುವದು.

ಓಂ ಹ್ರೂಂ ಹ್ರೈಂ, ಸಾಂ ಊಂ ಶೀಂ ವಾಂ, ನಮಃಶ್ಶಿವಾಯ

ಎಂದು ರುಚಿ ಪದಾರ್ಥವನ್ನು ಪ್ರಾಣಲಿಂಗಕ್ಕೆ ಅರ್ಪಿಸುವುದು.

ಓಂ ಹ್ರೌಂ ಹ್ರಃ, ವಾಂ ಮಾಂ ಯಾಂ, ಓಂ, ನಮಃಶ್ಶಿವಾಯ

ಎಂದು ತೃಪ್ತಿಪದಾರ್ಥವನ್ನು ಭಾವಲಿಂಗಕ್ಕೆ ಅರ್ಪಿಸುವದು. ಇದು ಕಳಶಾರ್ಪಣ ಜಪವು.

ಇಷ್ಟಲಿಂಗಾರ್ಪಣ ಜಪವುಃ— ಇದನ್ನು ಅರ್ಪಿಸುವ ವಿಧವು ಹೇಗೆಂದರೆಃ—

ಓಂ ಹ್ರಾಂ ನಮಃಶಿವಾಯ - ಪೀಠದಲ್ಲಿರುವ ಆಚಾರಲಿಂಗಕ್ಕೆ
ಓಂ ಹ್ರೀಂ ನಮಃಶಿವಾಯ - ಕಟಿಯಲ್ಲಿರುವ ಗುರುಲಿಂಗಕ್ಕೆ
ಓಂ ಹ್ರೂಂ ನಮಃಶಿವಾಯ - ವರ್ತುಳದಲ್ಲಿರುವ ಶಿವಲಿಂಗಕ್ಕೆ
ಓಂ ಹ್ರೈಂ ನಮಃಶಿವಾಯ - ಗೋಮುಖದಲ್ಲಿರುವ ಜಂಗಮಲಿಂಗಕ್ಕೆ
ಓಂ ಹ್ರೌಂ ನಮಃಶಿವಾಯ ನಾಳದಲ್ಲಿರುವ ಪ್ರಸಾದಲಿಂಗಕ್ಕೆ
ಓಂ ಹ್ರಃ ನಮಃಶಿವಾಯ - ಗೋಳಕದಲ್ಲಿರುವ ಮಹಾಲಿಂಗಕ್ಕೆ

ಸಮರ್ಪಿಸುವುದು.

ಬೇರೆ ಪದ್ಧತಿಯ ಜಪಗಳೂ ಉಂಟು. ಆದರೆ ಅವುಗಳ ಮೂಲ ತತ್ವಗಳಲ್ಲಿ ಭೇದವಿಲ್ಲ. ಅವುಗಳ ಉಪಯೋಗದಂತೆ ಬೇರೆ ಬೇರೆ ಹೆಸರುಗಳುಂಟು. ಅವುಗಳಲ್ಲಿ ಕೆಲವು ಮಾದರಿಗಾಗಿ ಕೆಳಗ ಕೊಡಲ್ಪಟ್ಟಿವೆ.

ಹಸ್ತಪ್ರಸಾದ ಜಪಃ— ಈ ಜಪದ ವಿವರ ಕೆಳಗೆ ಕಾಣಿಸಿದಂತೆ ಇದೆ. ಇಷ್ಟ ಪ್ರಾಣ ಭಾವಲಿಂಗಗಳ ಜಪಗಳು ಇವಾಗಿವೆ.

ಓಂ ಹ್ರಾಂ ಹ್ರೀಂ ಬಾಂ ಅಂ ನಾಂ ಮಾಂ ಇಷ್ಟಲಿಂಗಾಯನಮಃ
ಓಂ ಹ್ರೂಂ ಹ್ರೇಂ ಸಾಂ ಊಂ ಶೀಂ ವಾಂ ಪ್ರಾಣಲಿಂಗಾಯನಮಃ
ಓಂ ಹ್ರೌಂ ಹ್ರಃ ವಾಂ ಮಾಂ ಯಾಂ ಓಂ ಭಾವಲಿಂಗಾಯನಮಃ

ಇದನ್ನು ಜಪಿಸಿ ಅಡಿಗೆಯನ್ನು ಮುಟ್ಟಿಸುವುದು.

ರೂಪು ರುಚಿ ತೃಪ್ತಿಗಳ ಅರ್ಪಣಃ—

ನಮಃಶಿವಾಯ ರೂಪು ಇಷ್ಟಲಿಂಗಾಯನಮಃ
ನಮಃಶಿವಾಯ ರುಚಿ ಪ್ರಾಣಲಿಂಗಾಯನಮಃ
ನಮಃಶಿವಾಯ ತೃಪ್ತಿ ಭಾವಲಿಂಗಾಯನಮಃ

ಇದೊಂದು ವಿಧದ ಕರಣಾರ್ಪಣ ಜಪವು. ಇದರ ಮೂಲಕ ಲಿಂಗಕ್ಕೆ ತೋರಿಸಿ ಎಡೆಯನ್ನು ಅರ್ಪಿಸುವುದು.

ನ್ಯಾಸಗಳುಃ— ವೀರಶೈವರಲ್ಲಿ ಅನೇಕ ತರದ ನ್ಯಾಸಗಳಿವೆ. ನ್ಯಾಸಗಳು ಮಂತ್ರಾಕ್ಷರಗಳ ಮೂಲಕವೇ ಆಗುತ್ತವೆ. ಅವುಗಳಿಂದ ವೀರಶೈವನು ಮಂತ್ರ ಶರೀರಿಯಾಗಿ ಲಿಂಗವನ್ನು ಪೂಜಿಸುತ್ತಾನೆ. ಅವುಗಳ ವಿವರಗಳು ಮುಂದೆ ಕೊಡಲ್ಪಡುವವು. ಹೀಗೆ ಮಂತ್ರಗಳ ಕಾರ್ಯಗಳು ಅನೇಕ ವಿಧವಾಗಿವೆ.

ತ್ರಿಲಿಂಗಗಳ ಜಪಸಂಖ್ಯೆಃ- ಇಷ್ಟಲಿಂಗದ ಜಪಗಳ ಸಂಖ್ಯೆ ೪೩೨೦. ಪ್ರಾಣಲಿಂಗದ ಜಪಗಳ ಸಂಖ್ಯೆ ೯೫೦೪. ಭಾವಲಿಂಗದ ಜಪಗಳ ಸಂಖ್ಯೆ ೭೭೭೬. ಹೀಗೆ ಒಟ್ಟು ಜಪಸಂಖ್ಯೆ ೨೧೬೦೦ ಆಗುತ್ತವೆ. ಇಷ್ಟಲಿಂಗದಲ್ಲಿ ಆಚಾರಲಿಂಗದ ೪ ದಳಗಳು ಗುರುಲಿಂಗದಲ್ಲಿ ೬ ದಳಗಳು ಅಂತು ೧೦ ದಳಗಳಿದ್ದು ಪ್ರತಿಯೊಂದು ದಳಕ್ಕೆ ೪೩೨ ಜಪಸಂಖ್ಯೆಯ ಪ್ರಕಾರ ಇದಕ್ಕೆ ಒಟ್ಟು ೪೩೨೦ ಜಪಗಳಾಗುತ್ತವೆ. ಪ್ರಾಣಲಿಂಗದಲ್ಲಿ ೧೦ ದಳಗಳುಳ್ಳ ಶಿವಲಿಂಗ ಮತ್ತು ೧೨ ದಳಗಳುಳ್ಳ ಜಂಗಮಲಿಂಗವಿದ್ದು ಮೇಲಿನ ಎಣಿಕೆಯ ಪ್ರಕಾರ ಜಪಗಳ ಸಂಖ್ಯೆ ೯೫೦೪ ಆಗುತ್ತವೆ. ಭಾವಲಿಂಗದಲ್ಲಿ ೧೬ ದಳಗಳುಳ್ಳ ಪ್ರಸಾದಲಿಂಗ ಮತ್ತು ೨ ದಳಗಳುಳ್ಳ ಮಹಾಲಿಂಗವಿದ್ದು ಅದೇ ಎಣಿಕೆಯಿಂದ ಒಟ್ಟು ಜಪಸಂಖ್ಯೆ ೭೭೭೬ ಆಗುತ್ತವೆ. ಜಪಕ್ಕೆ ಒಟ್ಟು ೬೦ ಗಳಿಗೆ ಅಂದರೆ ೨೪ ತಾಸುಗಳು ಹತ್ತುತ್ತವೆ.

ಷಡ್ವಿಧ ಲಿಂಗಗಳ ಜಪಸಂಖ್ಯೆಃ—

| ಲಿಂಗ | ಲಿಂಗಕ್ಕೆ ದಳಗಳು | ಒಂದು ದಳಕ್ಕೆ ಜಪಸಂಖ್ಯೆ | ಲಿಂಗದ ಒಟ್ಟು ಜಪಸಂಖ್ಯೆ | ಹತ್ತುವ ವೇಳೆ ಗಳಿಗೆ-ಪಾನಿವಾಳೆ |
|---|---|---|---|---|
| ಆಚಾರಲಿಂಗ | ೪ | ೪೩೨ | ೧೭೨೮ | ೪-೪೮ |
| ಗುರುಲಿಂಗ | ೬ | ೪೩೨ | ೨೫೯೨ | ೭-೧೨ |
| ಶಿವಲಿಂಗ | ೧೦ | ೪೩೨ | ೪೩೨೦ | ೧೨-೦ |
| ಜಂಗಮಲಿಂಗ | ೧೨ | ೪೩೨ | ೫೧೮೪ | ೧೪-೨೪ |
| ಪ್ರಸಾದಲಿಂಗ | ೧೬ | ೪೩೨ | ೬೯೧೨ | ೧೯-೧೨ |
| ಮಹಾಲಿಂಗ | ೨ | ೪೩೨ | ೮೬೪ | ೨-೨೪ |
| | ೫೦ | | ೨೧೬೦೦ | ೬೦-೦ |

ವೇಳೆಯ ಕೊಷ್ಟಕ:— ೬೦ ಪಾನಿವಾಳ=೧ ಗಳಿಗೆ; ೨½ ಗಳಿಗೆ ೧ತಾಸು

**ಲಿಂಗಗಳ ಜಪಸಂಖ್ಯೆಯ ಪ್ರಮಾಣಗಳು:**— ಆಚಾರ ಲಿಂಗದ ಜಪಕ್ಕೆ ೩೦೮ರಿಂದ ೧೬ ವೇಳೆ ಜಪಿಸುವದು. ಗುರುಲಿಂಗದ ಜಪಕ್ಕೆ ೩೦೮ರಿಂದ ೨೪ ವೇಳೆ ಜಪಿಸುವದು. ಶಿವಲಿಂಗದ ಜಪಕ್ಕ ೩೦೮ ರಿಂದ ೪೦ ವೇಳೆ ಜಪಿಸುವದು. ಜಂಗಮಲಿಂಗದ ಜಪಕ್ಕೆ ೩೦೮ ರಿಂದ ೪೮ ವೇಳೆ ಜಪಿಸುವದು. ಪ್ರಸಾದಲಿಂಗದ ಜಪಕ್ಕೆ ೩೦೮ ರಿಂದ ೬೪ ವೇಳೆ ಜಪಿಸುವದು. ಮಹಾಲಿಂಗದ ಜಪಕ್ಕೆ ೩೦೮ರಿಂದ ೮ ವೇಳೆ ಜಪಿಸುವುದು. ಅಂದರೆ ಎಲ್ಲಕ್ಕೂ ಕಡಿಮೆ ೨೦೦ ಜಪಗಳು ಆಗುತ್ತಿದ್ದು ಎಲ್ಲಕ್ಕೂ ಹೆಚ್ಚು ಜಪಗಳು ೨೧೬೦೦ ಆಗುವವು. ಎಲ್ಲಕ್ಕೂ ಕಡಿಮೆ ಎಂದರೆ ೨೦೦ ಜಪಗಳಿಗೆ ಈಗಿನ ಲೆಕ್ಕದ ಪ್ರಕಾರ ೧೩½ ಮಿನಿಟುಗಳು ಹತ್ತುತ್ತವೆ.

ಮಿಶ್ರಷಟ್‌ಸ್ಥಲ ಜಪಗಳು (೩೬ ಅಂಗಲಿಂಗ ಸ್ಥಳಗಳ ಜಪಗಳು):— ಪ್ರತಿಯೊಂದು ಲಿಂಗದಲ್ಲಿ ಆರಾರು ಲಿಂಗಗಳಿವೆಯಷ್ಟೇ. ಒಂದು ಲಿಂಗದಲ್ಲಿಯ ಜಪಗಳನ್ನು ಈ ಆರರಲ್ಲಿ ಸಮನಾಗಿ ಹಂಚಿಹಾಕತಕ್ಕದ್ದು. ಹೀಗೆ ಹಂಚಿಹಾಕಿದಲ್ಲಿ ಆಯಾ ಲಿಂಗಗಳಿಗೆ ಆಗುವ ಜಪಸಂಖ್ಯೆ ಕೆಳಗೆ ಕಾಣಿಸಿದಂತೆ ಆಗುವುದು.

| ಲಿಂಗಗಳು | ಒಟ್ಟು ಜ. ಸಂಖ್ಯೆ | ಮಿಶ್ರಲಿಂಗಗಳ | ಸಂಖ್ಯೆ | ಪ್ರತಿ ಲಿಂಗಕ್ಕೆ ಜ. ಸಂಖ್ಯೆ | ಜಪಕ್ಕೆ ಹತ್ತುವ ವೇಳೆ ಪಳಗಳು | ಪಳಕ್ಕೆ ಜಪಗಳು |
|---|---|---|---|---|---|---|
| ಆಚಾರಲಿಂಗ | ೧೭೨೮ | ಆಚಾರಲಿಂಗ ಮಿಶ್ರ | ೬ | ೨೮೮ | ೪೮ | ೬ |
| ಗುರುಲಿಂಗ | ೨೫೯೨ | ಗುರುಲಿಂಗ ಮಿಶ್ರ | ೬ | ೪೩೨ | ೭೨ | ೬ |
| ಶಿವಲಿಂಗ | ೪೩೨೦ | ಶಿವಲಿಂಗ ಮಿಶ್ರ | ೬ | ೭೨೦ | ೧೨೦ | ೬ |
| ಜಂಗಮಲಿಂಗ | ೫೧೮೪ | ಜಂಗಮಲಿಂಗ ಮಿಶ್ರ | ೬ | ೮೬೪ | ೧೪೪ | ೬ |

ಪ್ರಸಾದಲಿಂಗ ೬೯೧೨ ಪ್ರಸಾದಲಿಂಗ ೬ ೧೧೫೨ ೧೯೨ ೬
ಮಿಶ್ರ
ಮಹಾಲಿಂಗ ೮೬೪ ಮಹಾಲಿಂಗ ೬ ೧೪೪ ೨೪ ೬
ಮಿಶ್ರ ೩೬

ಈ ಪ್ರಕಾರ ೩೬ ಸ್ಥಳಗಳಿಗೆ ಸಂಬಂಧಿಸಿ ಜಪಗಳನ್ನು ಮಾಡುವುದು.

ಅಷ್ಟದಳಕ್ಕೆ ಜಪದ ವಿವರಃ— ಹೃದಯದಲ್ಲಿ ಅಷ್ಟದಳ ಕಮಲವಿದೆ. ಅಲ್ಲಿ ಪ್ರಾಣಲಿಂಗವು ನೆಲೆಗೊಂಡಿದೆ. ದಳಗಳಿಗನುಸರಿಸಿ ಪ್ರಾಣದ ಗುಣಗಳು ಉಂಟಾಗುತ್ತವೆ. ಅವುಗಳ ಬಲವುಗಳನ್ನು ಲಿಂಗಜಪದಿಂದ ಸರಿಪಡಿಸುವುದು.

| | | | | | | |
|---|---|---|---|---|---|---|
| (೧) | ಪೃಥ್ವಿ | ತತ್ವದ | ಪೂರ್ವ | ದಳಕ್ಕೆ | ಜಪ | ೫೦೦೦ |
| (೨) | ಅಪ್ಪು | ,, | ವರುಣ | ,, | ,, | ೪೦೦೦ |
| (೩) | ಅಗ್ನಿ | ,, | ಅಗ್ನಿ | ,, | ,, | ೩೦೦೦ |
| (೪) | ವಾಯು | ,, | ವಾಯುವ್ಯ | ,, | ,, | ೨೦೦೦ |
| (೫) | ಆಕಾಶ | ,, | ಈಶಾನ್ಯ | ,, | ,, | ೧೦೦೦ |
| (೬) | ಸೂರ್ಯ | ,, | ಯಮ | ,, | ,, | ೨೪೫೦ |
| (೭) | ಚಂದ್ರ | ,, | ನೈಋತ್ಯ | ,, | ,, | ೩೨೦೦ |
| (೮) | ಆತ್ಮ | ,, | ಕುಬೇರ | ,, | ,, | ೧೦೦೦ |
| | | | | | ಒಟ್ಟು | ೨೧೬೦೦ |

ಷಟ್‌ಸ್ಥಲಗಳಿಗೆ ೧೦೧ ಸ್ಥಲಗಳ ಸಂಬಂಧಃ— ಜಪಗಳ ಮೂಲಕ ಈ ಸಂಬಂಧವು ದೃಢಪಡುತ್ತದೆ. ಭಕ್ತಸ್ಥಳ ೧೫ ಆಚಾರಲಿಂಗಸ್ಥಳ ೯ ಇವು ಇಷ್ಟಲಿಂಗದ ವೃತ್ತದಲ್ಲಿ ಸಂಬಂಧವು. ಮಹೇಶ್ವಸ್ಥಳ ೯ ಗುರುಲಿಂಗಸ್ಥಳ ೯ ಇವು ಇಷ್ಟಲಿಂಗದ ಕಟಿಯಲ್ಲಿ ಸಂಬಂಧವು. ಪ್ರಸಾದಿಸ್ಥಲ ೭ ಶಿವಲಿಂಗಸ್ಥಲ ೯ ಇವು ಇಷ್ಟಲಿಂಗದ ವರ್ತುಳದಲ್ಲಿ ಸಂಬಂಧವು. ಪ್ರಾಣಲಿಂಗಿಸ್ಥಲ ೫ ಜಂಗಮಲಿಂಗಸ್ಥಲ ೧೨ ಇದ್ದು ಇವು ಇಷ್ಟಲಿಂಗದ ಗೋಮುಖದಲ್ಲಿ ಸಂಬಂಧವು. ಶರಣಸ್ಥಲ ೪, ಪ್ರಸಾದ ಲಿಂಗಸ್ಥಲ ೯ ಇದ್ದು ಇವು ಲಿಂಗದ ನಾಳವಲ್ಲಿ ಸಂಬಂಧವು. ಐಕ್ಯಸ್ಥಲ ೪ ಮಹಾಲಿಂಗಸ್ಥಲ ೯ ಇವು ಇಷ್ಟಲಿಂಗದ ಗೋಳಕದಲ್ಲಿ ಸಂಬಂಧವು.

ಹೀಗೆ ಅಂಗಸ್ಥಲಗಳು ೪೪, ಲಿಂಗಸ್ಥಲಗಳು ೫೭ ಅಂತು ೧೦೧ ಸ್ಥಲಗಳು ಇವೆ. ಇವುಗಳನ್ನು ಮೇಲೆ ಹೇಳಿದಂತೆ ಇಷ್ಟಲಿಂಗದ ಷಡ್ವಿಧ ಸ್ಥಾನಗಳಲ್ಲಿ ಸಂಬಂಧ ಮಾಡಿಕೊಂಡು ಭಕ್ತಿಜ್ಞಾನ ವೈರಾಗ್ಯದಿಂದಾಚರಿಸುತ್ತ ಜಪಗಳ ಮೂಲಕ ಲಿಂಗಸಂಬಂಧ ಮಾಡಿಕೊಂಡಲ್ಲಿ ಲಿಂಗವು ತನ್ನಲ್ಲಿ ಪ್ರಕಟವಾಗುತ್ತದೆ. ಜಪಗಳ ಕಾರ್ಯವು ಇದೇ ಇರುತ್ತದೆ.

ಟೀಪು:— ಮೇಲ್ಕಂಡ ವಿವರಣೆಗಳಲ್ಲಿ ಮಂತ್ರಗಳ ಜಪದಲ್ಲಿ ಒಂದು ವ್ಯವಸ್ಥೆ ಇದ್ದದ್ದು ವಾಚಕರಿಗೆ ಕಂಡುಬರದೆ ಇರಲಾರದು. ನ, ಮ, ಶಿ, ವಾ, ಯ, ಓಂ ಇವು ಕ್ರಮವಾಗಿ ಸ್ಥೂಲದಿಂದ ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತ ಹೋಗುವದರಿಂದ ಇವು ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಿಗೆ ಸಂಬಂಧಿಸುತ್ತವೆ. ಈ ಆರು ಅನುಕ್ರಮವಾಗಿ ಇಷ್ಟ, ಪ್ರಾಣ, ಭಾವಲಿಂಗಗಳಿಂದ ಎರಡೆರಡರಂತೆ ಉಂಟಾಗಿವೆ. ಇವು ಮೂರು ಅ ಉ ಮ ಪ್ರಣವಂಗಳಿಂದಾಗಿವೆ. ಈ ತ್ರಿವಿಧಗಳು ಸೂಕ್ಷ್ಮವಾದವು. ಅವು ಇಷ್ಟ ಪ್ರಾಣ ಭಾವಲಿಂಗಗಳನ್ನು ಸೂಚಿಸುತ್ತವೆ. ಮತ್ತು ಈ ತ್ರಿವಿಧ ಲಿಂಗಗಳ ತರುವಾಯ ಶೂನ್ಯಲಿಂಗಗಳು ಬರುತ್ತವೆ. ಇವು ಬ, ಸ, ವ್ಹ ಪ್ರಣಮಗಳಿಂದ ಸೂಚಿತವಾಗುತ್ತವೆ. ಈ ತತ್ವವನ್ನನುಸರಿಸಿ ಎಲ್ಲ ಜಪಗಳ ರಚನೆ ಇರುತ್ತದೆ. ಈಪ್ರಣಮಗಳನ್ನು ಆಯಾ ಲಿಂಗಗಳಿಗೆ ಸಂಬಂಧಿಸುವಲ್ಲಿ ಹ್ರಾಂ, ಹ್ರೀಂ ಹ್ರೂಂ, ಹ್ರೈಂ, ಹ್ರೌಂ,ಹ್ರಃ ಎಂಬ ಷಟ್ ಪ್ರಸಾದ ಮಂತ್ರವು ಅಥವಾ ಕೀಲಕಮಂತ್ರವು ಉಪಯೋಗಿಸಲ್ಪಡುತ್ತದೆ. ಈ ತತ್ವಗಳನ್ನು ಎಲ್ಲ ಮಂತ್ರಗಳಲ್ಲಿಯೂ ಕಾಬಹುದು. ಒಮ್ಮೊಮ್ಮೆ ಈ ಮಂತ್ರಾಕ್ಷರಗಳನ್ನು ಏಕಕಾಲಕ್ಕೆ ಗೋಚರಕ್ಕೆ ತಂದುಕೊಂಡು ಯಾವ ವಿಶಿಷ್ಟಲಿಂಗವನ್ನು ನಾವು ಉದ್ದೇಶಿಸಿಕೊಂಡಿರುತ್ತೇವೆಯೋ ಅದನ್ನಷ್ಟೇ ಕಡೆಗೆ ಅಂದುಬಿಡುವ ಪದ್ಧತಿಯೂ ಉಂಟು. ಆದರೆ ಇದರಿಂದ ಮೂಲ ತತ್ವಕ್ಕೆ ಯಾವದೂ ವ್ಯತ್ಯಯು ಬರುವದಿಲ್ಲ. ಜಪಗಳ ಸಂಖ್ಯೆಯು ಆಯಾ ಚಕ್ರಗಳ ದಳಗಳ ಮೇಲೆ ಅವಲಂಬಿಸಿರುತ್ತದೆ. ದಳಗಳಲ್ಲೆಲ್ಲ ರುದ್ರರೂ ಶಕ್ತಿಯರೂ ವಾಸಮಾಡುತ್ತಾರೆ. ಅವರ ಸಂಗಮದಿಂದ ಆಯಾ ಚಕ್ರಗಳಲ್ಲಿ ಕೆಲವೊಂದುಲೈಂಗಿಕ ಶಕ್ತಿಯು ಉಂಟಾಗುತ್ತದೆ. ಈ ಶಕ್ತಿಯಲ್ಲಿಯೇ ಆಯಾ ಲಿಂಗಗಳು ನೆಲೆಗೊಂಡಿರುತ್ತವೆ. ಹೀಗೆ ಆಯಾ ಲಿಂಗಗಳು ನೆಲೆಗೊಳ್ಳಲು, ಆ ಲಿಂಗಗಳ ಆಧೀನದಲ್ಲಿಯೇ ಮನುಷ್ಯನ

ಕಾರ್ಯಗಳು ಜರಗಹತ್ತುವವು, ಆಗ ಆವನಲ್ಲಿ ಒಂದು ಅಲೌಕಿಕ ಶಕ್ತಿಯು ಒಡಮೂಡುತ್ತದೆ. ಶಿವಶರಣರಲ್ಲಿ ಇಂಥ ಶಕ್ತಿಯು ಇರುತ್ತದೆ. ಆದರೆ ಅವರು ಅದನ್ನು ಆತ್ಮೋದ್ಧಾರಕ್ಕೆ ಮತ್ತು ಜನಸೇವೆಗೆ ಉಪಯೋಗ ಮಾಡತಕ್ಕದ್ದೇ ಹೊರ್ತು ಸ್ವಾರ್ಥಕ್ಕೆ ಅಥವಾ ದುಷ್ಟ ಕಾರ್ಯಗಳಿಗೆ ಉಪಯೋಗಿಸತಕ್ಕದ್ದಲ್ಲ. ಹೀಗೆ ಜಪಗಳು ಮನುಷ್ಯನ ಕ್ರಿಯೆಗಳಲ್ಲಿ, ನಡೆಯಲ್ಲಿ ಕಾಯಕದಲ್ಲಿ, ಸಹಾಯವಾಗುತ್ತದೆ.

ಜಪದ ಕಟ್ಟಳೆ:— ಒಂದು ಉಶ್ವಾಸನಿಶ್ವಾಸಕ್ಕೆ ಒಂದು ಜಪವಿರುತ್ತದೆ. ಇಂಥ ಒಂಭತ್ತು ಉಶ್ವಾಸನಿಶ್ವಾಸಗಳಾವಲ್ಲಿ ಚಿಟ್ಟಿ ಎಂಬ ಹೆಸರಿದೆ. ತಾಸಿಗೆ ೯೦೦ ಜಪಗಳಾಗತಕ್ಕದ್ದು. ಅಂದರೆ ಒಂದು ಮಿನಿಟಗೆ ೧೫ ಜಪಗಳ ಪ್ರಮಾಣವಿರುತ್ತದೆ. ತಾಸಿಗೆ ೯೦೦ ಜಪದಂತೆ ೨೪ ತಾಸಿಗೆ ೨೧೬೦೦ ಜಪಗಳಾಗುತ್ತವೆ. ಇದು ಜಪದ ಕಟ್ಟಳೆ.

ಮಿಶ್ರಾರ್ಪಣವು:— ಅಂತರಂಗ ಬಹಿರಂಗವಲ್ಲೆಲ್ಲ ಲಿಂಗದೊಡಗೂಡಿರುವುದೇ ಮಿಶ್ರಾರ್ಪಣವು. ಅಷ್ಟಾವರಣಗಳನ್ನು ತಿಳಿದವರಿಗೆ ಮಾತ್ರ ಇದು ಸಾಧ್ಯವು. ಇದರಲ್ಲಿ ಕಾಯಾರ್ಪಣ, ಕರಣಾರ್ಪಣ ಭಾವಾರ್ಪಣ ವೆಂದು ಮೂರು ವಿಭಾಗಗಳಿವೆ. ಕಾಯಾರ್ಪಣವು ಹಿಂದೆ ಹೇಳಲ್ಪಟ್ಟಿವೆ. ಕರಣಾರ್ಪಣದಲ್ಲಿ ಆಚಾರಲಿಂಗ ಮಿಶ್ರ ೬, ಗುರುಲಿಂಗ ಮಿಶ್ರ ೬, ಶಿವಲಿಂಗ ಮಿಶ್ರ ೬, ಜಂಗಮಲಿಂಗ ಮಿಶ್ರ ೬, ಪ್ರಸಾದಲಿಂಗ ಮಿಶ್ರ ೬, ಮಹಾಲಿಂಗ ಮಿಶ್ರ ೬, ಹೀಗೆ ೩೬ ವಿಧಗಳಿವೆ. ಅವುಗಳ ವಿವರಗಳು ಹಿಂದೆ ಹೇಳಲ್ಪಟ್ಟಿವೆ. ಈ ಪ್ರಕಾರ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳೊಳಗೆ ಷಡ್ವಿಧಲಿಂಗ ಮಿಶ್ರಾರ್ಪಣವು ಪಸರಿಸಿ ಆ ೩೬ ಮಿಶ್ರಾರ್ಪಣದೊಳಗೆ ೨೧೬ ಮಿಶ್ರಾರ್ಪಣವು ಪಸರಿಸಿ ಲಿಂಗ ಪರಿಪೂರ್ಣನಾಗಿ ಪಿಂಡಾಂಡದಲ್ಲಿ ಸದಾ ಸನ್ನಿಹಿತನಾಗಿರುತ್ತಾನೆ. ಈ ಷಡ್ವಿಧ ಲಿಂಗಗಳು ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ, ಸದ್ಭಾವ, ಎಂಬ ಹಸ್ತಗಳು ತನ್ನಲ್ಲಿ ಸ್ವಸ್ಥವಾಗಿ ನೆಲೆಗೊಂಡಲ್ಲದೆ ಸಾಧ್ಯವಾಗವು. ಷಡ್ವಿಧಲಿಂಗ ಸಂಯೋಗವಾದಲ್ಲದೆ ಷಡ್ವಿದಾರ್ಪಣದ ಮಿಶ್ರದೊಳಗಣ ಮಿಶ್ರಾರ್ಪಣದ ಛಾಯೆ ಕಾಣಿಸದು. ಅದ್ದರಿಂದ ಹಸ್ತಗಳು ತನ್ನಲ್ಲಿ ನೆಲೆಗೊಳ್ಳುವ ರೀತಿಯನ್ನು ಅರಿಯಬೇಕು. ಅದು ಹೇಗೆಂದರೆ:—

• ಸುಚಿತ್ತದ ನೆಲೆಃ— ಕ್ರಿಯಾಶಕ್ತಿಯ ಮಥನದಿಂದ ಪ್ರಾಣವಾಯುವನ್ನು ನಿಲಿಸಿ ಆಧಾರ ಚಕ್ರದ ಕೆಂಪುವರ್ಣದ ನಾಲ್ಕು ಅಕ್ಷರದ ಅಧಿದೈವವಾದ ಬ್ರಹ್ಮನ ಜಾಗ್ರತಾವಸ್ಥೆಯನ್ನು ನಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ಈ ಷಡ್ವಿಧ ವಿಚಾರವಿಡಿದು ಸದ್ಭಕ್ತಿಯಿಂದ ಒಂದನೇ ತತ್ವದಾದಿಯ ಪಶ್ಚಿಮ ದಿಕ್ಕಿನ ಸದ್ಯೋಜಾತ ಮುಖ್ಯವನ್ನರಿತು ಪೃಥ್ವಿಯ ಕಠಿಣವನ್ನು ಕಿಂಕುರ್ವಾಣ ಭಕ್ತಿಯಿಂದ ತಿಳಿದು ತನುಗುಣನಾಸ್ತಿಯಾಗಬೇಕು. ಹೀಗೆ ಭಕ್ತಸ್ಥಲವನಂಗಂಗೊಳ್ಳಬೇಕು. ಇದು ಸುಚಿತ್ತದ ನೆಲೆಯು ಹೀಗೆ ಆಚಾರಲಿಂಗದ ಮಿಶ್ರವನ್ನರಿಯಬೇಕು.

ಸುಬುದ್ಧಿಯ ನೆಲೆಃ— ಜ್ಞಾನ ಶಕ್ತಿಯ ಮಥನದಿಂದ ಅಪಾನವಾಯುವ ನಿಲಿಸಿ ಸ್ವಾಧಿಷ್ಠಾನ ಚಕ್ರದ ನೀಲವರ್ಣದ ಷಡ್ದಳದ ಆರಕ್ಷರದ ಅಧಿದೈವವಾದ ವಿಷ್ಣು ಆತನ ಸ್ವಪ್ನಾವಸ್ಥೆಯನ್ನು ಮಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು- ತಿಳಿದು ನೈಷ್ಠಿಕಾಭಕ್ತಿಯಿಂದ ಎರಡನೆಯ ತತ್ವದಾದಿಯ ಉತ್ತರ ದಿಕ್ಕಿನ ವಾಮದೇವಮುಖವನರಿತು ಅಪ್ಪುವಿನ ಮೃದುವನು ದೃಢವ್ರತದಿಂದ ತಿಳಿದು ಸಂಸಾರನಾಸ್ತಿಯಾಗಬೇಕು. ಹೀಗೆ ಮಹೇಶ್ವರ ಸ್ಥಲವನಂಗಂಗೊಳ್ಳಬೇಕು. ಇದು ಸುಬುದ್ಧಿಯ ನೆಲೆಯು. ಹೀಗೆ ಗುರುಲಿಂಗದ ಮಿಶ್ರವನ್ನರಿಯಬೇಕು.

ನಿರಹಂಕಾರದ ನೆಲೆಃ— ಇಚ್ಛಾ ಶಕ್ತಿಯ ಮಥನದಿಂದ ವ್ಯಾನವಾಯುವ ನಿಲಿಸಿ ಮಣಿಪೂರಕ ಚಕ್ರದ ಕುಂಕುಮ ವರ್ಣದ ದಶದಳದ ಅಧಿದೈವ ರುದ್ರ ಆತನ ಸುಷುಪ್ತ್ಯಾವಸ್ಥೆಯನ್ನು ಶಿಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರವಿಡಿದು ಅವಧಾನ ಭಕ್ತಿಯಿಂದ ಮೂರನೆಯ ತತ್ವದಾದಿಯಾದ ದಕ್ಷಿಣ ದಿಕ್ಕಿನ ಅಘೋರ ಮುಖವನರಿದು ಅಗ್ನಿಯ ಉಷ್ಣವನ್ನು ಶಿವಯೋಗದಿಂದ ಕೆಡಿಸಿ ಕಾಮ್ಯನಾಸ್ತಿಯಾಗಬೇಕು. ಹೀಗೆ ಪ್ರಸಾದಿಸ್ಥಲವನಂಗಂಗೊಳ್ಳಬೇಕು. ಇದು ನಿರಹಂಕಾರದ ನೆಲೆಯು. ಈ ಪ್ರಕಾರ ಶಿವಲಿಂಗದ ಮಿಶ್ರವನ್ನರಿಯಬೇಕು.

ಸುಮನದ ನೆಲೆಃ— ಆದಿಶಕ್ತಿಯ ಮಥನದಿಂದ ಉದಾನವಾಯುವ ನಿಲಿಸಿ ಅನಾಹತ ಚಕ್ರದ ಪೀತಶವರ್ಣದ ದ್ವಾದಸ ದಳದ ದ್ವಾದಶಾಕ್ಷರದ ಅಧಿದೈವ ಈಶ್ವರನ ತೂರ್ಯಾವಸ್ಥೆಯನ್ನು ವಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ಈ ಷಡ್ವಿಧ ವಿಚಾರವಿಡಿದು ಅನುಭಾವ ಭಕ್ತಿಯಿಂದ ನಾಲ್ಕನೆಯ ತತ್ವದಾದಿಯಾದ ಪೂರ್ವ ದಿಕ್ಕಿನ ತತ್ಪುರುಷ ಮುಖವನ

# ಶಿವಾನುಭವ

ಸಂಪುಟ ೨೬ ]

[ ಸಂಚಿಕೆ ೧೦

ಸಂಪಾದಕ

**ಫ. ಗು. ಹಳಕಟ್ಟಿ,**

ಬಿ.ಎ. ಎಲ್‌.ಎಲ್‌.ಬಿ.



ವಾ.ಚಂ. ೫-೧೨-೦ ] ವಿಜಾಪುರ. [ ಅಕ್ಟೋಬರ ೧೯೫೨

# ವಿಷಯಾನುಕ್ರಮಣಿಕೆ.



---


**ಶಿವಾನುಭವ ಮಾಸಪತ್ರಿಕೆ,**

**ವಿಜಾಪುರ.**

**ವಾರ್ಷಿಕ ಚಂದಾ ೫—೧೨—೦**

# ಶಿವಾನುಭವ


| ವರ್ಷ ೨೬ | ಅಕ್ಟೋಬರ ೧೯೫೨ | ಸಂಚಿಕೆ ೧೦ |
| --- | --- | --- |


## ಮುಕ್ತಿಯ ಸಾಧನೆ.

(ಲೇಖಕ:- ಶ್ರೀ. ಎನ್. ಆರ್. ದೇಸಾಯಿ, ವಕೀಲ ಸಿಂದಗಿ.)

೧. " ಹಾವಿನ ಹಲ್ಲು ಕಳೆದು ಹಾವಾಡಿಸ ಬಲ್ಲಡೆ,
ಹಾವಿನ ಸಂಗವೇ ಲೇಸು ಕಂಡಯ್ಯಾ.
ಕಾಯದ ಸಂಗವ ವಿವರಿಸ ಬಲ್ಲಡೆ,
ಕಾಯದ ಸಂಗವೇ ಲೇಸು ಕಂಡಯ್ಯಾ.
ತಾಯಿ ರಕ್ಕಸಿಯಾದಂತೆ, ಕಾಯ ವಿಕಾರವು.
ಚನ್ನಮಲ್ಲಿಕಾರ್ಜುನಯ್ಯಾ.
ನೀನೊಲಿದವರು ಕಾಯಗೊಂಡಿದ್ದರೆನಬೇಡ. "

( ನಾನು ಕಂಡ ಗುರು, ಪುಟ ೪೧-೧೧೬ )

ಇದು ಒಂದು ಅಕ್ಕಮಹಾದೇವಿಯ ತತ್ವಯುಕ್ತ ವಚನ. ಅಕ್ಕನ ವಚನಗಳು ಉಚ್ಚ ಮಟ್ಟದ ತತ್ವಜ್ಞಾನದಿಂದ ತುಂಬಿದುವು ಇರುವವಲ್ಲದೆ, ಅವಳು ಕಂಡ ಅನುಭಾವ ಗಂಗೆಯಿಂದಲೂ ತುಂಬಿ ತುಳುಕುವವು. ಅವಳು ಮೋಕ್ಷವೆಂಬುದನ್ನು ಇಲ್ಲೇ—ಇದೇ ದೇಹದಲ್ಲಿಯೇ—ಪಡೆದ ವೀರಯೋಗಿಣಿಯು. ಅವಳ ವಚನಗಳ ತಿರುಳು ನಮ್ಮಂಥ ಪಾ
ರರಿಗೆ ಅರಿಕೆಯಾಗುವದೆಂತು! ಆದರೂ ಬೇರೆ ಬೇರೆ ಸಾಧ
ಬೇರೆ ಕೋನದಿಂದ ಆ ತಿರುಳನ್ನು ಅರಿಯಲು ಹೆಣಗಬ

ವಚನಗಳಲ್ಲಿ ಕೆಲವು—ಅದುವೂ ಕೂಡ ಮಹತ್ವವಾದ ಕೆಲವು—ತೋರಿಕೆಗೆ ಹಗುರಾಗಿ ಕಾಣುವವು. ಇಲ್ಲಿ "ಹಾವಿನ ಹಲ್ಲು ಕಳೆದು ಹಾವಾಡಿಸ ಬಲ್ಲಡೆ, ಹಾವಿನ ಸಂಗವೇ ಲೇಸು" ಎಂದು ಹೇಳುವದರಲ್ಲಿ ಏನು ಅರ್ಥವಿದೆ! ಏನು ಹಿರಿತನವಿದೆ! ಹಲ್ಲು ಕಿತ್ತಿದ ಹಾವಿನ ಗೂಡ ಆಡುವದರಲ್ಲಿ ಯಾವ ಪುರುಷತ್ವವಿದೆ!

ಅಂಥ ಹಾವನ್ನು ಗೊಲ್ಲರೂ ಕೂಡ ಬಿಕ್ಕೆಬೇಡಲು ಆಡಿಸುವದಿಲ್ಲವೇ! ಹಲ್ಲು ಕಿತ್ತಿದ ಹಾವನ್ನು ಆಡಿಸುವದಕ್ಕಿಂತಲೂ ರಬ್ಬರಿನ ಹಾವನ್ನು ಆಡಿಸುವದರಲ್ಲಿ ಆನಂದವೇಕೆ ಕಡಿಮೆ! ಇದು ಅಕ್ಕನು ಒಂದು ಜೊಳ್ಳು ಮಾತಿದ್ದೀತೆ! ಇದೇ ಅರ್ಥದಂತೆ ಮುಂದಿನ ವಚನದ ತಾತ್ಪರ್ಯವಿದ್ದೀತೆ! ಹೀಗೆ ಹೊರನೋಟದಿಂದ ಕಂಡುಬರಬಹುದು. ಆದರೆ ಅದು ಹಾಗಲ್ಲ.

ಈ ವಚನದ ಅರ್ಥ ತಿಳಿಯಬೇಕಾದರೆ—ಅದರಂತೆ ಶರಣರ ಯಾವದೇ ವಚನದ ಅರ್ಥ ತಿಳಿಯಬೇಕಾದರೆ— ಒಂದು ಮಾತನ್ನು ಮಾತ್ರ ಶರಣ-ಸಾಹಿತಿ-ಅಭ್ಯಾಸಕರು ಪೂರ್ಣ ತಿಳಿದಿರಬೇಕಾಗುವದು. ಇಲ್ಲಿ "ಚನ್ನಮಲ್ಲಿಕಾರ್ಜುನಯ್ಯಾ, ನೀನೊಲಿದವರು ಕಾಯಗೊಂಡಿದ್ದರೆನಬೇಡ." ಎಂದು ಹೇಳುವದರಲ್ಲಿ ಆ ಗೂಢ ಮಾತು ಅಡಕವಾಗಿದೆ. ಅಂದರೆ, ಪರಮಾತ್ಮನು ಸಂಪೂರ್ಣ ಒಲಿದ ಮೇಲೆ ಪಡೆಯುವ ಸ್ಥಿತಿಯೇ ಮುಕ್ತಿಯು! ಆಗ್ಗೆ ಈ ದೇಹವಿದ್ದರೂ ಅಷ್ಟೇ, ಇಲ್ಲದಿದ್ದರೂ ಅಷ್ಟೇ! ಈ ಮಾತು ನಿಚ್ಚಳ ತಿಳಿಯಬೇಕಾದರೆ, ಮುಕ್ತಿಪಡೆಯುವದು ಎಂದರೆ ಏನು? ಎಂಬುದನ್ನು ತಿಳಿದುಕೊಳ್ಳಬೇಕು. (ನಾನು ಕಂಡ ಗುರು, ಪುಟ ೨೯-೩೨ ಹಾಗು ೭೦ ಟೀಪು). ಮುಕ್ತಿಯ ಮಾರ್ಗವನ್ನು ಆ ಆ ಪಂಥದವರು ಬೇರೆ ಬೇರೆಯಾಗಿ ಗಣಿಸುವರು. ಕೆಲವರು ಸದೇಹ ಮುಕ್ತಿಯೆಂದೂ ಕೆಲವರು ವಿದೇಹ ಮುಕ್ತಿಯೆಂದೂ ಗಣಿಸುವರು.

## ವಿದೇಹ ಮುಕ್ತಿ.

ಒಂದು ಪಂಥದವರು, ಈ ದೇಹವಿರುವ ವರೆಗೆ ಮುಕ್ತಿಯನ್ನು ಪಡೆಯದು ಸಾಧ್ಯವಿಲ್ಲೆಂದೂ, ಈ ದೇಹವಿರುವ ವರೆಗೆ ಕರ್ಮ ಬಿಟ್ಟಿದ್ದಲ್ಲ ತೊಳೆ ಈ ದೇಹವಿರುವ ವರೆಗೆ ಸಾಧನ ಮಾಡಿ ಮಾಡಿ ಕರ್ಮವನ್ನು ಮನವಿಟ್ಟಲ್ಲಿ ತೊಳೆಯುತ್ತ ಸಾಯುವ ಕಾಲಕ್ಕೆ ಪರಮಾತ್ಮನಲ್ಲಿ ಲೀನ ನಂತರ ನಮ್ಮ ಆತ್ಮವೇ ಪರಮಾತ್ಮನಾಗಿ ಪರಿಣಮಿಸ

ಬಹುದೆಂದೂ ಅಥವಾ ಪರಮಾತ್ಮನ ಪಾದಾರವಿಂದದಲ್ಲಿ ನಮ್ಮ ಜೀವವೂ ಸೇರಿ ಸತ್-ಚಿತ್-ಆನಂದಮಯದಲ್ಲಿ ನಿಲ್ಲುವದೆಂದೂ ಹೇಳುವರು. ಅರ್ಥಾತ್, ಈ ದೇಹವು ಅಳಿದ ನಂತರವೇ ನಮಗೆ ಜನನ ಮರಣ ಗಳು ತಪ್ಪುವವು ಎಂಬ ನಿಲುವು. ಅದಕ್ಕಾಗಿ ಈ ಮುಕ್ತಿಗೆ ವಿದೇಹ ಮುಕ್ತಿ ಎನ್ನುವರು. ಇದಕ್ಕೆ ಜನನ-ಮರಣ-ಮುಕ್ತಿ ಎಂಬ ಹೆಸರೂ ಇರುವದು.

## ಸದೇಹ ಮುಕ್ತಿ.

ಆದರೆ ಶರಣರು ನಂಬಿದ್ದು ಈ ಮುಕ್ತಿಯನ್ನಲ್ಲ. ಪರಮಾತ್ಮನು ಒಲಿದ ಮೇಲೆ, ಆ ಪರಮಾತ್ಮನ ಒಲಿಮೆಯ ಮಹಿಮೆಯಿಂದ ಈ ದೇಹದ ವಿಕಾರಗಳನ್ನು ಸಂಪೂರ್ಣವಾಗಿ ಜಯಿಸಿ, ನಾಮ—ರೂಪಗಳನ್ನು ನಷ್ಟ ಗೊಳಿಸಿ, ಅಂತರಾತ್ಮನ ಶ್ರೇಷ್ಠತೆಯನ್ನೂ ನಿಲುವನ್ನೂ ಅರಿತಮೇಲೆ, ಈ ದೇಹಕ್ಕೂ ಅದರಲ್ಲಡಕವಾದ ಆತ್ಮಕ್ಕೂ ಹೊಲಿಗೆಯಂತಿದ್ದ ಸಂಬಂಧವು ಹರಿದುಹೋಗಿ ಎಲ್ಲೆಲ್ಲಿಯೂ ಆ ಪರಮಾತ್ಮನ ಸಮರಸವನ್ನೇ ಕಾಣಬ ಹುದು ಎಂದು ಅನುಭಾವದಿಂದ ಹೇಳುವರು. ಇದಕ್ಕ ಲಿಂಗಾಂಗ ಸಾಮ ರಸ್ಯವೆನ್ನುವರು. (ಪುಟ-೧೨೩) ಪರಮಾತ್ಮನು ಈ ವಿಶ್ವವನ್ನು—ಅರ್ಥಾತ್ ಈ ದೇಹವನ್ನು—ಮುಕ್ತಿಗೆ ಸಾಧನೆಯೆಂದು ದಯಪಾಲಿಸಿದ್ದು ಮುಕ್ತಿ ಯನ್ನು ಪಡೆಯಲು ಅರ್ಹರಾದವರಿಗೆ ಇದಾವದೂ ಅಡ್ಡಬರಲಾರದು. ಇದೆಲ್ಲ ಸಾಧನೆಯಿದ್ದು ಮುಕ್ತಿಯನ್ನು ಪಡೆಯಲು ಶಕ್ತನಾಗದಿದ್ದಲ್ಲಿ, ಸತ್ತಬಳಿಕ ಆ ಮುಕ್ತಿಯನ್ನು ಸಾಧಿಸುವದಾದರೂ ಹೇಗೆ? ಸತ್ತಬಳಿಕ ಅದನ್ನು ಪಡೆಯಲು ಸಾಧನೆಯಾದರೂ ಎಲ್ಲಿ ಉಂಟು?

೭. "ಸತ್ತ ಬಳಿಕ ಮುಕ್ತಿಯ ಪಡೆದಹೆನೆಂದು ಪೂಜಿಸ
ಹೋದರೆ ಆ ದೇವರೇನು ಕೊಡುವನೊ!
ಸಾಯದೆ ನೋಯದೆ ಸ್ವತಂತ್ರನಾಗಿ
ಸಂದು ಭೇದವಿಲ್ಲದಿರ್ದ, ಗುಹೇಶ್ವರಾ, ನಿಮ್ಮ ಶರಣ."

ಎಂದು ಪ್ರಭುವು ಹೇಳುವನು. ನೋಯುವದಾಗಲೀ, ಸಾಯುವ ದಾಗಲೀ ಈ ಬಾಹ್ಯ ದೇಹ ಮಾತ್ರ. ಆತ್ಮಕ್ಕೆ ಸಾವೂ ಇಲ್ಲ, ನೋವೂ

ಇಲ್ಲ. ಆತ್ಮನು ಪರಮಾತ್ಮನಲ್ಲಿ ಯಾವದೇ ಸಂದು ಭೇದ ಅಂದರೆ ಕೂದಲೆಳೆಯಷ್ಟು ಕೂಡ ಭೇದವಿಲ್ಲದೆ ಸಮರಸವಾಗಿ ಕೂಡುವದೇ ಮುಕ್ತಿಯು. ಕಾರಣ ಈ ದೇಹದ ಪ್ರಶ್ನೆಯೇ ಅಲ್ಲಿ ಉದ್ಭವಿಸುವದಿಲ್ಲ.

೩. " ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ
ಹೋಹರೆಂಬ ಬಾಲ ಭಾಷೆಯ ಕೇಳಲಾಗ ೧.
ಸಾಯದ ಮುನ್ನ ಸ್ವಯವನರಿದಡೆ ದೇವನೊಲಿವ,
ನಮ್ಮ ಗುಹೇಶ್ವರನು. "

ಎಂದು ಪ್ರಭುವು ಹೇಳುವನು. ಸಾಯುವ ಪೂರ್ವದಲ್ಲಿಯೇ ಆತ್ಮನ ಅರಿವು ನಿಜವಾಗಿ, ಸ್ಥಿರವಾಗಿ, ಉಂಟಾದರೆ ಸಾಕು. ಅದೇ ಪರಮಾತ್ಮನ ಜ್ಞಾನ. ಅದರಲ್ಲಿ ಸಮರಸೈಕ್ಯವಾಗುವದೇ ಧ್ಯೇಯ. ಅದೇ ಮುಕ್ತಿ ಎಂದು ಹೇಳುವರು. ಇದೇ ಸದೇಹ ಮುಕ್ತಿಯು. ಇದೇ ಸಮರಸ ಮುಕ್ತಿಯು.

ಇನ್ನು ಮೇಲೆ ಹೇಳಿದ " ಹಾವಿನ ಹಲ್ಲು ಕಳೆದು ಹಾವಾಡಿಸಬಲ್ಲಡೆ, ಹಾವಿನ ಸಂಗವೇ ಲೇಸು " ಎಂದು ಹೇಳುವಲ್ಲಿ ಎರಡು ಅರ್ಥಗಳು ಹೊರಡುತ್ತವೆ:—

ಒಂದನೇಯದು:—ಹಾವಾಡಿಸಬೇಕಾದರೆ, ಅದು ಕಡಿಯಬಹುದು ಎಂದು ಅದರ ಬಗ್ಗೆ ನಮ್ಮ ಅಂತರಂಗದಲ್ಲಿ ಇದ್ದ ಅಂಜಿಕೆಯನ್ನು ನಿವಾರಿಸಲು ಮಾತ್ರ ನಾವು ಅದರ ಹಲ್ಲನ್ನು ಕಿತ್ತಬೇಕಾಗುತ್ತದಲ್ಲವೇ ? ಆ ಹಲ್ಲು ಕಿತ್ತಿದ ಮೇಲೆ ಅಂಜಿಕೆಯು ಅಳಿಯಲಾಗಿ ನಾವು ಅದರ ಸಖ್ಯ ಬೆಳೆಯಿಸುತ್ತೇವೆ. ಹಾವನ್ನು ಆಡಿಸಬೇಕಾದರೆ ನಾವು ಅದರ ಗೂಡ ಸಖ್ಯ-ಪ್ರೀತಿ-ಬೆಳೆಸಲೇಬೇಕು. ಕಡಿದೀತೆಂಬ ಭಯವು ನಮ್ಮಲ್ಲಿ ಇದ್ದಲ್ಲಿ ಅದರ ಗೂಡ ಪ್ರೀತಿ ಮಾಡುವದಾದರೂ ಹೇಗೆ ? ಅಂತರಂಗದೊಳಗೆ ಕಡದೀತೆಂಬ ಭಯ— ಬಹಿರಂಗದಲ್ಲಿ ಸಖ್ಯ— ಹೀಗೆ ಎರಡೂ ಕೂಡಿ ನಡೆಯವು. ಈ ಒಳಗೊಂದು ಹೊರಗೊಂದು ಇರುವ ಭೇದವು ಅಳಿಯಲೇಬೇಕು. ಈ ಭೇದವಿದ್ದಲ್ಲಿ ಮನುಷ್ಯರಲ್ಲಿ ಕೂಡ ಸಖ್ಯ ಬೆಳೆಯದು. ಈ ಭೇದ ಅಳಿದಲ್ಲಿ ಮಾತ್ರ ಚಿತ್ತವು ನಿರ್ಮಲವಾಗಿ ಉಳಿಯುವದು. ಈ ಪ್ರಕಾರ ಪ್ರೀತಿಯನ್ನು ಎಲ್ಲೆಲ್ಲಿಯೂ ಭೇದಭಾವವಿಲ್ಲದಲೆ, ಎಲ್ಲೆಲ್ಲಿಯೂ ಸಮರಸವಾಗುವಂತೆ, ಬೆಳೆಸುವದು ಶಕ್ಯವಿದ್ದಲ್ಲಿ ಆ ಪ್ರೀತಿಯೇ ಅನುಕರಣೀಯವು.

ಅಕ್ಕಮಹಾದೇವಿಯು ಇದಕ್ಕೂ ಒಂದು ಹೆಜ್ಜೆ ಮುಂದೆಹೋಗಿ ವಿಮರ್ಶಿಸುವಳು. ಹಾವಿನ ಹಲ್ಲು ಕಳೆದು, ಮೇಲೆ ಹೇಳಿದಂತೆ, ಹಾವಾಡಿಸಲು ಶಕ್ಯವಿದ್ದಲ್ಲಿ ಆ ಪ್ರೀತಿಯನ್ನು ಮತ್ತಿಷ್ಟು ಬೆಳೆಸಿ, ನಿರ್ಮಲಗೊಳಿಸಿ, ಸ್ಥಿರಗೊಳಿಸಿದಲ್ಲಿ, ಹಲ್ಲು ಕಿತ್ತಿದ ಹಾವೇಕೆ ಹಲ್ಲುಳ್ಳ ಹಾವಿನ ಗೂಡ ಆಡಲು ಬಹುದು ಎಂದು ಅಕ್ಕನ ಉಚ್ಚ ಭಾವ.

ಆ ಹಲ್ಲುಗಳಿಗೆ ನಾವು ಅಂಜುವದೇಕೆ? ಕಡದೀತೆಂಬ ಭಯಕ್ಕಾಗಿ ಅಲ್ಲವೇ? ಹಲ್ಲು ತೆಗೆದ ಮೇಲೆ ಕೂಡ ನಮ್ಮೊಡನೆ ಆಡಲು ಹಾವಿನಲ್ಲಿಯೂ ಭಯರಹಿತ ಪ್ರೀತಿ ಹುಟ್ಟಲೇಬೇಕು. ದ್ವೇಷದ ಭಾವ ಅಳಿದಿರಲೇಬೇಕು. ಇಲ್ಲವಾದರೆ ಆಟವು ನೀಟವಾಗದು. ಹಾವು ಓಡಿ ಹೋಗುವದು. ಈ ಭಾವವನ್ನೇ ಆ ಹಲ್ಲು ಇದ್ದಾಗಲೇ ಉಭಯತರಲ್ಲಿ ಹುಟ್ಟಿಸಲಾಗದೆ? ಪ್ರೀತಿಯಿಂದ ಪ್ರೀತಿಹುಟ್ಟುತ್ತದೆ. Love begets Love। ಅಂದಲ್ಲಿ ನಮ್ಮಲ್ಲಿಯ ಭೀತಿಯನ್ನು ಅಳಿದು ಆ ಹಾವಿನಲ್ಲಿಯೂ ಪರಮಾತ್ಮನ ಅಂಶವಿದೆ— ಕೇಡು ಬಗೆಯದಲೆ ಅದು ಕಾಡದು—ಎಂದು ಪ್ರೀತಿಸಹತ್ತಿದಲ್ಲಿ ಅದೇಕೆ ಪ್ರತಿ ಪ್ರೀತಿಯನ್ನು ತೋರಲಾರದು? ನಮಗೆ ಗೊತ್ತಿದೆ, ಹಾವು ತಡುವುದಲೇ ಕಡಿಯದು. ಹತ್ತು ಸಾವಿರ ಜನ ಸಂಖ್ಯೆಯಲ್ಲಿ ಹತ್ತು ವರ್ಷದಲ್ಲಿ ಹಾವು ಕಚ್ಚಿ ಒಬ್ಬನು ಸತ್ತರೆ, ಪ್ರತಿ ವರ್ಷ ನೂರಾರು ಹಾವುಗಳನ್ನು ನಾವು ಕಂಡೊಡನೆ ಕೊಲ್ಲುವೆವು. ನಮಗೆ ಉಪಚಾರಕ್ಕೆ ಮಾರ್ಗವಿದೆ. ಅದಕ್ಕೆ ಯಾವದೇ ಮಾರ್ಗವಿಲ್ಲ. ಹೀಗಾಗಿ, ನಾವು ದುಷ್ಟರೆಂದು ಅದಕ್ಕೆ ಭಯ. ಅದು ದುಷ್ಟವೆಂದು ನಮ್ಮಲ್ಲಿ ಭಯ - ಈ ಉಭಯ ಭಯವನ್ನು ಅಳಿಯುವದರಲ್ಲಿಯೇ ಜಾಣ್ಮೆ ಇದೆ.

ತಾವು ತಮ್ಮ ಆಯುಷ್ಯವನ್ನೇ ಅಡವಿಯ ಆಶ್ರಮದಲ್ಲಿ ನಿರ್ಭಯದಿಂದ ಕಳೆದರೂ ತಮ್ಮ ಆಶ್ರಯವಾಸಿಗಳಿಗೆ ಒಂದೂ ಹಾವು ಕಡಿದಿರುವದಿಲ್ಲೆಂದೂ ತಾವು ಹಾವನ್ನೇ ಎಂದೂ ಹೊಡೆಯುವದಿಲ್ಲ—ದ್ವೇಷಿಸುವದಿಲ್ಲ—ವೆಂದೂ ಮಹಾತ್ಮಾಜಿಯವರು ಪ್ರತ್ಯಕ್ಷ ಪರೀಕ್ಷಿಸಿ ಕಂಡ ಅನುಭವವು ಅಕ್ಕನ ಈ ವಚನವನ್ನು ಪುಷ್ಟೀಕರಿಸುತ್ತಿದೆ.

ಈ ಸತ್ಯವನ್ನು ನಾವು ನಮ್ಮ ಶ್ರೀಗುರುಗಳಾದ ಮುಧೋಳದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರ ಗವಿಮಠದಲ್ಲಿಯೂ ಕಾಣ

ಬಹುದು. ಮುಧೋಳಿದ ಗವಿಮಠವು ಊರಿಂದ ಅರ್ಧ ಮೈಲಿನ ಮೇಲೆ ಅಡವಿಯಲ್ಲಿ ಇದೆ. ಇದು ಋಷಿಗಳ ಒಂದು ಆಶ್ರಮವಾಗಿದೆ. ಆ ಮಠದ ಸುತ್ತುಮುತ್ತಲು ಎತ್ತರವಾದ ಹುಣಶಿ ಮಾವು - ಬೇವಿನ ಮರಗಳು ಬೆಳೆದು ನಿಂತಿವೆ. ಮಠದ ಒಳಗೆ ಭವ್ಯ ಅವಾರ, ಸುತ್ತಲೂ ಅವಾರ ಗೋಡೆ. ಅದರ ಮಧ್ಯದಲ್ಲಿ ರಮ್ಯವಾದ ಗವಿಮಠ. ಆ ಮಠದ ಮುಂದೆ ನಿಲುವಾಗಿ ನಿಂತ ನಿಬಿಡವಾದ ಬಿಲ್ವವೃಕ್ಷಗಳು. ಆ ಮಠಕ್ಕೆ ನೆರಳು ಮಾಡು ವವಲ್ಲದೆ ತಮ್ಮ ಚಿಗುರೆಲೆಗಳಿಂದ ಚಾಮರ ಬೀಸುವಂತೆ ಬೀಸುವವು. ಆ ಬಿಲ್ವವೃಕ್ಷದ ಎಡಬಲದಲ್ಲಿ ದಟ್ಟವಾದ ಮಲ್ಲಿಗೆ ಕಂಟಿಗಳು ಪಸರಿಸಿ ಮುಂಭಾಗದಲ್ಲೆಲ್ಲ ತುಂಬಿವೆ. ಅದಕ್ಕೆ ಹೊಂದಿ ಬಲಮೂಲಿಯಲ್ಲಿ ಒಂದು ಭಾವಿ ಇದೆ, ಅಲ್ಲಿ ಸ್ನಾನ ಮಾಡಲೂ ಸೌಕರ್ಯವಿದೆ ಗಿಡಮೂಲಿಕೆಗ ಳಿಗಾಗಿ ನೀರನ್ನೆತ್ತಲು ಸಾಧನೆಯಿದೆ. ಅಲ್ಲಿಯೇ ತೆಂಗಿನ ಮರಗಳು ನಂದಿಕೋಲಿನಂತೆ ಮುಗಿಲುಮುಟ್ಟಿವೆ. ಹೀಗಾಗಿ ಆ ಗಿಡಬಳ್ಳಿಗಳು ಹುಚ್ಚೆದ್ದು ಬೆಳೆದು ನಿಂತಿವೆ. ಮಠದ ಪೂಜೆಗಾಗಿ ತಮ್ಮ ಸೇವೆಯೆಂದು ಹೂ-ಕಾಯಿ-ಎಲೆಗಳನ್ನು ಅರ್ಪಿಸಲು ಇವೆಲ್ಲ ಹಸನ್ಮುಖದಿಂದ, ಕೈಜೋಡಿಸಿ ಸಾಲಾಗಿ ನಿಂತಂತೆ ಕಾಣುತ್ತವೆ. ಹೋಗಬೇಕಾದರೆ ಈ ಬನದೊಳಗಿಂದ ಹಾಯ್ದು ಅಂದವಾಗಿ ಜೋಡಿಸಿದ ಕಲ್ಲಿನ ಫರಸಿಯ ಮೇಲೆ ಹಾಯ್ದು ಹೋಗಬೇಕಾಗುವದು. ಇಂಥ ಸ್ಥಳದಲ್ಲಿ ಕೂಡ ಶಾಂತ—ಆನಂದಮಯ— ವಾತಾವರಣ ತುಂಬಿದೆ. ಹಾವು ಚೇಳಿನ ಭಯವಾಗಲಿ ಕಳ್ಳಕಾಕರ ಭಯವಾಗಲಿ ಕನಸಿನಲ್ಲಿ ಕೂಡ ಸುಳಿಯದು. ಅಲ್ಲಿ ಒಮ್ಮೊಮ್ಮೆ ಒಬ್ಬೊಂಟಿಗರಾಗಿ ರಾತ್ರಿಯನ್ನು ಕೂಡ ನಮ್ಮ ಶ್ರೀಗುರುಗಳು "ಕಳ್ಳನ ಕಳ್ಳಸಂಗ"ನನ್ನು ಹುಡುಕುತ್ತ ಕಳೆಯುವರು. ಅವರಿಗೆ ಯಾತರ ಭಯ! ಭಯವನ್ನು ಅಳಿದು ನಿರ್ಭಯವನ್ನು ಹರಡಿದ ಅವರಿಗೆ ಕ್ರೂರತನದ ಭಯವೆಲ್ಲಿ? ಆ ಕ್ರೂರ ಜೀವಿಗಳು ಕೂಡ ಅವರೆಡೆ ಬಂದಲ್ಲಿ ಅವರ ಪ್ರೇಮಾನಂದಮಯ ಭಾವದಲ್ಲಿ ಮುಳುಗಿ ಅವುಗಳ ಕ್ರೂರತನವು ನಾಶ ವಾಗುವಾಗ್ಗೆ ಉಳಿದ ಕ್ರೂರ ಪ್ರಾಣಿಗಳ ಪಾಡೇನು? ಇಲ್ಲಿ ಕಾಣು ವದು—ತೋರುವದು—ಪರಿಣಮಿಸುವದು—ವಿಕಾರ ಮೀರಿ ನಿಂತ ಪ್ರೇಮ ಮಯದ ಒಂದು ಭಾವ ಮಾತ್ರ. ಭಯವಿಲ್ಲದ ನಿರ್ಭಯನ ಚೆಲುವ ನೆಡೆ ಯಲ್ಲಿ ಭಯವು ಉಳಿಯುವದಾದರೂ ಹೇಗೆ!

ಇಲ್ಲಿ ಅನುಭವದಿಂದ ಕಂಡ ಮತ್ತೊಂದು ಮಾತನ್ನು ಬರೆಯುವೆನು. ಒಂದುದಿನ ನಾವು ಕೆಲವು ಮಿತ್ರರು ಕೂಡಿ ನಮ್ಮೆಲ್ಲರ ಮಿತ್ರರಾದ ಶ್ರೀಮಾನ್ ಎ. ಎ. ಕಲಬುರ್ಗಿಯವರ ಮನೆಯಲ್ಲಿ ಕುಳಿತಿದ್ದೆವು ಆಗ್ಗೆ ಅವರ ಮೂರು ವರ್ಷದ ಬಾಲಿಕೆಯು ಆಡುತ್ತ ಆಡುತ್ತ ನಮ್ಮೆಡೆಗೆ ಬಂದಳು. ನಮ್ಮೊಳಗಿನ ಒಬ್ಬರು ಆ ಮಗುವಿಗೆ ತಿನ್ನಲು ಪೇಪರಮಿಂಟನ್ನು ಕೊಡ ಹೋದರು. ಆಮಗು ಆ ತಿನಸನ್ನು ನಿರಾಕರಿಸಿದಳು. ಅದರ ಕಾರಣವೇ ತಿಳಿಯಲಿಲ್ಲ. ಈಗ ನಮ್ಮಲ್ಲಿಯ ಅನುಭಾವಿಗಳಾದ ಶ್ರೀಮಾನ್ ಜೋಗೂರ ರುದ್ರಪ್ಪನವರು ತಾವು ಕೊಡುವದಾಗಿ ಮುಂದೆ ಬಂದರು. ಅವರು ಆ ಮಗುವಿನ ಗೂಡ ಆತ್ಮ ತಟ್ಟುವಂತೆ, ಅರ್ಥಾತ್ ಅವಳಲ್ಲಿಯ ಭಯ ನಿವಾರಣೆಯಾಗುವಂತೆ, ಸಲಿಗೆಯಿಂದ ಪ್ರೀತಿ ಪೂರ್ವಕವಾಗಿ ಮಾತನಾಡಿ ಆತ್ಮೀಯತೆಯನ್ನು ಬೆಳೆಯಿಸಿ ಕೊಡಹೋಗಲು ಆ ಮಗುವು ಒಮ್ಮೆಲೆ ಅದನ್ನು ಸ್ವೀಕರಿಸಿದಳು. ಇದು ಹೀಗೇಕೆ? ಆ ಮಗೂ ಎಲ್ಲರಿಗೂ ಅಪರಿಚಿತಳು. ಆದರೂ ನಮ್ಮ ಬಗ್ಗೆ ಒಂದು ತರದ ಭಯ. ಏನು ಕೊಡುವೆಯೊ ಎಂಬ ಭಯ ! ಕೊಡುವ ನಟನೆಮಾತ್ರ ಮಾಡುವೆವೋ ಎಂಬ ಭಯ! ಅರಿಯದ ನಾವು ಕೊಡುವದಾದರೂ ಏಕೆ ಎಂಬ ಭಯ ! ಮುಂದೆ ಆತ್ಮೀಯತೆ ಹುಟ್ಟಿದಾಗ ಆ ಭಯ ನಾಶವಾಯಿತು. ನಿರ್ಮಲ ಪ್ರೀತಿ ಹುಟ್ಟಿತು. ಪ್ರೀತಿಹುಟ್ಟಿ ಸಮರಸವಾಯಿತು. ಸ್ವೀಕರಿಸಿ ಕುಣಿದಾಡಿದಳು. ಈ ಭಯವೇ ಅಕ್ಕ ಹೇಳುವ ಹಾವಿನಹಲ್ಲು ಎಂದು.

ನಾವು ಅರಿಯದ ಒಂದು ಓಣಿಯಲ್ಲಿ ಹೋದರೆ ಅಪರಿಚಿತರಾದ ನಮ್ಮನ್ನು ಕಂಡು ಅಲ್ಲಿರುವ ನಾಯಿಯು ನಾವು ಕಳ್ಳರೆಂದೋ ಅಥವಾ ತನ್ನ ಯಜಮಾನನಿಗೆ ಕೇಡು ಬಗೆಯಲು ಬಂದವರೆಂದೋ ಅಥವಾ ತನಗೆನೇ ಕೇಡು ಬಗೆಯಲು ಬಂದವರೆಂದೋ ತಿಳಿದು, ಭಯಪಟ್ಟು ಒಮ್ಮೆಲೆ ನಮ್ಮ ಮೈಮೇಲೆ ಏರಿ ಬರುವದು. ಅದೇ ನಾವು ಅದರ ಯಜಮಾನನಕೂಡ ಇದ್ದರೆ? ಅಥವಾ ಕೆಲವು ದಿನ ನಾವು ಅತ್ತಹೋಗಿ ಬಂದು ಮಾಡಹತ್ತಿ ನಮ್ಮ ಸರಳತನವನ್ನು ತೋರಿದರೆ? ಆಗ್ಗೆ ಅದರ ಭಯವು ನಾಶವಾಗಿ ನಮ್ಮಕೂಡ ಸಲಿಗೆಯಿಂದ ಪ್ರೀತಿಮಾಡಿ ಚಲ್ಲಾಟಮಾಡುವದು. ಇದರಂತೆ ಎಲ್ಲ ಕಾಡಮೃಗಗಳೂ ವಿಷಜಂತುಗಳೂ ಅಲ್ಲದೆ ದುಷ್ಟಚೇತನದ ಮನುಜರೂ ಕೂಡ ಪ್ರೀತಿಯನ್ನು ಬೇಬಲ್ಲರು. ನಾವು

ಪ್ರಯತ್ನದಿಂದ ನಮ್ಮ ಪ್ರೇಮಯುಕ್ತ ಸರಳತೆಯನ್ನು ತೋರಿದರೆ ಅವೂ ಕೂಡ ತಮ್ಮ ಕ್ರೂರತನವನ್ನು ಬಿಟ್ಟು ಉಭಯತರು ಒಬ್ಬರನ್ನೊಬ್ಬರು ಪ್ರೀತಿಸಬಹುದು. ಹೀಗೆ ವಿಷಪೂರಿತ ಹಾವಿನ ಹಲ್ಲಿನಂತಿದ್ದ ಕ್ರೂರತನ ವನ್ನು ಅಳಿಯಬಹುದು. ಈ ಪ್ರಕಾರ, ಹಾವಿನ ಹಲ್ಲು ಕಳೆದು, ಬಲು ಮೆಯಿಂದ ಪ್ರೀತಿಯನ್ನು ಘಳಿಸುವದು ಶಕ್ಯವಿದ್ದಲ್ಲಿ, ಪ್ರೀತಿಯಿಂದ ಪ್ರೀತಿ ಘಳಿಸುವದು ಅದಕ್ಕಿಂತಲೂ ಹೆಚ್ಚು ಶ್ರೇಯಸ್ಕರ ಅದಕ್ಕಿಂತಲೂ ಹೆಚ್ಚು ದಿನ ಬಾಳುವದು. ಅಂದಲ್ಲಿ ದೈಹಿಕ ಕೃತಿಯಿಂದ ಕೃತ್ರಿಮ ಕಾರ್ಯವಾ ಗುತಿದ್ದಲ್ಲಿ, ಅದಕ್ಕಿಂತಲೂ, ವಿಕಾರಗಳನ್ನು ಜಯಿಸಿ ಅಂತಭಾ೯ವದಿಂದ ಎಲ್ಲೆಲ್ಲಿಯೂ ಪರಮಾತ್ಮನುಂಟೆಂದು ಭಾವಪೂರಿತರಾಗಿ ಪ್ರೇಮಯುಕ್ತರಾಗಿ ಇರುವದು ಬಹು ಉಚ್ಚನುಟ್ಟಲ. ಈ ಮಾರ್ಗವೇ ಶ್ರೇಷ್ಟವೆಂದು ಅಕ್ಕನ ಉಚ್ಚವಿಚಾರ.

**ಎರಡನೆಯದು**:– ಇಲ್ಲಿ ಹಾವು ಎಂದರೆ ಈ ದೇಹ. ಅದರ ಎರಡು ಹಲ್ಲುಗಳೆಂದರೆ ಈ ದೇಹದಲ್ಲಿಯ ಸಂಕಲ್ಪ ವಿಕಲ್ಪಗಳೆಂಬ ಎರಡು ವಿಷ ಬಿಡುವವಿಕಾರಗಳು.

ಇಂಥ ಭಾವಗರ್ಭಿತ ಒಗಟದ ಮಾತುಗಳನ್ನು ವಚನಕಾರರು ಹೆಚ್ಚಾಗಿ ಉಪಯೋಗಿಸಿದುದುಂಟು.

೪. " ಕೋಡಗನ ಚೇಷ್ಟೆ ಉಡುಗಿ,
ಹಾವಿನ ಹಲ್ಲು ಮುರಿದು,
ಆಡಿಸುವ ಜೋಗಿಯ ನಾಮ ನಷ್ಟವಾಗಿ,
ಸದಾಶಿವ ಮೂರ್ತಿ ಲಿಂಗದ ಇರವು ನಿರಾಳವಾಯಿತ್ತು "

ಎಂದು ಹೇಳುವರು.

ಹೀಗೆ "ಹಾವಿನ ಹಲ್ಲು ಮುರಿದು" ಎಂಬಲ್ಲಿ ವಿಶಿಷ್ಟ ಅರ್ಥವಿದೆ. 'ನಮ್ಮಲ್ಲಿ ಉದ್ಭವಿಸುವ ಸಂಕಲ್ಪ ವಿಕಲ್ಪಗಳೆಂಬ ಮಾನಸಿಕ ದ್ವಂದ್ವ ವಿಕಾರಗಳ ಮೂಲವನ್ನೇ ಚಿವುಟಿ ಒಗೆದು' ಎಂದು ಅರ್ಥ.

ಮನಸ್ಸಿನ ಹೊಯ್ದಾಟದ ಮೂಲಕ ಈ ಸಂಕಲ್ಪ ವಿಕಲ್ಪಗಳು ಉದ್ಭ ವಿಸುವವು. ಅದನ್ನೇ ಮಾರಯ್ಯನು ಹೀಗೆ ಹೇಳುತ್ತಾನೆ:—

೫. " ಮಾಡಿ ನೀಡಿ ಹೋಹೆನೆಂಬಾಗ,
ಕೈಲಾಸವೇನು ಕೈಕೂಲಿಯೇ?

ಮುಂದೊಂದು ಕಲ್ಪಿಸದೆ,
ಹಿಂದೊಂದು ಭಾವಿಸದೆ,
ಸಲೆ ಸಂದಿದ್ದಾಗಳೇ ಮಾರಯ್ಯ ಪ್ರೀಯ ಅಮರೇಶ್ವರ ಲಿಂಗ
ವಿದ್ದ ಕೈಲಾಸ "

"ಮಾಡಿ" ಅಂದರೆ ಕರ್ಮಜ್ಞಾನ ಭಕ್ತಿ ಮಾರ್ಗಗಳಿಂದ ಸಾಧನೆ ಮಾಡಿ; "ನೀಡಿ" ಎಂದರೆ ದಾನ ಧರ್ಮಗಳನ್ನು ನೀಡಿ, ಹೀಗೆ ಮಾಡಿ ನೀಡಿ ಸತ್ತನಂತರ ಕೈಲಾಸಕ್ಕೆ ಹೋಗುವೆ; ಅದರ ಫಲ ಅಲ್ಲಿ ಸಿಗು ವದುಎಂದು ಆಶಿಸುವದಾದಲ್ಲಿ ಆ ಮುಕ್ತಿಯೇನು ಆಸಾಧನೆಯ ಪ್ರತಿ ಫಲವೋ? ಆ ಪ್ರಯತ್ನದ ಬಗ್ಗೆ ಕೊಡುವ ಕೂಲಿ ಎಂದು ಗಣಿಸಬೇಕೆ? ಹಾಗಲ್ಲ. ಮುಂದೊಂದು ಸಂಕಲ್ಪವನು ಆಶೆಯುಕ್ತ ವಾಸನೆಯನ್ನು ಕಲ್ಪಿ ಸದೆ, ಹಿಂದೊಂದು ವಿಕಲ್ಪವನ್ನುಆಗಿಹೋದದ್ದಕ್ಕಾಗಿ ಮಳಮಳಿಸುವ ಭಾವವನ್ನು ಮನಸ್ಸದಲ್ಲಿ ಉದ್ಭವಿಸಲು ಅನುವು ಕೊಡದಲೆ, ಮನವನ್ನು ಪರಮಾತ್ಮನಲ್ಲಿ ಏಕೋದ್ದೇಶವಾಗಿ ನೆಲೆಯಿಸಿದಾಗಲೇ ಕೈಲಾಸ. ಅದ ಕ್ಕಾಗಿ ಸಾಯುವ ಅವಶ್ಯವಿಲ್ಲ. ತದ್ವಿರುದ್ಧ, ಆದನ್ನು ಸಾಧಿಸಲು ಜೀವಿ ಸಿರುವದೇ ಅವಶ್ಯವೆಂದು ಹೇಳುವರು. ಗೀತೆಯಲ್ಲಿ ಕೂಡ ಶ್ರೀಕೃಷ್ಣನು ಇದನ್ನೆ ಹೇಳುವನು.

"ಪ್ರಜಾಹಾತಿ ಯದಾಕಾಮಾನ್ ಸರ್ವಾನ್ ಪಾರ್ಥಮನೋಗ
ತಾನ್ । ಆತ್ಮನ್ಯೇವಾತ್ಮ ನಾತುಷ್ಟಃ ಸ್ಥಿತಿ ಪ್ರಜ್ಞಸ್ತದೋಚ್ಯತೆ॥

ಅಂದರೆ, ಯಾವಾಗ್ಗೆ ಮನುಷ್ಯನು ತನ್ನ ಮನಸ್ಸಿನಲ್ಲಿ ಉದ್ಭವಿಸು ಸುವ ಎಲ್ಲ ಕಾಮವಾಸನೆಗಳನ್ನು ( ಅಂದರೆ ಸಂಕಲ್ಪ ವಿಕಲ್ಪಗಳನ್ನು ) ಜಯಿಸಿ ತನ್ನ ಆತ್ಮನಲ್ಲಿ ತಾನೇ ಸಂತುಷ್ಟನಾಗಿರುವನೋ ಆಗ್ಗೆ ಅವನು ಸ್ಥಿತ ಪ್ರಜ್ಞನಾದವನು ಎಂದು ತಿಳಿಯತಕ್ಕದ್ದು, ಎಂದು ಹೇಳುವನು.

ಅಂದರೆ ಈ ಸಂಕಲ್ಪ ವಿಕಲ್ಪಗಳು ವಿಷಪೂರಿತವಿದ್ದಂತೆ ಇದ್ದು ನಮ್ಮನ್ನು ಬಾಧಿಸಿ ಈ ಪ್ರಪಂಚಮಯದಲ್ಲಿ ಬಳಲ ಹಚ್ಚುವವು. ಆ ಕಾರ ಣವೇ ಈ ದೇಹಕ್ಕೆ ಹಾವಿನ ಹಲ್ಲಿನಂತೆ ಇದ್ದ ಈ ಸಂಕಲ್ಪ ವಿಕಲ್ಪಗ ಳೆಂಬ ದಂತಗಳನ್ನು ಕಿತ್ತಿ ಒಗೆದ ಮೇಲೆ, ಈ ದೇಹವು ಪರಮಾತ್ಮನ ನಿಲುವನ್ನು ಪಡೆಯಲು ಸಾಧನೆಯಾಗುವದು. ಕಾರಣ ಈ ದೇಹವು ನಮ್ಮಗಳಿಗೆ ಅವಶ ಬೇಕು. ಆ ಹಲ್ಲುಗಳನ್ನು ಮಾತ್ರ ನಾವು ಕಿತ್ತು ಒಗೆಯೋಣ ಎಂದು ಅಕ್ಕನ ಗೂಢಾರ್ಥ.

ಈ ಮಾತನ್ನೇ "ಕಾಯದ ಸಂಗವ ವಿವರಿಸಬಲ್ಲಡೆ, ಕಾಯದ ಸಂಗವೇಲೇಸು" ಎಂಬಲ್ಲಿ ಹೆಚ್ಚು ಸ್ಪಷ್ಟೀಕರಿಸಿದೆ. ಕಾಯವು ಬೇರೆ, ಆತ್ಮವು ಬೇರೆ. ವಿಕಾರಗಳು ಕಾಯಕ್ಕೆ ಸಂಬಂಧಿಸಿದವು. ಆತ್ಮಕ್ಕೆ ಅವುಗಳ ಸಂಬಂಧವಿಲ್ಲ. ಹೀಗಿದ್ದರೂ ವಿಕಾರವಶರಾಗಿ ಈ ಎರಡೂ ಒಂದೇ ಎಂದು ತಿಳಿದು, ಅಥವಾ ಬೇರೆ ಇರುವವೆಂಬುದನ್ನು ಮರೆತು ನಡೆಯುತ್ತಿರುವೆವು. ಈ ಸಂಬಂಧವನ್ನು "ವಿವರಿಸಬಲ್ಲಡೆ" ಅಂದರೆ ಒಂದಕ್ಕೊಂದು ಕಾಲ್ಪನಿಕವಾಗಿ ಅಂಟಿಸಿದ ಸಂಬಂಧವನ್ನು ಬೇರ್ಪಡಿಸಲು ಬಲ್ಲವನಾದಡೆ ಎಂದು ಅರ್ಥ. ಈ ಬೇರ್ಪಡಿಸುವ ವಿಧಾನವನ್ನೇ ಪ್ರಭು ಹೀಗೆ ಹೇಳುತ್ತಾನೆ:—

೬. " ದೇಹ ಭಾವವಳಿದಲ್ಲದೆ ಜೀವಭಾವವಳಿಯದು,
ಜೀವ ಭಾವವಳಿದಲ್ಲದೆ ಭಕ್ತಿ ಭಾವವಳವಡದು,
ಭಕ್ತಿ ಭಾವವಳವಟ್ಟಲ್ಲದೆ ಅರಿವು ತಲೆದೋರದು,
ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು,
ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು,
ಅದು ಕಾರಣ, ಕಾಯದ ಜೀವದ ಹೊಲಿಗೆ
ಯಳಿವ ಭೇದವ ತಿಳಿಯ ಬಲ್ಲಡೆ ಗುಹೇಶ್ವರಲಿಂಗದ
ಅರಿವು ಸಾಧ್ಯವಪ್ಪದು, ಕಾಣಾ ಸಿದ್ಧರಾಮಯ್ಯಾ. "
(ಪು. ೩೦-೯೨)

ಈ ಪ್ರಕಾರ ಈ ಕಾಯದ ಜೀವದ (ಅಂದರೆ ಆತ್ಮದ) ಹೊಲಿಗೆಯನ್ನು ಅಳಿಯುವ ಭೇದವ ತಿಳಿಯಬಲ್ಲಡೆ ಪರಮಾತ್ಮನ ಜ್ಞಾನವು ಸಾಧ್ಯವು. ಅದೇ ಮೋಕ್ಷದ ಸಾಧನೆಯು ಎಂದು ಹೇಳುವನು.

ಅದನ್ನೇ "ಆದಿ ಅನಾದಿಯಿಂದತ್ತತ್ತ ಮುನ್ನ ಮಹಾಘನವ ಭೇದಿಸಿ ಕಂಡರಿದು, ಕಾಯದ ಜೀವದ ಹೊಲಿಗೆಯ ಬಿಚ್ಚಿ ಬಿಸಾಡಿ, ತನ್ನನೆ ಅರ್ಪಿಸಿ ಇರಬಲ್ಲಾತ" ಎಂಬುದರಲ್ಲಿ (ಪು ೩೧ರವರೆಗೆ) ಹೇಳಿರುವನು.

ಕಾಯಕ್ಕೂ ಜೀವಕ್ಕೂ ಏನೂ ಸಂಬಂಧವಿರುವದಿಲ್ಲ. ಕಾಯವು ನಾಶಹೊಂದುವದು; ಆತ್ಮವು ನಿಜವಸ್ತು. ಕಾಯವು ವಿಕಾರಗಳಿಗೆ ವಶವಾಗುವಂಥದಿರುವದರಿಂದ ಅದರ ಪರಿಣಾಮವು ಮನಸ್ಸಿನ ಮೇಲೆ ಆಗಿ, ಆ ಮನಸ್ಸು ಜೀವದ ಬಗ್ಗೆ—ಅಂದರೆ ಆತ್ಮನ ಬಗ್ಗೆ—ಪರಮಾತ್ಮನ ಬಗ್ಗೆ ಚಿಂತಿಸುವದನ್ನು ಬಿಟ್ಟುಬಿಡುವದು. ಎರಡು ಬೇರೆ ಬೇರೆತುಂಡು ವಸ್ತು

ಗಳನ್ನು ಹೊಲಿದು ಒಂದನ್ನಾಗಿ ಮಾಡಬಹುದು. ಆಗ್ಗೆ ಆ ವಸ್ತುವು ಒಂದೇ ಎಂದು ಗಣಿಸುವೆವು. ಅಲ್ಲಿ ಅಂಟಿಕೊಂಡಿದ ವಸ್ತುಗಳು ಬೇರೆ ಬೇರೆ ಇದ್ದರೂ ಕೂಡ ಒಂದೇಎಂದು ಹೇಗೆ ಗಣಿಸುವೆವೋ ಹಾಗೆ ಜೀವವೂ (ಆತ್ಮವು) ಕೂಡ ತನ್ನಂತೆ ಒಂದು ನಶ್ವರವೆಂದು ಭಾವದಿಂದ ತುಂಬಿ ಅದನ್ನು ತನ್ನೊಳಗಿನ ಒಂದು ಭಾಗವೆಂದು ವಿಕಾರಗಳಿಂದ ತುಂಬಿದ ಈ ದೇಹವು ಗಣಿಸುವದು. ಈ ಭಾವವು ಅಳಿಯಲೇಬೇಕು. ಆ ಹೊಲಿಗೆಯಂತಿದ್ದ ಕಾಲ್ಪನಿಕ ಸಂಬಂಧವನ್ನು ಬಿಚ್ಚಿ ಬಿಸಾಡಲೇಬೇಕು. ಈ ಪ್ರಕಾರ ಕಾಯದ ಸಂಬಂಧವನ್ನು ಬೇರ್ಪಡಿಸಲು ಅರುವಾದಲ್ಲಿ ಆ ಕಾಯದ ಸಂಗವೇ ಲೇಸು. ಏಕೆಂದರೆ, ಮೇಲೆ ಹೇಳಿದಂತೆ ಆತ್ಮಜ್ಞಾನಕ್ಕೆ ಈ ದೇಹವು ಒಂದು ಸಾಧನೆ; ಒಂದು ಪ್ರಯೋಗಶಾಲೆ ಆಗಿದೆ.

ಇನ್ನು "ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು" ಎಂಬಲ್ಲಿ ಬಹು ಸುಂದರ ಉಪಮೆಯನ್ನು ಅಕ್ಕನು ತತ್ವಯುಕ್ತವಾಗಿ ಕೊಟ್ಟಿರುವಳು. ಈ ಉಪಮೆಯ ಸೌಂದರ್ಯವನ್ನು ಅರಿಯಬೇಕಾದರೆ ಒಂದೆಡೆ ಚಿಕ್ಕಮಗು, ತಾಯಿ ಹಾಗೂ ಅವಳಲ್ಲಿಯ ರಕ್ಕಸತನವನ್ನು ಇಟ್ಟುಕೊಳ್ಳಬೇಕು. ಇವಕ್ಕೆ ಉಪಮೇಯವಾಗಿ ಮತ್ತೊಂದೆಡೆ ಆತ್ಮ, ದೇಹ ಹಾಗೂ ಅದರಲ್ಲಿಯ ವಿಕಾರಗಳನ್ನು ಅನುಕ್ರಮವಾಗಿ ಚಿತ್ರಿಸಿ ಮುಂದೆ ಇಟ್ಟುಕೊಳ್ಳಬೇಕು. ಈ ಪ್ರಮೇಯವನ್ನು ತಿಳಿಸುವಲ್ಲಿ ಅಕ್ಕನು ಎಂಥ ವಿದ್ವನ್ಮಣಿಯೂ ಮಹಾಜ್ಞಾನಿಯೂ ಇದ್ದಳೆಂಬುದನಲ್ಲದೆ, ಆವಳ ಭಾಷಾಶೈಲಿಯು ಎಷ್ಟು ಉಚ್ಚಮಟ್ಟಲದಿತ್ತೆಂಬುದನ್ನು ಕಾಣಬಹುದು. ಈ ಮೂಲಕ ಅವಳು ಆತ್ಮಕ್ಕೂ ದೇಹಕ್ಕೂ ಇದ್ದ ಸಂಬಂಧವಲ್ಲದೆ ಆ ವಿಕಾರಗಳ ಮೂಲಕ ಮಗುವಿನಂತೆ ನಿರ್ಮಲವಾಗಿದ್ದ ಆತ್ಮದ ಬಗ್ಗೆ ಆಗುವ ಪರಿಣಾಮಗಳನ್ನೂ ಸೂಕ್ಷ್ಮವಾಗಿ ಹೇಳುವಳು

ಮಗುವನ್ನು ಇಲ್ಲಿ ಆತ್ಮಕ್ಕೆ ಹೋಲಿಸಿದೆ. ಚಿಕ್ಕ ಮಗನು ವಂಶಕ್ಕೆ ಮೂಲನು; ಆತ್ಮನು ವಿಶ್ವಕ್ಕೆ ಮೂಲನು ಚಿಕ್ಕಮಗನು ನಿರ್ಮಲನು; ಆತ್ಮನೂ ನಿರ್ಮಲನು. ಚಿಕ್ಕಮಗನು ಆನಂದಮಯನು; ಆತ್ಮನೂ ಆನಂದಮಯನು. ಚಿಕ್ಕ ಮಗನು ಮುಂದೆ ಬೆಳೆದು ದೊಡ್ಡವನಾಗುವನು; ಜ್ಞಾನಬೆಳೆದು ಆತ್ಮನು ಮುಂದೆ ಪರಮಾತ್ಮನಾಗಿ ಗಣಿಸಲ್ಪಡುವನು. ಚಿಕ್ಕಮಗನಿಗೆ ಎಲ್ಲರಲ್ಲಿಯೂ ಅಕ್ಕರತೆ; ಆತ್ಮನಿಗೆ (ಸರ್ವಭೂತ ಹಿತೇ

ತನವಿರುವದರಿಂದ) ಎಲ್ಲರಲ್ಲಿಯೂ ಪರಮಾತ್ಮನಿಯು ಕಂಡು ಅಕ್ಕರತೆ ಅಂಥ ಆತ್ಮನ ಕಂಡ ಸರ್ವರಿಗೂ ಅವನಲ್ಲಿ (ಪರಮಾತ್ಮನಲ್ಲಿ) ಅಕ್ಕರತೆ.

ಚಿಕ್ಕ ಮಗುವಿನ ಬೆಳವಣಿಗೆಗೆ ತಾಯಿಯ ಸಾಧನೆ ಅವಶ್ಯ. ಆತ್ಮಜ್ಞಾನದ ಬೆಳವಣಿಗೆಗೆ ಈ ದೇಹದ ಸಾಧನೆ ಅವಶ್ಯ. ಚಿಕ್ಕ ಮಗುವು ತಾಯಿಯ ಉದರದಲ್ಲಿ ಮೂಡಿ ಬೆಳೆಯುವದು; ಆತ್ಮವು ಈ ದೇಹದಲ್ಲಿ ಮೂಡಿ ಬೆಳೆಯುವದು. ಚಿಕ್ಕ ಮಗುವಿನಮೇಲೆ ಆ ತಾಯಿಯ ಪ್ರಭಾವ ಬೀಳುವದು. ತಾಯಿಯು ಕ್ರೂರವಿದ್ದರೆ ಮಗುವೂ ಕ್ರೂರವಾಗುವದು, ಸದ್ಗುಣಿಯಿದ್ದರೆ ಸದ್ಗುಣಿಯಾಗುವದು; ದೇಹವು ಕ್ರೂರ ವಿಕಾರಮಯ ವಿದ್ದರೆ ಆತ್ಮವು ಆ ಕ್ರೂರ ವಿಕಾರಕ್ಕೆ ವಶವಾದಂತಾಗಿ ಕಾಣುವದು ಸದ್ವಿಕಾರಗಳಿದ್ದಲ್ಲಿ ಸಾತ್ವಿಕ ಜೀವನವಾಗಿ ಕಾಣುವದು. ತಾಯಿಗೆ ಮಗನೇ ಸರ್ವಸ್ವ; ದೇಹಕ್ಕೆ ಆತ್ಮವೇ ಸರ್ವಸ್ವ.

ಆದರೂ ಮಗುಬೇರೆ ತಾಯಿಬೇರೆ; ಅದರಂತೆ ಆತ್ಮವೂ ಬೇರೆ, ದೇಹವೂ ಬೇರೆ, ಇಷ್ಟು "ತಾಯಿ ರಕ್ಕಸಿಯಾದಂತೆ, ಕಾಯ ವಿಕಾರವು" ಎಂಬುದರ ಅರ್ಥವು ಸ್ಪಷ್ಟವಾಗಿ ತಿಳಿಯುವದು. ಈ ಎಲ್ಲ ಉಪಮೆಯ ಗಳಲ್ಲಿ ದೇಹವೆಂದರೆ ವಿಕಾರಯುಕ್ತ ದೇಹವು ಎಂದು ಗಣಿಸಿದೆ. ತಾಯಿಯು ಸಹಸಾ ತನ್ನ ಮಗನೆಡೆ ರಕ್ಕಸಿಯಾಗುವದಿಲ್ಲ; ಅದರಂತೆ ದೇಹವು ಅದರೊಳಗಿನ ತನ್ನ ಆತ್ಮನೆಡೆ ರಕ್ಕಸತನವನ್ನು ಸಹಸಾ ತೋರುವದಿಲ್ಲ. ಪುಷ್ಟಿಯನ್ನೇ ಕೊಡಬಹುದು, ರಕ್ಕಸಿಯಾದ ತಾಯಿಯಂತೆ ಶೋಷಿಸ ಹತ್ತಿದರೆ ಮಾತ್ರ ಆತ್ಮ ನಾಶಕ್ಕೆ ಕಾರಣವಾಗಬಹುದು.

ತಾಯಿಯು ಪೋಷಕಳು ಮಾತ್ರ; ದೇಹವಾದರೂ ಆತ್ಮಕ್ಕೆ ಪೋಷಕವು. ಒಂದುವೇಳೆ ತಾಯಿಯು ರಕ್ಕಸಿಯಿದ್ದರೂ ಆ ರಕ್ಕಸತನವನ್ನು ಹತ್ತಿಕ್ಕಿಕೊಂಡು ಮಗನೆಡೆ ಪ್ರೇಮದಿಂದಿದ್ದು ಆ ಮಗುವಿನ ಬೆಳವಣಿಗೆಗೆ ಸಹಾಯಕಳಾಗುವಳು. ಅದರಂತೆ ದೇಹದಲ್ಲಿ ಕ್ರೂರ ವಿಕಾರಗಳಿದ್ದರೂ ಕೂಡ ಆ ಕ್ರೂರತನವನ್ನು ಹತ್ತಿಕ್ಕೆ ಅದು ಆತ್ಮಕ್ಕೆ ಪೋಷಕವಾಗ ಬಹುದು.

ಹೀಗೆಲ್ಲ ಇದ್ದರೂ ಕ್ವಚಿತ್ತಾಗಿ ಯಾವದೇ ತಾಯಿಯು ತನ್ನ ಕೂಸಿಗೆ ರಕ್ಕಸತನದಿಂದ ಕಾಡಬಹುದು, ಪೀಡಿಸಬಹುದು, ಭಾವಿಯಲ್ಲಿ ಒಗೆಯ ಬಹುದು, ಅಂಥಲ್ಲಿ ಆ ಕೂಸಿನ ನಾಶವೇ ಸೈ. ಅದರಂತೆ ನಮ್ಮ ದೇಹ

ವಾದರೂ ಕೆಲವಡೆಯಲ್ಲಿ ಕ್ರೂರ ವಿಕಾರಕ್ಕೆ ಒಳಗಾದಲ್ಲಿ ಅಂಥವರ ನಾಶವೇ ಸೈ.

ಈ ಪ್ರಕಾರ ಕಾಯವು ಬೇರೆ, ಆತ್ಮವು ಬೇರೆ, ಆಗಿರುವವು. ಪರಮಾತ್ಮನು ಒಲಿಯಬೇಕಾದರೆ ದೇಹದ ವಿಕಾರಗಳು ಹತೋಟಿಯಲ್ಲಿ ಬಂದಿರಲೇಬೇಕು. ಆತ್ಮಕ್ಕೆ ಪೋಷಕವಾಗುವಂತಾಗಲೇ ಬೇಕು. ಪರಮಾತ್ಮನು ಒಲಿದ ಮೇಲಂತೂ ದೇಹದ ವಿಕಾರಗಳು ಏನೂ ಮಾಡವು.

೭. "ಕಾಯ ಕರ್‍ರನೆ ಕಂದಿದರೇನಯ್ಯಾ
ಕಾಯ ಮಿರ್‍ರನೆ ಮಿಂಚಿದರೇನಯ್ಯಾ
ಅಂತರಂಗ ಶುದ್ಧವಾದಬಳಿಕ,
ಚನ್ನಮಲ್ಲಿಕಾರ್ಜುನ ಲಿಂಗವು ಒಲಿದಬಳಿಕ,
ಕಾಯವು ಹೇಗಿದ್ದರೇನಯ್ಯಾ. (ವ. ೧೧೩ವ೬೦)

ಅಂತರಂಗ ಶುದ್ಧವಾದಬಳಿಕ ದೇಹವು ಹೇಗಿದ್ದರೇನು ? ಅದರ ವಿಕಾರಗಳೇ ನಡೆಯವು- ಅಗ್ಗೆ ಇರುವದು ಆತ್ಮದ ಕಾರ್ಯಮಾತ್ರ. ಹೆಸರಿಗೆ ಮಾತ್ರ ದೇಹವಿರುವದು. ಅಂಥಲ್ಲಿ ದೇಹವಿದ್ದಲ್ಲಿ ಏನೂತಪ್ಪಲ್ಲ. ವಿಕಾರಗಳನ್ನು ಜಯಿಸಿದ ಅಂಥ ದೇಹವು ಯಾವ ಕರ್ಮಮಾಡಿದರೂ ಸಂಕತಟ್ಟದು. ಅಂಥಲ್ಲಿ ಮಾತ್ರ ಚಿತ್ತವು ಸ್ಥಿರವಾಗಿ ಶುದ್ಧವಾಗಿ ಉಳಿಯುವದು. ಪರಮಾತ್ಮನಲ್ಲಿ ಲೀನವೂ ಆಗುವದು. ಅಂಥ ಜೀವಿಯು ಮುಕ್ತನಾದಂತೆ ಸೈ.

ಇದೇ ಶರಣರು ಬಯಸುವ ಸದೇಹ ಮುಕ್ತಿಯು. ಇದೇ ಅಕ್ಕಮಹಾದೇವಿಯು ಪಡೆದ ಪರಮ ಪದವಿಯು.

# ವೀರಶೈವ ವಿಜಯಂ.

ಕಂದ॥ ಪರಿಪರಿಯ ಮತಹೊನಲೆನಿಸಿ
ಹರಿಯುತೆ ವರವೀರಶೈವ ಕಡಲಂ ಸೇರ್ಶ್ಕಂ ।
ಭರದಿಂ ತೋರ್ಪ್ಪವ ರಭಸಂ
ತ್ವರಿತದಿ ಶಿವತತ್ವದಾ ಬೆಳಿಬೆಳಕು ಜಗಕಂ ॥ ೧ ॥

ಒಂದು ಸಮಯದಲಿ ಮನದೊಳ್
ನೊಂದಿಹ ಜನಜೀವನಕ್ಕೆ ಸವಿಸುತೆ ಸುಧೆಯಂ ।
ಜೆಂದೊಡಲೊಳಿರ್ದ ಹೃದಯಾ
ನಂದವಪಡೆಯೆ ತಾನೆ ಲಭಿಸ ಪರಮಪುರುಷಂ ॥ ೨ ॥

ಜಂಗಮ ಪರುಷ ಶರಣರಾ
ಮಂಗಲಮಯ ವಚನ ವಜ್ರಗಳಾ ಸುಪ್ರಭೆಯಿಂ ।
ಅಂಗದಮೇಲ್ ಸಕಲರಾ
ಲಿಂಗವ ಧರಿಸುವಾಸು ಸಮರಸ ಕಾಲವಕ್ಕಂ ॥ ೩ ॥

ಲಿಂಗದ ಸಂಸ್ತುತಿಯಿಂದಲೆ
ಲಿಂಗದ ದೃಷ್ಟಿಯೊಳ್ ಪರಮಶಿವ ತೈಜಸಮಂ ।
ಲಿಂಗದ ಗುಣವಳಿಯಿಸೆ ಶಿವ
ಲಿಂಗದ ಚಿತ್ ಕಳೆಯನಾಂತು ಪಡೆಯುವ ಮೋಕ್ಷಂ ॥ ೪ ॥

ಲಿಂಗದೊಳಡಗಿಹ ಮೂಜಗ
ಅಂಗವೇತಾನಾಗಿತೋರ್ಪ ಸುಬ್ರಹ್ಮಾಂಡಂ ।
ಜಂಗಮವಾಗೊಂದೆಡೆಗಂ
ಲಿಂಗಾಂಗ ಸಮರಸಮೆನಿಸೆ ಮಹಾಲಿಂಗಂ ॥ ೫ ॥

ಪರಮ ಪರಂಜ್ಯೋತಿ ಪ್ರಭೆ
ಧರೆಗಿಳಿಯೆ ಶಿವಲೋಕಮೆನೆ ನಾಕವಿಲಾಸಂ ।
ಸುರತರು ಚಿಂತಾಮಣಿಯಿಂ
ವರಸುಜ್ಞಾನದಿಂ ಬೆರೆಯೆ ವಸುಧಾವಳಯಂ ॥ ೬ ॥

—ಶ್ರೀ. ಮೋಟಗಿ ಮಲ್ಲಿಕಾರ್ಜುನ, ಅಥಣಿ.

# ಬಾಳಿನ ಬಲೆ.

(ಲೇಖಕಃ— ಶ್ರೀ. ಬಿ. ವ್ಹಿ. ಕತ್ತಿ. ಕಾದರವಳ್ಳಿ ಜಿ. ಬೆಳಗಾವ.)

ಮಾನವನಿಗೆ ಮೋಹವಿದ್ದೇ ಇದೆ. ಆದ್ದರಿಂದಲೇ ದುಃಖಗಳು ಇದ್ದೇ ಇರುವವು. ಸತಿ, ಸುತ, ಗೃಹ, ಧನ, ಧಾನ್ಯ, ಅನ್ನ. ವಸ್ತ್ರ ಇತ್ಯಾದಿ ಆಶೆಯ ದುಃಖವು ಜ್ಞಾನಹೀನರಿಗೆ ಒದಗುವದು. ಅಂತೆಯೇ ಅವನು ಹೊನ್ನು, ಹೆಣ್ಣು, ಮಣ್ಣುಗಳಿಗಾಗಿ ಹಂಬಲಿಸಿ ದುಃಖಸಾಗರದಲ್ಲಿ ಈಸುತ್ತ ತೀರವ ಸೇರದೆ ಸಾಗರದ ಆಳವನ್ನು ಅಳೆಯುತೊಡಗುವನು. ಅವನ ಬುದ್ಧಿಯು ಮಂದತೆಯನ್ನು ಹೊಂದತೊಡಗುವದು. ಇವೆಲ್ಲವುಗಳಿಂದೊದಗುವ ಆನಂದವು ಕ್ಷಣಿಕವಾದದ್ದು. ಇಂಥ ಆನಂದವು ಚಿರಕಾಲದ್ದಲ್ಲವೆಂದು ಬಗೆದು ಕ್ಷಣಿಕ ಸುಖ ತೊರೆದು ಪರಮ ಸುಖದೆಡೆ ಸಾಗುವದೊಳಿತಲ್ಲವೇ ?

ಶರೀರವು ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳೆಂಬ ಪಂಚ ಭೂತಗಳಿಂದ ನಿರ್ಮಿತವಾಗಿದೆ. ಇವೆಲ್ಲವುಗಳು ಮಾನವನು ಮರಣ ಹೊಂದಿದ ನಂತರ ತಮ್ಮಲ್ಲಿ ತಾವು ಸೇರಿಕೊಳ್ಳುತ್ತವೆ. ಅಂತೆಯೇ ಶರೀರವು ಶಾಶ್ವತವಾದದ್ದಲ್ಲ. ಆದರೆ ಪರಮಾತ್ಮನ ಸ್ವರೂಪವೇ ಆದ ಪರಮಾತ್ಮನೇ ಆದ ಆತ್ಮನು ಅಮರನಾಗಿದ್ದಾನೆ. ಮಾನವನು ಆತ್ಮನನ್ನು ಜಾಗೃತಗೊಳಿಸಬೇಕು. ಅಂದರೆ ಆತ್ಮನು ಸ್ವಪ್ನಾವಸ್ಥೆಯಲ್ಲಿರುವನೆಂಬರ್ಥವಲ್ಲ. ಆತ್ಮನು ಸೂರ್ಯನಂತೆ ಸ್ವಯಂ ತೇಜವುಳ್ಳವನಾಗಿರುವನು. ಮೋಡಗಳು ಕವಿದು ಸೂರ್ಯನ ಪ್ರಕಾಶಕ್ಕೆ ಅಡ್ಡಿ ಮಾಡುವಂತೆ ಮಾಯೆಯು ಆತ್ಮನ ಸುತ್ತಲೂ ಕವಿದು ಆತ್ಮನ ಪ್ರಕಾಶಕ್ಕೆ ಅಡ್ಡಿ ಮಾಡಿದೆ. ಇಲ್ಲಿ ಅಜ್ಞಾನವೇ ಅಂಧಃಕಾರವು. ನಾವು ಚೈತನ್ಯ ಸ್ವರೂಪನಾದ ಆತ್ಮನನ್ನು ಕಾಣಬೇಕಾದರೆ ಈ ಅಂಧಃಕಾರವನ್ನು ಹೋಗಲಾಡಿಸಬೇಕಾಗುವದು.

ಶರೀರವು ಅನಿತ್ಯವಾಗಿರುವಂತೆಯೇ ಜಗತ್ತೂ ಸಹ ಅನಿತ್ಯವಾಗಿರುವದು. ನಾವು ಜಗತ್ತಿನಲ್ಲಿ ವ್ಯವಹಾರವನ್ನು ಮಾಡುತ್ತಿರುವೆವಾದ್ದರಿಂದ, ಆ ವ್ಯವಹಾರದಿಂದ ಯಶಾಯಶ, ಮಾನಾಪಮಾನ, ಸುಖದುಃಖಗಳನ್ನು ಪಡೆಯುತ್ತಿರುವೆವಾದ್ದರಿಂದ ಜಗತ್ತು ಸತ್ಯವಾಗಿ ತೋರುವದು.

ಸ್ವಪ್ನಾವಸ್ಥೆಯಲ್ಲಿ ಗೋಚರಿಸುವ, ವಿದಿತವಾಗುವ ಸರ್ವಸಂಗತಿಗಳು ಆಗ ನಿಜವೆಂದು ತೋರಿದರೂ ಜಾಗೃತಾವಸ್ಥೆಯಲ್ಲಿ ಅವು ಅಸತ್ಯವೆಂದು ಗೋಚರಿಸುವಂತೆ ತನ್ನತಾನರಿದ ಬಳಿಕ ಜಗತ್ತು ಮಿಥ್ಯವಾದದ್ದೆಂದು ನಿಃಸ್ಸಂಶಯವಾಗಿ ಕಂಡುಬರುವದು. ಜಗತ್ತಿನಲ್ಲಿ ತೋರಿಬರುವ ಚರಾಚರ ವಸ್ತುಗಳು ಸಹ ಅನಿತ್ಯವಾದವುಗಳೇ.

ಸುಖಸಲ್ಲಾಪಗಳಿಂದ ನಲಿಯುತ್ತ ಮಾನವನು ಮರಣದ ಅರಿವು ಇಲ್ಲದಲೆ ಭೋಗವನ್ನು ಅನುಭವಿಸಲು ಆರಂಭಿಸುತ್ತಾನೆ. ಅವನಿಗೆ ಹಲಕೆಲವು ಕಾರಣಗಳಿಂದ ಇದರ ಬಗೆಗೆ ತಿರಸ್ಕೃತ ಭಾವನೆ ಮೂಡಿ ಬರುವದು. ಸಕಲ ಸುಖಗಳನ್ನು ಅನುಭವಿಸಿ ದುಃಖಕ್ಕೆ ಎರವಾದಾಗ ಮಾನವನಿಗೆ ತನ್ನ ಬಾಳ್ವೆಯಲ್ಲಿ ಜಿಗುಪ್ಸೆ ಭಾವನೆ ನೆಲೆಯೂರುವದು. ತಾನು ಮಾಡಿದ ಕರ್ಮಫಲಗಳ ಬಗೆಗೆ ಪಶ್ಚಾತ್ತಾಪ ಪಡುತ್ತಾನೆ. ತದನಂತರ ಅವನ ದೃಷ್ಟಿಯು ಸಾವಧಾನವಾಗಿ ಶಾಶ್ವತ ಸುಖದೆಡೆಗೆ ತಿರುಗುವದು. ಅದನ್ನು ಪಡೆಯಲು ಅವನು ಯತ್ನಿಸಬೇಕಾಗುವದು.

ಪಾಪಕೃತ್ಯಗಳನ್ನೆಸಗಿದ ಮಾನವನು ತನಗೆ ಪರಮಾತ್ಮನ ಪ್ರೇರಣೆ ಆಗಲಾರದೆಂದು ಬಗೆಯಕೂಡದು. ಪ್ರಾಯಶ್ಚಿತ್ತದಿಂದ ಹೃದಯ ಪರಿಶುದ್ಧತೆ ಲಭಿಸುವದು. ಮೇಲಾಗಿ ಈಶನ ದೃಷ್ಟಿಯು ಸಕಲರಿಗೂ ಒಂದೇ ಇರುತ್ತದೆಂಬುದನ್ನು ಜ್ಞಾಪಕದಲ್ಲಿಡಬೇಕು. ಆದಷ್ಟು 'ಸಂಕಟಕಾಲದಲ್ಲಿ ವೆಂಕಟರಮಣ' ಎನ್ನುವ ಕಾಲವನ್ನು ಮಾನವನು ತಂದ ಕೊಳ್ಳದ ಹಾಗೆ ಪ್ರಯತ್ನಿಸಬೇಕು. ಭೂತದಯೆ ಅವನಲ್ಲಿ ನೆಲೆಯೂರಿ ನಿಲ್ಲಬೇಕು. ಜೀವನದ ಉದ್ದೇಶ ತಲುಪಲು ಹಗಲಿರುಳು ಹೆಣಗಾಡಬೇಕು. ವೀರಶೈವರಿಗೆ ಲಿಂಗಾಂಗ ಸಾಮರಸ್ಯವೇ ಧ್ಯೇಯವಾಗಿರುವದು.

ಗುರು, ಲಿಂಗ, ಜಂಗಮರ ಸೇವೆಯನ್ನು ಮನಮುಟ್ಟಿ ಮಾಡಬೇಕು. 'ಗುರು, ಲಿಂಗ, ಜಂಗಮರು ನಮ್ಮಂತರಂಗದಲ್ಲಿ ಬೆಳಗುವ ಅರಿವು, ಪ್ರಾಣ, ಸುಜ್ಞಾನಗಳು ಚಿಹ್ನ' ಗಳಲ್ಲದೆ ಬೇರಲ್ಲವೆಂದು ಬಗೆಯಬೇಕು. ನಿರಾಕಾರ ಉಪಾಸನೆಯು ದೇಹಧಾರಿಗಳಿಗೆ ಕಠಿಣವಾದುದರಿಂದ ಸಾಕಾರ ಉಪಾಸನೆಯನ್ನು ಮಾಡಬೇಕಾಗುವದು. ಶರೀರಕ್ಕೆ ಆಭರಣಗಳು ಸೋಭಾಯಮಾನವಾಗಿ ಕಾಣುವಂತೆ ನೊಸಲಿಗೆ ವಿಭೂತಿ ಧರಿಸಿದರೆ ಮುಖವು ತೇಜಃಪುಂಜವಾಗಿಯೂ, ಒಳ್ಳೆಯ ಲಕ್ಷಣವಾಗಿಯೂ ಕಾಣುತ್ತದೆ. ಆದ

ಭಸ್ಮವನ್ನು ಧರಿಸುವದರ ಉದ್ದೇಶವನ್ನು ಸಫಲಗೊಳಿಸಿದಾಗಲೇ ಭಸ್ಮ ಧರಿಸುವದರ ಸಾರ್ಥಕತೆಯಾಗುವದು. 'ಭಸ್ಮವನ್ನು ತಳೆಯುವದೆಂದರೆ ಕಾಮಕ್ರೋಧಾದಿ ಗುಣಗಳನ್ನು ಸುಟ್ಟು ಬೂದಿ ಮಾಡುವದು.' ಅಂದರೆ ಹೊನ್ನು, ಹೆಣ್ಣು, ಮಣ್ಣುಗಳ ಮೇಲಿನ ಆಶೆಯನ್ನು ಅಳಿದು ಅದನ್ನು ನಿರಾಶೆಯನ್ನಾಗಿ ಪರಿಣಮಿಸುವದು.

'ವಿಷಯ ಭೋಗದ ತೃಣಕೆ ಉರಿಯಾಗಿರಲುಬೇಕು' ಎಂಬಂತೆ ಅದನ್ನು ಕನಸು-ಮನಸಿನಲ್ಲಿಯೂ ನೆನಿಸಬಾರದು. ಅಂದರೆ ಇಂಥ ಜನರು ಬಹಳ ಕಡಿಮೆಯೆಂದು ತೋರುತ್ತದೆ. ಅಂತೆಯೇ ಶರಣರು "ಆಶೆಗಾಗಿ ಸತ್ತವರು ಕೋಟಿ. ಆಮಿಷಕಾಗಿ ಸತ್ತವರು ಕೋಟಿ, ಹೊನ್ನು, ಹೆಣ್ಣು, ಮಣ್ಣಿಗಾಗಿ ಸತ್ತವರು ಕೋಟಿ ಗುಹೇಶ್ವರಾ. ನಿಮಗಾಗಿ ಸತ್ತವರ ನೊಬ್ಬರನು ನಾ ಕಾಣೆ ಕಾಣೆ" ಎಂದು ಆಡಿದ್ದಾರೆ. ಕಾರಣ ಜನರು ತಮ್ಮ ಉದರ ಪೋಷಣಾರ್ಥವಾಗಿರುವ ಕಾಯಕದಲ್ಲಿ ಸತ್ಯತೆಯನ್ನು ಬೆರಸಿ, ತಮ್ಮ ಬಾಳ್ವೆಯನ್ನು ಪುನೀತವಾಗಿ ಮಾಡಬೇಕು. ಬಸವಣ್ಣನವರ ಕಾಲದಲ್ಲಿ ಇದ್ದ ಶಿವಶರಣರೂ ಸಹ ಬಾಹ್ಯ ವ್ಯವಹಾರವನ್ನು ಮಾಡುತಲಿದ್ದರು. ಅವರ ಜೀವನವು ಸಾತ್ವಿಕ ಜೀವನವಾಗಿತ್ತು. ಹಾಗೆಯೇ ಈಗಿನ ಪ್ರಪಂಚಿಕರ ಜೀವನವೂ ಆಗಬೇಕಾಗಿದೆ.

ನಾಗರಿಕನು ತೆಪ್ಪವನು ನಂಬಿ ತೀರವನು ತಪ್ಪದೇ ತಲುಪುವಂತೆ ಭವಸಾಗರದಲ್ಲಿ ಸಿಕ್ಕ ಬವಣಿಗರು ಗುರುವಿನ ನಂಬಿ ಭವಸಾಗರದ ತೀರವ ತಪ್ಪದೇ ತಲುಪುವರು. ಜನರಿಗೆ ಅಂಜಿ ನಡೆಯದೆ ಮನಕ್ಕೆ ಅಂಜಿ ನಡೆದು ಮಹೇಶನ ಪಾದ ಕಮಲವ ಸೇರಬೇಕು. ನೀತಿವಂತರಾಗಿರಬೇಕು. ಆಚಾರವಂತರಾಗಿರಬೇಕು. "ಆಚಾರವೇ ಸ್ವರ್ಗ, ಅನಾಚಾರವೇ ನರಕ" ವೆಂಬ ಬಸವಣ್ಣನವರ ಅಮೃತವಾಣಿಯನ್ನು ಅರಿಯಬೇಕು. "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು." ಆದುದರಿಂದ ಇಹಲೋಕ ಯಾತ್ರೆಯನ್ನು ಯಶಸ್ವಿರೀತಿಯಿಂದ ಕೊನೆಗಾಣಿಸಲೆತ್ನಿಸಬೇಕು.

ಕಾಲಮಾನಪರಿಸ್ಥಿತಿಗನುಸಾರವಾಗಿ ನಿಜಪನರಿತವರು ಈಗ ಸಿಕ್ಕುವದು ಕಠಿಣವೆಂದು ತೋರುತ್ತದೆ. ಡಾಂಭಿಕರು ಎತ್ತನೋಡಿದಡತ್ತ ಗೋಚರಿಸುತ್ತಿರುವರು. ದೇವರ ಅಸ್ತಿತ್ವದ ಬಗೆಗೆ ಸಂಶಯ ಸ್ವಭಾವವಿದ್ದ ಮಾನವರು ದೇವರ ಒಲುಮೆಯನ್ನು ನಿರೀಕ್ಷಿಸುತ್ತಲಿದ್ದಾರೆ. ನಂಬಿಕೆ,

ಭಕ್ತಿ, ನಡೆ, ಕಾಯಕವಿಲ್ಲದೆ ದೇವನೊಲಿಯಬಹುವೇ ? ಆತ್ಮಸಾಕ್ಷಾತ್ಕಾರ ಲಭಿಸಬಹುದೇ? “ನಂಬಿ ಕರೆದೊಡೆ ಓ ಎನ್ನನೇ ಶಿವನು? ನಂಬರು ನೆಚ್ಚರು ಬರಿದೆ ಕರೆವರು, ನಂಬಲರಿಯರು ಲೋಕದ ಮನುಜರು, ನಂಬದೆ ನೆಚ್ಚದೆ ಬರಿದೆ ಕರೆದರೆ ಕುಂಬಿ ಮೆಟ್ಟಿ ಕೂಗೆಂದಾ ನಮ್ಮ ಕೂಡಲಸಂಗಮದೇವಾ” ಎಂಬ ಬಸವಣ್ಣನವರ ವಚನದ ಇಂಗಿತವ ತಿಳಿದು ಅದರಂತೆ ಆಚರಿಸಬೇಕು-

ಆಶೆ-ಅಸೂಯೆಗಳ ಅಳಿಯದೆ ಈಶನೊಲಿಯಬಹುದೇ? ಕಾಮ ಕ್ರೋಧವ ಸುಡದೆ ಕಾಮಾರಿ ಕಾಣಿಸಬಹುವೇ? ಲೋಭ ಮೋಹವ ಮರೆಯದೆ ಮಹೇಶ ತೋರಬಹುದೇ? ಮದಮತ್ಸರವ ತೊರೆಯದೆ ಈಶ ಕಾಣಬಹುದೇ? ಇಂತೀ ಅರಿಷಡ್ವರ್ಗಂಗಳ ಸಂಗವ ಬಯಸುವ ಸಾಧಕರ ಶೋಧಕ್ಕೆ ಶಿವನು ಒಳಗಾಗತಕ್ಕವನೇ? ಅರಿಗುಣಗಳ ಅಡಗಿಸದೆ ಕಾವಿಯ ಧರಿಸಿದೊಡೆ ಸನ್ಯಾಸಿಯಾಗಬಲ್ಲನೇ? ಇಂಥ ಸಾಹಸ ನಿರರ್ಥಕ ಸಾಹಸ. ಸ್ವವಂಚಕವಾದದ್ದು, ಹಾಗೆ ಮಾಡುವವನು ತನಗೆ ತಾನು ಹಗೆಯಲ್ಲದೆ ಮತ್ತಾರು?

ನಿಜವನರಿತವರ ಅಡಿಗಳನು ಅನನ್ಯ ಭಕ್ತಿಯಿಂದ ಸದಯಾಂತಃಕರಣದಿಂದ ಹಗಲಿರುಳು ಸೇವಿಸಿ ನಡೆಯಿಂದ ಶುಚಿಯಾಗಿದ್ದೊಡೆ ಅರಿವು ತಾನಾಗಿಯೇ ಲಭಿಸುವದು. ವೇದ, ಪುರಾಣ, ಶಾಸ್ತ್ರಗಳನೋದಿದರೇನು? ನೇಮನಿತ್ಯಾದಿಗಳನಾಚರಿಸಿದಡೇನು? ಹೃದಯ ನಿರ್ಮಲವಾಗಿರದೆ ಹೃದಯೇಶ ಹೊರಗಾಗಬಹುದೇ? “ಕವಿಸಾಧಕರೆಲ್ಲರೂ ಕಳವಳಿಸಿ ಕೆಟ್ಟರೋ, ವಿದ್ಯಾಸಾಧಕರೆಲ್ಲರೂ ಬುದ್ಧಿಹೀನರಾದರೋ, ಪವನ ಸಾಧಕರೆಲ್ಲರೂ ಹದ್ದು ಕಾಗೆಗಳಾದರೋ; ಜಲಸಾಧಕರೆಲ್ಲರೂ ಕಪ್ಪೆ ಮೀನುಗಳಾದರೋ, ಬಸವಣ್ಣ ಸದ್ಗುರು ಸಾಧಕನಾಗಿ ಸ್ವಯಲಿಂಗವಾದ ಕಾಣಾ ಗುಹೇಶ್ವರಾ”

ಎಂಬ ಪ್ರಭುದೇವರ ನುಡಿಯಂತೆ ಸಾಧಕನ ಸಾಹಸವು ವ್ಯರ್ಥವಾಗುವದು.

ಕಲ್ಲುದೇವರಿಗೆಲ್ಲ ಕರಮುಗಿದು ಬೇಡಿದಡೆ ಮುಕ್ತಿ ಕೊಡಬಲ್ಲನೇ ಆ ಕಲ್ಲು ದೇವರು? ಅನೇಕ ವರುಷಗಳಿಂದ ಕಲ್ಲಾಗಿಯೇ ಇದ್ದ ಆ ಕಲ್ಲುದೇವರು ಭವಬಂಧನ ಬಿಡಿಸಬಹುದೇ? ತಾನಾರು? ಎಲ್ಲಿಂದ ಬಂದೆ? ಪೋಗುವದೆಲ್ಲಿಗೆ? ಎಂಬುದನು ಅರಿಯಲಾಗಿ ಬೆಳಗುವ ಚೈತನ್ಯ

ಮಾಯ ಜ್ಯೋತಿಯು ಕಾಣಬಹುದಲ್ಲದೆ, ತನ್ನ ಸರ್ವ ವಯಸ್ಸನ್ನು ವೇದ, ಆಗಮ, ಪುರಾಣಗಳನ್ನು ಓದುವರಿಂದ ತನಗೆ ಜ್ಯೋತಿ ಗೋಚರಿಸಬಹುದೇ? ನುಡಿಯಂತೆ ನಡೆಯಿದ್ದೊಡೆ, ನಿಷ್ಕಾಮ ಭಕ್ತಿಯಿದ್ದೊಡೆ, ಆಚಾರ ಸುವಿಚಾರವಿದ್ದೊಡೆ ದೇವನು ಅವನನುಳಿದು ದೂರನಿಹನೇ ?

ಸು-ಕಾಯಕದಲ್ಲಿ ನಿರತನಾಗಿ, ಸ್ವಭಾವದಿಂದ ಒಳ್ಳೆಯವನಾಗಿ, ಹರಪೂಜೆ ಮಾಡಿ, ಗುರುಜನರ ಸೇವಿಸಿ, ಸತ್ಸಂಗ ಮಾಡಿ ಭವಸಾಗರ ದಾಟಬೇಕು. ಸತ್ಸಂಗವು ಭವಸಾಗರ ದಾಟಲು ಅತ್ಯಂತ ಅವಶ್ಯವು. “ಮಡಿಕೆಯ ಮಾಡುವಡೆ ಮಣ್ಣೆ ಮೊದಲು, ತೊಡಿಗೆಯ ಮಾಡುವಡೆ ಹೊನ್ನೆ ಮೊದಲು, ಶಿವಪಥವನರಿವೊಡೆ ಗುರುಪಥವೆ ಮೊದಲು, ಕೂಡಲ ಸಂಗಮದೇವರನರಿವಡೆ ಶರಣರ ಸಂಗವೆ ಮೊದಲು” ಎಂಬ ಬಸವಣ್ಣನವರ ವಚನವು ಇದೇ ತಿರುಳನ್ನು ವ್ಯಕ್ತಪಡಿಸುತ್ತದೆ. ಸಜ್ಜನರ ಸಹವಾಸದಿಂದ ದುರ್ಗುಣಗಳಡಗಿ ಸುಗುಣಗಳು ಅಳವಡಿಸಿಕೊಳ್ಳುತ್ತವೆ. ಅಜ್ಞಾನ ಅಡಗಿ ಸುಜ್ಞಾನ ನೆಲೆಯಾಗುವದು. ಆದುದರಿಂದ ಮೋಕ್ಷ ಸಾಧನೆಗೆ ಸತ್ಸಂಗವು ಎಷ್ಟರಮಟ್ಟಿಗೆ ಉಪಯೋಗವಿದೆಯೆಂಬುದನ್ನು ಓದುಗರು ಊಹಿಸಬಹುದು.

ಮಾನವನು ಮರಣಪಡಲೇಬೇಕು. ಜನಿಸಿದ್ದು ಸತ್ತೇ ತೀರುವದು. ಅಂತಕನ ಆಳುಗಳಿಗೆ ಕಿಂಚಿತ್ತು ದಯವಿಲ್ಲವೆಂಬಂತೆ ವೇಳೆಯನರಿಯದೆ ಒಯ್ಯಬಹುದು. ಈತನಿಗೆ ಅರಿವು ಪ್ರಾಪ್ತವಾಗಿಲ್ಲವೆಂದು ಬಿಡರು. ಅಂತೆಯೇ ಬೇಗನೆ ಕಾರ್ಯತತ್ಪರರಾಗುವದೊಳಿತು. ಜನನ ಮರಣ ರಹಿತ ಸಿತಿಯಾದ ಮುಕ್ತಿಯನ್ನು ದೊರಕಿಸುವದು ಮಾನವನ ಉದ್ದೇಶ. ಅಥವಾ ಜೀವನದ ಆದರ್ಶ. ತನ್ನ ಕಾರ್ಯಸಾಧನೆಯಲ್ಲಿಯೇ ವೇಳೆಗಳೆಯುವದು ಮಾನವನ ಕರ್ತವ್ಯವಾಗಿದೆ. ಕಾರಣ ವೇಳೆ ಸ್ಥಳಗಳು ಮಹತ್ವವಲ್ಲ. ಹಗಲೆನ್ನದೆ, ಇರುಳೆನ್ನದೆ, ಕನಸೆನ್ನದೆ, ನೆನಸೆನ್ನದೆ, ಯಾವದರಲ್ಲಿಯೂ ಯಾವಾಗಲೂ ಉದ್ದೇಶ ಸಾಧನಸತ್ತ ಮನೋಮುಖರಾಗಿರಬೇಕು.

ಮನವನ್ನು ಜಯಿಸಿ, ಸಮತೆಯತೊಟ್ಟು ಸರ್ವೇಶ್ವರನನ್ನು ನೆನೆಯುತ್ತ ಕಾಲಕ್ಷೇಪಣೆ ಮಾಡಬೇಕು. ಹೆಂಡತಿ, ಮಕ್ಕಳು, ವಸ್ತು, ಒಡವೆಗಳು ನಮ್ಮೊಡನೆ ಬರಲಾರವು. ಅಂದರೆ ಅವುಗಳ ಮೇಲೆಯೇ ಮೋಹಿಸಿ ತನ್ನನ್ನು ತಾನ ಮರೆಯಬಾರದೆಂದರ್ಥ. ನಮ್ಮ ಶರೀರವು ನಮ್ಮದಲ್ಲವೆಂ ನ

ಮೇಲೆ ಅದನ್ನು ಶೃಂಗರಿಸುವದರಿಂದ ಬರುವ ಲಾಭವೇನು? ಪರಹಿತ ಮಾಡಿ ಪರಮಾರ್ಥವರಿಯಬೇಕು. ಸಕಲವನ್ನೂ ಗುರುವಿಗರ್ಪಿಸಿ ಸಕಲವನ್ನೂ ಮಾಡುತ್ತಾ ಸಕಲವನ್ನೂ ಮಾಡದೆ ಇರುವಂತೆ ಇದ್ದು ಜೀವನವ ನೂಕಬೇಕು.

ಮಾನವನು ತನ್ನ ಜೀವನವನ್ನು ಸಾಂಗವಾಗಿ ಸಾಗಿಸುತ್ತಿರಲು ಅನ್ಯರು ಅವನನ್ನು ಅನ್ಯಥಾ ಭಾವಿಸಿ ದ್ವೇಷಿಸುವದು ಜಗತ್ತಿನ ನಿಯಮ ವಾಗಿದೆ. ಇಂಥವರಿಗೆ ಹೆದರಕೂಡದು. ಕೇಡು ಬಗೆಯಕೂಡದು. ಅನ್ಯರು ತನ್ನಗು ನಿಂದಿಸಿದರೆ ಅವರನ್ನು ಜರಿಯದೆ ಆದರಿಸಬೇಕು. ವಿಷವೆರೆದವರಿಗೆ ಹಾಲನೆರೆಯಲೆತ್ನಿಸಬೇಕು. "ಹೊಯ್ದವರೆನ್ನ ಹೊಂದಿದವರೆಂಬೆನು, ಬೈದವರೆನ್ನ ಬಂಧುಗಳೆಂಬೆನು ನಿಂದಿಸಿದವರೆನ್ನ ತಂದೆತಾಯಿಗಳೆಂಬೆನು, ಜರಿದವರೆನ್ನ ಜನ್ಮಬಂಧುಗಳೆಂಬೆನು, ಕೊಂಡಾಡಿದವರೆನ್ನ ಹೊನ್ನಶೂಲದಲ್ಲಿಕ್ಕಿದರು ಕೂಡಲಸಂಗಮದೇವಾ" ಎಂಬ ಬಸವಣ್ಣನವರ ಹಿತೋಕ್ತಿಯನ್ನು ಮನದಟ್ಟು ಮಾಡಿಕೊಂಡು ಅದರಂತೆ ಆಚರಿಸಬೇಕು.

ದೇವನಿಂದ ನಾವು ನಿರ್ಮಿಸಲ್ಪಟ್ಟಿದ್ದೇವೆ. ನಮ್ಮ ಜೀವನವೆಂಬುದು ಒಂದು ನಾಟಕ. ಅದನ್ನು ನೋಡಲು ದೇವನು ನಮಗೆ ಪಾತ್ರಗಳನ್ನು ನಿಯಮಿಸಿ ಕಳಿಸಿದ್ದಾನೆ. ನಮ್ಮ ಪಾತ್ರಗಳನ್ನು ನಾವು ಚನ್ನಾಗಿ ಮಾಡಬೇಕು. ಆದರೆ ಬಹುಮಾನದಾಶೆಯಿಂದಲ್ಲ. ಹಾಗೆಯೇ ನಾವು ಫಲದಾಶೆಯಿಲ್ಲದೆ ಕಾರ್ಯ ಮಾಡಬೇಕಾಗಿದೆ. ಅದೇ ಹಿರಿದಾದ ಕಾರ್ಯ. ಕಾರ್ಯ ಕೈಗೂಡದೆಂದು ಕೊರಗದೆ, ಸಫಲವಾಯಿತೆಂದು ಸಂತೋಷ ಹೊಂದದೆ ಇರುವದೊಳಿತು. ಸುಖದುಃಖಗಳಲ್ಲಿ ಸಮವಾಗಿರುವದು ಸಜ್ಜನರ ಸ್ವಭಾವ.

ಮಾನವನು ಹೊಗಳಿಕೆಗೆ ಹಿಗ್ಗದೆ. ತೆಗಳಿಕೆಗೆ ತಗ್ಗದೆ, ಚಂದ್ರನು ಸಜ್ಜನರಿಂದ ಹೊಗಳಿಸಲ್ಪಟ್ಟವನಾದರೂ, ಕಳ್ಳರಿಂದ ತೆಗಳಿಸಲ್ಪಟ್ಟವನಾದರೂ ತನ್ನ ಪ್ರಕಾಶವನ್ನು ಸರ್ವರಿಗೂ ಸಮನಾಗಿ ಬೀರುವಂತೆ ಹೊಗಳಿಕೆ-ತೆಗಳಿಕೆಗೆ ಕಿವಿಗೊಡದೆ ಕಾರ್ಯತತ್ಪರರಾಗಬೇಕು. ಜಗತ್ತಿನಲ್ಲಿ ಅನೇಕಾನೇಕ ವಸ್ತುಗಳುಂಟು. ಮಾನವನು ಮಾಡತಕ್ಕ ಅನೇಕ ಕಾರ್ಯಕಲಾಪಗಳುಂಟು. ಮಾನವನು ಪ್ರಕೃತಿಯಲ್ಲಿ ಗೋಚರಿಸುವದೆಲ್ಲವನ್ನೂ ತನ್ನ ಬುದ್ಧಿಮತ್ತೆಯಿಂದ ಜಯಿಸಬಲ್ಲನು. ಆದರೆ ಅಂತರಂಗದಲ್ಲಿ

ನೆಲೆಯಾಗಿರುವ ಹೀನ ಗುಣಗಳನ್ನು ಜಯಿಸುವದು ತುಸು ಕಷ್ಟಸಾಧ್ಯವಾದ ಕೆಲಸ. ಆದರೂ ದೃಢನಿಶ್ಚಯ, ಸತತ ಪ್ರಯತ್ನಗಳಿಂದ ಅವುಗಳನ್ನು ಸುಲಭವಾಗಿ ಜಯಿಸಬಹುದಾಗಿದೆ.

ಆಶೆ-ನಿರಾಶೆಗಳು ಸುಖದುಃಖಗಳು, ಸ್ತುತಿನಿಂದೆಗಳು, ಮಾನಾಪಮಾನಗಳು, ಹಗಲಿರುಳಿನಂತಿವೆ. ನಡೆಯುವ ಬಂಡೆಯ ಗಾಲಿಯ ಹಲ್ಲುಗಳಂತಿವೆ. ತಿರುಗುವ ಚಕ್ರದ ಹಲ್ಲುಗಳಂತಿವೆ. ಪರಮಾರ್ಥ ಸಾಧನೆಯಲ್ಲಿ ಮಾನವನು ಇವುಗಳಲ್ಲಾವುದಕ್ಕೂ ಹೆದರಬೇಕಾಗಿಲ್ಲ. "ಮತದ ಜಾಳಿಗೆಯಲ್ಲಿ ಬೀಳದೆ ಮತಿಯ ಘಳಿಗೆಯಲ್ಲಿ ಮೆರೆಯಬೇಕಾಗಿದೆ." ಅಂತೆಯೇ ಅವುಗಳಿಗೆ ಬೆದರದೆ ಕಾರ್ಯತತ್ಪರರಾಗಬೇಕು. ವೀರಶೈವರು ಲಿಂಗಾಂಗ ಸಾಮರಸ್ಯವನ್ನೂ ಮಿಕ್ಕವರು ತಮ್ಮ ಇಷ್ಟದೇವತೆಗಳಲ್ಲಿ ಪರಿಪೂರ್ಣತೆ ಹೊಂದುವರು. ಶರಣರ, ಅನುಭವಿಕರ, ಜ್ಞಾನಿಗಳ, ತಪೋನಿಧಿಗಳ ಹೇಳಿಕೆಯ ಮರ್ಮವನ್ನೂ ಮಾನವನು ತನ್ನ ಕರ್ಮಮಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಮಾನವನ ಆಯುಷ್ಯವು ಅಲ್ಪವಾಗಿರುವದರಿಂದ ಅಜ್ಞಾನ ದಿಶೆಯಲ್ಲಿ ಮರಣಪಡಬೇಕಾಗುವದು. ಈ ಪರಿಸ್ಥಿತಿಯನ್ನು ತಂದು ಕೊಳ್ಳದೆ ಅರಿಯಬೇಕಾದುದನ್ನು ಅರಿಯಬೇಕು.

ತನ್ನನ್ನು ತಾನು ತಿಳಿಯುವದೇ ಕೊನೆಯ ಧ್ಯೇಯ, ಹದಗೆಟ್ಟ ಬಾಳ್ವೆಯನ್ನು ಸುವ್ಯವಸ್ಥಿತಗೊಳಿಸಿ ಅದಕ್ಕೆ ಮೂರ್ತ ಸ್ವರೂಪಕೊಟ್ಟು, ತತ್ವವನ್ನು ಬೆರಿಸಿ, ಆದರ್ಶ ಜೀವನವನ್ನಾಗಿ ಮಾಡಬೇಕು. ಮಹಾತ್ಮರ ಉಪದೇಶದಂತೆ ಅನುಸರಿಸಬೇಕು. ಅಂದರೆ ಅವರ ಹೆಜ್ಜೆಯಂತೆ ಸಾಗಬೇಕು. ಈ ವಿಷಯದ ಬಗ್ಗೆ ಲಾಂಗಫೆಲೋ ಎಂಬ ಆಂಗ್ಲ ಕವಿಯ ಅಭಿಪ್ರಾಯವೇನಂದರೆ:—

Lives of great men all remind us,
We can make our lives sublime,
And departing leave behind us.
Foot prints.on the sands of time.

ಮಹಾತ್ಮರ ಜೀವನ ಚರಿತ್ರೆಗಳು ನಾವೂ ಅದರಂತೆ ಉದಾರವಾಗಬೇಕೆಂಬುದನ್ನು ನೆನಪಿಗೆ ತಂದುಕೊಡುತ್ತವೆ. ಅವರಂತೆ ನಾವು ಆಚರಿಸಿದಲ್ಲಿ ನಾವು ಸತ್ತಬಳಿಕ ನಮ್ಮ ಮುಂದಿನ ಪೀಳಿಗೆಯು ನಮ್ಮನ್ನು ಅನುಸರಿಸುವದು."

ಅದರಂತೆ ನಾವು ಮಹಾತ್ಮರ ಜೀವನದಂತೆ ನಮ್ಮ ಜೀವನವನ್ನು ಸಾಗಿಸಬೇಕು. ಇದರಿಂದ ನಾವೂ ಮಹಾತ್ಮರಾಗಬಲ್ಲೆವು. ನಮ್ಮನ್ನು ನೋಡಿ ಅನ್ಯರೂ ಅದರಂತೆ ಆಚರಿಸುತ್ತಾರೆ. ಹೀಗೆ ಮಾನವ ಜನಾಂಗ ಸುಧಾರಣೆ ಹೊಂದುವದು. ನಮ್ಮ ಜೀವನವು ಆದರ್ಶಮಯವಾಗಿರಬೇಕು. ಸುವ್ಯವಸ್ಥಿತ ರೀತಿಯಿಂದ ನಮ್ಮ ಬಾಳ್ವೆಯನ್ನು ನಡೆಯಿಸಿದಲ್ಲಿ ಅದು ಸುಗಮವಾಗಿ, ಸುಸೂತ್ರವಾಗಿ, ಸಾಂಗವಾಗಿ, ಸಾವಧಾನವಾಗಿ ಸಾಗ ಬಲ್ಲದು.

ಹೀಗೆ ನಿಜಜೀವನದ ಉದ್ದೇಶವನ್ನು ತಲುಪಲು ಎಡೆಬಿಡದೆ ಯತ್ನಿಸುತ್ತ ಅಡ್ಡಿ ಆತಂಕಗಳಿಗೆ ಎರವಾದರೂ, ಆಶೆ ಅಸೂಯೆಗಳ ನಿಲುಮೆಗೆ ನಿಲುಕದೆ, ಬದುಕು ಬಾಳ್ವೆಯ ಬಲೆಗೆ ಬೀಳದೆ, ಸತಿಸುತರ ಮೋಹಕ್ಕೆ ಕಲುಕದೆ, ಅರಿಷಡ್ವರ್ಗಂಗಳಿಗೆ ಸಿಲುಕದೆ, ಹಗಲಿರುಳು ಹರನಾಮದಲ್ಲಿ ನೆಲಿಸಿ ಗುರುಜನರ ಸೇವಿಸಿ, ತಮ್ಮ ಬಾಳಿನಲ್ಲಿಯೇ ಜೀವನದ ಉದ್ದೇಶವನ್ನು ತಲುಪುವದಕೆ ಪ್ರಯತ್ನಿಸಬೇಕು. ಬಾಳಿನ ಬಲೆಯಲ್ಲಿ ಬೀಳದೆ ಬವಣೆಯನ್ನು ನೀಗಬೇಕು.

# "ಹೃದಯ ಪರಿವರ್ತಕ ಬಸವಣ್ಣವರು"

[ಲೇಖಕರು:- ಶ್ರೀ ಈಶ್ವರಪ್ಪ ಶಿವಲಿಂಗಪ್ಪ ಉಮರಾಣಿ, ಬಿ. ಎ.
ಸಬ್‌ರಜಿಸ್ಟ್ರಾರ-ಬೈಲಹೊಂಗಲ.]

"ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ತನುವ ಸಂತಯಿಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತಯಿಸಿಕೊಳ್ಳಿ ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲ ಸಂಗಮದೇವ "

ಶ್ರೀ ಬಸವಣ್ಣವರು ಈಗ ಎಂಟುನೂರು ವರ್ಷಗಳ ಹಿಂದೆ ಈ ಸುಂದರವಾದ ವಚನವನ್ನು ಹಾಡಿದ್ದು, ಇಂದಿನ ಜನತೆಗೆ ಇದು ಬಹಳ ಅವಶ್ಯವಾಗಿ ಬೇಕಾಗಿದೆ. ಸದಾವಕಾಲದಲ್ಲಿ ಸರ್ವರಿಗೂ ಅನ್ವಯಿಸುವ ಅವಶ್ಯವಾಗಿ ಬೇಕಾಗಿದೆ. ಸದಾ ಕಾಲದಲ್ಲಿ ಸರ್ವರಿಗೂ ಅನ್ವಯಿಸುವ ಸತ್ಯ ವಚನವಿದು. ಸರ್ವತೋಮುಖ ಸುಧಾರಣೆಯನ್ನು ಹೊಂದಿ, ಸತ್ಯ ಶುದ್ಧ ಕಾಯಕ ನಿಷ್ಠರಾಗಿ ಬಾಳಿ, ತಮ್ಮ ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಂಡು, ಕೃತಾರ್ಥರಾಗಬೇಕೆಂದು ಬಯಸುವ ಜನ ಸಾಮಾನ್ಯರು ತಮ್ಮ ಧ್ಯೇಯ ಸಾಧನೆಯ ಮಾರ್ಗದಲ್ಲಿ, ತಾವು ಎಲ್ಲಿಂದ ಆರಂಭಿಸಬೇಕು ಮತ್ತು ಯಾವ ರೀತಿ ಮುಂದೊರಿಯಬೇಕು ಎಂಬುವದನ್ನು ಶ್ರೀ ಬಸವಣ್ಣವರ ಮೇಲಿನ ವಚನದಲ್ಲಿ ನಿಚ್ಚಳವಾಗಿ ಕಾಣಬಹುದು. ಆ ವಚನದ ಅಭಿಪ್ರಾಯವೇನಂದರೆ— ಜನರು ತಮ್ಮ ಸುಧಾರಣೆಯನ್ನು ಮೊದಲು ಸಾಧಿಸಿಕೊಂಡು, ಆ ಬಳಿಕ ಜನತೆಯ ಸುಧಾರಣೆಯದತ್ತ ಕಾರ್ಯ ಪ್ರವರ್ತರಾದರೆ ಮಾತ್ರ, ಅವರ ಪ್ರಯತ್ನವು ಸಾರ್ಥಕವಾಗುವದು; ಮತ್ತು ನಿಜವಾದ ಸುಧಾರಣೆಯ ಸೊಬಗನ್ನು ಸಕಲರೂ ಕಾಣಬಹುದು; ಕಂಡು ಶಾಂತಿಯನ್ನು ಹೊಂದಬಹುದು.

ಶ್ರೀ ಬಸವಣ್ಣವರು ಕೇವಲ ತನುವನ್ನು ಸಂತಯಿಸಿಕೊಳ್ಳಿರಿ ಎಂದು ಹೇಳಿ ಅಷ್ಟಕ್ಕೆ ನಿಲ್ಲದೆ, ಮನವನ್ನು ಸಂತಯಿಸಿಕೊಳ್ಳಲು ಒಳ್ಳೇ ಮಾರ್ಮಿಕವಾಗಿ ನುಡಿದಿದ್ದಾರೆ. ಇದು ಬಹು ಸ್ವಾರಸ್ಯವಾದ ಅನುಭವವು. ತನುವಿನ ಮಲಿನತೆಯ ಜೊತೆಗೆ, ಮನದ ಮಲಿನತೆಯನ್ನು ಕಳೆದುಕೊಳ್ಳುವದೇ ಅತಿ ಮಹತ್ತರವಾದ ವಿಷಯವು. ಆದರೆ, ಮೊದ

ಲನೇದಕ್ಕಿಂತ ಎರಡನೇದು ಬಹು ಜಾಡ್ಯ ಮತ್ತು ಅಷ್ಟೇ ಕಠಿಣತರ ವಾದದ್ದು. ಅದನ್ನು ಹೋಗಲಾಡಿಸಲು ಅತಿ ಕಠೋರವಾದ ಸಾಧನೆ ಬೇಕು. ಮತ್ತು ಧೃಡತರವಾದ ಪ್ರಯತ್ನ ಬೇಕು. ತನುಮನ ಇವೆರಡೂ ಹಸನಾದಬಳಿಕ, ಭಗವಂತನಬಳಿ ಸಾರುವ ಬೆಡಗಿನ ಬಟ್ಟೆ ( ದಾರಿ ) ತೋರುವದು. ಆ ದಾರಿಯನ್ನು ಅರುವಿನ ಬೆಳಕಿನಲ್ಲಿ ತುಳಿಯುತ್ತ ಶಾಂತಿ ಸಮಾಧಾನದಿಂದ ಸಾಗಿದರೆ, ತನ್ನ ಜೀವನದ ಗುರಿಯಾದ ಮುಕ್ತಿ ಪಟ್ಟಣವನ್ನು ಮಾನವನು ಸಹಜವಾಗಿ ಸೇರಬಹುದು. ಇದು ಸೂರ್ಯ ಪ್ರಕಾಶದಷ್ಟು ಸತ್ಯಮಾರ್ಗ.

ಆದರೆ ಈಗ ಜಗತ್ತು ಎತ್ತ ಸಾಗಿದೆ ? ಏನನ್ನು ಸಾಧಿಸಲು ಹೊರ ಟಿದೆ ? ಯಾವ ಮಾರ್ಗವನ್ನು ಅನುಸರಿಸಿದೆ ? ಇದು ಒಂದು ದೊಡ್ಡ ಸಮಸ್ಯೆಯಾಗಿಬಿಟ್ಟಿದೆ. ಆದಾಗ್ಯೂ ಒಂದು ಪದದ ಅರ್ಥವು ಅದರ ಪಲ್ಲವಿ ಯಲ್ಲಿ ಅಡಗಿದಂತೆ, ಸರ್ವಸಾಮಾನ್ಯ ಒಂದು ವ್ಯಕ್ತಿ ಜೀವನವನ್ನು ನಿಷ್ಪಕ್ಷಪಾತದಿಂದ ನಿರೀಕ್ಷಿಸಿ, ಸದಸದ್ವಿವೇಕ ಬುದ್ಧಿಯ ಅಳಿಗೋಲಿ ನಿಂದ ಅಳೆದು ನೋಡಿದರೆ, ಈ ಜಗತ್ತಿನ ಸ್ವರೂಪವು ಸ್ಥೂಲ ರೂಪದಲ್ಲಿ ಹೊಳೆಯಬಹುದಾಗಿದೆ.

ಈಗ ವಿಚಾರಮಾಡಿ ನೋಡಿದರೆ, ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಹಗುರಾದ ಕೆಲಸವೆಂದರೆ, ಅನ್ಯರಿಗೆ ಬುದ್ಧೀ ಹೇಳುವದು. ಅದರಂತೆ ಎಲ್ಲಕ್ಕಿಂತಲೂ ಕಠಿಣವಾದ ಕೆಲಸವೆಂದರೆ, ತನ್ನ ತಾನರಿಯುವದು ಇದು ಸರ್ವರ ಅನುಭವಂಗಳಿಗೆ ಕಂಡ ಮಾತಾಗಿದೆ. ಇವುಗಳಲ್ಲಿ ಮೊದಲನೇದನ್ನೇ ಅಂದರೆ ಅನ್ಯರಿಗೆ ಬುದ್ಧೀ ಹೇಳುವದನ್ನೇ ತಮ್ಮ ಜೀವನದ ಮುಖ್ಯ ಕೆಲಸವನ್ನಾಗಿಟ್ಟುಕೊಂಡು ಸಾಗಿದ ಜನರೇ ಹೆಚ್ಚಾಗಿರಬಹುದೆಂದು ಹೇಳಿ ದರೆ ತಪ್ಪಾಗದು. ಬುದ್ಧಿವಾದವನ್ನು ಕೇಳುವ ಜನರಿಗಿಂತ ಅದನ್ನು ಹೇಳುವ ಜನರೇ ಹೆಚ್ಚಾಗಹತ್ತಿದ್ದಾರೆ. ಹೀಗಾಗಿ ಕೆಲವು ಸಮಯಗ ಳಲ್ಲಿ, ಬುದ್ಧಿ ಹೇಳುವವನ ನಡೆನುಡಿಗಳಲ್ಲಿ ಮೇಳು ಇಲ್ಲದ್ದನ್ನು ಕಂಡು, ಕೇಳುವವನು ಆತನ ಬೆನ್ನುಹತ್ತದೆ ಹಿಂದಕ್ಕೆ ಸರಿದರೆ, ಹೇಳುವವನು ಏನಕೇನ ಪ್ರಕಾರದಿಂದ ಕೇಳುವವನಮೇಲೆ ತನ್ನ ಪ್ರಭಾವ ಬೀರಲು ಪ್ರಯತ್ನಿಸುವ ಸಂಭವವುಂಟು. ಇದರಿಂದ ಹೇಳುಕೇಳುವವರಲ್ಲಿ ಗುದ್ದ್ಯಾಟ ಪ್ರಾರಂಭವಾದಲ್ಲಿ ಯಾರೂ ಆಶ್ಚರ್ಯಪಡಬೇಕಿಲ್ಲ. ಯಾಕಂದರೆ ಸಾ ರ

ರಹಿತ ಬುದ್ಧಿವಾದವಿದ್ದರೆ, ಅದನ್ನು ಎಲ್ಲರೂ ಸ್ವಾಗತಿಸುವರು. ಆದರೆ ಅದು ಸ್ವಾರ್ಥ ಸಹಿತ ಬುದ್ಧಿವಾದವಿದ್ದದ್ದು ಕೇಳುವವನ ಮನಸ್ಸಟ್ಟಾದರೆ ಮಾತ್ರ. ಆತನಮೇಲೆ ಅದು ಯಾವ ಪರಿಣಾಮವನ್ನೂ ಮಾಡಲಾರದು. ಸ್ವಾರ್ಥಸಹಿತ ಬುದ್ಧಿವಾದವು ಸಂಕುಚಿತ ಭಾವವುಳ್ಳದ್ದಿರುವದರಿಂದ, ಪರ ವಂಚನೆಗೂ ಮತ್ತು ಆತ್ಮ ಘಾತಕ್ಕೂ ಏಕಕಾಲಕ್ಕೆ ಕಾರಣವಾಗುವದು. ಇಂಥವರನ್ನು ಕುರಿತೇ ಶ್ರೀ ಬಸವಣ್ಣನವರು, ಲೋಕದ ಡೊಂಕ ತಿದ್ದುವ ಉಸಾಬರಿಗೆ ಹೋಗಕೂಡದೆಂದು ಖಂಡ ತುಂಡ ಹೇಳಿದ್ದಾರೆ. ಪ್ರತಿ ಯೊಬ್ಬನು ತನ್ನ ಲೋಪ ದೋಷಗಳನ್ನು ಕಂಡುಕೊಂಡು, ಅವುಗಳನ್ನು ತಿದ್ದಿಕೊಳ್ಳಲು ಹೆಣಗುವದೇ ನಿಜವಾದ ಸ್ಥಿರಶಾಂತಿಯ ಮೂಲಾಧಾರ ವೆಂದು ಶ್ರೀ ಬಸವಣ್ಣನವರು ಸ್ಪಷ್ಟವಾಗಿ ಹೇಳಿದ್ದಾರೆ.

ಈಗ ನೋಡಿರಿ, ಒಂದು ವ್ಯಕ್ತಿಜೀವನ ಮೊದಲ್ಗೊಂಡು ಒಂದು ವಿಶ್ವ ಜೀವನದವರೆಗೂ ಎಲ್ಲಿ ನೋಡಿದಡಲ್ಲಿ ಎಲ್ಲವೂ ಅಶಾಂತತೆಯ ನೆಲ ವೀಡಾಗಿದೆ. ಶಾಂತಿ ಸಮಾಧಾನಗಳ ಸುಳಿವೇ ಅಡಗಿದಂತೆ ಕಾಣುತ್ತಿದೆ. ಯಾವುದೋ ಒಂದು ಅಸ್ಥಿರ ಅಸ್ಪಷ್ಟ ಗುರಿಯ ಉದ್ದೇಶ ಸಾಧನೆಗಾಗಿ ಎಲ್ಲೆಡೆಯಲ್ಲಿಯೂ ಕೂಗಾಟ ಕೋಲಾಹಲಗಳು ಕೇಳಬರುತ್ತಿವೆ. ಬಡವ-ಬಲ್ಲಿದರು, ಸಿರಿವಂತ-ಸಾಮಂತರು ದೇಶ-ವಿದೇಶಿಯರು, ಸ್ತ್ರೀ-ಪುರುಷರು, ಬಾಲ-ವೃದ್ಧರು, ಯಾರೇ ಇರಲಿ, ಯಾರನ್ನು ಕೇಳಿದರೂ, ಪ್ರತಿಯೊ ಬ್ಬರು ತಮ್ಮ ತಮ್ಮ ಸ್ಥಿತಿಯನ್ನು ತಮ್ಮ ತಮ್ಮ ಅನುಭವವನ್ನು ತರತರ ವಾಗಿ ಚಿತ್ರಿಸುತ್ತಾರೆ. ಆ ಸ್ಥಿತಿ, ಆ ಅನುಭವ, ಇವು ಅಶಾಂತತೆಯ ಆಗರವೋ ಅಥವಾ ಕೊರತೆಯ ಕೊಳ್ಳವೋ ಎಂಬಂತೆ ಒಬ್ಬ ಹಾದಿ ಹೋಕನಿಗೂ ಹೊಳೆವ ಮಾತಾಗಿದೆ.

ಆದರೆ ಆ ಅಶಾಂತತೆಯಿಂದ ಉದ್ಭವಿಸುವ ಅನೇಕ ತರದ ದುಃಖ ಪರಂಪರೆಯ ಮೂಲ ಕಾರಣವನ್ನು ಹುಡುಕಲು, ಮನಸ್ಸು ಮಾಡಿದರೆ ಬಹಳ ವೇಳೆಯೂ ಬೇಕಿಲ್ಲ. ಮತ್ತು ತನ್ನನ್ನು ಬಿಟ್ಟು ಹೊರಗೂ ಹೋಗಬೇಕಿಲ್ಲ. ತನ್ನಲ್ಲಿಯೇ ಇರುವ ಅರಿವಿನ ಮೊರೆ ಹೊಕ್ಕದ್ದಾದರೆ, ಆ ಶಿಕ್ಷಣದಲ್ಲಿ ಗೋಚರವಾಗದಿರದು. ಮಾನವನು ತನ್ನ ಮಾನವತೆಯ ಬೆನ್ನೆಲುಬಿನಂತೆ ಇದ್ದ ನೀತಿದೇವಿಯ ನಿಡುಗೊಲೆಯನ್ನು ಗೆಯ್ದು ಪಶುವೃತ್ತಿ ರಾಕ್ಷಸಿಯ ಕೈಗೊಂಬೆಯಾಗಿ ನಡೆಸಿದ ಕರಾಳ ಕುಣಿತವೇ ಈ ದುಃಖ

ಪರಂಪರೆಗೆ ಮೂಲ ಕಾರಣವೆಂದು ಅವನಿಗೆ ಕಾಣದಿದ್ದು. ಈ ಪಶು ನೃತ್ತಿಗೆ ತಳಹದಿಯಾದ ಅಹಂಕಾರ ಸರ್ಪವು ಹೆಡೆಯೆತ್ತಿ ಹೊರಬಂದು ಮನಬಂದಂತೆ ವಿಷಕಾರಿ, ಈ ಮಾನವನ ಸಂಜೀವನದ ಝರಿಯನ್ನೇ ವಿಷಮಯ ಮಾಡಿ, ಆತನನ್ನು ಸರ್ವನಾಶಕ್ಕೆ ಗುರಿಮಾಡುವದು.

ಇಂಥ ದುಸ್ಥಿತಿಯಿಂದ ದೂರಾಗಿ, ತಮ್ಮ ಬಾಳನ್ನು ಬೆಳಗಿಕೊಂಡು ಜಗತ್ತಿನ ಕಲ್ಯಾಣಕ್ಕಾಗಿ ಹೋರಾಡಿ, ಅಮರರಾಗಿ, ಈ ಹೊತ್ತಿಗೂ ನಮ್ಮೊಳು ಕೀರ್ತಿಕಾಯರಾಗಿ ಇರುವ ಅನೇಕ ಮಹಾನುಭಾವರನ್ನು ನಾವು ನೆನೆದುಕೊಳ್ಳೋಣ. ಮಹಾತ್ಮಾ ಬುದ್ಧ, ಏಸೂಕ್ರೈಸ್ತ, ಮೊಹಮ್ಮದ ಪೈಗಂಬರ, ಶ್ರೀ ಪ್ರಭುದೇವ, ಮಹಾನುಭಾವರಾದ ಬಸವಣ್ಣ, ಚನ್ನಬಸವಣ್ಣ, ಶಂಕರಾಚಾರ್ಯ, ತುಳಸೀದಾಸ, ಮಹಾತ್ಮಾ ಗಾಂಧೀಜಿ ಇವರೇ ಮೊದಲಾದ ಮಹಿಮರ ಜೀವನದತ್ತ ನಮ್ಮ ದೃಷ್ಟಿಯನ್ನು ಹೊರಳಿಸುವಾ. ಎಲ್ಲರೂ ಆದರ್ಶ ಜೀವಿಗಳು ಅಮರರು, ಅಘಟನಾ ಘಟನ ಶಕ್ತಿಸಂಪನ್ನರು. ಇವರೆಲ್ಲರೂ ಉಚ್ಚ ತತ್ವನಿಷ್ಠರು. ಉದಾತ್ತ ಧ್ಯೇಯಿಗಳು. ಆ ಧ್ಯೇಯ ಸಿದ್ಧಿಗಾಗಿ ಅಷ್ಟೇ ಉದಾತ್ತವಾದ ಸಾಧನ ಮಾರ್ಗಗಳನ್ನು ಕೈಕೊಂಡರು. ಜಗತ್ ಕಲ್ಯಾಣಕ್ಕಾಗಿ, ಅಂದರೆ ಅಜ್ಞ ಜೀವಿಗಳ ಉತ್ಕರ್ಷಕ್ಕಾಗಿ, ಅವರ ಉದ್ಧಾರಕ್ಕಾಗಿ ಅರ್ಥಾತ್ ಮಾನವರಿಂದ ಮಾನವರಿಗಾಗುವ ಅನ್ಯಾಯ ಪರಂಪರೆಯನ್ನು ನಿರ್ಮೂಲ ಮಾಡುವದಕ್ಕಾಗಿ, ತಮ್ಮ ಜೀವನವನ್ನೇ ಸವಿಸಿ, ಮಹಾ ತ್ಯಾಗಿಗಳಾದರು. ಆತ್ಮೋದ್ಧಾರವು ಸಕಲರ ಸೊತ್ತು. ಮತ್ತು ಅದನ್ನು ಎಲ್ಲರೂ ಸಂಪಾದಿಸಿ ಸರ್ವಜ್ಞರಾಗಿ ಬಾಳಬೇಕೆಂಬ ಹಂಬಲವು ಎಲ್ಲ ಮಹಾತ್ಮರ ಹೃದಯದಲ್ಲಿ ತುಂಬಿ ತುಳುಕುತ್ತಿರುವದು. ಹಾವಿನ ಹುತ್ತಕ್ಕೆ ಹಲವಾರು ಬಿಲಗಳಿದ್ದು, ಯಾವದೇ ಬಿಲದಿಂದ ಹಾವು ಹುತ್ತಿನೊಳಗೆ ಹೋದಾಗ್ಯೂ, ಅದು ಅಲ್ಲಿ ವಿಶ್ರಮಿಸುವ ಸ್ಥಾನ ಒಂದೇ ಇರುವಂತೆ, ಮಹಾತ್ಮರು ಭಿನ್ನ ಭಿನ್ನ ಹೆಸರಿನಲ್ಲಿ ಭಿನ್ನ ಭಿನ್ನ ತೋರುವ ಮಾರ್ಗಗಳನ್ನು ಅವಲಂಬಿಸಿದಾಗ್ಯೂ, ಸಕಲರೂ ಮುಟ್ಟುವ ಸ್ಥಾನ ಒಂದೇ ಇದೆ. ಇದೇ ನಿಜಶಾಂತತಿ. ಇದುವೇ ಮುಕ್ತಿ.

ಮಹಾತ್ಮರು ತತ್ವಜ್ಞಾನಿಗಳು, ತತ್ವನಿಷ್ಠರು ಇರುತ್ತಾರೆ. ತತ್ವವು ವೈಶಾಲ್ಯತೆಯನ್ನೂ, ಪರಿಪೂರ್ಣತೆಯನ್ನೂ, ಮತ್ತು ಪವಿತ್ರತೆಯನ್ನೂ ಒಳಗೊಂಡಿರಲು ಸಾಕು. ಅದೇಕೆ? ಇವೆಲ್ಲವುಗಳ ಸಮ್ಮಿಲನ ಸ್ವರೂಪವೇ ತತ್ವವೆಂದರೆ ತಪ್ಪಾಗದು. ಇಂಥ ತತ್ವವಂತರೇ ಮಹಾತ್ಮರು.

ವೀರಶೈವರು ತಳೆದ ಶಿವತತ್ವವು ಅಥವಾ ಲಿಂಗತತ್ವವು ಇವುಗಳನ್ನೇ ಒಳಗೊಂಡಿದೆ. ಜ್ಞಾನರೂಪಿಯಾದ ಗುರುವು ಜ್ಞಾನದಿಶೆಯಲ್ಲಿದ್ದ ಶಿಷ್ಯನ ಮಸ್ತಕದಮೇಲೆ ತನ್ನ ಅಭಯ ಹಸ್ತವನ್ನಿಟ್ಟು, ಕರುಣಾಮಯ ದೃಷ್ಟಿಯಿಂದ ನೋಡಿ, "ಅಯ್ಯಾ, ಶಿಷ್ಯನೇ ಪರಮಾತ್ಮನು ಸರ್ವವ್ಯಾಪಿಯು, ನಿತ್ಯ ಪರಿಪೂರ್ಣನು, ಸದಾ ಪವಿತ್ರನು ಇದ್ದಾನೆ. ಇಂಥವನನ್ನು ಅರಿಯಲು. ಅರಿತು ಅವನನ್ನು ಹೊಂದಲು ನಿನ್ನಲ್ಲಿ ಜ್ಞಾನವಿದೆ, ಚಿತ್‌ಶಕ್ತಿ ಇದೆ, ಮಹಾ ಬೆಳಗಿದೆ, ಇದರಲ್ಲಿಯೇ ನೀನು ನಿನ್ನ ನಿಜರೂಪವನ್ನು ಕಾಣು. ನೀನೇ ಅವನಿರುವಿ" ಇಂತು ಪರಿಬೋಧಿಸಿ ಆ ಚಿತ್‌ಕಲೆಯ ಪ್ರತೀಕವಾದ ಇಷ್ಟಲಿಂಗವನ್ನು ಶಿಷ್ಯನ ಕರಸ್ಥಲದಲ್ಲಿ ದಯಪಾಲಿಸುತ್ತಾನೆ. ಆಮೇಲೆ ಮುಂದೊರೆಯುತ್ತ "ಅಯ್ಯ, ಇದು ಇಷ್ಟಲಿಂಗವಪ್ಪಾ, ಅನಿಷ್ಟವಲ್ಲವಪ್ಪಾ, ಇಷ್ಟವೆಂದರೆ ಒಳ್ಳೇ, ಚಲೊ, ಅಂತ ಧ್ವನಿತವಾಗುತ್ತಿದೆ ಇಷ್ಟವೆಂದಾಕ್ಷಣಕ್ಕೆ "ಬೇಡಿದ್ದನ್ನು ಕೊಡುವ" ಎಂಬ ಭಾವನೆಯು ಅಷ್ಟೊಂದು ಯಥಾರ್ಥವಾಗಲಾರದಪ್ಪಾ. ಯಾಕಂದರೆ ವೀರ ಭಕ್ತನಾದ ನೀನು ಈ ಲಿಂಗಯ್ಯನಿಂದ ಬೇಡಿ ಪಡೆಯುವದೇನಿದೆ? ಅವನಿಗಾಗಿ, ಅವನ ಸೇವೆಗಾಗಿ, ನೀನು ನಿನ್ನ ತನುಮನ ಧನಗಳನ್ನು ಧಾರೆಯರೆಯಬೇಕು. ನೀನು ಆತ್ಮಾರ್ಪಣಕ್ಕೂ ಸಿದ್ಧನಾಗಬೇಕಾಗುವದು. ಶಿಷ್ಯನೇ, ಒಂದೇ ಮಾತಿನಲ್ಲಿ ಹೇಳುವದಿಷ್ಟೇ ಏನಂದರೆ, ನೀನು ನಿನ್ನ ಕೇಡಿನ ದಾರಿಬಿಟ್ಟು, ಒಳ್ಳೇದಾದ ನಿಜತತ್ವ ಮಾರ್ಗವನ್ನು ಅವಲಂಬಿಸು. ಅಂದರೆ ಮುಕ್ತನಾಗುವಿ"

ಅಂದಬಳಿಕ ನೋಡಿದಿರಾ? ನಾವು ಲಿಂಗವಂತರು, ಲಿಂಗಾಂಗಿಗಳು ಎಂದರೆ, ನಾವು ತತ್ವವಂತರು, ತತ್ವನಿಷ್ಠರು ಎಂತ ಹೇಳಿದಂತಾಗಲಿಲ್ಲವೇ? ಹೌದು ನಿಶ್ಚಯವಾಗಿ ಹೇಳಿದಂತಾಯಿತು. ಸಂದೇಹವಿಲ್ಲ. ಶ್ರೀ ಗುರು ಕಾರುಣ್ಯದಿಂದ, ನಮ್ಮಲ್ಲಡಗಿದ ಚಿತ್‌ಶಕ್ತಿಯೇ ನಮ್ಮ ಕರಸ್ಥಲದಲ್ಲಿ, ನಮ್ಮ ಲಿಂಗದಮೇಲೆ, ನಮ್ಮ ಉದ್ಧಾರಕ್ಕಾಗಿ ಲಿಂಗರೂಪದಲ್ಲಿ ಬಂದಿದೆ ಎಂದು ತಿಳಿದುಕೊಂಡು ಹೇಳುವ ನಮ್ಮ ನುಡಿಯು ಹಸನಾದ ಮತ್ತು ಪರಿಶುದ್ಧವಾದ ನುಡಿಯು. ಆದರೆ ಇಂಥ ನುಡಿಯೊಂದೇ ಇದ್ದರೆ ಸಾಲದು. ಅದಕ್ಕನುಗುಣವಾದ ನಡೆಯೂ ಅವಶ್ಯವಾಗಿ ಬೇಕು. ಯಾಕಂದರೆ, "ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ, ಹಿಡಿದಿರ್ದ ಲಿಂಗವು ಘಟಸರ್ಪನಯ್ಯ" ಎಂದು ಶ್ರೀ ಬಸವಣ್ಣವರು ಚನ್ನಾಗಿ ಎಚ್ಚರಿಸಿದ್ದು ಅತಿ ಮಹತ್ವದ್ದಿದೆ. ನಮ್ಮ ನುಡಿ ತಿಳಿಯಿದ್ದು, ನಡೆ ಹೊಲಸಿದ್ದರೆ,

ನಾವು ಹಿಡಿದಿರ್ದ ಲಿಂಗವು ಅರ್ಥಾತ್ ನಾವು ಒಳಕೊಂಡ ಲಿಂಗರೂಪೇ ತತ್ವವು ಘಟಸರ್ಪದಷ್ಟು ವಿಷಕಾರಿಯಾಗಿ ಪರಿಣಮಿಸಿ, ನಮ್ಮ ಸರ್ವ ನಾಶಕ್ಕೆ ಕಾರಣವಾಗುವದು. ಅಂತೇ 'ನುಡಿದಂತೆ ನಡೆ, ಇದೇ ಜನ್ಮಕಡೆ' ಎಂದು ನಡೆನುಡಿಗಳ[.ಜೆಡಗಿನ ಸಮ್ಮಿಲನವನ್ನು ನಮ್ಮ ಶರಣರು ಬಹು ಸ್ವಾರಸ್ಯವಾಗಿ ತಮ್ಮ ಅನುಭವ ವಾಣಿಯಿಂದ ಸಾರಿದ್ದಾರೆ.

ಆತ್ಮೋದ್ಧಾರಕ್ಕಾಗಿ ಅನುಸರಿಸುವ ಮಾರ್ಗಗಳೆಲ್ಲವು ಶ್ರೇಷ್ಠವಾದವುಗಳೇ ಸೈ. ಆದರಲ್ಲಿಯೂ, ಲಿಂಗವಂತರು ಅನುಸರಿಸಬೇಕಾದ ಮಾರ್ಗವು ಬಹು ಸುಲಭಗಮ್ಯವಾದದ್ದು. ನಮ್ಮ ಆತ್ಮೋದ್ಧಾರಕ್ಕಾಗಿ ನಾವು ಉಳಿದವರಂತೆ, ಯಾವ ಮಾರ್ಗ ಕೈಕೊಳ್ಳಬೇಕಪ್ಪಾ? ಎಂದು ತಡಬಡಿಸಿ, ಹುಡುಕುವ ಕಾರಣವಿಲ್ಲ. ಒಂದನ್ನು ಹಿಡಿದು, ಆಮೇಲೆ ನೀಗಲಾರದ್ದಕ್ಕೆ ಅದನ್ನು ಬಿಟ್ಟು ಮತ್ತೊಂದಕ್ಕೆ ಕೈಯೊಡ್ಡುವ ಬಡಬಡಿಕೆ ಬೇಕಾಗಿಲ್ಲ. ಸಂಸಾರದಲ್ಲಿರುವ ವನಿತಾದಿ ವಸ್ತುಗಳನ್ನು ತೊರೆದು, ಕಾಡನ್ನು ಸೇರುವ ಕಾರಣವಿಲ್ಲ. ಪ್ರಪಂಚ ತೊರೆದು, ಪಂಚಾಗ್ನಿ ಮಧ್ಯದಲ್ಲಿ ಕುಳಿತು, ಪ್ರಚಂಡ ತಪಸ್ಸು ಮಾಡುವ ಕಾರಣವಿಲ್ಲ. ತಾಯಿಯ ಗರ್ಭದಿಂದ ಕರ್ತಾರನ ಕಮ್ಮಟವಾದ ಈ ಕರ್ಮಭೂಮಿಗೆ ಬರುವ ಇನ್ನೂ ಒಂದು ತಿಂಗಳ ಮುಂಚಿತವಾಗಿಯೇ ಎಂದರೆ ಗರ್ಭಾಷ್ಟಮದಲ್ಲಿಯೇ ಶ್ರೀಗುರು ಆ ಶಿಶುವಿಗೆ ಲಿಂಗಸಮ್ಬಂಧವನ್ನು ಮಾಡುತ್ತಾನೆ. ಈಗ ಮೇಲೆ ಹೇಳಿದಂತೆ, ನಾವು ಆಗನಿಂದಲೇ ಲಿಂಗವಂತರು ಅಂದರೆ ಲಿಂಗರೂಪೇ ತತ್ವವಂತರು ಆಗುತ್ತೇವೆ. ಆ ಸಮಯ ಮೊದಲ್ಗೊಂಡು ಈ ಶರೀರವು ಸಮಾಧಿಗೊಳಿಸಲ್ಪಡುವ ವರೆಗೂ, ಆ ಲಿಂಗತತ್ವವು, ನಮ್ಮನ್ನು ಹೊಂದಿಕೊಂಡೇ ಇರುವದು. ಅಂಗಮೇಲೆ ನಮ್ಮ ಆತ್ಮೋದ್ಧಾರಕ್ಕಾಗಿ ಬೇರೆಡೆಗೆ ಹುಡುಕುವ ಚಿಂತೆ ಎಮಗಿರಲು ಸಾಧ್ಯವಿಲ್ಲ. ಗರ್ಭದಲ್ಲಿರುವಾಗಲೇ ಶ್ರೀಗುರು ನಮಗೆ ಶಿವಯೋಗ ಸಮ್ರಾಟನಾಗುವ ಹಕ್ಕನ್ನು ಕರುಣಿಸಿದ್ದು. ಆ ಶಿವಯೋಗ ಸಂಪನ್ನತೆಯನ್ನೇ ನಾವು ನಮ್ಮ ಜೀವನದುದ್ದಕ್ಕೂ ಸಾಧಿಸಿ, ಆ ಸಮ್ರಾಟನ ಮುಕುಟಮಣಿಯಾಗಿ, ದೇದೀಪ್ಯಮಾನವಾಗಿ, ರಾರಾಜಿಸುವ ಮುಕ್ತಿಯನ್ನು ಹೊಂದುವದು ನಮ್ಮ ಲಿಂಗಾಂಗಿಗಳಿಗೆ ಬಹು ಯೋಗ್ಯವಾದ ಭಾಗ್ಯವು. ಈ ಹಕ್ಕು ಪ್ರತಿಯೊಬ್ಬ ಲಿಂಗಾಂಗಿಯ ಸೊತ್ತು. ಅದನ್ನು ಪ್ರತಿಯೊಬ್ಬನು ಸ್ವಪ್ರಯತ್ನದಿಂದ ಹೊಂದಬೇಕು.

ಸರ್ವೋದಯವಾಗಲಿ, ಸಮಾಜವಿಕಾಸವಾಗಲೀ, ಸಂಪೂರ್ಣ ಸಿದ್ಧಿ ಬೇಕಾದರೆ, ಪ್ರತಿಯೊಬ್ಬನು ಮೊದಲು ಸ್ವಂತೋದಯವನ್ನು, ಸ್ವವಿಕಾಸವನ್ನು ಮಾಡಿಕೊಳ್ಳಬೇಕು. ಎಲ್ಲಿಯ ವರೆಗೆ ಸ್ವಾರ್ಥೋದಯದ ಸೊಲ್ಲು ಅವನಲ್ಲಿ ಅಡಗುವದಿಲ್ಲವೋ, ಅಲ್ಲಿಯ ವರೆಗೆ ಯಾವ ಉದಯವೂ ಆಗಲು ಶಕ್ಯವಿಲ್ಲ. ಕತ್ತಲಲ್ಲಯೇ ಉಳಿಯಬೇಕು, ಅಲ್ಲಿಯೇ ಕೊಳೆಯಬೇಕು. ಸ್ವಾರ್ಥದ ಸೊಲ್ಲು ಸಂಕುಚಿತ ಮನೋಭಾವದ ಅಡಿಗಲ್ಲು; ಇಷ್ಟೇ ಅಲ್ಲ, ಈ ಭವರೋಗದ ಮೂಲವು. ಅಂತೇ ಈಗ ಇಡೀ ಪ್ರಪಂಚವೇ ಈ ರೋಗದ ಬಾಧೆಯಿಂದ ಬಳಲಿ ಬೆಂಡಾಗಹತ್ತಿದೆ. ಇದನ್ನು ಕಂಡ ಮಹನೀಯರು ಅನೇಕರಿರಬಹುದು. ಆದರೆ ಇದರ ನಿವಾರಣೋಪಾಯಗಳನ್ನು ಕಾಣಲು ಅವರು ಅಷ್ಟೊಂದು ಶಕ್ತರಾದಂತೆ ತೋರದಾಗಿದೆ.

ನಮ್ಮೀ ಸ್ವತಂತ್ರ, ಭಾರತದ ಉಪರಾಷ್ಟ್ರಪತಿಗಳಾದ ಡಾಕ್ಟರ ಶ್ರೀ. ರಾಧಾಕೃಷ್ಣನ್ನ ಅವರು ಮೊನ್ನೆ ಮೊನ್ನೆ ಇದೇ ಸಪ್ಟಂಬರ ತಿಂಗಳಲ್ಲಿ ಒಂದು ಸಮಯದಲ್ಲಿ ಮಾಡಿದ ತಮ್ಮದೊಂದು ಭಾಷಣದಲ್ಲಿ, ಭಾವೀ ಪ್ರಪಂಚದ ಆಧಾರಸ್ತಂಭಗಳಂತಿರುವ ವಿದ್ಯಾರ್ಥಿಗಳಿಗಾಗಿ ಒಂದು ಸುಂದರವಾದ ಮತ್ತು ಅಮೌಲ್ಯವಾದ ಮಾತನ್ನು ಹೇಳಿದ್ದಾರೆ. ಏನಂದರೆ— ಈಗ ವಿದ್ಯಾರ್ಥಿಗಳಿಗೆ ಸಿಗುತ್ತಿರುವ ವಿದ್ಯೆಗೆ, ನೈತಿಕ ತಳಹದಿ ಇಲ್ಲ, ಮತ್ತು ಧರ್ಮದ ಬಿಗುವಿಲ್ಲ. ಈ ನೈತಿಕ ಧಾರ್ಮಿಕ ತಳಬುಡವಿಲ್ಲದ ಯಾವದೇ ವಿದ್ಯೆಯು ಯಾವ ಪುರುಷಾರ್ಥವನ್ನೂ ಸಾಧಿಸಲಾರದು, ಎಂಬಾಶಯದ ಕಟು ಸತ್ಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಡಾಕ್ಟರ ಶ್ರೀ. ರಾಧಾಕೃಷ್ಣನ್ನ ಅವರು ಮಹಾತತ್ವಜ್ಞಾನಿಗಳು, ತತ್ವನಿಷ್ಠರು, ಅನುಭಾವಿಗಳು, ಅದ್ವಿತೀಯ ಪಂಡಿತರು. ಈ ಮಹನೀಯರ ಮಾತಿನಂತೆ ಮಾರ್ಪಟ್ಟು ವಿದ್ಯಾರ್ಜನೆಯಾಗುತ್ತ ಹೋದರೆ ಅದೊಂದು ವಿದ್ಯಾರ್ಥಿವೃಂದಕ್ಕೇ ಉತ್ಕೃಷ್ಟ ಭಾಗ್ಯವು; ತದ್ವಾರಾ ನಮ್ಮೀ ರಾಷ್ಟ್ರದೇವಿಗೆ ಸುಂದರವಾದ ಸೌಭಾಗ್ಯವೆಂದು ಬೇರೆ ಹೇಳಬೇಕಿಲ್ಲ.

ಇಂಥ ವಿದ್ಯೆಯ ಪ್ರಶ್ನೆಯೊಂದೇ ಏಕೆ, ಎಂಥ ಬೇಕಾದಂಥ ಜಟಿಲ ಪ್ರಶ್ನಗಳನ್ನು ಬಿಡಿಸಲು, ಮತ್ತು ಶರೀರ ಬಲ-ಶೀಲಬಲ-ಆತ್ಮಬಲ ಬೆಳಸಲು, ಮತ್ತು ಈ ಸಂಸಾರ ಜಂಜಾಟದಿಂದ ಸುಲಭವಾಗಿ ಪಾರಾಗಲು, ಆದೇಕೆ? ಈ ಮಾನವನೇ ಮಹಾದೇವನಾಗಲು—ಇವೆಲ್ಲಕ್ಕೂ ಬೇಕಾ

ಗುವ ದಿವ್ಯ ಸಂದೇಶವು ನಮ್ಮ ಶ್ರೀಬಸವಾದಿ ಪ್ರಮಥರು ಜಗತ್ ಕಲ್ಯಾಣಕ್ಕಾಗಿ ಒದಗಿಸಿಕೊಟ್ಟ ಅವರ ವಚನಸಾಹಿತ್ಯದಲ್ಲಿ ಸ್ಪಷ್ಟವಾಗಿ ತೋರುತ್ತಿದೆ. ಈ ಅಪಾರವಾದ ಶರಣಸಾಹಿತ್ಯ ಸಾಮ್ರಾಜ್ಯದಲ್ಲಿ ಸಂಚರಿಸುವ ಮಾನವನು ಕಾಣುವ ಭಾಗ್ಯಗಳಿಂತಿವೆ:—

ಅದರೊಳು (೧) ವ್ಯಕ್ತಿ ಜೀವನದ ವಿಕಾಸ ಮಾರ್ಗವಿದೆ (೨) ನೈತಿಕ ನೆಲಗಟ್ಟಿದೆ (೩) ಸಮಾಜ ಸಂಘಟನೆಯ ಮಾರ್ಗವಿದೆ (೪) ಸ್ತ್ರೀಯರು ನಿಜವಾದ ಉನ್ನತಿಯನ್ನು ಸಾಧಿಸುವ ರೀತಿನೀತಿಗಳಿವೆ (೪) ಅಸ್ಪೃಶ್ಯತೆ ನಿವಾರಣೆಯ ದಿವ್ಯ ಮಾರ್ಗವಿದೆ (೬) ಆರ್ಥಿಕ ಮುಗ್ಗಟ್ಟು ತಲೆಯೆತ್ತದಂತೆ ಸಮಾಜ ರಚನೆಯ ನಕ್ಷೆ ಇದೆ. (೭) ಸತ್ಯಅಹಿಂಸೆಗಳ ಸೂಕ್ಷ್ಮ ನಿರೂಪಣೆಯಿದೆ (೮) ದಯವೇ ತಳಹದಿಯಾಗಿರಿಸಿ, ಅದರ ಮೇಲೆ ಭದ್ರವಾಗಿ ಕಟ್ಟಿದ ದಿವ್ಯ ಧರ್ಮಮಂದಿರದ ಮೇಲೆ ಷಟ್‌ಸ್ಥಲ ಸಂಪನ್ನತೆಯ ಸು-ಪತಾಕೆಯು ತಲೆಯೆತ್ತಿ ಮೆರೆಯುತ್ತಿದೆ— ಇವೇ ಮೊದಲ್ಗೊಂಡು. ಇನ್ನೂ ಅನೇಕ ಘನವಾದ ತತ್ವ ಮಾರ್ಗಗಳನ್ನು ನೋಡಿ, ಯಾವ ಜೀವಿಗೆ ಆನಂದವಾಗಲಿಕ್ಕಿಲ್ಲ? ಆದರೆ ಇಂತಪ್ಪ ತತ್ವಾನ್ವೇಷಣದ ಹಸಿವು ಮಾತ್ರ, ಆ ಜೀವಿಗೆ ಹುಟ್ಟಬೇಕು- ಅಂದರೆ, ಅಂಥವನಿಗೆ ಗುರುಕಾರುಣ್ಯದಿಂದ ಸರ್ವವೂ ಸಿದ್ಧಿಸುವದು.

ಹರಪಥವನರಿವಡೆ ಗುರುಪಥವೇ ಮೊದಲು ಎಂಬುದನ್ನು ನಾವು ಗುರ್ತಿಸಬೇಕು. ಮಾನವ ಕುಲಕ್ಕೇನೇ, ಗುರುಸ್ವರೂಪದಲ್ಲಿರುವ ಶ್ರೀಬಸವಂಣವರು ತಮ್ಮ ದಿವ್ಯವಾಣಿಯಿಂದ ಹಾಡಿದ ವಚನಗಳನ್ನು ಪರಿಶೀಲಿಸಿದರೆ, ಒಬ್ಬ ಸಾಮಾನ್ಯ ಮಾನವನಿಗೂ ಕೂಡ ತಿಳಿಯುವಂತೆ ಮತ್ತು ಅವನಿಗೆ ಸುಲಭವಾಗಿ ಆಚರಿಸಲು ಬರುವಂತೆ ಒಳ್ಳೇ ಸ್ವಾರಸ್ಯವಾಗಿ ಹೇಳಿ, ನೀತಿಯ ತಳಹದಿಯನ್ನು ಒಳ್ಳೇ ಭದ್ರವಾಗಿ ಹಾಡಿದ್ದು ಕಂಡುಬರುತ್ತಿದ. ಹ್ಯಾಗಂದರೆ—"ಅಯ್ಯ ಎನ್ನಿರಿ.- ಇಂಥ ಮೃದುವಚನವೇ ಸಕಲ ಜಪಂಗಳು, ಸಕಲ ತಪಂಗಳು ಇವೆ. "ಸತ್ಯಮಾತನಾಡಿರಿ, ಮತ್ತು ಆಚಾರವಂತರಾಗಿರಿ." ಇವೇ ನಿಮ್ಮನ್ನು ದೇವರ ಸನ್ನಿಧಿಗೆ ಕರೆದೊಯ್ಯುವವು. 'ವಿನಯಶೀಲರಾಗಿರಿ'- ಇದುವೇ ಶಿವನೊಲಿಮೆಯು. 'ಸಜ್ಜನರ ಸಂಗ ಮಾಡಿರಿ; ಸಕಲ ಪ್ರಾಣಿಗಳ ಮೇಲೆ' ದಯೆ ತೋರಿಸಿರಿ — ಇದೇ ನಿಜವಾದ ಧರ್ಮ. 'ಸಕಲ ಜೀವಾತ್ಮರಿಗೂ ಲೇಸನ್ನು ಬಯಸಿರಿ, ಅಂದ

ರೇನೇ ನೀವು ನಿಜವಾದ ಕುಲಜರಾಗುವಿರಿ. ಸತ್ಯ ಶುದ್ಧ ಕಾಯಕ ಮಾಡಿರಿ. ಅಂದರೇನೇ ಗುರುಲಿಂಗಜಂಗಮರ ಸೇವೆಗೆ ನಿಮ್ಮ ಭಕ್ತಿಯು ಸಲ್ಲುವದು— ಶ್ರೀಗುರು ಬಸವಂಣವರು ಈ ರೀತಿ, ಇನ್ನು ಅನೇಕ ಪರಿಯಿಂದ ವಿಧಾನ ಗಳನ್ನು ಹೇಳಿದ್ದಲ್ಲದೆ, ಕೆಲವು ನಿಷೇಧಗಳನ್ನು ನಿರೂಪಿಸಿದ್ದಾರೆ. ಅವು ಯಾವವೆಂದರೆ— "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಂಣಿಸಬೇಡ, ಇದಿರು ಹಳಿಯಲುಬೇಡ." ಈ ಏಳು ನಿಷೇಧಗಳನ್ನು ನಾವು ಪಾಲಿಸಿದರೆ, ನಮ ಅಂತರಂಗ ಮತ್ತು ಬಹಿರಂಗ ಶುದ್ಧಿಯಾಗುವವು. ಈ ಉಭಯ ಶುದ್ಧಿ ಗಳು ಪರಮಾತ್ಮನ ಒಲುಮೆಯನ್ನು ಪಡೆಯುವ ಪರಿಶುದ್ಧವಾದ ರೀತಿ ಗಳು. ಸನ್ಮಾರ್ಗ ಗಮನವು ಬಹಿರಂಗಶುದ್ಧಿಯ ದ್ಯೋತಕವಾದರೆ, ಹೃದಯ ಪರಿವರ್ತನವು ಅಂತರಂಗ ಶುದ್ಧಿಯ ದ್ಯೋತಕವೆಂದು ಹೇಳಿದರೆ ತಪ್ಪಾ ಗದು. ನಾವು ನಮ್ಮ ನಮ್ಮ ನಿತ್ಯ ಜೀವನದಲ್ಲಿ ಹೆಜ್ಜೆ ಹೆಜ್ಜೆಗೆ ಸ್ಮರಿಸ ಬೇಕಾದ ದಿವ್ಯ ಬೋಧವಿದು.

ನೋಡಿರಿ, ನಮಗೆ ಒಂದು ಸಾಮಾನ್ಯ ಜಡ್ಡಾದರೆ, ಅದರ ನಿವಾ ರಣೆಗಾಗಿ, ನಾವು ಒಬ್ಬ ವೈದ್ಯನ ಕಡೆಗೆ ಕೂಡಲೇ ಧಾವಿಸುತ್ತೇವೆ. ಅವನು ಔಷಧ ಕೊಡುತ್ತಾನೆ. ಅದನ್ನು ಅನುಪಾನಕ್ಕೆ ಸರಿಯಾಗಿ ತೆಗೆ ದುಕೊಳ್ಳಲಿಕ್ಕೆ ಹೇಳುತ್ತಾನೆ. ಅಲ್ಲದೆ ಎಂಣೆ, ಹುಳಿ ಮುಂತಾದ ಭಕ್ಷಣ ಪದಾರ್ಥಗಳನ್ನು ಮುಟ್ಟಕೂಡದೆಂದು ಕೆಲವು ಕಟ್ಟುನಿಟ್ಟುಗಳನ್ನು ಹೇಳಿ ಎಚ್ಚರಿಸುತ್ತಾನೆ. ಆ ರೀತಿ ನಾವು ಚಾ-ಚೂ ಬಿಡದೇ, ತಪ್ಪದೇ ಮಾಡುತ್ತೇವೆ. ಮತ್ತು ಆ ರೋಗ ನಿವಾರಣೆಯಾಗಿ ಗುಣಹೊಂದುತ್ತೇವೆ. ಅಂದಮೇಲೆ, ಅನೇಕ ಜನ್ಮಗಳಿಂದ ನಮಗೆ ಅಂಟಿಕೊಂಡುಬಂದ ಈ ಭವ ರೋಗ ನಿವಾರಣೆಗೆ ನಾವು ಯಾವ ರೀತಿ ಹಂಬಲಿಸಬೇಕೆನ್ನುವದನ್ನು ನಾವು ಅರಿತುಕೊಳ್ಳಲೇಬೇಕು. ನಮ್ಮ ಸಮರ್ಥ ಗುರು ಶ್ರೀಬಸವಂಣ ನವರು ಮೇಲೆ ಹೇಳಿದ ಕಟ್ಟುನಿಟ್ಟುಗಳನ್ನು ನಾವು ಚನ್ನಾಗಿ ಪಾಲಿಸಲೇ ಬೇಕು. ಅಂದರೇನೇ ಈ ರೋಗವು ಅಳಿದು, ಭಗವಂತನನ್ನು ಹೊಂದು ವೆವು ಇದರಲ್ಲಿ ಯಾವ ಸಂದೇಹವೂ ಇಲ್ಲ.

---

# ಮಹಾನುಭಾವಿ ಬಸವಣ್ಣನವರು.

( ಲೇಖಕರುಃ- ಶ್ರೀ ಶಂಕರ ತಡಸ, ಧಾರವಾಡ. )

---

ಬಸವಂಣನವರ ಜೀವನವು ವಿಕಾಸ ಹೊಂದಿ ಬಗೆಬಗೆಯಾಗಿ ಲತೆಯಂತೆ ಹಬ್ಬಿ; ಹೂವಾಗಿ ಅರಳಿ; ಕಾಯಾಗಿ ಫಲ ಬಿಟ್ಟಿದ್ದಾಗೂ ಮೊದಲು ಅವರು ಭಕ್ತಿ ಭಾವ ಜೀವಿಗಳು, ಅಂದರೆ ಅನುಭಾವಿಗಳು. ( mystic ) ನಂತರ ಅವರು ತತ್ವ ವೇತ್ತಿಗಳು, ನೀತಿಜ್ಞರು, ಸಮಾಜ ಸುಧಾರಕರು, ಸಾಹಿತಿಗಳು, ಅರ್ಥಶಾಸ್ತ್ರಜ್ಞರು, ಮಂತ್ರಿಗಳು, ಮತ್ತು ಇನ್ನೂ ಏನೇನೋ ಇರಬಹುದು. ಅವರ ಜೀವನಕ್ಕೆ ಮೆರಗುಗೊಟ್ಟಿರುವದು ಅವರ ಭಕ್ತಿ-ಭಾವ ಸಂಪನ್ನತೆಯು.

ಅಹಂಕಾರ ಮತ್ತು ಮಮಕಾರಗಳ ಪ್ರೇರಣೆಯಿಂದ ಉದ್ರೇಕಗೊಂಡು; ರಾಗಗಳ ಬಣ್ಣ ಬಳೆದುಕೊಂಡ ಜೀವನವು ಸುಖ-ದುಃಖಗಳಿಗೆ ಈಡಾಗಿ ಜೀವಭಾವಿ ಎಂದಿನಿಸಿಕೊಳ್ಳುವದು. ಜೀವಭಾವವು ಭಿನ್ನತನದ ಅರಿವಿಗೆ ಮುಸುಕ ಹಾಕಿ, ಪ್ರಕೃತಿಯ ಪ್ರೇರಣೆಗಳ ತಾಳಕ್ಕನುಗುಣವಾಗಿ ರಾಗಗಳನ್ನು ಉದ್ರೇಕಗೊಳಿಸಿ ಇಂದ್ರಿಯಗಳ ಮುಖದಿಂದ ತೃಪ್ತಿಗಾಗಿ ಕುಣಿಯ ಹತ್ತುವದು. ಇಂಥ ಜೀವನವಾದರೂ ಸ್ಥಿರವೇ? ಗಾಳಿಗೆ ಸಿಕ್ಕ ಸೊಡರಿನಂತೆ! ನಂದುವದು ನಿಶ್ಚಿತವಿದ್ದರೂ ಯಾವ ಗಳಿಗೆ ಎಂಬುದನ್ನು ಹೇಳಲು ಬಾರದು. ಇಂಥ ಸಂಸಾರದ ಸುಖ 'ಶೂಲದ ಮೇಲಣ ಭೋಗದಂತೆ; ಹಾವ ಹಾವಾಡಿಗರ ಸ್ನೇಹದಂತೆ!" ಇದನ್ನೇ ಇನ್ನೊಂದು ಬಗೆಯಿಂದ ಹೇಳಬಹುದೆಂದರೆ 'ಕಪ್ಪೆ ಸರ್ಪನ ನೆರಳಿನಲ್ಲಿ' ಹಾಯಾಗಿ, ಇರಬಯಸಿದಂತೆ ಇಂದಿಗೆಂದು ನಾಳಿಗೆಂದು ಬೆಂದ ಒಡಲ ಹೊರೆಯ ಹೋಯಿತ್ತು ಸಂಸಾರ. ಮೃತ್ಯುವು ದಿನದಿನ ಸನಿಹಕ್ಕೆ ಬರುತ್ತಿದ್ದರೂ, ಅರಿತು ಬಾಳಬೇಕೆಂಬ ಎಚ್ಚರ ಜೀವಭಾವಕ್ಕೆ ತಟ್ಟದು. ಕಡೆಯಲಿ ಕಾಲಂಗೆ ಬಲಿಯಾಗಿ ಹೋಗುವ ಈ ಸಂಸಾರ ಸಾಗರ| ಉದ್ದುದ್ದವೇ? ಶಿರದುದ್ದವಾದ ಬಳಿಕ ಏಕ ಹೇಳುವದು? 'ಈ ಸಾವ ಪುತ್ತಳಿಯು ಸಂಸಾರ ಅಜ್ಞಾನಕ್ಕೆ ಈಡಾಗಿ ಪಾಪಕ್ಕೆ ಭಾಜನವಾಗಿ ವೃಥಾ ಹೋಗುವದಲ್ಲಾ.?' ಎಂದು ಚಿಂತಿಸಿ ನಿಟ್ಟುಸುರನ್ನು ಬಸವಂಣನವರು ಬಿಡಹತ್ತಿದ್ದಾರೆ. ಕಡೆಯಲಿ 'ನರೆಕನ್ನೆಗೆ; ತೆರೆಗಲ್ಲಕ್ಕೆ ಶರೀರಗೂಡು ಹೋಗದ ಮುನ್ನ ಹಲ್ಲು

ಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗವ ಮುನ್ನ, ಕಾಲ ಮೇಲೆ ಕೈಯ ನೂರಿ ಕೋಲುಹಿಡಿಯುವ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಹೊತ್ತು ಹೋಗದ ಮುನ್ನ, ಮೃತ್ಯು ಮುಟ್ಟದ ಮುನ್ನ ಕೂಡಲ ಸಂಗಮ ದೇವನ ತೊತ್ತು ಗೆಲಸವ ಮಾಡುವ ಪರಿಹಾರ ಕಂಡುಕೊಂಡಿದ್ದಾರೆ.

ಬಸವಂಣನವರಿಗೆ ಈ ಜೀವಭಾವದಿಂದ ಬಿಡುಗಡೆ ಹೊಂದಬೇಕೆಂಬ ತೀವ್ರ ಬಯಕೆ ಉಂಟಾಗಿದೆ. ಅವರನ್ನು ಅದು ಪಂಚೇಂದ್ರಿಯ ಧಾತುವಿನಿಂದ ವಿಕಳತೆ ಗೊಳಿಸಿದೆ. ಮನದ ವಿಕಾರದಿಂದ ಮತಿಗೆಡಿಸಿದೆ. ಕಾಮ ವಿಕಾರದಿಂದ ಧೃತಿಗೆಡಿಸಿದೆ. ಆಸೆ ಆಮಿಷ, ಹುಸಿ, ತಾಮಸ, ವಿಷಯ ಕುಟಿಲ ಕುಹಕ, ಕ್ರೋಧಕ್ಷುದ್ರ ಮಿಥ್ಯ ಇವುಗಳನ್ನು ನಾಲಿಗೆಯಿಂದ ತಳ ಸಹಿತ ಕಿತ್ತು ಬಿಸುಟ ಬೇಕಾಗಿದೆ. ಇವು ಶಿವನತ್ತ ಒಯ್ಯಲೀಯವು ಅರ್ಥವಡಗದು. ಕ್ರೋಧ ತೊಲಗದು, ಕ್ರೂರಕುಹಕ ಕುಭಾಷೆ ಬಿಡ-ದನ್ನಕ್ಕರ ಶಿವನೆತ್ತ? ಜೀವಭಾವಿಯೆತ್ತ? ಬೆಳೆವ ಭೂಮಿಯುಲೊಂದು ಪ್ರಳಯ ಕಸಹುಟ್ಟಿ, ತಿಳಿಯಲರಿಯದು, ಎಚ್ಚರಿಯಲೀಯದು; ಅವಗುಣವೆಂಬ ಕಸವ ಕಳೆದು, ಸುಳಿ ತೆಗೆದು ಬೆಳೆಯ ಬೇಕಾಗಿದೆ. ದೇಹವೆಂಬ ಮನೆಯ ಹೊಸ್ತಿಲಲ್ಲಿ ಹುಲ್ಲು ಹುಟ್ಟಿದೆ. ಮನೆಯೊಳಗೆ ರಜವು ತುಂಬಿದೆ. ತನುವಿ-ನೊಳಗೆ ಹುಸಿಯು ತುಂಬಿ, ಮನದೊಳಗೆ ವಿಷವು ತುಂಬಿ, ಮನೆಯೊಡೆಯ ಮನೆಯೊಳಗೆ ಕಾಲಿಡಲು ಇಂಬಿಲ್ಲದಾಗಿದೆ. ಮಾಸಿಸುವದೆಂತು? ಚಿನ್ನದ ನಾಯಿಗೆ ಬೆನ್ನುಹತ್ತಿದ ಮನಕ್ಕೆ ಶಿವನ ನೆನೆಯಲು ಸಮಯವಿಲ್ಲದಾಗಿದೆ. ಮನದ ಇರವನಾದರೂ ಏನ ಹೇಳುವುದು? ಅದು ಶುದ್ಧ ಅತ್ತಿಯ ಹಣ್ಣು! ಹುಳ ಬಹಳ. ಒಡೆದು ನೋಡಲು ಬಾರದು. ಚಿತ್ತದ ಸ್ಥಿರತೆಯ ಬಗೆಗೆ ಹೇಳಬೇಕೇನು? ಕೇಳಲು ಬಾರದು. ಶುದ್ಧ ಕೋಡಗ! ಅವಾಗಲೂ ಕೊಂಬೆಗೆ ಹಾರುತಲೇ ಇರುವದು. ಒಂದೆಡೆಗೆ ನಿಲ್ಲಲರಿಯದು. ಎಳೆ ಮಂಚದ ಸುಖವು ಅದಕ್ಕೆ ಒಗ್ಗದು. ನಡೆನುಡಿಗಳಲ್ಲಿ ಒಂದುತನವಿಲ್ಲ. ನಡೆಯಲೊಂದು ಪರಿ. ನುಡಿಯಲಿನ್ನೊಂದು ಪರಿ. ತನುವಿನಲೊಂದಿಟ್ಟು, ಮನದಲ್ಲೆರಡಿಟ್ಟಿದೆ. ಈ ಮಾನಸಗಳ್ಳಿಯ ವಚನ ಬೆಲ್ಲದಂತೆ! ಹೃದಯದಲ್ಲಿಪ್ಪುದು ಶುದ್ಧ ನಂಜು!! ಕಂಗಳಲೊಬ್ಬನ ಕರೆವಳು. ಮನದಲೊಬ್ಬನ ನೆನೆವಳು.

ವಚನದ ಹುಸಿ ನುಸುಳೆಂತು ಮಾಣ್ಬುದೆನ್ನ? ಮನದ ಮರ್ಕಟತನವೆಂತು ಮಾಣ್ಬುದೆನ್ನ? ಹೃದಯದ ಕಲ್ಪಷವೆಂತು ಮಾಣ್ಬುದೆನ್ನ? ಎಂದು

ಹಂಬಲಿಸಿ ಕಡೆಗೆ ‘ ಎಂತೋ ಶಿವಭಕ್ತಿಗೆ ನಾನು ಉಸಮಿಸುವೆನಯ್ಯ? ಎಂತೋ ಶಿವಾಚಾರವೆನಗೆ ವೇದ್ಯ ವಪ್ಪುದಯ್ಯ? ಎಂದು ಚಿಂತಿನೆ ಗೈದಿದ್ದಾರೆ. ‘ ಅಂಗದೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿಯಾಗಿ ಎಂದಿಪ್ಪೆನೋ ! ಎಂಬ ಹೊಂಗನಸ ಕಾಣುತ್ತಿದ್ದಾರೆ. ಇದಕ್ಕೆ ಮೊದಲು ಶಿವನ ಕರುಣೆ ಪಡೆದುಕೊಳ್ಳಬೇಕು. ಬಸವಣ್ಣನವರು ಕೂಡಲ ಸಂಗಮ ದೇವನ ಕರುಣೆಗಾಗಿ ಕೆಸರಿನಲ್ಲಿ ಬಿದ್ದ ಪಶುವಿನಂತೆ ದೆಸೆವೆಸೆಗೆ ಬಾಯಬಿಡುವರು. ‘ ಅಯ್ಯಾ ಆರೈವರಿಲ್ಲ ! ಅಕಟಕಟಾ !! ಶಿವಶಿವ !!! ಹೋದಹೆ ಹೋದಹೆ !!!! ’ ನೆಂದು ಒರಲುವರು. ‘ ಪಾಪ ! ’ ಬಡಪಶು ಪಂಕದಲ್ಲಿ ಬಿದ್ದರೆ ಕಾಲುಬಡೆವುದಲ್ಲದೆ ಬೇರೆ ಗತಿಯುಂಟೇ ? ಒಮ್ಮೆ ಅವರು ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ‘ ಅಂಬೇ ! ಅಂಬೇ !! ’ ಎಂದು ಒರಲುವರು. ಮತ್ತೊಮ್ಮೆ ‘ಅಯ್ಯಾ, ಅಯ್ಯಾ’ ಎಂದು ಸಮುದ್ರದೊಳಗಣ ಸಿಂಪಿನಂತೆ ಬಾಯ ಬಿಡುವರು. ಮಗುದೊಮ್ಮೆ ‘ ಹರಹರ ಶಂಕರಾ, ಶಿವಶಿವ ಶಂಕರ, ಜಯಜಯ ಶಂಕರ ’ ಎನ್ನುತ್ತ ಮರೆ ಹೋಗುವರು. ಕರೆವರು. “ ಓ ” ಎನ್ನಲು ಶಂಭು ಮೌನದಲ್ಲಿರುವ. “ಓ” ಎನ್ನಲಾಗದೇ ? ಮೌನವೇ ಅಯ್ಯ ? ’ ಎಂದು ಕೇಳುವರು. ಎಂತಾದರೂ ಹರ ಕರುಣೆ ಬರದು. ಕಡೆಗೆ ನಿರಾಶೆಗೊಳ್ಳತೊಡಗಿ ‘ ಭಕ್ತಿವುಳ್ಳವರ ಕಂಡು ಬಯಸಿದರುಂಟೆ ? ” ಮುನ್ನವರ ಹಡೆಯದನ್ನಕ್ಕರ ? ’ ಎಂದು ಉಸುರುಗರೆಯುವರು. ಮಗುದೊಮ್ಮೆ ‘ ಲೇಸಕಂಡು ಮನ ಬಯಸಿ ಆಸೆ ಮಾಡಿದೊಡಿಲ್ಲ ಕಂಡಯ್ಯ ! ಸೀವಿಲ್ಲದ ಕಾಲಕ್ಕಲ್ಲದಯ್ಯ’ ಎಂದು ನಿಟ್ಟುಸುರ ಬಿಟ್ಟು ನಿರಾಶೆ ತಾಳುವರು. ಆದರೇನು ? ಮನಕ್ಕೆ ನೆಮ್ಮದಿ ಬರಲೊಲ್ಲದು. ಮನಕ್ಕೆ ವಿವೇಕ ಬಾರಿಬಾರಿಗೂ ನುಡಿಯುತ್ತಲಿದೆ. ‘ ಆರಿಗಾರೂ ಇಲ್ಲ. ಕೆಟ್ಟವರಿಗೆ ಕಡೆ ಇಲ್ಲ. ಜನದ ನಂಟ ಕೂಡಲ ಸಂಗಮದೇವನೊಬ್ಬನೇ! ” ಎಂದು ಈಗ ಒಂದೇ ಪರಿಹಾರ ತೋರುತಿರುವದು. ಕೂಡಲ ಸಂಗಮದೇವನಲ್ಲಿ ಅನನ್ಯ ಮನದಿಂದ ಶರಣಾಗತನಾಗುವದೊಂದೆ ಉಪಾಯ. ಕೂಡಲ ಸಂಗಮದೇವನೊಲಿದರೆ ಕೊರಡು ಕೊನರುವದು. ಬರಡು ಹಯನಾಗುವದು. ವಿಷವು ಅಮೃತವಹುದು. ಸಕಲ ಪಡಿ ಪದಾರ್ಥ ಇದಿರಲಪ್ಪುವದೆಂಬ ಆತ್ಮವಿಶ್ವಾಸ ಬೆಳೆದುಬಂದಿದೆ. ಅವರ ಚಿತ್ತ ‘ ಅತ್ತಲಿತ್ತ ಹೋಗದಂತೆ, ಸುತ್ತಿ ಸುಳಿದು ನೋಡದಂತೆ ಮತ್ತೊಂದ ಕೇಳದಂತೆ, ಶಿವನ ಪಾದವಲ್ಲದೆ ಮತ್ತೊಂದ ಅರಿಯದಂತೆ

ಇರಿಸಲು ಕೇಳಿಕೊಳ್ಳುವರು. ಮತ್ತೊಮ್ಮೆ ನರವಿಂಧ್ಯದೊಳಗೆ ಅವರನ್ನು ಒಂದು ಹುಲುಗಿಳಿಯ ಮಾಡಿ ಸಲಹುತ್ತ "ಶಿವಶಿವಾ" ಎಂದು ಓದಿಸಲು ಅಂಗಲಾಚುವರು. ಮಗುದೊಮ್ಮೆ 'ಅವರನ್ನು ಭಕ್ತಿ ಪಂಜರದೊಳಗೆ ಇಕ್ಕಿಸಲು ಹಲುಬಿ ಬಿನ್ನಹಗೈವರು. ಇಷ್ಟಾದರೂ ಶಿವಕರುಣೆಯ ಆಶಾಕಿರಣ ಮೂಡಿ ಬರಲಿಲ್ಲ ಈ ನಿರಾಶೆಯ ಭವಣೆಯ ತಾಳಲಾರದೆ ಒಮ್ಮೆಲೇ ರೊಚ್ಚಿಗೆದ್ದು "ಅಕಟಕಟಾ! ಶಿವ, ನಿನಗಿನಿತು ಕರುಣೆ ಇಲ್ಲ! ನಿನಗಿನಿತು ಕೃಪೆಯಿಲ್ಲ!!! ಏಕೆ ಹುಟ್ಟಿಸಿದಯ್ಯ ಇಹಲೋಕ ದುಃಖಿಯ? ಪರಲೋಕ ದೂರನ? ಎನಗಾಗಿ ತರುಮರಾದಿಗಳಿದ್ದಿಲ್ಲವೇ?" ಎಂದು ಹರಿಹಾಯಿದ್ದಾರೆ. ಎಂದಾದರೂ ತಾಳ್ಮೆಗೆಟ್ಟು ಕೂಗಾಡಿದರೆ ಹರಕರುಣೆ ಹಡೆದುಕೊಳ್ಳಬಹುದೇ? ಎಂಬ ವಿಚಾರ ಬಸವಣ್ಣನವರಿಗೆ ಈಗ ಹೊಳೆಯಹತ್ತಿದೆ. ತರುಮರಾದಿಗಳಾಗಿ ಹುಟ್ಟುವದು ಎಮ್ಮಳವೇ? ಅಸಾಧ್ಯ? ಆವನು ಹುಟ್ಟಿಸಿದಲ್ಲಿ ಹುಟ್ಟದೆ ಅವನು ಕೊಂದಲ್ಲಿ ಸಾಯದೆ ಬೇರೆ ವಶವುಂಟೇ" ಎಂದು ಆಲೋಚಿಸುವರು. ಸಮಾಧಾನ ತಾಳುವರು. ಅವರಿಗೆ ತನ್ನ ಅಸಹಾಯತೆಯ ಅರಿವು ಉಂಟಾಗಿ ಕಾಲ ವಿಳಂಬವಾದರೂ ಪರಿವೆ ಇಲ್ಲ. ಸರ್ವಾರ್ಪಣಗೈಯ್ಯುವ ನಿರ್ಧಾರಕ್ಕೆ ಬಂದಿದ್ದಾರೆ. 'ಇವನಾರವ ಇವನಾರವ ಎಂದೆನ್ನದೆ; ಇವ ನಿಮ್ಮವ ಇವ ನಿಮ್ಮವ ಇವ ನಿಮ್ಮವ! ಇವ ನಿಮ್ಮ ಮನೆಯ ಮಗನೆಂದೆನಿಸಲು ತಮ್ಮ ಯೋಮಕ್ಷೇಮ, ಹಾನಿ–ವೃದ್ಧಿ, ಮಾನ-ಅಪಮಾನ, ತನು-ಮನ ಪ್ರಾಣಗಳನ್ನು ಶಿವನ ಪಡತಳದಲ್ಲಿ ಅರ್ಪಿಸಿಬಿಟ್ಟರು. ಇನ್ನು ಕೂಡಲ ಸಂಗಮ ಪ್ರಭುವೇ ಬಸವಣ್ಣನವರ ತಂದೆತಾಯಿಗಳು. ಬಂಧುಬಳಗವೆಲ್ಲವೂ ಅವನೇ! ಹಾಲಿಲೆದ್ದಲಿ ನೀರಲೆದ್ದಲಿ. ಎಲ್ಲವೂ ಶಿವನಿಚ್ಛೆಯೇ! ಈಗ ಶಿವಕರುಣೆಯನ್ನು ಕರುಣಿಸಿದ್ದಾನೆ. ಬಳ್ಳಿಗೆ ಕಾಯಿ ದಿಮ್ಮಿತ್ತೇ? ಎಂದೂ ಇಲ್ಲ. ಕಾಯಿ ಬಳ್ಳಿಯ ಪ್ರೇಮದ ಫಲ ಎಂದೂ ಭಾರವಾಗದು. ದೀರ್ಘ ಕಾಲ ಮೌನದಲ್ಲಿದ್ದ ಮಹಾದೇವ ಈಗ ಬಸವಣ್ಣನವರ ನಂಬಿ ಕರೆದ ಕೂಗಿಗೆ 'ಓ' ಎಂದು ಓಗೊಡುವ ಕೂಡಲ ಸಂಗಮದೇವನ ಕರುಣೆಯನ್ನು ಪಡೆದುಕೊಂಡ ಬಸವಣ್ಣನವರು ಸಂಗನ ಬಸವರಾದರು.

ಒಮ್ಮೆ ಶಿವನಲ್ಲಿ 'ಕೊಲ್ಲು ಕೊಯಿ ನಿಮ್ಮ ಧರ್ಮ' ಎಂದು ಸರ್ವಾರ್ಪಣೆ ಮಾಡಿದ ಬಳಿಕ ತಾಮಸ ಗುಣಗಳಿಗೆ, ಸಕಾಮ ಭಕುತಿಗೆ, ಜೀವಭಾವ ಸಂಸಾರಕ್ಕೆ ಮಗುದೊಮ್ಮೆ ಬಲಿಯಾಗಬಾರದ.

'ಅರ್ಥವಡಗದೆ, ಕ್ರೋಧ ತೊಲಗದೆ, ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕರ ಶಿವನೆತ್ತ ? ತಾಮಸ ಭಕ್ತನೆತ್ತ ? ಕಾಲಗಂಜಿ ಭಕ್ತನಾದರೆ ಶಿವನೊಲುಮೆ ಹೇಗೆ ದೊರಕೀತು ? ಅಂತರಂಗದಲ್ಲಿ ಹೊಲಸು ತುಂಬಿ ಕೊಂಡು ಹೊರಗೆ ಮಿಂದು ಮಡಿಯುಟ್ಟು, ಬಂಡಿತುಂಬ ಪತ್ರೆ ಪುಷ್ಪ ತಂದು ಬಹುಕಾಲ ಲಿಂಗವ ಪೂಜಿಸುತ್ತಿದ್ದರೇನು ? ಒಲವಿಲ್ಲದ ಪೂಜೆ, ನೇಹವಿಲ್ಲದ ನೋಟ ಏತಕ್ಕೂ ಬಾರವು. ಸಗಣಿಯ ಬೆನಕಂಗೆ ಸಂಪಿಗೆಯ ಪೂಜೆಯಾದರೆ ಮನಕ್ಕೆ ರಂಜನೆಯಲ್ಲದೆ ಅದರ ಗಂಜಳ ಬಿಡದು. ಡಾಂಭಿಕ ಭಕ್ತನಾಗಿ ಒಲೆಯ ಬೂದಿಯ ದೇಹದಲ್ಲಿ ಬಿಲಿತ ತಂದು ಹೂಸಿಕೊಂಡರೇನು ? ಮನದಲ್ಲಿ ಲೇಸಿಲ್ಲದಿದ್ದರೆ ! ಒಂದನಾಡ ಹೋಗಿ ಒಂಬತ್ತನಾಡುವ ಡಾಂಭಿಕರ ಬಾಳುವೆ. ಉದಕದಲ್ಲಿ ನೆನೆದ ಮೃದುವಾಗದ ಕಲ್ಲಿನಂತೆ. ಇಲ್ಲವೇ ಹಾವಿನ ಹುತ್ತವ ಬಡಿದಹಾಗೆ. ಹಾವು ಸಾಯಲಿಲ್ಲ. ಹುತ್ತ ಉಳಿಯಲಿಲ್ಲ. ಅಘೋರ ತಪವ ಮಾಡು ವದು ತಪ್ಪಲಿಲ್ಲ. ಅಂತರಂಗ ಆತ್ಮಶುದ್ಧಿಯನ್ನು ಹೊಂದಲಿಲ್ಲ.

ಲಿಂಗವ ಪೂಜಿಸುವದು ಲಿಂಗ ಗುಣ ನೆಲಿಸುವದಕ್ಕಾಗಿ. ಶಮ, ದಮ, ವಿವೇಕ, ಸತ್ಯ ಸಂಧತೆಗಾಗಿ. ಸತ್ಯಸಂಧನು ಲಿಂಗವ ಪೂಜಿಸಿದರೆ ಫಲವುಂಟು. ಪರನಿಂದೆ, ಪರಪೀಡೆ, ಪರಹಿಂಸೆ, ಪರಧನ, ಪರದೈವಗಳಿಗೆ ಬಯಸದೆ ಅವುಗಳ ಲೋಭ ನೀಗಿ ಲಿಂಗಭಕ್ತನಾಗಬೇಕು. ಇಲ್ಲವಾದರೆ ಪಾಪಿಯು ಮಜ್ಜನಕ್ಕೆರೆದರೆ ರಕ್ತದ ಧಾರೆ. ಕೋಪಿಯು ಹೂವನೇರಿಸಿ ದೊಡೆ ಮಸೆದ ಆಯುಧ ಘಾಯ. ನಡೆಯಲ್ಲಿ ಎಚ್ಚತ್ತು ನುಡಿಯಲ್ಲಿ ತಪ್ಪಿದರೆ ಕೈಯ್ಯಲ್ಲಿ ಹಿಡಿದಿದ್ದ ಲಿಂಗ ಘಟಸರ್ಪ. ಲಿಂಗ ಇಂಥವರ ಪೂಜೆಯನೊಲ್ಲ. ಅವರ ಆರಾಧನೆ ದಂಡ. ಇನ್ನೊಂದು ಭಕ್ತರ ತಂಡ ವಿದೆ. ಕಾಲಕಂಜಿ ಭಕ್ತರಾದ ಸಕಾಮಿ ಭಕ್ತರದು. ಕರ್ಮೆಂಬುದ ಮಾಂಬದು ಇವರನ್ನು. ಇವರಿಗೆ ಸಿರಿಯುಷ್ಟೇ ಬೇಕು. ಉರಿಬರಬಾ ರದು. ಸಕಾಮಿ ಭಕ್ತರ ಲಕ್ಷವೆಲ್ಲವೂ ಫಲದಕಡೆಗೆಯೇ. ಮಹದಾನಿ ಗಿಂತ ಮಹಾದಾನವೇ ಇದನ್ನು ಆಕರ್ಷಿಸುವದು. ಕೂಡಲ ಸಂಗಮ ದೇವನ ಪೂಜಿಸಿದ ಫಲಗಳು ಕೈಯ್ಯಮೇಲಾದರೂ ಭವಬಂಧನ ಸಡಿಲದು. ಭವಪಾಶ ಕೊನೆಗಾಣದು. ಕರ್ಮ ಬೆಂಬತ್ತದೇ ಬಿಡದು. ಹರಸಿ ಮಾಡುವದು ಹಂಕೆಗೆ ದಂಡ. ನೆರಹಿ ಮಾಡುವದು ಡಂಭನ ಭಕ್ತಿ.

ಹರಿಸಲು ಬಾರದು. ಏಕೆಂದರೆ ಕೂಡಲ ಸಂಗಮದೇವ ಹೆಂಗಿನ ಭಕ್ತರ ನೊಲ್ಲನಾದ್ದರಿಂದ ಶಿವಭಕ್ತಿಯು ವಿಕಾಸಕ್ಕಾಗಿಯೇ ಮೀಸಲಾಗಿರಬೇಕು.

ಒಮ್ಮೆ ಶಿವಜೀವಿಯಾದಬಳಿಕ ಮಗುದೊಮ್ಮೆ ಭವಸಂಸಾರದ ಆಶಾ ಲತೆ ಪಲ್ಲವಿಸಿ ಫಲ ಬಿಡಬಾರದು. ತನ್ನ ಒಡಲು, ತನ್ನ ಮಡದಿ, ತನ್ನ ಮಕ್ಕಳಿಗೆಂದು ಕುದಿದರೆ ಅವನ ಮನಕ್ಕೆ ಅವನ ಮನವೇ ಸಾಕ್ಷಿ. ಇಂದ್ರಿಯ ನಿಗ್ರಹಮಾಡಿ ಪಾತಕಗಳಿಗೂ ಮತ್ತು ಮುಂದೆ ಬಂದು ಕಾಡುವ ದೋಷ ಗಳಿಗೂ ಆಹುತಿಯಾಗುವದು ಬಸವಣ್ಣನವರ ಮನಕ್ಕೆ ಒಗ್ಗದು. ಭಕ್ತನ ಮನ ಹೆಣ್ಣಿನೊಳಗಾದರೆ ಮದುವೆ ಮಾಡಿ ಕೂಡಿಕೊಂಬುದು. ಭಕ್ತನ ಮನ ಮಣ್ಣಿನೊಳಗಾದರೆ ಮಾಡಿ ಕೂಡಿಕೊಂಬುದು. ಭಕ್ತನ ಮನ ಹೊನ್ನಿನೊಳಗಾದರೆ ಕಾಯಕ ಮಾಡಿ ಕೂಡುವದು. ಆದರೆ ಇವೆಲ್ಲವೂ ಶಿವಲಿಂಗಾರ್ಪಿತದಿಂದಲೇ ನಡೆಯಬೇಕು. ಜೀವ ಭಾವನೆಗೆ ಒಳಗಾಗ ಬಾರದು. ಹೊನ್ನಿನೊಳಗೊಂದೆಳೆಯ, ಸೀರೆಯೊಳಗೊಂದೆಳೆಯ, ಮಣ್ಣಿ ನೊಳಗೊಂದು ಗೆರೆಯ ನಾಳಿಂಗೆ ಮಡದಿ ಮಕ್ಕಳಿಗೆ ಬೇಕೆಂದು ತಗೆದಿಟ್ಟರೆ ಶಿವಪಥಕ್ಕೆ ದೂರ, ಅವನ ಮನಕ್ಕೆ ಅವನ ಮನವೇ ಸಾಕ್ಷಿ. ಸ್ವಧರ್ಮ ದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಸುತನು ಕೆಡಿಸುವ. ಶಿವನ ಮಹಾದಾನದಿಂದ ಲಭಿಸಿದ ಸೊಮ್ಮು ಶಿವಶರಣರಿಗೆ ಸಲ್ಲಬೇಕು. ಆದ್ದ ರಿಂದ ಶಿವಭಕ್ತ ಬಸವಣ್ಣನವರು ಹೊಲೆ ಹೊಲೆಯರ ಮನೆಯ ಹೊಕ್ಕಾ ದರೂ, ಸಲೆಕೂಲಿಯ ಮಾಡಿಯಾದರೂ ದೇವರ ನಿಲವಿಂಗೆ ಕುದಿವರಲ್ಲದೆ ಒಡಲ ಆವಸರಕ್ಕೆ ಕುದಿದರೆ ತಮಗೆ ತಲೆದಂಡವಿಟ್ಟುಕೊಂಡಿದ್ದಾರೆ. ತಮ್ಮ ಹೆಂಡಿರು ಮಕ್ಕಳು ಇಷ್ಟೇ ಏಕೆ ? ಬಂಧುಬಳಗವೆಂಬ ಮೋಹ ಮಾಡಿ ಬಂದರೂ ಲೇಸಿಲ್ಲ. ಒಮ್ಮೆ ಪೂರ್ವಾಶ್ರಯವಳಿದು ಪುನರ್ಜನ್ಮ ಹೊಂದಿ ಶಿವಭಕ್ತನಾದಮೇಲೆ ಪೂರ್ವಾಶ್ರಯಕ್ಕೆ ಮೋಹಿತನಾಗಬಾರದು. ಬಸವಣ್ಣ ನವರು ಕೂಡಲ ಸಂಗಮ ಶರಣನಲ್ಲದವರನೊಲ್ಲದೆ ಅವರು ಬಂದರೆ ಸಮಯವಿಲ್ಲವೆಂದು ಹೇಳಿ ಶರಣರ ಬರವಿಗಾಗಿ ತಮ್ಮ ಮಹಾ ಮನೆಗೆ ತೋರಣ ಕಟ್ಟಿ ಸಿಂಗರಿಸಲು ತೊಡಗುವರು.

ಬಸವಣ್ಣನವರು ಅಂತರಂಗ ಆತ್ಮಶುದ್ಧಿಗಾಗಿ, ಮನದ ಸಂದೇಹ ಸೂತಕ ಹಿಂಗುವದಕ್ಕಾಗಿ, ಸಂಸಾರ ದಂದುಗ ಹಿಂಗಲು, ಕೂಡಲಸಂಗ ನನ್ನು ಒಲಿಸುವದಕ್ಕೆ ಶರಣರ ಕಿಂಥಿಣಿಯಲ್ಲಿರಿಸಲು ಶಿವನಲ್ಲಿ ಬೇಡುವರು.

ಸತ್ಯ ಶರಣರ ತೊತ್ತಿನ ಪಡಿದೊತ್ತಾಗಲು ಬಯಸುವರು. ಅವರ ಆಳು ತನದ ದೇಸಿಯಾಗಲು ಹಾತೊರೆಯುವದು. ಶರಣರ ಭಕ್ತಿಯ ಮರುಳ ಬಸವಂಣನವರು! ಶರಣರ ನೆಚ್ಚದೆ ತನ್ನಿಚ್ಚೆಯಂತೆ ನುಡಿವ ಮನವನು ಕಿಚ್ಚಿನೊಳಗಿಕ್ಕಲು ಹಿಂದುಮುಂದೆ ನೋಡರು. ಶಿವನ ಸನ್ನಿಧಿಯಲ್ಲಿದ್ದ ಶರಣರೊಡನೆ ಮನನೆರೆದು ಮಾತನಾಡುವ ಬಯಕೆಯುಂಟಾಗಿದೆ. ಮನದ ಕಾಳಿಕೆಯ ಕರಗಿಸಿ, ಒರೆಬಣ್ಣಕ್ಕೆ ತಂದು ಪುಟವಿಕ್ಕಿ, ಕಡಿಹಕ್ಕೆ ಬಡಿ ಹಕ್ಕೆ ತಂದು, ಕಡೆಯಾಣೆಯ ಮಾಡಿ ಶರಣರ ಪಾದತೊಡಿಗೆಯ ಮಾಡಲು ಬಸವಂಣನವರು ಶಿವನಲ್ಲಿ ಬೇಡುವರು. ಬಸವಂಣನವರನ್ನು ಶರಣರು ನಮ್ಮವನೆಂದರೆ ಸಾಕು. ಶಿವನ ಬೇಡುವ ಹಂಗುಯಿಲ್ಲ ಬಸವಣ್ಣನವರಿಗೆ.

ಹಿಂದೊಮ್ಮೆ ಸಂಸಾರ ದಂದುಗಹಿಂಗಿ ದಿಟ-ಪುಟ-ಭಕ್ತಿ ಸಂಪುಟನೆಲೆಗೊಳಲು ಶಿವನ ಕಾರುಣ್ಯಕ್ಕಾಗಿ ಹಲುಬಿ ಹಂಬಲಿಸಿ, ಆಲಿಟ್ಟು ಬಾಯ್ಬಿಟ್ಟಂತೆ ಈಗ ಶರಣರ ಬರವಿಗಾಗಿ ಹಲುಬಿ ಹಂಬಲಿಸಿದ್ದಾರೆ. ಶರಣರ ಅಗಲುವಿಕೆಯ ವಿರಹವನ್ನು ತಾಳಿದ್ದಾರೆ. ಹೋಲುಬುಗೆಟ್ಟ ಶಿಶು ತಾಯ ನರಸುನಂತೆ, ಬಳಿ ತಪ್ಪಿದ ಪಶು ತನ್ನ ಹಿಂಡನರಸುವಂತೆ ಶಿವಭಕ್ತ ಬಸವಂಣನವರು ಶಿವಭಕ್ತರ ತಿಂಥಿಣಿಯನ್ನುಅರಸುತ್ತಲಿದ್ದಾರೆ. ದಿನಕರನ ಉದಯಕ್ಕೆ ಕಮಲ ವಿಕಸಿತವಾದಂತೆ ಶರಣರ ಬರವೆಂಬ ಭಾನುವಿನ ಉದಿತಕ್ಕೆ ಬಸವಂಣನವರ ಹೃತ್‌ಕಮಲ ಅರಳುವದು, ಇಷ್ಟೇ ಏಕೆ? ಚಂದ್ರನ ಉದಯ ನೈದಿಲೆಗೆ ಜೀವಾಳವಾದಂತೆ ಒಲಿದ ಠಾವಿನಲ್ಲಿ ನೋಟ ಆತುರತೆಯಿಂದ ಅಂಗಳ ಮುಂದೆ ನೋಡಿ ಎದುರ್ಗೊಳ್ಳಲು ಹೋಗುವರು. ಬಾರದಿದ್ದರೆ ಅವರ ಅವಸ್ಥೆಯ ನೋಡಬೇಕು। ಮನ ದಿಗಿಲೆನ್ನುವದು. ನಿರಾಶರಾದಾಗ ಬಂದ ಶರಣರ "ಶಿವಾ" ಎಂಬುಲಿವನ್ನು ಕೇಳಿದಾಗಲೇ ಸಂತೋಷಗೊಂಬರು. ಮನೆಗೆ ಗುಡಿತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ. ರಂಗವಲ್ಲಿಯನಿಕ್ಕಿ ಆನಂದದಿಂದ ನಲಿದಾಡುವರು. ಹರುಷದಿಂದ ಕಣಿದಾಡುವರು, ಉಬ್ಬಿ ಕೊಬ್ಬಿ ಸಂತೋಷದಿಂದೋಲಾಡುವರು. ಬಂದಿಹನೆಂದು ಬಾರಂದಿರ್ದೊಡೆ ಬಟ್ಟೆಯ ನೋಡುತ ನಿಲ್ಲುವರು. ಬರುವವರು ಬಾರದಿರ್ದೊಡೆ ಪ್ರಾಣವನ್ನೇ ಅಟ್ಟುವರು. ಸಂಗಸಹಿತ ಶರಣರು ಬಂದರೆ ಕೂಡಲಸಂಗನೇ ಬಂದಿಹರೆಂದು ಹರುಷದಿಂದ ಎದಿರ್ಗೊಳ್ಳುವರು. ಶರಣರನ್ನು ಸಂಗನೆಂದಲ್ಲದೇ ಕಾಣರು. ಒಡೆಯರು ಬಂದಿಹರೆಂದು ಆತ್ಯಾದರದಿಂದ ಬಿಜಯಂಗೈಸಿ ಮಂಚದ ಮೇಲೆ ಅವರನ್ನುಕುಳ್ಳಿರಿಸಿ ಉಪಚರಿ

ಸುವರಲ್ಲವೇ ಒಡೆಯರು ಬಂದಾಗ ಮಂಚವನೇಗದ ಆಳಿನ ಭಾಷೆ ಬಸವಂಣನವರದು. ಜಂಗಮ ಸಹಿತ ಲಿಂಗಾರ್ಚನೆ ಮಾಡುವದೇ ಬಸವಂಣನವರ ಭಕ್ತಿಪಥವು. ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು. ಅದು ಸಲ್ಲದು. ಜಂಗಮ ವಿರಹಿತ ಭಕ್ತಿ ಲಿಂಗಕ್ಕೆ ಸಲ್ಲದು. ಲಿಂಗದೇವ ಎರೆದರೆ ನೆನೆಯ, ಮರೆದಡೆ ಬಾಡನು. ಹುರಳಿಲ್ಲ ಹುರಳಿಲ್ಲ ಲಿಂಗಾರ್ಚನೆ. ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು. ಲಿಂಗವ ಪೂಜಿಸಿ, ಬಂದ ಜಂಗಮವ ಉದಾಸೀನ ಮಾಡಿದರೆ ಬಸವಂಣನವರಿಗೆ ಜಂಗಮರ ನೊಂದ ನೋವು ಕೇಡು ಮಾಡೀತು ! ಸಂಗನ ಪಾದವಿಡಿದವರ ತನುವ ನೋಯಿಸಿದರೆ, ಮನವ ಬಳಲಿಸಿದರೆ ಹೃದಯ ಸಕುಡದೇ ಏನುಮಾಡೀತು ? ಶರಣರಿಗೆ ಆದ ನೋವೆ ಅದು ಲಿಂಗನೋವು. ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ಎಚ್ಚರಗೇಡಿಯಾಗಿ ಲಿಂಗವ ಪೂಜಿಸಿಯೂ ವ್ಯರ್ಥ. ಲಿಂಗವ ಪೂಜಿಸುತ್ತ ಜಂಗಮ ಮುಖವ ನೋಡುತಿರ್ಪ ಸುಖ ಅವರಿಗೇ ಮೀಸಲು. ಜೀವಾಳದಂತೆ ಶರಣರ ಬರವು ನೋಟ ಜೀವಾಳವಾಗಿದೆ. ನೋಟವೇ ಜೀವಾಳವಾದ ಬಸವಂಣನವರಿಗೆ ಶರಣರ ವಿಕಳತೆಯಲ್ಲಿ ಹಗಲು ಇರುಳಾಗಿದೆ. ಇರುಳು ಹಗಲಾಗಿದೆ. ಶರಣರನ್ನು ಕಂಡರೆ ಮನೋಹರ. ಇಲ್ಲದಿದ್ದರೆ ಅವರ ಅವಸ್ಥೆಯ ಏನ ಹೇಳುವದು? ಶರಣರ ಅಗಲುವಿಕೆಯ ದಾವತಿಗಿಂತ ಮರಣವೇ ಲೇಸಾಗಿ ತೋರತೊಡಗಿದೆ- ಭಕ್ತಿಪಂಜರದೊಳಗೆ 'ಶಿವ ಶಿವ ಎಂದುಲಿವ ಗಿಳಿಯನಿಕ್ಕಿ ಸೊಡರುಗಳಿಗೆ ತೈಲವ ನೆರೆದು ಬತ್ತಿಯನಿಕ್ಕಿ ಅದರ ಬೆಳಗಿನಲಿ ಶರಣರ ಬರವ ಹಾರೈಸುತ ಕುಳಿತಿರುವರು. ಶರೀರವೆಲ್ಲ ಕಿವಿಯಾಗಿ ಶರಣರ ಬರುವದರ ಉಲಿವ ಆಲಿಸುತಲಿರುವರು. ಶರೀರವೆಲ್ಲ ಕಣ್ಣಾಗಿ ಶರಣರ ಬರವ ನೋಡುವುದೇ ಜೀವಾಳವಾಗಿ ಕುಳಿತಿರುವರು. ಅವರ ಕಿವಿಗಳು ಇಷ್ಟು ಚುರುಕಾಗಿವೆ! ನೀರವತೆಯಲ್ಲಿ ಮರದ ಎಲೆ ಗಿರಿಕೇದಡೆ ಶರಣರೇ ಬಂದರೆಂಬರು ಜಂಗಮ ಪ್ರಸಾದ ಭೋಗೋಪಭೋಗವೇ ಬಸವಣ್ಣನವರ ಲಿಂಗಾರ್ಚನೆ. ಜಂಗಮ ಪ್ರಸಾದವನೊಲ್ಲದೇ ಅನ್ಯವ ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಲು ಕೇಳಿಕೊಳ್ಳುವರು. ಜಂಗಮ ಪ್ರಸಾದಕ್ಕಲ್ಲದೇ ಅನ್ಯಕ್ಕೆ ಬಾಯ್ದೆರೆಯರು. ಶರಣರು ಒಕ್ಕು ಮಿಕ್ಕುದ ಕೊಂಬುವರು. ತನುವ ಕೊಟ್ಟು ಗುರುವನೊಲಿಸುವರು. ಮನವಕೊಟ್ಟು ಲಿಂಗವನೊಲಿಸುವರು. ಧನವ ಕೊಟ್ಟು ಜಂಗಮವ ನೊಲಿಸುವರು ಶಿವನ ಸೊಮ್ಮು ಶಿವನಿಗರ್ಪಿಸಿ ಶುದ್ಧರಾಗುವರು.

ಹೀಗಲ್ಲದೇ ಮನೆಗೆ ಬರ್ಪ ಶರಣರನ್ನು ಸಂಗನಲ್ಲವೆಂಬ ಗಾಳಿ ತೀಡಿದರೆ ಬಸವಣ್ಣನವರಿಗೆ ಬೆಂದನೋವದು. ಶರಣರಿಗಾದ ದುಃಖವೇ ಬಸವಣ್ಣನವರ ದುಃಖವು. ಶರಣರು ನೊಂದುಕೊಂಡರೆ ಬಸವಣ್ಣನವರೂ ನೊಂದುಕೊಳ್ಳುವರು. ಶರಣರು ನೊಂದರೆ ಸುಣ್ಣವ ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ, ಹಾವ ಹೆಡೆಯಿಂದ ಗಲ್ಲವ ತುರಿಸಿಕೊಂಡಂತೆ, ಹುಲಿಯ ಮೀಸೆಯ ಹಿಡಿದು ಚಿನ್ನಾಟವಾಡ ಬಯಸಿದಂತೆ. ಶರಣರೊಡನೆ ಮೊದಲಾದ ಸರಸವು ವಿರಸದೊಂದಿಗೆ ಕೊನೆಗಾಣುವದು. ಶರಣರಲ್ಲಿ ಜಾತಿಸಂಕರನಾದಬಳಿಕ ಕುಲವನರಸದೇ ಲಿಂಗವಿದ್ದವನೇ ಕುಲಜನೆಂದು ನಂಬುವದವರಮನ. ದೇವಸಹಿತ ಭಕ್ತಮನೆಗೆ ಬಂದರೆ ಆವ ಕುಲವೆಂದು ಬೆಸಗೊಳ್ಳರು. ಬಂದ ಜಂಗಮದಲ್ಲಿ ಉತ್ತಮಜಂಗಮ, ಕನಿಷ್ಠಜಂಗಮ ಎಂದು ಭೇದವಮಾಡರು, ಸುಖಿಜಂಗಮ-ಸಾಮಾನ್ಯ ಜಂಗಮರು ಎಂಬ ಎರಡುತನವಿಲ್ಲ. ಜಂಗಮಕ್ಕೆ ಕೊಡುವ ಅನ್ನ-ವಸ್ತ್ರ-ಧನ ಮಾಟದಲ್ಲಿ ಎರಡಾಗಿ ಕಂಡರೆ ಶಿವ ನರಕದಲ್ಲಿಕ್ಕುವನೆಂಬ ವಿವೇಕವಿದೆ. ಜಂಗಮಕ್ಕೆ ಕೊಡುವಲ್ಲಿ ಇದ್ದುದನ್ನು ವಂಚನೆಯ ಮಾಡದಿಪ್ಪುದೇ ನೇಮ. ಇಲ್ಲದುದ ಕೈಗಡ ಮಾಡದಿಪ್ಪುದೇ ನೇಮ. ಬಂದುದನು ಕೈಕೊಂಬುದೇ ನೇಮ. ನುಡಿದುಹುಸಿಯದಿಪ್ಪುದೇ ನೇಮ. ನಡೆದು ತಪ್ಪದಿಪ್ಪುದೇ ನೇಮ. ಕೂಡಲಸಂಗಮದೇವ ಜಂಗಮಮುಖದಿಂದ ಇಷ್ಟೇ ಏಕೆ ಎಂಬತ್ತುನಾಲ್ಕುಲಕ್ಷ ಮುಖ ಒಂದೇ ಮುಖವಾಗಿ ಕೇಳಿದರೂ ಇಕ್ಕುವರು. ಮಾಡಿದೆನೆಂಬುದು ಮನಕ್ಕೆ ಹೊಳೆದರೆ ಏಡಿಸಿ ಕಾಡಿದ್ದು ಶಿವನ ಡಂಗುರ ಎಂಬುವಲ್ಲಿ ಸಾವಧಾನವಿದೆ. ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು ಎಂಬ ಅಹಂಭಾವದ ಸೊಡಗು ಹೊದ್ದದು.

[ ಮುಂದೆ ವರಿದದ್ದು ]

---

# ಶಿವಾನುಭವ ಮಂಟಪ

( ಲೇಖಕರು:- ಸಿ. ನಾ. ಮಹಾಂತಣ್ಣನವರು ಹುನೂರ. )

ಇದೇ ಭಾದ್ರಪದ ಮಾಸದಲ್ಲಿ ಐನಾಪುರವೆಂಬ ಗ್ರಾಮದೊಳಗೆ ಸಕಲ ಸಮಾಜ ಭಕ್ತರು ಶ್ರೀ ವೀರಭದ್ರ ದೇವಾಲಯದಲ್ಲಿ ಮುಂಜಾನೆ ಮಧ್ಯಾಹ್ನದೊಳು ಅಕ್ಕನಬಳಗ ಬಸವನ ಬಳಗದೊಂದಿಗೆ ಜ್ಞಾನಾನುಭವವನ್ನು ಸಂಜೆಯ ವೇಳೆಯೊಳು ತತ್ವಾನುಭವವನ್ನು ಪರತತ್ವ ಶಿವತತ್ವಗಳ ಸಮನ್ವಯಗೊಳಿಸುವ ಶ್ರೀ ಜಂಗಮದೇವನಿಂದ ಪ್ರವಚನ ಪ್ರವಾಹವನ್ನು ಸಾಂಗಗೊಳಿಸುತ್ತಿದ್ದರು ಎಷ್ಟೋ ಸತಿಪತಿಗಳು ಸುತರ ಸಹಿತವಾಗಿ ಆಲಿಸಿ ಆನಂದಾಂಬುಧಿಯಲ್ಲಿ ಮುಳುಗುತ್ತಿದ್ದರು. ದಿನಾಂಕ ೧೩ ಮಧ್ಯಾಹ್ನದ ೨ ಹೊಡೆದಿತ್ತು. ಆಗ " ಶರೀರದ ಸಫಲತೆಯ ಬಗ್ಗೆ ವಚನ ವಾಙ್ಮಯವು ಸಾಗಿತ್ತು. ಮೊದಲು ಮಂಗಳ ಪದ್ಯವು ಹೃನ್ಮಾನಸ ಪೂರ್ವಕ ಅಕ್ಕನ ಬಳಗದೊಳಗಾದ ಚಿಕ್ಕ ತಂಗಿಯರಿಂದ ಅನ್ನಲ್ಪಟ್ಟಿತು.

ಸರ್ವವಿದ್ಯೆಗಳಿಗೆ ಸರ್ವಬುದ್ಧಿಗಳಿಗೆ ।
ಸರ್ವಸಿದ್ಧಿಗಳಿಗೆ ಸರ್ವಕ್ಕೆ ॥
ಸರ್ವಜೀವರಕೋಟಿಗಾದಿ ಕಾರಣವಾದ ।
ಸರ್ವಮಂಗಳೆಗೆ ನತನಪ್ಪೆಂ ॥ ೧ ॥

ಬಳಿಕ

ವಚನ:— ಗಂಧದ ಗಿಡವನು ಕಡಿದು ಕಿರಿದುಂಡು ಮಾಡೆ, ಗಂಡು ಗೊಂಡನು ಸಾಣೆಯ ಕಲ್ಲೊಳು ಅರೆದರೆದು ಸಣ್ಣಿಸಿದೊಡೆ, ಸುಗಂಧವನೆ ಸೂಸದೆ ಬಿಡದಂತೆ ಎಲೆ ಅರಿದಲೆಯ ಮಾನವಾ ನಿನ್ನಲ್ಲಿ ಆವ ಗುಣವಿಹುದು ಹೇಳೆಂದಾ ಶ್ರೀ ವೀರಭದ್ರಾ ॥ ೧ ॥

ಮಬ್ಬಿನ ಮುಸುಕನು, ಅಬ್ಬರದೆ ಬೆಳೆದ ಕಬ್ಬನು ಕಡಿದು ತುಂಡರಿಸಿ ಆ ತುಂಡುಗಳ ಗಾಣದೊಳು ಹಾಕಿ ಹಿಂಡಿ ಹಿಪ್ಪೆಯ ಮಾಡಲದು ತನಿರಸವ ನೀಯದೆ ಬಟ್ಟೀತೇ ? ಆ ರಸವ ಕಬ್ಬಿಣ ಪಾತ್ರೆಯೊಳು ಸುರುವಿ ಕುದಿಸಲು ಸಾಕಾಗುವ ತನಕ ಸವಿಯುವ ಪಾಕಾಗದೆ ಪೋದೀತೆ ? ಆ ಪಾಕವ ಗಟ್ಟಿಗೊಳಿಸಿದ ನಿಟ್ಟೆಲೊಟ್ಟದ ಪೆಂಟೆಯ ಕರಣಿಯ ಬಾಯೊಳು ಹಲ್ಲಿನಿಂ ಕಡಿದ

ಹಳುಕುಗಳು ಸ್ವಾದವನಿತ್ತು ಮೋದಂಗೊಳಿಸವೇ ? ಈ ಪರಿ ಕಬ್ಬಿನ ಸುರ-ಸದ ಸವಿಯನ್ನು ನೀನು ಸಮಾಜಕ್ಕೆ ಸಲ್ಲಿಸಿದಿಯೇನು ಹೇಳೆಂದ ಶ್ರೀ ವೀರಭದ್ರ ॥ ೨ ॥

ಮೆಣಸಿನ ಕಾಯನ್ನು ಚಿವು ಚಿವುಟಿ ಹರಿತಂದು ತುಂಬವ ತೆಗೆದು ಕಲ್ಲೊಳು ಸಣ್ಣಿಸಿ ಮಸಾಲೆಯೊಳು ಮಿಶ್ರಿಸಿ ಉಂಬುವ ಪದಾರ್ಥದೊಳು ಸರಿಯಾಗಿ ಬೆರಿಸಿ ಸೇವಿಸಲು ಶರೀರಕೆ ಹಿತವಾಗಿ ಕಾಂತಿದೋರದೆಂಬ ಮಾನವನಾರು ಹೇಳಾ ಶ್ರೀ ವೀರಭದ್ರಾ ॥ ೩ ॥

ಹುಣಶಿಯು ಹಣ್ಣನು ಹರಿತಂದು ಚನ್ನಾಗಿ ನೆನಿಸಿ ಬೆಲ್ಲವ ಬೆರಿಸಿ ಎಣ್ಣೆದುಪ್ಪದ ವಗ್ಗರಣೆಯು ಸಾರ ಸುಪದಾರ್ಥಳು ಹದಮಾಡಿ ಉದಿಸೆ ಆ ಭಾಜನವು ಭೋಜ್ಯವಪ್ಪಂತೆ ನಿನ್ನಲ್ಲಿ ಅವ ಮಧುರವು ಮನೆಮಾಡಿ-ಕೊಂಡಿಹುದು ಹೇಳೆಂದ ನಮ್ಮ ವೀರಭದ್ರ ॥ ೪ ॥

ಮಣ್ಣು ನೀರೊಳಿಪ್ಪ ಉಪ್ಪವನು ತಪ್ಪದೆ ತಂದು ಒಪ್ಪಂಬಡುವಂತೆ ತಿಂಬುಂಬುವ ಪದಾರ್ಥದೊಳು ಬೆರಿಸುವದಲ್ಲದೆ ಉಪ್ಪಿನ ಕಾಯಿರಸವಗೆಯ್ಯೆ ಆ ರುಚಿಗೆ ಪ್ರತಿಯುಂಟೇ ನಿನ್ನಲ್ಲಿ ಅವ ರುಚಿಯುಂಟು ಹೇಳೆಂದ ಶ್ರೀ ವೀರಭದ್ರ ॥ ೫ ॥

ತರುಮರಾದಿಗಳಂತೆ ಶರೀರವ ಪವಿಸಿ, ಪೆಡ್ರುಚಿಯ ಕೊಂಡು ಜೀವಿ-ಸುವ ಶರೀರಕ್ಕೆ ಅನುಗುಣವಾದ ಆಹಾರವನು ಕಣ್ಣು ಕೈಕಾಲಿಲ್ಲದ ಊನರಿಗೆ ನೀಡಿ ಪುಣ್ಯವ ಪಡೆಯಲು ಸನ್ನಿಹಿತನವ್ವ ನಮ್ಮ ಶ್ರೀ ವೀರಭದ್ರಾ ॥ ೬ ॥

ಶ್ರೀ ಬಸವಣ್ಣನಾದ ಈ ಶರೀರವಿಡಿದ ಆತ್ಮರಾಶಿಗೆ ಹಿತವನೆ ಬಯ-ಸುವ ಕುಲಜನು, ಎಂದು ಪರೋಪಕಾರದ ಮಹತ್ವವನ್ನು ಮನದೊಳು ಮೂಡಿಸಿರುವನು.

ಶರೀರ ಸಫಲತೆಯ ಅನುಭವವ ಮನಗಂಡ ಬಳಿಕ “ ಕ್ರಮದಪ್ಪಿ ನಡೆಯುವದರಿಂದ ಕಷ್ಟವುಂಟೇ ” ಎಂಬ ನೀತಿಯ ಅನುಭವವು ಆರಂಭಿಸಲ್ಪಟ್ಟಿತು.

ತ್ಯಾಗಭೋಗ ಯೋಗಗಳ ಪತಿಕರಿಸಿ ಸಾಗಿಸುತ, ನೀಗಿಸದೆ ನಿಂದೊಡೆ ದೇವರ ಬಾಗಿಲದ ಬಡಿತವು ತಲೆಗೆ ಬಡಿಯದೆ ಬಿಡುವುದೆ? ಹೇಳಾ ಶ್ರೀ ವೀರಭದ್ರಾ ॥ ೧ ॥

ಮತಿವಂತ ಜ್ಞಾನವನು ತನಗೆ ಹಿತವಾದ ಮಿತವಾದ ವ್ರತನೇಮಶೀಲಂಗಳನಾಚರಿಸಿ, ಸತಿಸುತಾದಿಗಳ ಮೋಹದೊಳು ವ್ರತನೇಮಂಗಳಿಗೆ ಉಪಹತಿಯು ಬಂದರೆ ಪಶುಪತಿಯ ಪ್ರಾಶಕ್ಕೆ ಆಹುತಿಯಾಗನೇ? ಹೇಳೆಂದ ಶ್ರೀ ವೀರಭದ್ರಾ ॥ ೨ ॥

ಧರ್ಮಾಧರ್ಮಗಳ ವಿಚಾರಿಸಿ, ಸದ್ಧರ್ಮವನಂಗೀಕರಿಸಿ, ಧರ್ಮದಿಂ ಮತ್ತೆ ದೂರಾದ ದುರಿತ ಕಾಯಂಗೆ ಕಡೆಮೊದಲಿಲ್ಲದ ಕರ್ಮವು ಬಿಡದೆಂದ ನಮ್ಮ ಶ್ರೀ ವೀರಭದ್ರಾ ॥ ೩ ॥

ಮುಂಜಾವದಲೆದ್ದು ಮಲ ಹನ್ನೆರಡನೆಯ ತೊಳೆದು ಕಾಯಕಷ್ಟಪಡುವದೇ ಇಷ್ಟಲಿಂಗಪೂಜೆ. ಮಧ್ಯಾಹ್ನದೊಳು ಮಹಾದೇವರೂಪಿನ ಮಂತ್ರಮೂರ್ತಿಯೊಡಗೂಡಿ ಶ್ರೀಪ್ರಸಾದ ಸಲ್ಲಿಸುವುದು ಪ್ರಾಣಲಿಂಗದ ಪೂಜೆ, ಸಂಜೆಯ ವೇಳೆಯೊಳು ಸದ್ಭಾವದೊಳು ಅಡಕಾದ ಪ್ರಕಾಶನ, ಪ್ರವರ್ತನ, ಮೋಹನ ಶಕ್ತಿಯರೊಡಗೂಡಿ ಭಾವಲಿಂಗದ ಪೂಜೆಯೊಳು ತಾನು ತಾನಾ-ಗಿರುವುದೇ ಶಿವಪೂಜೆ. ಈ ಲಿಂಗತ್ರಯಗಳ ಪೂಜೆಗಳು ಕ್ರಮದಪ್ಪಿ ನಡೆಯಲು ಕಡುಕಷ್ಟವೆಂದ ನಮ್ಮ ಶ್ರೀ ವೀರಭದ್ರಾ ॥ ೪ ॥

ಮುತ್ತು ಹೋದರೆ ಮತ್ತೆ ಬಪ್ಪುದು. ಹೊತ್ತು ಹೋದರೆ ಮತೆ ಬಾರದು. ಸತ್ಯಮೂರ್ತಿಯ ಹಿಡಿದು, ಹೊತ್ತಿನ ಗೊತ್ತರಿದು ಆಚರಿಸದಿರ್ದೊಡೆ, ಮೃತ್ಯುಪಾಶವು ಕತ್ತರಿಸದೆಂದ ನಮ್ಮ ಶ್ರೀ ವೀರಭದ್ರಾ ॥ ೫ ॥

ಈ ಶಿವಾನುಭಾವವ ಎಂದಿನಂತೆ ಕೇಳ್ದ ಸತಿಪತಿಗಳಾದ ಸಂಗಮ್ಮ ಗುರುಸಿದ್ದಪ್ಪನವರು ಆ ದಿನ ಶಿವಾನುಭವ ನಡೆದಾಗ್ಗೆ ಶನಿವಾರ ಆ ಊರ ಸಂತೆಯ ನೆನಪಾಗಿ ಪರವೂರ ಗಿರಾಕಿಗಳು ಬಹುಜನರು ಬರಬಹುದೆಂದು ತಾನೊಬ್ಬನೇ ತಟ್ಟನೇ ಎದ್ದು ತನ್ನ ಕಾಯಕವಾದ ಹಿಟ್ಟಿನ ಗಿರಣಿಯ ನಡೆಯಿಸಲನುವಾಗಿ ಕೆಲ ಬುಟ್ಟಿ ಹಿಟ್ಟನು ಬೀಸಿ, ಗಿರಾಕಿಗಳ ಸಂಖೆಯು ಕಡಿಮೆಯಾದಾಗ ಒಂದೆರಡು ಬುಟ್ಟಿ ಬೀಸುವವು ಇರುವಾಗ ಜೋಳ ಅಳೆಯುವ ಮಾಪನು ತಿರುಗುವ ಪಟ್ಟೆಯಮೇಲೆ ಹಾರಿ ಬುಟ್ಟಿಯ ತೆಗೆದುಕೊಳ್ಳುವ ಆತುರತೆಯ ಅವಸಾನದೊಳು ಘೋತರವು ಪಟ್ಟೆಯೊಳು ಸಿಕ್ಕು ಆದರೊಡನೆ ತಾನು ಸಿಕ್ಕು ಶಿವಾಧೀನವಾದ ಸುದ್ದಿ ಕರ್ಣೋಪಕರ್ಣದೊಳು ಊರನೇ ವ್ಯಾಪಿಸಿತು. ಆ ಪ್ರಕಾರ ಆ ದಿನದ ಶಿವಾನುಭವವು ಮುಗಿಯುವ ವೇಳೆಯಲ್ಲಿ ಶಿವಾನುಭವಿಯಿಂದ ಕೆಳಗಿನ ವಚನಗಳು ವಿವೇಚಿಸಲ್ಪಟ್ಟವು.

ವಚನಃ— ಗುರುಸಿದ್ದಪ್ಪನು ಗರಗರನೆ ತಿರುಗುವ ಗಿರಣಿಗಾಕೃತಿಯಾಗಿ ಮರಮರನೆ ಮರುಗಿ ಹರಣವ ಕಳೆದುಕೊಂಡನೆಂಬ ವಾರ್ತೆಯನ್ನು ಬೀರುವ ಆಕಾಶ ಮೂರ್ತಿ ಶ್ರವಣೇಂದ್ರಿಯ ಮೂರ್ತಿ ಸಕಲರಿಗೆ ವಿದಿಸಲಾಗ ಕೊಬ್ಬಿದ ದೇಹವನು ಅಬ್ಬರದೆ ಉಬ್ಬುಬ್ಬಿ ಉಪಕಾರಗೈವ ಮೃದುವಚನದ ಊರೆಲ್ಲ ಬೊಬ್ಬಿಟ್ಟ ಮೂರ್ತಿಯು ಕಂಡು ಕಣ್ಣೀರ ಸುರಿಥದ ಅಣ್ಣಗಳಾರು ಹೇಳಂದ ನಮ್ಮ ಶ್ರೀ ವೀರಭದ್ರಾ ॥ ೧ ॥

ಹುಲ್ಲು ಕಡ್ಡಿಯಾಗಿ ಎಲ್ಲರಿಗೆ ಬೇಕಾಗಿ ಸಲ್ಲಲಿತ ಕಾಯಕವ ನಹಿಸಿ ತಲ್ಲಣಿಪ ಮನುಜರಿಗೆ ಬೆಲ್ಲದ ಹೇರಾಗಿ ಸೊಲ್ಲು ಸೊಲ್ಲಿಗೆ ಆ ಜನತೆ ನೆನೆವಂತೆ ನಡೆದು, ಲೇಸೆನಿಸಿಕೊಂಡ ಪ್ರಾಣಿ ಜಗದೀಶನಡಿಗೆ ಸಾಗದಿಹನೇ ಹೇಳೆಂದ ನಮ್ಮ ಶ್ರೀ ವೀರಭದ್ರ ॥ ೨ ॥

ಮಾರಹರ ಭಕ್ತರು ತೋರ ವಿಮಾನದೊಳಿರಿಸೆ, ಭೋರನೆ ನೆರೆದ ಸಾವಿರಾರು ಜನಸಂದಣಿಯ ಊರ ಬಝಾರ ಹಿಡಿಸದಂತಾಗೆ " ಸ್ಮಶಾನ ಯಾತ್ರೆಯ ಸೊಬಗ ಅಗಾಧವಿದು " ಇಷ್ಟು ಜನದಟ್ಟಣೆಗೆ ಆತನ ಸದ್ಗುಣದ ಸಂಸ್ಕಾರವಲ್ಲದೆ ಮತ್ತೇನು ಅಲ್ಲೆಂದ ನಮ್ಮ ಶ್ರೀ ವೀರಭದ್ರಾ ॥೩॥

ಮರುದಿನದ ಶಿವಾನುಭವದ ವೇಳೆಯೊಳು.

ವಚನಃ— ಚಿತ್ತಜನ ವಶವರ್ತಿ ಚಿದಂಗವ ಒಲ್ಲಳೇ? ಒತ್ತರಿಸಿ ಓಡುವ ಮನವನಿತ್ತರಿಸದವಳು ನಿಜಲಿಂಗನ ಬಲ್ಲಳೇ? ರೂಪಕ್ಕೆ ಮರ್ಗ್ಯಳಾದ ಇರುಳೆ ಇಂದುಧರನ ಬಲ್ಲಳೇ? ನಾಲಿಗೆಯ ರುಚಿಗಾಗಿ ನಲಿದಾಡುವಾಕೆ ಮಲಹರನ ಬಲ್ಲಳೇ? ಅಹಂಕಾರದ ಮೂಳೆ ಶಂಕರನ ಬಲ್ಲಳೇ? ವಾಸನೆಗೆ ಒಲಿದಾಕೆ ಶಶಿಧರನ ಬಲ್ಲಳೇ? ತ್ವಚೆವಿಷಯದ ಸಸಿನೆ ವಿಷಧರನ ಬಲ್ಲಳೇ? ಜಗದ ನಾದದೊಳು ನಿಂದವಳು ನಂದಿವಾಹನನ ಬಲ್ಲಳೇ? ನೇನು ಹೇಳಾ ಮಹಾದೇವಿಯಕ್ಕ ॥ ೧ ॥

ನಿರಹಂಕಾರದೊಳು ನಿಂದು ನಾನೊಂದು ಸೋಜಿಗವ ಕಂಡೆನವ್ವಾ, ಕಣ್ಣಿಲ್ಲದೆ ಕಾಣುವ, ಕಿವಿಯಿಲ್ಲದೆ ಕೇಳುವ, ಮೂಗಿಲ್ಲದೆ ವಾಸಿಸುವ, ಜಿಹ್ವೆಯಿಲ್ಲದೆ ರುಚಿಸುವ, ತ್ವಚೆಯಿಲ್ಲದೆ ಮುಟ್ಟುವ, ಕಾಲಿಲ್ಲದೆ ನಡೆಯುವ ಕೈಯಿಲ್ಲದೆ ಗೆಯ್ಯುವ, ಮಂತ್ರಮೂರ್ತಿಯ ಮನದ ನೆನಹಿನೊಳು ನಿಲ್ಲಿಸಿ, ಚಿದಂಗಳಾಗಿ ಚಿದೃಕ್ಕಿನಿಂ ನೋಡಿ, ಮನವನಗಲದೆ ಇದ್ದ ಮೃದಂಗ ಮೂರ್ತಿಯು ಮೂಜಗದೆ ಮಾಜದೆ ನಿಂದ ಶಿಲವನೇನ ಹೇಳಲವ್ವಾ ಮಹಾದೇವಿಯಕ್ಕ ॥ ೨ ॥

ಹೆಟ್ಟಿನ ಗಿರಣಿಯೊಳು ತಟ್ಟನೆ ಹಾರಿ, ಚಟ್ಟಿಯು ಕೊಂಬುವ ಕಾಲದೊಳು ಉಟ್ಟ ಘೋತರ ಗಿರಣಿಯ ತೊಗಲ ಪಟ್ಟಿಯೊಳು ಸಿಕ್ಕು, ತಟ್ಟನೆ ಬಿದ್ದು, ಗಟ್ಟಿಗಟ್ಟಿಸಿ ಬೀಳ್ವ ಪೆಟ್ಟಿಗೆ ಆ ದೇಹ ನಷ್ಟವಾದ ಪರಿಯನೇನು ಹೇಳಲಮ್ಮ. ಹುಟ್ಟಿದುದು ನಷ್ಟವಾಗುವದೊಮ್ಮೆ ನಿಟ್ಟುಸುರು ಬೇಡ ಬೋರಾಡಿ ದುಃಖಿಸಬೇಡೆಂದಳಾ ಮಹಾದೇವಿಯಕ್ಕ ॥ ೩ ॥

ತುಡುಗನ ತೊಡರು ಸಂಸಾರದ ಎಡರು, ಕವಿಯ ಸ್ಫೂರ್ತಿ ಕಾವ್ಯನ ವಿಕೃತಿ, ಮಾಯೆಯ ಛಾಯೆ ಮನದ ಕಾಯೆ, ಜ್ಞಾನಿಗಳ ಯೋಗ ಭವಿಗಳ ಭೋಗ, ಲಿಂಗದ ಇರವ ಸಂಗನ ಬರವ, ಬಾಲರ ಲೀಲೆ ಕಾಲನ ಜಾಲಗಳ ಬಲ್ಲವರಾರಮ್ಮ ಮಹಾದೇವಿಯಕ್ಕಾ ॥ ೪ ॥

ಶಿವಶರಣರ ಸಂತಾನ ಭವಪಾಶ ಪರಿವೃದು, ತಪಪತಿಯು ಶಿವ ಸಂಕಲ್ಪಕೀಡಾಗೆ, ಪಶುಪತಿಯು ಪೂಜೆಯು ಅತಿಶಯದೆ ಮಾಡೆ ಗತಿಗಾಣಲು ಅತಿ ಸುಲಭವಮ್ಮ ತಂಗಿ ಸಂಗಮ್ಮ ಎಂದು ನುಡಿದಳಾ ಮಹಾದೇವಿಯಕ್ಕ ॥ ೫ ॥

ಅಕ್ಕನ ಬಳಗದ ಅನುಭಾವ ಕೇಳಿದ ಸಂಗಮ್ಮನು ಅದೇ ದಿವಸ ತನ್ನ ತಂದೆಯು ಹಿತೋಪದೇಶವನ್ನೂ ಆಲಿಸಿದಳು.

ವಚನ:— ಕಾಂತಾರದೊಳಗಿದ್ದ ಕಾಡು ಪಶುಪಕ್ಷಿಗಳ, ಮಣ್ಣು ನೀರೊಳಗಿದ್ದ ಸಣ್ಣ ಪ್ರಾಣಿಗಳ, ಆಕಾಶದೊಳಗಿರ್ದ ಅತಿ ಸೂಕ್ಷ್ಮ ಜಂತುಗಳ, ಕಲ್ಲೊಳಗಿನ ಕಪ್ಪೆಗಳನೆಲ್ಲ ಸಲಹುವ ಮಲಹರನು ನಿನ್ನೊಳಿಲು ನೀನೇಕೆ ಚಿಂತೆಗೈವೆ ಹೇಳೆಂದ ನಮ್ಮ ಸಿದ್ಧೇಶ್ವರಾ ॥ ೧ ॥

ರಾಜನಿರಲಿ ಪ್ರಜೆಗಳಿರಲಿ, ಬಡವನಿರಲಿ ಬಲ್ಲಿದನಿರಲಿ, ಬಾಲನಿರಲಿ ವೃದ್ಧನಿರಲಿ, ಪ್ರಾಜ್ಞನಿರಲಿ ಪಾಮರನಿರಲಿ, ತಾತನಿರಲಿ ಮಾತೆಯಿರಲಿ, ಖ್ಯಾತಿಯಿರಲಿ, ನೀಚಾತಿಯಿರಲಿ, ಉಪಕಾರಿಯಿರಲಿ, ಅಪಕಾರಿ ಇರಲಿ, ಧ್ಯಾನಿಯಿರಲಿ, ಮೌನಿಯಿರಲಿ, ಪ್ರಾರಬ್ಧ ಕರ್ಮವ ಪ್ರಧ್ವಂಸ ಮಾಡಲಸಾಧ್ಯವೆಂದ ನಮ್ಮ ಸಿದ್ಧೇಶ್ವರಾ ॥ ೨ ॥

ಮಹಾದೇವಿಯಕ್ಕಗಳ ಬಳಗದೊಳಗಾಗಿ. ಭೃತ್ಯಾಚಾರವ ವಹಿಸಿ, ಅಕ್ಕಗಳ ಅಕ್ಕರತೆಗೆ ತಕ್ಕವಳಾಗೆಂದ ನಮ್ಮ ಸಿದ್ಧೇಶ್ವರಾ ॥ ೩ ॥

ನಿತ್ಯ ನೇಮದೆ ಸತ್ಯ ಶಿವಲಿಂಗವ ಪೂಜಿಸಿ, ಮೃತ್ಯುವನು ಗೆಲ್ವ ಸತ್ಯ ಶಿವಶರಣೆ ಶರಣರ ವಚನಗಳ ಓದಿ ಮೃತ್ಯುಂಜಯಳಾಗೆಂದ ನಮ್ಮ ಸಿದ್ಧೇಶ್ವರಾ ॥ ೪ ॥

ಕರುಳ ಪಾಶವು ಕರೆಯಿತು, ಮಮತಾ ಪಾಶವು ಮುಂಬರಿಯಿತು. ಅರುಹಿನ ಪಾಶವು ಮುಂದುವರಿದ ಪಾಶವ ಹರಿಯಿತು. ಸಮತಾ ಪಾಶವು ಸಂಗೊಳಿಸಿ ಸದು ಹೃದಯನಾವರಿಸಿದ ಪರಿಯನೇನ ಹೇಳಲಯ್ಯ ಸಿದ್ಧೇಶ್ವರಾ ॥ ೫ ॥

ಟೀಪು:— ಈ ಲೇಖ ಬರೆದ ಶ್ರೀಯುತ ಸಿ. ನಾ. ಮಹಾಂತಣ್ಣನವರು ಶಿವಾನುಭವ ಪತ್ರಿಕೆಯ ವಾಚಕರಿಗೆ ಚನ್ನಾಗಿ ಪರಿಚಿತರಾಗಿದ್ದಾರೆ. ಈ ಲೇಖವು ಮೃತ್ಯು ಲೇಖವಿದೆ. ತಮ್ಮ ಅಳಿಯನ ಮೃತ್ಯುವನ್ನು ಕುರಿತು ಈ ಲೇಖದಲ್ಲಿ ಅವರು ಬರೆದಿದ್ದಾರೆ. ಅವರ ಅಳಿಯ ಶ್ರೀ ಗುರುಸಿದ್ಧಪ್ಪನವರು. ಅವರು ಅಕಸ್ಮಾತ್ತಾಗಿ ಗಿರಣಿಯಲ್ಲಿ ಸಿಕ್ಕು ಮೃತರಾದರು. ಆದರೆ ಶ್ರೀ. ಮಹಾಂತಣ್ಣನವರು ಒಬ್ಬ ಶಿವಾನುಭವಿಗೆ ಒಪ್ಪುವಂತೆ ಈ ಸಂಗತಿಯನ್ನು ಶಿವಾನುಭವ ತತ್ವಗಳನ್ನು ಉದಹರಿಸುತ್ತ ತಮ್ಮ ಮನಸ್ಸನ್ನು ಸಾಂತ್ವನಗೊಳಿಸಿಕೊಂಡಿದ್ದಾರೆ. ಇದು ಅನುಕರಣೀಯವಲ್ಲವೇ? ಇದು ಮುಕ್ತಾಯಕ್ಕನ ಸಂಪಾದನೆಯಲ್ಲಿ ಬಂದ ತತ್ವಗಳನ್ನು ಹೋಲುವದಿಲ್ಲವೇ? ಶ್ರೀ ಗುರುಸಿದ್ಧಪ್ಪನವರ ಆತ್ಮನು ಪರಮನಲ್ಲಿ ಬೆರೆದು ಇಹಲೋಕವನ್ನು ಸ್ಮರಿಸುದಿರಲೆಂದು ಹಾರೈಸುತ್ತೇವೆ.

— ಸಂಪಾದಕ.

---

# ಜಗಜ್ಯೋತಿ ಬಸವೇಶ್ವರರು

ಲೇಖಕರರು:—ಶ್ರೀ ಮಲ್ಲಿಕಾರ್ಜುನ ಶಿ. ಲಕ್ಕೆ 'ಸಾಹಿತ್ಯ ಭೂಷಣ'
(ವೀ, ಸಾ, ಸಮಿತಿ, ಬೆಳಗಾವಿ)

ಜಗತ್ತಿನ ಮಹಾ ಮಹಾ ವಿಭೂತಿಗಳಲ್ಲಿ ಶ್ರೀ ಭಕ್ತಿಭಾಂಡಾರಿ ಬಸವಣ್ಣನವರು ಒಬ್ಬರಿದ್ದಾರೆ. ರಾಜಕೀಯ ರೀತಿಯಿಂದಲೂ ಧಾರ್ಮಿಕ ರೀತಿಯಿಂದಲೂ, ಸಾಮಾಜಿಕ ರೀತಿಯಿಂದಲೂ ನಾಡನ್ನು ಸುಧಾರಿಸಿ ಜಗಜ್ಯೋತಿಯಾದರು.

ಇವರು ವಿಜಾಪೂರ ಜಿಲ್ಹೆಯಲ್ಲಿರುವ ಬಾಗೇವಾಡಿಯಲ್ಲಿ, ಮಾದರಸ ಮಾದಲಾಂಬಿಕೆಯರೆಂಬ ಪರಮ ಸಂಪನ್ನ ದಂಪತಿಗಳ ಉದರದಲ್ಲಿ ಜನಿಸಿದರು. ಚಿಕ್ಕ ವಯಸ್ಸಿನ ಇವರು ಹಿರಿ ವಯಸ್ಸಿನವನ್ನೂ ಕೂಡ ಬೆರಗು ಗೊಳಿಸುವಷ್ಟು ಜ್ಞಾನಿಗಳಾಗಿದ್ದರು. ಆಚಾರವಂತರಾಗಿದ್ದರು. ವಿಚಾರವಂತರಾಗಿದ್ದರು. ' ಸತ್ಯಮೇವ ಜಯತೆ ' ಎಂದರಿತು ನುಡಿದ ನುಡಿ ಮುತ್ತಿನ ಹಾರದಂತೆಯೂ, ಮಾಣಿಕ್ಯದ ದೀಪ್ತಿಯಂತೆಯೂ, ದೇವರೂ ಮೆಚ್ಚುವಂತಹದ್ದು ಇರಬೇಕೆಂದು ಸಾರಿದರು. ಅದಕ್ಕೆ ಸರಿಯಾಗಿ ನುಡಿದಂತೆ ನಡೆಯದಿದ್ದರೆ ತಿಳಿದ ವಿಚಾರಗಳು ಹಾಗೂ ಹಿಡಿದ ಫಲಗಳು ಅಪಜಯಕ್ಕೆ ಈಡಾಗುವವು.

ಸಾಂಪ್ರದಾಯಿಕವಾಗಿ ಬಂದ ತನ್ನ ಮುಂಜೀ ಬಂಧನದಲ್ಲಿ ಸಿಕ್ಕಿಕೊಳ್ಳುವ ಪ್ರಸಂಗ ಬಂದಾಗ ಜಾಣ್ಮೆಯಿಂದ ಮನೆಬಿಟ್ಟರು. ಕೂಡಲಸಂಗಮಕ್ಕೆ ಹೋದರು. ಗುರುವಿನಲ್ಲಿ ಪಾಠಕಲಿತರು. ಅವನ ಜಾಣ್ಮೆಗೆ-ಮೆಚ್ಚಿ ಬಿಜ್ಜಳನು ಮಂತ್ರಿಪದ ಕೊಟ್ಟ. ರಾಜಕೀಯ ಕಟ್ಟಳೆಗಳನ್ನು ಧಾರ್ಮಿಕ ಕಟ್ಟಳೆಗಳಿಗೆ ಅನುಸರಿಸಿದನು. ದರಿದ್ರರಿಗೆ ಧರ್ಮದ ದಾರಿಯನ್ನು ತೋರಿದ. ಅಹಿಂಸೆಯ ಮಾರ್ಗವನ್ನು ಹಿಡಿದು, ' ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ.' ಎಂದಂದನು.

ಮಹಾ ಮಹಾ ತತ್ವಜ್ಞಾನಿಗಳನ್ನು ಕೂಡಿರಿ, ಭಕ್ತಿ ಪಂಥವ ಕಟ್ಟಿ ಅನುಭವಮಂಟಪ ವೆಂಬುದನ್ನು ಸ್ಥಾಪನೆಮಾಡಿದ ಹಿರಿಯರಿಗೆ ಹಿರಿಯ

ರಾಗಿದ್ದ ಅಲ್ಲಮಪ್ರಭುಗಳನ್ನು ಅಧ್ಯಕ್ಷರನ್ನಾಗಿ ಮಾಡಿ ದುರುಳರ ದುರ್ವರ್ತನೆಯನ್ನು ದೂರೀಕರಿಸಹತ್ತಿದ. 'ಕಾಯಕವೇ ಕೈಲಾಸವೆಂದು' ಪ್ರತಿಯೊಬ್ಬರೂ ಕಾರ್ಯ ಮಾಡಲೇಬೇಕೆಂದು ಕಟ್ಟಪ್ಪಣೆಯಿತ್ತನು.

ಜಾತಿ ಯತಿಯ ಐಕ್ಯತೆಗಾಗಿ ಹಗಲಿರುಳು ಪ್ರಯತ್ನ ಪಡಹತ್ತಿದನು. 'ಹೂವು ಮಾರುವವನು ಉಚ್ಚನು. ಮೊಚ್ಚೆ ಮಾರುವವನು ನೀಚನು' ಎಂಬ ಕೀಳು ಭಾವವನ್ನು ಮುರಿದನು. ಬೇಕಾದ ಕಾಯಕವವರಿರಲಿ ಭಕ್ತಿ ಪಂಥ ಒಂದಿದ್ದರೆ ಸಾಕು, ಅವರು ಶಿವಭಕ್ತರೇ ಎಂದಂದನು.

ಆಶೆ ಆಮಿಷಗಳನ್ನು ಹರಿದೊಗೆದು 'ಊರ ಮುಂದೆ ಹಾಲಹಳ್ಳ-ಹರಿಯುತ್ತಿರಲಿ, ಎನಗೇಕಯ್ಯ ಬಿಜ್ಜಳನ ಭಾಂಡಾರ" ಎಂದಂದನು. ಹೊಗಳುವವರು ಕೊಗ್ಗೇಡಿಗಳು. ಬೈದವರೆನ್ನ ಬಂಧುಗಳೆಂದನು. ಸದ್ಭಕ್ತಿಯುಳ್ಳವನೇ ಸದಾಚಾರಿ, ಅನಾಚಾರವುಳ್ಳವನೇ ದುರಾಚಾರಿ ಎಂದಂದನು.

ಸಜ್ಜನರ ಸಂಗ ಸಮೀಪಿಸುವುದು ಲೇಸು. ದುರ್ಜನರ ಸಂಗವದು ಭಂಗವಯ್ಯಾ ಎಂದು ಹೇಳಿದ.

ಲೋಕರ ಡೊಂಕ ನೀವೇಕೆ ತಿದ್ದುವಿರಿ, ಮೊದಲು ನಿಮ್ಮ ಮನವ ತನುವ ಸಂತೈಸಿಕೊಳ್ಳಿರಿ' ಎಂದು ಹೇಳಿದ್ದಾನೆ.

ದಯವೇ ಧರ್ಮದ ಮೂಲ. ದಯೆ ಪ್ರತಿಯೊಬ್ಬನಿಗೂ ಬೇಕೇ ಬೇಕು ಎಂದಿದ್ದಾನೆ ದೇವರಲ್ಲಿ ಭಕ್ತಿ, ವಿಶ್ವಾಸ, ಪ್ರೇಮಾದರಗಳನ್ನಿಟ್ಟು ಪ್ರೀತಿಗೆ ಪಾತ್ರರಾಗಿರಿ ಎಂದು ಹೇಳಿದ್ದಾನೆ.

ಈ ಅವರ ಸುಧಾರಣೆಗಳಿಂದ ಮಾನವನ ಅನೇಕ ಪಂಗಡಗಳೆಲ್ಲಾ ಒಂದಾಗಿ ಹೊಸ ಸಮಾಜ ಪ್ರಾರಂಭವಾಯಿತು. ಎಲ್ಲರೂ ಬೇಕಾದ ಕಾಯಕದವನಿರಲಿ ಭಕ್ತನಿದ್ದರೆ, ಶೀಲವುಳ್ಳವನಿದ್ದರೆ, ಆಚಾರವಂತನಿದ್ದರೆ ಎಲ್ಲರೂ ಶಿವಭಕ್ತರೆಂದು ಇಷ್ಟಲಿಂಗ ಧರಿಸಿ ವೀರಶೈವರಾದರು

ಸ್ತ್ರೀ ಪುರುಷರೆಲ್ಲರೂ ಸಮಾನರು ಎಂದು 'ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ' ಎನ್ನುವಂತೆ ಅದರಲ್ಲಿದ್ದ ಆತ್ಮ ಒಂದೇ

ಎಲ್ಲರಿಗೂ ಸರಿಸಮಾನವಾದ ಹಕ್ಕುಗಳು ಎಂದ, ವೇದವನ್ನು ಮುನ್ನು ಗ್ಗಿಸಿ ವೇದ ಹೇಳಿದ ತಾಯಿಯೇ ದೇವರೆಂದುದನ್ನು; 'ಹೆಣ್ಣೇ ದೇವ ರೆಂದು ಒಂದೆಜ್ಜೆ ಮುಂದೆ ಸಾಗಿಸಿದ. ಇದರಂತೆ ನುಡಿದಂತೆ ನಡೆ ಇರಬೇಕೆಂದ ಅದೇ ಪ್ರಕಾರ ಅನುಭವ ಮಂಟಪದಲ್ಲಿ ಸ್ತ್ರೀ ಪುರುಷ ರಿಗೂ ಸಮಾನ ಹಕ್ಕುಗಳಿದ್ದವು ಅಂತೆಯೇ ಮಹಾದೇವಿಯಕ್ಕ ಮಹಾ ಶಿವಶರಣೆಯಾದಳು.

ದಯೆಯು ಎಲ್ಲರೊಳು ಒಡಮೂಡಿತು ಎಲ್ಲರೂ ಕಾಯಕ ಮಾಡಿ ಬಡ ಬಗ್ಗರಿಗೆ ದಾಸೋಹ ಇಟ್ಟರು. ಅಂತೆಯೇ ಶರಣರ ಕಾಲಪಾವನ ವಾಗಿದೆ.

ಜಾತೀಯತೆಯು ಐಕ್ಯತೆಯಾಯಿತು. ಮಾದಾರ ಚೆನ್ನಯ್ಯ, ಮೋಚ್ಚಿ ಗಾರ ಹರಳಯ್ಯ, ದೇವರದಾಸಿಮಯ್ಯ, ಮಧುವಯ್ಯ ಇನ್ನೂ ಅನೇಕ ಬೇರೆ ಬೇರೆ ಕಾಯಕಗಳಲ್ಲಿ ನಿವೃತ್ತರಾದವರು ಈ ಐಕ್ಯತೆಗೆ ಕಾರಣರಾ ದರು. ಮಡಿವಾಳ ಮಾಚಿದೇವ ಎಲ್ಲ ಭಕ್ತ (ಶರಣ) ಜನರ ಮನದ ಮೈಲಿಗೆಯನ್ನು ಹೊಡೆದೋಡಿಸುವವನಾಗಿದ್ದ. ಚೆನ್ನಬಸವಣ್ಣ ಜ್ಞಾನದ ಬೀಜ ಬಿತ್ತುವವನಾಗಿದ್ದ. ಮಾಯಾಕೋಲಾಹಲ ಮಾಡಿದ ಅಲ್ಲಮ ಪ್ರಭುಗಳು ವೈರಾಗಿಗಳಾಗಿದ್ದರು. ಎಲ್ಲ ಜನರಿಗೆ ಮಾರ್ಗದರ್ಶಕರಾಗಿ ಶೂನ್ಯ ಸಿಂಹಾಸನಕ್ಕೆ ಅಧ್ಯಕ್ಷರಾಗಿದ್ದರು. ಇಂಥ ಈ ಬಸವನ ಕಾರ್ಯ, ಜಗದೋದ್ಧಾರದ ಕಾರ್ಯ ಜನಪ್ರಿಯವಾಯಿತು. ನಾಡುನಾಡಿನಿಂದ 'ಕಲ್ಯಾಣ'ವೆಂಬ ಪಟ್ಟಣ ಕೇಳುತ್ತ, ಬಸವನ ಭಂಡಾರವನ್ನು ಕಾಣುತ್ತ ಅವನ ಸೇವಕರಾಗಲು ಬರತೊಡಗಿದರು. ಅಂತೆಯೇ ಮೋಳಿಗೆಯ ಮಾರಯ್ಯ ಅವನ ಹೆಂಡತಿ ಮಹಾದೇವಿಯುಮ್ಮ ಮಹಾ ಶಿವಶರಣ ಶರಣೆಯರಾದರು. ಇಂಥ ಈ ಶ್ರೇಷ್ಠ ಮಹಾತ್ಮನು ಎನಗಿಂತ ಕಿರಿಯರಿಲ್ಲ ನಾನೇ ಕಿರಿಯವ ಎಂದು ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದನು. ಆದರೆ ಈಗಿನ ನಮ್ಮ ಈ ಸಮಾಜದಲ್ಲಿ ನಾನೇ ನಾನೇ ಎಂಬ ಅಹಂಕಾರ ಭಾವವು ಮೂಡಿದೆ. ಅದು ಹೋಗದ ವಿನಃ ಸಮಾಜ, ಸಮಾಜದಿಂದ ನಾಡು, ನಾಡಿನಿಂದ ದೇಶ ಎಂದಿಗೂ ಮುಂದೆ ಬರಲು ಸಾಧ್ಯವಿಲ್ಲ.

ಅದು ಕಾರಣ ನಾವೆಲ್ಲರೂ ಮಹಾತ್ಮರು ಹ ಕಿಕೊಟ್ಟ ಸಂದೇಶ ವನ್ನು ಒಳ್ಳೆಯ ರೀತಿಯಾಗಿ ಅರಿತು ಅದರಂತೆ ಆಚರಿಸಿದರೆ ಮಾತ್ರ

ಬಸವಣ್ಣನವರನ್ನು ನೆನೆದಂತೆ ಹೊರತು ಸಂಕೋಚ ಭಾವ ತಾಳಿವಲ್ಲಿ ದುಃಸಾಧ್ಯ.

ಇದನ್ನು ಬಿಟ್ಟು ಕೆಲವು ಜನರು 'ಜಯ ಜಯಕಾರದೊಂದಿಗೆ ಜೈ ಅನ್ನುವುದು' ಮೆರುವಣಿಗೆಯೊಡನೆ ಮೆರೆಯುವದು, ಮತ್ತೆ ಅಲ್ಲದ-ಸಲ್ಲದ ಕಾರ್ಯ ಮಾಡುವುದು ಎಂದರೆ ಬರಿಯ ಆಡಂಬರ. ಪ್ರತಿಯೊಬ್ಬ ಮಾನವನ ಭಾವ ಅವರ ತತ್ವಗಳಲ್ಲಿ ಅಡಕವಾಗಿ ಆ ಪ್ರತಿಭೆ ತನ್ನಷ್ಟಕ್ಕೆ ತಾನೇ ಹೊರಸೂಸಬೇಕು.

'ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು ಹಲವು ದೈವದ
ಎಂಜಲ ತಿಂಬುವವರನೇನೆಂಬೆ ಕೂಡಲ ಸಂಗಮ ದೇವಾ'

ಎಂದ್ಹೇಳಿ ಒಳ್ಳೆಯ ಭಕ್ತನಿಗೆ ಒಬ್ಬನೇ ಒಬ್ಬ ದೇವರು. ಅದರಂತೆ ಪರಮ ಸ್ತ್ರೀಯಳಿಗೆ ಒಬ್ಬನೇ ಒಬ್ಬ ಗಂಡ. ಇದನ್ನು ಅಲಕ್ಷಿಸಿದಲ್ಲಿ ಕಿವಿ ಮೂಗ ಕೊಯ್ವನು ಎಂದ್ಹೇಳಿದ್ದಾನೆ.

'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ ಎಂದ್ಹೇಳಿದ್ದಾನೆ. 'ನಂಬಿ ಕರೆದರೆ ಓ ಎನ್ನುವನು ಶಿವನು' ಎಂದಂದಿದ್ದಾನೆ ಅದರಂತೆ ಸಂಗಮನಾಥನನ್ನು ನಂಬಿ ಕರೆದು ದೇವರಲ್ಲಿ ಬೆರೆತು ದೇವರೇ ಆಗಿದ್ದಾನೆ.

ಅಂದಮೇಲೆ ಮಾನವರಾದ ನಮಗೆ ಸುಖ ದುಃಖಗಳ ಚಕ್ರ ಸರಿಯಾಗಿ ಸಾಗಬೇಕಾದರೆ 'ಸಂಸಾರ ಸಾಗರದಲ್ಲಿ' ಮಾನವನ ಜೀವನ ಎಂಬ ನೌಕೆ ಸರಳವಾಗಿ ಸಾಗಬೇಕಾದರೆ, ಗುರಿಯನ್ನು ಮುಟ್ಟಿಸಲು ಸಾಧನಗಳಾದ ಶರಣರ ಸಂದೇಶ ನಮಗೆಲ್ಲರಿಗೂ ಅತ್ಯವಶ್ಯವಾಗಿ ಬೇಕು. ಅವರ ವಚನಗಳನ್ನು ಅರಿತು ಪುನೀತರಾಗುವ ಮಾರ್ಗದಲ್ಲಿ ಮಾಯವಾಗಬೇಕು.

"ಬಸವಣ್ಣನವರ ಆತ್ಮ ದಿವ್ಯಾತ್ಮ!
ಅವರ ವಾಣಿ ಅಮೃತ ವಾಣಿ !!
ಶಾಂತಿಯನ್ನರಸುವವರಿಗೆ ಅಮೃತ ಧಾರೆ!!

## ಸುಖಿಯಾಗು ಎಲೆ ಜೀವನೆ !

ಮರುಳಾಟ ರಾಕಿನ್ನು,
ಹುಡುಗಾಟ ಬೇಡಿನ್ನು,
ಶರಣರಾ ನಡೆಯಲ್ಲಿ ನಡೆದು-
ಸುಖಿಯಾಗು ಎಲೆ ಜೀವನೆ! ॥ ೧ ॥

ಶರಣರಾ ವಾಣಿಯನು,
ಪರತತ್ವ ಬೋಧೆಯನು,
ಸಾಧು ಸಜ್ಜನರ ಸಂಗವನು ಮಾಡಿ
ಸುಖಿಯಾಗಿ ಬಾಳಿ ಬೆಳಗಲೇ ಜೀವಿ!! ॥ ೨ ॥

ಗುರು ವಿನಾ ಸೇವೆಯಲಿ,
ಲಿಂಗದಲಿ ನಿಷ್ಠೆಯನು,
ಜಂಗಮದಲಿ ಭಕ್ತಿಯನು ಮಾಡಿ-
ಸುಖಿಯಾಗು-ಎಲೆ ಜೀವನೆ! ॥ ೩ ॥

ಎಲ್ಲರಿಗು ಗಿರಿಯ ನಾಗಿ,
ಶರಣರಡಿ ಆಳಾಗಿ,
ಭೃತ್ಯಭಾವದೊಳು ಚರಿಸಿ-
ಸುಖಿಯಾಗು-ಎಲೆ ಜೀವನೆ! ॥ ೪ ॥

ನಾನೆಂಬುದನು ಮರೆತು,
ನೀನೆಂಬುದನು ತಿಳಿದು,
ತಿಳಿಯಾದ ಬಾಳಿನಲಿ, ಬಾಳಿ-
ಸುಖಿಯಾಗು- ಎಲೆ ಜೀವನೆ ! ॥ ೫ ॥

ಸತ್ಯ-ಧರ್ಮವ ಹಿಡಿದು,
ಸರ್ವರೊಳು ಹಿತನೆನಿಸಿ,
ಜ್ಯೋತಿಯಲಿ ಕೂಡಿ-
ಸುಖಿಯಾಗು-ಎಲೆ ಜೀವನೆ! ॥ ೬ ॥

ಯಾರಿಗೂ ಯಾರಿಲ್ಲ,
ದೇವನೊಲಿದವಗೆ ಕೇಡಿಲ್ಲ,
ದೇವನೊಬ್ಬನ ನಂಬಿ-
ಸುಖಿಯಾಗಿ ಬಾಳ ಬೆಳಗಲೆ ಜೀವಿ!! ॥ ೭॥

ಕವಿ:- ಗುರುಸಿದ್ಧ ಶಿವಾಚಾರ್ಯರು.
ಗುರುವಿನಪುರ ಮಠ.

---

ಗಂಗಾಂಬಿಕೆ ನೀಲಾಂಬಿಕೆಯರು ತಮ್ಮ ಅರಮನೆಗೆ ಬಂದ ಅತಿಥಿಗಳನ್ನು ಉಪಚರಿಸುವ ಕಾರ್ಯವನ್ನು ಮನಮುಟ್ಟಿ ಮಾಡುವರು. ಇಷ್ಟೇ ಅಲ್ಲ, ಅವರು ಸಹ ತಾವು ಉಚ್ಚತರದ ಶಿವಾನುಭವಿಗಳಾದ್ದರಿಂದ ವಚನಗಳನ್ನು ರಚಿಸುವವರಾದರು. ಗಂಗಾಂಬಿಕೆಯ ಮುದ್ರಿಕೆಯು 'ಗಂಗಾಪ್ರಿಯ ಕೂಡಲಸಂಗಮದೇವಾ?' ಎಂದಿದೆ. ಆದರೆ ಅವಳ ಯಾವ ವಚನವೂ ನಮಗೆ ದೊರತಿರುವದಿಲ್ಲ. ಹೆಚ್ಚಿಗೆ ಶೋಧಿಸಿದಲ್ಲಿ ಇವು ದೊರೆಯಬಹುದೆಂದು ನಮಗೆ ತೋರುತ್ತದೆ.

ಮುಂದೆ ಹರಳಯ್ಯ ಮಧುವಯ್ಯಗಳನ್ನು ಬಿಜ್ಜಳ-ನೃಪತಿಯು ಅತ್ಯಂತ ಕ್ರೂರತನದಿಂದ ಕೊಲ್ಲಿಸಿದನು. ಆಗ ಕಲ್ಯಾಣಪಟ್ಟಣದಲ್ಲಿ ಒಂದು ಮಹತ್ತರವಾದ ಕ್ಷೋಭೆಯುಂಟಾಯಿತು. ಬಸವೇಶ್ವರನು ಕಲ್ಯಾಣವು ಪಾಪಪೂರಿತವಾದ ಪಟ್ಟಣವಿದೆ, ನಾನು ಇಲ್ಲಿ ಇರಬಾರದು, ಅದು ನಾಶವಾಗಲೆಂದು ಶಪಿಸಿ, ಕೂಡಲಸಂಗಮೇಶ್ವರನಲ್ಲಿಗೆ ತೆರಳಿದನು. ಬಸವೇಶ್ವರನು ಕೂಡಲಸಂಗಮೇಶ್ವರನಲ್ಲಿಗೆ ಬಂದಬಳಿಕ ತನ್ನ ಸತಿಯರಾದ ನೀಲಾಂಬಿಕೆ ಗಂಗಾಂಬಿಕೆಯರಿಗೆ ತಾನಿದ್ದ ಸ್ಥಳಕ್ಕೆ ಬರಬೇಕೆಂದು ಹಡಪದಪ್ಪಣ್ಣನ ಕೂಡ ಹೇಳಿ ಕಳುಹಿದನು. ಹಡಪದಪ್ಪಣ್ಣನು ಕಲ್ಯಾಣಕ್ಕೆ ಬಂದು ಬಸವೇಶ್ವರನ ಅಭಿಪ್ರಾಯವನ್ನು ಅವರಿಗೆ ತಿಳಿಸಲಾಗಿ ಅವರು ಹೇಗೆ ವರ್ತಿಸಿದರೆಂಬುದು ವಿಚಾರಾರ್ಹವಾಗಿದೆ.

ನೀಲಾಂಬಿಕೆಯು ಬಸವೇಶ್ವರನಂತೆ ಕೋಮಲ ಹೃದಯಳು, ಮತ್ತು ಲಿಂಗನಿಷ್ಠಳು. ಅವಳು ಬಸವೇಶ್ವರನ ಅಭಿಪ್ರಾಯವನ್ನು ತಿಳಿದ ಕೂಡಲೆ ಕೂಡಲಸಂಗಮನಾಥನು ಕಪ್ಪಡಿಯಲ್ಲಿದ್ದಾನೆಯೇ? ಅವನು ಇಲ್ಲಿಯೇ ಇಲ್ಲವೇ? ಎಂಬ ವಿಚಾರಗಳು ಬಂದಿರಬಹುದು. ಆದರೂ ಅವಳು ತನ್ನನ್ನು ಕಾಣಬೇಕೆಂಬ ಬಸವೇಶ್ವರನ ಆಜ್ಞೆಯನ್ನು ಶಿರಸಾವಹಿಸಿ ಕಪ್ಪಡಿಗೆ ಹೊರಡುವವಳಾದಳು. ಮಧ್ಯದಾರಿಯಲ್ಲಿ ಬರುತ್ತಿರುವಾಗ ಅವಳು ಬಸವೇಶ್ವರನನ್ನು ಕಾಣುವ ಪೂರ್ವದಲ್ಲಿಯೇ ಬಸವೇಶ್ವರನು ಲಿಂಗದೊಳಗಾಗಿದ್ದನು. ಇದು ನೀಲಾಂಬಿಕೆಗೆ ತಿಳಿದಕೂಡಲೆ ಅವಳು ತಂಗಡಿಗೆಯಲ್ಲಿದ್ದಾಗ್ಗೆ ತತ್‌ಕ್ಷಣ ತನ್ನ ಲಿಂಗದಲ್ಲಿಯೇ ಬಯಲಾಗಿ ಹೋದಳು. ಆದರೆ ಇತ್ತ ಗಂಗಾಂಬಿಕೆಯು ಬೇರೆ ವಿಧವಾಗಿ ಆಚರಿಸಿದಳು. ಅದು ಹೇಗೆಂದರೆ—

"ಗುರುಪ್ರಾಣಿಯು ಗಂಗಾಂಬಿಕೆಯು, ಲಿಂಗಪ್ರಾಣಿಯು ನೀಲಲೋಚನೆಯು, ಜಂಗಮಪ್ರಾಣಿಯು ಬಸವಣ್ಣ" ಎಂದು ಈ ಮೂವರು

ಶಿವಶರಣರಲ್ಲಿ ಪ್ರಸಿದ್ಧರಾಗಿದ್ದಾರೆ. ಬಸವೇಶ್ವರನು ಗಂಗಾಂಬಿಕೆಗೆ ತನ್ನ ಕಡೆಗೆ ಬರಬೇಕೆಂದು ಹೇಳಿಕಳುಹಲು ಗುರುಪ್ರಾಣಿಯಾದ ಅವಳು ತನ್ನ ಗುರುವಾದ ರುದ್ರಮುನಿದೇವನ ಸಲಹೆಯನ್ನು ಪಡೆಯುವವಳಾದಳು. ಈ ಕಾಲದಲ್ಲಿ ಶಿವಶರಣರ ಮೇಲೆ ಭಯಂಕರ ವಿಪತ್ಕಾಲವು ಬಂದೊದಗಿತ್ತು. ವೀರಶೈವ ಧರ್ಮವು ನಾಡಿನಲ್ಲಿ ಉಳಿಯಬೇಕೋ ಅಥವಾ ಅಳಿಯಬೇಕೋ, ಶಿವಶರಣರು ಜೀವಿಸಬೇಕೋ ಅಥವಾ ಮೃತರಾಗಿ ಹೋಗಬೇಕೋ, ಎಂಬ ಪ್ರಶ್ನೆಯು ಉದ್ಭವಿಸಿತ್ತು. ಇಂಥ ಗಂಡಾಂತರ ಸ್ಥಿತಿಯಲ್ಲಿ ರೇವಣಸಿದ್ಧೇಶ್ವರನ ಪುತ್ರನಾದ ರುದ್ರಮುನಿದೇವನು ಶಿವಶರಣರಿಗೆ ಮುಂದಾಳುವಾಗಿ ನಿಂತು ಅವರನ್ನು ಯುದ್ಧಕ್ಕೆ ಅಣಿಮಾಡಿದನು. ಅವನು ಶಿವಶರಣರ ಸೈನ್ಯವನ್ನು ಜೊತೆಗೊಳಿಸಿದನು. ಆದ್ದರಿಂದ ಗಂಗಾಂಬಿಕೆಯು ಕಪ್ಪಡಿಗೆ ಹೋಗದೆ ಗುರುವಾದ ರುದ್ರಮುನಿಯ ಕಾರ್ಯದಲ್ಲಿ ಸಹಾಯಕಳಾಗಿ ಕಲ್ಯಾಣದಲ್ಲಿಯೇ ನಿಂತಳು. ಶಿವಶರಣರ ಸೈನ್ಯಕ್ಕೆ ಸರ್ವ ಸನ್ನಾಹಗಳನ್ನು ಜೊತೆಗೊಳಿಸಹತ್ತಿದಳು. ( ಕಾಲಜ್ಞಾನದ ವಚನಗಳು ) ಈ ಸೈನ್ಯಕ್ಕೆ ಚನ್ನಬಸವ, ಮಡಿವಾಳಮಾಚಿದೇವ ಇವರು ಮುಖ್ಯಸ್ಥರಾಗಿದ್ದು ಗಂಗಾಂಬಿಕೆಯು ಅವರೊಡನೆ ಯುದ್ಧರಂಗಕ್ಕೆ ಹೋಗಲು ಸಿದ್ಧಳಾದಳು. ಅವಳು ಈ ಕಾಲದಲ್ಲಿ ಒಬ್ಬ ಶೂರ ಸ್ತ್ರೀಯಳಂತೆ ವರ್ತಿಸಿದಳು. ಅವಳ ಕೂಡ ಬಸವೇಶ್ವರನ ಅಕ್ಕನಾದ ಅಕ್ಕನಾಗಲಾಂಬಿಕೆಯೂ ಇದ್ದಳು. ಅವಳು ಸಹ ಬಸವೇಶ್ವರನ ಕೂಡ ಕೂಡಲಸಂಗಮಕ್ಕೆ ಹೋಗಲಿಲ್ಲ. ಈ ಉಭಯತರು ಕಡೆಯ ವರೆಗೂ ಶಿವಶರಣರ ಸೈನ್ಯದಲ್ಲಿ ಯುದ್ಧಮುಖದಲ್ಲಿದ್ದರು. ಈ ಕಾಲದಲ್ಲಿ ಗಂಗಾಂಬಿಕೆಯೂ ನಾಗಲಾಂಬಿಕೆಯೂ ವೀರವನಿತೆಯರಿಗೆ ಶೋಭಿಸುವಂತೆ ಆಚರಿಸಿದರು.

ಶಿವಶರಣರು ಶಸ್ತ್ರವನ್ನು ಹಿಡಿದು ಚನ್ನಬಸವ, ಮಡಿವಾಳಮಾಚಿದೇವ ಇವರ ನೇತೃತ್ವದಲ್ಲಿ ಆಳಿಯ ಬಿಜ್ಜಳನ ದಂಡಾಳುಗಳೊಡನೆ ಕಾದಾಡುತ್ತ ತೊರಗಲು ನಾಡನ್ನು ಪ್ರವೇಶಿಸಿದರು. ಈ ಸ್ಥಳದಲ್ಲಿ ಅನೇಕ ಕಡೆಗೆ ಯುದ್ಧಗಳಾದವು. ಅವು ಯಾವ ಯಾವ ಗ್ರಾಮಗಳಲ್ಲಾದವೆಂಬುದನ್ನು ನಾವು ಹಿಂದೆ ಮಡಿವಾಳಮಾಚಿದೇವ ಮತ್ತು ಕಿನ್ನರೀ ಬ್ರಹ್ಮಯ್ಯ ಇವರ ಚರಿತ್ರೆಗಳಲ್ಲಿ ಹೇಳಿದ್ದೇವೆ. ಈ ಯುದ್ಧಗಳಾದಲ್ಲೆಲ್ಲ ಗಂಗಾಂಬಿಕೆಯೂ, ನಾಗಲಾಂಬಿಕೆಯೂ ರಣರಂಗದಲ್ಲಿ ಇರುತ್ತಿದ್ದರು. ಕಡೆಗೆ ಕಾತರವಳ್ಳಿಯಲ್ಲಿ ಘನಘೋರ ಯುದ್ಧವು ಸಂಭವಿಸಿತು. ಆದ

ರಲ್ಲಿ ಅಳಿಯ ಬಿಜ್ಜಳನಿಗೆ ಶಿವಶರಣರನ್ನು ಮುರಿದಿಕ್ಕುವದು ಆಗಲಿಲ್ಲ. ಅವನೇ ಸೋತು ರಣರಂಗದಲ್ಲಿ ಮೂರ್ಛಿತನಾಗಿ ಬಿದ್ದನು. ಅವನನ್ನು ಕೊಂದುಹಾಕಬೇಕೆಂದು ಶಿವಶರಣರ ದಂಡಾಳುಗಳು ಸಿದ್ಧರಾಗಿದ್ದರು. ಆದರೆ ನಾಗಲಾಂಬಿಕೆಯ ಮಧ್ಯಸ್ತಿಕೆಯಿಂದ ಇದು ತಡೆಯಲ್ಪಟ್ಟಿತು. ಕಾತರವಳ್ಳಿಯ ಯುದ್ಧವಾದ ಬಳಿಕ ಶಿವಶರಣರು ಉಳಿವಿಯ ಮಹತ್ತರವಾದ ಅರಣ್ಯಪ್ರದೇಶವನ್ನು ಪ್ರವೇಶಮಾಡಿದರು. ಈ ಪ್ರದೇಶದಲ್ಲಿ ಅವರು ಕಾಯಮವಾಗಿ ವಸಾಹತ್ತು ಮಾಡಬೇಕೆಂದು ಬಯಸಿದ್ದರು.

ಗಂಗಾಂಬಿಕೆಯು ಕಾತರವಳ್ಳಿಯಿಂದ ಉತ್ತರಕ್ಕೆ ೩-೪ ಮೈಲುಗಳ ಮೇಲಿರುವ ಮುಗುಟಖಾನ ಹುಬ್ಬಳ್ಳಿ ಎಂದು ಈಗ ಕರೆಯಲ್ಪಡುವ ಗ್ರಾಮದಲ್ಲಿ ಇದ್ದಾಗ್ಗೆ ಅವಳು ಅಲ್ಲಿಯೇ ಲಿಂಗೈಕ್ಯಳಾದಳು. ಅಲ್ಲಿಯೇ ಆಕೆಯ ಸಮಾಧಿಯು ಇದೆ. ಅದು ಈಗಲೂ ಗಂಗಾಂಬಿಕೆಯ ದೇವಾಲಯವೆಂದು ಕರೆಯಲ್ಪಡುತ್ತದೆ. ಹೀಗೆ ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯ ಅಂತ್ಯವು ರಣರಂಗದ ಸಮೀಪದಲ್ಲಿ ಆದದ್ದು ಒಬ್ಬ ವೀರವನಿತೆಗೆ ಶೋಭಿಸುವಂಥದೇ ಇರುತ್ತದೆ. ಅವಳು ಕಡೆಯ ವರೆಗೆ ಶತ್ರುಗಳ ಕೂಡ ಹೋರಾಡುತ್ತ ಮಡಿದಿದ್ದಾಳೆ. ಇದು ಅವಳ ಶೌರ್ಯ ಧೈರ್ಯಗಳನ್ನು ತೋರಿಸುತ್ತವೆ. ಹೀಗೆ ನೀಲಾಂಬಿಕೆಯ ಸಮಾಧಿಯು ಕೃಷ್ಣೆಯ ತಟಾಕದಲ್ಲಿ ಒಂದು ಕಡೆಗೆ ಆಗಿದ್ದರೆ, ಗಂಗಾಂಬಿಕೆಯ ಸಮಾಧಿಯು ಕಾತರವಳ್ಳಿಯ ರಣರಂಗಕ್ಕೆ ಸಮೀಪವಾಗಿ ಆಗಿರುತ್ತದೆ. ವೀರಶೈವ ಇತಿಹಾಸದಲ್ಲಿ ಈ ಉಭಯತರ ಹೆಸರುಗಳು ಚಿರಸ್ಥಾಯಿಯಾಗಿ ಉಳಿದಿವೆ.

# ನಾಗಲಾಂಬಿಕೆ

ನಾಗಲಾಂಬಿಕೆಯು ಬಸವೇಶ್ವರನ ಅಕ್ಕನು ಮತ್ತು ಚನ್ನಬಸವೇಶ್ವರನ ತಾಯಿಯು. ಅವಳು ಯಾವಾಗಲೂ ಬಸವನ ಸಂಗಡ ಇದ್ದು ಅವನ ಸುಖದುಃಖಗಳಲ್ಲಿ ಪಾಲುಗಾರಳಾಗಿದ್ದಾಳೆ. ಬಸವನಿಗೆ ಕಠಿಣ ಪ್ರಸಂಗವು ಬರಲು ನಾಗಲಾಂಬಿಕೆಯು ಅವನ ಕೂಡ ಕಷ್ಟ ಸಹಿಸಿದ್ದಾಳೆ. ಕಲ್ಯಾಣದಲ್ಲಿ ಶಿವಾನುಭವದ ಮಂಟಪದ ಕಾರ್ಯಗಳಲ್ಲಿ ಅಂಗ ವಹಿಸಿ ಕಾರ್ಯ ಮಾಡಿದ್ದಾಳೆ. ಅವಳು ಸಹ ವಚನಗಳನ್ನು ರಚಿಸಿದ್ದಾಳೆ. ಬಸವೇಶ್ವರನನ್ನು ಅವನ ಬಂಧುಗಳು ಬಾಗೇವಾಡಿಯಿಂದ ಹೊರಗೆಹಾಕಲು ಅವನ ಕೂಡ ನಾಗಲಾಂಬಿಕೆಯೂ ಸ್ವಗ್ರಾಮದಿಂದ ಹೊರಬಿದ್ದಳು. ಮುಂದೆ ಅವನೊಡನೆ ಕೂಡಲಸಂಗಮ ಕ್ಷೇತ್ರಕ್ಕೆ ಹೋಗಿ ಅಲ್ಲಿ ವಾಸ ಮಾಡಿದಳು. ಅವಳು ಕಲ್ಯಾಣದಲ್ಲಿ ನಡೆದ ಎಲ್ಲ ಕಾರ್ಯಗಳಲ್ಲಿ ಬಸವೇಶ್ವರನೊಡನೆ ಸಹಕರಿಸಿ ಅವನಿಗೆ ಯಾವಾಗಲೂ ಸಹಾಯಮಾಡುತ್ತ ಬಂದಿದ್ದಾಳೆ. ಮುಂದೆ ಶಿವಶರಣರಿಗೆ ಅರಣ್ಯಕ್ಕೆ ಹೋಗುವ ಪ್ರಸಂಗ ಬರಲು ಅವಳು ತನ್ನ ಮಗ ಚನ್ನಬಸವನೊಡನೆ ಅಲ್ಲಿಗೆ ಹೊರಟಳು. ಇಷ್ಟೇ ಅಲ್ಲ, ಶಿವಶರಣರನ್ನು ಯುದ್ಧ ಕಾರ್ಯಗಳಿಗೆ ಪ್ರೋತ್ಸಾಹಿಸಿದ್ದಾಳೆ- ಅನೇಕ ರಣರಂಗಗಳನ್ನು ಕಂಡಿದ್ದಾಳೆ. ಕಡೆಗೆ ಉಳವಿಗೆ ಹೋಗಿ ಮಹಾ ಮನೆಯ ಘೋರ ಕಾಳಗದಲ್ಲಿದ್ದು ಶಿವಶರಣರು ಉಮ್ಯಾಳಿಯಲ್ಲಿ ಕುಳಿತು ಶಿವಲೋಕಕ್ಕೆ ಹೋದದ್ದನ್ನು ನೋಡಿದ್ದಾಳೆ. ಮುಂದೆ ಅವಳು ಭದ್ರಾತೀರ ಪ್ರದೇಶಕ್ಕೆ ಹೋಗಿ ಅಲ್ಲಿಯೇ ದೇಹವಿಟ್ಟಿದ್ದಾಳೆ. ಹೀಗೆ ನಾಗಲಾಂಬಿಕೆಯ ಚರಿತ್ರೆಯು ಬಹು ಅದ್ಭುತವಾದದ್ದು. ಶಿವಶರಣರಲ್ಲಿ ಅವಳ ಸ್ಥಾನವು ಬಹಳ ಮಹತ್ವದ್ದಾಗಿರುತ್ತದೆ.

### ನಾಗಲಾಂಬಿಕೆಯ ಜನನ.

ನಾಗಲಾಂಬಿಕೆಯು ಒಂದು ಸನಾತನ ಶೈವ ಬ್ರಾಹ್ಮಣ ಮನೆತನಕ್ಕೆ ಹೊಂದಿದವಳು ಇದ್ದಾಳೆ. ಬಸವೇಶ್ವರನ ಕಾಲದಲ್ಲಿ ಬಾಗೇವಾಡಿಯು ಬ್ರಾಹ್ಮಣರ ಒಂದು ಮಹತ್ವದ ಅಗ್ರಹಾರ ಸ್ಥಾನವೆನಿಸಿಕೊಂಡಿತ್ತು. ಬಸವೇಶ್ವರನ ಮನೆತನದವರು ಈ ಅಗ್ರಹಾರಕ್ಕೆ ಮುಖ್ಯಾಧಿಪತಿಗಳು.

## ನಾಗಲಾಂಬಿಕೆಯ ಲಗ್ನ.

ನಾಗಲಾಂಬಿಕೆಯ ಮಗನಾದ ಚನ್ನಬಸವನು ೧೧೬೮ರಲ್ಲಿ ಉಳಿವಿ ಗ್ರಾಮದಲ್ಲಿ ಸಮಾಧಿಸ್ಥನಾದನು. ಆಗ ಅವನ ವಯಸ್ಸು ಕೇವಲ ೨೪ ವರ್ಷವಿತ್ತೆಂದು ವೀರಶೈವ ಗ್ರಂಥಗಳೆಲ್ಲವೂ ಹೇಳುತ್ತವೆ. ಆದ್ದರಿಂದ ಅವನು ೧೧೪೪ರಲ್ಲಿ ಜನಿಸಿರಬೇಕು. ಬಸವೇಶ್ವರನು ಅವನಕಿಂತಲೂ ೧೨ ವರ್ಷ ಹಿರಿಯನು. ಆದ್ದರಿಂದ ಬಸವೇಶ್ವರನು ಜನ್ಮತಳೆದ ವರ್ಷ ೧೧೩೨ ಆಗುತ್ತದೆ. ಚನ್ನಬಸವನು ೧೧೪೪ರಲ್ಲಿ ಜನಿಸಿದ್ದರಿಂದ ಅವನ ತಾಯಿಯಾದ ನಾಗಲಾಂಬಿಕೆಯು ೧೧೪೩ ಅಥವಾ ೧೧೪೪ ರಲ್ಲಿ ಗರ್ಭಿಣಿಯಾಗಿರಬೇಕು. ಆಗ ಅವಳ ವಯಸ್ಸು ಕಿರ ಕಡಿಮೆ ಎಂದರೆ ೧೬, ೧೪ ವರ್ಷವಾದರೂ ಆಗಿರಬಹುದು. ಆದ್ದರಿಂದ ೧೧೪೨ರ ಪೂರ್ವದಲ್ಲಿ ಅವಳ ಲಗ್ನವಾಗಿ ಬ್ರಾಹ್ಮಣ ಪದ್ಧತಿಯ ಪ್ರಕಾರ ಅವಳು ತನ್ನ ಗಂಡನ ಮನೆಗೆ ಹೋಗಿರಬೇಕು. ಮತ್ತು ಅಲ್ಲಿ ಚನ್ನಬಸವೇಶ್ವರನನ್ನು ಹೆತ್ತಿರಬೇಕು.

ಅವನು ಹುಟ್ಟಿದಾಗ ಅಂದರೆ ೧೧೪೩ ೪೪ನೇ ಇಸ್ವಿಯಲ್ಲಿ ಬಸವೇಶ್ವರನು ಕಲ್ಯಾಣದಲ್ಲಿದ್ದಿಲ್ಲ. ಆಗ ಬಿಜ್ಜಳನು ಇನ್ನೂ ಚಕ್ರಾಧಿಪತ್ಯವನ್ನು ಹೊಂದಿದ್ದಿಲ್ಲ. ಈ ಕಾಲಕ್ಕೆ ಅವನು ಮಂಗಳವಾಡದಲ್ಲಿ ಒಬ್ಬ ಚಿಕ್ಕ ಮಾಂಡಲಿಕನಾಗಿದ್ದನು. ಮುಂದೆ ಅವನು ಬನವಾಸಿ ನಾಡಿನಲ್ಲಿ ಮಾಂಡಲಿಕನಂತೆ ಚಾಳುಕ್ಯ ರಾಜನಿಂದ ನೇಮಿಸಲ್ಪಟ್ಟನು. ಈ ಕಾಲದಲ್ಲಿ ಬಸವೇಶ್ವರನು ಬಾಗೇವಾಡಿಯಲ್ಲಾಗಲಿ ಅಥವಾ ಆಗ ಮನೆಯಿಂದ ಹೊರಗೆ ಹಾಕಲ್ಪಟ್ಟಿದ್ದರೆ, ಸಂಗಮ ಕ್ಷೇತ್ರದಲ್ಲಾಗಲಿ ವಾಸಮಾಡುತ್ತಿರಬೇಕು. ಇದೇಕಾಲದಲ್ಲಿ ನಾಗಲಾಂಬಿಕೆಗೆ ಚನ್ನಬಸವನು ಜನ್ಮತಾಳಿರಬೇಕು. ಆದ್ದರಿಂದ ನಾಗಲಾಂಬಿಕೆಯು ತನ್ನ ತಂದೆಯ ಮನೆಯಲ್ಲಿದ್ದಾಗಲೇ ಅವಳ ಲಗ್ನವಾಗಿ ಹಡೆದಿರಲಿಕ್ಕೆ ಬೇಕು. ಒಂದು ಸನಾತನ ಮತದ ಕರ್ಮಠ ಬ್ರಾಹ್ಮಣರ ಮನೆತನದಲ್ಲಿ ೧೨ ವರ್ಷದ ಒಳಗೆಯೇ ಕನ್ನಿಕೆಯ ಲಗ್ನಮಾಡುವ ಪರಿಪಾಠವಿದೆ. ಆದ್ದರಿಂದ ಆಕೆಯ ತಂದೆತಾಯಿಗಳು ೧೧೪೨ರ ಪೂರ್ವದಲ್ಲಿಯೇ ಒಬ್ಬ ಅನುರೂಪ ವರನನ್ನು ಹುಡಿಕಿ ಅವನಿಗೆ ಅವಳು ಕೊಟ್ಟು ಲಗ್ನಮಾಡಿರಬೇಕು. ಈ ಸಂಗತಿಗಳು ಸಂಭವನೀಯವಿದೆ.

ಸಿಂಗಿರಾಜ ಪುರಾಣಕರ್ತನು ನಾಗಲಾಂಬಿಕೆಯ ಗಂಡನ ಹೆಸರು ಶಿವಸ್ವಾಮಿ ಎಂದು ಹೇಳಿದ್ದಾನೆ. ಆದ್ದರಿಂದ ಈತನೇ ನಾಗಲಾಂಬಿಕೆಯ ಗಂಡನಾಗಿರಬೇಕೆಂದು ಸದ್ಯಕ್ಕೆ ನಾವು ತಿಳಿಯಲು ಪ್ರತ್ಯವಾಯವಿರುವದಿಲ್ಲ.

## ಚನ್ನ ಬಸವನ ಜನನ.

ಆದರೆ ಈಗಿನ ವೀರಶೈವ ಪುರಾಣಗಳು ನಾಗಲಾಂಬಿಕೆಯು ಯಾವಾಗಲೂ ಕನ್ನಿಕೆಯಾಗಿದ್ದಳೆಂತಲೂ ಅವಳು ಕಕ್ಕಯ್ಯನ ಪ್ರಸಾದದಿಂದ ಗರ್ಭಿಣಿಯಾದಳೆಂತಲೂ ಹೇಳುತ್ತಿವೆ. ಆದರೆ ಇದು ಸಂಭವನೀಯವಾಗಿ ತೋರುವದಿಲ್ಲ ಮಹಾ ಪುರುಷರ ಜನ್ಮಕಾಲದಲ್ಲಿ ಅಲೌಕಿಕ ಘಟನೆಯುಂಟಾಗಿದೆಂದು ಹೇಳುವ ಸಾಂಪ್ರದಾಯವು ನಮ್ಮ ದೇಶದಲ್ಲುಂಟು. ಅದೇ ರೀತಿ ಚನ್ನ ಬಸವೇಶ್ವರನ ಬಗ್ಗೆಯೂ ಆಗಿದೆಂದು ನಮಗೆ ತೋರುತ್ತದೆ.

ಚನ್ನ ಬಸವನು ಹುಟ್ಟಿದ ಕಾಲದಲ್ಲಿ ಅಂದರೆ ೧೧೪೪ರಲ್ಲಿ ಬಸವನು ಕಲ್ಯಾಣದಲ್ಲಿರಲಿಲ್ಲ ಆಗ ಬಸವನು ೧೨ ವರ್ಷದ ಬಾಲಕನಾಗಿದ್ದನು. ಇಂಥ ಎಳೆ ವಯಸ್ಸಿನಲ್ಲಿ ಆವನು ಒಂದು ಮಹತ್ವದ ರಾಷ್ಟ್ರದ ಪ್ರಧಾನಿಯಾಗಿರುವದು ಸಂಭವನೀಯವಲ್ಲ. ಆಗ ಅವನು ಬಹುಶಃ ಬಾಗೇವಾಡಿ ಅಥವಾ ಸಂಗಮದಲ್ಲಿರಬೇಕು. ಅವನು ಕಲ್ಯಾಣದಲ್ಲಿ ಉಚ್ಚ ಸ್ಥಾನದಲ್ಲಿರುವ ಸಂಭವವು ಇರುವದಿಲ್ಲ. ಆದ್ದರಿಂದ ಪುರಾಣಗಳು ಹೇಳುವಂತೆ ಚನ್ನ ಬಸವನು ಕಲ್ಯಾಣದಲ್ಲಿ ಜನಿಸಿರುವದಿಲ್ಲೆಂದು ನಾವು ಊಹಿಸುತ್ತೇವೆ.

ಕಕ್ಕಯ್ಯನು ಮಾಳವಾ ದೇಶದವನಾಗಿದ್ದು ಅವನು ಬಸವೇಶ್ವರನ ಖ್ಯಾತಿಯನ್ನು ಕೇಳಿ ಕಲ್ಯಾಣಕ್ಕೆ ಬರುವವನಾದನು. ಚನ್ನಬಸವೇಶ್ವರನು ಹುಟ್ಟಿದ ಕಾಲದಲ್ಲಿ ಬಸವೇಶ್ವರನು ಕಲ್ಯಾಣದಲ್ಲಿ ಮಂತ್ರಿಯಾಗಿಯೇ ಇದ್ದಿಲ್ಲ. ಆದ್ದರಿಂದ ಕಕ್ಕಯ್ಯನು ಈ ಕಾಲಕ್ಕೆ ಕಲ್ಯಾಣಕ್ಕೆ ಬರುವ ಸಂಭವವೇ ಇಲ್ಲ. ಆದ್ದರಿಂದ ಅವನ ಪ್ರಸಾದದಿಂದ ನಾಗಲಾಂಬಿಕೆಯು ಗರ್ಭಿಣಿಯಾದಳೆಂಬುದು ಕೇವಲ ಕಾಲ್ಪನಿಕ ಕಥೆ ಎಂದು ನಮಗೆ ತೋರುತ್ತದೆ. ಬಿಜ್ಜಳನು ಈ ಕಾಲದಲ್ಲಿ ಇದ್ದ ಸ್ಥಳ, ನಾಗಲಾಂಬಿಕೆಯ ವಯಸ್ಸು, ಮುಂತಾದವುಗಳನ್ನು ನಾವು ಲಕ್ಷಿಸಿದಲ್ಲಿ ಚನ್ನಬಸವನು ಈ ಕಾಲದಲ್ಲಿ ಕಲ್ಯಾಣದಲ್ಲಿ ಜನಿಸಿದನೆಂದು ಹೇಳುವದು ನಿಜವೆಂದು ತೋರುವದಿಲ್ಲ.

## ಶಿವಸ್ವಾಮಿಯ ಗ್ರಾಮ

ನಾಗಲಾಂಬಿಕೆಯು ಗಂಡನಾದ ಶಿವಸ್ವಾಮಿಯ ಗ್ರಾಮವು ಯಾವದು ಮತ್ತು ಅವನ ಪೂರ್ವ ವೃತ್ತಾಂತಗಳೇನು ಎಂಬುದು ನಮಗೆ ಗೊತ್ತಾಗಿರುವದಿಲ್ಲ. ಇವು ಯಾವ ವೀರಶೈವ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿಲ್ಲ.

ಹಾಗೆಯೇ ನಾಗಲಾಂಬಿಕೆಯು ತನ್ನ ಚಿಕ್ಕ ವಯಸ್ಸಿನಲ್ಲಿ ಹೇಗೆ ಕಾಲ ಕಳೆದಳೆಂಬುದೂ ನಮಗೆ ಗೊತ್ತಾಗುವದಿಲ್ಲ. ಆದರೂ ಅವಳ ವಿಷಯವಾಗಿ ಬಾಗೇವಾಡಿಯ ಸುತ್ತಲು ಕೆಲವು ಕುರುಹುಗಳು ಮತ್ತು ಸನ್ನಿವೇಶಗಳಿದ್ದು ಅವುಗಳಮೇಲಿಂದ ಈ ವಿಷಯವಾಗಿ ನಾವು ಕೆಲವು ಊಹೆಗಳನ್ನು ಮಾಡಲು ಆಸ್ಪದವಿರುತ್ತದೆ.

ಬಾಗೇವಾಡಿಯಿಂದ ೪-೫ ಮೈಲುಗಳ ಮೇಲೆ ಇಂಗುಳೇಶ್ವರವೆಂಬ ಗ್ರಾಮವಿದೆ. ಅಲ್ಲಿ ನಾಗಲಾಂಬಿಕೆಯ ಗುಹೆ ಇದ್ದು, ಅದರಲ್ಲಿ ಒಂದು ಹೆಣ್ಣು ಮೂರ್ತಿಯು ಇದೆ. ಅದು ನಾಗಲಾಂಬಿಕೆಯ ವಿಗ್ರಹವೆಂದು ಆ ಗ್ರಾಮದಲ್ಲಿ ಮತ್ತು ಸುತ್ತಲಿನ ಸ್ಥಳಗಳಲ್ಲಿ ನಂಬುಗೆ ಇವೆ. ಈ ಗುಹೆಯ ಸಮೀಪದಲ್ಲಿ ರೇವಣ ಸಿದ್ಧೇಶ್ವರನ ಗುಹೆ ಎಂಬ ಹೆಸರಿನ ಗುಹೆಯೂ ಉಂಟು. ಅದರಲ್ಲಿ ಒಂದು ಲಿಂಗಧಾರಣವಿದ್ದ ವಿಗ್ರಹವಿದ್ದು ಇದು ರೇವಣಸಿದ್ಧನದೆಂದು ಈ ಭಾಗದ ಜನರು ಹೇಳುತ್ತಾರೆ.

ಸಾಮಾನ್ಯವಾಗಿ ಬಹುಜನ ಸಮಾಜವು ಪುರಾತನಪ್ರಸಿದ್ಧ ಧಾರ್ಮಿಕ ವ್ಯಕ್ತಿಗಳಿದ್ದ ಸ್ಥಾನಗಳನ್ನು ಮರೆಯುವದಿಲ್ಲ. ಈ ಸ್ಥಳಗಳು ಮರೆತು ಹೋಗಬಾರದೆಂದು ಜನರು ಅಲ್ಲಿ ದೇವಾಲಯ ಮೊದಲಾದ ಕಟ್ಟಡಗಳನ್ನು ಕಟ್ಟಿಸುವದುಂಟು. ಆದ್ದರಿಂದ ಮೇಲೆ ಹೇಳಿದ ಗುಹೆಗಳಲ್ಲಿ ನಾಗಲಾಂಬಿಕೆ ಮತ್ತು ರೇವಣಸಿದ್ಧೇಶ್ವರನ ಮೂರ್ತಿಗಳಿರುವದರಿಂದ ಇವರು ಅಲ್ಲಿ ತಪಸ್ಸನ್ನಾಚರಿಸಿದರೆಂಬ ಅನುಮಾನವು ಉಂಟಾಗುತ್ತದೆ. ಇದು ಈ ಕಾಲದಲ್ಲಿ ಅಸಂಭಾವ್ಯವಲ್ಲ.

ಮೇಲಿನ ಸಂಗತಿಗಳಿಂದ ಶಿವಸ್ವಾಮಿಯ ಗ್ರಾಮವು ಇಂಗುಳೇಶ್ವರವಿದ್ದು ನಾಗಲಾಂಬಿಕೆಯ ಲಗ್ನವು ಅವನೊಡನೆ ಆಗಿ ಅವಳು ಅಲ್ಲಿ ವಾಸ ಮಾಡುತ್ತಿರಬಹುದು. ಅಲ್ಲಿಯೇ ಅವಳು ಗರ್ಭಿಣಿಯಾಗಿ ಚನ್ನಬಸವನನ್ನು ಹಡೆದಿರಬೇಕು. ಇಲ್ಲವೆ ಅವನನ್ನು ತನ್ನ ತವರೂರಾದ ಬಾಗೇವಾಡಿಯಲ್ಲಿ ಹಡೆದಿರಬೇಕು. ಹೀಗೆ ಶಿವಸ್ವಾಮಿಯು ಇಂಗುಳೇಶ್ವರದವನೆಂದು ನಾವು ಊಹಿಸುತ್ತೇವೆ. ಈ ಗ್ರಾಮದಲ್ಲಿಯೇ ನಾಗಲಾಂಬಿಕೆಯು ರೇವಣಸಿದ್ಧೇಶ್ವರನನ್ನು ಕಂಡಿರಬೇಕು. ಹಾಗೂ ಬಸವೇಶ್ವರನೂ ಕೂಡ ಅಲ್ಲಿಯೇ ಅವನ ಕೂಡ ಸಂಪರ್ಕ ಬೆಳಸಿಕೊಂಡಿರಬೇಕು.

R. N. B. 2554

# BOOK-POST.

ಶ್ರೀ. ರಾ॥ ರಾ॥

ಚನಮಲ್ಲಪ್ಪ ಶಿದ್ದಪ್ಪ ಬಡೇವಿ
ಪೋ ಬನಹಟ್ಟಿ
ವ್ಹಾಯಾ ಕುಡಚಿ ಸ್ಟೇಶನ್

From,
Shivanubhava
Office
Bijapur




ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ... ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



# ಶಿವಾನುಭವ

| ವರ್ಷ ೨೬ | ನವ್ಹಂಬರ ೧೯೫೩ | ಸಂಚಿಕೆ ೧೧ |
| --- | --- | --- |

## ಪ್ರಭುದೇವರ ಪುರಾಣ

( ಸಂಸ್ಕೃತ )

(ಲೇಖಕಃ-ಶ್ರೀ ಬಸಪ್ಪಾ ಚನ್ನಪ್ಪಾ ಪಟ್ಟೆದ. ವಂಟಮುರಿ)

ಶಿವನು ಸ್ವಲೀಲೆಯ ಮೂಲಕ, ತನ್ನ ಸುಜ್ಞಾನ ಕಳೆಯನ್ನು, ಭೂಲೋಕದೊಳಗೆ ಬಳ್ಳಿಗಾವಿಯ ಒಂದು ಸಚ್ಛೀಲ ಶಿವಭಕ್ತರ ಕುಟುಂಬದಲ್ಲಿ ಅವತಾರಗೊಳ್ಳುವಂತೆ ಮಾಡಿದನು. ಹಾಗೆ ಅದು ಜನ್ಮಿಸಲು ಆ ಕೂಸಿಗೆ ಅಲ್ಲಮಪ್ರಭುವೆಂಬ ನಾಮಕರಣವಾಯಿತು. ಅಲ್ಲಮನು ದಿನ ದಿನಕ್ಕೆ ಬೆಳೆದು ದೊಡ್ಡವನಾಗಿ ಶಿವಭಕ್ತಿ-ಸದಾಚಾರಗಳಲ್ಲಿ ಬಲು ಅಪ್ರತಿಮನೆಂದು ಹೆಸರಾದನು. ಇತ್ತ ಒಂದುದಿನ ಕೈಲಾಸದಲ್ಲಿ ಶಿವ-ಪಾರ್ವತಿಯರು ವಿನೋದ-ಗೋಷ್ಠಿಯಲ್ಲಿರುವಾಗ ಶಿವನು ಸಹಜವಾಗಿ "ನನ್ನ ಸದ್ಭಕ್ತ ಅಲ್ಲಮನು ಭೂಲೋಕದಲ್ಲಿ ವೈರಾಗ್ಯಶಾಲಿಯಾಗಿ ಮೆರೆಯುತ್ತಿರುವನು" ಎಂದು ನುಡಿದನು. ಆಗ ಪಾರ್ವತಿದೇವಿಯು "ಹೀಗಿರುವನೇ! ಹಾಗಾದರೆ ನಾನು ಅವನನ್ನು ಸೋಲಿಸುವೆನು ನೋಡಿರಿ!" ಎಂದಳು. ಶಿವನು "ಹಾಗೆಂದೂ ಆಗದು. ನೀನು ಸುಮ್ಮನೇ ಶ್ರಮವನ್ನು ತಾಳಬೇಡ." ಎಂದನು. ದೇವಿಯು, "ಒಂದು ಕ್ಷಣದಲ್ಲಿಯೇ ಅವನ ವೈರಾಗ್ಯವು ಮಣ್ಣುಗೂಡೀತು. ನೀವೇ ಹಾಗೆ ಅವನನ್ನು ಏರಿಸಿ ಕುಳ್ಳಿರಿಸುವದು ಸರಿಯಲ್ಲ" ಎಂದರು. ಅದಕ್ಕೆ ಶಿವನು. "ಒಳ್ಳೆಯದು. ನಿನ್ನಿಚ್ಛೆಯಂತೆಯೇ ಮಾಡಿ ನೋಡು." ಎನಲು ಅಮ್ಮನವರು ಕೂಡಲೇ ತಮ್ಮ

ಮಾಯಾ ಕಳೆಯನ್ನು ಭೂಮಿಯಲ್ಲಿ ಅವತರಿಸುವಂತೆ ನಿಯಮಿಸಿದನು. ಅವಳು ಬನವಾಸಿಯ ರಾಜದಂಪತಿಗಳ ಉದರದಲ್ಲಿ ಮಾಯಾದೇವಿ ಎಂಬಹೆಸರಿನಿಂದ ಉದ್ಭವಿಸಿದಳು. ಬೆಳೆದು ದೊಡ್ಡವಳಾಗಿ ಪ್ರಾಯಕ್ಕೆ ಬಂದಳು.

ಬಳ್ಳಿಗಾವಿಯಲ್ಲಿ ಪ್ರಭುವಿಗೆ ಆತನ ತಾಯ್ತಂದೆಗಳು ಪದ್ಧತಿಯಂತೆ ಲಗ್ನ ಮಾಡಿದರು. ಮನದಲ್ಲಿಲ್ಲದಿದ್ದರೂ, ಹಿರಿಯರ ಆಜ್ಞೆಯನ್ನು ಶಿರಸಾ ವಹಿಸುವ ಪ್ರಸಂಗವೇ ಅಲ್ಲಮನಿಗೆ ಒದಗಿತು. ಅವನು ತುಸು ದಿವಸ, ಅವಳೊಡನೆ ಪ್ರಪಂಚ ಮಾಡಿದರೂ ಬೇಗನೆ ಎಚ್ಚತ್ತನು. ಅಷ್ಟರೊಳಗೆ ಅವನಿಗೆ ಪತ್ನಿಯ ವಿಯೋಗ ಸಂಭವಿಸಿರಬಹುದು. ಆತನು ಮೊದಲೇ ವೈರಾಗ್ಯ ಮೂರ್ತಿಯು. ಅದು ಅವನಿಗೆ ಪಥ್ಯಕರವೇ ಆಯಿತು. ಅವನು ಕೂಡಲೇ ಮನೆಮಾರು ತ್ಯಜಿಸಿ, ಪ್ರವಾಸ ಮಾಡುತ್ತ ಮಾಡುತ್ತ ಬನವಾಸಿಯ ಮಧುಕೇಶ್ವರ ದೇವಸ್ಥಾನಕ್ಕೆ ಬಂದನು. ಅಲ್ಲಮ ಪ್ರಭುವಿಗೆ ಪ್ರಭುಸ್ವಾಮಿಯೆಂತಲೂ ಮುಂದೆ ಹೆಸರಾಯಿತು. ಇವರು ಬಹು ಮಹತ್ವಿಕರು. ಲಿಂಗಾಯತ ಮತದಲ್ಲಿ ಅವರ ಸ್ಥಾನವು ಅತ್ಯಂತ ಮೇಲ್ತರಗತಿಯುದಾಗಿರುವದು. ಬಸವೇಶ್ವರ ಕಾಲದಲ್ಲಿ ಇವರು ಕಲ್ಯಾಣದೊಳಗಿನ ಶೂನ್ಯ ಸಿಂಹಾಸನವೇರಿ ಬಹು ಅಮೂಲ್ಯ ಕರ್ತವ್ಯವೆಸಗಿರುವರು. ಇದೂ ಅಲ್ಲದೆ ಅಲ್ಲಿ ಪ್ರಮಥರಿಂದ (ಮುಖ್ಯವಾಗಿ ಬಸವನಿಂದ) ಸ್ಥಾಪಿತವಾದ ಕಲ್ಯಾಣ ಮಂಟಪದ ಪ್ರಮುಖರಾಗಿ, ವೀರಶೈವ ಮತ ತತ್ವಗಳನ್ನು ನಿರ್ಧರಿಸುವದರಲ್ಲಿ ಮನಃಪೂರ್ವಕಶ್ರಮ ವಹಿಸಿರುವರು. ಆದುದರಿಂದ ಅವರು ಪುರಾಣ ಪ್ರಸಿದ್ಧರಾಗಿರುವರು. ಅವರ ಹೆಸರಿನಿಂದ ಒಂದು ಪುರಾಣವು ಬರೆಯಲ್ಪಟ್ಟಿದೆ. ಅದರೊಳಗಿನ ಮುಖ್ಯಾಂಶಗಳ ವಿಷಯವಾಗಿಯೇ ಈ ಲೇಖವಿರುತ್ತದೆ. ಅವು ಇಂತಿವೆ—

(೧) ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ಪೂಜೆಯ ಕಾಲದೊಳು ಮೃದಂಗ ವಾದನ— ನಿತ್ಯದಲ್ಲಿ ಆ ದೇವರ ಅರ್ಚನೆ ನಡೆದಾಗ ಪ್ರಭುವು ಸ್ವೇಚ್ಛೆಯಿಂದಲೇ ಮದ್ದಳೆಯನ್ನು ಬಾರಿಸುತ್ತಿದ್ದನು. ಆ ಕಲೆಯಲ್ಲಿ ಆತನ ಜಾಣ್ಮೆಯು ಪ್ರಶಂಸನೀಯವಾಗಿದ್ದಿತು.

(೨) ಮುಂದೆ ಸಂಚರಿಸುತ್ತ ಹೋಗುವಾಗ ಮೊದಲು ಗೋಗಯ್ಯನೆಂಬ ಒಕ್ಕಲಿಗನನ್ನು ಕಂಡನು. ಅವನಿಗೆ ಅವನ ಒಲವಿಗನುಸರಿಸಿಯೇ ಲಿಂಗತತ್ವವನ್ನು ಬೋಧಿಸಿ ಮತ್ತೆ ಪ್ರಯಾಣ ಬೆಳೆಸಿದನು.

(೩) ಆಗ ಆತನಿಗೆ ಮುಕ್ತಾಯಕ್ಕನು ಭೆಟ್ಟಿಯಾದಳು. ಆಕೆ ತನ್ನ ಬಂಧು ಅಜಗಣ್ಣನು ದೇಹಬಿಟ್ಟುದಕ್ಕೆ ಪ್ರಲಾಪಿಸುತ್ತಿದ್ದಳು. ಆಕೆಗೆ ಸಂಭಾಷಣ ರೂಪದಿಂದ ಸಮಾಧಾನ ಹೇಳಿ ಮುನ್ನಡೆದನು.

(೪) ಮುಂದೆ ಸೊನ್ನಲಾಪುರಕ್ಕೆ ಹೋಗಿ ಸಿದ್ಧರಾಮೇಶ್ವರನನ್ನು ಕಂಡು ಅವನನ್ನೊಡಗೊಂಡು ಕಲ್ಯಾಣ ಪಟ್ಟಣಕ್ಕೆ ತೆರಳಿದನು. ಅಲ್ಲಿ ಚನ್ನಬಸವ ದೇವರಿಂದ ಸಿದ್ಧರಾಮನಿಗೆ ಲಿಂಗದೀಕ್ಷೆ ಮಾಡಿಸಿದನು.

(೫) ತರುವಾಯ ಅಲ್ಲಿ ಕೆಲದಿನಗಳಿದ್ದು, ಪ್ರಭುದೇವನು ಮತ್ತೆ ಪ್ರವಾಸಕ್ಕೆ ಹೋದನು. ಹೋದ ಹೋದಲ್ಲೆಲ್ಲ ವೀರಶೈವ ಮತದ ಉಪದೇಶ ಮಾಡುವದೊಂದೇ ಆತನ ಕಾರ್ಯವು. ಹೀಗೆ ಅನೇಕ ದಿನಗಳನ್ನು ಕಳೆದು, ಬಸಯ್ಯನ ಶಿವಭಕ್ತಿಯ ನಿಜತ್ವವನ್ನು ನಿರೀಕ್ಷಿಸಬೇಕೆಂದು ಪುನಃ ಕಲ್ಯಾಣಕ್ಕೆ ಹಿಂತಿರುಗಿದನು. ಇದಕ್ಕೆ "ಬಸವನು ಶಿವ ನಿರೀಕ್ಷಣೆಯ ಚರಿತ" ಎನ್ನೋಣ.

(೬) ಈ ಸಾರೆ ಪ್ರಭುವು ಕಲ್ಯಾಣದಲ್ಲಿ ಹೆಚ್ಚು ಕಾಲ ನಿಂತು ಬಳಿಕ ಶ್ರೀಶೈಲಕ್ಕೆ ತೆರಳಿದನು. ಅಲ್ಲಿ ಗೋರಖನಾಥನ ಗಂಟು ಬಿತ್ತು. ಅವನು ವಜ್ರ ದೇಹಿಯಾಗಿದ್ದರೂ ಪ್ರಭುವಿನ ಅದೃಷ್ಟ ದೇಹವನ್ನು ( ಸುಜ್ಞಾನಮಯ ತನುವನ್ನು) ಕಂಡು ಬೆರಗಾಗಿ, ತಾನೂ ಹಾಗಾಗಬೇಕೆಂದು ಬಯಸಿ ಆತನಿಂದ ಉಪದೇಶ ಪಡೆದನು.

(೭) ಗೋರಖನನ್ನು ಉದ್ಧರಿಸಿ ಪ್ರಭುದೇವನು ಮತ್ತೆ ಶ್ರೀಗಿರಿಯಲ್ಲಿ ಬೇರೆ ಬೇರೆ ಕಡೆ ತಪಸ್ಸು ಮಾಡುತ್ತಿರುವ ಅನೇಕ ತಾಪಸರನ್ನೂ ಯೋಗಿಗಳನ್ನೂ ಸಂದರ್ಶಿಸಿ ಅವರಿಗೂ ಸರಿಯಾದ ಸತ್ಯಮಾರ್ಗ (ಲಿಂಗಾರ್ಚನೆಯ ಮಾರ್ಗ) ವನ್ನು ತೋರಿಸಿ, ಅಲ್ಲಿಯೇ ಅವತಾರ ಸಮಾಪ್ತಿಯನ್ನು ಮಾಡಿದನು.

ಇವೆಲ್ಲ ಸಂಗತಿಗಳನ್ನು ಕುರಿತು ಕೆಳಗೆ ಕ್ರಮವಾಗಿ ಆಲೋಚಿಸುವ.

—: (೧) ಬನವಾಸಿಯ ವಿಷಯವಾಗಿ :—

ಬನ ಶಬ್ದವು ವನ ವೆಂಬುದರ ಅಪಭ್ರಂಶ. ಆದುದರಿಂದ ಬನವೆಂದರೆ ವನ ಇಲ್ಲವೆ ಕಾಡು. ಅಲ್ಲಿಯ ಜನರೆಲ್ಲರೂ ಕೋದೃಷ್ಟಿಯವರು ಭೂಲೋಕದ ವಿಷಯಗಳಿಗೆ ಮನ ಸೋತವರು. ಆದುದರಿಂದ ಅದನ್ನು "ನರವಿಂಧ್ಯ" (ಮರುಳರ ಅರಣ್ಯ) ಎಂದು ಕರೆಯುವದು ಒಳ್ಳಿತು.

ಮಧುಕೇಶ್ವರನು ಅಲ್ಲಿಯ ಮುಖ್ಯದೈವತ. ಮಹಾ ದೇವರ ಲಿಂಗ ಭಕ್ತರಿಗೆ ಅವರವರ ಇಚ್ಛೆಯಂತೆ ಮಧುವನ್ನು (ಸವಿ ಸವಿ ಲೌಕಿಕ ಇಷ್ಟಗಳನ್ನು) ಪೂರೈಸುವವನಾದುದರಿಂದ ಅವನನ್ನು ಮಧುಕೇಶ್ವರನೆಂದು ಕರೆಯುವರು.

ಮೃದಂಗ ವಾದನ:— ಹಿಂದೆ ಹೇಳಿದಂತೆ ಪ್ರಭುವು ಮಧುಕೇಶ್ವರನ ಪೂಜೆಯ ಕಾಲದಲ್ಲಿ ಮದ್ದಳೆಯನ್ನು ಬಾರಿಸುತ್ತಿದ್ದನು. ಅಲ್ಲಿ ರಾಜಪುತ್ರಿ ಯಾದ ಯುವತಿ ಮಾಯಾದೇವಿಯು ಸಹ ದೇವರ ದರ್ಶನಕ್ಕೆಂದು ದಿನಾಲು ಪೂಜೆಯ ಕಾಲಕ್ಕೇನೇ ಅಲ್ಲಿಗೆ ಬರುತ್ತಿದ್ದಳು. ಆಕೆ ಅಲ್ಲಮನ ವಾದನ ಕಲೆಗೂ ರೂಪಲಾವಣ್ಯಕ್ಕೂ ಮೋಹಿತಳಾಗಿ ಆ ತಾಳಕ್ಕನುಸರಿಸಿ ತಾನೂ ಸ್ವೇಚ್ಛೆಯಿಂದ ನರ್ತನೆ ಮಾಡಹತ್ತಿದಳು. ಬಗೆ ಬಗೆಯ ಹಾವ ಭಾವಗಳನ್ನು ಬೀರುತ್ತಿದ್ದಳು ನಡುನಡುವೆ ಎಚ್ಚರದಪ್ಪಿ ಬೀಳುತ್ತಿದ್ದಳು. ಇದೆಲ್ಲ ವಿಶ್ವ ಪ್ರಯತ್ನವು ಆ ಪ್ರಭುವನ್ನು ವಶಮಾಡಿಕೊಳ್ಳುವ ಉದ್ದೇಶದಿಂದಲೇ ಸಾಗುತ್ತಿತ್ತು. ಆದರೆ ಆಕೆಯ ಇಷ್ಟವೇನೂ ಕೈಗೂಡಲಿಲ್ಲ. ಪ್ರಭುವು ಅಲ್ಲಿಂದ ಹೊರಟು ಬೇರೆ ಕಡೆಗೆ ಹೋಗಿಬಿಟ್ಟನು. ಮಾಯಾದೇವಿಯು ಹತಾಶಳಾದಳು. ಪಾರ್ವತಿ ದೇವಿಯಂತೂ ನಾಚಿಕೆಯಿಂದ ನೆಲಕ್ಕಿಳಿದರು. ಮುಂದೆ ಮಹಾದೇವನ ಸಲಹೆಯಂತೆ ಪಾರ್ವತಿಯಮ್ಮನವರು, ತಮ್ಮ ಸಾತ್ವಿಕ ಕಳೆಯನ್ನು ಈ ಕೆಲಸಕ್ಕೆ ನಿಯಮಿಸಲು, ಅಕ್ಕಮಹಾದೇವಿ ಎಂಬ ಆಕೆ ಉಡುತಡಿಯಲ್ಲಿ ಜನ್ಮಿಸಿ, ತನ್ನ ಸುಜ್ಞಾನ ಸದ್ಭಕ್ತಿ ವೈರಾಗ್ಯಶೀಲತೆಯಿಂದ, ಪ್ರಭುವಿನ ಶಿಷ್ಯೋತ್ತಮಳಾಗಿ ಅವನ ಅನುಗ್ರಹಕ್ಕೆ ಪಾತ್ರಳಾದಳು. ಆಗ ದೇವಿಯರಿಗೆ ಪ್ರಭುವಿನ ವೈರಾಗ್ಯದ ಬಗೆಗೆ ಪೂರ್ಣಶ್ರೆ ಮನವರಿಕೆಯಾಯಿತು.

ಇಲ್ಲಿ ಮದ್ದಳೆ ಬಾರಿಸುವದೆಂದರೇನೆಂಬುದನ್ನು ಮಾತ್ರ ಸೂಕ್ಷ್ಮರೀತಿಯಿಂದ ತಿಳಿದುಕೊಳ್ಳ[ಬೇಕಾಗಿದೆ. ಮದ್ದಳೆಯು ಬಾರಿಸುವ ವಾದ್ಯ. ಅದನ್ನು ಎರಡೂ ಮಗ್ಗಲು ಬಾರಿಸುವರಷ್ಟೇ.? ಈ ಸ್ಥಳದಲ್ಲಿ ಮದ್ದಳೆಯೆಂದರೆ ಸಂಸಾರ (ಜೀವನ ಕ್ರಮ). ಜೀವನು ಐಹಿಕ ಯಾತ್ರೆಯಲ್ಲಿ ಅವನು ಪ್ರಪಂಚ ಪಾರಮಾರ್ಥಗಳೆರಡನ್ನೂ ಸರಿಯಾಗಿ ಬೆರಿಸಿಕೊಂಡು ನಡೆದರೆ, ಅವನು ದೇವರ ದೇವನೆನ್ನಿಸುವನೆಂದು ನಿಜಗುಣ ಶಿವಯೋಗಿಗಳು ಹೇಳಿರುವರು. ಪ್ರಭುವು ಆರಂಭದಲ್ಲಿ ಇದೇ ಮಾರ್ಗವನ್ನು ಅನುಸರಿಸಿ ನಡೆಯಹತ್ತಿದನೆಂಬುದು ಮೇಲೆ ಬಂದಿದೆ. ಅದನ್ನು ಬಿಸುಡಿ ಬನವಾಸಿಗೆ

ಬಂದರೆ, ಇಲ್ಲಿಯೂ ಮತ್ತೆ ಅದೇ ಬಂದುದನ್ನು ನೋಡಿ, ಪ್ರಭುವು ಆ ಸ್ಥಾನವನ್ನೇ ಧಿಕ್ಕರಿಸಿ, ಅನ್ಯತ್ರ ಪ್ರಯಾಣ ಬೆಳಿಸಿದನು. ಸುಂದರಿಯೂ ಯುವತಿಯೂ ಆದ ರಾಜಕುಮಾರಿಯು ಯೌವನಾವಸ್ಥೆಯುಕ್ತಳಿದ್ದ ಪ್ರಭುವಿನಿಂದ ತಿರಸ್ಕೃತಳಾದುದನ್ನು ನೋಡಿದರೆ ಆತನ ವೈರಾಗ್ಯವು ಅದೆಷ್ಟು ಮಹತ್ತರವಾದುದಿತ್ತೆಂಬುದರ ಕಲ್ಪನೆಯು ತಾನೇ ಹೊಳೆಯುವದು. ಇರಲಿ.

## (೨) ಗೋಗಾರ್ಯ

ಗೋ-ಗ-ಆರ್ಯ=ಗೋಗಾರ್ಯ. ಗೋ=ಎತ್ತು, ದನಗಕರುಗಳು. ಗ=(ಅವುಗಳತ್ತ) ಗಮನಿಸುವವ. ಗೋಗಾರ್ಯ=ಎತ್ತು ಮೊದಲಾದವನ್ನು ಸಂರಕ್ಷಿಸಿಕೊಂಡು; ಇರುತ್ತಿರುವ ಸಾದಾ ಮನುಷ್ಯನು. ಅವನನ್ನು ಗೋಗಯ್ಯ (ಗೊಗ್ಗಯ್ಯ) ಎಂದೂ ಕರೆಯುತ್ತಿದ್ದರು. ಅರ್ಥಾತ್-- ಗೋಗಯ್ಯನು ಕೃಷಿ ಕರ್ಮವನ್ನು ಮಾಡಹತ್ತಿರುವ ಒಕ್ಕಲಿಗನು. ಅವನನ್ನು ಕಂಡು:—

ಪ್ರಭುವು:— ಅಪ್ಪಾ ! ನೀನೇನನ್ನು ಮಾಡುತ್ತಿರುವೆ ?

ಗೋಗಯ್ಯ:— ನಾನು ಈ ಭೂಮಿಯನ್ನು ಚನ್ನಾಗಿ ಉತ್ತುಗೊಬ್ಬರ ಹಾಕುವೆನು. ಮಳೆಯಾದಾಗ ಹಸಿಯಾದುದನ್ನು ನೋಡಿ, ಬೀಜಗಳನ್ನು ಬಿತ್ತುವೆನು. ಸಾಟಿಕೆಗಳು ಕುಸು ದೊಡ್ಡವಾಗಿ, ಹುಲ್ಲು-ಕಸ-ಕಡ್ಡಿಗಳು ಬೆಳೆದು, ಭೂಮಿಯು ಕಸುವು ಕಡಿಮೆಯಾಗಹತ್ತಿದರೆ, ಎಡೆಗುಂಟೆಯಿಂದ ಅವನ್ನೆಲ್ಲ ತೆಗೆದುಹಾಕಿ, ಬೆಳೆಗೆ ಚೈತನ್ಯ ಉಂಟಾಗುವಂತೆ ಮಾಡುವೆನು. ಪೈರು ದೊಡ್ಡದಾಗಿ ಹೊಡೆ ಹಾಕಿದಾಗ, ಅವನ್ನು ಒಳಿತಾಗಿ ಕಾಪಾಡಿ, ಫಲವು ಕೈ ಸೇರುವಂತೆ ಮಾಡುವೆನು. ಆ ಬೆಳೆದ ಕಾಳು ಕಡಿಗಳನ್ನೇ ಉಂಡುತಿಂದು ಸುಖದಿಂದ ಕಾಲಹರಣ ಮಾಡುತ್ತಿರುವೆನು.

ಪ್ರಭು:— ಅಯ್ಯಾ! ನೀನು ಮಾಡುತ್ತಿರುವದು ಬಲು ಮೇಲಾದ ಕಾಯಕವು. ಅದರಂತೆಯೇ ಎಲ್ಲರೂ ಮಾಡುವದು ವಿಹಿತವು. ನಾನಾದರೂ ನಿನ್ನಂತೆಯೇ ಮಾಡುತ್ತಿರುವೆನು. ಆದರೆ ನನ್ನ ಭೂಮಿಯು ನಿನ್ನದರಂತೆ, ಹೊರಗಿನದಲ್ಲ. ಅದು ಒಳಗೆ ಇರುವದು. ಅದಕ್ಕೆ ಮನೋಭೂಮಿ ಎನ್ನುವರು. ಅದನ್ನು ನಾನು ಸಜ್ಜನ ಸಮಾಗಮವೆಂಬ ರೆಂಟೆಯಿಂದ ಉತ್ತುವೆನು. ದುರ್ಜನ ಪರಿತ್ಯಾಗವೆಂಬ ಕುಂಟೆಯಿಂದ, ಸಮ ಮಾಡುವೆನು. ಪ್ರಮಥ ವಚನಾವಲಂಬನವೆಂಬ ಗೊಬ್ಬರವನ್ನು ಹಾಕಿ,

ಭೂಮಿಯ ಕಸುವು ಹೆಚ್ಚಿಸುವೆನು. ಸದ್ಭಕ್ತಿಯ ಜಲದಿಂದ ಪೂರ್ಣ ತೊಯ್ದು ಹಸಿಯಾಗಿ ಹದಕ್ಕೆ ಬಂದುದನ್ನು ನೋಡಿ, ಶಿವಮಂತ್ರವೆಂಬ ಬೀಜ ಬಿತ್ತುವೆನು. ಸತ್‌ಕ್ರಿಯ ಸದಾಚಾರವೆಂಬ ಎಡೆಕುಂಟೆಯಿಂದ, ಹುಲ್ಲು ಕಸಕಡ್ಡಿ (ದುಶ್ಚಟ ದುರ್ನಡತೆ) ಗಳನ್ನೆಲ್ಲ ನಿವಾರಿಸುವೆನು. ಈ ಬಗೆಯಾಗಿ ಶಾಂತಿ ಸಮಾಧಾನದ ನಿಲುವನ್ನು ನಿಲ್ಲಿಸಿ, ಮಹಾ ಪ್ರಸಾದದ ಬೆಳೆಯನ್ನು ಬೆಳೆದು, ತದನುಭವಾಮೃತ ಪಾಕವನುಂಡು, ಸದಾಲಿಂಗಾನಂದ ಸುಖದೊಳಿರುತಿರುವೆನು.

ಗೋಗಯ್ಯ :—ನನ್ನ ಒಕ್ಕಲತನಕ್ಕಿಂತಲೂ, ನಿಮ್ಮ ಒಕ್ಕಲತನವು ಮಿಗಿಲಾದುದೆಂದು ತೋರುತ್ತದೆ. ಯಾಕೆಂದರೆ ಅದರಿಂದ ಸ್ಥಿರವಾದ ಶಾಂತಿ ಸಮಾಧಾನಗಳು ಹುಟ್ಟುತ್ತವೆ.

ಪ್ರಭುವು:— ಅಹುದು. ನೀನಾದರೂ ಈ ಹೊರಗಿನ ಒಕ್ಕಲುತನದೊಡನೆಯೇ ಒಳಗಿನ ಮನವೆಂಬ ಭೂಮಿಯ ಸಾಗುವಳಿಯನ್ನಾದರೂ, ಮಾಡುತ್ತಹೋಗು. ಆದರಿಂದ ಎರಡೂ ವಿಧದ ಫಲಗಳನ್ನುಂಡು ಶಾಶ್ವತ ಸುಖಿಯಾಗಿರುವೆ.

ಗೋಗಯ್ಯ:— ಅದರ ಸುಲಭ ಮಾರ್ಗವನ್ನು ನೀವು ತೋರಿಸಿದರೆ ಆದಷ್ಟು ಪ್ರಯತ್ನಮಾಡಿ ನಾನೂ ನೋಡುವೆನು.

ಪ್ರಭುವು:— ( ಗೋಗಯ್ಯನ ಲಕ್ಷವು ಆತ್ಮೋದ್ಧಾರದ ಕಡೆಗೂ ಹರಿಯುವದನ್ನು ಕಂಡು ಸಂತೋಷಿಸಿ ) ಹಾಗಾದರೆ, "ಈ ರೀತಿಮಾಡುತ್ತ ಹೋಗು " ಎಂದು ಆತನಿಗೆ ದೀಕ್ಷಾತ್ರಯ ಲಿಂಗಮಾರ್ಗವನ್ನು ಹೇಳಿಕೊಟ್ಟು ಮುಂದಕ್ಕೆ ತೆರಳಿದನು.

## ( ) ಅಜಗಣ್ಣನ ಮುಕ್ತಾಯಕ್ಕಂದಿರು

ಇವರಿಬ್ಬರೂ ಒಡಹುಟ್ಟಿದವರು. ತಮ್ಮನಾದ ಅಜಗಣ್ಣನಲ್ಲಿ ಮುಕ್ತಾಯಕ್ಕನ ಪ್ರೀತಿಯು ಹೆಚ್ಚಾಗಿದ್ದಿತು. ಈಗ ಇವರಿಬ್ಬರ ಹೆಸರುಗಳನ್ನಾದರೂ ಒಳಹೊಕ್ಕು ಪರೀಕ್ಷಿಸುವಾ ಬನ್ನಿರಿ- ಅಜಗಣ್ಣ (ಅಜ+ಕಣ್ಣು+ಅ) ನು=ಹುಟ್ಟದಿರುವ ಇಲ್ಲವೆ ಹೊರಗೆ ತೋರದಿರುವ ಕಣ್ಣುಳ್ಳವನು. ಆದುದರಿಂದ ಅವನನ್ನು ವಿರೂಪಾಕ್ಷನೆಂದೇ ಭಾವಿಸುವದು ಉಚಿತ.

ಮುಕ್ತಾಯಕ್ಕ. (ಮುಕ್ತಾಯಿ+ಅಕ್ಕ)=ಮೋಕ್ಷಾಂಗನೆಯ ಸ್ವರೂಪದ ಅಕ್ಕ. ಈಕೆ ಅಕ್ಕಮಹಾದೇವಿಯ ಸ್ವರೂಪಳೇ ಆಗಿದ್ದಳು ಎನ್ನಬಹುದು.

ಅಜಗಣ್ಣನಂತೂ ಸಾಕ್ಷಾತ್ ವಿರೂಪಾಕ್ಷ. ಮುಕ್ತಾಯಕ್ಕನಂತೂ ಸಾಕ್ಷಾತ್ ಮಹಾದೇವಿ. ಅಂದಮೇಲೆ ಇವರು ಹೊರಗೆ ದೇಹದಿಂದ ಭಿನ್ನರಾಗಿ ತೋರುತ್ತಿದ್ದರೂ ಅಂತಃಕರಣದಲ್ಲಿ ಒಬ್ಬರೇ ಆಗಿದ್ದರು. ಒಳಗಿನ ಆತ್ಮ ಸ್ವರೂಪವು ಸ್ತ್ರೀ-ಪುರುಷರಲ್ಲೆಲ್ಲ ಒಂದೇ ಇರದು. ಆದುದರಿಂದ ಮುಕ್ತಾಯಕ್ಕನು ಲೌಕಿಕ ರೀತಿಯನ್ನು ಮುಂದಿಟ್ಟುಕೊಂಡು, ಔಪಚಾರಿಕವಾಗಿ ಶೋಕ ಮಾಡುತ್ತಿದ್ದಳು. ಆಕೆಯನ್ನು ಕಂಡು ಪ್ರಭುವಾದರೂ ಲೌಕಿಕಾನುಸಾರವಾಗಿಯೇ ಮಾತನಾಡಿದನು. ಅದು ಇಂತು:—

ಪ್ರಭು:— ಅದೇನು ಕಾರಣ ಇಷ್ಟೊಂದು ದುಃಖಾಕುಲೆಯಾಗಿರುವೆಯವ್ವಾ ?

ಮುಕ್ತಾಯಕ್ಕ:— ನನ್ನ ಒಡಹುಟ್ಟಿದ ಪರಮ ಪ್ರೀತಿಯ ಅಜಗಣ್ಣನು ಕಣ್ಮರೆಯಾದನು.

ಪ್ರಭು:— "ಯದ್ದೃಷ್ಟಂ ತನ್ನಷ್ಟಂ" ಆಗುವದು ಸ್ವಾಭಾವಿಕವು-ಅದಕ್ಕಳುವದು ವ್ಯರ್ಥವಾದುದು.

ಮುಕ್ತಾಯಕ್ಕ:— ನೀನೆಂಬುದು ಸರಿ! ಆದರೆ ಆತನಿಲ್ಲದುದರಿಂದ ಆ ಒದಗತಕ್ಕ ಜ್ಞಾನಾನಂದುಲ್ಲಾಸಗಳಿಗೆ ನಾನು ಎರವಾದೆನು. ಇನ್ನು ಎಂತು ಕಾಲವನ್ನು ನೂಕುವುದಯ್ಯಾ !

ಪ್ರಭು:— ಅಕ್ಕಾ ನೀನು ಮುಕ್ತಾಂಗನೆ. ಮಹಾಜ್ಞಾನ ಶಿರೋಮಣಿ. ಅಜಗಣ್ಣನ ಸ್ಥೂಲ ದೇಹವು ಮರೆಯಾಗಿದ್ದರೂ ಕಾರಣ ಶರೀರವು ಎಲ್ಲಿ ಹೋಗಿದೆ ? ಅದು ನಿನ್ನೊಳಗೆ ಏಕೀಕೃತವಾಗಿ, ವಾಸಿಸುತ್ತಿರುವದಲ್ಲ. ಅಕ್ಕಾ ಚಿತ್ತಯಿಸು ತಾಯೇ !

ಮುಕ್ತಾಯಕ್ಕ:— ಅಹುದಯ್ಯಾ! ತಾತ್ವಿಕತೆಯಿಂದ ನೀನೆಂಬುದು ನಿಜ. ಆದರೂ ಮಾಯೆಯು, ಒಮ್ಮೊಲೆ ಪ್ರಾಣಗಳಮೇಲೆ ತನ್ನ ಪ್ರಭಾವವನ್ನು ಕೆಡಹಿ ಗತಿಗೆಡಿಸುವದಲ್ಲ ಸ್ವಾಮಿ !

ಪ್ರಭು:— ಅಕ್ಕಾ ನೀನೇನೂ ಸಾಧಾರಣಳಲ್ಲ. ಮಹಾಜ್ಞಾನಪ್ರಕಾಶದಿಂದ ಬೆಳಗುವ ದೇವಿ. ಅಲ್ಲಿ ಕತ್ತಲೆಗೆ ಎಲ್ಲಿಯದು ಸ್ಥಾನ !

ಮುಕ್ತಾಯಕ್ಕ:— ಮರವೆಗಳೆದು ಅರಿವು ತಂದುಕೊಳ್ಳುಲಿಕ್ಕೆ ತಮ್ಮಂತಹರ ಮಹಾಪಾದವೇ ಕಾರಣ. ಮೇಘದಲ್ಲಿ ವಿದ್ಯುತ್ತಿದ್ದರೂ, ಅದನ್ನು ಜಾಗ್ರತಗೊಳಿಸಲಿಕ್ಕೆ ಜೇರೊಂದರ ಅಪೇಕ್ಷೆ ಇದ್ದೇ ಇರುವದು.

ಪ್ರಭು:— ಇನ್ನು ಈ ಲೌಕಿಕೋಪಚಾರವನ್ನೆಲ್ಲ ತೊಡೆದು ಹಾಕು. ಅಜಗಣ್ಣನೇನು ಸಾಮಾನ್ಯನಲ್ಲ. ಅವನು ಪರಶಿವನೊಳೈಕ್ಯವಡೆದು. ನಿಜಾನಂದದಲ್ಲಿರುವನು. ನೀನೂ ಜೀವನ್ಮುಕ್ತಳು. ಸ್ವಾತ್ಮಾನಂದ ವಿಲೋಲೆ. ಪ್ರಭುವಿನಿಂದ ಇದನ್ನರಿತ ಮುಕ್ತಾಯಕ್ಕನು, "ಎಲ್ಲವೂ ಮಹತ್ವಾದ ಲೀಲಾ ವಿಲಾಸವು" ಎಂದು ಉಸುರ್ಗರೆದು, ಎದ್ದು ವಂದಿಸುವಳ .

ತರುವಾಯ ಪ್ರಭುವು ಮುಂದೆಸಾಗಿ ಸೊನ್ನಲಾಪುರಕ್ಕೆ ತೆರಳಿದನು.

## —: (೪) ಸಿದ್ಧರಾಮೇಶ್ವರ :—

ಈತನು ಹಳೆಗಣ್ಣು ಪಡೆದವನು. ಬೇಕಾದಾಗ ಕೈಲಾಸಕ್ಕೆ ಹೋಗಿ ಶಿವದರ್ಶನ ಹೊಂದಿ, ಇಷ್ಟವಾದ ಮಾತುಕತೆಗಳನ್ನಾಡಿ, ಸ್ವಸ್ಥಳಕ್ಕೆ ಬರುತ್ತಿದ್ದವನು. ಪ್ರಭುವು ಸೊಲ್ಲಾಪುರದಲ್ಲಿ ಸಿದ್ಧರಾಮೇಶನು ಕೆರೆ ಕಟ್ಟಿಸುವಲ್ಲಿ ಹೋದಾಗ ಅಲ್ಲಿ ಅವನು ಇದ್ದಿಲ್ಲ. ಆಗ ಪ್ರಭುವು ( ಅಲ್ಲಿದ್ದ ಕೆಲಸಗಾರರಿಗೆ) ಎಲೈ ಒಡ್ಡರಿರಾ ! ನಿಮ್ಮ ಹಿರಿ ಒಡ್ಡನು ಎಲ್ಲಿದ್ದಾನೆ ?

ಕೆಲಸಗಾರರು:— (ಅವನನ್ನು ನೋಡಿ: ಇವನಾರಪ್ಪಾ! ನಮ್ಮದನಿಗೆ ಹಿರಿ ಒಡ್ಡನೆನ್ನುವವನು ಎಂದು ಮನದಲ್ಲಿ ಕೋಪಿಸಿಕೊಂಡು) ಅವರು ಮನೆಗೆ ಹೋಗಿದ್ದಾರೆ.

ಪ್ರಭು:— ಯಾವಾಗ ಇಲ್ಲಿ ಬರುವನವ ?

ಕೆಲಸಗಾರರು:— ಸಂಜೆಮಾಡಿ ಸಾವಕಾಶ ಬರುವರು.

ಪ್ರಭು:— ಹಾಗಾದರೆ ಯಾರಾದರೂ ಹೋಗಿ ಆತನನ್ನು ಈಗಲೇ ಕರೆದುಕೊಂಡು ಬನ್ನಿ.

ಕೆಲಸಗಾರರು:— (ಕೂಡಲೇ ಒಬ್ಬನು ಹೋಗಿ, ಸಿದ್ಧರಾಮೇಶನಿಗೆ) ಒಡೆಯರೇ ! ಯಾವನೋ ಒಬ್ಬ ಬೈರಾಗಿ ಬಂದಿದ್ದು, "ನಿಮ್ಮ ಹಿರಿಯ ಒಡ್ಡನು ಎಲ್ಲಿದ್ದಾನೆ? ಹೋಗಿ ಅವನನ್ನು ಕರೆದುಕೊಂಡು ಬನ್ನಿ" ಎಂದು ಹೇಳಿದ್ದುದರಿಂದ ನಾನು ಈಗ ಬಂದಿರುವೆನು.

ಸಿದ್ಧರಾಮ:— (ಅತ್ಯಂತ ರೊಚ್ಚಿಗೆದ್ದು) ಅಂತಹ ಮರುಳನಾವನು? ಅವನನ್ನು ಕಂಡು ಈಗಲೇ ಆತನ ಬಿಂಕವನ್ನು ಬಿಡಿಸುವೆನು. ಉರಿಗಣ್ಣಿನಿಂದ ದಹಿಸಿ ಹಾಕುವೆನು. (ಎಂದು ಒತ್ತರದಿಂದ ಬಂದನು) ಹಾಗೂ ಒಮ್ಮೆಲೇ ಆತನಮೇಲೆ ತನ್ನ ಉರಿಗಣ್ಣನ್ನು ತೆರೆದನು. ಆದರೂ ಅದು ಬೈರಾಗಿಗೇನು ಮಾಡಲಿಲ್ಲ. ಅವನು ಇದ್ದಂತೆಯೇ ಉಳಿದುಬಿಟ್ಟನು.

ಅದನ್ನು ಕಂಡು ಸಿದ್ಧರಾಮನು ಚಕಿತನಾದನು " ಇವನಾರೋ? ನನ್ನನ್ನು ಮೀರಿದ ಮಹಾ ಮಹಿಮನಿರಬೇಕು " ಎಂದು ಭಾವಿಸಿ, " ನೀನಾರು ? " ಎಂದು ಪ್ರಶ್ನಿಸಿದನು.

ಪ್ರಭುಃ— (ಶಾಂತ ಮನದಿಂದ ನಾನೊಬ್ಬ ಕ್ಷುದ್ರ ಬೈರಾಗಿ. ಅದು ತಿರಲಿಬಿಡು. ನೀನೇಕೆ ಈ ಉಪದ್ವ್ಯಾಪವನ್ನು ಆರಂಭಿಸಿರುವೆ ?

ಸಿದ್ಧರಾಮಃ—ಪರಹಿತ ಪರೋಪಕಾರದ ಕಾರ್ಯಗಳನ್ನು ಮಾಡ ದಿದ್ದಾಗ ಮತ್ತೇನು ?

ಪ್ರಭುಃ— ಇವು ಭವಿಜನರ ಉದ್ಯೋಗ ಈ ಸತ್ಕರ್ಮದಿಂದ ಪುಣ್ಯ ಬರುವದಾದರೂ, ಅದು ಪುನಃ ಜನ್ಮಕ್ಕೇ ಕರುವದು- ನೀನು-ಜ್ಞಾನಿ ಎಂದೆನಿಸುತ್ತಿದ್ದರೂ, ಈ ಕೆಲಸಕ್ಕೇಕೆ ಹೋಗುವೆ ? ತನ್ನ ತಾನರಿದು. ಆತ್ಮೋದ್ಧಾರ ಪಡೆದು ಪರಶಿವನಲ್ಲಿ ಏಕಮೇವಾದ್ವಿತೀಯತ್ವವನ್ನು ಹೊಂದಿ ಸತತ ಸ್ವಸ್ಥನಾಗಿರುವದು ಒಳಿತು, ಒಂದು ವೇಳೆ ಇವನ್ನು ಮಾಡಿ ದರೂ, ಅವುಗಳಲ್ಲಿ ತಾನು ಸಹಜಾ ಇರಕೂಡದು. ನಿನ್ನ ಮಾತಿನ ಮೇಲಿಂದ ನೋಡಿದರೆ, ಹಾಗೇನೂ ತೋರುವದಿಲ್ಲ. ಕೀರ್ತಿಯ ಆಕಾಂಕ್ಷೆ ಪರಿಪೂರ್ಣವಾಗಿದೆ.

ಸಿದ್ಧರಾಮಃ— ನಾನು ನಿತ್ಯವೂ ಶಿವದರ್ಶನವನ್ನು ಹೊಂದುತ್ತಿರು ವೆನು. ಅದಕ್ಕಿಂತ ಮಿಗಿಲಾದ ಬೇರೊಂದು ಸುಖವಾವದಿರುವದು.

ಪ್ರಭುಃ— ಅದು ನಿನ್ನಭ್ರಾಂತಿ. ನಿನ್ನಲ್ಲಿ ಅಭಿಮಾನ ಪುಣ್ಯಗಳಿಸುವ ಆಶೆಗಳೆಲ್ಲಿಯವರೆಗಿರುವವೋ ( ಲೌಕಿಕದ ಮಬ್ಬು ಎಲ್ಲಿಯವರೆಗೆ ಹರಿದಿ ಲ್ಲವೋ) ಅಲ್ಲಿಯವರೆಗೆ ನೀನು ಭವಿಯೇ ಸರಿ ! ನಿನಗೆ ಜನ್ಮ ಮರಣ ಗಳ ಸುತ್ತು ತೀರುಗುವಿಕೆ ನಿಲ್ಲಲಾರದು. ಕೈವಲ್ಯ ಮೋಕ್ಷದ-ವಿನಾ: ಉಳಿ ದುದೆಲ್ಲ ವ್ಯರ್ಥ !

ಸಿದ್ಧರಾಮ:— ( ಆಗ ಸಿದ್ಧರಾಮನ ಕಣ್ಣು ತೆರೆದವು ) ಅದಕ್ಕೆ ಉಪಾಯವೇನು ದೇವಾ ?

ಪ್ರಭುಃ— ಹಾಗಾದರೆ ನೀನು ನನ್ನೊಡನೆ ಬಾ. ಮುಂದಿನದೆಲ್ಲ ನಾನು ಸಾಧಿಸುವೆನು.

ಸಿದ್ಧರಾಮನುಃ— "ಒಳ್ಳೆಯದು" ಎಂದು ಆತನೊಡನೆ ನಡೆದನು. ಆಗ ಅವರು ಪಯಣದಮೇಲೆ ಪಯಣಮಾಡುತ್ತ ಆತ್ಮಸುಖ ಸಲ್ಲಾಪ ಗಳನ್ನಾಡುತ್ತ, ಬಸವೇಶನಿರುವ ಕಲ್ಯಾಣಕ್ಕೆಬಂದರು. ಆಗ ಅಲ್ಲಿಂಗಿ

ಯನ್ನು ಒಳಗೆ ಬಿಡುವದಿಲ್ಲೆಂದು. ಸಿದ್ಧರಾಮನನ್ನು ತಡೆದರು. ಅದರಿಂದ ಮಹಾ ಅಭಿಮಾನಿಯಾದ ಸಿದ್ಧರಾಮನಿಗೆ ಅವಮಾನವೆನಿಸಿ, ಆತನು ನೆಲಕ್ಕೆ ಇಳಿದನು. ಆಗ ಪ್ರಭು-ದೇವನು, ಕೂಡಲೇ ಅಲ್ಲಿಯೇ ಹೊರ ಸೋಪೆಯಲ್ಲಿ ಕುಳಿತುಕೊಂಡು, ಚೆನ್ನಬಸವೇಶನಿಂದ, ಸಿದ್ಧರಾಮನಿಗೆ, ಆತನ ಎಲ್ಲ ವಿಧದ ಪ್ರಗತಿಗೆ ಅನುಕೂಲವಾಗುವಂತೆ, ಲಿಂಗಧಾರಣೆ ಮಾಡಿಸಿದನು. ಮುಂದೆ ಕ್ರಮವಾಗಿ ಚೆನ್ನಬಸವೇಶನು, ಆತನಿಗೆ ಷಟ್‌ಸ್ಥಲ ಮಾರ್ಗವನ್ನು ಸಕೀಲದೊಡನೆ ಬಿತ್ತರಿಸಿದನು.

ದೇಹದಮೇಲೆ ಲಿಂಗವಿರದಿದ್ದರೆ, ತಾನು ಲಿಂಗಧಾರಿ (ಸುಜ್ಞಾನವಿಡಿದವನು) ಎಂಬ ಎಚ್ಚರವೇ ಮನುಷ್ಯನಿಗೆ ಉಳಿಯುವದಿಲ್ಲ. ವಿಷಯಗಳ ಮಾಯೆಯು ಅವನನ್ನು ಸುತ್ತಿ ಎಲ್ಲವನ್ನೂ ಮರೆಯಿಸಿ, ಅಜ್ಞಾನದಲ್ಲಿಯೇ ಸೇರಿಸಿ ಬಿಡುವದು. ಆ ಇಷ್ಟಲಿಂಗವನ್ನು ನಿರಂತರ ಪೂಜಿಸುವ ಕಟ್ಟಾಜ್ಞೆ ಇರುವದರಿಂದ, ಹೊರಗೆ ಇಷ್ಟಲಿಂಗವನ್ನು ಒಳಗೆ ಪ್ರಾಣಲಿಂಗವನ್ನೂ ನಿಷ್ಠಾ ಪೂರ್ವಕವಾಗಿ ಪೂಜಿಸುವದರಿಂದಲೇ ಅಹಂಕಾರ ಮರಾಶೆಗಳು ಸೇರಲಿಕ್ಕೆ ಕಾರಣವೇ ಇಲ್ಲವಾಗುವದು. ಷಟ್‌ಸ್ಥಲಗಳನ್ನೆಲ್ಲ ಪರ್ಯಾಲೋಚಿಸಿ, ತಿಳಿದು, ಸದಾ ಆಮೇರೆಗೆ ನಡೆಯುವದರಲ್ಲಿಯೇ ಅವನು ನಿಮಗ್ನನಾಗುವನು. ಆದುದರಿಂದಲೇ ಇಷ್ಟಲಿಂಗವು ಅವಶ್ಯವಾಗಿ ಇರಲೇ ಬೇಕು.

### (೫) ಬಸವನ ಶಿವನಿರೀಕ್ಷಣೆಯನ್ನು ಒರೆದು ನೋಡಿದ್ದು

ಕಲ್ಯಾಣದಲ್ಲಿ ಬಸವಾದಿಗಳೊಡನೆ ಕೆಲಕಾಲ ಆನಂದದಿಂದ ಕಳೆದ ಮೇಲೆ ಪ್ರಭುದೇವರು ಸಿದ್ಧರಾಮನನ್ನು ಅಲ್ಲಿಯೇ ಬಿಟ್ಟು, ತಾವೊಬ್ಬರೆ ಅಲ್ಲಿಂದ ಮತ್ತೆ ಪ್ರಯಾಣ ಬೆಳೆಸಿದರು. ಸ್ವೇಚ್ಛೆಯಿಂದ ಸಂಚರಿಸಿ, ಬೇರೆ ಬೇರೆ ಕಡೆಗೆ ವೀರಶೈವಮತ ಪ್ರಚಾರ ಮಾಡಿದರು. ಆಗ ಅವರಿಗೆ ಪುನಃ ಬಸವನ ನೆನಪು ಆಯಿತು. ಆತನ ಕಾರ್ಯವು ಕಲ್ಯಾಣದಲ್ಲಿ ಅದು ಹೇಗೆ ನಡೆದಿದೆ ಎಂಬುದನ್ನು ನೋಡುವ ಆಕಾಂಕ್ಷೆ ಉದ್ಭವಿಸಿತು. ಬಸವನಲ್ಲಿ ಶಿವಭಾವನೆಯು ಅದೆಷ್ಟು ಪ್ರಗತಿಪಟ್ಟಿರುವದೆಂಬುದನ್ನು ಜಗಕ್ಕೆಲ್ಲ ತೋರಿಸಬೇಕೆಂಬ ಉದ್ದೇಶದಿಂದ ಅದನ್ನು ಒರೆಗೆ ಹಚ್ಚಬೇಕೆಂದು ನೆನಿಸಿದರು. ಪ್ರಭುವು ಕಲ್ಯಾಣದ ಗಡಿಯಲ್ಲಿ ಬಂದವಾರ್ತೆಯನ್ನು ಬಸವೇಶನು ಜನರಿಂದ ತಿಳಿದನು. ಹಾಗೂ ಅತ್ಯಾನಂದ ಭರಿತನಾಗಿ ಪಲ್ಲಕ್ಕಿ-ಛತ್ರ-ಚಾಮರ, ಬಹುವಿಧದ ವಾದ್ಯಗಳು, ಜನಸ್ತೋಮದೊಡನೆ ಅತಿ

ವೈಭವ ವಿಜೃಂಭಣೆಯಿಂದ, ಊರ ಹೊರಗೆ ಅವನಿದ್ದೆಡೆಗೆ ಬಂದನು. ಆದರೆ ಅಲ್ಲೆಲ್ಲಿಯೂ ಪ್ರಭುವು ಕಾಣಲಿಲ್ಲ. ಹುಡುಕಿ ಹುಡುಕಿ ಬೇಸತ್ತನು. ಸುತ್ತು ಮುತ್ತು ಸೇವಕರನ್ನು ಬಿಟ್ಟು ಹುಡುಕಿಸಹತ್ತಿದನು. ಕೊನೆಗೆ ಒಂದು ಕಡೆಗೆ ಬೇನೆಯಿಂದ ಬಳಲುತ್ತಿರುವ, ಹುಣ್ಣು-ನಾರುಗಳಿಂದ ಕೀವು ನೆತ್ತರು ಬಸಿಯುತ್ತಿರುವ, ಅಸಹ್ಯ ರೂಪದ, ಹರಕು ಬಟ್ಟೆಯ, ತಿರುಕನೊಬ್ಬನು ನರಳುತ್ತ ಮಲಗಿದ್ದನು. ಅವನನ್ನು ನೊಣಗಳು ಮುಕುರಿಕೊಂಡು, ಗುಂಯ್, ಗುಂಯ್ ಎಂದು ಹಾರಾಡುತ್ತಿದ್ದವು. ಅವನ ಬಳಿಗೆ ಯಾರೂ ಹೋಗಲೊಲ್ಲರು. ಈ ಸುದ್ದಿಯನ್ನು ಕೇಳಿ ಬಸವನು 'ಆತನೇ ಪ್ರಭುವಿರಬೇಕು. ನನ್ನ ಪರೀಕ್ಷಾರ್ಥವಾಗಿ, ಇದು ಅವನು ಕಲ್ಪಿಸಿದ ಮಾಯೆ ಇರಬಹುದು. "ಲಿಂಗ ಬಾಹ್ಯಾತ್ ಪರಂ ನಾಸ್ತಿ" ಎಂಬುದು ಸತ್ಯ ಸಿದ್ಧಾಂತವು.' ಎಂದು ನಿಶ್ಚಯಿಸಿದನು. ಕೂಡಲೇ ಸಕಲ ವೈಭವದಿಂದ ಅಲ್ಲಿಗೆ ಹೋಗಿ, ಅವನಿಗೆ ಶರಣಾಗತನಾಗಿ, ಅವನನ್ನು ಮೆಲ್ಲನೆ ಎತ್ತಿ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಮೆರವಣಿಗೆಯಿಂದ, ತನ್ನ ಅರಮನೆಗೆಯುತ್ತ, ರಾಜಬೀದಿ ಹಿಡಿದು, ಮಹೋತ್ಸಾಹದೊಡನೆ, ನಡೆದನು. ಇದನ್ನು ಕಂಡು, ಪಾಶಂಡಾದಿಗಳೇ ಮೊದಲಾದ ಬಹುಜನರು ಚಪ್ಪಾಳೆ ಯಿಕ್ಕಿ. ಬಸವನ ಮರುಳುತನಕ್ಕೆ ಅಪಹಾಸ್ಯ ಮಾಡುತ್ತಿದ್ದರು. ಅದನ್ನು ತುಸುವಾದರೂ ಲೆಕ್ಕಿಸದೆ, ಪ್ರಭುವಿನ ಪುನರಾಗಮನ ಅತ್ಯಾನಂದದಲ್ಲೇ ಮೈಮರೆದು, ಸ್ವ ಸ್ಥಾನಕ್ಕೆ ತಂದು, ಪ್ರಭುವನ್ನು (ತಿರುಕನನ್ನು) ಮೆಲ್ಲನೆ ಇಳಿಸಿ, ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಬಸವನ ಈ ಪರಿಶುದ್ಧ ಭಕ್ತಿ ಜ್ಞಾನಗಳಿಗೆ ಪ್ರಭುವು ಹಣ್ಣಭರಿತನಾಗಿ, ತನ್ನ ನಿಜರೂಪವನ್ನು ಪ್ರಕಟಿಸಿ ಅವನನ್ನು ಬಿಗಿದಪ್ಪಿಕೊಂಡನು. ಈ ಅತ್ಯಾಶ್ಚರ್ಯವನ್ನು ಕಂಡು, ಜನರೆಲ್ಲರೂ ಬಸವನನ್ನು ಹೊಗಳಿದುದು, ಬಣ್ಣಿಸಲಸದಳವಾದುದು. ಇರಲಿ; ಮುಂದೆ ಬಸವೇಶನಿಚ್ಛೆಯಂತೆ, ಪ್ರಭುವಾದರೂ ಕಲ್ಯಾಣದಲ್ಲಿಯೇ ಇರಲು ಒಪ್ಪಿದನು.

ಹೀಗೆ ಪ್ರಮಥರೆಲ್ಲರೂ, ಉಲ್ಲಾಸದಿಂದ ಪ್ರಭುವಿನ ಸಹವಾಸದಲ್ಲಿ ಕಾಲ ಕಳೆಯುಹತ್ತಿದರು. ಬಸವನು ಪ್ರಭುದೇವರಿಗೆ ಬಿನ್ನಯಿಸಿಕೊಂಡು, ಅವರನ್ನು ಶೂನ್ಯ ಸಿಂಹಾಸನಾರೋಹಣಂಗೈಸಿದನು. ಶೂನ್ಯ ಸಿಂಹಾಸನವೆಂದರೆ ಅದೆಂತಹದೋ ಎಂದು, ಬಹುಜನರಿಗೆ ದಿಗಿಲು ಬೀಳಬಹುದು. ಆದರೆ ಅದು ಏನೇನೂ ಇಲ್ಲದಿರುವ ಸ್ಥಾನ.

ಶೂನ್ಯವೆಂದರೆ, ಹೊರಗಣ್ಣಿಗೆ ಈ ಜಗತ್ತಿನಲ್ಲಿ ನಮಗೆ ತೋರುವ ಅದಾವ ಪದಾರ್ಥವೂ ಇಲ್ಲದಿರೋಣ. ಇದೂ ಅಲ್ಲದೆ, ಒಳಗಣ್ಣಿಗೆ (ವಿರೂಪಲೋಚನಕ್ಕೆ, ಜ್ಞಾನ ದೃಷ್ಟಿಗೆ) ಸಹ ಹರಿಯುವ ಅದಾವ ಕಲ್ಪಿತ ವಸ್ತುಗಳ ಸುಳಿವೂ ಕೂಡ, ಇಲ್ಲದಿರೋಣ. ಇಂತಹ ಶೂನ್ಯಕೇನೇ ನಮ್ಮವರು ಸ್ಥಳ, ನಿರಾಲಂಬ ಲಿಂಗ, ನಿರ್ಬಯಲ ಲಿಂಗ, ಸ್ವಸ್ಥ ಲಿಂಗ, ಲಿಂಗಾಂಗ ಸಾಮರಸ್ಯ, ಏಕಮೇವಾ ದ್ವಿತೀಯತ್ವ, ಪರಬ್ರಹ್ಮ, ಪರಶಿವ ಮುಂತಾದ ಹೆಸರು ಕೊಟ್ಟಿದ್ದಾರೆ. ಈ ಶೂನ್ಯ ಸ್ಥಿತಿಯನ್ನು ಹೊಂದುವದೇ ಶೂನ್ಯ ಸಂಪಾದನೆಯು. ಪ್ರಭುದೇವರು ಶೂನ್ಯ ಸಿಂಹಾಸನ ಆರೂಢರಾಗಿ, ತಾವು ಪರಮ ಶೂನ್ಯತ್ವ ಹೊಂದುವದಲ್ಲದೆ, ಜಗತ್ತಿಗೂ ಅದರ ಮರ್ಮವನ್ನು ತಿಳಿಸುವದಕ್ಕಾಗಿ, ಶೂನ್ಯ ಸಂಪಾದನೆ ಎಂಬ ಅಮೂಲ್ಯ ವಚನಗಳನ್ನು ಬಿತ್ತರಿಸಿದರು

ಶ್ರೀ ಪ್ರಭುದೇವರು ಆ ಗದ್ದುಗೆಯನ್ನು ಮಂಡಿಸಿ, ಎಲ್ಲ ಪ್ರಮಥರೊಡನೆ ನಿತ್ಯದಲ್ಲಿಯೂ ಪ್ರಸಂಗ ನಡೆಯಿಸಿ ಅವರವರ ವರ್ತನೆಗಳನ್ನು ವಿವೇಚಿಸಿ, ಅವಕ್ಕೆ ತಕ್ಕ ತಾತ್ವಿಕ ಪರಿಹಾರಗಳನ್ನು ನೀಡುತ್ತಿದ್ದರು. ಮನದ ಸಂದೇಹಗಳೆನ್ನೆಲ್ಲ ಕಳೆದು, ಮಹಾ ಜ್ಞಾನದ ಬೆಳಕನ್ನು ಬೀರುತ್ತಿದ್ದರು. ಈ ಸಂಗತಿಯು ಸುತ್ತಲೆಲ್ಲ ಹಬ್ಬಿದುದರಿಂದ, ಎಲ್ಲೆಡೆಗಳಿಂದಲೂ ಅಪರಿಮಿತವಾಗಿ, ಶರಣರೂ ಸತ್ಪುರುಷರೂ ಬಂದು, ಕಲ್ಯಾಣವನ್ನು ಕಿಕ್ಕಿರಿದು ತುಂಬಿ, ಮಹಾ ಜ್ಞಾನಾಮೃತವನ್ನು ಭುಂಜಿಸಿ, ನಲಿದಾಡ ಹತ್ತಿದರು. ಅದೇ ಕಾಲಕ್ಕೆ ಬಸವಣ್ಣನವರೂ, ಪ್ರಮಥರೊಂದೊಡಗೂಡಿದ ನೂತನವಾದ. ಶಿವಾನುಭವ ಮಂಟಪವನ್ನು, ಅಲ್ಲಿ ಪ್ರಸ್ಥಾಪಿಸಿದನು. ಅದಕ್ಕೆ ಸಹ ಪ್ರಭುದೇವರೇ ಅಧ್ಯಕ್ಷರಾದರು. ಎಲ್ಲೆಡೆಗಳಿಂದಲೂ ಬಂದ ಬಲ್ಲ ಜನರೆಲ್ಲ ಆ ಮಂಟಪವನ್ನು ಸೇರಿ, ಅದರ ಸದಸ್ಯರಾದರು. ಅಲ್ಲಿ ನಡೆಯುವ ವಿಷಯಗಳನ್ನೆಲ್ಲ ಮನಮುಟ್ಟಿ ಲಾಲಿಸುವದು, ಮತ್ತು ತಮಗೆ ಗೋಚರವಾದುದನ್ನು ಮುಚ್ಚು ಮರೆಯಿಲ್ಲದೆ, ಮುಕ್ತ ಕಂಠದಿಂದ ಉಸುರುವರು. ಮುಂದೆ ಬಂದ ವಿಷಯದ ಅರೆದಾಟವು ಚನ್ನಾಗಿಯೇ ನಡೆದು ಅದರ ಸತ್ಯ ಸ್ವರೂಪವೇ ಬೈಲಿಗೆ ಬರುತ್ತಿತ್ತು. ಅರೆದಾಟವನ್ನೆಲ್ಲ ಕೇಳಿ, ಪ್ರಭುದೇವರು ಮತ್ತೂ ಅದನ್ನು ಪರಿಶುದ್ಧಗೊಳಿಸಿ, ಕೊನೆಯ ನಿರ್ಣಯವನ್ನು ಎಲ್ಲರ ಸಮ್ಮತಿಯಿಂದ ಕೊಡುತ್ತಿದ್ದರು. ಎಲ್ಲ ವಿಷಯಗಳೂ

ಏಕಮುಖದಿಂದಲೇ ಸಿದ್ಧಾಂತಗೊಳ್ಳುತ್ತಿದ್ದವು. ಮುಂದೆ ಎಂದೆಂದೂ ಸಹ ಮತಭೇದವು ತಿಲಮಾತ್ರವೂ ಹುಟ್ಟದಂತೆ, ಅವುಗಳ ಸ್ವರೂಪವಿರುತ್ತಿತ್ತು. ಅಂತೇ ವೀರಶೈವ ಮತತತ್ವಗಳೆಲ್ಲ, ಅತ್ಯಂತ ಭದ್ರವಾದವುಗಳಾಗಿ, ಯಾವ ಧರ್ಮದವರಿದ್ದರೂ ಅವಕ್ಕೆ ತಲೆವಾಗುವಂತೆ ಮನ್ನಣೆಗೆ ಪಾತ್ರವಾಗಿರುವವು. ವಚನಕಾರರು ಬಹುಜನರಾಗಿರುವರು. ಅವರ ಕಾಲಗಳು ಬೇರೆ ಬೇರೆಯಾಗಿರುವವು. ಆದರೂ ಅವರೆಲ್ಲರ ವಚನಗಳಲ್ಲಿ ಒಂದೇ ವಿಧದ ಧೋರಣೆಯು ಕಂಡುಬರುತ್ತಿದೆ. ಎಲ್ಲರ ಗ್ರಂಥಗಳಲ್ಲಿಯೂ ಆ ಶಿವಾನುಭವ ಮಂಟಪದ ನಿರ್ಣಯಗಳ ದಟ್ಟ ಛಾಯೆಯೇ ತುಂಬಿ ತುಳುಕುತ್ತಿರುವದು. ಹೀಗೆ ಬಸವಾದಿ ಪ್ರಮಥರೂ, ಪ್ರಭುದೇವರೂ ಶ್ರಮವಹಿಸಿ ಮಾಡಿದ ಕರ್ತವ್ಯದ ಫಲವು ಅತ್ಯಂತ ಯಿಷ್ಟವಾದುದಾಗಿದೆ. ಈ ರೀತಿ ಎಲ್ಲವೂ ಸುಸೂತ್ರವಾಗಿ ನಡೆದಿರುವ ಕಾಲದಲ್ಲಿ, ಒಮ್ಮೆಲೇ ಮಧುವಯ್ಯ ಹರಳಯ್ಯಗಳ ದುರ್ಘಟನೆಯು ಒದಗಿದುದರಿಂದ, ಸಮಯವರಿತು, ಎಲ್ಲರೂ ಚಲ್ಲಾಪಿಲ್ಲಿಯಾದರು. ಪ್ರಭುದೇವರು ಶ್ರೀಶೈಲವನ್ನು ಸಾರಿದರು. ಅಲ್ಲಿ ಅವರು ಗೋರಖನಾಥಾದಿಗಳನ್ನು ಕಂಡರು.

## ೬ ಗೋರಖನಾಥ

ಈತನೊಬ್ಬ ನಾಥ ಪಂಥೀಯ ಪ್ರಮುಖ ವ್ಯಕ್ತಿಯು. ತನ್ನ ಬಾಹ್ಯ ದೇಹದ ಪ್ರಗತಿಗಾಗಿ ಬಲು ಆಸಕ್ತಿ ವಹಿಸಿ ಪ್ರಯತ್ನಪಟ್ಟವನು. ಅದು ಬಿರುಸಾದ ವಜ್ರದುಂಡಿಯ ಕಲ್ಲಿನಂತೆ ಭದ್ರವಾಗಿ, ರಕ್ತಮಾಂಸಾದಿಗಳಿಂದ ಪೂರ್ಣ ತುಂಬಿಕೊಂಡು, ಎಸೆಯುತ್ತಿತ್ತು. ಆತನು ತನ್ನಂತಹರು ಜಗತ್ತಿನಲ್ಲ ಯಾರ್ಯಾರೂ ಇಲ್ಲವೆಂದು ಮಿಗಿಲಾದ ಅಭಿಮಾನವನ್ನು ಧರಿಸಿದ್ದನು. ತನ್ನ ಕಾಯವು ಕೇವಲ ವಜ್ರ ತನುವೆಂದು ಉಬ್ಬಿ ಹೋಗಿದ್ದನು. ಪ್ರಭುವು ಅವನ ಬಳಿಗೆ ಹೋದಾಗ ಗೋರಖನು ತನ್ನ ಸೆಡವಿನಲ್ಲಿಯೇ ಇದ್ದುದರಿಂದ, ಅವನು ಪ್ರಭುದೇವರನ್ನು ಲೆಕ್ಕಿಸಲೇ ಇಲ್ಲ. ಆದರೂ ಪ್ರಭುವು ತಾವಾಗಿಯೇ ಅವನನ್ನು—"ಅಯ್ಯಾ ತಾವು ಯಾರು? ತಮ್ಮ ವರ್ತಮಾನವೇನು?" ಅವನನ್ನು ಕೇಳಿದರು. ಆಗ ಗೋರಖನು "ನನ್ನನ್ನು ಕೇಳುವ ನೀನಾರು?" ಎಂದು ಕೇಳಲು— ಪ್ರಭುವು—"ಅಪ್ಪಾ! ನಾನೊಬ್ಬ ಪ್ರವಾಸಿ.

ಗೋರಖನಾಥ—"ನನಗೆ ಗೋರಖನಾಥನೆಂದು ಹೆಸರು. ನಾನು ವಜ್ರದೇಹಿ. ನನ್ನ ಶರೀರಕ್ಕೆ ಯಾತರಿಂದಲೂ ಎಸಿತೆನಿತೂ ನಾಶವಿಲ್ಲ.

ನೀನು ಬೇಕಾದರೆ ಈ ಖಡ್ಗದಿಂದ ನನ್ನನ್ನು ಕಡಿಗು ಪರೀಕ್ಷಿಸು " ಎಂದು ಬಲವಾದ ಕತ್ತಿಯನ್ನು ಪ್ರಭುವಿನ ಕೈಗಿತ್ತನು. ಇದನ್ನೆಲ್ಲ ತಿಳಿದು ಪ್ರಭುವು "ಆಗಲಿ" ಎಂದು ( ಆ ಪ್ರಕಾರ ) ಪ್ರಹಾರ ಮಾಡಿದನು. ಆಗ ' ಖಣಲ್, ಖಣಲ್ ' ಎಂದು ಶಬ್ದವಾಗ ಶಸ್ತ್ರದ ಬಾಯಿಯೇ ಉದುರಿ ಮೊಂಡಾಯಿತು. ಆಗ ಪ್ರಭುವು — ಅದೇ ಖಡ್ಗದಿಂದ " ನನ್ನ ದೇಹವನ್ನು ಕಡಿದು ನೋಡು " ಎಂದು ತನ್ನ ಸುಜ್ಞಾನ ತನುವನ್ನು ( ಛೇ! ಅದೇಕೆ, ನಿರಂಜನ ಸ್ವರೂಪವನ್ನು ) ಮುಂದೆ ಚಾಚಿದನು. ಗೋರಖನು ಖಡ್ಗದಿಂದ ಅದನ್ನು ಹೊಯ್ಯಲು ಅದು ( ಖಡ್ಗವು ) ಇತ್ತಿಂದತ್ತ, ಅತ್ತಿಂದಿತ್ತ ಏನೇನೂ ಶಬ್ದ ಸಹ ಇಲ್ಲದೆ, ಪಾರಾಗಿ ಹೋಗಹತ್ತಿತು. ಆಗ ಅತಿ ಸೋಜಿಗಗೊಂಡು ಅವನು—" ಸ್ವಾಮೀ ! ಇದೇನು ? ತಮ್ಮ ಶರೀರಕ್ಕೆ ಅದೆಷ್ಟು ಸಾರೆ ಜಡಿದರೂ ಅದು ನಿಶ್ಶಬ್ದವಾಗಿಯೂ, ನಷ್ಟವಾಗದೆಯೂ, ಇದ್ದಕ್ಕಿದ್ದಂತೆಯೇ ಇರುವದಲ್ಲ ? ಎಂದನು.

ಪ್ರಭು—" ನೋಡು ! ನಿನ್ನ ಶರೀರ ಮಿಗಿಲಾದುದೋ? ನನ್ನದೋ ?"

ಗೋರಖ— ಅಯ್ಯಾ ! ತಮ್ಮದೇ ಶ್ರೇಷ್ಠವಾದುದು. ಅವರ ಮುಂದೆ ನನ್ನದು ಪಾಸಂಗಕ್ಕೆ ಸಹ, ಬರಲಾರದು. ತಾವು ಇದನ್ನು ಹೇಗೆ ಸಂಪಾದಿಸಿರುವಿರಿ ಎಂಬುದನ್ನು ನನಗಷ್ಟು ದಯಮಾಡಿ, ಅರುಹಬೇಕು. ಎಂದು ಪಾದಕ್ಕೆರಗಿದನು.

ಪ್ರಭುವು ಕೃಪಾಲುವಾಗಿ, ಆತನಿಗೆ ಇಷ್ಟಲಿಂಗ ಪೂಜೆಯ ಮಹಿಮೆಯನ್ನೂ ಅದರಿಂದ ಪಡೆಯುವ ಮಹೋನ್ನತ ಸ್ಥಾನವನ್ನೂ ತಿಳಿಸಿ ಹೇಳಿ ಆತನಿಗೆ ದೀಕ್ಷಾಪೂರ್ವಕವಾಗಿ ಲಿಂಗಧಾರಣ ಮಾಡಿ, ಮತ್ತೆ ಬೇರೆಕಡೆಗೆ ಸಾಗಿದನು.

## ೭ ಶ್ರೀಶೈಲದಲ್ಲಿ ಅಲ್ಲಲ್ಲಿ ವಾಸವಾಗಿದ್ದ ಅನ್ಯ ಯೋಗಿಗಳು.

ಮುಂದೆ ಹೋದಮೇಲೆ ಅಲ್ಲಲ್ಲಿ ಕುಳಿತುಕೊಂಡು, ಯೋಗಾಭ್ಯಾಸ ನಡೆಸಿದ ಅನೇಕ ಯೋಗ ಸಾಧಕರನ್ನು ಪ್ರಭುದೇವರು ಕಂಡರು. ಅವರಿಗೆ—" ನಿಮ್ಮ ಈ ದಾರಿಯು ( ಪಾತಂಜಲ ಯೋಗಮಾರ್ಗವು ) ಕಠಿಣವಾದುದು. ಸಾಧ್ಯವಾಗುವದೇ ವಿರಲ. ಆದುದರಿಂದ ಇದನ್ನು ಬಿಟ್ಟು, ವೀರಶೈವ ಮತದಂತೆ ಇಷ್ಟಲಿಂಗವನ್ನು ಧರಿಸಿ, ಷಟ್‌ಸ್ಥಲ ಮಾರ್ಗದಿಂದ

ನಡೆನಗೆ, ಬಹುಬೇಗ ಕೃತಾರ್ಥರಾಗುವಿರಿ. ಮತ್ತು ಪರಶಿವನಲ್ಲಿ ಬೆರೆದು, ಕೃತಾರ್ಥರಾಗುವಿರಿ. " ಎಂದು ಬೋಧಿಸಿ, ಅವರೆಲ್ಲರನ್ನು ಇಷ್ಟಲಿಂಗದ ಪೂಜೆಯುಲ್ಲಿ ನಿರತರನ್ನು ಮಾಡಿದನು. ಅದರಂತೆ ಅವರಿಗೆ ಅನುಭವ ವಾದರೂ ಬಂದು, ಜನ್ಮ ಸಾರ್ಥಕವನ್ನು ಹೊಂದಿದರು.

## ಶ್ರೀಶೈಲ

ಶೈಲ ( ಶಿಲಾ+ಅ ) ವೆಂದರೆ ಪರ್ವತ. ಶ್ರೀಶೈಲವೆಂದರೆ ಐಶ್ವರ್ಯ ಯುಕ್ತ ಪರ್ವತ. ಅಲ್ಲಿ ಮಲ್ಲಿಕಾರ್ಜುನನ ವಾಸ. ( ಮಲ್ಲಿಕಾ+ಅರ್ಜುನ= ಮಲ್ಲಿಕಾರ್ಜುನ ) ಆದುದರಿಂದ ಮಲ್ಲಿಕಾ ಪುಷ್ಪದಂತೆ ಹೊರಗೆ ಶುಭ್ರ ವಾಗಿಯೂ; ಒಳಗೆ ಸುಗಂಧವಾಗಿಯೂ, ಇರುವ ದೈವತವೆಂದೇ ಅದರ ಅರ್ಥವು. ಮಹಾಜ್ಞಾನವೇ ಇಂತಹ ಶುಭ್ರ ( ಶುದ್ಧ ಬಿಳಿಯ ) ರೂಪ ವಲ್ಲದೆ, ಬೇರೊಂದಲ್ಲ. ಅದರ ಒಳಭಾಗವು ಬರಿಯ ಸುಗಂಧನುಯ. ಅಂದರೆ ಎಲ್ಲ ವಿಧದ ಸದ್ಗುಣಗಳ ನಿಧಿಯೇ ಇದಾಗಿರುವದು. ಆದುದ ರಿಂದಲೇ ನಿಜಗುಣ ಶಿವಯೋಗಿಗಳು ಆ ಶಂಭುಲಿಂಗವನ್ನು " ಗುಣಮಣಿ ಕುಲಜಲನಿಧಿ ನಿನ್ನ ಪಾದ " ಎಂದು ವರ್ಣಿಸಿರುವರು.

ಇದು ಹೊರಗೆ ಜಗತ್ತಿನ ಮೇಲೆ ಇರುವ ಶ್ರೀಶೈಲವು, ನಮ್ಮ ದೇಹದಲ್ಲಿಯೇ ಪ್ರತ್ಯಕ್ಷ ಶ್ರೀಶೈಲವಿದೆ, ಅದನ್ನು ನಾವು ಅರಿಯಬೇಕು. ವಳಿಯೇ (ಅದರೊಳಗಿನ ಮಿದುಳೇ) ಶ್ರೀಶೈಲವು. ಅಲ್ಲಿ ಮಲ್ಲಿಕಾರ್ಜುನ ಶಂಭುಲಿಂಗನು, ವಾಸಿಸುತ್ತಿರುವನು. ಅವನನ್ನೇ ವೀರಶೈವರು, ಮಹಾ ಲಿಂಗವೆಂದರಿದು, ಅರ್ಚಿಸಿ ಆಚರಿಸುವರು. ಕೊನೆಗೆ ತಮ್ಮ ಜನ್ಮಸಾಫಲ್ಯ ವನ್ನು ಹೊಂದಿ. ಒಯಲಾಗುವರು. [ಏಕ ಮೇವಾದ್ವಿತೀಯತ್ವವನ್ನು ತಳೆದು ಗಂಭೀರ ಸುಖದಲ್ಲಿರುವರು. )

## ಮಥಿತಾರ್ಥ.

ಪ್ರಭುದೇವರ ಪುರಾಣದಲ್ಲಿ ತೋರಿಬರುವ ಮೇಲಿನ ವಿಷಯುಗಳನ್ನು ಪರೀಕ್ಷಿಸಿದರೆ, ಅವು ಜನಸಾಮಾನ್ಯರಿಗೆ ತಕ್ಕ ಮಾರ್ಗದರ್ಶನ ಮಾಡುವ ಅವಶ್ಯವಾದ ಬೋಧೆಯನ್ನೇ ಬೀರುವಂತಹವಿರುವವೆಂಬುದು ತಟ್ಟನೆ ಹೊಳಯುವದು.

(೧) ಪ್ರಪಂಚವಿಡಿದವರು ಆದಕ್ಕೆ ಮರುಳಾಗಿ, ಇಲ್ಲವೆ ಅನಿರ್ವಾಹ ಪಕ್ಷವೆಂದು, ಅದರಲ್ಲಿಯೇ ಸಿಕ್ಕಿಕೊಂಡು, ಒದೆದಾಡುವ ಸಂಭವವೇ

ಹೆಚ್ಚಾಗಿರುವದು. ಹಾಗೆ ಮಾಡದೆ ಎಚ್ಚರನಿಂದಿದ್ದು ತನ್ನ ಆತ್ಮೋದ್ಧಾರ ವನ್ನೇ ಕಣ್ಣು ಮುಂದಿಟ್ಟುಕೊಂಡು, ಇರಬೇಕೆಂಬುದನ್ನು 'ಬನವಾಸಿಯ ಮಾಯಾದೇವಿ' ಮುಂತಾದ ಸಂಗತಿಯು ತಿಳಿಸುತ್ತದೆ.

(೨) ಪ್ರತಿಯೊಬ್ಬರು ಯಾವದಾದರೊಂದು ಪ್ರಾಮಾಣಿಕ ಸತ್ಕಾಯಕವನ್ನು ಹಿಡಿಯಲೇಬೇಕು. ಹಾಗೆ ಹಿಡಿದು ಸಹ ಅದರೊಡನೆಯೇ ಅದು ಹೇಗೆ ತನ್ನ ಆತ್ಮೋನ್ನತಿಯನ್ನು ಸಾಧಿಸಬೇಕೆಂಬುದು ಗೋಗಾರ್ಯನ ಪ್ರಸಂಗದಿಂದ ತಿಳಿಯುವದು.

(೩) ಹೀಗೆ ನಡೆಯುತ್ತಿರಲು ನಡುನಡುವೆ ಎಂತಹ ದುಃಖವು (ಮರಣದಿಂದ ಪ್ರಿಯ ಜನರು ಅಗಲಿಹೋಗುವ ತಾಪವು) ಎಲ್ಲರಿಗೂ ಬಂದೇ ಬರುವದು- ಆಗ ಕಂಗೆಡದೆ, ಅದೆಂತು ಶಾಂತಿಯನ್ನು ಧರಿಸಿ ಎಂದಿನಂತೆ ಲಿಂಗಾನಂದದವಲ್ಲಿರಬೇಕೆಂಬುದು ಮುಕ್ತಾಯಕ್ಕಗಳ ಪ್ರಸಂಗ ದಿಂದ ವಿವರಿಸಲ್ಪಟ್ಟಿದೆ.

(೪) ಜ್ಞಾನಿಗಳಾದರೂ ಸಹ ಅವರಲ್ಲಿ ಅಹಂಕಾರ ಆಸೆಗಳು ಒಂದಿಲ್ಲೊಂದು ರೀತಿಯಿಂದ ಮನೆಮಾಡಿಕೊಂಡಿರುವದು ಬಹುಶಃ ಕಂಡುಬರುತ್ತದೆ. ಹಾಗಾಗುವದು ತೀರ ನಿಂದ್ಯವಾದುದು- ತಾವು ಜ್ಞಾನವಂತರಾದರೂ ಆ ಜ್ಞಾನವನ್ನೆಲ್ಲ ವಿನಾಃಕಾರಣವಾಗಿ ಹಾಳುಮಾಡಿಕೊಳ್ಳುವರು. ಇದನ್ನು ಸಿದ್ಧರಾಮೇಶ್ವರನ ಪ್ರಸಂಗವು ಒಳಿತಾಗಿ ತಿಳಿಯಪಡಿಸುವದು.

(೫) "ಬಸವನಲ್ಲಿರುವ ಜ್ಞಾನವು ಇಂತಹ ತೋರಿಕೆಯದೇನೂ ಅಲ್ಲ ಅದು ಒಳಗೂ ಹೊರಗೂ ಸಂಪೂರ್ಣ ತುಂಬಿದು." ಎಂಬುದನ್ನು ಪ್ರಭುವು ಧರಿಸಿದ ಕುರೂಪಿ ತಿರುಕನ ಪ್ರಸಂಗದಿಂದ ತೋರಿಬರುವದು. ಇಂತಹ ಜ್ಞಾನಾಚಾರ ಸದ್ಭಕ್ತಿಗಳನ್ನೇ ವೀರಶೈವರು ಪಡೆಯಬೇಕೆಂಬುದನ್ನು ಅದು ಸೂಚಿಸುವದು.

(೬) ಶೂನ್ಯ ಸಿಂಹಾಸನಾರೋಹಣದ ಪ್ರಸಂಗದಿಂದ ವಿರಕ್ತರಾದವರು ಅದೆಂತು ವೈರಾಗ್ಯಶೀಲರಾಗಿ ವರ್ತಿಸಿ ಧನ್ಯರಾಗಬೇಕೆಂಬುದು ವ್ಯಕ್ತವಾಗುತ್ತದೆ.

(೭) ಅದರಂತೆಯೇ ಭಕ್ತರಾದವರು ಅದೆಷ್ಟು ಸೋಕಿ ನಡೆದು, ನಿಜವಾದ ತತ್ವಗಳನ್ನನುಸರಿಸಿ ತಮ್ಮ ನರಜನ್ಮವನ್ನು ಸಫಲಗೊಳಿಸಿಕೊಳ್ಳಬೇಕೆಂಬುದನ್ನೇ ಅನುಭವ ಮಂಟಪವು ಪ್ರಾಮುಖ್ಯವಾಗಿ ಬಿಂಬಿಸುತ್ತದೆ.

(೮) ಈ ಪೋರಿನ ನಡೆದು ಕೊನೆಗೆ ಎಲ್ಲರೂ ಶ್ರೀಶೈಲವನ್ನು ಏರಬೇಕು. ಅದು ಬರಿಯ ಪ್ರಭಲವಾದ ದೇಹಸಾಧನೆಯಿಂದ ಎಂದೆಂದೂ ಸಾಧ್ಯವಾಗದು ಎಂಬುದು ಗೋರಖನಾಥನ ಪ್ರಸಂಗದಿಂದ ಅರಿಕೆಯಾಗುವದು.

(೯) ಯೋಗಿಗಳ ಪ್ರಸಂಗದಿಂದ ವ್ಯರ್ಥವಾಗಿ ಪಾತಂಜಲ ಯೋಗದ ಪಟ್ಟಿಗೆ ಬೀಳುವದನ್ನು ಬಿಟ್ಟುಬಿಟ್ಟು ಸುಖಕರವಾದ ಇಷ್ಟ ಲಿಂಗಾದಿ ಪೂಜೆಯ ಮಾರ್ಗವನ್ನು ಸ್ವೀಕರಿಸಬೇಕೆಂಬುದು ಬೈಲಿಗೆ ಬರುವದು.

ಇಷ್ಟಲಿಂಗದ ಪೂಜೆಯಿಂದಲೇ ಪ್ರಭುದೇವರೂ ಸಕಲ ಪ್ರಮಥರ್ಗಳೂ ಲಿಂಗಾಂಗಸಾಮರಸ್ಯವನ್ನು ಹೊಂದಿದರು. ಶರಣರೆಲ್ಲರೂ ಧನ್ಯರಾಗಿ, ಭವಪಾಶವನ್ನು ಹರಿದೊಗೆದು ದುಃಖ ವಿಮುಕ್ತರಾಗಿ ಲಿಂಗೈಕ್ಯರಾದರು. ಷಟ್‌ಸ್ಥಲ ಮಾರ್ಗವೇ ಇದಕ್ಕೆ ಮೇಲಾದ ಸುಲಭಸಾಧನವಾಗಿದೆ. ಇದನ್ನು ಮನಃಪೂರ್ವಕವಾಗಿ ಅನುಸರಿಸುವವರು ಎಂದಿಗೂ ನಿರಾಶರಾಗರು.

ಇಲ್ಲಿ ಒಂದು ಶಂಕೆಯು ತಲೆದೋರುತ್ತದೆ. ಅದೇನೆಂದರೆ:– "ಇಷ್ಟಲಿಂಗವನ್ನು ಧರಿಸಿ, ಈ ಲಿಂಗಮಾರ್ಗದಲ್ಲಿ ಇರುವವರೆಲ್ಲರೂ ಕೃತಾರ್ಥರಾಗುವದು ಸಿದ್ಧಾಂತವಾದುದಲ್ಲವೇ?" ಎಂಬುದು ಇದಕ್ಕೆ ಬಸವಣ್ಣನವರೇ ತಕ್ಕ ಉತ್ತರವನ್ನು ಇತ್ತಿರುವರು.

## ವಚನ

ಬಿದಿರ ಜೆಟ್ಟಕ್ಕೆ ಒಂದು ಕಲ್ಲೊಗೆದರೆ, ಅದು ಅದರಲ್ಲಿಯೇ ಸಿಕ್ಕು ನಿಲ್ಲುವದು, ಆದರೆ "ಅದೇನೂ ಲಿಂಗವಲ್ಲ ಜೆಟ್ಟವೇನೂ ಭಕ್ತನೆನಿಸದು. ಕಲ್ಲೊಗೆದವನು ಗುರುವಾಗಲಾರ ಕೂಡಲಸಂಗಮದೇವಾ."

ಈ ರೀತಿ ಭಕ್ತನು ಮನುಜನಿದ್ದು ಕೂಡ ಗುರುಕೊಟ್ಟ ಲಿಂಗವನ್ನು ಸರಿಯಾದ ಮಾರ್ಗದಲ್ಲಿ ಪೂಜಿಸಿ ತದನುಸಾರ ಆಚರಿಸದಿದ್ದರೆ

ಬಧಿರ ಬೆಟ್ಟದಂತೆ ಅವನು ತನ್ನ ಸಾಂಪ್ರತ ಜನ್ಮವನ್ನು ಹಾಳು ಮಾಡಿ ಕೊಳ್ಳುವನೆಂಬುದರಲ್ಲಿ ಸಂದೇಹವೇ ಇಲ್ಲ. ಯಾವಾಗಲೂ ವ್ಯರ್ಥ ಕಾಲಹರಣದಲ್ಲಿಯೇ ತೊಡಗಿದವರನ್ನು ಕುರಿತು ಬಸವೇಶನು, "ಅಯ್ಯಾ! ಎನಗೆ ದುಡ್ಡುಗಳಿಸಲಿಕ್ಕೆ ಬೇಕಾದಷ್ಟು ವೇಳೆಯಿದೆ. ಆದರೆ ನಿನ್ನನ್ನು ಪೂಜಿಸಲಿಕ್ಕೆ ಸ್ವಲ್ಪ ಸಹ ವೇಳೆಇಲ್ಲವಲ್ಲ! ಕೂಡಲಸಂಗಮದೇವಾ!!" ಎಂದು ನುಡಿದಿದ್ದಾರೆ. ಈಗಂತೂ ಬಹುಜನ ಯುವಕರು ಬುದ್ಧ್ಯಾ ಇಷ್ಟಲಿಂಗವನ್ನು ದೇಹದಿಂದ ತ್ಯಾಗಮಾಡಿ, ಮನಬಂದಂತೆ ವಿಷಯಾಭಿಮುಖರಾಗಿ ವರ್ತಿಸುತ್ತಿರುವರು. ಪರಕೀಯರ ಅನುಕರಣದ ಪರಿಣಾಮವಿದು. ಅವರು ಹೇಳುವದೇನೆಂದರೆ "ನಮ್ಮಲ್ಲಿ ರಾಷ್ಟ್ರೀಯ ಭಾವನೆ ಬಲಿಯುವದಕ್ಕೆ ಇಂತಹ ಬಹಿರಂಗದ ಚಿನ್ಹಗಳನ್ನೆಲ್ಲ ಸಕಲರೂ ಕಿತ್ತೊಗೆದು ಏಕರೂಪತೆ ತಂದುಕೊಳ್ಳುವದು ತೀರ ಅವಶ್ಯವಾಗಿದೆ. ಆದೀತು! ಹೀಗೆ ಹೊರಗೆ ಮಾಡಿದರೂ ಆಂತರಿಕವಾದ ಪ್ರಾಣಲಿಂಗದ ಪೂಜೆಯನ್ನಾದರೂ ಬಹು ಎಚ್ಚರದಿಂದಲೂ ಸದ್ಭಕ್ತಿಯಿಂದಲೂ ಮಾಡಬೇಕಾದದು ಅವಶ್ಯ ಕರ್ತವ್ಯವಲ್ಲವೆ? ಹಾಗೆಯೇ ಸದ್ಗುಣ ಸದಾಚಾರ ಸದ್ಭಕ್ತಿ ಸುಜ್ಞಾನಗಳು ತಮ್ಮಲ್ಲಿ ನೆಲೆಗೊಳ್ಳಲನುವಾಗಬೇಕೆಂದು ಸರ್ವದಾ ಪ್ರಯತ್ನಿಸಬೇಕಾಗುವದು. (ಈ ರೀತಿ ಜ್ಞಾನವನ್ನು ಪಡೆದರೂ ಅದು ಸಿದ್ಧರಾಮೇಶನಂತಾಗುವದು.) ಆದರೆ ಅದೇನೂ ಕಂಡುಬರುವದಿಲ್ಲ. ಅಂದಮೇಲೆ ಎನೋ ಒಂದು ರಾಷ್ಟ್ರೀಯತೆಯ ನೆವ ಮುಂದೆ ಮಾಡಿದರೆ ಅದು ಸತ್ಯವಾಗಲಾರದು. ಆದುದರಿಂದ ಲಿಂಗವಂತರಲ್ಲಿ ಜನಿಸಿ ಇಷ್ಟಲಿಂಗಧಾರಣೆ ಹೆಸರಿಗೆ ಮಾತ್ರ ಹೊಂದಿದವನಲ್ಲಿ, ಇಲ್ಲವೆ ಅದನ್ನು ತ್ಯಜಿಸಿ, ಮನಸೋಕ್ತ ತಿರುಗುವವರಾಗಲೀ, "ಸಗಣಗೆ ಸಾಸಿರ ಹುಳು ಹುಟ್ಟಿದವಿಂತೆ, ಸುಮ್ಮನೇ ಸತ್ತುಹೋಗುವರು, ಇಷ್ಟಲಿಂಗದ ಉದ್ದೇಶವು ಈಡೇರದಿದ್ದರೆ, ಅವರು ತಮ್ಮ ಜನ್ಮ ಕೃತಾರ್ಥತೆಯನ್ನು ಪಡೆಯುವದು ಶಕ್ಯವೇ ಇಲ್ಲ.

ಒಂದು ವೇಳೆ ನಿಜವಾದ ರಾಷ್ಟ್ರೀಯತ್ವವು ಯುರೋಪ ಅಮೇರಿಕೆಗಳವರಂತೆ, ಒಡಮೂಡಿದರೂ ಕೂಡ ಅಷ್ಟಕ್ಕೇ ವಿರಮಿಸುವುದೆಲ್ಲಿದೆ? ಮುಂದೆ ಜಾಗತಿಕ ಶಾಂತಿ ಸಮಾನತೆಗಳು ನೆಲೆಸಿ ದೃಢ ಪಡೆಸಬೇಕೆಂದು ಸಂಘಟನೆ ಹೊಂದುವುದು, ಇರುವುದಲ್ಲವೆ? ಈಗ ಪಂಡಿತ ಜವಾಹಿರಲಾಲಜಿಯವರು, ನಮಗೂ ಸಕಲ ರಾಷ್ಟ್ರಗಳಿಗೂ, ಮೇಲಿಂದ ಮೇಲೆ ಬಡ ಬಡಕೊಂಡು ಹೇಳುವದೇನು? ಗಮನಿಸಿರುವಿರಾ? ಒಟ್ಟಿಗೆ ಶರಣ ಮಾರ್ಗವನ್ನು

ಅನುಸರಿಸದಿದ್ದರೆ; ವ್ಯಕ್ತಿಯದಾಗಲೀ ರಾಷ್ಟ್ರದಾಗಲೀ ಸಾಫಲ್ಯವೂ ಇಲ್ಲ. ಆತ್ಮೋದ್ಧಾರವೂ ಇಲ್ಲ. ಅದಕ್ಕೆ ತಾನೂ; ಜಗವೂ ಶೀರ ಅಭೇದ ಭಾವನೆಯಿಂದ ಒಂದಾಗಲೇಬೇಕು. ಷಟ್ ಸ್ಥಲವು ಇದನ್ನೇ ಬೋಧಿಸುವದು.

---

## ಶಾಸ್ತ್ರೀಯ ಸಂಗೀತ.

ಲೇಖಕರು:- ಶ್ರೀ ಜಿ.ಎಸ್.ಜುಕ್ತಿಮಠ ಗಾಯನ ಕಲಾಕೋವಿದ ವಿಜಾಪುರ.

### ಸಂಗೀತ (೧)

ವೇದಕಾಲದ ಸಂಗೀತದಲ್ಲಿ ಒಂದೇ ರೀತಿ ಇದ್ದದ್ದು ಕಂಡು ಬರುತ್ತದೆ. ಇತ್ತೀಚೆಗೆ ಸಂಗೀತದಲ್ಲಿ ಎರಡು ಪ್ರಕಾರಗಳಿವೆ. ಒಂದು ಮಾರ್ಗೀಯ, ಇನ್ನೊಂದು ದೇಶೀಯ ಸಂಗೀತವು. ಮಾರ್ಗೀಯ ಸಂಗೀತವೆಂದರೆ ವೇದ ಕಾಲದ ಸಾಂಪ್ರದಾಯಕ್ಕನುಸರಿಸಿ ಸಂಗೀತ ಶಾಸ್ತ್ರದ ಕಟ್ಟು ನಿಯಮಗಳಿಂದ ಕೂಡಿದ್ದಕ್ಕೆ ಮಾರ್ಗೀಯ ಸಂಗೀತವೆಂದೂ, ವೇದಕಾಲದಿಂದಿತ್ತೀಚೆಗೆ ಕೆಲಕೆಲವು ಗಾಯಕರು ತಮ್ಮ ತಮ್ಮ ಇಚ್ಛೆಗನುಸಾರವಾಗಿ ಸಂಗೀತ ಶಾಸ್ತ್ರದ ಮಹತ್ವದ ಭಾಗವನ್ನು ಕೆಡಿಸದೆ ಅದರಲ್ಲಿಯೇ ತುಸು ವಾತಾವರಣಕ್ಕನುಸರಿಸಿ ಮಾರ್ಪಡಿಸಿದ್ದು ದೇಶೀಯ ಸಂಗೀತ- ಈ ದೇಶಿಯ ಸಂಗೀತದಲ್ಲಿ ಮತ್ತೆ ಈಗ ಎರಡು ಪ್ರಕಾರಗಳಾಗಿ ತೋರುತ್ತಿವೆ. ಒಂದು ದಕ್ಷಿಣೀಯ ಮತ್ತೊಂದು ಉತ್ತರೀಯ. ದಕ್ಷಿಣಹಿಂದುಸ್ತಾನದಲ್ಲಿರುವ ಗಾಯಕಿಯು ಕರ್ನಾಟಕೀಯ ಗಾಯಕಿ ಯೆಂದು ಹೆಸರು ತಾಳಿದೆ. ಉತ್ತರ ಹಿಂದುಸ್ತಾನದಲ್ಲಿಯ ಗಾಯಕಿಯು ಹಿಂದುಸ್ತಾನೀ ಗಾಯಕೀಯೆಂದು ಹೆಸರು ತಾಳಿದೆ. ನಮ್ಮ ಕರ್ನಾಟಕದಲ್ಲಿಯ ಸಂಗೀತವೇ ಬೇರೆಯೆಂದು ಕೆಲವರು ಹೇಳಲುಪಕ್ರಮಿಸಿದ್ದಾರೆ. ಆದರೆ ಇವೆರಡರ ಬಗ್ಗೆ ಮತ್ತೊಂದು ಸವಿಸ್ತಾರಲೇಖನ ಶಾಸ್ತ್ರ ಸಮ್ಮತ ದೃಷ್ಟಿಯಿಂದ ಬರೆಯುವೆನು.

### ನಾದೋತ್ಪತ್ತಿ (೨)

ಇದು ಆತ್ಮ ಮತ್ತು ಮನಸ್ಸು ಇವುಗಳಿಗೆ ಸಂಬಂಧವು. ಮನಸ್ಸು (ಹೃದಯ) ಮತ್ತು ನಾಸಿಕಕ್ಕೂ ಸಂಬಂಧವಿದೆ. ನಾಸಿಕಕ್ಕೂ ಎದೆಯ

ಭಾಗಕಕ್ಕೂ ಸಂಬಂಧವಿದೆ. ನಾಸಿಕ ದ್ವಾರದಿಂದ ಯಾವಾಗಲೂ ಕ್ರಮವಾಗಿ ಹವೆಯು ಹೋಗುಬರುವ ಕ್ರಮವನ್ನು ಸಾಗಿಸಿರುತ್ತದೆ. ನಾಸಿಕದಿಂದ ಹೋದ ಹವೆಯು ಹೃದಯವನ್ನೆಲ್ಲವ್ಯಾಪಿಸಿ ಸುತ್ತುವರಿದು ಕಂಠದಿಂದ ಮುಖ ( ಬಾಯಿ ) ದಲ್ಲಿ ಹೋಡುವಾಗ ಧ್ವನಿತವಾಗುವದರಿಂದ ಧ್ವನಿಯು ಹೊರಡುವದರಿಂದ ಇದಕ್ಕೆ ನಾದವೆಂದು ಹೇಳಿದ್ದಾರೆ. ನಾವು ಬಿದರಿನ ಮೆಳೆಗೆ ಹೋದಾಗ ಅಲ್ಲಿ ವಿಶೇಷ ಗಾಳಿಬೀಸುತ್ತಿರುವಾಗ, ಆ ಗಾಳಿಯು ಕೆಲವು ಪೊಳ್ಳುಗಳುಳ್ಳ ಬಿದರಿನಲ್ಲಿ ಹೊಕ್ಕು ಹೊರಹೊಮ್ಮುವ ಮುಂದೆ ಅಲ್ಲಿ ಧ್ವನಿಯು ಕೇಳ ಬರುವದು ಅದರಂತೆಯೇ ಇಲ್ಲಿಯೂ ಹೊರಡುತ್ತದೆ. ಈ ನಾದವು ಮೂರು ಪ್ರಕಾರವಲ್ಲಿದೆ. ಹೃದಯದಿಂದ ಹೊರಡುವ ನಾದ ಮಂದ್ರವೆಂದು ಕಂಠದಿಂದ ಹೊರಡುವ ನಾದಕ್ಕೆ ಮಧ್ಯವೆಂದೂ, ಮಸ್ತದಿಂದ ಹೊರಡುವ ನಾದಕ್ಕೆ ತಾರವೆಂದು ಕರೆದಿದ್ದಾರೆ. ಮಂದ್ರನಾದದಿಂದ ಎರಡು ಪಟ್ಟು ಮಧ್ಯ. ಮಧ್ಯನಾದದಿಂದ ಎರಡು ಪಟ್ಟು ತಾರ ಹೀಗೆ ಇವು ಒಂದಕ್ಕಿಂತಲೂ ಒಂದೊಂದು ಹೆಚ್ಚೆಚ್ಚು ಆವೆ. ಈ ಮೂರು ನಾದಿನಲ್ಲಿ ೨೨ ಭಾಗಗಳಾಗಿವೆ. ಇವುಗಳಿಗೆ ಶೃತಿಯೆಂದು ಅಂದಿದ್ದಾರೆ. ನಮಗೆ ಯಾವದೇ ಕೇಳಿದ ಧ್ವನಿಗೆ ಶೃತಿ ( ನಾದ ) ಎನ್ನುವದುಂಟು ಈ ನಾದಿನಲ್ಲಿ ಹೆಚ್ಚು ಕಡಿಮೆ ಸ್ವರಗಳು ಕೇಳಬರುತ್ತವೆ. ಹೃದಯ, ಕಂಠ, ಮಸ್ತಕ ಇವುಗಳಿಂದ ೨೨ ಶೃತಿಗಳು ಹೊರಡುತ್ತವೆಂದು ತಿಳಿದು ಬರುತ್ತದೆ.

### ಶೃತಿಗಳು ೩

(೧) ತೀವ್ರ (೨) ಕುಮುದ್ವತಿ ೩ ಮಂದಾ (೪) ಛಂದೋವತಿ. (೫) ದಯಾವತಿ (೬) ರಜನಿ (೭) ರತಿಕಾ (೮) ರೌದ್ರಿ (೯) ಕ್ರೋಧಾ. (೧೦) ವಜ್ರೀ (೧೧) ಪ್ರಸಾರಿಣಿ (೧೨) ಪ್ರೀತಿ (೧೩) ಮಾರ್ಜಾ (೧೪) ಕ್ಷಿತಿ (೧೫) ರಕ್ತಾ (೧೬) ಸಂದೀಪನೀ (೧೭) ಆಲಾಪಿನೀ (೧೮) ಮದಂತಿ (೧೯) ರೋಹಿಣಿ (೨೦) ರಮ್ಯ (೨೧) ಉಗ್ರ (೨೨) ಕ್ಷೋಭಿಣೀ ಹೀಗೆ ಕ್ರಮವಾಗಿ ಈ ಹೆಸರಿನಿಂದ ಕರೆದಿದ್ದಾರೆ.

### ಸ್ವರಗಳು ೪

ರಾಗಗಳನ್ನು ನಿರ್ಮಿಸುವಲ್ಲಿ ಮೇಲೆ ಹೇಳಿದ ೨೨ ಶೃತಿಗಳಲ್ಲಿಯೇ ಏಳು ಮುಖ್ಯ ಸ್ವರಗಳನ್ನು ಗಣಿಸಲಾಗಿದೆ. (೧) ಷಡ್ಜ (೨) ಋಷಭ

(೩) ಗಂಧಾರ. (೪) ಮಧ್ಯಮ. (೫) ಪಂಚಮ. (೬) ಧೈವತ. (೭) ನಿಷಾಧ ಇವುಗಳಿಗೆ ಕ್ರಮವಾಗಿ ಸ, ರಿ, ಗ, ಮ, ಪ, ದ, ನಿ, ಹೀಗೆ ಸಂಜ್ಞೆಯುಂಟು. ನಾಲ್ಕು, ಏಳು, ಒಂಭತ್ತು, ಹದಿಮೂರು, ಹದಿನೇಳು, ಇಪ್ಪತ್ತು, ಇಪ್ಪತ್ತೆರಡು ಈ ಶ್ರುತಿಗಳ ಮೇಲೆ ಷಡ್ಜ ಮೊದಲಾದ ಶುದ್ಧ ಸ್ವರಗಳು ಮಾನಿಸಲ್ಪಡುತ್ತವೆಂದು ಭರತ ಮೊದಲಾದವರ ಉಲ್ಲೇಖ ದೊರೆತಿದೆಯೆಂದು ಪಂ. ಭಾತಖಂಡೆಯವರ ಮತವಿದೆ. ಹಿಂದುಸ್ಥಾನೀ ಸಂಗೀತದಲ್ಲಿ ಶೃತಿಗಳು ಅಂದರೆ ಷಡ್ಜ, ಮಧ್ಯಮ, ಪಂಚಮ, ಈ ಸ್ವರಗಳು ನಾಲ್ಕು ನಾಲ್ಕು ಶೃತಿಗಳಿಂದ ಋಷಭ, ದೈವತ- ಇವು ಮೂರು ಮೂರು ಶೃತಿಗಳಿಂದ ಗಂಧಾರ, ನಿಷಾಧ ಇವು ಎರಡೆರಡು ಶೃತಿಗಳಿಂದ ಕೂಡಿವೆಯೆಂದು ತಿಳಿಯುತ್ತದೆ.

### ಸಪ್ತಕ ೫

ಮಂದ್ರ, ಮಧ್ಯ, ತಾರ ಹೀಗೆ ಮೂರು ಭಾಗಗಳಿವೆ.

ಸರಿಗಮಪದನಿಸ। ಈ ಸ್ವರಗಳಲ್ಲಿ ಮೊದಲನೇ ಷಡ್ಜ (ಸ) ದಿಂದ ಕೆಳಗಿನ ಸ್ವರಗಳಿಗೆ ಮಂದ್ರಸಪ್ತಕವೆಂದು ೨ನೇ ಷಡ್ಜ. (ಸ) ದಿಂದ ಮುಂದಿನ ಸ್ವರಗಳಿಗೆ ತಾರ ಸಪ್ತಕವೆಂದು ೧ನೇ ಸ, ದಿಂದ ೨ನೇ ಸ. ದ ವರೆಗೆ ಇರುವ ಈ ನಡುವಿನ ಸ್ವರಗಳಿಗೆ ಮಧ್ಯ ಸಪ್ತಕವೆಂದು ಕರೆದಿದ್ದಾರೆ. ಮೊದಲನೇ ಷಡ್ಜ (ಸ) ದಿಂದ ಕಡಿಮೆ ಕೇಳುತ್ತ ಬರುವ ಧ್ವನಿಗೆ ಮಂದ್ರಸಪ್ತಕ ಎರಡನೇ ಷಡ್ಜ (ಸ) ಸ್ವರಕ್ಕಿಂತ ಹೆಚ್ಚು ಹೆಚ್ಚು ಕೇಳುವ ಧ್ವನಿಗೆ ತಾರ ಸಪ್ತಕವೆಂದು ೧-೨ನೇ ನಡುವಿನ ಸ್ವರಗಳಿಗೆ ಮಧ್ಯಸಪ್ತಕವೆಂದು ಹೀಗೆ ತಿಳಿದುಕೊಳ್ಳತಕ್ಕದ್ದು.

### ಚಲಸ್ವರ ಮತ್ತು ಅಚಲಸ್ವರ ೬

ಚಲ ( ವಿಕೃತ ) ಸ್ವರವೆಂದರೆ ಚಲಿಸುವದು. ಭೇದವನ್ನು ಹೊಂದುವದು. ಅರ್ಥಾತ್ ಕೋಮಲ ತೀವ್ರ ಅನ್ವಯಿಸುವ ಸ್ವರಕ್ಕೆ ಚಲಸ್ವರವೆನ್ನುತ್ತಾರೆ. ಇನ್ನು ಚಲಸ್ವರವೆಂದರೆ ಚಲಿಸದೇ ಇರುವದು. ಕೋಮಲ ತೀವ್ರ ಹೊಂದದೇ ಇರುವ ಸ್ವರಕ್ಕೆ ಅಚಲ ಸ್ವರವೆನ್ನುತ್ತಾರೆ. ಸ, ಪ, ಈ ಎರಡು ಅಚಲ ಸ್ವರಗಳು " ರಿ, ಗ, ಮ, ಧ, ನಿ, " ಈ ಐದು ಸ್ವರಗಳು ಚಲಸ್ವರಗಳು. ೫ ಸ್ವರಗಳಲ್ಲಿ ಐದು ಕೋಮಲ. ಐದು ತೀವ್ರ ಸ್ವರಗಳು. ೨ ಅಚಲ ಸ್ವರಗಳು ಕೂಡಿ ಒಟ್ಟು ೧೨ ಸ್ವರಗಳಾಗಿವೆ.

### ಸ್ವರಸ್ಥಾನ ೭

ಪೂರ್ವ ಮೇರು, ಅಂತ್ಯ ಮೇರು, ಇವುಗಳ ಮಧ್ಯದಲ್ಲಿ ತಾರ ಷಡ್ಜ ಇರುತ್ತದೆ. ಅದರ ಅರ್ಧದಲ್ಲಿ ( ಮುಂದಿನ ಭಾಗದ ಅರ್ಧದಲ್ಲಿ ) ಅತಿ ತಾರಷಡ್ಜವಿರುತ್ತದೆ. ಇನ್ನು ಮಧ್ಯ ಸ್ಥಾನದ ಮೊದಲಿನ ಷಡ್ಜದಿಂದ ತಾರ ಷಡ್ಜದವರೆಗೆ ಸ್ವರ ಪೋಣಿಸಿದರೆ ( ಸಪ್ತ ಸ್ವರ ಕ್ರಮ ) ಅದರ ಅರ್ಧದಲ್ಲಿ ಮೂರು ಭಾಗ ಮಾಡಿ ಅದರ ಆಧಾರದಿಂದ ಸ್ವರ ಕಲ್ಪಿಸ ಬೇಕು. ಷಡ್ಜದಿಂದ ಮಧ್ಯಮ ಸ್ವರದ ವರೆಗೆ ಪೂರ್ವ ಮೇರು ಪಂಚಮ ಸ್ವರದಿಂದ ತಾರ ಷಡ್ಜದ ವರೆಗೆ ಅಂತ್ಯಮೇರು. ಹೀಗೆ ಸಂಗೀತ ಶಾಸ್ತ್ರ ದಿಂದ ತಿಳಿದು ಬರುತ್ತದೆ. ಷಡ್ಜ ಮತ್ತು ಪಂಚಮ ಸ್ವರದ ಭಾವದಿಂದ ಅವುಗಳ ಸಂವಾದಿ ಕೋಮಲ ಧೈವತ, ಸ, ಮತ್ತು ಪ, ಮಧ್ಯದಲ್ಲಿ ಕೋಮಲ ಗಂಧಾರ ಇರುತ್ತದೆ. ಮಧ್ಯಮ, ಪಂಚಮ ನಡುವೆ ತೀವ್ರ ಮಧ್ಯಮ ಸ, ಪ, ಮಧ್ಯ ಭಾಗದಲ್ಲಿ ಮೂರು ಭಾಗ ಮಾಡುವರಿಂದ ಮೊದಲನೇ ಎರಡು ಭಾಗದಿಂದ ಮುಂದಿನ ಭಾಗ ಕೋಮಲ ನಿಷಾಧ, ಸಹಜ ತಿಳಿಯ ಬೇಕಾದಲ್ಲಿ ಷಡ್ಜಕ್ಕೆ ಪ್ರಾಧಾನ್ಯ ಸ್ವರ ಪಂಚಮ ಮತ್ತು ಕೋಮಲ ಮಧ್ಯಮ. ತೀವ್ರ ಋಷಭಕ್ಕೆ ಪ್ರಧಾನ್ಯಸ್ವರ ಧೈವತ ಮತ್ತು ಪಂಚಮ ಕೋಮಲ ಋಷಭಕ್ಕೆ ಕೋಮಲಧೈವತ, ಮತ್ತು ತೀವ್ರ ಮಧ್ಯಮ ತೀವ್ರ ಗಂಧಾರಕ್ಕೆ ತೀವ್ರ ನಿಷಾಧ ಮತ್ತು ತೀವ್ರ ಧೈವತ ಕೋಮಲ ಗಂಧಾರಕ್ಕೆ ಕೋಮಲನಿಷಾಧ ಮತ್ತು ಕೊರ್ವಧೈವತ ಕೋಮಲ ಮಧ್ಯಮಕ್ಕೆ ತಾರ ಷಡ್ಜ, ಮತ್ತು ಕೋಮಲನಿಷಾಧ, ತೀವ್ರ ಮಧ್ಯಮಕ್ಕೆ ಮಂದ್ರಋಷಭ, ಮತ್ತು ತೀವ್ರ ಮಧ್ಯನಿಷಾಧ, ಈ ರೀತಿ ಗಣಿತದಿಂದ ಕಂಡು ಹಿಡಿದಲ್ಲಿ ಮಾತ್ರ ಎಲ್ಲ ಸ್ವರಗಳು ಕೋಮಲ ತೀವ್ರ ನನ್ವಯಿಸುತ್ತವೆ. ಮಧ್ಯಮ ಸ್ವರವು ತೀವ್ರವೆಂದು ಮೊದಲಿನಿಂದ ಕರೆದಿದ್ದಾರೆ. ಮೊದಲಿನವರು ಕೋಮಲ ಮಧ್ಯಮವು ಇರುವದಿಲ್ಲ ವೆಂದೇ ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೆ ರೂಢಿ ಯಲ್ಲಿ ಮಾತ್ರ ಕೋಮಲತೀವ್ರ ಉಪಯೋಗಿಸಿದ್ದಾರೆ. ಬರಹದಲ್ಲಿ ಮಾತ್ರ ಉಪಯೋಗಿಸಿರುವದಿಲ್ಲ ಈಗಿನ ಪದ್ಧತಿಗನುಸರಿಸಿ ಕೋಮಲ, ತೀವ್ರಸ್ವರ ಗಳೆಂದು ಗಣಿಸಿದರೆ ಏನೂ ಅಡ್ಡಿ ಇಲ್ಲ ವೆಂದು ಚತುರಪಂಡಿತ ಬಾತಖಂಡೆ ಯವರು ಅಭಿಪ್ರಾಯ ಪಟ್ಟಿದ್ದಾರೆ.

### ವಾದಿ, ಸಂವಾದಿ ಮತ್ತು ಅನುವಾದಿ-

ರಾಗ ಬೆಳಸುವಲ್ಲಿ ನಾಲ್ಕು ಸ್ವರಗಳು ಕಂಡು ಬರುತ್ತಿವೆ. ವಾದಿ, ಸಂವಾದಿ, ಅನುವಾದಿ, ವಿವಾದಿ. ವಾದಿ ಸ್ವರಕ್ಕೆ ರಾಜನೆಂದು ಕರೆದಿದ್ದಾರೆ

ಸಂಪಾದಿ, ಮಂತ್ರಿ. ಅನುವಾದಿ, ಭೃತ್ಯ ವಿವಾದಿ, ವೈರಿ ಹೀಗೆ ಕರೆದಿದ್ದಾರೆ. ವಾದಿ ಸ್ವರಕ್ಕೆ ಅನುಕೂಲವಾಗಿ ಬರುತ್ತಿದೆ ಸಂವಾದಿ ಸ್ವರವು. ಅನುವಾದಿಯು ತಟಸ್ಥವಾಗಿ ಉಳಿಯುವದರಿಂದ ಭೃತ್ಯ (ಸೇವಕ) ಹೀಗೆ ಕರೆಯಿಸಿ ಕೊಂಡಿದೆ. ವಿವಾದಿಯು ರಾಗವನ್ನು ನಿರಸನಗೊಳಿಸುವದರಿಂದ ಶತ್ರುವೆಂದು ಕಲ್ಪಿಸಲಾಗಿದೆ. ರಾಗದಲ್ಲಿ ವಾದಿಯು ಒಳ್ಳೇ ಮಹತ್ವದ ಸ್ಥಾನವನ್ನು ಪಡೆದು ರಾಗವನ್ನು ಛಾಯೆ ಕೆಡದಂತೆ ನೋಡಿಕೊಳ್ಳುತ್ತಿದೆ. ವಾದಿ ಸ್ವರವು ಅದ ರಿಂದ ರಾಜನೆಂದು ಕರೆಯಲಾಗಿದೆ.

## ಗ್ರಹನ್ಯಾದಿಲಕ್ಷಣ (೯)

ಗೀತ ಪ್ರಾರಂಭ ಮಾಡುವ ಮುಂದೆ ಯಾವ ಸ್ವರದಿಂದ ಪ್ರಾರಂಭ ವಾಗುವದೋ ಅದಕ್ಕೆ ಗ್ರಹವೆಂದು ಅನ್ನುತ್ತಾರೆ. ಮತ್ತು ಯಾವಸ್ವರದಿಂದ ಗೀತ ಸಮಾಪ್ತವಾಗೋವದು, ಅದಕ್ಕೆ ನ್ಯಾಸವೆಂದು ಹೇಳಿದ್ದಾರೆ. ಯಾವ ರಾಗವು ಯಾವ ಸ್ವರದಿಂದ ಮುಗಿಯುವದೋ, ಅದಕ್ಕೆ ನ್ಯಾಸ ಸ್ವರವೆಂದು ಕರೆದಿದ್ದಾರೆ. ಅತ್ಯಂತ ಸಮಾಪ್ತಗೊಳಿಸುವ ಸ್ವರಕ್ಕೆ ಅಪನ್ಯಾಸ ಸ್ವರ ವೆಂದು ಕರೆದಿದ್ದಾರೆ.

## ವರ್ಣ ಲಕ್ಷಣ (೧೦)

ಗಾಯನ ಕ್ರಿಯೆಗೆ ವರ್ಣವೆಂದು ಹೇಳುತ್ತಾರೆ. ಇದರಲ್ಲಿ ನಾಲ್ಕು ಪ್ರಕಾರಗಳಿವೆ. ಸ್ಥಾಯಿ, ಆರೋಹಿ, ಅವರೋಹಿ, ಸಂಚಾರಿ, ಹೀಗೆ ಇರುತ್ತವೆ.

## ಅಲಂಕಾರ (೧೧)

ವಿಶೇಷ ವರ್ಣ ಸಮೂಹಕ್ಕೆ ಅಲಂಕಾರವೆಂದು ಹೇಳುತ್ತಾರೆ. ವಿದ್ವಾಂಸರು ಇದರಲ್ಲಿ ಭೇದಗಳನ್ನು ಅನೇಕ ರೀತಿಯಿಂದ ಮಾಡಿದ್ದಾರೆ. (೧) ಭದ್ರ (೨) ನಂದ (೩) ವಿಸ್ತೀರ್ಣ (೪) ನಿಕರ್ಷ (೫) ಅಭ್ಯುಚ್ಛ್ರಯ (೬) ತ್ರಿವರ್ಣ (೭) ಹಸಿತ (೮) ಗಾತ್ರವರ್ಣ (೯) ಆಕ್ಷಿಪ್ತ (೧೦) ಪ್ರೇಂಖಿತ (೧೧) ಪ್ರಸ್ತಾರ (೧೨) ಆಕ್ಷೇಪಕ (೧೩) ಪ್ರೆಂಬ (೧೪) ಶ್ಯೇನ (೧೫) ಹುಂಕಾರ (೧೬) ಕೋಗಿಲ (೧೭) ಸದಾನಂದ (೧೮) ಮಹಾವಜ್ರ (೧೯) ಜವ (೨೦) ಶಂಖ (೨೧) ಈ ರೀತಿ ೨೦ ಪ್ರಕಾರಗಳಾಗಿವೆ. ಅಲಂಕಾರ ಬಿಟ್ಟು ರಾಗ ವಿಸ್ತಾರವಾಗುವದಿಲ್ಲ ಈ ಅಲಂಕಾರಗಳನ್ನು ತಯಾರಗೊಳಿಸುವ ವೆಂದರೆ ಗಾಯಕನು ಸ್ವರ ಮತ್ತು ತಾಲಗಳಿಂದ ಪ್ರವೀಣನಾಗುತ್ತಾನೆ. ಅಲಂಕಾರವಿಲ್ಲದೆ ರಾಗ ಬೆಳಿಸುವದೆಂದರೆ ನೀರಿಲ್ಲದ ನದಿಯು ಪುಷ್ಪಗಳಿಲ್ಲದ

ಬಳ್ಳಿಯು ಶೋಭಿಸಲು ಸಾಧ್ಯವಿಲ್ಲವೊ ಹಾಗೆಯೇ ಗಾಯನದಲ್ಲಿ ಅಲಂಕಾರ ಗಳಿಲ್ಲದಿದ್ದರೆ ಅದು ಗಾಯನವೇ ಅಲ್ಲವೆಂದು ಪಂಡಿತರ ಮತವಾಗಿದೆ. ರಾಗ ಬೆಳಸಲು ಅಲಂಕಾರವು ಅಷ್ಟು ಮಹತ್ವದ ಸ್ಥಾನವನ್ನುಗಳಿಸಿದೆ.

## ಗಮಕ (೧೨)

ಸ್ವರದ ಕಂಪನಕ್ಕೆ ಗಮಕವೆನ್ನುತ್ತಾರೆ. ಕೇಳುವವರಿಗೆ ಆನಂದವ ನ್ನುಂಟು ಮಾಡುತ್ತದೆ. ಇದರಲ್ಲಿ ೧೫ ಪ್ರಕಾರಗಳಿವೆಯುಂದು ಭಾರತವೇ ಊ ದಲಾದವರ ಮತವಿದೆ. ೧) ತಿರಿಪ, ೨) ಸ್ಫುರಿತ ೩) ಕಂಪಿತ, ೪) ಲೀನ ೫) ಆಂದೋಲಿನಿತ, ೬) ವಲಿ, ೭) ತ್ರಿಭಿನ್ನ, ೮) ಕುರುಲ, ೯) ಆಹತ, ೧೦) ಉಲ್ಲಸಿತ ೧೧) ಪ್ಲಾವಿತ ೧೨)ಹುಂಪಿತ ೧೩)ಮುದ್ರಿತ ೧೪ ನಾಮಿತ ೧೫) ಮಿಶ್ರಿತ ಈ ರೀತಿ ಭೇದಗಳನ್ನು ಹೇಳಲಾಗಿತೆ.

## ಗ್ರಾಮ (೧೩)

ಶುದ್ಧ ಸ್ವರಗಳ ಸಮೂಹಕ್ಕೆ ಗ್ರಾಮವೆಂದು ಹೆಸರು. ಮೊದಲ್ಲಿನ ವರು ಷಡ್ಜಗ್ರಾಮವೆಂದು ಮತ್ತು ಮಧ್ಯಮ ಗಾಮವೆಂದು ಗಂಧಾರ, ಗ್ರಾಮ ಹೀಗೆ ಮೂರುಗ್ರಾಮವೆಂದು ಹೇಳಿದ್ದಾರೆ.

## ಮೂರ್ಛನಾ (೧೪)

ಕ್ರಮವಾಗಿ ಏಳುಸ್ವರಗಳಿಗೆ ಮತ್ತು ಆರೋಹ, ಅವರೋಹಕ್ಕೆ ಮೂರ್ಛನವೆಂದು ಹೇಳುತ್ತಾರೆ. ಇದು ಗ್ರಾಮಾಧೀನವಿದೆ.

## ಮೇಲ (೧೫) (ಥಾಟ)

ಮೂರ್ಛನಾ ಶಬ್ದದ ಪರ್ಯಾಯ ಮೇಲ ಮೂನಿಸಲ್ಪಡುತ್ತಿದೆ. ರಾಗಗಳನ್ನು ವ್ಯಕ್ತಗೊಳಿಸುವ ಶಕ್ತಿಯುಳ್ಳ ಸ್ವರ ಸಮೂಹಕ್ಕೆ ಮೇಲಿ ಬಂದ ಹೇಳುತ್ತಾರೆ. ಸಪ್ತಸ್ವರಗಳಿದ್ದ ಸಮೂಹಕ್ಕೆ ಸಂಪೂರ್ಣ ಮೇಲ ವೆಂದು ಹೇಳುತ್ತಾರೆ. ಶುದ್ಧ ಸ್ವರ ಮತ್ತು ವಿಕೃತ ಸ್ವರಗಳಿಂದ ೭೨ ಮೇಲ ಹೊರಟಿವೆ ಆದರೆ ಇವುಗಳಲ್ಲಿ ಕೆಲವೇ ಮಾತ್ರ ಪ್ರಚಾರದಲ್ಲಿವೆ. ಸಪ್ತ ಸ್ವರಗಳಿಂದ ಕೂಡಿದವುಗಳು. ಸಂಪೂರ್ಣ ಆರು ಸ್ವರಗಳಿಂದ ಕೂಡಿ ದವುಗಳು. ಷಾಢವಮೇಲ ಐದು ಸ್ವರಗಳಿಂದ ಕೂಡಿದವುಗಳು. ಔಢವ ಮೇಲೆ ಈ ಪ್ರಕಾರ ಮೇಲಗಳಿವೆ. ಐದು ಸ್ವರಗಳಿಗಿಂತಲೂ ಯಾವ ರಾಗಗಳೂ ಕಡಿಮೆ ಇರುವದಿಲ್ಲ ಆದರೆ ಕೆಲವು ರಾಗಗಳಲ್ಲಿ ಮೂರು

ಸ್ವರಗಳೂ ಹತ್ತದೆ ಇರಬಹುದು. ಈ ರೀತಿ ಕಂಡುಬರುತ್ತಗೆಯಾದರೂ ಸೌಜನ್ಯ ಸ್ವರಗಳಿಂದ ವಕ್ರಮಾರ್ಗವಾಗಿ ಬರುತ್ತವೆ. ಇಷ್ಟವೆ ಪ್ರಚಾರದಲ್ಲಿಲ್ಲ. ಕೆಲವು ರಾಗಗಳುಮಾತ್ರ ಪ್ರಸಿದ್ಧವಿವೆ.

### ರಾಗ ಲಕ್ಷಣ ೧೬

ಸ್ವರಗಳ ಸಮೂಹದಿಂದ ಜನರ ಮನಸ್ಸನ್ನು ಆನಂದವಾಗುವಂತೆ ಅನ್ನುವದಕ್ಕೆ ರಾಗವೆಂದು ಹೇಳುತ್ತಾರೆ. ಉಪಾಯದಿಂದ ಪ್ರಸ್ತಾರಮಾಡಿ ೭೨ ಮೇಲ (ಥಾಟ) ಹೊರಡಿಸಿದ್ದಾರೆ. ಕೆಲವು ಮಾತ್ರ ಪ್ರಸಿದ್ಧವಿವೆ. ಕೆಲವು ಅಪ್ರಸಿದ್ಧವಿವೆ. ಪ್ರಸಿದ್ಧವಿರುವವು ೧೦ ಮೇಲ (ಥಾಟ) ಮಾತ್ರ ಇರುತ್ತವೆ. ಮೇಲದ ಕ್ರಮದಿಂದ ವರ್ಣವೆಂದು ಹೇಳುತ್ತಾರೆ.

### ಜನಕಮೇಲ

ಎಲ್ಲಮೇಲ (ಥಾಟ) ಗಳಲ್ಲಿ ಪ್ರಥಮಮೇಲ, ಬೇಲಾವಲಿ (ಬಿಲಾವಲ) ಮೇಲ (೨) ಕಲ್ಯಾಣ (೩) ಖಮಾಚ (೪) ಭೈರವ (೫) ಪೂರ್ವಿ (೬) ಮಾರವಾ (೭) ಕಾಫಿ (೮) ಆಸಾವರೀ (೯) ಭೈರವಿ (೧೦) ತೋಡಿ ಇವು ೧೦ ಮೇಲ.

### ಮೇಲಸ್ವರ ನಿರೂಪಣ

ಏಳು ಸ್ವರಗಳಿಂದ ಕೂಡಿದೆ ಬಿಲಾವಲ (ಬೆಲಾವಲಿ) ಆದೇ ಬೇಲಾವಲಿಯಲ್ಲಿ ಕೋಮಲ ಮಧ್ಯಮ ಬಿಟ್ಟು. ತೀವ್ರ ಮಧ್ಯಮ ಹಚ್ಚಿದರೆ ಕಲ್ಯಾಣಿ (ಕಲ್ಯಾಣ) ರಾಗವಾಗುತ್ತದೆ. ಬಿಲಾವಲದಲ್ಲಿ ಏಳು ಸ್ವರಗಳಲ್ಲಿ ನಿಷಧ ಕೋಮಲವಾದರೆ ಖಮಾಚ. ಬಿಲಾವಲದಲ್ಲಿ ರಿ, ಧಾ ಕೋಮಲವಾದರೆ ಭೈರವ, ಭೈರವದಲ್ಲಿ ಮ, ಸ್ವರ ಬಂದು ತೀವ್ರ ತೆಗೆದುಕೊಂಡರೆ ಪೂರ್ವಿಯಲ್ಲಿ ಧೈವತ ತೀವ್ರ ಮಾಡಿದರೆ ಮಾರವಾ. ಬಿಲಾವಲದಲ್ಲಿ ನಿ, ಗ, ಕೋಮಲ ಹಚ್ಚಿದರೆ ಕಾಫಿ. ಕಾಫಿಯಲ್ಲಿ ಕೋಮಲ ಧೈವತವೊಂದು ಹಚ್ಚಿದರೆ ಆಸಾವರೀ. ಆಸಾವರಿಯಲ್ಲಿ ಋಷಭ ಕೋಮಲ ಹಚ್ಚಿದರೆ ಭೈರವಿ. ಭೈರವಿಯಲ್ಲಿ ಮ, ನಿ, ತೀವ್ರ ಹಚ್ಚಿದರೆ ತೋಡಿ ಈ ರೀತಿ ನಿರೂಪಣವಾಗಿದೆ.

### ಆಲಾಪ ಲಕ್ಷಣ

ಗ್ರಹ, ಅಂಶ, ಮಂದ್ರ, ತಾರ, ನ್ಯಾಸ, ಅಪನ್ಯಾಸ, ಅಲ್ಪತ್ವ ಬಹುತ್ವ ಷಾಡವ, ಔಡವ ಇವುಗಳಿಂದ ಕೂಡಿದ್ದಕ್ಕೆ ಆಲಾಪವೆಂದು ಹೆಸರು. ಇದರಲ್ಲಿ ಎರಡು ಪ್ರಕಾರಗಳಿವೆ (೧) ರಾಗಾಲಾಪ, (೨) ರೂಪಕಾಲಾಪರಾಗಾ

ಲಾಪ ತಲ್ಲೀನತೆಯಲ್ಲಿರುವದು. ರೂಪಕಾಲಾಪ ಗೀತೆಯಿಂದ ಕೂಡಿರುವ ದಂದ ಅರ್ಥದ ಭಾವಕ್ಕೆ ತಕ್ಕಂತೆಬರುತ್ತದೆ.

## ಸುಗಾಯಕ ಲಕ್ಷಣ

ಅಭ್ಯಾಸ ಶತ್ವರನು ತನ್ನ ಕಂಠವು ಗಾಯನದಲ್ಲಿ ತನ್ನ ಸ್ವಾಧೀನದಲ್ಲಿದ್ದವನು. ಲಯದಲ್ಲಿ ಪ್ರವೀಣನು ರಾಗ ರಾಗಿಣಿಗಳ ತತ್ವಬಲ್ಲವನು. ನಾನಾರೀತಿಯ ರಾಗಾಲಾಪನೆ ತೋರಿಸಬಲ್ಲವನು ಮೂರೂ ಸಪ್ತಕದಲ್ಲಿಯೂ ಗಮಕ ತೋರಿಸಬಲ್ಲವನು ತಾಲಗಳ ಯಾವತ್ತೂ ಶಾಸ್ತ್ರಬಲ್ಲವನು. ಗ್ರಹ ಮೋಕ್ಷ (ತ್ಯಾಗ-ನ್ಯಾಸ) ಬಲ್ಲವನು. ಗುರುಸಂಪ್ರದಾಯ ಕಾಯ್ದುಕೊಂಡು ಬರಬಲ್ಲವನು. ಅಂದರೆ ಉಚ್ಚ ಶ್ರೇಣಿಯ ಸಂಗೀತ ಶಾಸ್ತ್ರಬಲ್ಲವನು. ಉತ್ತಮ ಸ್ವರ ಸಾಧನೆಯುಳ್ಳವ. ಯಾವ ರಾಗವಾದರೂ ಅದನ್ನು ಶಾಸ್ತ್ರ ಸಮ್ಮತ ರೀತಿಯಲ್ಲಿ ಶ್ರೋತೃಗಳಿಗೆ ಆನಂದವಾಗುವಂತೆ ಇಂಪಾಗಿ ಹಾಡಿ ತೋರಿಸಬಲ್ಲವ, ಯಾವರಾಗ ಗಂಭೀರದಿಂದ ಅನ್ನಬೇಕು, ಮೃದುಮಧುರವಾಗಿ ಹೇಳಬೇಕು, ಯಾವರಾಗ ಯಾವರಸದ ರಾಗವೆಂದು ಆ ರಸವನ್ನೇ ವ್ಯಕ್ತಗೊಳಿಸುವಂತೆ ಭಾವಪ್ರಧಾನವಾಗಿ ಅನ್ನಬಲ್ಲವ.

ತನ್ನ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಏಕಾಗ್ರಚಿತ್ತದಿಂದ ರಾಗಗಳ ಮುಖ್ಯ ಅಂಗಸ್ವರವನ್ನು ಸ್ಪಷ್ಟಪಡಿಸಬಲ್ಲವ, ಅತಿಶಯ ಕುಶಲನಾದರೂ ಗರ್ವರಹಿತನಾದವ, ಗಾಯಕರನ್ನು ನಿಂದಿಸಲು ಆಸ್ಪದಕೊಡದವ, ಇವೆಲ್ಲ ಲಕ್ಷಣಗಳಿಂದ ಕೂಡಿದ ಗಾಯಕನು ಅಗ್ರಗಣ್ಯ, ಸುಗಾಯಕನು.

## ದುರ್ಗಾಯಕ ಲಕ್ಷಣ

ವಾಣಿಯ ಕಂಪನವುಳ್ಳವನು, ಸಂಶಯಯುತ ಗಾನಮಾಡುವವನು. ಹೆದರುತ್ತ ಹೇಳುವವನು. ನೆಲಕ್ಕೆ ಬಡೆದು ತೊಡೆಗೆ ಬಡೆದುಕೊಂಡು ಸ್ವರ ಹೊರಡಿಸುವವನು. ಮುಖ ಗಂಟಿಕ್ಕಿ ಚೀರಧ್ವನಿಯಲ್ಲಿ ಗಾಯನ ಮಾಡುವವನು, ರಸಹೀನನು, ನಾಸಿಕದಲ್ಲಿ ಅಕ್ಷರ ಹೊರಡಿಸುವವನು, ಗಾಯಕರ ನಿಂದೆಮಾಡುವವನು, ಸಂಗೀತ ಶಾಸ್ತ್ರ ಪರಿಚಯವಿಲ್ಲದವನು, ಗಾಯನದಲ್ಲಿ ವಾದನದವರಿಗೆ ಕಠೋರ ದೃಷ್ಟಿಯಿಂದ ನೋಡಿ ರಾಗದಲ್ಲಿ ರಸಹೀನತೆಯನ್ನು ತಂದೊಡ್ಡುವವನು, ಕಣ್ಣುಮುಚ್ಚಿ ಗಾಯನಮಾಡುವವನು. ತಾಳತಪ್ಪಿ ಗಾಯನಮಾಡುವವನು, ಒಂದು ರಾಗದಲ್ಲಿ

ಮತ್ತೊಂದು ರಾಗವನ್ನು ಮಿಶ್ರಮಾಡಿ ಗಾಯನಮಾಡುವವನು, ಗೀತೆಯ ಅಕ್ಷರಗಳನ್ನು ಸ್ಪಷ್ಟ ಉಚ್ಚರಿಸದವನು, ಧ್ವನಿಯ ಸ್ಥಾನದಿಂದ ಚ್ಯುತ ನಾದ ಸ್ವರವುಳ್ಳವನು, ಪೂರ್ವ ತಯಾರಿಇಲ್ಲದೆ ಗಾಯನಮಾಡುವವನು ಅಪಸ್ವರವುಳ್ಳವನು, ಬಾಯಲ್ಲಿ ಏನಾದರೂ ತೊಂಬಲ ತುಂಬಿಕೊಂಡು ಗಾಯನಮಾಡುವವನು, ರಾಗಗಳ ಸಶಾಸ್ತ್ರೀಯ ಪದ್ಧತಿ ಪರಿಚಯವಿಲ್ಲದೆ ವೇಳೆಯಲ್ಲದ ಅವೇಳೆಯಲ್ಲಿಯ ರಾಗಗಳನ್ನು ಅನ್ನಾವವನು. ಇವುಗಳ ಲಕ್ಷಣದಿಂದ ಕೂಡಿದವನು, ದುರ್ಗಾಯಕನು.

## ಶಾರೀರ

ನಿತ್ಯ ಅಭ್ಯಾಸವಿಲ್ಲದಿದ್ದರೂ ಯಾವ ರಾಗವನ್ನಾದರೂ ಯೋಗ್ಯ ರೀತಿ ಸವಿಸ್ತಾರಗೊಳಿಸುವ ಶಕ್ತಿಗೆ ಶಾರೀರವೆಂದು ಹೇಳುತ್ತಾರೆ. ಈ ಶಾರೀರದ ಉತ್ಪತ್ತಿಯಿಂದ ಘನ ಚಿಕನಾ, ಕಾಂತಿ, ಅನುರಕ್ತಿ, ಮಧುರತಾ, ಮೃದುತ್ವ, ಗಂಭೀರ್ಯ, ಇವೇ ಮೊದಲಾದವುಗಳಿಂದ ಕೂಡಿದ್ದಕ್ಕೆ ಸುಶಾರೀರವೆಂದು ಹೇಳುತ್ತಾರೆ. ಸಾರಹೀನತಾ, ಅಪಸ್ವರತಾ, ಕೃಶತಾ, ಕರ್ಕಶತಾ, ರಾಗದಲ್ಲಿ ತಲ್ಲೀನತೆಯಿಲ್ಲದಿರುವಿಕೆ ಇವೇ ಮೊದಲಾದ ದುರ್ಗುಣಗಳಿಂದ ಕೂಡಿದ್ದಕ್ಕೆ ಕುಶಾರೀರವೆಂದು ಕರೆದಿದ್ದಾರೆ.



# “ ಮಾನವೀಯತೆಗೆ ನೈತಿಕತೆಯೇ ಮೂಲ ”

(ಲೇಖಕರು:— ಕೆ. ಎಮ್. ಪಾಟೀಲ. ಕಾಡಶೆಟ್ಟಿಹಳ್ಳಿ)

ಮಾನವೀಯತೆ:— “ ಮಾನವನು ಪಶುಪಕ್ಷಿಗಳಂತೆ ಪ್ರಾಣಿವರ್ಗದಲ್ಲಿ ಸೇರಿದ್ದರೂ ತನ್ನ ಶ್ರೇಷ್ಠ ಜನ್ಮಕ್ಕನುಸರಿಸಿ ಬುದ್ಧಿವಿಶೇಷದಿಂದ ಉತ್ತಮ ಮನುಷ್ಯನಾಗಿ ಜೀವಿಸುವದೇ ಮಾನವೀಯತೆ.

ಮಾನವನೂ ಬದುಕುತ್ತಾನೆ, ಪ್ರಾಣಿಗಳೂ ಬದುಕುತ್ತವೆ. ಉಳಿದ ಪ್ರಾಣಿಗಳಿಗೂ ಧ್ಯೇಯವಿದೆ- ಆದರೆ ಬದುಕುವದೊಂದೇ ಧ್ಯೇಯವಾದವುಗಳಿಗೆ ಆದರ್ಶದ ಹಾದಿ ಇನ್ನೆಲ್ಲಿ? ಬದುಕುವದಕ್ಕೋಸ್ಕರ ಅವುಗಳು ಏನನ್ನು ಮಾಡಲು ಹಿಂಜರಿಯುವವು! ಅದು ಹೃದಯವಿಲ್ಲದವರ ಮಾತಾಯಿತು. ಆದರೆ ಮಾನವನಿಗೆ ಹೃದಯವಿದೆ, ಆತ್ಮವಿದೆ. ಆದುದರಿಂದಲೇ ಅವನ ಜೀವನ ಆದರ್ಶವುಳ್ಳದ್ದೂ, ಮೇಲ್ಪಂಕ್ತಿಯನ್ನು ಹಾಕಿಕೊಡುವಂಥದೂ ಇರಲೇಬೇಕು. ಅದಕ್ಕಾಗಿ ಮನುಷ್ಯನಿಗೆ ಮುಖ್ಯವಾಗಿ ಇರಬೇಕಾದುದೇ ನೀತಿಯ ಮಟ್ಟ.

ಮನುಷ್ಯನು ಏಕೆಂದು ಹೋಗುವೆ? ಏನೆಂದು ಬಗವೆ? ಬಂದುದೆಲ್ಲಿಂದ? ಸಾಗುವುದೆಲ್ಲಿಗೆ? ಎಂಬುದನ್ನು ಅರಿತು ಜೀವಿಸುವದೇ ಮಾನವೀಯತೆ.

ಜೀವನಕ್ಕೆ ಅನ್ನ, ಬಟ್ಟೆ, ನೀರು, ಹವೆ, ಅವಶ್ಯವಿರುವಂತೆ ಸದ್ಗುಣಗಳೂ ಅತ್ಯವಶ್ಯ. ಸತ್ಯ, ಹಿಂಸೆ, ಪ್ರೇಮ, ದಯಾ, ಪರೋಪಕಾರ. ಮೊದಲಾದ ಗುಣಗಳೇ ಮನುಷ್ಯನನ್ನು ಪಶುವರ್ಗದಿಂದ ಮಾನವೀಯತೆಗೆ ಎತ್ತರಿಸಬಲ್ಲವು.

“ಮಾನವನು ತಾನು ಬದುಕಬೇಕು ಮತ್ತು ಉಳಿದವರನ್ನು ಬದುಕಿಸಗೊಡಬೇಕು.” ಈ ಭಾವನೆ ಅವನಲ್ಲಿ ಉದ್ಭವಿಸುವದಕ್ಕೆ ನೀತಿಯೇ ಮಾನವನ ಧ್ಯೇಯವಾಗಿರಬೇಡವೇ? ಈ ಜೀವವು (ಅಂಗವು) ಪರಮಾತ್ಮನಲ್ಲಿ (ಲಿಂಗದಲ್ಲಿ) ಐಕ್ಯ ಹೊಂದಿದ ಮೇಲೆ ಈ ಜಗತ್ತಿನಲ್ಲಿ ಉಳಿಯುವವು ಕೀರ್ತಿ, ಅಪಕೀರ್ತಿಗಳಷ್ಟೇ. ಮೃತ್ಯುಲೋಕದಲ್ಲಿ ಕೇವಲ ನ್ಯಾಯದ ಕೃತಿಗಳು ಮಾತ್ರ ತಮ್ಮ ಮುಂದಿನಲ್ಲಿಯೂ ಸಹ ಸಮರಸಹೊಂದಿ ಅರಳ

ಸುವಾಸನೆಯನ್ನು ಬೀರುತ್ತವೆ. ಈ ವಿಚಾರವನ್ನು ಜಾನ್ ಶರ್ಲೀ ಎಂಬ ಆಂಗ್ಲ ಕವಿಯು ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

"Only the actions of the just
Smell sweet and blossom in their dust"

ಅನೀತಿಯಿಂದ ಮಾನವನ ಅವನತಿಯಾಗುತ್ತಿದೆ ಮತ್ತು ಮಾನವೀಯತೆಯ ಅವಹೇಳನವಾಗುತ್ತಿದೆ. ಅನೀತಿಯಿಂದಲೇ ಮಾನವನು ಭವರೋಗಿಯಾಗುತ್ತಾನೆ. ತನ್ನ ಬ್ರಹ್ಮರಂಧ್ರದಲ್ಲಿರುವ ಚಿತ್‌ಶಕ್ತಿಯೇ ಇಷ್ಟಲಿಂಗವೆಂಬುದನ್ನು ಮರೆತು ಐಹಿಕ ವಿಷಯ ಭೋಗದಲ್ಲಿ ಸಿಲುಕಿ ಜೇಡನ ಬಲೆಯಲ್ಲಿ ಸಿಲುಕಿಕೊಂಡ ಕ್ರಿಮಿಯಂತೆ ತೊಳಲಾಡುತ್ತಾನೆ. ಇದೆಲ್ಲಕ್ಕೂ ಅನೀತಿಯೇ ಮೂಲ ಬೀಜ. ಅನೀತಿಯಿಂದಲೇ ರಾವಣ ಮೊದಲಾದ ಅರಸರು ತಮ್ಮ ದೈವೀಬಲವನ್ನು ಸಹ ಕಳೆದುಕೊಂಡರು. ರಾವಣನು ಪರಮಾತ್ಮನನ್ನು ಪ್ರತ್ಯಕ್ಷ ಮಾಡಿಕೊಂಡು ಅವನ ಇಷ್ಟಲಿಂಗವನ್ನೇ ಪಡೆದಿದ್ದಿಲ್ಲವೇ? ಅದರೆ ಸೀತೆಯಮೇಲೆ ಮಾಡಿದ ಅತ್ಯಾಚಾರದಿಂದ ಅವನ ತಪಃ ಪ್ರಭಾವವೆಲ್ಲವೂ ಕೊಳೆಯಲ್ಲಿ ಹೋಮ ಮಾಡಿದಂತಾಯಿತು.

ನೀತಿಯಿಂದ ವ್ಯಕ್ತಿ ಮತ್ತು ರಾಷ್ಟ್ರಗಳ ಹಿತವಾಗುತ್ತದೆ. ಕೀರ್ತಿಗೌರವಗಳು ದೊರೆಯುತ್ತಿವೆ. ಓರ್ವ ಮುಂದಾಳು ಒಳ್ಳೇ ನೀತಿಯಿಂದ ನಡೆದರೆ ಅವನ ಅನುಯಾಯಿಗಳು ಅವನನ್ನು ಹಿಂಬಾಲಿಸುತ್ತಾರೆ. ಆಗ ಅವರೆಲ್ಲರ ಏಳಿಗೆಯಾಗುವದಲ್ಲದೆ ಇಡೀ ರಾಷ್ಟ್ರದ ಏಳಿಗೆಯಾಗುತ್ತಿದೆ. ರಸ್ಕಿನ್ ಎಂಬ ಆಂಗ್ಲ ಕವಿಯು ಮೇಲಿನ ಮಾತಿಗೆ ಬೆಂಬಲಕೊಡುವಂತೆ, "Even states have destiny." ಎಂದು ಹೇಳಿದ್ದಾನೆ. ಮಹಾತ್ಮಾ ಗಾಂಧಿ, ಪಂ. ನೆಹರು ಮೊದಲಾದವರು ನೀತಿಯಿಂದಲೇ ನಡೆದು ಜನರನ್ನು ನಡೆಗೆ "ಹಿಂದುಸ್ಥಾನಕ್ಕೆ ಸ್ವರಾಜ್ಯ ಸಿಗುವದೆಂದರೆ ಕನಸಿನಲ್ಲಿಯೇ" ಎಂದು ಹೇಳಿದ ಸ್ವಾರ್ಥಿಗಳ ಹಣೆಯಮೇಲೆ ಸುಣ್ಣದ ಬೊಟ್ಟನ್ನಿಟ್ಟರು. ಮತ್ತು "ರಾಷ್ಟ್ರಪಿತ" ರೆಂದು ಹೊಗಳಿಸಿಕೊಂಡರು.

ನೀತಿಯೇ ಸುಖಜೀವನದ ನೆಲೆಗಟ್ಟು. ಮಾನವನು ಜ್ಞಾನಿಯಾಗಬೇಕಾದರೆ ಧರ್ಮಿಯಾಗಬೇಕಾದರೆ. ನೀತಿಯೇ ನೆಲೆಗಟ್ಟು. ನೀತಿಗಳೇ ಸಾಮಾನ್ಯ ಧರ್ಮವೆಂದು ತಿಳಿಯಲ್ಪಟ್ಟಿವೆ. ಯೋಗಮಾರ್ಗದಿಂದ ಆ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡು ತಾನೇ ಪರಮಾತ್ಮನಾಗಿ ಉಳಿಯುವದು ವಿಶೇಷಧರ್ಮವೆಂಬ ಕಟ್ಟಡಕ್ಕೆ ಸಾಮಾನ್ಯ ಧರ್ಮವೇ ನೆಲೆಗಟ್ಟು.

ಮನುಷ್ಯನು ಕಡುಬಡತನವಿರಲಿ, ಸದ್ಗುಣಗಳಿದ್ದರೆ ಲೋಕದ ಪ್ರೀತಿಗೂ ಪಾತ್ರನಾಗುತ್ತಾನೆ. ಬೇಕಾದಷ್ಟು ಧನವಿರಲಿ, ಅವನಲ್ಲಿ ಸದ್ಗುಣ, ಸತ್ಕ್ರಿಯೆಗಳಿಲ್ಲದಿದ್ದರೆ ಯಾವ ಪ್ರೀತಿಗೂ ಪಾತ್ರನಾಗುವದಿಲ್ಲ. ಆದ್ದರಿಂದ ಚೂಡಾರತ್ನ ಕವಿಗಳು ತಮ್ಮ ಪದ್ಯದಲ್ಲಿ " ಅವಗುಣಿಗಳ ಸಿರಿಪಂತಿಕೆಗಿಂತ ಗುಣಿಗಳ ಬಡತನವೇ ಲೇಸು " ಎಂದು ಹೇಳಿದ್ದಾರೆ.

ದಯವಿಲ್ಲದ ಧರ್ಮವದೇವುದಯ್ಯ
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ

ಮಹಾತ್ಮಾ ಬಸವಣ್ಣನವರು ತಮ್ಮ ವಚನದಲ್ಲಿ "ದಯೆ"ಗೆ ಎಷ್ಟು ಮಹತ್ವ ಕೊಟ್ಟಿದ್ದಾರೆಂಬುದು ತಿಳಿಯುತ್ತದೆ. ಸಚೇತನ ಪ್ರಾಣಿಗಳೆಲ್ಲಕ್ಕೂ ದಯೆ ಬೇಕು. ದಯೆ ಇರದಿದ್ದರೆ ಅವು ಪ್ರಾಣಿಯಲ್ಲ. ದಯವೇ ಧರ್ಮದ ತಳಹದಿ. ದಯೆ ಇಲ್ಲದ ಧರ್ಮವು ಈ ಸೃಷ್ಟಿಯಲ್ಲಿ ಯಾವದೂ ಇಲ್ಲ ಆದುದರಿಂದ ಮಾನವನು ಸದ್ಗುಣಗಳಿಂದ ಪರಿಶುದ್ಧವುಳ್ಳವನಾಗಿ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು.

ಮಾನವನು ಕೇವಲ ಈ ಪ್ರಪಂಚದ ಜಂಜಾಟವನ್ನು ಹಚ್ಚಿಕೊಂಡು, ಅರಿ ಷಡ್ವರ್ಗಗಳ ಬೆನ್ನುಹತ್ತಿ ತನ್ನ ಆದರ್ಶವನ್ನು ಬಿಟ್ಟು, ನೀತಿಮಾರ್ಗವನ್ನು ತ್ಯಜಿಸಿ ಭೋಗ ವಿಲಾಸಗಳಲ್ಲಿ ತೊಡಗಿದರೆ ಅವನ ಧರ್ಮವೆಲ್ಲಿ ಉಳಿಯಿತು ? ಕೇವಲ ವಿಷಯ ಲಂಪಟಕ್ಕೂ ನೀತಿಯ ಹೆಚ್ಚಳಕ್ಕೂ ಎಲ್ಲಿಯ ಸಾಟಿ ?

ಅಂಗನು ಲಿಂಗದ ಸಮರಸವನ್ನು ಅಪೇಕ್ಷಿಸುತ್ತಿದ್ದರೆ ಕೂಸಿನಂತೆ ಸರಳ ಜೀವಿಯಾಗಿರಬೇಕು. ಜನನದಾರಭ್ಯ ಮರಣಾಂತ್ಯದವರೆಗೂ ಸರಳ ಜೀವಿಯಾಗಿದ್ದು, ದಯಾಪೂರಿತನಾಗಿದ್ದರೆ ಮಾತ್ರ ಅಂಗಲಿಂಗದ ಸಮರಸವಾಗುತ್ತದೆ. ಆಂಗ್ಲ ತತ್ವಜ್ಞಾನಿ ರಸ್ಕಿನ್ನನು, "You were born a child. Therefore live a child, and die a child ಎಂದು ಹೇಳಿದ್ದಾನೆ. ಯಾವ ಧರ್ಮದಲ್ಲಿಯೇ ಆಗಲಿ ನೀತಿ ಮತ್ತು ಸರಳತೆಗೆ ಮನ್ನಣೆಯಿದೆ. ಪರರನ್ನು ಮೋಸಗೊಳಿಸದಂತೆ ಮತ್ತು ಅವರ ಜೀವನದಲ್ಲಿ ತೊಂದರೆಯನ್ನು ಮಾಡದಂತೆ ಇರುವುದೆ ಸರಳ ಜೀವನ.

ಮನೆಗೆ ಬಂದ ಅತಿಥಿಗಳಿಗೆ ಷೋಡಶೋಪಚಾರಗಳಿಂದ ಸತ್ಕಾರ ಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಅಷ್ಟಿಲ್ಲದರಿಂದ ಸತ್ಕರಿಸಲು ಯೋಗ್ಯತೆ ಇಲ್ಲದಿದ್ದರೆ ಕೇವಲ ವಿನಯದ ಮಾತುಗಳಿಂದಲಾದರೂ ಸತ್ಕರಿಸಿರೆಂದು ಮಹಾತ್ಮಾ ಬಸವೇಶ್ವರರು ತಮ್ಮ ಮಧುರ ವಾಣಿಯಿಂದ ಅಪ್ಪಣೆ ಕೊಡಿಸಿದ್ದಾರೆ. "ಏನಿ, ಬಂದಿರಿ, ಹದುಳವಿದ್ದಿರಿ, ಎಂದರೆ ನಿಮ್ಮ ವೈಸಿರಿ ಹಾರಿ ಹೋಹುದೆ?" ಎಂದು ಚುಚ್ಚಿಮಾತನಾಡಿ ಬಡಿದೆಬ್ಬಿಸುತ್ತಲಿದ್ದಾರೆ. ಇಷ್ಟನ್ನಾದರೂ ನೆನಪಿನಲ್ಲಿಡುವದು ಮಾನವನ ಕರ್ತವ್ಯ.

"ಅಹಿಂಸೋ ಪರಮೋಧರ್ಮಃ" ಎಂಬ ವೇದಗಳ ಉಕ್ತಿಯನ್ನು ಮರೆತು ಹಿಂಸೆಯ ನೀಚ ಕೃತ್ಯಗಳಲ್ಲಿ ತೊಡಗಿ ಆತ್ಮವಿನಾಶವನ್ನು ಮಾಡಿಕೊಳ್ಳುವದು ಎಂತಹ ಹೇಯವಾದುದು! ಎಲ್ಲಿ ನೋಡಿದಲ್ಲಿ ಹಿಂಸೆ, ಕೊಲೆ ಸುಲಿಗೆ, ಪರಸ್ತ್ರೀ ಅಪಹರಣ ಇವೆಲ್ಲವೂ ಜಗತ್ತಿನ ವಿಕಾಸಕ್ಕಾಗಿ ಮುನ್ನೆಜ್ಜೆ ಇಡುತ್ತಲಿವೆ. ರಾಷ್ಟ್ರ ರಾಷ್ಟ್ರಗಳಲ್ಲಿ ಯುದ್ಧ ಕೋಟಿಗಟ್ಟಲೆ ಮಾನವ ಪ್ರಾಣಿಯ ಕೊಲೆ ಹಿಂಸೆ, ಮಾನವನನ್ನು ಕೊಲ್ಲುವದು. ದೊಡ್ಡ ಮೀನು ಸಣ್ಣಮೀನು ತಿನ್ನುವಂತೆ! ನಾಗಿಣಿಯು ತನ್ನ ತತ್ತಿಗಳನ್ನೇ ತಿಂದು ತೇಗುವಂತೆ! ಬುದ್ಧಿ, ಆತ್ಮ, ದಯೆಯುಳ್ಳ ಮಾನವನು ಹೀಗೆ ಮಾಡುವುದೆ? ಇದು ನೀತಿಯೇ? ಬುದ್ಧಿಯುಳ್ಳ ಪ್ರಾಣಿಗೆ ಇದು ಒಳ್ಳೆಯದೇ? ಬುದ್ಧಿಯಿಲ್ಲದ ಪ್ರಾಣಿಗಳು ಹಾಗೆ ಮಾಡುತ್ತವೆ. ಮಾಡಲಿ. ಆದರೆ ಬುದ್ಧಿಯಿದ್ದ ಅದಕ್ಕೂ ಹೆಚ್ಚಿನದಾದ ಆತ್ಮವಿದ್ದ ಮಾನವನೂ ಹೀಗೆ ಮಾಡುವದೇ? ಅದಕ್ಕೆಂದಲೇ ನೀತಿಯು ಮಾನವನಿಗೆ ಅತ್ಯವಶ್ಯ. ಇಲ್ಲದೇ ಹೋದರೆ ಅವನಿಗೂ ಬುದ್ಧಿಯಿಲ್ಲದ ಇತರ ಪ್ರಾಣಿಗಳಿಗೂ ಭೇದವೇನು?

ಪ್ರತಿಯೊಂದರಲ್ಲಿಯೂ ನೀತಿಯೇ ಮೇಲು. ನೀತಿಯೇ ಸರ್ವಸ್ವ. ನೀತಿಯೇ ಮಾನವೀಯತೆಯ ಮೂಲ ತಳಹದಿ.

# ಮಹಾನುಭಾವಿ ಬಸವಣ್ಣನವರು.

(ಲೇಖಕರು:— ಶ್ರೀ ಶಂಕರ ತಡಸ, ಧಾರವಾಡ.)

(ಹಿಂದಿನ ಸಂಚಿಕೆಯಿಂದ ಬಂದದ್ದು)

---

ಮಹಾಮನೆಗೆ ಬಂದ ಶರಣ ಸಮೂಹ ಬಸವಣ್ಣನವರ ಭಕ್ತಿಯ ವಿನಯ ಸಂಪನ್ನತೆಗೆ ದಾಸೋಹಂಭಾವಕ್ಕೆ ತಲೆದೂಗಿ ಮನಮೆಚ್ಚಿ ಬಸವ ರಾಜ ನಿಮ್ಮ ಗುಣಂಗಳ ಬಣ್ಣಿಸಲು ಎನ್ನಳವೇ ? ಈಶನ ಮೀಸಲಪ್ಪ ಭಕ್ತ. ನಿನಗೆ ಎಣೆಇಲ್ಲ ಪಡಿಇಲ್ಲ. ವಾಸಟೆಯಾವದು? ಎಂದು ಹಾಡಿ ಹಂಸಿರಬೇಕು. ಇದು ಬಸವಣ್ಣನವರಿಗೆ ತೀವ್ರ ಅಸಮಾಧಾನಕ್ಕೆ ಗುರಿ ಮಾಡಿದೆ. ಶರಣರ ಹೊಗಳಿಕೆಗೆ ಮೈಯುಂಡಿತಲ್ಲ ? "ಹೊಗಳಿ ಹೊಗಳಿ ಹೊನ್ನ ಶೂಲಕ್ಕೆ ಇಕ್ಕುವರು. ನಿಜವಾಗಿ ನೋಡಿದರೆ ಅವರ ಭಕ್ತಿ ಸಾಸುವೆಯ ಷಡ್ಭಾಗದಷ್ಟಿಲ್ಲ" ಎಂದು ಭಾವಿಸುವರು. ಎನ್ನ ಶಿವ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬರು ! ಅಯ್ಯೋ ನೊಂದೆನು, ನೊಂದೆನು ಹೊಗಳಿಕೆಗೆ ಅಡ್ಡಬಾರಾ ಪ್ರೇಮಿ," ಎಂದು ಮರೆಹೋಗುವರು. ಹೊಗಳಿಕೆಗೆ ಹರುಷಗೊಂಡು ಜಂಬದ ಕೋಳಿಯ ರೀತಿಯಂತೆ ನಡೆಯದ ಸ್ಥಿರ ಪ್ರಜ್ಞತೆಯನ್ನು ಕಾಯ್ದುಕೊಂಡಿದ್ದಾರೆ. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಹಿರಿಯಭಾವನೆ ಅವರಲ್ಲಿ ತುಂಬಿ ಕೊಂಡಿದೆ.

ಜಂಗಮರಲ್ಲಿ ಜಾತಿಯನರಸದ ಬಸವಣ್ಣನವರು ಉತ್ತಮ ಕುಲ ದಲ್ಲಿ ಹುಟ್ಟಿದವರೆಂಬ ಹೊಲ್ಲದ ಹೊರೆಯ ಹೊರಿಸಿದುದ ಕಂಡು ಬಸವಣ್ಣ ನವರ ಮನ ಅತಿ ಘಾಸಿಯಾಗಿದೆ. ಹುಣ್ಣು ಕಿವಿಚಿದಷ್ಟು ವೇದನೆಯಾ ಗಿದೆ. ಡೋಹರನೆಂಬೆನೆ, ಕಕ್ಕಯ್ಯ? ಸೆಟ್ಟಿ ನಂಬೆನೆ ಸಿರಿಯಾಳನ; ಮಡಿವಳನೆಂಬೆನೆ ಮಾಚಯ್ಯನ? ಆನು ಹಾರುವನೆಂದರೆ ಕೂಡಲಸಂಗಮದೇವ ನಗುವ ಎಂದು ಮಾರ್ಮಿಕವಾಗಿ ನೊಂದಮನದಿಂದ ನುಡಿದಿದ್ದಾರೆ. ಡೋಹರ ಕಕ್ಕಯ್ಯ ,ದಾಸಯ್ಯ ಮುತ್ತಯ್ಯ, ಚನ್ನಯ್ಯಗಳು ಉನ್ನತದ ಮಹಿಮರು. ಅವರ ಕರುಣೆಯ ಕಂದ ಈ ಬಾಲಬಸವ. ಡೋಹರ ಕಕ್ಕಯ್ಯನು ಅಪ್ಪಯ್ಯನಾಗಬೇಕು. ಚನ್ನಯ್ಯನು ಮುತ್ತಯ್ಯನಾಗಬೇಕು. ಚಿಕ್ಕಯ್ಯನು ಅವ್ವಯ್ಯನಾಗಬೇಕು. ಬಾಲಬಸವನ ತಾಯಿ ನಿಂಬವ್ವೆ

ನೀರನೆರೆದುಂಬುವಳು. ಅಕ್ಕ ಕಂಚಿಯಲ್ಲಿ ಬಾಣಸವಣವಮಾಡುವಳು. ಇವರೆಲ್ಲ ಒಲಿದು ಬಾಲಬಸವನನ್ನು ಸಲಹುವರು. ಶ್ವಪಚಯ್ಯನಯ್ಯನ ಸನ್ನಿಧಿಯಲ್ಲಿ ಬಾಲಬಸವ ಭಕ್ತಿಸದ್ಗುಣಗಳನ್ನು ಅರಿಯುವನು. ಭಕ್ತಿಯಿಲ್ಲದ ಬಡವ ಬಸವನು. ಕಕ್ಕಯ್ಯನ ಮನೆಯಲ್ಲಿಯೂ ಬೇಡಿದ, ಚನ್ನಯ್ಯನ ಮನೆಯಲ್ಲಿಯೂ ಬೇಡಿದ, ದಾಸಯ್ಯನ ಮನೆಯಲ್ಲಿಯೂ ಬೇಡಿದ. ಎಲ್ಲ ಪುರಾತನರು ನೆರೆದು ಭಕ್ತಿಭಿಕ್ಷೆಯು ನಿಕ್ಕಿದರೆ ಬಸವಣ್ಣನವರ ಪಾತ್ರೆ ತುಂಬಿತ್ತು. ಅಂದು ಭಕ್ತಿಸಂಪದವ ದೊರಕಿಸಿ ಭಕ್ತಿನಿಧಿ ಬಸವರಾಜರಾದರು. ಬಸವನ ಬಂಧು ಬಳಗವೆಲ್ಲವೂ ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕುಲಜರಿಂದಲೇ ತುಂಬಿಕೊಂಡಿದೆ. ಕೂಡಲಸಂಗಮದೇವನ ಮಹಾಮನೆಯೊಳು ಧರ್ಮಸಂತಾನಿ ಭಂಡಾರಿ ಬಸವಣ್ಣನವರು ಅತಿ ಧೈರ್ಯದಿಂದ ಹೇಳುವರು. "ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದೊಡೆಯೂ ಅಯ್ಯ! ಅಯ್ಯ!! ಎನಲಾರೆ. ಚೆನ್ನಯ್ಯ ಎಮ್ಮಯ್ಯನು."

ಭಕ್ತಿಭಾವ ಜೀವಿ ಬಸವಣ್ಣನವರ ಭಕ್ತಿಗಂಗೆಯು ಇಮ್ಮುಖವಾಗಿ ಹರಿದಿದೆ. ಮೊದಲನೆಯ ಮುಖವು ಬಹಿರಂಗವಾಗಿ ಶರಣರಲ್ಲಿ ಕೂಡಲಸಂಗಮದೇವನನ್ನು ಕಂಡು, ಜಂಗಮ ಪ್ರಾಣಿಯಾಗಿ ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಅವಿರಳವಾದ ಅನಿರ್ಗಳವಾದ ಭಾವಶೆಲೆಯೂ ಹರಿದರೆ ಇನ್ನೊಂದು ಮುಖವು ಅಂತರ ಮುಖಿಯಾಗಿ ಅಂತರಂಗವನ್ನು ಪರಿಶುದ್ಧಗೊಳಿಸುತ್ತ ಶಿವಲಿಂಗದಲ್ಲಿ ಅದು ಕೇಂದ್ರೀಕೃತವಾಗುವದು. ಆದರೆ ಎರಡೂ ಪ್ರವಾಹಗಳ ಗುರಿಯೊಂದೆ. ಕೈಗಳೆರಡಾದರೂ ಮಾಟಒಂದೇ, ಕಾಲುಗಳೆರಡಾದರೂ ಓಟ ಒಂದೇ. ಕಣ್ಣುಗಳೆರಡಾದರೂ ನೋಟ ಒಂದೇ. ಬಸವಣ್ಣನವರ ಭಕ್ತಿಗಂಗೆಯು ಇಮ್ಮುಖ ಕೂಡಲಸಂಗಮದೇವನಲ್ಲಿಯೇ ಕೂಡುವ ಬಸವಣ್ಣನವರ ಲಿಂಗಾಂಗಸಾಮರಸತೆಯು ಭಕ್ತಿಜೀವನವು ಒಂದು ಕಾವ್ಯವಾಗಿದೆ.

ಶಿವಲಿಂಗಪ್ರೇಮಿ ಬಸವಣ್ಣನವರಲ್ಲಿ ಕೂಡಲಸಂಗಮದೇವನ ಬಗೆಗೆ ಅಪಾರವಾದ ಏಕನಿಷ್ಠೆ. ವೀರಭಕುತಿಯು, ಮಡಕೆ, ಮರ, ಬಿಲ್ಲನಾರಿ, ಕೊಳಗ ಮತ್ತು ಗಿಣಿಲು ದೈವವೆಂಬ ದೊಲ್ಲದ ಮಾತಿಗೆ ಸಲ್ಲದೇ; ಹಲವು ದೈವಂಗಳನ್ನು ನಂಬಿ ಅವುಗಳ ಎಂಜಲ ತಿಂಬುದಕೆ ಒಲ್ಲದೇ ಏಕಪತಿ ಇರುವ ಪತಿವ್ರತೆಗೊಪ್ಪುವಂತೆ ಪರಮ ಭಕ್ತ ಬಸವಣ್ಣನವರಿಗೆ ಕೂಡಲಸಂಗಮದೇವನೆಂಬ ಮಿಗಿಲಾದ ದೇವರೊಬ್ಬರುಂಟು. ಬಸವಣ್ಣ

ನವರು ತಮ್ಮ ದೇವನನ್ನು 'ಸ್ವಾಮಿ ನೀನು, ಶಾಶ್ವತ ನೀನು, ಎತ್ತಿದೆ ಬೀಯದ ಜಗವೆಲ್ಲವರಿಯಲು 'ಮಹದೇವ, ಮಹದೇವ'. ಇನ್ನು ಮುಂದ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋ ದೇವ, ಸ್ವರ್ಗ, ಮರ್ತ್ಯ, ಪಾತಾಳದೊಳಗೆ ಒಬ್ಬನೇ ದೇವ. ಪರಗುರು ವಿಶ್ವಕ್ಕೆಲ್ಲ. ಗಿರಿಜಾ ಮನೋವಲ್ಲಭ ಪರಮ ಕಾರಣಿಕ, ಎಂದು ನುತಿಸುವರು. ಬಸವಂಣನವರ ಕೂಡಲ ಸಂಗಮದೇವನು ಎತ್ತೆತ್ತ ನೋಡಿದರೂ ಅವನದೇ ರೂಹು, ಸಕಲ ವಿಸ್ತಾರದ ರೂಹು ಅವನದೇ, ವಿಶ್ವತೋಚಕ್ಷು, ವಿಶ್ವತೋಮುಖ, ವಿಶ್ವತೋಬಾಹು, ವಿಶ್ವತೋ ಪಾದಗಳೆಲ್ಲವು ಅವನವೇ. ಅವನಿಗೆ ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಪಾದ, ಸಾಸಿರ ಸನ್ನಿಹಿತನು. ಪಾತಾಳದಿಂ ಅತ್ತತ್ತ ಅವನ ಪದಪದ್ಮ. ಬ್ರಹ್ಮಾಂಡದಿಂ ಅತ್ತಿತ್ತ ಅವನ ಮಣಿಮಕುಟ. ಇಂಥ ಅಪ್ರಮಾಣ, ಅಪ್ರಮೇಯ, ಅಪ್ರತಿಮ ರೂಹು ಕರತಲತೆ ಬಂದು ಚುಳುಕಾದುದು ಅತಿ ಚೋದ್ಯವೆನಿಸಿದೆ ಬಸವಂಣನವರಿಗೆ.

'ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡಿದವನ ಸಂಸಾರವೇನವನ ? ಬಾಳುವೆಣನ ಸುಡಿವೆಣನ ಸಂಸಾರವೇವನನ ? ನಿಮ್ಮ ತೊತ್ತಗೆಲಸವ ಮಾಡದವನ ಸಂಸಾರವೇನವನು ? ಎಂದೆನ್ನುವ ಬಸವಣ್ಣನವರು ಲಿಂಗದೇವನ ಪೂಜೆಗಾಗಿ ವಾರವೆಂದರಿಯರು, ದಿನವೆಂದರಿಯರು, ಹಗಲೆಂದರಿಯರು, ಇರುಳೆಂದರಿಯರು. ಕೂಡಲಸಂಗಮದೇವನ ಪೂಜಿಸಿ ಕೂಡಲು ಏನೆಂದರಿಯರು. ನಿಚ್ಚನಿಚ್ಚ ಶಿವರಾತ್ರಿ, ಮಾಡುವದು ಕೂಡಲಸಂಗಮದೇವನ ಕೂಡುವದಷ್ಟನ್ನೇ ಅರಿಯುವರು. ಬಸವಂಣನವರು ನಿರ್ಮಿಸಿದ ಶಿವಾಲಯಕ್ಕೆ ಅವರ ಕಾಲೇ ಕಂಬಗಳು. ದೇಹವೇ ದೇಗುಲ, ಶಿರವೇ ಹೊನ್ನ ಕಳಸವಾಗಿದೆ. (ಮನದಲ್ಲಿ) ಓವರಿಯಿಲ್ಲ ಚಿತ್ತದೊಳು ವಿಸಂಚಯವಿಲ್ಲ, ಅಹಂಕಾರದೊಳು ಗರ್ವವಿಲ್ಲ, ಕಾಮವಿಲ್ಲ, ಕೋಪದಮಾತೇಕೆ ? ಲೋಭದ ಗಾಳಿ ಶೀಡದು. ಮೋಹಕ್ಕೆ ತೆರಹಿಲ್ಲ. ಮದದ ಸೊಡರು ಹೊದ್ದದು. ಮತ್ಸರಕ್ಕೆ ಇಂಬಿಲ್ಲವಾದ್ದರಿಂದ ಮಂದಿರವು ಅಮಲವಾಗಿದೆ. ಶಿವನ ಜಾಗ್ರತ ಸಾನ್ನಿಧ್ಯ ಸ್ಥಾನಕ್ಕೆ ಇಂಬಾಗಿದ್ದ ಭಕ್ತರ ಹೃದಯದಲ್ಲಿಪ್ಪ; ಮಾಡಿದ ಪೂಜೆಯಲೊಪ್ಪುವವನಾದ ಕೂಡಲಸಂಗನು ಕಾರಣದೊಳು ಭಾವಲಿಂಗವಾಗಿ, ಸೂಕ್ಷ್ಮದೊಳು ಪ್ರಾಣಲಿಂಗವಾಗಿ, ಸ್ಥೂಲದೊಳು ಇಷ್ಟಲಿಂಗವಾಗಿ, ನಯನಗಳಲ್ಲಿ ಶಿವಲಿಂಗವಾಗಿ, ನಾಸಿಕ

ದಲ್ಲಿ ಆಚಾರಲಿಂಗವಾಗಿ, ಜಿಹ್ವೆಯೊಳು ಗುರುಲಿಂಗವಾಗಿ, ತ್ವಚೆಯಲ್ಲಿ ಜಂಗಮಲಿಂಗವಾಗಿ, ಕರಣಗಳಲ್ಲಿ ಪ್ರಸಾದಲಿಂಗವಾಗಿ, ಮನದಲ್ಲಿ ಮಹಾ ಲಿಂಗವಾಗಿ, ಬಿಟ್ಟು ಬೇರಾಗದಂತೆ ನೆಲೆಗೊಂಡಿಹನು. ಬಸವಂಣನವರು ನಿತ್ಯವೂ ಹೊತ್ತು ಹೋಗದ ಮುನ್ನ ಹೊತ್ತಾರೆ ಎದ್ದು, ಕಣ್ಣ ಹೊಸೆಯುತ್ತ ಲಿಂಗದೇವನ ಮುಖವ ನೋಡುವರು. ಕಣ್ಣಲ್ಲಿ ಸುಖ ನೀರು ತುಂಬುವ ತನಕ ನೋಡುತ್ತ ನೋಡುತ್ತ ಮನವುಕ್ಕಿ ನೀರಲ್ಲಿ ಮಿಂದು ಬೇಗಬೇಗ ಅಗ್ಗವಣೆ ಪತ್ರೆ ಪುಷ್ಪವ ತಂದು ಲಿಂಗದೇವನ ಪೂಜೆಗೆ ಮೊದಲಾಗು ವರು. ಅಷ್ಟ ವಿಧಾರ್ಚನೆ ಷೋಡಷೋಪಚಾರ, ಷಡ್ ಭಕ್ತಿಗಳಿಂದ ಲಿಂಗವ ಪೂಜಿಸುತ್ತ ಪೂಜಿಸುತ್ತ ಷಟ್‌ಸ್ಥಲಗಳ ನೇರುತ್ತ ನೇರುತ್ತ ಕೂಡಲಸಂಗಮನ ಬೇಗಬೇಗ ಕೂಡಲು ಉದ್ಯೋಗಿಸುವಾಗ 'ಎದೆಬಿರಿ ಯದನ್ನಕ್ಕ, ಮನದಣಿಯದನಕ್ಕ, ನಾಲಿಗೆ ನಲಿದಾಡದನ್ನಕ್ಕ ನಿಮ್ಮ ನಾಮಾಮೃತವ ಕರುಣಿಸು ತಂದೇ!" ಎಂದು ಮರೆಹೋಗುವರು. ಅವರ ವಚನದಲ್ಲಿ ನಾಮಾಮೃತ ತುಂಬಿ, ನಯನಗಳಲ್ಲಿ ಮೂರುತಿ ತುಂಬಿ ಕೂಡಲಸಂಗನ ಚರಣ ಕಮಲನೊಳಗೆ ತುಂಬಿಯಾಗಿ ಬಿಡುವರು. ಅವರ ಕಾಯವ ದಂಡಿಗೆಯ ಮಾಡಿ, ಶಿರವ ಸೋರೆಯ ಮಾಡಿ, ನರವ ತಂತಿಯ ಮಾಡಿ, ಬೆರಳ ಕಡ್ಡಿಯ ಮಾಡಿ, ಬತ್ತೀಸರಾಗವ ಹಾಡಲು ಕೇಳಿ ಕೊಳ್ಳುವರು. ಊದರಲೊತ್ತಿ ಬಾರಿಸಲು ಬಿನ್ನೈಸುವರು. ಆಡಿಆಡಿ ಕಾಲು ದಣಿಯವು. ನೋಡಿ ನೋಡಿ ಕಣ್ಣು ದಣಿಯವು. ಹಾಡಿ ಹಾಡಿ ನಾಲಿಗೆ ದಣಿಯದು. ಕೂಡಲಸಂಗಮದೇವನ ನೋಟ ಅನಂತಸುಖ! ಕೂಟ ಪರಮ ಸುಖ!! ಅಬ್ಬ ಕೋಟಿ ರೋಮಂಗಳು ಕಂಗಳಾಗಿ ನೋಡಿನೋಡಿ ಮನದಲ್ಲಿ ರತಿ ಹುಟ್ಟಿ ಕಳೆಗಳು ನಿರ್ಮಿದವಾಗಿ ಕನಸ ಕಾಣುವರು. ನಿಧಾ ನವ ಮಾಡಲು ಕೇಳಿಕೊಳ್ಳುವರು. ಬಿಡಲಾರದ ನಿಧಾನ ಕಂಡಂತಾ ಯಿತು. ರೂಹು ಮೂಡಿಬಂದು ನಿಂತಂತಾಯಿತು. ಹೊನ್ನಹಾವುಗೆಯ ಮೆಟ್ಟಿದವನ ಮಿಡಿ ಮುಟ್ಟಿದ ಕಂಜೆಡೆಯವನ, ಮೈಯಲ್ಲಿ ವಿಭೂತಿಯ ಧ ಸಿದವನ ಕರದಲ್ಲಿ ಕಪಾಲ ಪಿಡಿದವನ ಚೋಳಂಗೆ ಹೊನ್ನಮಳೆ ಕರೆ ದವನ ಅರ್ಧನಾರಿಯಾದವನ ನಂಬಿಗೆ ಕುಂಟಣಿಯಾದವನ ಸದ್‌ಭಕ್ತರ ಹೃದಯದಲ್ಲಿಪ್ಪವನ ಬಸವಂಣನ ಮನಕ್ಕೆ ಬಂದವನೂ ಮಾಡಿದ ಪೂಜೆ ಯ ಕೊಪ್ಪುವವನೂ ಇಬ್ಬರೂ ಒಬ್ಬನೇ. ಮಹಾದಾನಿ ಕೂಡಲಸಂಗಮ ದೇವನಲ್ಲಿ ಕೇಳುವನು ಏನನ್ನು? ಅವನು ದಾಸನಂತೆ ನವನಿಧಿಯನ್ನು ಬೇಡ

ಲಿಲ್ಲ. ಉಳಿದವರಂತೆ ಬೇಡುವವರಲ್ಲ ಇವರು. ಏನು ಬೇಡುವನೋ ಏನೋ? ಎಂದು ದುಗುಡಗೊಂಡು ಅಂಜದಿರಲು ಕೇಳಿಕೊಳ್ಳುವರು. ಇವರು ಕೇಳಿಕೊಳ್ಳುವದು ಕೇವಲ "ಎನ್ನತಂದೇ! ಕೂಡಲಸಂಗಮ ದೇವಾ ಸದ್ಭಕ್ತಿಯನೇ ಕರುಣಿಸುದು ಎನಗೆ" ಎಂಬುದನ್ನಷ್ಟೇ. ಕೂಡಲ ಸಂಗಮದೇವನು ಮೆಚ್ಚಿಹನೆಂದರೆ, ಸಲೆನೂರು ಹೋದಹನೆಂದರೆ ತನುವ ಮನವ ಧನವ ಅಲ್ಲಾಡಿಸಿ ಪರಿಕಿಸುವನು. ಒಡ್ಡಿದ ಪರೀಕ್ಷೆಗಳಲ್ಲೆಲ್ಲಾ ಬಸವಣ್ಣನವರು ತೇರ್ಗಡೆಹೊಂದಿ ಶುದ್ಧ ಅಪರಂಜಿಯಾಗುವರು. ಬಸವಣ್ಣನವರಿಗೂ ಗೊತ್ತಿದೆ ನವಖಂಡ ಪೃಥ್ವಿಯೊಳು ಎರಡಾಳಿನ ಭಾಷೆ' ಕೊಲುವನೆಂಬ ಭಾಷೆ ದೇವನದಾದರೆ ಗೆಲುವೆನೆಂಬ ಭಾಷೆ ಭಕ್ತನದು! ಭಕ್ತನು ಅಂಜದೆ ಅಳುಕದೆ ಇದ್ದರೆ ಕಡೆಯಲ್ಲಿ ಗೆಲವು ಅವನಿಗೇ ಮೀಸಲು. ಸುಖಬರಲಿ ಪುಣ್ಯದ ಫಲವೆಂದೆನ್ನರು, ದುಃಖಬರಲಿ ಪಾಪದಫಲವೆಂದೆನ್ನರು. ಉರಿಬರಲಿ ಸಿರಿಬರಲಿ ಬೇಕುಬೇಕವೆಂದೆನ್ನರು. ಉದಾಸೀನವಿಡಿದು ಶರಣೆನ್ನರು. ಗುಣವೇ ಮಹಾಸ್ವಾಮಿಯನ್ನಾಗಿ ಅಪ್ಪಿಕೊಂಡ ಕಾರಣ ನಾಳೆ ಬಪ್ಪುದು ಈಗ ಬರಲಿ. ಅಂಜರು ಕೂಡಲಸಂಗಮದೇವರ ಆಳಾಗಿ ಲೋಕ ವಿಬುರ್ಗಣೆಗೆ ಅಂಜುವದಿಲ್ಲ ಹೀಗೆ ಬಸವಣ್ಣನವರು ಧೀರ ಮತ್ತು ವೀರ ಭಕ್ತರಾಗಿದ್ದಾರೆ.

ಹರಿಹರ ಮಹಾಕವಿಯು ತನ್ನ 'ಬಸವರಾಜದೇವ ರಗಳೆ' ಯಲ್ಲಿ ಬಸವಣ್ಣನವರನ್ನು ಕುರಿತು ಒಬ್ಬ ಜಂಗಮನಿಂದ ಹೀಗೆ ನುಡಿಸಿದ್ದಾರೆ 'ಎಲೆ ಬಸವ, ಬಸವರಸ ಬಸವರಾಜ, ಬಸವಯ್ಯ ಬಸವಿದೇವ...." ಇಲ್ಲಿ ಬಸವಿದೇವ ಎಂಬ ಪದವು ಬಸವಣ್ಣನವರ 'ಶರಣಸತಿ, ಲಿಂಗಪತಿ ಎಂಬ ಸತಿಯ ಭಾವ ಪಾತ್ರತೆಯನ್ನು ಕುರಿತು ಇರಬೇಕು. ನಿಡುಮಾಮಿಡಿ "ಶ್ರೀ" ಗಳು ತಮ್ಮ "ಅಣ್ಣನ ಬದುಕಿ"ನಲ್ಲಿ ಬಸವಣ್ಣನವರ ಶರಣಸತಿಯ ಭಾವಪಾತ್ರತೆಯನ್ನು ನಿರ್ಮಿಸುವಾಗ ಬಸವದೇವ ಎಂಬುದನ್ನು ಬಸವಿದೇವಿ ಎಂದು ಮಾರ್ಪಡಿಸಿಕೊಂಡಿದ್ದಾರೆ.

ಪರಮಸತಿ ಬಸವಿದೇವಿಗೆ ಲೋಕವರಿಯಲು ಅವಳಿಗೂ ಒಬ್ಬ ಪತಿದೇವನುಂಟು. ಆಕೆಯ ನಲ್ಲ ಮಹದೇವಶೆಟ್ಟಿ, ಶುದ್ಧ ಬಣಜಿಗ. ಒಮ್ಮನವಾದರೆ ಒಡನೆ ನುಡಿವ. ಅದ್ದಕಾಣೆಯು ಸೋಲ. ಅದ್ದಗಾಳಿಯು ಗೆಲ್ಲ, ಕಡುಜಾಣ ನೋಡಿರಿ! ಬಸವಿದೇವಿಯು ಒಬ್ಬ ಮುತ್ತೈದೆ, ಒಬ್ಬ ನಿಟ್ಟೈದೆ, ಬಸವಿದೇವಿ ಕೂಡಲಸಂಗಯ್ಯನನ್ನೇ ಮದುವೆಯಾಗಲೂ ಕಾರಣವಿಲ್ಲದಿಲ್ಲ.

ಚಿಕ್ಕಂದಿನ ಬಾಳುವೆ ಅವರಿಬ್ಬರದು. ಬಸವದೇವ ಚಿಕ್ಕಂದಿನಲ್ಲಿ ಗೆಳತಿಯರೊಂದಿಗೆ ಗೌರಿಯ ವ್ರತವ ಮಾಡುತ ಮಣ್ಣಿನ ಲಿಂಗನ ಪೂಜಿಸುವಳು. ಕೂಸೂ ದೇವ ಗಂಡನಾಗಬೇಕು. ಅವಳ ಮನಕ್ಕೆ ಮನೋಹರವಲ್ಲದ ಗಂಡರು ಅವಳ ಮನಕ್ಕೆ ಬಾರರು. ಕನ್ನೆಯಂದಿನ ಹತ್ತಿಕೂಟ. ಬಸವದೇವಿಯು ಅರಿಷಣವನ್ನೇ ಮಿಂದು, ಮಡಿಯನ್ನೇ ಹೊದ್ದು, ಹೊಂದೊಡಿಗೆಯನ್ನೇ ತೊಟ್ಟು ಶ್ರಿಂಗಾರವಾದರೂ ಒಲವಿಲ್ಲದ ಲಲನೆಯಂತಾಗಿದ್ದಾಳೆ. ಪುರುಷ ಬಾರದ ಜೀವನ ಬರಿದಾಗಿ ಕಾಣಹತ್ತಿದೆ. ಅದ್ದರಿಂದ ಬಸವದೇವಿಯು ನಲ್ಲನನ್ನು ಲಜ್ಜೆಗೆಟ್ಟಾದರೂ, ನಾಣುಗೆಟ್ಟಾದರೂ ಲಿಂಗವನೊಲಿಸಲು ಹಾರೈಸುವಳು. ಕೆಲ ಸಂಸಾರಿಗಳು ನಗುತಿದೊಡನೆ 'ಶರಣಗತಿ ಹೊಕ್ಕೆನವ್ವ' ಎಂದು ತನ್ನ ದೆನ್ನುವದೆಲ್ಲವನ್ನೂ ಅವನ ಪಾದದ ಬಳಿ ಅರ್ಪಿಸಿ ಬಿಟ್ಟಿದ್ದಾಳೆ. , ಬಸವದೇವಿಯೇ ಸತಿ ಮಹದೇವಶೆಟ್ಟಿಯೇ ಪತಿ. ಮನೆಯ ಒಡೆಯ ಮನೆಯ ಕಾಯ್ದಿಪ್ಪಂತೆ ಬಸವಿದೇವಿಯ ಮನದೊಡೆಯ ಮಹದೇವಶೆಟ್ಟಿ, ಅವಳ ಮನವ ಕಾಯ್ದಿಪ್ಪ ಗಂಡನೇ ಅವನು. ಮಹದೇವನಿಗೆ ಮೀಸಲಿಟ್ಟ ಮನವನ್ನು ಅನ್ಯಕ್ಕೆಹರಿಸಿದೊಡೆ ಅವನ ಅಭಿಮಾನಕ್ಕೆ ಹಾನಿ ಎಂದು ತುಂಟತನದಲ್ಲಿ ಹೇಳುತ್ತಿದ್ದಾಳೆ. ಪತಿಯ ಒಲಿಸುವ ಸತಿಯಂದಿರ ಕಳೆಯೇ ಅದು. ತನ್ನ ಪತಿ ಪ್ರೇಮಕ್ಕಾಗಿ, ಈಶ್ವರನ ಒಂದುಗೂಡುವ ಬಾಳುವೆಗಾಗಿ ತನ್ನ ತನು-ಮನ-ಧನ ಪ್ರಾಣಗಳನ್ನೆಲ್ಲವನ್ನು ಅರ್ಪಿಸಿಬಿಟ್ಟ ನಂತರ ಆಕೆಗೆ ಬೇರೆ ತನವಿಲ್ಲ ಬೇರೆ ಮನವಿಲ್ಲ, ಬೇರೆ ಪ್ರಾಣವಿಲ್ಲ, ಇಂತೀ ತ್ರಿವಿಧವು ತನ್ನ ಪ್ರಿಯಕರನವು ಆದ ಬಳಿಕ ಅನ್ಯ ವಿಚಾರವಂಟೇ? 'ಆಸೆ—ಹರುಷ-ರೋಷಾದಿಗಳೆಂಬ ಕರಣೇಂದ್ರಿಯಗಳ ಮುಟ್ಟಲಿಯದೇ, ಆಚಾರವ ಶಿವಾಚಾರವನ್ನಾಗಿ ಮಾಡುವಳು. ಮನದಲ್ಲಿ ವಂಚನೆ ಇಲ್ಲದೇ ಮನಮುಟ್ಟಿ ಭಕ್ತಿಯನ್ನು ತೋರುವಳು. ಪ್ರಾಣಶಕ್ತಿಗಳಿಂದ ಭಾವ ಪೂಜೆಯ ಮಾಡುವಳು. ಜಾಗ್ರತ—ಸ್ವಪ್ನ- ಸುಷುಪ್ತಿಯೊಳು ಅನ್ಯವ ನೆನೆಯಳು. ಅಷ್ಟವಿಧಾರ್ಚನೆ, ಶೋಡಷೋಪಚಾರ ಷಡ್‌ವಿಧ ಭಕ್ತಿಯ ಅಂದಂದಿಗೆ ಮಾಡಿ ಶುದ್ಧಳಪ್ಪಳು. ಬಸವಿದೇವಿಯ ಶಿವಲಿಂಗವರ್ಪಿತವಲ್ಲದುದನ್ನು ನೋಡಳು, ನುಡಿಯಳು, ಮೂಸಳು, ಮುಟ್ಟಳು, ಕೇಳಳು, ನಿಪ್ಪಲದಾಯಕವಾಗಿ ಶುದ್ಧಳಾಗಿಪ್ಪಳು. ಇಲ್ಲವಾದರೆ ಬಸವಿದೇವಿಯ ಗಂಡನ ಮನೆಯ ವಾರ್ತೆಯ ಏನ ಹೇಳುವದು ! ಮಹದೇವಶೆಟ್ಟಿ ಒಮ್ಮನ ಮಾಡದೆ ಕೂಡಲೇ ನುಡಿವ. ಇಮ್ಮನವಾದರೆ ದೀರ್ಘವಾಗಿ ಮೌನದಲ್ಲಿಪ್ಪ. ನುಡಿ

/

ಯನು. ಅಲಿಂಗವಿನ್ನೆಯ ನೊಲ್ಲ. ಕಣ್ಣೊಳಗಣ ಕಸವ ಕಳೆದಲ್ಲದೇ ನೋಡಲೀಯ. ಕೈಗಳ ತೊಳೆದಲ್ಲದೇ ಮುಟ್ಟಲೀಯ್ಯ. ಕಾಲತೊಳೆದಲ್ಲದೇ ಹೊದ್ದಲೀಯ. ಇಂತಿ ಸರ್ವಾಂಗ ತಲೆದೊಳೆದರೆ ಕೂಡಿಕೊಳ್ಳುವ ಅವಳ ಮನೋವಲ್ಲಭನು. ಬಸವಿದೇವಿಗೆ ಅನಿಸದೆ ಲಿಂಗವ ಪೂಜಿಸಿ ಫಲವೇನು ? ಸನುರತಿ—ಸಮಕಳೆ—ಸಮಸುಖವರಿಯದನ್ನಕ್ಕೆ, ಲಿಂಗವ ಪೂಜಿಸಿ ಫಲವೇನು? ನೀರೊಳಗೆ ನೀರು ಬೆರಸಿದಂತಾಗದನ್ನಕ್ಕ ? ಇನ್ನು ಸತಿ ಧರ್ಮದ ನಾಚುಗೆಯ ಮುಸುಕ ಕಳೆದು ಓರೆಮಾಡಿದ್ದಾಳೆ. ನಾಚುವರೆ? ಮರೆ ಇಲ್ಲ. ತೊಲಗುವರೆ, ನೆಲವಿಲ್ಲ. ತನವ ಒಲಿದು ಪೂಜಿಸುವಳು, ಮನ ಒಲಿದು ಸಂಗಕ್ಕೆ ಎಳೆಸುವಳು, ಪ್ರಾಣವ ಅಣಿಯುಮಾಡಿ ಪೂಜಿಸುವಳು. ಪಶ್ಚಿಮ ಪದ್ಮಾಸನದಲ್ಲಿ ಕುಳಿತು, ನೆಟ್ಟೆಲುವ ಮುರಿದು, ತುಟಿ ಮಿಡುಕವೇ ಅಟ್ಟಿಯಾಡಲು ಕಟ್ಟಿದ ಕಣ್ಣು, ಬಿಗಿದ ಹುಬ್ಬು ಬ್ರಹ್ಮರಂಧ್ರಗಳಲ್ಲಿ ಮೆಲ್ಲಮೆಲ್ಲನೇ ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸಮಸ್ತ ಕತ್ತಲೆಯಕಳೆದಿಪ್ಪ ಇರುವಿನೊಳಗೆ ಬೆಳಗಿದೊಳಗೆ ಮಹಾ ಬೆಳಕು ಮೂಡಿ ಬಂದಿತು. ಸೂರ್ಯಕೋಟಿ ಪ್ರಭೆಯು ಬೀಗಿನ ಸಹಸ್ರ ಕಿರಣದ ಅಗ್ರಪಟಲದ ಬೆಳಗಿನೊಳಗೆ ಕೂಡಲಸಂಗಮದೇವನ ವಿಶ್ವರೂಪವು ಮೂಡಿ ಬಂದಿದೆ. ತನು ಕರಗಿ ನೆನೆವ ಮನಕರಗ ಮಾಡುವ ಬಸವಿದೇವಿಯ ಸುಖವ ಏನೆಂದು ಹೇಳಬೇಕು ? ನಯನಗಳ ಸುಖ ಜಲಗಳ ಮುತ್ತು ಸುರಿಸುವದರಿಂದಲೇ ಅರಿತು ಕೊಳ್ಳಬೇಕು. ಕೂಡಿದ ಕೂಟದ ಕಲೆಯನ್ನು ಇದರಿಂಗೆ ತೋರಲು ಬಾರದು. ಅದು ಆಚಾರವಲ್ಲ, ಪರರಿಗೆ ಹೇಳಲು ಬಾರದು-ಮೂಕಕಂಡ ಕನಸಿನಂತೆ ಅವರ ಅನುಭವಾನ್ಮೃತ; ಕೇಳಲುಬಾರದು. ಜ್ಞಾನಗಮನದ ಸಹಜದ ಲಿಂಗನ ಬೆಳಗು ಒಳಗೊಂಡುದಾಗಿ ಏನೆಂದರಿಯಳು. ಮಹಂತ ಕೂಡಲ ಸಂಗಮದೇವನನ್ನು ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿಗಳು ತುಂಬಿದ ಬಳಿಕ ಪೂಜಿಸಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ. ಕೂಡಲಸಂಗಮದೇವನ ಕಂಡು ಅನುಭಾವದಿಂದ ತನುವು ಹಾಳಾಗಿ, ಮನದ ಕಾಳಿಕೆ ಕಳೆದು, ಕರ್ಮಭೇದನಗೊಂಡು ಭವಗೆಟ್ಟಳು; ಕೂಡಲಸಂಗನ ಮುಟ್ಟಿ ಹುಟ್ಟುಗೆಟ್ಟಳು.

ಬಸವದೇವಿಯು ಕೂಡಲಸಂಗನ ವಿಶ್ವರೂಪವ ನೋಡುವಳು. "ರುದ್ರಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು. ಇಂದ್ರಪಾದದಲ್ಲಿ ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು. ಮುಖದಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷವು.

ಶಿರದಲುದಯದಲಿ ತೆತ್ತೀಸಕೋಟಿ ದೇವತೆಗಳು, ಪಾದತಳದಲ್ಲಿ ಭೂಮಿಯು ಜನನವು. ಶ್ರೋತ್ರದಲ್ಲಿ ದಶದಿಕ್ಕುಗಳು, ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ, ಅಕ್ಷಯಾನಗಣಿತನು, ಸಾಸಿರತಲೆ, ಸಾಸಿರಕಣ್ಣು, ಸಾಸಿರ ಕೈ, ಸಾಸಿರಪಾದ, ಸಾಸಿರ ಸನ್ನಿಹಿತನಲ್ಲಿ, ಬ್ರಹ್ಮನ ಕಪಾಲಕರದಲ್ಲಿ ವಿಷ್ಣುವಿನ ನಯನ ಪಾದದಲ್ಲಿ, ಕಾಮನ ಸುಟ್ಟ ಭಸ್ಮ ಮೈಯಲ್ಲಿ" ಕೂಡಲಸಂಗಮದೇವನ ಸಂಗವಾದ ನೆನಹಿನ ಕುರುಹಿಗಾಗಿ ವಿಶ್ವರೂಪದ ಸುತ್ತಲೂ ನೋಡುವಳು. ಕೊರಳು ಗರಳಸ್ಥಾನವಾಗಿದೆ. ಬಾಯಿ ಅಪ್ಪುವಿನ ಸ್ಥಾನ, ನಾಸಿಕ ವಾಯುವಿನ ಸ್ಥಾನ, ಕಣ್ಣುಗಳು ಅಗ್ನಿಯ ಸ್ಥಾನ, ಜಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ, ಹಿಂದು ಸೂರ್ಯನ ಸ್ಥಾನ, ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು, ಗುಹ್ಯ ಕಾಮನ ಸ್ಥಾನ, ಹಸ್ತಂಗಳು ಕಪಾಲ, ಖಟ್ವಾಂಗ, ತ್ರಿಶೂಲ, ಡಮರುಗಸ್ಥಾನ, ಬಸವಿದೇವಿಗೆ ಇವೆಲ್ಲ ಸ್ಥಾನಗಳಲ್ಲಿ ತೆರಹಿಲ್ಲವಾಗಿ ಬೇಡವಾಗಿವೆ. ಅವುಗಳಿಗೆ ಬೇಕಾದುದು ತೆರವಿದ್ದ ಇಂಬುಗೊಳ್ಳುವ ಹೃದಯ ಮಧ್ಯದ ಅಂತರಾಳದ ಏಕಪೀಠ ಸಿಂಹಾಸನ. ಕೂಡಲಸಂಗಮದೇವ ಬಸವಿದೇವಿಯನ್ನು ತನಗೆ ಬೇಕೆಂದು ಅತಿ ನೇಹದಿಂದ ಎತ್ತಿಕೊಂಡು ಹೃದಯದಲ್ಲಿ ಇಂಬಿರಿಸಿಕೊಂಡ. ಬಸವಿದೇವಿಯ ಭಾವಪಾತ್ರವಾಡಿದ ಬಸವಣ್ಣನವರು. ಅಂದಿನಿಂದ ಶಿವನೇ ಬಸವ, ಬಸವನೇ ಶಿವನಾಗಿ, ದ್ವಿತೀಯ ಶಂಭುವಾದರು. ಬಸವಣ್ಣನವರು ಮಹಾನುಭಾವಿ ಬಸವಣ್ಣನವರಾಗಿ ಕೂಡಲಸಂಗಮದೇವನ ರಾಜತೇಜದಲ್ಲಿ ಅಮರರಾಗಿ ಬೆಳಗುತ್ತಿರ್ಪರು.



# ಮೊರೆ.

(ಕವಿಃ— ಗುರುಸಿದ್ಧ ಶಿವಾಚಾರ್ಯರು, ಗುರುವಿನಪುರಮಠ.)

---

ಆಸರೆಯು ಎನಗಿಲ್ಲ,
    ಬೇಸರವು ಇನಿವೆಲ್ಲ,
ತಡವರಿಸಿ ನಡೆದಿಹೆನು,-
    ಕೈಗೋಲು ಎನಗಿಲ್ಲ;
ಕಣ್ಮುಚ್ಚಿ ನಡೆದಿಹೆನು,
    ಶಕ್ತಿಯೂ ಇನಿಪೆಲ್ಲ;
ಮೊರೆಯಿಡುವೆ ಓ ದೇವ!
    ತವಶಕ್ತಿಯಂ ನೀಡು ॥೧॥

ಭಕ್ತಿಯೂ ಇನಿವೆಲ್ಲ,
    ಯುಕ್ತಿಯಾಪೆಸರಿಲ್ಲ,
ವಾಕ್‌ಪ್ರೌಢಕೆಯು ಇಲ್ಲ;
    ಹಣವು ಮೊದಲೇ ಇಲ್ಲ;
ಬಗೆಗಾಣದಂತಿರುವೆ,
    ಬಸವಳಿದು ಹೋಗಿರುವೆ-
ಕೈಮುಗಿದು ಬೇಡುವೆನು!
    ಅನುನಯದಿ ಸಲುಹುದೇವ! ॥೨॥

ನಿನ್ನಡಿಯ ಹುಡುಕುತಲಿ,
    ತಡವರಿಸಿ ನಡೆದಿಹೆನು-
ಕಣ್ಣು ಕಾಣುತಲಿಹುದು-
    ಆದರೇಂ ಬರಿಮಂಜು!
ತನುವಿನಲಿ ಶಕ್ತಿಯಿಹುದು,
    ಆದರೂ ಬರಿಯ ಎಲಬುಗೂಡು!
ಓ ದೇವ! ನಿನ್ನೊಲುಮೆಯಲಿಬಿಗಿಯೋ!
    ಹಾ! ಗುರುವೆ! ಕೈಹಿಡಿದುಸಲಹೋ!!

---

ಗೃಹವನ್ನು ತ್ಯಜಿಸಿ ಕೂಡಲಸಂಗಮ ಕ್ಷೇತ್ರಕ್ಕೆ ತೆರಳಿರಬೇಕು. ಅವನ ಸಂಗಡ ಹೋದವರು ಅವನ ಅಕ್ಕನಾದ ನಾಗಲಾಂಬಿಕೆಯು ಮಾತ್ರ. ಅವಳ ಕೂಡ ಅವಳ ಗಂಡನಾದ ಶಿವಸ್ವಾಮಿ ಮತ್ತು ಅವಳ ಚಿಕ್ಕ ಮಗು ಚನ್ನಬಸವ ಇವರೂ ಸಹ ಇದ್ದಿರಬೇಕು. ಯಾಕಂದರೆ ನಾಗಲಾಂಬಿಕೆಗೆ ಆಗ ನಾವು ಹಿಂದೆ ಹೇಳಿದಂತೆ ೧೨-೧೪ ವರ್ಷ ವಯಸ್ಸಾಗಿದ್ದಿತು. ಈ ಕಾಲದಲ್ಲಿ ಅವಳಿಗೆ ಲಗ್ನವಾಗಿದ್ದು ಅವಳ ಕೂಡ ಅವಳ ಗಂಡನಾದ ಶಿವಸ್ವಾಮಿ ಮತ್ತು ಮಗುವಾದ ಚನ್ನಬಸವ ಈ ಉಭಯತರು ಕೂಡಲ ಸಂಗಮಕ್ಷೇತ್ರಕ್ಕೆ ಹೋಗಿರಬೇಕೆಂದು ನಾವು ಊಹಿಸುತ್ತೇವೆ. ಯಾಕಂದರೆ ಬಲದೇವ ಮಂತ್ರಿಯು ಕಲ್ಯಾಣಕ್ಕೆ ಬಸವೇಶ್ವರನನ್ನು ಲಗ್ನಕ್ಕೆ ಕರೆಸಿಕೊಂಡಾಗ್ಗೆ ಶಿವಸ್ವಾಮಿಯೂ ಕೂಡ ಅಲ್ಲಿಗೆ ಹೋಗಿದ್ದನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಆದ್ದರಿಂದ ಬಸವೇಶ್ವರನು ತನ್ನ ಪಿತೃಗೃಹವನ್ನು ಬಿಟ್ಟಾಗ ಅವನ ಕೂಡ ಅವನ ಅಕ್ಕನಾದ ಅಕ್ಕನಾಗಲಾಂಬಿಕೆ, ಶಿವಸ್ವಾಮಿ ಮತ್ತು ಚಿಕ್ಕಮಗು ಚನ್ನಬಸವ ಇವರು ಸಹ ಇದ್ದರೆಂದು ನಾವು ಊಹಿಸಲು ಪ್ರತ್ಯವಾಯವಿಲ್ಲ.

ನಾಗಲಾಂಬಿಕೆಯು ಸಂಗಮ ಕ್ಷೇತ್ರಕ್ಕೆ ಹೋದಬಳಿಕ ಅವಳು ಯಾವ ಕಾರ್ಯಗಳನ್ನು ಮಾಡುತ್ತಲಿದ್ದಳೆಂಬುದನ್ನು ತಿಳಿಯುವದು ಬಹು ಮಹತ್ವದ್ದಾಗಿದೆ. ಆದರೆ ಈ ವಿಷಯವಾಗಿ ಯಾವ ಗ್ರಂಥದಲ್ಲಿಯೂ ವಿವರಣೆಗಳಿರುವದಿಲ್ಲ. ಆದರೂ ಈ ಕಾಲದಲ್ಲಿ ಸಂಭವಿಸಿದ ಕೆಲವು ಐತಿಹಾಸಿಕ ಸಂಗತಿಗಳು ವಿಚಾರಾರ್ಹವಾಗಿರುತ್ತವೆ. ಇವುಗಳನ್ನು ನಾವು ವಾಚಕರ ಇದಿರಿಗೆ ಇಡುತ್ತೇವೆ.

**೧೧೩೨:—** ಈ ವರ್ಷ ಬಸವೇಶ್ವರನ ಜನನವಾಯಿತು. ಅವನು ಮರಣ ಹೊಂದಿದಾಗ ೩೬ ವರ್ಷದವನೆಂದು ಭಾವಿಸಿ ಈ ಮಿತಿಯನ್ನು ನಾವು ಇಲ್ಲಿ ಕಾಣಿಸಿದ್ದೇವೆ.

**೧೧೪೦:—** ಬಸವನು ಮೌಂಜೀ ಬಂಧನವನ್ನು ತ್ಯಜಿಸಿ ಸಂಗಮ ಕ್ಷೇತ್ರಕ್ಕೆ ನಾಗಲಾಂಬಿಕೆಯೊಡನೆ ಹೋಗಿರಬೇಕು.

**೧೧೪೦ ರಿಂದ ೧೧೫೬:—** ಈ ಕಾಲದಲ್ಲಿ ಅಂದರೆ ಸುಮಾರು ೧೬ ವರ್ಷ ನಾಗಲಾಂಬಿಕೆಯು ಕೂಡಲಸಂಗಮ ಕ್ಷೇತ್ರದಲ್ಲಿ ವಾಸಿಸಿರಬೇಕು. ಬಸವೇಶ್ವರನು ಸಹ ಬಹುಶಃ ಇಲ್ಲಿಯೇ ಹೆಚ್ಚಿಗೆ ಕಾಲಕಳೆದಿರಬೇಕೆಂದು ನಮಗೆ ತೋರುತ್ತದೆ.

**೧೧೫೬ ರಿಂದ ೧೧೬೨:** - ಈ ಅವಧಿಯಲ್ಲಿ ಬಿಜ್ಜಳನು ಮಂಗಳವಾಡ ಬನವಾಸಿ, ಶಿವಮೊಗ್ಗಾ ಪ್ರಾಂತಗಳಲ್ಲಿದ್ದು ರಾಜ್ಯಭಾರ ನಡಿಸುತ್ತಿದ್ದನು. ಅವನ ಆಳಿಕೆಯಲ್ಲಿ ಬಸವನು ಅವನಲ್ಲಿ ನೌಕರಿಗೆ ನಿಂತು ಬೇರೆ ಬೇರೆ ಭಾಗಗಳಲ್ಲಿ ಇರುತ್ತಿದ್ದನೆಂದು ತೋರುತ್ತದೆ. ಅಥವಾ ಮಂಗಳವಾಡ ವನ್ನು ಬಿಜ್ಜಳನು ಬಿಟ್ಟಬಳಿಕ ಬಸವನು ಎಲ್ಲಿಯೂ ಹೋಗದೆ ಕೂಡಲ ಸಂಗಮಕ್ಷೇತ್ರಕ್ಕೆ ಬಂದಿರಬಹುದು. ಇದೂ ಸಂಭವನೀಯವಿದೆ. ಈ ಅವಧಿಯಲ್ಲಿ ನಾಗಲಾಂಬಿಕೆಯು ಮಾತ್ರ ಎಲ್ಲಿಯೂ ಹೋಗದೆ ತನ್ನ ಧಾರ್ಮಿಕ ವೃತ್ತಿಯನ್ನು ಮತ್ತು ಯೋಗಾಭ್ಯಾಸ ಸಾಧನೆಗಳನ್ನು ಬಿಡದೆ ಮಾಡುತ್ತ ಕೂಡಲಸಂಗಮದಲ್ಲಿಯೇ ಇದ್ದಿರಬೇಕು. ಬಹುಶಃ ಅವಳು ಈ ಕ್ಷೇತ್ರಕ್ಕೆ ಬರುತ್ತಿದ್ದ ಶಿವಶರಣರೊಡನೆ ಧಾರ್ಮಿಕ ಚರ್ಚೆಗಳಲ್ಲಿ ಅಂಗವಹಿಸುತ್ತಿರಬಹುದು. ಮತ್ತು ತನ್ನ ಮಗ ಚನ್ನಬಸವನಿಗೆ ಧರ್ಮ ಗ್ರಂಥಗಳನ್ನು ತಿಳಿಸಿಕೇಳುತ್ತ ತನ್ನ ವೇಳೆಯನ್ನು ಕಳೆಯುತ್ತಿರಬಹುದು.

**೧೧೬೨ ರಿಂದ ೧೧೬೮:—** ಬಿಜ್ಜಳನು ಕಲ್ಯಾಣದಲ್ಲಿ ಆಳುತ್ತಿರುವಾಗ ಬಲದೇವ ಮಂತ್ರಿಯು ಬಸವೇಶ್ವರನನ್ನು ತನ್ನಲ್ಲಿ ಬರಮಾಡಿಕೊಂಡು ಕಲ್ಯಾಣದಲ್ಲಿ ವಿವಾಹ ಸಮಾರಂಭವನ್ನು ಜರಿಗಿಸಿದನು. ಆಗ ನಾಗಲಾಂಬಿಕೆ, ಅವಳ ಗಂಡ ಶಿವಸ್ವಾಮಿ ಇವರು ಬಂದಿದ್ದರೆಂದು ಸಿಂಗಿರಾಜ ಪುರಾಣ ದಲ್ಲಿ ಹೇಳಿದೆ. ಅವರು ಕಲ್ಯಾಣಕ್ಕೆ ಮೊದಲು ಹೋದಾಗ್ಗೆ ಅವರು ಸೊಡ್ಡಳಬಾಚರಸನ ಮನೆಯಲ್ಲಿ ಮೊದಲು ಇಳಿದಿದ್ದರೆಂದು ಈ ಗ್ರಂಥ ದಲ್ಲಿ ಹೇಳಿದೆ.

**೧೧೬೮:—** ಈ ವರ್ಷ ಬಿಜ್ಜಳನು ಮರಣಹೊಂದಿದನು. ಹರಳಯ್ಯ ಮಧುವರಸರಿಗೆ ಎಳಹೂಟೆ ಶಿಕ್ಷೆಯನ್ನು ವಿಧಿಸಲು ಅವರು ಅದರಲ್ಲಿ ಮರಣಹೊಂದಿದರು.

**೧೧೬೮-೬೯:—** ಚನ್ನಬಸವೇಶ್ವರ ಮಡಿವಾಳಮಾಚಿದೇವ ಮೊದ ಲಾದವರು ಬಿಜ್ಜಳನೊಡನೆ ಯುದ್ಧದಲ್ಲಿ ತೊಡಗಿ ಬೇರೆ ಬೇರೆ ಸ್ಥಳಗಳಲ್ಲಿ ವೈರಿಗಳೊಡನೆ ಹೋರಾಡುತ್ತ ಲಿಂಗದೊಳಗಾದರು.

ಈ ಪ್ರಕಾರ ಈ ಕಾಲದಲ್ಲಿ ಸಂಗತಿಗಳು ಘಟಿಸಿವೆ. ಹೀಗೆ ಘಟಿಸಿದ್ದು ವೀರಶೈವ ಪುರಾಣಗಳಿಂದ ತಿಳಿದುಬರುತ್ತಿವೆ. ಐತಿಹಾಸಿಕ ದೃಷ್ಟಿಯಿಂದಲೂ ವಿಚಾರ ಮಾಡಿದಲ್ಲಿ ಇವು ಸಂಭವನೀಯವಾಗಿ ತೋರುತ್ತವೆ.

## ಚನ್ನಬಸವನ ಶಿಕ್ಷಣ

ಮೇಲಿನ ಅವಧಿಗಳಲ್ಲಿ ೧೧೪೦ರಿಂದ ೧೧೫೬ ಈ ಅವಧಿಯು ಬಸವೇಶ್ವರ, ಚನ್ನಬಸವೇಶ್ವರ ಮತ್ತು ನಾಗಲಾಂಬಿಕೆ ಇವರ ಆಯುಷ್ಯದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಈ ಕಾಲಕ್ಕೆ ಅವರು ವೀರಶೈವ ಧರ್ಮ ತತ್ವಗಳ ಸಂಶೋಧನೆ ಮತ್ತು ಅವುಗಳ ಪ್ರಚಾರದ ಬಗ್ಗೆ ವಿಶೇಷ ಪ್ರಯತ್ನಮಾಡಿದ್ದಾರೆ. ಈ ಅವಧಿಯಲ್ಲಿ ಬಸವೇಶ್ವರನು ಸಂಚಾರಮಾಡಿ ತನ್ನ ಪ್ರಭಾವವನ್ನು ಎಲ್ಲ ಕಡೆಗೂ ಬೀರಿರಬಹುದು. ಅದೇ ವೇಳೆಗೆ ನಾಗಲಾಂಬಿಕೆಯೂ ಆಚರಿಸುತ್ತ ಚನ್ನಬಸವೇಶ್ವರನ ಆಧ್ಯಾತ್ಮಿಕ ಜ್ಞಾನವನ್ನು ಬೆಳಸಲು ತೊಡಗಿದ್ದಾಳೆ. ಆದರೆ ಅವಳಾಗಲಿ ಅಥವಾ ಚನ್ನಬಸವನಾಗಲಿ ಸಂಚಾರ ಮಾಡುವಲ್ಲಿ ವೇಳೆಗಳೆಯದೆ ಈ ಕಾಲಕ್ಕೆ ಸಂಗಮಕ್ಕೆ ಬಂದ ಷಟ್‌ಸ್ಥಲ ಜ್ಞಾನಿಗಳೊಡನೆ ಶಿವಾನುಭವದ ತತ್ವಗಳನ್ನು ಚರ್ಚಿಸಿ ಅವುಗಳ ಆಚರಣೆಗಳ ರೀತಿಯನ್ನು ಅವರು ದೃಢಪಡಿಸಿರಬಹುದೆಂದು ನಮಗೆ ತೋರುತ್ತದೆ.

ಬಾಗೇವಾಡಿ ಗ್ರಾಮಕ್ಕೆ ಸಮೀಪವಾಗಿ ಮುಕ್ತಿಗಿ ಮತ್ತು ಮನಗೂಳಿ ಎಂಬ ಗ್ರಾಮಗಳಿವೆ. ಇಲ್ಲಿ ಈಗಲೂ ದೊರೆಯುವ ಶಿಲಾಶಾಸನಗಳಿಂದ ಈ ಗ್ರಾಮಗಳು ಪಾಶುಪತ ಮತಸ್ಥರ ಮತ್ತು ಕಾಳಾಮುಖ ಶೈವರ ಕೇಂದ್ರಸ್ಥಾನಗಳಾಗಿದ್ದವು. ಈ ಕಾಲದಲ್ಲಿ ಇಲ್ಲಿ ಅನೇಕ ವಿದ್ವಾಂಸರು ವಾಸಿಸುತ್ತಿದ್ದರು. ಈ ಮತವು ವೀರಶೈವ ಸಿದ್ಧಾಂತಕ್ಕೆ ಸಮೀಪವರ್ತಿಯಾದುದು. ಸಾಂಖ್ಯಶಾಸ್ತ್ರದಲ್ಲಿ ಅಡಕವಾಗಿರುವ ಪಂಚೀಕರಣವೂ ಷಟ್‌ಸ್ಥಲಕ್ಕೆ ಸಂಬಂಧಿಸಿದುದು. ನಾಗಲಾಂಬಿಕೆ ಚನ್ನಬಸವೇಶ್ವರರು ಸಂಗಮದಲ್ಲಿದ್ದಾಗ್ಗೆ ಬಸವೇಶ್ವರನು ಸ್ವಾಭಾವಿಕವಾಗಿ ಅಲ್ಲಿಯೇ ಇದ್ದಿರಬಹುದು. ಅವನು ಹೊರಗೆ ಹೋಗುತ್ತಿದ್ದರೆ ಇಲ್ಲಿಗೆ ಆಗಿಂದಾಗ್ಗೆ ಅವನು ತಿರುಗಿ ಬರುತ್ತಿರಬಹುದು. ಈ ಕಾಲದಲ್ಲಿ ಚನ್ನಬಸವೇಶ್ವರ ಬಸವೇಶ್ವರರು ವಚನಶಾಸ್ತ್ರದಲ್ಲಿರುವ ಶಿವಾನುಭವದ ತತ್ವಗಳನ್ನು ದೃಢಪಡಿಸಿಕೊಂಡಿರಬಹುದು. ಮುಂದೆ ಬಸವೇಶ್ವರನು ಕಲ್ಯಾಣದಲ್ಲಿ ಮಂತ್ರಿಪದದಲ್ಲಿದ್ದಾಗ್ಗೆ ಅವನು ಅಲ್ಲಿ ಶಿವಾನುಭವ ಮಂಟಪವನ್ನು ರಚಿಸಿ ಬಹು ಜನ ಶಿವಶರಣರಿಗೆ ಆಶ್ರಯ ಕೊಟ್ಟು ಅವರೊಡನೆ ಈ ವಿಷಯವನ್ನು ಹೆಚ್ಚಿಗೆ ಚರ್ಚಿಸಿ ಅವುಗಳನ್ನು ವಿಸ್ತರಿಸಿದ್ದಾನೆ. ಈ ಕಾರ್ಯದಲ್ಲಿ ನಾಗಲಾಂಬಿಕೆ ಮತ್ತು ಚನ್ನಬಸವ ಇವರು ಬಹು ಹೆಚ್ಚಾಗಿ ಅವನಿಗೆ ಸಹಾಯ ಮಾಡಿದ್ದಾರೆ. ಆದ್ದರಿಂದ ೧೧೪೦ ರಿಂದ

೧೧೬೭. ಈ ಮಧ್ಯದಲ್ಲಿರುವ ಕಾಲವು ಈ ಮೂವರ ಆಯುಷ್ಯದಲ್ಲಿ ಬಹು ಮಹತ್ವದ್ದಾಗಿರುತ್ತದೆ. ಶಿವಾನುಭವ ಶಾಸ್ತ್ರದ ಅಡಿಗಲ್ಲು ಇಲ್ಲಿಯೇ ಮೊದಲು ಹಾಕಿದ್ದಾಗಿರಬೇಕು. ನಾಗಲಾಂಬಿಕೆ ಮತ್ತು ಬಸವೇಶ್ವರ ಇವರು ಇದಕ್ಕೆ ಮೂಲಪುರುಷರಾಗಿದ್ದಾರೆ. ಇವರು ಅದ್ಭುತ ಜ್ಞಾನಿಗಳಾಗಿದ್ದು ಚನ್ನಬಸವೇಶ್ವರನು ಅವರು ನಡೆಸಿದ ಕೃತಿಗೆ ಕಲಶವನ್ನಿಟ್ಟಿದ್ದಾನೆ. ಈ ಹದಿನಾರು ವರ್ಷಗಳನ್ನು ಈ ಮೂವರೂ ತತ್ತ್ವಾರ್ಥ ಚಿಂತನೆಯಲ್ಲಿ ಕಳೆದಿದ್ದಾರೆ. ಹೀಗೆ ಘಟನೆಗಳು ನಡೆದಿರಬೇಕೆಂದು ನಾವು ಊಹಿಸುತ್ತೇವೆ.

## ಕಲ್ಯಾಣದಲ್ಲಿ ಮಾಡಿದ ಕಾರ್ಯಗಳು

ಬಿಜ್ಜಳನು ೧೧೬೨ನೇ ಇಸ್ವಿಯಲ್ಲಿ ಚಕ್ರಾಧಿಪತಿಯಾಗಿ ಕಲ್ಯಾಣದಲ್ಲಿ ಆಳುತ್ತಿದ್ದನು. ಅವನಿಗೆ ಬಲದೇವನು ಮಂತ್ರಿಯಾಗಿದ್ದನು. ಆಗ ಅವನು ಸಂಗಮ ಕ್ಷೇತ್ರದಲ್ಲಿ ವಾಸಿಸುತ್ತಿದ್ದ ಬಸವೇಶ್ವರನಿಗೆ ತನ್ನ ಮಗಳು ಗಂಗಾಂಬಿಕೆಯನ್ನು ಕೊಟ್ಟು ಲಗ್ನಮಾಡಬೇಕೆಂದು ಅಪೇಕ್ಷಿಸಿ ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡನು. ಅವನೊಡನೆ ನಾಗಲಾಂಬಿಕೆಯೂ ಇದ್ದು ಲಗ್ನವಾದ ಬಳಿಕ ಅವರೆಲ್ಲರೂ ಬಸವನ ಮಂದಿರದಲ್ಲಿರುತ್ತಿದ್ದರು. ಇದರ ತರುವಾಯ ನಾಗಲಾಂಬಿಕೆಯು ಯಾವರೀತಿ ವರ್ತಿಸುತ್ತಾ ಬಂದಳೆಂಬುದು ಮಹತ್ವದ ವಿಷಯವಾಗಿದೆ.

ನಾಗಲಾಂಬಿಕೆಯು ಚಿಕ್ಕಂದಿನಿಂದಲೂ ಯೋಗಿಣಿ ಎಂದೆನಿಸಿಕೊಂಡಿದ್ದಳು. ಅವಳು ಕಲ್ಯಾಣಕ್ಕೆ ಬಂದಬಳಿಕ ತನ್ನ ಯೋಗಾಭ್ಯಾಸವನ್ನು ಮುಂದುವರಿಸಿರಬೇಕೆಂದು ನಾವು ಊಹಿಸುತ್ತೇವೆ. ಯಾಕಂದರೆ ಕಲ್ಯಾಣ ಪಟ್ಟಣದಲ್ಲಿ ತ್ರಿಪುರಾಂತಕೇಶ್ವರ ಸರೋವರದ ಬಳಿಯಲ್ಲಿ ಆಕೆಯ ಹೆಸರಿನ ಗುಹೆಗಳಿವೆ. ಅವಳು ಅವುಗಳಲ್ಲಿದ್ದು ಪರಮಾತ್ಮನ ಚಿಂತನೆಯಲ್ಲಿರುತ್ತಿದ್ದಳೆಂದು ತೋರುತ್ತದೆ.

ಈ ಕಾಲದಲ್ಲಿ ಶಿವಾನುಭವ ಮಂಟಪದ ಸ್ಥಾಪನೆಯಾಗಿ ಅದರ ಕಾರ್ಯಗಳು ಬಲವಾಗಿ ಸಾಗಿದ್ದವು. ಅದರ ಮೂಲಕ ಅನೇಕ ವಚನಕಾರರಾದರು. ನಾಗಲಾಂಬಿಕೆಯಾದರೂ ವಚನಕಾರಳಾಗಿದ್ದಳೆ. ಅವಳ ಮುದ್ರಿಕೆಯು "ಚನ್ನಬಸವಣ್ಣಪ್ರಿಯ ಚನ್ನಸಂಗಾ" ಎಂದಿದೆ. ಬಸವೇಶ್ವರನೊಡನೆ ನಾಗಲಾಂಬಿಕೆ ಮಾತ್ರವಲ್ಲ. ಅವನ ಹೆಂಡಂದಿರಾದ ಗಂಗಾಂಬಿಕೆ ನೀಲಾಂಬಿಕೆ ಇವರೂ ಅವನ ಅರಮನೆಯಲ್ಲಿ ಸ್ವಾಭಾವಿಕವಾಗಿ ಇದ್ದು

ತ್ತಿದ್ದರು. ಇವರೂ ಕೂಡ ವಚನಕಾರ್ತಿಯರಿದ್ದಾರೆ. ನೀಲಾಂಬಿಕೆಯ ಮುದ್ರಿಕೆಯು "ಗಂಗಾಪ್ರಿಯ ಕೂಡಲಸಂಗಮದೇವಾ" ಎಂದಿದೆ. ಆದರೆ ಈ ಮೂವರು ಮಹಾದೇವಿಯಕ್ಕ, ಕಾಶ್ಮೀರದ ರಾಣಿಯಾದ ಮಹಾದೇವಿ ಯಮ್ಮ, ಹಡಪದ ಲಿಂಗಮ್ಮ ಇವರಷ್ಟು ಹೆಸರುಗೊಂಡಿಲ್ಲ. ಇವರು ರಚಿಸಿದ ವಚನಗಳ ಸಂಖ್ಯೆಯು ಬಹಳ ಹೆಚ್ಚಾಗಿರುವದಿಲ್ಲ. ಆದ್ದರಿಂದ ಈ ಮೂವರು ಬಸವೇಶ್ವರನ ಮಂದಿರದಲ್ಲಿ ಹೆಚ್ಚು ಕಾಲ ಕಳೆಯುತ್ತ ಬಸವೇಶ್ವರನನ್ನು ಕಾಣಬಂದ ಅತಿಥಿ ಅಭ್ಯಾಗತರನ್ನು ಆದರಿಸುವದರಲ್ಲಿ ಹೆಚ್ಚಾಗಿ ತೊಡಗಿರುತ್ತಿದ್ದರೆಂದು ತೋರುತ್ತದೆ. ಈ ಮೂವರಲ್ಲಿ ನಾಗಲಾಂಬಿಕೆಯು ಸ್ವಾಭಾವಿಕವಾಗಿ ಎಲ್ಲರಗಿಂತಲೂ ಹೆಚ್ಚು ವರ್ಚಸ್ಸು ಳ್ಳವಳಾಗಿದ್ದಳು. ಇವಳು ಬಸವೇಶ್ವರನೊಡನೆ ಸ್ವಗ್ರಾಮದಿಂದ ಹೊರಗೆ ಹಾಕಲ್ಪಟ್ಟು ಅವನೊಡನೆ ಕಷ್ಟವನ್ನು ಅನುಭವಿಸಿದವಳಿದ್ದಾಳೆ. ಒಟ್ಟು ಯೆರೇಗಣಿ ಎಂತಲೂ ಹೆಸರಾಗಿದ್ದಾಳೆ. ತತ್ವಜ್ಞಾನಿಯಾದ ಅನುಭಾವಿ ಯಾದ ಚನ್ನಬಸವೇಶ್ವರನ ತಾಯಿಯೂ ಇದ್ದಾಳೆ. ಹೀಗೆ ಇವಳು ಶಿವಾನುಭವದ ಉಚ್ಚಸ್ಥಾನದಲ್ಲಿ ವ್ಯವಹರಿಸುತ್ತ ಬಸವೇಶ್ವರನ ಉಭಯ ಕೆಂಡಂದಿರರಿಗೆ ಮಾರ್ಗದರ್ಶಿಯಾಗಿ ಬಸವೇಶ್ವರನ ನೆರೆಯಲ್ಲಿ ಹೆಚ್ಚಾಗಿ ಕಾಲಕಳೆಯುತ್ತಿರಬಹುದು. ಈ ಪ್ರಕಾರ ಈಕೆಯು ಅರುವರ್ಷ ಕಲ್ಯಾಣ ಪಟ್ಟಣದಲ್ಲಿ ಉಚ್ಚ ಅಧ್ಯಾತ್ಮಿಕ ವಾತಾವರಣದಲ್ಲಿ ಕಾಲಕಳೆಯುತ್ತ ಅನೆ ಶಿವಶರಣ ಶರಣೆಯರಿಗೆ ಮಾರ್ಗದರ್ಶಿಯಾಗಿದ್ದಾಳೆ.

## ನಾಗಲಾಂಬಿಕೆಯ ವಚನಗಳು.

ನಾಗಲಾಂಬಿಕೆಯು ನಾವು ಹಿಂದೆ ಹೇಳಿದಂತೆ ವಚನಕಾರಳಿದ್ದಾಳೆ. ಅವಳು ತನ್ನ ಕೆಲವು ವಚನಗಳಲ್ಲಿ ಶಿವಶರಣರ ಕೂಡ ಹೇಗೆ ನಡೆದು ಕೊಂಡಳೆಂಬುದನ್ನು ಕುರಿತು ನಾವು ಊಹಿಸಬಹುದಾಗಿದೆ. ಈ ಕಾಲದಲ್ಲಿ ಶಿವಶರಣರಲ್ಲಿ ಬಸವೇಶ್ವರ, ಚನ್ನಬಸವೇಶ್ವರ ಮತ್ತು ಅಲ್ಲಮಪ್ರಭು ಇವರು ಅತ್ಯಂತ ಉಚ್ಚಸ್ಥಾನವನ್ನು ಹೊಂದಿದವರಾಗಿದ್ದರು. ಅವರು ವಿಷಯ ವಾಗಿ ನಾಗಲಾಂಬಿಕೆಯು ಕೆಲವು ಉಲ್ಲೇಖಗಳನ್ನು ತನ್ನ ವಚನಗಳಲ್ಲಿ ಮಾಡಿದ್ದಾಳೆ. ಅವುಗಳನ್ನು ನಾವು ಕೆಳಗೆ ಕೊಡುತ್ತೇವೆ.

ಕಲ್ಯಾಣದಲ್ಲಿ ಮಧುವರಸ ಹರಳಯ್ಯ ಇವರ ಹಿಂಸೆಯಾದ ಬಳಿಕ ಬಸವೇಶ್ವರನು ಕೂಡಲಸಂಗಮ ಕ್ಷೇತ್ರಕ್ಕೆ ತೆರಳಿದನಷ್ಟೇ. ಆಗ

ಕಲ್ಯಾಣದಲ್ಲಿ ಮತ್ತು ನಾಡಿನಲ್ಲಿ ಅಸ್ವಸ್ಥತೆಯಾಗಿರಲಿಕ್ಕೆ ಬೇಕು. ಅನೈತಿಕಾಚಾರಗಳು ಹೆಚ್ಚಾಗಿರಲಿಕ್ಕೆ ಬೇಕು. ಈ ಸ್ಥಿತಿಯನ್ನು ನಾಗಲಾಂಬಿಕೆಯು ಲಕ್ಷಿಸಿ ಮನನೊಂದು ಒಂದು ವಚನದಲ್ಲಿ ದುಃಖಿಸುತ್ತಿದ್ದಾಳೆ. ಅದು ಯಾವದೆಂದರೆ:—

(೧) ಬಸವಣ್ಣ, ನೀವು ಮರ್ತ್ಯಕ್ಕೆ ಬಂದು ನಿಂತರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲ ಪಸರಿಸಿತ್ತಲ್ಲಾ. ಅಯ್ಯೋ ಸ್ವರ್ಗ, ಮರ್ತ್ಯ ಪಾತಾಳ ಲೋಕಗೆಲ್ಲ ನಿಮ್ಮ ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರು ಅಣ್ಣಾ ? ಶಶಿಧರನಟ್ಟಿದ ಮಾಣಿಕ ಪೂಸ್ತೈಸಿತೆಂದು ನೀವು ಲಿಂಗೈಕ್ಯವಾದಡೆ ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ. ಅಸಂಖ್ಯಾತ ಮಹಾ ಗಣಂಗಳು ಹೋದರಣ್ಣಾ. ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತಲ್ಲಾ. ಬಸವಣ್ಣ ಎನ್ನನೊಯ್ಯದೆ ಹೋದೆಯಲ್ಲಾ. ಪಂಚ ಪರುಷಮೂರ್ತಿ ಬಸವಣ್ಣಾ, ಬಸವಣ್ಣ ಪ್ರಿಯ ಚನ್ನಸಂಗಯ್ಯಂಗೆ ಪ್ರಾಣಲಿಂಗವಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ.

ನಾಗಲಾಂಬಿಕೆಯು ತನ್ನ ತಮ್ಮ ಬಸವಣ್ಣನು ಕಲ್ಯಾಣ ಬಿಟ್ಟ ಕೂಡಲೇ ತನಗಾದ ದುಃಖವನ್ನು ಬಹು ಹೃದಯ ದ್ರಾವಕವಾದ ರೀತಿಯಿಂದ ಮೇಲಿನ ವಚನದಲ್ಲಿ ಹೇಳಿದ್ದಾಳೆ.

ಇನ್ನೊಂದು ವಚನದಲ್ಲಿ ಅವಳು ಬಸವೇಶ್ವರನು ತನ್ನ ಮಗು ಎಂದು ಭಾವಿಸಿ ಅವನ ಸಲುವಾಗಿ ಅತ್ಯಂತ ಮಮತೆಯಿಂದ ನುಡಿದಿದ್ದಾಳೆ. ಅದು ಯಾವದೆಂದರೆ:—

(೨) ಬಸವನೇ ಮುಖಸಜ್ಜೆ. ಬಸವನೇ ಅನುಶೋಕ್ಯ, ಬಸವನ ನಾನೆತ್ತಿ ಮುದ್ದಾಡಿಸುವೆನು ಬಸವ, ಸಂಗನಬಸವದೇವಾ ಜಯತು. ಬಸವಾ ಸಂಗನ ಬಸವ ಲಿಂಗಾ ಜಯತು. ಬಸವಗೂ ಎನಗೂ ಭಾವಭೇದವಿಲ್ಲ. ಬಸವಗೂ ಎನಗೂ ಉಂಟು. ಬಸವಣ್ಣಾ ಪ್ರಿಯ ಚನ್ನಸಂಗಯ್ಯನಲ್ಲಿ ಬಸವನ ಬೆಸಲಾದ ಬಾಣತಿ ನಾನಯ್ಯ ಬಸವಾ ಬಸವಾ, ಬಸವಾ.

ಇದರಲ್ಲಿ ನಾಗಲಾಂಬಿಕೆಯು ಚಿಕ್ಕಂದಿನಲ್ಲಿ ಬಸವನ ವಿಷಯವಾಗಿ ಪ್ರೀತಿಯನ್ನು ವಹಿಸಿ ಅವನನ್ನು ತನ್ನ ಮಗುವಿನಂತೆ ಕಂಡು ಅವನ ಕೂಡ ಹೇಗೆ ವರ್ತಿಸಿದ್ದಾಳೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಬಹು ಸುಂದರವಾದ ವಚನವು ಇದಾಗಿದೆ.

ಕೆಳಗಿನ ವಚನದಲ್ಲಿ ಬಸವೇಶ್ವರನು ತನ್ನ ಆಧ್ಯಾತ್ಮಿಕ ಜ್ಞಾನದಲ್ಲಿ ಉಚ್ಚ ತರಗತಿಯನ್ನು ಹೊಂದಲಾಗಿ ಅವನನ್ನು ಯಾವ ರೀತಿಯಿಂದ ಅವಳು ಆದರಿಸ ಹತ್ತಿದಳೆಂಬುದು ಕೆಳಗಿನ ವಚನದಲ್ಲಿ ತಿಳಿದು ಬರುತ್ತದೆ. ಇದರಲ್ಲಿ ಅವಳು ಬಸವನು ಚಿಕ್ಕ ಮಗು ಎಂದು ಭಾವಿಸದೆ ತನ್ನ ಗುರುವೆಂದು ಭಾವಿಸಿ ಅವನನ್ನು ಆದರಿಸಿ ಸಂಬೋಧಿಸಿದ್ದಾಳೆ.

(೩) ಎನ್ನ ಕುಲಸೂತಕವ ಕಳೆದಾತ ಬಸವಣ್ಣ. ಎನ್ನಛಲಸೂತಕವ ಕಳೆದಾತ ಬಸವಣ್ಣ. ಎನ್ನ ತನು ಸೂತಕವ ಕಳೆದಾತ ಬಸವಣ್ಣ. ಎನ್ನ ಮನಸೂತಕವ ಕಳೆದಾತ ಬಸವಣ್ಣ. ಎನ್ನ ನೆನಹು ಸೂತಕ ಕಳೆದಾತ ಬಸವಣ್ಣ. ಎನ್ನ ಭಾವ ಸೂತಕವ ಕಳೆದಾತ ಬಸವಣ್ಣ. ಎನ್ನ ಕುರುಹು ಮರಹಿನ ಸಂದು ಸಂಶಯವ ಬಿಡಿಸಿದಾತ ಬಸವಣ್ಣ. ಎನ್ನ ತನ್ನೊಳಗೆ ಇಂಬಿಟ್ಟು ಕೊಂಡಾತ ಬಸವಣ್ಣ. ತನ್ನ ಎನ್ನೊಳಗೆ ಇಂಬಿಟ್ಟು ಕೊಂಡಾತ ಬಸವಣ್ಣ. ನಿಜದ ನಿರ್ಣಯುಲ ಬಾಗಿಲ ನಿಜವ ತೋರಿದಾತ ಬಸವಣ್ಣ. ಬಸವಣ್ಣ ಪ್ರಿಯ ಚನ್ನ ಸಂಗನ ಹೃದಯದಲ್ಲಿ ನಿಜ ನಿವಾಸಿಯಾಗಿ ಇರಿಸಿದ ಎನ್ನ ತಂದೆ ಸಂಗನಬಸವಣ್ಣ.

ಇದರಲ್ಲಿ ನಾಗಲಾಂಕೆಯು ಬಸವಣ್ಣನ ಜ್ಞಾನ ಅವನ ಅನುಭಾವ ಇವುಗಳನ್ನು ನೋಡಿ ಅವನು ಹೆಚ್ಚಿನವನೆಂಬುದು ಭಾವಿಸಿ ಈ ವಚನವನ್ನು ನುಡಿದಿದ್ದಾಳೆ.

ಶಿವಶರಣರು ಸ್ತ್ರೀ ಪುರುಷ ಭೇದ, ವಯಸ್ಸಿನ ಭೇದ ಇವುಗಳನ್ನು ಎಣಿಸುವದಿಲ್ಲ. ಅವುಗಳ ಮೇಲಿಂದ ಯಾರಲ್ಲಿಯೂ ಹೆಚ್ಚು ಕಡಿಮೆ ಭೇದವನ್ನು ಅವರು ಮಾಡುವದಿಲ್ಲ. ಜ್ಞಾನಿಗಳಾದವರೇ ಹೆಚ್ಚಿನವರೆಂದು ತಿಳಿದು ಅಂಥವರನ್ನು ಅವರು ಮನ್ನಿಸುತ್ತಾರೆ. ಮಹಾದೇವಿಯಕ್ಕನು ಒಬ್ಬ ಸ್ತ್ರೀಯು ಮತ್ತು ವಯಸ್ಸಿನಲ್ಲಿ ಕಿರಿಯಳು. ಆದರೂ ಅವಳು ಹಿರಿಯರಿಗಿಂತ ಹಿರಿಯಳೆಂದು ಶಿವಶರಣರು ಅವಳನ್ನು ಕುರಿತು ಹೇಳಿದ್ದಾರೆ. ಚನ್ನಬಸವೇಶ್ವರನು ನಾಗಲಾಂಬಿಕೆಯ ಪುತ್ರನು. ಅವಳು ಅವನಿಗೆ ಚಿಕ್ಕಂದಿನಲ್ಲಿ ವಿದ್ಯಾ ಬುದ್ಧಿಯನ್ನು ಕಲಿಸಿ ಜ್ಞಾನಿಯನ್ನಾಗಿ ಮಾಡಿದಳು. ಆದರೆ ಚನ್ನಬಸವನು ಮುಂದೆ ಶಿವಾನುಭವ ಮಂಟಪದಲ್ಲಿ ಅದ್ಭುತ ಜ್ಞಾನಿಯೂ, ಅನುಭಾವಿಯೂ ಎಂದೆನಿಸಿಕೊಂಡು ಉಚ್ಚಸ್ಥಿತಿಗೆ ಬಂದನು. ನಾಗಲಾಂಬಿಕೆಯು ಜ್ಞಾನಿಯೂ ಯೋಗಿಣಿಯೂ ಆಗಿದ್ದರೂ ಅವಳು

ಚನ್ನಬಸವನನ್ನು ಮತ್ತು ತನ್ನಗಿಂತ ಚಿಕ್ಕವನಾದ ಬಸವೇಶ್ವರನನ್ನು ಹೇಗೆ ಮನ್ನಿಸಿದ್ದಾಳೆಂಬುದು ಕೆಳಗಿನ ವಚನಗಳಲ್ಲಿ ಹೇಳಿದೆ. ಇದರಿಂದ ಶಿವಶರಣರ ಧರ್ಮವು ಎಷ್ಟು ವಿಸ್ತೃತವೂ, ಉದಾರವೂ, ಜ್ಞಾನ ಮತ್ತು ಅನುಭಾವಕ್ಕೆ ಮಹತ್ವ ಕೊಡುವಂಥದೂ ಇರುತ್ತದೆಂಬುದು ತಿಳಿದು ಬರುತ್ತದೆ.

(೪) ಎನ್ನ ತನು ಚನ್ನಬಸವಣ್ಣನ ಬಯಲ ಬೆರಸಿತ್ತು. ಎನ್ನ ಮನ ಸಂಗನಬಸವಣ್ಣನ ನಿಜ ಪದವ ಬೆರಿಸಿತ್ತು. ಎನ್ನ ಪ್ರಾಣ ಅಲ್ಲಮ ಪ್ರಭುದೇವರ ಅರಿವ ಬೆರಿಸಿತ್ತು. ಇಂತೀ ಮೂವರು ಒಂದೊಂದು ಹಂಚಿಟ್ಟುಕೊಂಡಿಟ್ಟ ಕಾರಣ ಎನಗೇನೂ ಇಲ್ಲದೆ ಬಸವಣ್ಣ ಪ್ರಿಯ ಚನ್ನಸಂಗಯ್ಯನ ಹೃದಯ ಕಮಲದಲ್ಲಿ ನಿಜ ವಾಸಿಯಾಗಿರ್ದೆನು.

(೫) ಎನ್ನ ಭವದ ಬಳ್ಳಿಯ ಬೇರು ಹರಿದಿತ್ತಯ್ಯ, ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ. ಎನ್ನ ಮನದ ಕಪಟ ಹಿಂಗಿತ್ತಯ್ಯ ಚನ್ನಬಸವಣ್ಣನ ಕರುಣವ ಪಡೆದೆನಾಗಿ. ಎನ್ನ ಅಂತರಂಗದ ಸಂದು ಸಂಶಯ ತೊಲಗಿತ್ತಿಂದು ಬಸವಣ್ಣ ಪ್ರಿಯ ಚನ್ನಸಂಗಯ್ಯನಲ್ಲಿ ಎನ್ನ ಪರಮಗುರು ಅಲ್ಲಮ ಪ್ರಭುದೇವರ ಶ್ರೀ ಚರಣವ ಕಂಡೆನಾಗಿ.

ಮೇಲೆ ನಾಲ್ಕನೆಯ ವಚನದಲ್ಲಿ ನಾಗಲಾಂಬಿಕೆಯು ತನ್ನ ತನು-ಮನ ಪ್ರಾಣಗಳು ಅನುಕ್ರಮವಾಗಿ ಚನ್ನಬಸವ, ಬಸವ, ಅಲ್ಲಮಪ್ರಭು ಇವರಲ್ಲಿ ತನ್ಮಯವಾಗಿವೆ. ಅವರ ಅರಿವನ್ನು ನಾನು ಒಳಕೊಂಡಿದ್ದೇನೆ, ನನ್ನದೇನು ಇಲ್ಲವೆಂದು ಹೇಳಿದ್ದಾಳೆ. ಇವಳ ಮುಂದಿನ ವಚನದಲ್ಲಿ ಇದೇ ಭಾವವನ್ನು ಬೇರೊಂದು ರೀತಿಯಿಂದ ಅವಳು ಹೇಳಿದ್ದಾಳೆ.

ಈ ವಚನಗಳಿಂದ ಹಿಂದಿನ ಕಾಲದ ಶಿವಶರಣರು ತಮ್ಮ ತಮ್ಮಲ್ಲಿ ಭಿನ್ನ ಭಾವಗಳನ್ನು ಅಳಿದು ಪರಸ್ಪರವಾಗಿ ಹೇಗೆ ನಡೆದರು. ಮತ್ತು ಅವರು ಪರಮಾರ್ಥವನ್ನು ಹೇಗೆ ಸಾಧಿಸಿದರೆಂಬುದು ತಿಳಿದು ಬರುತ್ತದೆ. ಅನುಭವವುಳ್ಳವರು ಚಿಕ್ಕವರಿರಲಿ, ದೊಡ್ಡವರಿರಲಿ, ಅವರ ಸಹಾಯದಿಂದ ಪಾರಮಾರ್ಥವನ್ನು ಸಾಧಿಸಬೇಕೆಂಬ ಭಾವವು ಇವುಗಳಲ್ಲಿ ವ್ಯಕ್ತವಾಗುತ್ತದೆ.

## ಬಸವೇಶ್ವರನು ಕಲ್ಯಾಣಬಿಟ್ಟದ್ದು

ಈ ಸಮಯದಲ್ಲಿ ಹರಳಯ್ಯ ಮಧುವರಸರ ಪ್ರಶ್ನೆಯು ಓಲಗದಲ್ಲಿ ಉಪಸ್ಥಿತವಾಯಿತು. ಅವರು ತಮ್ಮ ಮನೆತನಗಳಲ್ಲಿ ಪರಸ್ಪರ ಲಗ್ನವಾಡಿ

ಕೊಂಡ ವಿಷಯವು ಬಿಜ್ಜಳನಿಗೆ ಒಂದು ಘೋರಪಾತಕವೆಂದು ತೋರಿತು. ಮತ್ತು ಅವರಿಗೆ ಎಳಹೂಟೆಯಿಂದ ದೇಹಾಂತ ಶಿಕ್ಷೆಯಾಗಬೇಕೆಂದು ವಿಧಿಸಿದನು. ಅವನು ನಿರ್ಣಯಿಸಿದಂತೆ ಶಿಕ್ಷೆಯು ಪಾಲಿಸಲ್ಪಟ್ಟಿತು. ಕೂಡಲೇ ಕಲ್ಯಾಣದಲ್ಲಿ ಭಯಂಕರ ಕ್ಷೋಭೆಯುಂಟಾಯಿತು. ಇನ್ನು ಮೇಲೆ ಇಂಥ ಪಟ್ಟಣದಲ್ಲಿರಬಾರದೆಂದು ಅತ್ಯಂತ ಕೋಮಲ ಹೃದಯನಾದ ಬಸವೇಶ್ವರನಿಗೆ ತೋರಿ ಅವನು ಕೂಡಲೇ ಪಟ್ಟಣವನ್ನು ಬಿಟ್ಟು ಕಪ್ಪಡಿ ಸಂಗಮನಾಥನೆಡೆಗೆ ಸಾಗಿದನು. ಅವನು ಪಟ್ಟಣ ಬಿಡುವ ಮೊದಲು ಚನ್ನಬಸವನು ತನ್ನ ತರುವಾಯ ಆಡಳಿತೆಯನ್ನು ನಡಿಸಬೇಕೆಂದು ಕಟ್ಟು ಮಾಡಿ ಹೊರಟನು.

## ಶಿವಶರಣರ ದೇಶತ್ಯಾಗ

ಶಿವಶರಣರ ನಡೆಗೆ ಭಂಗ ಬಂದಲ್ಲಿ ಅದಕ್ಕೆ ತಕ್ಕ ಪ್ರತಿಕಾರ ಮಾಡಬೇಕು, ಪ್ರತಿಕಾರ ಶಕ್ಯವಿಲ್ಲದಲ್ಲಿ ಆ ನಾಡನ್ನು ತ್ಯಜಿಸಿ ಹೋಗಬೇಕು, ತ್ಯಜಿಸಿ ಹೋಗಲು ಶಕ್ಯವಿಲ್ಲದಲ್ಲಿ ತನ್ನ ಅಸುವನ್ನೇ ನೀಗಬೇಕು, ಎಂದು ಶಿವಶರಣರ ನಡೆ ಇದೆ. ಈ ಕಾಲದಲ್ಲಿ ಶಿವಶರಣರಿಗೆ ಒಬ್ಬ ಬಲಾಢ್ಯ ನೃಪತಿಯು ಶತ್ರುವಾಗಿದ್ದನು. ಅವನನ್ನು ಹೋರಾಟದಲ್ಲಿ ನಿಗ್ರಹಿಸಲು ಶಕ್ಯವಿರಲಿಲ್ಲ. ಶಿವಶರಣರ ಸಂಖ್ಯೆಯು ಈ ಆರಂಭದ ಕಾಲದಲ್ಲಿ ಅತ್ಯಲ್ಪವಾಗಿದ್ದಿತು. ಈ ಸ್ಥಿತಿಯಲ್ಲಿ ಚನ್ನಬಸವ ಮಡಿವಾಳಮಾಚಿದೇವ, ಕಿನ್ನರಯ್ಯ, ರುದ್ರಮುನಿ ಮೊದಲಾದವರು ಶಿವಶರಣರು ಇನ್ನು ಮೇಲೆ ದೇಶಾಂತರ ಮಾಡಬೇಕೆಂದು ನಿರ್ಧರಿಸಿದರು.

ದೇಶಾಂತರ ಮಾಡಲಿಕ್ಕೆ ಅನುಕೂಲ ಸ್ಥಳಗಳು ಒಂದು ಕಡೆಗೆ ಶ್ರೀಶೈಲ ಪ್ರಾಂತ, ಮತ್ತೊಂದ ಕಡೆಗೆ ಈಗಿನ ಉತ್ತರ ಕನ್ನಡ ಜಿಲ್ಲೆಯೊಳಗಿರುವ ಸಹ್ಯಾದ್ರಿಯ ಘೋರಾರಣ್ಯ ಕಮರಿಗಳು ಇದ್ದು ಅವರಿಗೆ ತೋರಿ ಬಂದವು. ಆದ್ದರಿಂದ ಒಕ್ಕಜನ ಶಿವಶರಣರು ಶ್ರೀಶೈಲ ಪ್ರಾಂತದ ಕಡೆಗೆ ಹೊರಟು ಹೋಗಹತ್ತಿದರು. ಉಳಿದವರು ಉಳವಿಯ ಪ್ರಾಂತದ ಕಡೆಗೆ ಹೋಗಬೇಕೆಂದು ನಿರ್ಧರಿಸಿದರು. ಅಲ್ಲಮಪ್ರಭು, ಮಹಾದೇವಿಯಕ್ಕಗಳು ಶ್ರೀಶೈಲದ ಕಡೆಗೆ ಮತ್ತು ಉಳಿದವರಲ್ಲಿ ಚನ್ನಬಸವ ಮಡಿವಾಳಮಾಚಿದೇವ ಮೊದಲಾದವರು ಕದಂಬರಾಜರು ಆಳುತ್ತಿದ್ದ ಪಶ್ಚಿಮ ಘಟ್ಟದ ಪ್ರಾಂತದ ಕಡೆಗೆ ಹೋಗಲು ನಿರ್ಧರಿಸಿದರು. ಹೀಗೆ ಭಾರತದಲ್ಲಿ ಅನೇಕ ಸಮಾಜ

ಗಳು ತಮ್ಮ ಆಚರಣೆಗೆ ಭಂಗ ಬರಬಾರದೆಂದು ಇಂಥ ಸುರಕ್ಷಿತವಾದ ದೂರ ದೇಶಗಳಿಗೆ ಹೋದ ಉದಾರಣೆಗಳು ಅನೇಕ ಇರುತ್ತವೆ. ಅದೇ ಮಾರ್ಗವನ್ನು ಶಿವಶರಣರು ಈ ಕಾಲದಲ್ಲಿ ಅವಲಂಬಿಸಿದರು.

## ಯುದ್ಧ ಸಿದ್ಧತೆ

ಇಷ್ಟರಲ್ಲಿ ರಾಜಧಾನಿಯಲ್ಲಿ ಕ್ರೋಧಾವೇಶಗಳು ತೀವ್ರತರವಾಗಿ ಉದ್ಭವಿಸಿ ಎಲ್ಲೆಲ್ಲಿಯೂ ಹೊಡೆದಾಟಗಳು ನಡೆದಿದ್ದವು. ಈ ಕಠಿಣ ಪರಿಸ್ಥಿತಿಯಲ್ಲಿ ಅರಸನಕೂಡ ಯುದ್ಧ ಮಾಡುತ್ತ ತಮ್ಮ ರಕ್ಷಣೆ ಮಾಡುವದೊಂದೇ ಮಾರ್ಗವು ಶಿವಶರಣರಿಗೆ ಉಳಿಯಿತು. ಇದರಿಂದ ಉಭಯ ಪಕ್ಷಗಳಲ್ಲಿ ಯುದ್ಧ ಸಿದ್ಧತೆಗಳು ನಡೆದವು.

ಈ ಕಾಲದಲ್ಲಿ ಚನ್ನಬಸವೇಶ್ವರರು ತಾನೆಲ್ಲಿ ಹೋಗಬೇಕೆಂಬುದನ್ನು ನಿಶ್ಚಯಿಸಿಕೊಂಡು ಉಳಿವಿಯ ಪ್ರಾಂತದಲ್ಲಿ ನಿರಂತರವಾಗಿ ವಾಸಿಸಬೇಕೆಂದು ಗೊತ್ತುಮಾಡಿಕೊಂಡನು. ಆದ್ದರಿಂದ ಅವನು ಉಳಿವಿಗೆ ಹೋಗಲು ಸೈನಿಕರಾದ ತನ್ನ ಶಿವಶರಣರ ಸಲುವಾಗಿ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಲಿಕ್ಕೆ ಹತ್ತಿದನು.

ಈ ಸಂಗ್ರಹ ಕಾರ್ಯಗಳಲ್ಲಿ ಮುಖ್ಯ ಭಾಗ ವಹಿಸಿದವರು ಸ್ವಾಭಾವಿಕವಾಗಿ ಅವನ ತಾಯಿಯಾದ ನಾಗಲಾಂಬಿಕೆ ಮತ್ತು ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆ ಇವರೇ ಇದ್ದಾರೆ. ಆಹಾರ ಪದಾರ್ಥಗಳನ್ನು ಸಂಗ್ರಹಿಸುವ ಉದ್ದೇಶವು ಉಳಿವಿಯ ಮಹಾಮನೆಯಲ್ಲಿ ಗಣಪರ್ವ ಮಾಡುವದಿರತ್ತದೆಂದು ಅವರು ಮೊದಲಿಗೆ ಜನರಿಗೆ ಹೇಳುತ್ತ ಬಂದರು. ಹೀಗೆ ಮೂರೂವರೆ ತಿಂಗಳುಗಳಾದವು. ಮುಂದೆ ಬಿಜ್ಜಳನು ಹಿಂದೆ ಹೇಳಿದ ಪ್ರಕಾರ ಶಿವಶರಣರಿಂದ ಕೊಲೆ ಮಾಡಲ್ಪಟ್ಟನು.

ಆಗ ಬಿಜ್ಜಳನ ದಂಡಾಳುಗಳು ಬಿಜ್ಜಳನ ಅಳಿಯನಾದ ಎರೆಯಂಬರಾಗೆ ಎಂದರೆ ಈಗ ಹೈದ್ರಾಬಾದ ಸಂಸ್ಥಾನದಲ್ಲಿರುವ ಯಲಬುರ್ಗೆಯಲ್ಲಿ ಆಳುತ್ತಿದ್ದ ಚಾವುಂಡರಾಯನ ಅಧಿಪತ್ಯದಲ್ಲಿದ್ದವು. ಬಿಜ್ಜಳನ ಕೊಲೆಯಾದ ಕೂಡಲೆ ಪಟ್ಟಣದಲ್ಲಿ ಹೋರಾಟಗಳು ಪ್ರಾರಂಭವಾದವು. ಆಗ ಶಿವಶರಣರು ಯುದ್ಧಮಾಡಲು ಸಿದ್ಧರಾಗಬೇಕಾಯಿತು.

## ರಣರಂಗದಲ್ಲಿ ನಾಗಲಾಂಬಿಕೆಯು

ಆಗ ನಾಗಲಾಂಬಿಕೆಯು ತನ್ನ ಮಗ ಚನ್ನಬಸವನೊಂದಿಗೆ ಕಲ್ಯಾಣವನ್ನು ಬಿಟ್ಟು ಧರ್ಮಯುದ್ಧದಲ್ಲಿ ತೊಡಗಿದಳು. ಪರಿಸ್ಥಿತಿಯು ಮನುಷ್ಯನಲ್ಲಿ ಬದಲಾವಣೆಯನ್ನುಂಟುಮಾಡುತ್ತದೆ. ಈ ಕಾಲದಲ್ಲಿ ನಾಡಿನಲ್ಲಿ ಈಗಿನಂತೆ ಲಕ್ಷಾವಧಿ ವೀರಶೈವರಿರಲಿಲ್ಲ. ಅವರ ಸಂಖ್ಯೆಯು ಅತ್ಯಲ್ಪವಾಗಿದ್ದಿತು. ಆದುದರಿಂದ ಸ್ವಸಂರಕ್ಷಣೆಗೆ ಹೋರಾಡದೆ ಕುಳಿತಿದ್ದರೆ ಅಲ್ಲಲ್ಲಿ ವಾಸಿಸುತ್ತಿದ್ದ ವೀರಶೈವರ ಸಣ್ಣ ಸಣ್ಣ ಗುಂಪುಗಳನ್ನು ಇದಿರಾಳಿಗಳು ಸಂಹಾರ ಮಾಡದೆ ಬಿಡುತ್ತಿದ್ದಿಲ್ಲ. ಈ ಸ್ಥಿತಿಯೊದಗಿದ್ದರಿಂದ ನಾಗಲಾಂಬಿಕೆಯೂ ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯೂ ಕಲ್ಯಾಣದಿಂದ ಹೊರಬಿದ್ದರು. ಅವರು ಈ ಮೊದಲು ಅಂಜನೇಯ ನದಿಯಗುಂಟ ಬಿಡಾರ ಬಿಟ್ಟಿದ್ದ ಶಿವಶರಣರನ್ನು ಕೂಡಿಕೊಂಡರು. ಮಡಿವಾಳ ಮಾಚಿದೇವನು ಇವರಿಗೆ ಮುಂದಾಳುವಾಗಿ ಅವರನ್ನು ಇಲ್ಲಿಗೆ ಈ ಮೊದಲಿಗೆ ಎಚ್ಚರದಿಂದ ನಡಿಸಿಕೊಂಡುಬಂದಿದ್ದ. ಆದರೆ ತಾನಿಲ್ಲದಾಗ ರಾಜಧಾನಿಯಲ್ಲಿ ಅನಾಹುತಗಳು ಸಂಭವಿಸಬಹುದೆಂದು ಎಣಿಸಿ ತಿರುಗಿ ಅವನು ಕಲ್ಯಾಣಕ್ಕೆ ಬಂದಿದ್ದನು. ಬಿಜ್ಜಳನ ಕೊಲೆಯಾದ ಬಳಿಕ ಬಿಜ್ಜಳನ ದಂಡಾಳುಗಳು ಶಿವಶರಣರನ್ನು ಬೆನ್ನಟ್ಟಿ ಅವರನ್ನು ಮುಂದುವರಿಯುತ್ತಾ ಬಂದವು. ಆದ್ದರಿಂದ ಚನ್ನಬಸವನೂ ಮಡಿವಾಳ ಮಾಚಿದೇವನೂ ನಾಗಲಾಂಬಿಕೆ ಗಂಗಾಂಬಿಕೆಯರೂ ತೊರಗಲ್ಲು ನಾಡಿನಲ್ಲಿರುವ ಮುರುಗೋಡ ಮತ್ತು ಅದರ ಸುತ್ತಲಿನ ಅರಣ್ಯಮಯವಾದ ಬಿಕ್ಕಟ್ಟಿನ ಪ್ರದೇಶಗಳಲ್ಲಿ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಆದರೆ ವೈರಿಗಳ ಸೈನಿಕರು ಬೆನ್ನಟ್ಟುತ್ತ ಇಲ್ಲಿಯೂ ಬಂದರು. ಆಗ ಮುರುಗೋಡಕ್ಕೆ ಸಮಿಪವಿರುವ ಅನೇಕಗ್ರಾಮಗಳಲ್ಲಿ ಕಾಳಗಗಳು ಸಂಭವಿಸಿದವು. ಈ ಕಾಳಗಗಳಲ್ಲಿ ಚನ್ನಬಸವನು ಪುನಃ ಹಿಂದಕ್ಕೆ ಸರಿದು ಕಾತರವಳ್ಳಿ ಮತ್ತು ಸಂಪಗಾವ ಈ ಭಾಗಕ್ಕೆಬಂದು ಅಲ್ಲಿ ಶತ್ರುಗಳಕೂಡ ಕಾದಾಡಲು ಸಿದ್ಧನಾಗಿನಿಂತನು.

## ನಾಗಳಾಪುರದಲ್ಲಿ ವಾಸ

ಸಂಪಗಾವ ಗ್ರಾಮಕ್ಕೆ ನೈಋತ್ಯ ದಿಕ್ಕಿಗೆ ೩ ಮೈಲುಗಳಮೇಲೆ ನಾಗಲಾಪುರವೆಂಬ ಗ್ರಾಮವಿದೆ. ಅಲ್ಲಿ ನಾಗಲಾಂಬಿಕೆಯು ಸೈನಿಕರೊಡನೆ ತನ್ನ ವಾಸಕ್ಕೆ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡಿದ್ದಳು. ಇದಕ್ಕೆ ಸಮೀಪವಿರುವ ಕಾತರವಳ್ಳಿಯಲ್ಲಿ ಉಭಯದಂಡಾಳುಗಳಲ್ಲಿ ಕಡುತರವಾದ

ಕಾಳಗವೆಸಗಿತು. ಆಗ ಅಳಿಯ ಬಿಜ್ಜಳನ ದಂಡಾಳುಗಳು ಶಿವಶರಣರನ್ನು ಸಂಹಾರ ಮಾಡಲು ಬಹಳ ಪ್ರಯತ್ನಿಸಿದವು. ಆದರೆ ಅವರ ಪ್ರಯತ್ನಗಳು ನಿಷ್ಫಲವಾದವು. ಅವರು ಶಿವಶರಣರನ್ನು ಸಂಹಾರಮಾಡುವ ಬದಲು ಅವರ ಸೇನಾನಾಯಕನಾದ ಅಳಿಯ ಬಿಜ್ಜಳನೇ ರಣರಂಗದಲ್ಲಿ ಮೂರ್ಛೆ ಹೋಗಿ ಅವರ ಕೈಗೆ ಸಿಕ್ಕಿಬಿದ್ದನು. ಆಗ ಅವನ ತಲೆಯನ್ನು ಕೂಡಲೆ ಅವರು ಹಾರಿಸುವವರಿದ್ದರು. ಆದರೆ ಆಸ್ಥಳದಲ್ಲಿದ್ದ ನಾಗಲಾಂಬಿಕೆಯು ಅವರನ್ನು ತಡೆದು ಅಳಿಯ ಬಿಜ್ಜಳನಿಗೆ ಪ್ರಾಣದಾನಮಾಡಿ ಅವನನ್ನು ಬಿಟ್ಟುಕೊಡುವಂತೆ ಮಾಡಿದಳು.

ನಾಗಳಾಪುರದಲ್ಲಿ ನಾಗಲಾಂಬಿಕೆಯು ಬಹಳ ದಿನಗಳವರೆಗೆ ಇದ್ದಳು. ಆದರಿಂದ ಅಲ್ಲಿಯ ಜನರು ಆಕೆಯ ಹೆಸರಿನಿಂದ ಅಲ್ಲಿ ಒಂದು ಮೂರ್ತಿಯನ್ನು ಸ್ಥಾಪಿಸಿ ಅದರ ಮೇಲೆ ಒಂದು ದೇವಾಲಯವನ್ನು ಕಟ್ಟಿಸಿದರು. ಈ ದೇವಾಲಯವು ಈಗಲೂ ಅಲ್ಲಿ ಅಸ್ತಿತ್ವದಲ್ಲಿದೆ. ಈ ಮೂರ್ತಿಯು ಎರಡು ಫೂಟ ಎತ್ತರವಿದೆ. ಅವಕ್ಕೆ ಇಳಿಬಿಟ್ಟ ಕೂದಲುಗಳಿವೆ. ಅವು ಭುಜದ ಮೇಲೆ ಪಸರಿಸುತ್ತವೆ. ಕೊರಳಲ್ಲಿ ರುದ್ರಾಕ್ಷಿ ಮಣಿಗಳ ಸರವಿದೆ. ಕಯ್ಯಲ್ಲಿ ಜಪಸಾಲೆ ಇವೆ. ಹೀಗೆ, ನಾಗಲಾಂಬಿಕೆಯ ಮೂರ್ತಿಯು ಇದ್ದು ಇದು ಒಬ್ಬ ಯೋಗಿಣಿಯದಾಗಿವೆ.

ಅದರ ನೆರೆಯಲ್ಲಿ ಬಸವ ಮೂರ್ತಿಯೂ ಇದೆ. ಜನರು ಇದು ಬಸವನವೆಂದು ಹೇಳುತ್ತಿದ್ದರೂ ಅದು ಚನ್ನಬಸವನದಿರುತ್ತದೆ. ಈ ಗ್ರಾಮದಲ್ಲಿ ಈ ದೇವಾಲಯವಲ್ಲದೆ, ರುದ್ರಮುನಿಯ ದೇವಾಲಯವೂ ಇದೆ. ರುದ್ರಮುನಿಯು ಹಿಂದುಗಡೆ ಉಳವಿಗೆ ಹೋಗುವಾಗ್ಗ ಶಿವಶರಣರ ಹೋರಾಟದ ಸ್ಥಳಗಳನ್ನು ಸಂದರ್ಶಿಸುತ್ತ ಹೋಗಿದ್ದಾನೆ. ಆಗ ಅವನು ನಾಗಳಾಪುರದಲ್ಲಿಯೂ ಕೆಲದಿನ ನಿಂತು ಹೋಗಿರಬಹುದು. ಅದರ ನೆನಪಿನ ಗೋಸ್ಕರ ಜನರು ರುದ್ರಮುನಿಯ ಗುಡಿಯನ್ನು ಸಹ ಇಲ್ಲಿ ಕಟ್ಟಿಸಿದ್ದಾರೆ.

ಈ ಎಲ್ಲ ದೃಶ್ಯಗಳು ಇದಿರಾಳಿಗಳಕೂಡ ಶಿವಶರಣರು ಕಡುತರವಾಗಿ ಹೋರಾಡಿದ್ದನ್ನು ತೋರಿಸುತ್ತವೆ. ಕಡೆಗೆ ಶಿವಶರಣರಿಗೆ ತಮ್ಮ ಮೇಲೇರಿ ಬರುತ್ತಿದ್ದ ಬಿಜ್ಜಳನ ದಂಡಾಳುಗಳನ್ನು ಹಿಂದಕಟ್ಟುವದು ಅಸಾಧ್ಯವಾಯಿತು. ಯಾಕೆಂದರೆ ಇದಿರಾಳಿಗಳ ಸಂಖ್ಯಾಬಲವು ಬಹಳ ಹೆಚ್ಚಿದ್ದರಿಂದ ಅವರನ್ನು ಶಿವಶರಣರು ತಡೆಯುವರು ಕಷ್ಟವಾಯಿತೆಂದು ನಾವು ಅನುಮಾನ ಮಾಡಬೇಕಾಗುತ್ತದೆ.

## ಅರಣ್ಯ ಮಧ್ಯ ಪ್ರವೇಶ

ತೊರಗಲ್ಲ ನಾಡಿನಲ್ಲಿ ಕಾತರವಳ್ಳಿಯ ಕಾಳಗವೇ ಕಡೆಯದಾಗಿರುತ್ತದೆ. ಇದರ ತರುವಾಯ ಶಿವಶರಣರ ದಂಡಿನಲ್ಲಿ ಎರಡು ವಿಭಾಗಗಳು ಮಾಡಲ್ಪಟ್ಟವು. ಒಂದು ವಿಭಾಗವು ಸಲಸಿಗೆ, ಜಗಲಬೆಟ್ಟ, ಸಾಂಬ್ರಾಣಿ ಈ ಗ್ರಾಮಗಳ ಮೇಲಿಂದ ಮೆಲುಗೈ ಯಲ್ಲಾಪುರಕ್ಕೆ ಹೋಗಿದೆ. ಇನ್ನೊಂದು ವಿಭಾಗವು ಕಿತ್ತೂರ, ನರೇಂದ್ರ, ಧಾರವಾಡ, ಸತ್ತೂರ, ಉಣಕಲ್ಲ, ಮಾರ್ಗವಾಗಿ ಹೋಗಿ ಮುಂದೆ ಕಲಘಟಗಿ ತಾಲೂಕಿನಲ್ಲಿರುವ ತಂಬೂರ ಈ ಗ್ರಾಮದ ಮೇಲಿಂದಹಾಯ್ದು ಮೆಲುಗೈ ಯಲ್ಲಾಪುರಕ್ಕೆ ಹೋಗಿರುತ್ತದೆ. ಹೀಗೆ ಮಾರ್ಗಕ್ರಮಣಮಾಡಿದ್ದರ ಬಗ್ಗೆ ಇಲ್ಲಿ ಶಿವಶರಣರ ಕುರುಹುಗಳು ಈ ಕಡೆಗೆ ಬೇರೆ ಬೇರೆ ಸ್ಥಳಗಳಲ್ಲಿ ವಿಪುಲವಾಗಿ ಈಗಲೂ ದೊರೆಯುತ್ತವೆ.

## ಮಹಾಮನೆಯ ಕಾಳಗ

ಕಾತರವಳ್ಳಿಯ ಕಾಳಗವಾದ ತರುವಾಯ ಶಿವಶರಣರು ಉಳಿವಿಯ ವರೆಗೂ ಮಾರ್ಗಕ್ರಮಣಮಾಡಿ ಅಲ್ಲಿ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಲು ನಿರ್ಧರಿಸಿದರು. ಇಲ್ಲಿ ಕಿನ್ನರೀ ಬ್ರಹ್ಮಯ್ಯನ ಹೊಳೆ ಎಂಬ ಹೊಳೆಯು ಇದ್ದು ಅದರ ಧಡದಲ್ಲಿ ಮಹಾಮನೆ ಎಂಬ ಹೆಸರಿನ ಒಂದು ಅದ್ಭುತವಾದ ಗುಹೆಯು ಇದೆ. ಶಿವಶರಣರು ಅಲ್ಲಿ ಇದ್ದುಕೊಂಡು ಆತ್ಮರಕ್ಷಣೆ ಮಾಡಿಕೊಳ್ಳಲು ಸಿದ್ಧರಾಗಿ ನಿಂತರು. ಅದಕ್ಕೆ ಸಮೀಪವಾಗಿ ಒಂದು ದೊಡ್ಡ ಕೊಳ್ಳವು ಇದೆ. ಅದು ಅನೇಕ ಪರ್ವತಶ್ರೇಣಿಗಳಿಂದ ಸುತ್ತುಗಟ್ಟಲ್ಪಟ್ಟಿದೆ. ಈ ಶ್ರೇಣಿಯ ಒಂದು ಭಾಗದಲ್ಲಿ ಅನೇಕ ಸ್ವಾಭಾವಿಕ ಗುಹೆಗಳಿವೆ. ಈ ಗುಹೆಗಳಲ್ಲಿ ಶಿವಶರಣರು ಆಶ್ರಯುವನ್ನು ಹೊಂದಿದರು. ಆದರೆ ಅವರ ಮುಖ್ಯಠಾಣ್ಯವು ಮಹಾಮನೆಯ ಗವಿಯೇ ಆಗಿತ್ತು. ಅದರಲ್ಲಿ ಅವರು ಹೊಳೆಯನ್ನು ತಿರುವಿ ಒಂದು ಕಂದಕವನ್ನು ಮಾಡಿಕೊಂಡರು.

ಈ ಸಮಯದಲ್ಲಿ ನಾಗಲಾಂಬಿಕೆಯು ಚನ್ನಬಸವ ಕಿನ್ನರೀಬ್ರಹ್ಮಯ್ಯ ಮೊದಲಾದ ಶಿವಶರಣರೊಂದಿಗೆ ಇದ್ದು, ಅವಳು ಅವರನ್ನು ಯಾವಾಗಲೂ ಪ್ರೋತ್ಸಾಹಿಸುತ್ತಲೇ ಇದ್ದಳು. ಗುಹೆಯ ಸುತ್ತಲೂ ಕಾಳಗವು ಪ್ರಾರಂಭವಾಯಿತು. ಅಂಥ ಕಠಿಣಕಾಲದಲ್ಲಿ ಆ ಕಾಳಗದಲ್ಲಿ ಒಂದು ವಿಮಾನವು ಹಾರಾಡಹತ್ತಿತು. ಆಗ ಶಿವಶರಣರು ಒಂದು ಉನ್ನತವಾದ ಪ್ರದೇಶದಲ್ಲಿ

ಒಂದು ಎತ್ತರವಾದ ಗಿಡವಿದ್ದು ಅದಕ್ಕೆ ಒಂದು ಉಯ್ಯಾಲೆಯನ್ನು ಕಟ್ಟಿ ತಮ್ಮನ್ನು ಸುತ್ತುಗಟ್ಟಿದ ವೈರಿಗಳ ಆಳವಿನಹೊರಗೆ ಹೋಗುವಂತೆ ಆ ಉಯ್ಯಾಲೆಯನ್ನು ತೂಗಹತ್ತಲು, ಅದರಲ್ಲಿದ್ದವರು ಒಬ್ಬೊಬ್ಬರೇ ಆ ವಿಮಾನದ ಮೂಲಕ ಕೈಲಾಸಕ್ಕೆ ಹೊಗುವವರಾದರು.

ವಾಚಕರು ಇದರ ಅರ್ಥವೇನೆಂಬುದನ್ನು ಯೋಚಿಸಿದಲ್ಲಿ ಮಹಾಮನೆಯ ಗುಹೆಯಲ್ಲಿದ್ದವರೆಲ್ಲ ಶಸ್ತ್ರಾಸ್ತ್ರಗಳಿಂದ ಹತರಾದರೆಂದು ಹೇಳಿದರೆ ತಪ್ಪಾಗಲಾರದು. ಆದರೆ ಹೀಗೆ ಹೇಳಿದಲ್ಲಿ ಅವರ ಮೇಲಿಂದ ಬಹುಜನ ಸಮಾಜದ ಭಕ್ತಿಯು ದೂರಾದೀತೆಂದು ಭಾವಿಸಿ ಎಲ್ಲ ಗ್ರಂಥಕಾರರು ಒಂದು ಮೊವಾಡವನ್ನು ರಚಿಸಿ ಶಿವಶರಣರು ಉಯ್ಯಾಲೆಯ ಮೂಲಕ ಪರಲೋಕಕ್ಕೆ ಹೋದರೆಂದು ಹೇಳುತ್ತ ಬಂದಿದ್ದಾರೆ.

ಈ ಕಾಲದಲ್ಲಿ ನಾಗಲಾಂಬಿಕೆಯು ಶಿವಶರಣರೊಡನೆಯೇ ಇದ್ದಿರಬೇಕು. ಆದರೆ ಅವಳನ್ನು ವೈರಿಗಳು ಎಲ್ಲಿಯೂ ನೋಯಿಸಿದಂತೆ ತೋರುವದಿಲ್ಲ. ಅಳಿಯಬಿಜ್ಜಳನು ಕಾತರವಳ್ಳಿಯ ಕಾಳಗದಲ್ಲಿ ರಣಾಂಗಣದಲ್ಲಿ ಮೂರ್ಛೆಹೊಂದಿ ಬಿದ್ದಾಗ ನಾಗಲಾಂಬಿಕೆಯು ಅವನನ್ನು ಉಳಿಸಿದ್ದಾಳೆ. ಇದನ್ನು ವೈರಿಗಳು ಲಕ್ಷಿಸಿ ಅವರು ನಾಗಲಾಂಬಿಕೆಯ ಜೀವಕ್ಕೆ ಅಪಾಯ ಮಾಡದೆ ಅವಳನ್ನು ಬಿಟ್ಟಿರಬೇಕೆಂದು ನಮ್ಮ ಊಹೆ ಇದೆ.

ಯಾವಸ್ಥಿತಿಯನ್ನು ಗಂಗಾಂಬಿಕೆ, ಕಕ್ಕಯ್ಯ, ಮೊದಲಾದ ಶಿವಶರಣರು ಹೊಂದಿದರೋ, ಅದು ಅವಳಿಗೆ ಪ್ರಾಪ್ತವಾಗಿಲ್ಲವೆಂದು ನಮಗೆ ತೋರುತ್ತದೆ.

## ಉಳಿವಿಯಲ್ಲಿ ನುಲಿಯಚಂದಯ್ಯ

ಹೀಗೆ ಮಹಾಮನೆಯ ಗುಹೆಯ ಹೋರಾಟವಿದೆ. ಇದು ಮುಗಿದ ಬಳಿಕ ಶಿವಶರಣರಲ್ಲಿ ನಾಗಲಾಂಬಿಕೆ ಮತ್ತು ಹಡಪದ ರೇಚಯ್ಯ ಇವರಿಬ್ಬರೇ ಉಳಿದರು. ಅವರಲ್ಲಿ ಹಡಪದ ರೇಚಯ್ಯನನ್ನು ಚನ್ನಬಸವೇಶ್ವರನು ವಿಮಾನ ಮಾರ್ಗವಾಗಿ ಕೈಲಾಸಕ್ಕೆ ಒಯ್ಯದೆ ಕೆಲವೊಂದು ಕಾರಣದ ಮೂಲಕ ಅವನನ್ನು ಹಿಂದುಳಿಸಿದ್ದನು. ನಾವು ಹಿಂದೆ ರೇಚಯ್ಯನ ಚರಿತ್ರೆಯಲ್ಲಿ ಈ ಬಗ್ಗೆ ಹೇಳಿದ್ದೇವೆ. ಈ ಕಾಲದಲ್ಲಿ ನುಲಿಯ ಚಂದಯ್ಯನೂ ಉಳಿವಿಗೆ ಬಂದಿದ್ದನೆಂದು ತಿಳಿಯುತ್ತದೆ. ಆದರೆ ಅವನು ಯಾವ ಸಂದರ್ಭದಲ್ಲಿ ಇಲ್ಲಿಗೆ ಬಂದನು ಮತ್ತು ಯಾವ ಗ್ರಾಮದಲ್ಲಿ ಅವನು ನಾಗ

ಲಾಂಬಿಕೆಯನ್ನು ಕೂಡಿದನು, ಎಂಬುದು ನಮಗೆ ಗ್ರಂಥದಿಂದ ಗೊತ್ತಾಗುವದಿಲ್ಲ. ಆದರೆ ಚಂಡಯ್ಯನು ನಾಗಲಾಂಬಿಕೆಯ ಕೂಡ ಇದ್ದು ಅವಳಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿ ಕೊಡುತ್ತ ಅವಳಕೂಡ ಬಂದಿದ್ದನೆಂಬುದು ಸ್ಥಾನಿಕ ಕುರುಹುಗಳು ಮತ್ತು ಐತಿಹ್ಯಗಳಿಂದ ತಿಳಿದುಬರುತ್ತಿದೆ.

## ಭಾವೀಕಾರ್ಯಕ್ರಮವನ್ನು ನಿರ್ಧರಿಸಿದ್ದು

ಮುಂದೆ ಕೆಲವು ದಿನಗಳಲ್ಲಿ ರುದ್ರಮುನಿಯು ಮತ್ತು ಮಡಿವಾಳ ಮಾಚಿದೇವನ ಗುರುವಾದ ಹಿಪ್ಪರಿಗೆಯ ಮಲ್ಲಿಕಾರ್ಜುನನು ಇವರು ಉಳಿವಿಯಲ್ಲಾದ ಘಟನೆಗಳನ್ನು ನಿರೀಕ್ಷಿಸಲಿಕ್ಕೆ ಬರುವವರಾದರು. ಅವರನ್ನು ನಾಗಲಾಂಬಿಕೆ ಮತ್ತು ನುಲಿಯಚಂದಯ್ಯ ಇವರಿಬ್ಬರೂ ಭೆಟ್ಟಿಯಾದರು. ಅವರೆಲ್ಲರೂ ಮುಂದೆ ತಾವು ಯಾವ ಮಾರ್ಗವನ್ನು ಅನುಸರಿಸಬೇಕೆಂಬುದನ್ನು ಕುರಿತು ಚರ್ಚಿಸಿ ನಿರ್ಧರಿಸಿದ್ದಾಗಿ ಕಂಡುಬರುತ್ತದೆ. ಯಾಕಂದರೆ ಮುಂದೆ ಆದ ಘಟನೆಗಳನ್ನು ನಾವು ನಿರೀಕ್ಷಿಸಿದಲ್ಲಿ ಅವುಗಳ ಯೋಜನೆಯು ಈ ನಾಲ್ವರು ಶಿವಶರಣರಿಂದಲೇ ಆಗಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ರುದ್ರಮುನಿಯು ಚಾಲುಕ್ಯ ಮತ್ತು ಚೋಳರಾಜರ ಆಸ್ಥಾನಗಳಲ್ಲಿ ಬಹು ಪ್ರಸಿದ್ಧಿಗೆ ಬಂದವನಿದ್ದಾನೆ. ಆಗಿನ ಶಿವಶರಣರು ಕೇವಲ ಶಿವಪೂಜೆಯಲ್ಲಿ ನಿರತರಾದವರಲ್ಲ. ಅವರು ಲೌಕಿಕ ಜ್ಞಾನಿಗಳೂ ರಾಜಕಾರಣಿಗಳೂ ಶೂರರೂ ಇದ್ದು ಆಡಳಿತೆಯಲ್ಲಿ ನುರಿತವರಾಗಿದ್ದರೆಂಬುದನ್ನು ನಾವು ಲಕ್ಷಿಸುವದು ಅವಶ್ಯವಿದೆ. ನಾಗಲಾಂಬಿಕೆಯು ಬಸವೇಶ್ವರನ ಕೂಡ ಯಾವಾಗಲೂ ಇದ್ದು ಅವನ ವಿಚಾರಗಳನ್ನೂ ಆಗಿನ ರಾಜಕಾರಣಗಳನ್ನೂ ಚನ್ನಾಗಿ ತಿಳಿದವಳಾಗಿದ್ದಳು.

ಈ ಕಠಿಣಕಾಲದಲ್ಲಿ ಬಸವೇಶ್ವರ, ಚನ್ನಬಸವೇಶ್ವರ ಮಡಿವಾಳ ಮಾಚಿದೇವ, ಕಿನ್ನರಿಬ್ರಹ್ಮಯ್ಯ ಇಂಥ ಮಹಾನುಭಾವರಾರೂ ಉಳಿದಿರಲಿಲ್ಲ. ವೈರಿಗಳ ಗಸ್ತಿಕ್ಕೆ ತುತ್ತಾಗಿದ್ದರು. ಈ ಸಮಯದಲ್ಲಿ ವೀರಶೈವ ಸಮಾಜವು ಉತ್ತರ ಕರ್ನಾಟಕದಲ್ಲಿ ಜೀವಂತ ಉಳಿಯುವ ಚಿನ್ಹೆಗಳು ಎಷ್ಟು ಮಾತ್ರವೂ ತೋರುತ್ತಿರಲಿಲ್ಲ. ಸುತ್ತಲೂ ಕತ್ತಲೆಯು ಕವಿದಿತ್ತು. ಇಂಥ ಕಠಿಣ ಪರಿಸ್ಥಿತಿಯು ಬಂದ ಬಳಿಕ ಎಂಥವನಿದ್ದರೂ ಕೂಡ ಅವನು

# ಶಿವಾನುಭವ

ಸಂಪುಟ ೨೬ ] [ ಸಂಚಿಕೆ ೧೧

ಸಂಪಾದಕ

ಫ. ಗು. ಹಳಕಟ್ಟಿ,

ಬಿ.ಎ. ಎಲ್. ಎಲ್. ಬಿ.



ವಾ ಚಂ ೫-೧೨-೦ ] ವಿಜಾಪುರ [ ನವ್ಹಂಬರ್ ೧೯೫೩

# ವಿಷಯಾನುಕ್ರಮಣಿಕೆ.



---


**ಶಿವಾನುಭವ ಮಾಸಪತ್ರಿಕೆ,**
**ವಿಜಾಪುರ.**
**ವಾರ್ಷಿಕ ಚಂದಾ ೫—೧೨—೦**

# ಶಿವಾನುಭವ


| ವರ್ಷ ೨೬ | ಡಿಸೆಂಬರ ೧೯೫೨ | ಸಂಚಿಕೆ ೧೨ |
| --- | --- | --- |


## ಭಕ್ತ
## ವೀರಮಾಹೇಶ್ವರರ ತುಲನೆ.

( ಲೇಖಕ:— ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ ಮಂಟೂರು. )

### ಭಕ್ತ ವಿಭಾಗ

ಸಂ. ೧

ಭಕ್ತ:— ವೀರಭಕ್ತ ಮುಖಾಂಭೋಜ । ಜಾತಾನಾಂ ಸುಬಾಲಕಾನಾಂ ॥ ವೀರ ಭಕ್ತಶಿವದೀಕ್ಷಾ । ಶ್ರೇಯಸೋ ಭೂಯಸೋ ಭವೇತ್ ॥

ಇಲ್ಲಿ ಲಿಂಗಧಾರಣ ದೀಕ್ಷೆಯಷ್ಟೇ ಆಗುವದು. ಆದ್ದರಿಂದ ಅವನು ನರನು ಹೋಗಿ ಹರ (ಈಶ್ವರ)ನಾಗುವನು.

ಭಕ್ತನು ಬೇಡಲಾಗದು, ಬೇಡುವವ ಭಕ್ತನಲ್ಲ, ಎಂದು ಹೇಳಿದ್ದಾರೆ. ಅನ್ಯರು ತಾವಾಗಿಯೇ ಕೊಟ್ಟರೂ ಸಹ ಅದನ್ನು ತಕ್ಕೊಳ್ಳಲಾಗದು. ಓಣಿಯಲ್ಲಿ ಬಿದ್ದುದನ್ನು ಸಹ ಎಷ್ಟು ಮಾತ್ರವೂ ಮುಟ್ಟಕೂಡದು.

ಭಕ್ತರು ಬೇಡಿಕೊಳ್ಳಲಾಗದು. ಅಂದರೆ ಓಣಿಯಲ್ಲಿ ಹೋಗುವವರನ್ನು ಕರೆಕರೆದು ಕೊಡಬೇಕೆಂದಲ್ಲ. ತೊಂದರೆಗೊಳಗಾದ ಸತ್ಪಾತ್ರ ಭಕ್ತರು ಅವರ ಶೀಲದಂತೆ ಬೇಡಲಿಕ್ಕೆ ಬರುವದಿಲ್ಲ. ಅಂತಹವನನ್ನು ಕುರಿತು ತಾನೇ ಸಮಯೋಚಿತ ಸಹಾಯ ನೀಡಬೇಕೆಂದು ಅರಿಯಬೇಕು

ವೀರಮಾಹೇಶ್ವರಃ— ಮಾಹೇಶ್ವರ ಮುಖಾಂಭೋಜ। ಜಾತಾನಾಂ ಬ್ರಹ್ಮಚಾರಿಣಾಂ॥ ವೀರಮಾಹೇಶ್ವರೀ ದೀಕ್ಷಾ। ಶ್ರೇಯಸೋ ಭೂಯಸೋ ಭವೇತ್ ॥।

ಇಲ್ಲಿ ಶಿವದೀಕ್ಷೆಯಲ್ಲದೆ ಮತ್ತು ಜಂಗಮದೀಕ್ಷೆ ( ಭಿಕ್ಷಾವೃತ್ತಿ ಇಲ್ಲವೆ ಜೋಳಿಗೆಯ ನಳವಡಿಸುವಿಕೆ ) ಗಳೆರಡೂ ಆಗುವವು.

ದೀಕ್ಷೆಯಲ್ಲಿ ಜೋಳಿಗೆ ದೊರೆತುದನ್ನು ಕುರಿತು ಇವರು " ಭಿಕ್ಷಾಪತಿ, ಲಕ್ಷಾಪತಿ, '' ಎಂದು ಭಾವಿಸುವರು. ಮುಂದೆ ಬಹುಶಃ ಆದಾವ ಸತ್ಕಾಯಕವನ್ನೂ ಮಾಡದೆ, ಬರಿಯ ಭಿಕ್ಷೆಯಿಂದಲೇ ಜೀವಿಸುವದಕ್ಕೆ ಪ್ರವೃತ್ತರಾಗುವರು. ಜಂಗಮರು ಕೂಡ ಕಾಯಕವನ್ನು ಮಾಡಲೇ ಬೇಕೆಂದು ಸಾರುತ್ತಾರೆ. ಅದನ್ನು ಇವರು ಗಮನಿಸುವದೇ ಇಲ್ಲ.

ಭಿಕ್ಷೆಯಲ್ಲಿ ಸಿಕ್ಕಿದುದರ ಅರ್ಧಪಾಲು ಗುರುವಿಗೆ ಸಲ್ಲುವದಿರುವದೆಂದು ಹೇಳುವರು. ಆದರೆ ಆ ಗುರುವು ಜೋಳಿಗೆ ಕೊಟ್ಟವನಲ್ಲ ಜೋಳಿಗೆಯಲ್ಲಿ ನೀಡುವ ಸಮಾಜವೇ ಗುರುವೆಂದರಿಯಬೇಕು ಅದರೊಳಗೆ ಅವನೂ ಬರುವನು. ಪ್ರವಾಸದಲ್ಲಿ ಸಾಮಾಜಿಕರು ಇದ್ದಾಗ ಮಠಕೆ ಬಂದು ವಸತಿ ನಿಂತರೆ ಅವರಿಗಾಗಿ ದಾಸೋಹ ನೀಡಬೇಕೆಂದು ತಿಳಿಯಬೇಕು. ಆದರೆ ಈಗ ಬಹುಶಃ ಆದರ ಗೋಜಿಗೆ ಯಾರೂ ಹೋಗುವದಿಲ್ಲ.

ನಂ॥ ೨

ಭಕ್ತಃ— ಭಕ್ತನು ತನ್ನ ಜೀವನೋಪಾಯಕ್ಕಾಗಿ ಯಾವದೊಂದು ಸತ್ಕಾಯಕವನ್ನು ಮಾಡಬೇಕು. ಕಾಯಕದಲ್ಲಿದ್ದಾಗ ಗುರು ಜಂಗಮರು ಬಂದರೂ ಅದನ್ನು ಬಿಟ್ಟು ಏಳದೆ ಅಲ್ಲಿಂದಲೇ ಶರಣು ಎಂದು ನುಡಿಯಬೇಕು. ಕಾಯಕವೇ ಕೈಲಾಸವೆಂದು ಇದರ ಮಹತಿಯನ್ನು ಬಣ್ಣಿಸಿದ್ದಾರೆ.

ವೀರಮಾಹೇಶ್ವರಃ— ವೀರಮಾಹೇಶ್ವರರು ( ಅಯ್ಯಾಚಾರಿಗಳು ) ಬಹುಶಃ ಬೇರೆ ಕಾಯಕ ಮಾಡುವದಿಲ್ಲ. ಕೆಲವರು ಭೂಮಿಯನ್ನು ಅಪ್ಪಿ ತಪ್ಪಿ ಸಾಗುಮಾಡುವರು. ಪಂಡಿತರಾದ ಕೆಲ ಜನರು ಪುರಾಣ ಕೀರ್ತನಗಳನ್ನು ಹೇಳುವರು.

ನಂ|| ೩

ಭಕ್ತ:— ಹೀಗೆ ಕಾಯಕದಲ್ಲಿ ದೊರಕಿಸಿದ್ದುದರಲ್ಲಿ ಶಕ್ಯವಾದಷ್ಟು ಭಾಗವನ್ನು ಸತ್ಪಾತ್ರದಲ್ಲಿ ದಾನಮಾಡಿ ಕರುಣಾಳು ಎಂದು ಹೆಸರು ಪಡೆಯಬೇಕು.

ವೀರಮಾಹೇಶ್ವರ:— ಇದರಲ್ಲಿ ಬೇರೆ ಭಿಕ್ಷುಕರು ಎಂದರೆ "ನಾವೇ ಬೇಡುವವರು. ನೀವು ಭಕ್ತರ ಮನೆಗೆ ಹೋಗಿರಿ ಎಂದು ತಿರುಗಿಯೇ ಬಹುಶಃ ಕಳಿಸುವರು,

ನಂ|| ೪

ಭಕ್ತ:— ಭಕ್ತನು "ತನಕಿಂತ ಕಿರಿಯರಿಲ್ಲ" ಎಂದು ಭಾವಿಸಿ ನಡೆಯುವನು. ಹಾಗೆ ಬಸವೇಶ್ವರನು ಅವನನ್ನು ಪ್ರೇರೆ ಪಿಸಿರುವನು. ಭಕ್ತನು ಬಹು ವಿನಯದಿಂದ ನಡೆಯುವನು. ಮೇಲೆ ಬಾರೆಂದು ಕರೆದರೂ 'ಇಲ್ಲೇ ಚನ್ನಾಗಿದೆ' ಎಂದು ಹೇಳಿ ದೂರದಲ್ಲಿಯೇ ಕುಳ್ಳಿರುವನು. "ಕೀಳಿಂಗೆ ಅವು ಕರೆವುದಲ್ಲದೆ ಮೇಲಿಂಗೆ ಕರೆಯಾ"ದೆಂದು ದೃಷ್ಟಾಂತವೀವನು.

ವೀರಮಾ:— ಅಯ್ಯಾಚಾರಿಗಳು "ಜಂಗಮೋ ಭಕ್ತನಾಂ ಗುರುಃ" ಎಂದು ಹೇಳುವರು. ಅವರಿಂದ ಕಾಲುಬೀಳಿಸಿಕೊಳ್ಳುವರು. ತಾವು ಸೈ ಸಹ ಅದಕ್ಕೆ ಮೇಲೆತ್ತುವದಿಲ್ಲ. ಜೋಳಿಗೆಯಿಂದ ತಮಗೆ ಪೂಜ್ಯತೆ ಬಂದಿರುವದೆಂದು ಹೇಳಿ ಗದ್ದುಗೆಯ ಮೇಲೆ ಕುಳಿತು ಪಾದತೀರ್ಥವನ್ನು ಕೊಡುವರು. ಇದರಿಂದ ದುರಹಂಕಾರಿಗಳೂ ಆಸೆಬುರುಕರೂ ಆಗುವರು. ಭಕ್ತರಲ್ಲಿ ಉಣ್ಣುವ ಹಕ್ಕು ತಮಗುಂಟೆಂದು ನಂಬುವರು.

ನಂ|| ೫

ಭಕ್ತ:— ಭಕ್ತನು ತನ್ನ ಅಹಂಕಾರ ದುರಾಸೆಗಳನ್ನೆಲ್ಲ ಬಿಟ್ಟುಬಿಟ್ಟಿರುತ್ತಾನೆ. ಆಪ್ತ ರೀತಿಯಿಂದ ಪ್ರಪಂಚವಿಡಿದು ನಡಿಸುವನು. ಹಾಗೆ ಆತನಿಗೆ ಪ್ರಮಥರ ಆಜ್ಞೆ ಇರುವದು. ಬರಬರುತ್ತ ಅವನು ತ್ರಿಪುಟಿ ಸಾಧಿಸಿ ಶರಣನಾಗುವನು. ಅದರಿಂದ ಅವನು ಭವಪಾಶದಿಂದ ಬಿಡುಗಡೆ ಹೊಂದಿ ಆತ್ಮೋದ್ಧಾರ ಪಡೆಯುವನು.

ವೀರಮಾ:— ವೀರಮಾಹೇಶ್ವರರು ಆರಾಧ್ಯರು, ಲಕುಲೀಶ, ಕಾಳಾಮುಖ, ಪಾಶುಪತರುಗಳ ಅವಶೇಷರು, ಲಿಂಗ ಧರಿಸಿದರೂ, ಅವರಿಗೆ

ಜನ್ನಿವಾರದ ಮೋಹ ಬಿಡಲಿಲ್ಲ. ತಮಗೆ ಯಾರಾದರೂ ಭಕ್ತರೆಂದರೆ ಬಹು ಸಂತಾಪಿಸುವರು. ಆದರೆ ಭಕ್ತರಾಗದೆ ಎಂದೂ ಯಾರಿಗೂ, ಆತ್ಮೋದ್ಧಾರವಿಲ್ಲ. ಇದಕ್ಕೆ ನಿಜಗುಣ ಸ್ವತಂತ್ರ ಸಿದ್ಧಲಿಂಗೇಶ್ವರ, ಹಾಗೂ ಷಣ್ಮುಖ ಸ್ವಾಮಿಗಳ ಅಖಂಡೇಶ್ವರ ವಚನಗಳಲ್ಲಿ ಒಳಿತಾಗಿ ವಿವರಣೆಗಳುಂಟು. ಅಯ್ಯನವರಿಗಾದರೂ ಸ್ವಂತದ ಆತ್ಮೋದ್ಧಾರವಿಲ್ಲದೆ ಗತಿಯೇ ಇಲ್ಲ. ಅಹಂಕಾರ ಆಶೆಗಳೇ ಭವದ ಬೀಜಗಳು. ಇವೆರಡಕ್ಕೂ ಅಯ್ಯನವರಲ್ಲಿ ಕೊರತೆಯಿಲ್ಲ.

ಅಯ್ಯಾಚಾರಿಗಳು ' ಇತರ ಭಿಕ್ಷುಕರಂತೆ ತಾವಲ್ಲ, ಗುರುವಿನಿಂದ ಜೋಳಿಗೆ ಪಡೆದುದರಿಂದ ತಮ್ಮದು ಹಕ್ಕಿನ ಭಿಕ್ಷೆ ' ಎಂದು ಹೇಳುವರು. ಆದರೆ ಆ ಭಿಕ್ಷೆಯನ್ನು ತಮ್ಮ ಉಪಜೀವನಕ್ಕೆ ಬಳಸಿದಮೇಲೆ, 'ಜೋಳಿಗೆ ತಾವೇ ಹಾಕಿದರೇನು? ಗುರುವಿನಿಂದ ಪಡೆದರೇನು? '' ಸಮಾಜದ ಋಣ ಭಾರದಲ್ಲಿ ಸಿಕ್ಕು ಅದರ ದುಷ್ಪರಿಣಾಮವನ್ನು ಭೋಗಿಸಲೇಬೇಕು.

ನಂ॥ ೬

ಭಕ್ತ:— ಭಕ್ತರು ಜ್ಞಾನ ಪ್ರಧಾನರು. ಕರ್ಮ ಪ್ರಧಾನರಲ್ಲ. ಜ್ಞಾನವೂ ತದನುಸಾರ ಆಚರಣೆಯೂ ಅಂದರೆ ಜ್ಞಾನಾಚಾರಗಳೆರಡೂ ಅವಶ್ಯಬೇಕೆನ್ನುವರು.

ಬಸವಾನುಯಾಯಿಯು ಲಿಂಗಧಾರಿಗಳೆಲ್ಲರೂ ಸಮಾನರು. ಅನ್ಯ ಕನ್ಯಾ ವ್ಯವಹಾರಕ್ಕೆ ಮುಕ್ತದ್ವಾರವಿರುವದು.

ಭಕ್ತರು ನಿರ್ಮಲ ಚಿತ್ತ ಮಡಿಯೇ ದೈವವೆಂದು ನಂಬುವರು. ಯಾವಾಗಲೂ ಪರಿಶುದ್ಧ ಭಾವದಿಂದ ಇರುವರು. ನೀರು ಹೊರಗಿನ ಹೊಲಸು ತೆಗೆಯಲಿಕ್ಕೆ ಮಾತ್ರ ಎಂದು ಭಕ್ತರು ಹೊರ ಸ್ವಚ್ಛತೆಗೆ ಅದನ್ನು ಬಳಸುವರು. ಲಿಂಗಧಾರಿಃ ಸದಾ ಶುಚಿಃ " ಎಂದು ಹೇಳಿದುದರಿಂದ ಅವನು ಯಾವಾಗಲೂ ಪರಿಶುದ್ಧನೇ ಕೊರತು ಮೈಲಿಗೆ ಎಂಬುದು ಇಲ್ಲವೇ ಇಲ್ಲ.

ಭಕ್ತರು ಸದಾ ದಾಸ (ಸೇವಕ ಊಳಿಗದವ) ರಾಗಿಯೇ ಬಾಳಲು ಆಸಕ್ತಿಯುಳ್ಳವರು. ಸೇವ್ಯರಾಗುವದು ಅವರಿಗೆ ಬೇಡೇಬೇಡ. ಆ ಸೇವೆ ಯಾದರೂ ಸಕಾಮವಲ್ಲ. ಸಹಜವಾದುದು.

ನಂ|| ೬

ವೀರಮಾಹೇಶ್ವರಃ—ವೀರಮಾಹೇಶ್ವರರು ಕರ್ಮಪ್ರಧಾನರು. ಯಜ್ಞಯಾಗ ಹೋಮ ಹವನಗಳತ್ತ ಲಕ್ಷವುಳ್ಳವರು. 'ಜ್ಞಾನದಿಂ ಮುಕುತಿ' ಎಂದೆನ್ನುವರು. ಆಚರಣೆಗೆ ಅಷ್ಟೊಂದು ಚಿತ್ತಗೊಡರು.

ಮಾಹೇಶ್ವರರು ಭೇದಭಾವವುಳ್ಳವರು. ವರ್ಣಾಶ್ರಮದ ಅಭಿಮಾನಿಗಳು. ಪುರುಷ ಪುರುಷರಲ್ಲಿಯೂ, ಸ್ತ್ರೀ ಪುರುಷರಲ್ಲಿಯೂ ಭೇದವೆಣಿಸುವರು. ಜನ್ಮತಃ ಮೇಲು ಕೀಳುಗಳನ್ನು ಬಗೆಯುವರು.

ಸ್ನಾನದಿಂದ ಶುಚಿಯು ಇಲ್ಲವೇ ಮಡಿಯು, ಎಂದು ನೀರಿಗೆ ಮಹತ್ವವಿತ್ತವರಿವರು. ಅದರಿಂದ ಅಂತಃಕರಣವೆಂತು ಪರಿಶುದ್ಧವಾಗುವದು ?

ಇವರು ತಮಗೆ ಮೈಲಿಗೆ. (ಸೂತಕ) ಬರುವದೆಂದು ತಿಳಿಯುವರು. ಸ್ಪರ್ಶಾಸ್ಪರ್ಶತೆಯನ್ನು ಹಿಡಿಯುವರು. ನೀರ ಮುಳುಗಿದರೆ ಅದು ಹೋಗುವದೆನ್ನುವರು. ಅದು ಹೇಗೋ ತಿಳಿಯದು! ಅದೇನು ಹೊರಗೆ ಹತ್ತಿದ ಹೊಲಸಲ್ಲ! ಮನಸ್ಸಿಗೆ ತಟ್ಟಿದ ಮೈಲಿಗೆ.

ಮಹೇಶ್ವರರು ಊಳಿಗವನ್ನೆಂದಿಗೂ ಒಪ್ಪರು. ಅದರಿಂದ ತಮಗೆ ಕಡಿಮೆತನ ಬರುವದೆನ್ನುವರು. ಯಾವಾಗಲೂ ಸೇವ್ಯ (ಆರಾಧ್ಯ) ರಾಗಿರಲೇ ಹವಣಿಸುವರು. ಇದು ಪರಮಾವಧಿ ಅಹಂಕಾರವೇ ಸರಿ.

ಸಾರಾಂಶ:— ಮೇಲಿನ ವಿವರಣೆಯನ್ನು ಆಕಲನ ಮಾಡಿದರೆ ಆತ್ಮೋದ್ಧಾರಕ್ಕೆ ಮಹೇಶ್ವರನ ಜೀವನಕ್ರಮಕ್ಕಿಂತಲೂ ಭಕ್ತನ ಜೀವನಕ್ರಮವೇ ಹೆಚ್ಚು ಅನುಕೂಲವೆನಿಸುವದು. ಬಹುಶಃ ಮಾಹೇಶ್ವರರ ಎಲ್ಲ ರೀತ್ಯಾಚಾರಗಳು ವಿಷಯ ಸುಖಪ್ರಾಪ್ತಿಗೋಸುಗವೇ ಇದ್ದಂತೆ ಅವೆ. ಆದುದರಿಂದ ಅವರಿಗೆ ಶ್ರೇಯಸ್ಸು (ಐಹಿಕ ಸುಖ) ಮಾತ್ರ ತಪ್ಪದೆ ಬೇಗನೆ ಸಿಗುವದೆಂಬ ಭರವಸೆಯುಂಟಾಗುವದು. ಆದರೆ ಇದರಿಂದ ಶ್ರೇಯಸ್ಸು (ಆಮುಷ್ಮಿಕ ಸುಖ ಪಾರಮಾರ್ಥಿಕತ್ವ) ಲಭಿಸಲು ಹೆಚ್ಚೆಚ್ಚು ಅಡೆತಡೆಗಳುಂಟಾಗಿ ಅದು ದೂರ ದೂರ ಸರಿಯುತ್ತ ಹೋಗುವದು. ಇವರಿಗೆ ಶ್ರೇಯಸ್ಸು ಅಸಾಧ್ಯವಿರದಿದ್ದರೂ ಅದು ದುಷ್ಪ್ರಾಪ್ಯವೆನ್ನಲಿಕ್ಕೇನೂ ಅಡ್ಡಿಯಿಲ್ಲ, ಹೀಗೆ ಆತ್ಮೋದ್ಧಾರದ ಸಲುವಾಗಿ ತೊಂದರೆ ಗೀಡಾದವರ ಮುಂದಾಳುತನದಲ್ಲಿ ಭಕ್ತರು ನಡೆಯುವದಿರುವದರಿಂದ, ಅವರ ಜೀವನ ಕ್ರಮದ ಸುಕರತೆಯೂ ಕೂಡ ವಿಫಲವಾಗಹತ್ತಿರುವದೋ ಏನೋ ಎಂಬ ಸಂದೇಹವು ಮೆಲ್ಲಮೆಲ್ಲನೆ ಹಣಿಕಿಕ್ಕುವಂತೆ ತೋರಹತ್ತಿರುವದು.

---

# ಕಲ್ಯಾಣದ ಮಹಾ ಯೋಜನೆ.

( ಲೇಖಕ :— ಶ್ರೀ. ಎಸ್. ಸಿದ್ಧವೀರಯ್ಯ ಕೃಷ್ಣಾ. )

---

ಶಿವಾನುಭವಾಶ್ರಮದ ಕಾರ್ಯದರ್ಶಿಗಳಾದ ಶ್ರೀಮಾನ್ ಶರಣಯ್ಯನವರು ಔಪಚಾರಿಕವಾಗಿ "ಕೃಷ್ಣಾಕ್ಕೆ ಆಗಮಿಸಿ, ತಾರೀಖು ೧೮—೧೯ ನವ್ಹಂಬರ ದಿನಾಂಕ ಮಂಗಳವಾರ ಮತ್ತು ಬುಧವಾರ ವರಿಗೂ ಇಲ್ಲಿಯ ಶಾಂತಿವರ್ಧಕ ಶಾಲೆಯ ಬೋರ್ಡಿಂಗಿನಲ್ಲಿ ಆತಿಥ್ಯ ವಹಿಸಿ, ಶಿವಾನುಭವದ ತತ್ವವಿಚಾರಗಳನ್ನು ಮತ್ತು ಬಸವಣ್ಣನವರ ಮಹತ್ಕಾರ್ಯಗಳನ್ನು ಸನ್ಮಿತ್ರ ಮಂಡಳಿಗೆ ಮನವಟ್ಟಾಗುವಂತೆ ತಿಳಿಸಿದರು. ಕಲ್ಯಾಣದ ಮಹಾಯೋಜನೆಯ ಹಲವು ರೂಪರೇಷೆಗಳನ್ನು ಮನಾಕರ್ಷಕವಾಗುವಂತೆ ಚಿತ್ರಿಸಿದರು. ಶ್ರೋತೃಗಳ ಉತ್ಸಾಹವನ್ನು ಉಕ್ಕಿಸಿ ಪ್ರಮಥರ ಸೇವೆಗೆ ಮಾನಸಿಕ ಒಲವುಂಟಾಗುವಂತೆ ಪ್ರೇರೇಪಿಸಿದರು. ಭೀಮನಹಳ್ಳಿಯ ಶ್ರೀ ಕೊಟ್ರಪ್ಪ ಶಾಸ್ತ್ರಿಗಳೂ ತಂಗಡಗಿಯ ಶ್ರೀ ಶಂಕರಪ್ಪ ಮಾಸ್ತರರೂ, ಹಿಂದುಪೂರಿನ ಶ್ರೀ ಬಸವಂತರಾಯ ಮಾಸ್ತರರೂ, ಇವರೇ ಮುಂತಾದ ಉತ್ಸಾಹಿಗಳು ಶ್ರೀ ಶರಣಯ್ಯನವರ ವಿಚಾರ ಪ್ರಚೋದನೆಗೆ ಮುಗ್ಧರಾಗಿ ಕಲ್ಯಾಣದ ಕಾರ್ಯದತ್ತ ಕಣ್ಣುಗಳನ್ನರಳಿಸಿದರು. ಮನ ಉಬ್ಬಿ ಸರ್ವಾರ್ಪಣ ಭಾವನೆಯಿಂದ ಸೇವೆಗೈಯ್ಯುವದಭಿಪ್ರಾಯವನ್ನು ವ್ಯಕ್ತಪಡಿಸಿದರು.

ಮಹಗಾಂವದ ಶ್ರೀ ಶರಣಯ್ಯನವರು ಕಲ್ಯಾಣದ ಅನುಭವ ಮಂಟಪದ ಪುನರುತ್ಪತ್ತಿಗಾಗಿ ಹಲವು ದಿವಸಗಳಿಂದಲೂ ಹೆಣಗಾಡುತ್ತ ಬಂದಿರುವರು. ಕೆಲವು ದಿವಸಗಳ ಹಿಂದೆ ಅವರು 'ಬಸವಭೂಮಿ' 'ಕಲ್ಯಾಣವಾಣಿ' ಎಂಬ ಸ್ಫೂರ್ತಿದಾಯಕ ಮತ್ತು ಕ್ರಾಂತಿದಿಗ್ದರ್ಶಕ ಗ್ರಂಥಗಳನ್ನು ಬರೆದು ಬಸವಭೂಮಿಯ ತರುಣರಿಗೆ ಹಿಂದೊಮ್ಮೆ ಬಡಿದೆಬ್ಬಿಸಿದುದು ಎಲ್ಲರಿಗೂ ನೆನಪಿರಲಿಕ್ಕೆ ಸಾಕು. ಈಗ್ಗೆ ಅವರೇ ಕಲ್ಯಾಣದ ಮಹಾಕಾರ್ಯದ ನಿಯೋಜಕರಾಗಿ, ಹೋದ ಬಸವಜಯಂತಿಯ ಉತ್ಸವದ ಕಾಲಕ್ಕೆ ಶಿವಾನುಭವಾಶ್ರಮದ ಸ್ಥಾಪನೆಗೆ ಕಾರಣರಾದರು. ಶ್ರೀ ವಾರದ ಚನ್ನಬಸವಪ್ಪಾ ಬಾಬಾಸಾಹೇಬರೇ ಈ ಧಾರ್ಮಿಕ ಯಾತ್ರೆಯ ಬೃಹದ್ರಥಕ್ಕೆ ಸಾರಥಿಯಾದರು. ಮುಧೋಳದ ಶ್ರೀ ನಿ. ಪ್ರ. ಮೃತ್ಯುಂಜಯರು

ಮಹಾಸ್ವಾಮಿಗಳೇ ಶ್ರೀ ಮದಲ್ಲಮಪ್ರಭುವಿನ ಅವತಾರ ಮೂರ್ತಿಗಳೆನಿಸಿ ಈ ಬೃಹದ್ಯೋಜನೆಯ ಮಾರ್ಗದರ್ಶಕರಾಗಿದ್ದಾರೆ. ಶ್ರಿ ಬಸವಣ್ಣನವರ ಭಾವಿಕ ಮೂರ್ತಿ ಎನಿಸಿದ ಶ್ರೀ ಪಿ. ಜಿ. ಹಳಕಟ್ಟಿಯವರೇ ಈ ಧಾರಾಪೂಷರಾಗಿ ಧರ್ಮ ಕಾಳಗವನ್ನು ಹೂಡುತ್ತ ಸತ್ಯ ಸಿದ್ಧಾಂತಕ್ಕೆ ಗುರಿ ಇಟ್ಟು ಅನುಭಾವ ಸಾಹಿತ್ಯವನ್ನು ಸೂರೆಗೈಯುತ್ತಿಹರು. ಇವರೇ ಮುಂತಾದ ಸಂಕಲ್ಪ ಮೂರ್ತಿಗಳ ಸಂಯುಕ್ತ ಶಕ್ತಿಯ ಆಧಾರದಮೇಲೆ ಶ್ರೀ ಶರಣಯ್ಯನವರು ಶಾಂತಿದಾಯಕ ನಾಂದ್ಯವನ್ನು ಹೇಳುತ್ತಿರುವರು. ಪ್ರಮಥ ಸೇವೆಯೇ ಇವರ ಜೀವನದ ಉಸಿರಾಗಿದೆ. ಪ್ರಮಥರ ಮಾರ್ಗದಂತೆ ನಡೆದು ಎಲ್ಲರೂ ಆ ದಿವ್ಯದಾರಿಯನ್ನು ಅನುಸರಿಸಿ ನಡೆಯಲೆಂಬುದೇ ಅವರ ಹೋರಾಟದ ಉದ್ದೇಶವಾಗಿದೆ. ಅವರು ಕಲ್ಯಾಣದ ಮಹಾಯೋಜನೆಯನ್ನು ಕೂಲಂಕಷವಾಗಿ ಅರುಹುತ್ತ ಕಡೆಗೆ ಅದರ ಸಾರಾಂಶವನ್ನು ಈ ರೀತಿ ಎಳೆದರು 'ಜಗತ್ತಿಗೆ ಇಂದು ಬೇಕಾದುದು ಧರ್ಮನೀತಿ ನ್ಯಾಯ ಸೇವಾಧ್ಯೇಯ ಮತ್ತು ಸಮತಾಪ್ರೇಮ. ಇವುಗಳಿಲ್ಲದ ಜಗತ್ತು ತೋರಿಕೆಗೆ ಎಷ್ಟು ಸುಧಾರಿಸಿ ವೈಭವ ಯುಕ್ತವಾಗಿ ಕಂಡರೂ ಅದು ಆತ್ಮದ ತೇಜೋವಧೆಯ ರಂಜಿಸುವ ರೂಪಲ್ಲದೆ ಮತ್ತೇನು ಅಲ್ಲ. ಇಂದಿನ ಬಾಹ್ಯಾಡಂಬರ ಜೀವನವು ಅಂತರಂಗದ ಪ್ರಕಾಶಮಯ ದೀಪವನ್ನು ನೊಂದಿಸಿಬಿಟ್ಟಿದೆ. ವಂಚಿತಮನೋಭಾವನೆಯ ಕ್ಷುದ್ರ ಪ್ರವೃತ್ತಿಯಿಂದ ರಾಷ್ಟ್ರಸೇವೆಯ ಸೋಗಿನಲ್ಲಿ ರಾಕ್ಷಸೀ ಜೀವನವನ್ನು ಸಾಗಿಸುತ್ತಿದ್ದಾನೆ. ಮಾನವನಿಂದ ಸ್ವಾತ್ಮೋದ್ಧಾರದ ಮಾರ್ಗವನ್ನೇ ಕಾಣದ ಕೆಲವು ಮೂಢರು ಲೋಕೋದ್ಧಾರಕ್ಕೆ ಕೈಚಾಚಿ ಸಮಾಜ ಬಂಧುಗಳ ಕಂಟಕಕ್ಕೆ ಕಾರಣರಾಗಿದ್ದಾರೆ. ಬಡವರ ಎಲುವಿನ ಭವ್ಯಮಂದಿರವನ್ನು ಕಟ್ಟಿಸಿಕೊಂಡು ಬಡಜನರ ರಕ್ತವನ್ನುಂಡು ಜೀವಿಸಿ, ವರಿಷ್ಠರಾಗಿ ಬಲಿಷ್ಠರಾಗಿ ಒಡಹುಟ್ಟಿದವರ ಸೌಖ್ಯದ ಮಸಣ ಯಾತ್ರೆಯನ್ನು ಕೈಕೊಂಡು ಬಿದ್ದವರ ಮೇಲೆ ಕಾಲಿಟ್ಟು ತುಳಿಯುತ್ತ ನಡೆದು ಮೇಲ್ಗದ್ದುಗೆಯನ್ನೇರಿ ಅರೆಹೊಟ್ಟೆ ಬರೆಹೊಟ್ಟೆಯ ಬಡವರಿಗೆ ಆಹಾರವನ್ನು ಹಂಚಲು ವಾಹನಗಳಲ್ಲಿ ಓಡಾಡುತ್ತಿರುವ ಹಲವು ನಿಯುಕ್ತನಾಯಕರಿಂದು ಆಂದರೇನು? ಬಡವನ ಬಡತನ ಬಯಲಾಗಲಿಲ್ಲ. ದಬ್ಬಿಸಿಕೊಂಡು ಹೋಗಿ ಮೇಲ್ಮನೆಯಲ್ಲಿ ಮೆರೆಯುವ ಮಹಾರಾಯರ ಸೌಖ್ಯಕ್ಕೇನು ಕೊರತೆಯುಂಟಾಗಲಿಲ್ಲ. ಪ್ರಜಗಳಿಗಾಗಿ ಪ್ರಭುತ್ವವು ಪ್ರಭುತ್ವಕ್ಕಾಗಿ ಪ್ರಜೆಗಳೆಂಬ ಮೇಲ್ಪಂಜ್ತಯ ಆದರ್ಶದ

ಮೇಲೆ ಮುಸುಕಿಬಿದ್ದು ಕರ್ಮಕೋಟಿಯಲ್ಲಿ ಸಿಕ್ಕು ಬಳಲುತ್ತದೆ ಜನಾಂಗ ವಿಂದು. ಮಾನವನಿಂದ ಸಂಕುಚಿತ ಹೀನ ಬಂಧನೆಗಳನ್ನು ಹರಿದು ತನ್ನ ತನವನ್ನು ಕಂಡುಹಿಡಿದು, ನೈಜಸೇವೆಯ ನಿಲುಕಡೆಯನ್ನು ಕಾಣಲು ಹವಣಿಸಬೇಕು. ಅದಕ್ಕಾಗಿ ಶರಣರ ಅನುಭಾವ ಮಾರ್ಗವಿಡಿದು ಅಂತರಂಗಪಾವಿತ್ರತೆಯನ್ನೂ ಬಹಿರಂಗ ನೈತಿಕ ಜೀವನ ಸೌಂದರ್ಯವನ್ನು ಬೆಳಸಿ ಸರ್ವೋದಯದ ಉಚ್ಚ ಸಂಸ್ಕೃತಿಯನ್ನು ಮಾರ್ಪಡಿಸಬೇಕು. ಸ್ವರಾಜ್ಯವನ್ನು ಸ್ಥಾಪಿಸಿ ಜನತಾ ಸೇವೆಗೈಯ್ಯಬೇಕೆಂಬ ಅಣ್ಣಗಳು ಮೊದಲು ತಮ್ಮೊಳಗೆ ಸುರಾಜ್ಯವನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ನನ್ನ ಕರಣೇಂದ್ರಿಯಾದಿಗಳಮೇಲೆ ಅಧಿಕಾರ ಪಡೆದು ಭಕ್ತಿಭಾವಿಗಳಾಗಿ ಸಲ್ಲಿಸುವ ಆನಂದ ಜೀವನದ ಸತ್ಯ ಸೇವೆಯೇ ರಾಷ್ಟ್ರಕ್ಕೂ ಸಾಮ್ರಾಜ್ಯಕ್ಕೂ ಸುಖದಾಯಕವಾಗಿದೆ. ಇಂಥಾ ಸುರಾಜ್ಯವೇ ಶರಣಸಾಮ್ರಾಜ್ಯವು ಅದು ರಾಮರಾಜ್ಯ ಧರ್ಮರಾಜ್ಯ ಮತ್ತು ಅಶೋಕನ ತಂದೆ ರಾಜ್ಯಗಳಂಥಾ ಆದರ್ಶ ರಾಜ್ಯಗಳಿಗೆ ಮಾತೃಕೆಯಾಗಿದೆ.

ಶರಣ ಸಾಮ್ರಾಜ್ಯದ ಹೆದ್ದಾರಿಯೇ ದಾರಿ. ಅದರ ವೈಶಿಷ್ಟ್ಯತೆಯೇ ವೈಶಿಷ್ಟ್ಯತೆ. ಶರಣ ಸಾಮ್ರಾಜ್ಯದ ಅಂತಿಮಗುರಿಯು ಆತ್ಮನ ಪುನರ್ಘಟನೆಯು. ಸರ್ವಜೀವದಯಾ ಪರತೆಯೇ ಅವರ ಸ್ವಚ್ಛಂದಪ್ರಭುತ್ವವು. ನಾನಾತ್ವವನಳಿದು ಸರ್ವಭೂತಾತ್ಮನ ನಿತ್ಯ ಸೇವಾತತ್ಪರತೆಯೇ ಅವರ ರಾಜಕಾರಣವು. ನೀತಿ ನಿಜಾಚಾರಗಳೇ ಅವರ ಘಟನೆಗಳು. ಇಹಪರಗಳ ಸುಖಶಾಂತಿಗಳೆರಡಕ್ಕೂ ಐಹಿಕ ಜೀವನವನ್ನು ಸ್ವರ್ಗೀಯ ಸೌಖ್ಯದೂಟದಿಂದ ತಣಿಸುವದಕ್ಕೂ ಇವೇ ಕಾರಣವಾಗಿದೆ. ಇಂಥಾ ಸುರಾಜ್ಯವನ್ನು ಸ್ಥಾಪಿಸುವದೇ ಬಸವಣ್ಣನವರ ಮುಖ್ಯ ಉದ್ದೇಶವಾಗಿತ್ತು ಹನ್ನೆರಡನೆ ಶತಾಬ್ದದಲ್ಲಿ ಕಂಗೊಳಿಸಿದ ಅನುಭವ ಮಂಟಪದಲ್ಲಿ ಇದೇ ತತ್ವಗಳು ಬೆಳಕಿಗೆ ಬಂದವು. ಹಲವು ಶರಣ ಶರಣೆಯರ ಜೀವನಗಳು ಇದಕ್ಕಾಗಿಯೇ ಮುಡುಪಾಗಿ ನಿಂತಿದ್ದವು. ಬಸವಣ್ಣ, ಚನ್ನಬಸವಣ್ಣ ಅಲ್ಲಮಪ್ರಭು, ಮಹಾದೇವಿಯಕ್ಕ ಮುಂತಾದವರ ಐಹಿಕಮಣಿಹವೇ ಇದಾಗಿತ್ತು. ಹರಳಯ್ಯ ಮಧುವಯ್ಯಗಳ ಆತ್ಮಾರ್ಪಣವೇ ಈ ಶರಣ ಸಾಮ್ರಾಜ್ಯದ ಪ್ರಜ್ವಲಿತ ಸ್ಮಾರಕವಾಗಿದೆ. ಅಂದಿನ ಅನುಭವ ಮಂಟಪದ ಬಾಹ್ಯ ಸ್ವರೂಪವು ಕಾಲಿನ ಕರಾಳಪೆಟ್ಟಿಗೆ ಪುಡಿಪುಡಿಯಾಗಿ ವಿಜಯನಗರದ ಸಾಮ್ರಾಜ್ಯದ ಕಾಲಕ್ಕೆ ೧೦೧ ವಿರಕ್ತಮೂರ್ತಿಗಳ ಅಂತಸ್ಸ್ಫೂರ್ತಿಯಿಂದ

ಲ ವಿಸ್ಮರಣೆಹೊಂದಿ ಮತ್ತೊಮ್ಮೆ ಅನುಭಾವ ಸಾಹಿತ್ಯದ ಕುಡಿಚಾಚಿ ಕಡೆಗೊಂಡಿತು. ಇಂದು ಆ ಶರಣ ಸಾಮ್ರಾಜ್ಯವೇ ಪುನಃ ರೂಪಗೊಳ್ಳಲು ಅಣಿಯಾಗಿ ನಿಂತಿವೆ. ಅನುಭವಮಂಟಪದ ಪುನರುತ್ಪತ್ತಿಯಾಗಿದೆ ಅಲ್ಲಲ್ಲಿ ಶರಣರು ಉದಯವಾಗಿದ್ದಾರೆ. ಲ್ಯಾಣ ಯಾತ್ರೆಗಾಗಿ ಸರ್ವ ಸನ್ನಾಹ ಕೈಕೊಳ್ಳುತ್ತಲಿದ್ದಾರೆ. ಹಿಂದಿನ ಕಲ್ಯಾಣದ ಮಹಾಯೋಜನೆಯ ಕಾರ್ಯ ರೂಪಧರಿಸುತ್ತಲಿದೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣರು ಕಲ್ಯಾಣದ ಹೆದ್ದಾರಿಯನ್ನು ಸಿದ್ಧಗೊಳಿಸುತ್ತಲಿದ್ದಾರೆ ವಾಲಿಭಾಂಡಾರ ( ವಚನ ಭಾಂಡಾರ ) ವನ್ನು ಕಿತ್ತಿಹಾಕುತ್ತಲಿದ್ದಾರೆ ಶ್ರೀಮಾನ್ ಹಳಕಟ್ಟಿ ಯವರಂಥಾ ಆಧುನಿಕ ಶರಣರು ಈ ಅಕ್ಷಯಸಿಧಿಯನ್ನು ಸೂರೆಗೈದು ಅಚ್ಚಕನ್ನಡಿಗರ ನಿಚ್ಚಳ ಮನೋಕೋಶಗಳನ್ನು ತುಂಬುತ್ತಲಿದ್ದಾರೆ. ಈ ಸಂಪದವೇ ನಮ್ಮನ್ನು ಕಲ್ಯಾಣಕ್ಕೆ ಒಯ್ದು ಮುಟ್ಟಿಸುವ ಹಾದಿಯು ಖರ್ಚಿ ಈ ಸಂಪದಿಯನ್ನು ಎಲ್ಲರೂ ಪಡೆದು ಕಲ್ಯಾಣದತ್ತ ಸಾಗಲೂ ಸನ್ನದ್ಧರಾಗಬೇಕು.

ಕಲ್ಯಾಣವು ನಮ್ಮ ಕಣ್ಮರೆಯಾಗಿ ನಮ್ಮ ಹೃದಯಾಕಾಶದ ಮಿನುಗುವ ತಾರೆಯಾಗಿದೆ ಅದು ತನ್ನ ಸ್ಥಾನವೈಶಿಷ್ಟ್ಯತೆಯಿಂದ ಅಸಾದೃಶ್ಯ ಆದರ್ಶನವನ್ನು ಪ್ರಕಟಿಸಿ ಪ್ರಪಂಚದಲ್ಲಿ ತನಗೆ ತಾನೇ ಉದಾಹರಣೆಯಾಗಿ ನಿಂತಿದೆ. ಅವಿರಳ ಸಂಸ್ಕೃತಿಯ ಶಾಖೋಪ ಶಾಖೆಗಳಿಗೆ ಅದು ತಾಯಿ ಬೇರಾಗಿ ನೆಲಿಸಿದೆ. ಸತ್ಯಸುನೀತಿ ವಿಶ್ವಪ್ರೇಮಸಾಹಸಿಗಳಿಗದು ಪಾತಾಳ ಸೆಲೆಯಾಗಿ ನಿಂತಿದೆ, ಆಶ್ರಮಜೀವನದ ಕಷ್ಟದಿಂದ ಕರಗೊಂಡು ಜೀವಗಳಿಗೂ ಪಾಪಕರ್ಮಗಳಿಂದ ತೊಳಲಿ ಬಳಲಿ ಬಂದಪ್ರಾಣಿಗಳಿಗೂ ಪಾವನಗೈಯ್ಯಲು ಕಲ್ಯಾಣವು ಅವಿಮುಕ್ತ ಪುಣ್ಯಕ್ಷೇತ್ರವಾಗಿ ಕಂಗೊಳಿಸುತ್ತಿದೆ. ಸರ್ವಧರ್ಮ, ಸರ್ವೋದಯಕ್ಕದು ಖಣಿಯಾಗಿ ಭವ್ಯವಾಗಿದೆ. ಲೌಕಿಕ ಜ್ಞಾನ, ವಿಜ್ಞಾನ, ಸುಜ್ಞಾನ, ಮಹಾಜ್ಞಾನಗಳ ಸ್ಫುರಣೆಗೆ ಅದು ಬೆಳಕಿನ ರಾಶಿಯಾಗಿ, ರಂಜಿಸುತ್ತಿದೆ. ಸತ್ಯಶರಣ ಶರಣೆಯರ ನಿತ್ಯಜೀವನದ ನೆಲೆವೀಡಾಗಿದೆ ಸತ್ಯಧರ್ಮದ ತಾಣವಾಗಿದೆ. ಇಂಥಾ ಕಲ್ಯಾಣ ನಗರವು ಚಾಲುಕ್ಯರ ೧ ನೇ ಸೋಮೇಶ್ವರನ ಕಾಲಕ್ಕೆ ರೂಪಗೊಂಡು ೬ನೇ ವಿಕ್ರಮಾದಿತ್ಯನ ಕಾಲಕ್ಕದು ಭಾರತದ ಶ್ರೇಷ್ಠಸ್ಥಾನವೆಂದು ಹೆಸರು ಪಡೆದು ಕಲಚುರ್ಯದ ಬಿಜ್ಜಳ ಕಾಲಕ್ಕೆ ಬಳವಾದಿ ಪ್ರಮುಖರು ಆಪ

ಮನದಿಂದ ಅದರ ಕೀರ್ತಿಯ ಕಳಸವು ಗಗನಕ್ಕೇರಿ ನಿಂತಿತು. ಅಸಂಖ್ಯ ಶರಣರ ಪಾದಪುಷ್ಪದಿಂದ ಕಲ್ಯಾಣ ಭೂಮಿಯು ಪುಣ್ಯ ನಾಡೆನಿಸಿತು.

ಮುಂದೆ ಕಲ್ಯಾಣವೇ ಪ್ರಣತಿಯಾಯಿತು. ಶಿವಭಕ್ತರ ಸೇವೆಯೇ ಎಣ್ಣೆಯಾಯಿತು. ಶಿವಾಚಾರವೆಂಬುದೇ ಬತ್ತಿಯಾಯಿತು. ಬಸವನೇ ಅದಕ್ಕೆ ಜ್ಯೋತಿಯಾದನು. ಆ ಜ್ಯೋತಿಯ ಮಹಾ ಬೆಳಗಿನಲ್ಲಿ ಅಸಂಖ್ಯಾತ ಶರಣರು ತೇಜೋಮಯರಾಗಿ ಬೆಳಗುತ್ತ ಭಕ್ತಿಯ ಬೆಳಕನ್ನು ಜಗಜೀವಿಗಳಿಗೆ ನೀಡಿದರು ಪರಮಾನಂದ ಜೀವನವನ್ನು ಸಾಗಿಸುತ್ತ ಇಹಪರಗಳೆರಡರ ಸೌಖ್ಯವನ್ನು ಇಲ್ಲೇ ಪಡೆಯಿರೆಂದು ಭಾವ, ವಿಚಾರ ಮತ್ತು ಕ್ರಿಯೆಗಳಿಗೆ ಮಹಾಜ್ಞಾನ ದೀಕ್ಷೆಯನ್ನು ಕೊಟ್ಟು ಲೋಕವನ್ನು ಉದ್ಧರಿಸಿದರು. ನಾನಾತ್ವದ ಕತ್ತಲೆಯ ಮುಸುಕನ್ನು ತೋರಿಸಿ ದಾಸೋಹ ಭಾವನೆಯ ದಿವ್ಯದರ್ಶನವನ್ನು ಮಾಡಿಸಿದರು. ಇಂದು ನಾವು ಜೀವನ ಯಾತ್ರೆಯ ದಿಗ್ವಿಜಯವನ್ನು ಶರಣ ಮಾರ್ಗದಲ್ಲೇ ಕಾಣಬೇಕಾಗಿದೆ. ಎಂದು ಮುಂತಾಗಿ ಪ್ರಮಥರ ಸತ್ಯಪಥದ ಯೋಜನೆಯ ಮಾರ್ಮಿಕ ವಿಧಾನಗಳನ್ನು ವಿವರಿಸಿ ಹೇಳಿದರು. ಅವರು ಮುಂದೆ ಸಾಗುತ್ತ ಇಂದು ನಮಗೆ ಬೇಕಾದುದು ಅದೇ ದಾರಿ ಅದೇ ಯೋಜನಾಪದ್ಧತಿ ಅದೇ ರೀತಿ ಅದೇ ನೀತಿ ಪ್ರಪಂಚದ ಯಾವ ರಾಷ್ಟ್ರವಾಗಲೀ ಯಾವ ಇಜಂ ಅಥವಾ ಪಕ್ಷಗಳಿಗೆ ಸಂಬಂಧಿಸಿದ ಮಾನವನಾಗಲೀ, ರಾಷ್ಟ್ರವನ್ನು ಕೈಹಿಡಿದು ನಡೆಸುವ ನಾಯಕನಾಗಲೀ ಧರ್ಮ ಪ್ರವರ್ತಕನಾಗಲೀ ಶರಣರ ಆದಿವ್ಯ ದೈವೀಪ್ರೇರಿತ ಮಾರ್ಗದತ್ತ ಕೈಸನ್ನೆ ಮಾಡಲೇಬೇಕು. ಶರಣರ ಆ ದಿವ್ಯ ಮಾರ್ಗದ ಹೊರತಾಗಿ ಮಾನವ ಕೋಟಿಗೆ ಸುಖಶಾಂತಿಗಳೆಂದಿಗೂ ಲಭಿಸಲಾರವು.

'ಬಂಧುಗಳೇ ಕಲ್ಯಾಣದ ಚಿತ್ಸೂರ್ಯ ನಿಂದು ಉದಯವಾಗುತ್ತಿಹನು ಪಾಪಮಯ ಅಂಧಕಾರವನ್ನು ಹೋಗಲಾಡಿಸಿ ಅನುಭಾವ ಜ್ಞಾನದ ಪ್ರಭಾತ ಗೈಯ್ಯಲು ದಿನಮಣಿಯು ಇಣಕುತ್ತಿರುವನು. ಶರಣರ ಸಮಾಗಮವು ಪುನಹ ಕಲ್ಯಾಣದಲ್ಲಿ ಆಗುತ್ತಿರುವದು. ನಂದಿಧ್ವಜ ಗಗನಕ್ಕೆ ಹಾರುವದು ಜೊಳ್ಳು (ಪಾಪಿಗಳು) ಅಳಿದು ಗಟ್ಟಿ (ಶಿವಾಂಶಿಕರು) ಉಳಿಯುವರು ಅವರೇ ಶರಣ ಸಾಮ್ರಾಜ್ಯವನ್ನು ಕಣ್ತುಂಬ ಕಾಣುವರು. ಸ್ಥಿರಸೌಖ್ಯ ಅನುಭವಿಸಿ ನಲಿಯುವರು. ಸತ್ಯ ಪ್ರಮಥರ ಸಂಕಲ್ಪವು ಸಟೆಯಲ್ಲ ಚನ್ನಬಸವಣ್ಣನು ಅಂದಿನ ಅಪೂರ್ವ ಕಾರ್ಯವನ್ನು ಇಂದು

ಪೂರ್ಣಗೊಳಿಸಲು ಹೊರಟಿದ್ದಾನೆ. ವೀರಟಸವಂತನಿಗೆ ಲಿಂಗಧರಿಸಿ ದಿಲ್ಲಿ ಸಿಂಹಾಸನಕ್ಕೆ ಕೂಡ್ರಿಸುವವರಿಗೂ ಹೋರಾಟ ನಡಿಸೇ ಇರುವನು. ಅದನ್ನೆಲ್ಲಾ ಅರಿಯಲು ನಾವಿಂದು ಕಂಗಳ ಕಸವನ್ನು ಕಳೆದು ಮನದ ಮಾಲಿನ್ಯವನ್ನು ದೂರಮಾಡಬೇಕು. ಪ್ರಮಥರ ಭವ್ಯವಾಣಿ ದಿಟವೆಂದು ನಂಬಿ ಆಚರಿಸಬೇಕು.

ಕಾರಣ ನವ ಶರಣ ಶರಣೆಯರೇ ! ನಿರಂಜನಮೂರ್ತಿಗಳೇ !! ಕಲ್ಯಾಣವಿನ್ನು ಮರೆಯಲಿಕ್ಕಾಗದು ಇಂದು ಕಲ್ಯಾಣದಲ್ಲಿ ಸ್ಥಾಪಿತವಾದ ಶಿವಾನುಭವಾಶ್ರಮವೇ ಅಂದಿನ ಅನುಭವ ಮಂಟಪದ ಕದಳೀಕಂದವು ಅದು ಸುಳಿಬಿಚ್ಚಿ ಬೆಳೆದು ಮುಂದೆ ನಮಗೆ ಬೀಜವಿಲ್ಲದ ಫಲವನ್ನು ನೀಡಲು ಆಶ್ವಾಸನ ಕೊಡುತ್ತಲಿದೆ. ಅದರ ಪೋಷಣೆ ರಕ್ಷಣೆಯ ಹೊಣೆ ನಿಮ್ಮದು, ಫಲಪ್ರಾಪ್ತಿಸಿ ಕೊಳ್ಳುವ ದೈವವೂ ನಿಮ್ಮದ , ಬಸವಣ್ಣನವರ ಅಂದಿನ ಮಹಾ ಯೋಜನೆಗಳನ್ನೇ ಅನುಸರಿಸಿ ನಾವಿಂದು ಆಚರಿಸಬೇಕು. ಇಂದಿನ ಹಲವು ಒಡಕಿನ ಸಂಸ್ಥೆಗಳ ದುಷ್ಪರಿಣಾಮವನ್ನು ಮುಂದಿಟ್ಟುಕೊಂಡು ನಮ್ಮವರ ಹೆದ್ದಾರಿಯನ್ನೇ ನಾವು ತುಳಿದು ಹೋಗಬೇಕು.

---

# ಬಸವನ ಬಸವಕಲ್ಯಾಣ.

ಲೇಖಕರು:— ಎನ್. ಆರ್. ಬಾಣದ, ಬೇಲೂರು
ಸ. ಕ. ಲೋಕಶಾಲಾ–೩



ಬಸವಕಲ್ಯಾಣವು ಹೈದ್ರಾಬಾದ ರಾಜ್ಯದಲ್ಲಿ ಸುತ್ತಲೂ ಗಿಡಗಂಟಿಗಳ ಗುಂಪಿನೊಳಗೆ ಮಹರುಷಿಗಳ ತಪೋವನದಂತೆ ಕಂಗೊಳಿಸುತ್ತದೆ. ಊರಹೊರಗೆ ದೊಡ್ಡದೊಂದು ನಿರ್ಮಲ ನೀರಿನ ಸರೋವರವು ಕಲ್ಯಾಣದೊಳಗಿನ ಕೊಳಚೆಯನ್ನು ತೊಳೆಯಲು ಯಾವಾಗಲೂ ಟೊಂಕಕಟ್ಟಿ ನಿಂತಂತಿದೆ ಒಂದುಕಡೆ ಭವ್ಯವಾದ ಕೋಟೆಯು ಗೋಡೆಯು ವೈರಿಗಳ ಗುರುತು ಹಚ್ಚಲು ಎತ್ತರವಾಗಿ ನಿಂತಿದೆ. ಊರಿನಲ್ಲಿ ಹಾಗೂ ಊರಹೊರಗೆ ಮಹಾನುಭಾವರ ತಪಸ್ಯೆಯ್ಯುವ ಗುಹೆಗಳು ಮತ್ತು ಪಟ್ಟಣವು ಇಷ್ಟೊಂದು ದೊಡ್ಡದಿತ್ತೆಂದು ಹೆಮ್ಮೆಯಿಂದ ತೋರಿಸುತ್ತಿರುವ ಬಿದ್ದ ಮನೆಗಳ ಗೋಡೆಗಳು ಕಾಣುತ್ತಿವೆ. ಶಿವಶರಣರು ಯುದ್ಧ ಮಾಡಿದಾಗ ರಕ್ತ ಹರಿದು ತೊಯ್ದ ಭೂಮಿಯಂತೆ ಅಲ್ಲಿಯ ಮಣ್ಣು ಕೆಂಪಗಾಗಿ ಗೋಚರಿಸುತ್ತಿದೆ. ಪ್ರತಿಯೊಬ್ಬ ವೀರಶೈವ ಅಲ್ಲಿ ನೋಡಿದೊಡನೆ ಮನದಲ್ಲಿ ಆನಂದ ಮತ್ತು ಅತಿ ದುಃಖ ಒಮ್ಮೆಲೇ ತಂದುಕೊಳ್ಳದಿರಲಾರ ಯಾಕಂದರೆ? ಅಲ್ಲಿಯ ಬೆಳೆಯುಳ್ಳ ಪ್ರದೇಶ ಸುಂದರ ಆಯುಕಟ್ಟಿನ ಸ್ಥಳ ಉತ್ತಮ ಹವೆ ನೀರು, ಮಹಾನುಭಾವರು ಮಾಡಿದ ಕಾರ್ಯದ ಹಳೆಯ ಹೆಗ್ಗುರುತು ಬಸವಣ್ಣನ ಅರಮನೆ, ಈಗಿರುವ ಗುಡಿ, ಪರುಷಗಟ್ಟಿ, ಮೋಳಿಗೆಮಾರಯ್ಯನ ಗುಹೆ, ಉರಿಲಿಂಗಪೆದ್ದಿಯ ಮಠ ಇವೆಲ್ಲವು ನೋಡಿ ಒಮ್ಮೆಲೇ ಮನಕ್ಕೆ ಆನಂದವಾಗದೆ ಇರದು. ಇನ್ನು ಆ ಮಹಾತ್ಮರು ಉಚ್ಚ ವಿಚಾರದಿಂದ ಕೆತ್ತಿಸಿದ ಶಿಲಾಲೇಖನವನ್ನು ಮುಸಲ್ಮಾನರು ತಂದು ತಮ್ಮ ಮಶೀದೆಯಲ್ಲಿ ಒಳಗೆ ಹೋಗುವಾಗ ಕಾಲಕೆಳಗೆ ಹಾಕಿದ್ದು ನೋಡಿದರೆ ಹಿಂದೂ ಧರ್ಮದ ಹಲವಾರು ಕುರುಹುಗಳಿದ್ದ ಕೋಟೆಯಲ್ಲಿ ನವಾಬರು ಎಲ್ಲ ಕುರುಹುಗಳನ್ನು ತೆಗೆಯಿಸಿ ತಮ್ಮ ವಾಸವನ್ನೇ ಅಲ್ಲಿ ಮಾಡಿದ್ದನ್ನು ನೋಡಿದರೆ ಪರುಷಗಟ್ಟಿಯ ಮೆಟ್ಟಲುಗಳಮೇಲೆ ಕುಳಿತು ಮುಸಲ್ಮಾನರು ಮಾಂಸ ಮಾರುತ್ತಿದ್ದುದನ್ನು ವಿಚಾರ ಮಾಡಿದರೆ ಶಿವಾನುಭವ ಮಂಟಪದ ಕಂಬವನ್ನು ಕಿತ್ತಿತಂದು ಮಸೀದೆಯಲ್ಲಿ ಹಾಕಿದ್ದನ್ನು ನೋಡಿದರೆ ಮನಕ್ಕೆ ನೆಮ್ಮದಿಯಾಗಿ ಒಳ್ಳೇ ವಿಷಾದ ವೆನಿಸುತ್ತದೆ. ——

೧೨ ನೇ ಶತಮಾನದ ಕಲ್ಯಾಣವು ಪವಿತ್ರ ಕಲ್ಯಾಣವಾಗಿತ್ತು ಅಲ್ಲಿ ಯಾವ ಕಲಂಕವೂ ಇದ್ದಿಲ್ಲ. ಬಸವಣ್ಣನವರ "ಕಾಯಕವೇ ಕೈಲಾಸ ಎಂಬ ತತ್ವ ಕಲ್ಯಾಣದಲ್ಲಿ ಅಷ್ಟೇ ಅಲ್ಲ ದೇಶದ ತುಂಬೆಲ್ಲ ಪ್ರತಿಧ್ವನಿಸುತ್ತಿತ್ತು. ನಡೆಯುವಿಯೂ ಆ ರೀತಿ ಇತ್ತು. ಆ ಶಿವಶರಣರು ಯಾವ ಜ್ಯಾತಿಗೂ ಮಹತ್ವ ಕೊಟ್ಟಿಲ್ಲ ಅವರು ಜಾತ್ಯತೀತದಿಂದ ಇರುವದೇ ಮೇಲು ಎಂದು ಮೇಲಿಂದಮೇಲೆ ಹೇಳುತ್ತಿದ್ದರು. ೨೦ ನೇ ಶತಮಾನದ ನಮ್ಮ ಸರಕಾರ ಒಳ್ಳೇ ವಿಚಾರಪರ ಪಂಡಿತರನ್ನು ಕೂಡಿಸಿ ಚರ್ಚಿಸಿ ಮಾಡುತ್ತಿದ್ದ ಕಾಯ್ದೆಗಳು ೧೨ ನೇ ಶತಮಾನದ ಶಿವಶರಣರು ಮೊದಲೇ ಆ ರೀತಿ ವಿಚಾರಿಸಿ ಕೃತಿಯಲ್ಲಿ ತಂದಿದ್ದಾರೆ. ಎಲ್ಲ ಜಾತಿಯವರೂ ಒಂದೇ, ಸ್ತ್ರೀಯರಿಗೆ ಪುರುಷರಷ್ಟು ಹಕ್ಕು ಬಾಧ್ಯತೆಗಳಿವೆ. ಮೊದಲಾದ ವಿಚಾರಗಳನ್ನು ಆಗಿನ ಕಾಲದಲ್ಲಿಯೇ ಮಾಡಿಟ್ಟಿದ್ದಾರೆ. ಅಂತೆಯೇ ಮಹಾತ್ಮಾಜೀಯವರು ಹುಬ್ಬಳ್ಳಿಯ ಒಂದು ಸಭೆಯಲ್ಲಿ ಮಾತನಾಡುವಾಗ ಅಹಿಂಸೆಯಿಂದಿರುವದು ಸ್ತ್ರೀಯರಿಗೆ ಪುರುಷರಷ್ಟು ಹಕ್ಕು ಭಾಧ್ಯತೆಗಳನ್ನು ಕೊಡುವದು ಜಾತ್ಯತೀತದಿಂದಿರುವದು ಸತ್ಯದಿಂದಿರುವದು. ಮೊದಲಾದ ವಿಚಾರಗಳನ್ನು ಹೇಳುತ್ತಿರುವದು ನನ್ನ ಸ್ವಂತ ವಿಚಾರದ ಮಾತುಗಳಲ್ಲ ಇಂದಿಗೆ ಇವುಗಳಾಗಿ ೮೦೦ ವರ್ಷಗಳುಗತಿಸಿವೆ. ಎಂದು ಹೇಳಿದರಂತೆ ಆದ್ದರಿಂದ ಅವುಗಳನ್ನೆಲ್ಲ ಪುನರುಜ್ಜೀವನಗೊಳಿಸುವದು ನಮ್ಮೆಲ್ಲರ ಕರ್ತವ್ಯವಾಗಿದೆ.

## ಬಸವಣ್ಣನ ನೀತಿ

ಮಾನವನು ಜೀವನ ಸಾಗಿಸುವಾಗ ನೀತಿ ಧರ್ಮ ಶೀಲ ಇವುಗಳಿಗೇನೇ ಅವನು ಬೆನ್ನು ಹತ್ತಿದರೆ ಅವನು ಮುಂದೆ ಬರಲು ಸಾಧ್ಯ. ಧರ್ಮ ಬಿಟ್ಟು ಶೀಲತೊರೆದು ಅನೀತಿಯಿಂದ ನಡೆಯುತ್ತಿರುವ ಮಾನವ ಮುಂದೆ ಬರಲು ಎಂದೆಂದಿಗೂ ಅಸಾಧ್ಯ. ಅನೀತಿಯನ್ನು ಆಚರಿಸುತ್ತಿರುವ ಮಾನವನಿಗೆ ಜನಬಲ ಧನಬಲ ದೊರೆಯುವದು ಬಹು ದುರ್ಲಭ. ಅದು ಒಂದು ವೇಳೆ ಸಿಕ್ಕರೂ ಕೂಡ ಸ್ಥಿರವಲ್ಲವೆಂದು ಧೈರ್ಯದಿಂದ ಹೇಳಬಹುದು. ಮಹಾತ್ಮಾ ಬಸವಣ್ಣನಿಗೆ ಹಿಂದೆ ಧನಬಲಕ್ಕಿಂತಲೂ ಜನಬಲ ಒಳ್ಳೇ ಹೆಚ್ಚಾಗಿತ್ತೆಂದು ಕಂಡು ಬರುತ್ತಿದೆ. ಆದರೆ ಅನೀತಿಯಿಂದ ಅಧರ್ಮದಿಂದ ಅಶ್ಲೀಲದಿಂದ ನಡೆದಿದ್ದರೆ ಇದು ಸಿಗುತ್ತಿದ್ದುದು ಸಾಧ್ಯವಿದ್ದಿಲ್ಲ ಹಾಗೂ

೮೦೦ ವರ್ಷಗಳು ಗತಿಸಿದರೂ ಆತನ ಕೀರ್ತಿ ಅಚ್ಚಳಿಯದೆ ಉಳಿಯುತ್ತಿದ್ದುದೂ ಸಾಧ್ಯವಿದ್ದಿಲ್ಲ. ಹೀಗಾಗಿ ಆ ಮಹಾತ್ಮನು ಒಳ್ಳೇ ಧರ್ಮಿಷ್ಠನಾಗಿ ಶೀಲವಂತನಾಗಿ ನೀತಿವಂತನಾಗಿ ನ್ಯಾಯದಿಂದ ನಡೆದು ಜನಬಲ ಕಟ್ಟಿಕೊಂಡು ಜನತೆಯಲ್ಲಿ ಒಳ್ಳೇ ಉಚ್ಚವಿಚಾರ ನೆಲೆಗೊಳಿಸಿದನು. ದೇಶದ ತುಂಬೆಲ್ಲ ಜನತೆಯು ಕುಂತರೂ ಬಸವ, ನಿಂತರೂ ಬಸವ, ಮಲಗಿದರೂ ಬಸವ, ಎದ್ದರೂ ಬಸವ, ಕೆಲಸ ಮಾಡುವಾಗಲೂ ಬಸವ, ಬಿಟ್ಟಾಗಲೂ ಬಸವ, ಎಂಬಮಾತು ಪ್ರತಿಧ್ವನಿಸುತ್ತಿತ್ತು. ಈಗಲೂಕೂಡ ಕೇಳುತ್ತಿದ್ದೇವೆ. ಅಂತೆಯೇ ಉಚ್ಚವಿಚಾರದಿಂದ ಅಂತ್ಯಜನ ಮಗನಿಗೆ ಬ್ರಾಹ್ಮಣನ ಮಗಳ ಕೊಡಿಸಿ ಲಗ್ನ ಮಾಡಿದಾಗ ಬಿಜ್ಜಳನು ಬ್ರಾಹ್ಮಣನನ್ನೂ ಅಂತ್ಯಜನನ್ನೂ ಕುದುರೆಯ ಕಾಲಿಗೆ ಕಟ್ಟಿ ಕೊಲೆ ಮಾಡಿಸಿದರೆ ಬಸವಣ್ಣನು ಇದು ಒಳ್ಳೇ ಅನ್ಯಾಯ ಅನೀತಿ ಅಧರ್ಮ ಎಂದು ತಿಳಿದು ಅಂದೇ ತನ್ನ ಮಂತ್ರಿ ಪದವನ್ನು ತ್ಯಾಜ್ಯಮಾಡಿ ಐಶ್ವರ್ಯದಿಂದ ಮೆರೆಯುತ್ತಿರುವದನ್ನು ಹೀನಗಳೆದು ಕಲ್ಯಾಣವನ್ನು ಬಿಟ್ಟು ಹೊರಟನಂತೆ ಹೋಗುವಾಗ ಈ " ಕಲ್ಯಾಣವು ಕಟುಕರ ಕೇರಿಯಾಗಲೆಂದು " ಶ್ರಪಿಸಿದನಂತೆ ಅಂತೆಯೇ ಇಷ್ಟೊಂದು ಕಲ್ಯಾಣವು ಕಟುಕರಕೇರಿ ಯಾಗಿರ ಬಹುದೇನೋ ಎಂದು ಮನಕ್ಕೆ ಹೊಳೆಯುತ್ತಿದೆ.

ಎನೇ ಇರಲಿ ಸದ್ಯದ ಪರಿಸ್ಥಿತಿಯಲ್ಲಿ ಕಲ್ಯಾಣದೊಳಗೆ ಆವರಿಸಿದ ಅಂಧಕಾರವು ಬೈಲಾಗಿ ಬೆಳಕು ತೋರ ತೊಡಗಿದೆ.

# ಶ್ರೀ ಶಿವಾನುಭವ ಪಾಠ ಪ್ರವಚನ ಶಾಲೆಯ ಕಾರ್ಯ ಕಲಾಪಗಳ ವಿವರಣೆಯು

[ ಲೇಖಕರು:- ಶ್ರೀ ಈಶ್ವರಪ್ಪ ಶಿವಲಿಂಗಪ್ಪ ಉಮರಾಣಿ
ಬಿ. ಎ. ಸಬರಜಿಸ್ಟ್ರರ ಬೈಲಹೊಂಗಲ.]

೬—೧೦—೧೯೫೨ ರಿಂದ ೧೩—೧೧—೧೯೫೨ ರ ವರೆಗೆ ಶಿವಾನುಭವ ಕಾರ್ಯ ಕಲಾಪಗಳು ಬೈಲಹೊಂಗಲದಲ್ಲಿ ಸದ್ಭಕ್ತ ಶ್ರೀಮಾನ ಮೆಟಗುಡ್ಡ ಅಂಣಪ್ಪನವರ ಗಿರಣಿಯ ಭವ್ಯ ಅಟ್ಟದ ಮೇಲೆ ಮತ್ತು ಈ ಊರ ತಿಪ್ಪೆ ಮಠದಲ್ಲಿ ಒಳ್ಳೇ ವೈಭವದಿಂದ ಹುರು ಹುಮ್ಮಸಗಳಿಂದ ಸಾಂಗವಾದವು.

ಇಂದಿಗೆ ಸುಮಾರು ಎರಡು ತಿಂಗಳಹಿಂದೆ ಶ್ರೀ ಮ. ನಿ. ಪ್ರ. ಸ್ವ. ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ ಇವರು ತಮ್ಮ ಪರಿವಾರ ದೊಂದಿಗೆ ಕಡಕೋಳ ಗ್ರಾಮದ ಭಕ್ತಾದಿಗಳ ಬಿನ್ನಹವನ್ನು ಮಾನ್ಯ ಮಾಡಿ ಅಲ್ಲಿಗೆ ದಯಮಾಡಿಸಿದ್ದರು. ಆ ಕಾಲಕ್ಕೆ ನಮ್ಮ ಶ್ರೀ ಮೆಟಗುಡ್ಡ ಅಂಣಪ್ಪನವರು ಶ್ರೀ ಕಲ್ಲಪ್ಪ ಶೆಟ್ಟರು ಅಂಗಡಿ ಚಿನ್ನಪ್ಪನವರು ಮತ್ತು ಈಗಿನ ಲೇಖಕರು ಅವರ ದರ್ಶನಾಶೀರ್ವಾದಗಳನ್ನು ಈ ಮೊದಲೇ ಯೋಚಿಸಿದ ಶ್ರೀ ಶಿವಾನುಭವ ಪಾಠಕ್ರಮದ ಪ್ರಚಾರ ದ್ವಾರಾ ಅದರ ತಳಹದಿಯನ್ನು ಹಾಕಿ ಭದ್ರಪಡಿಸುವ ಕಾರ್ಯಕ್ರಮದ ರೂಪರೇಷೆಗಳು ಏನೆಂದರೆ—

ಮೊಟ್ಟಮೊದಲು ನಮ್ಮ ಹರಗುರು ಚರಮೂರ್ತಿಗಳು ಇಂಥ ಪಾಠಕ್ರಮದಲ್ಲಿ ವಿದ್ಯಾರ್ಥಿಗಳಾಗಿ ಭಾಗವಹಿಸಿ ಶಿವಾನುಭವದ ಸಿಜಮಾರ್ಗವನ್ನು ತಜ್ಞರಿಂದ ತಿಳಿದುಕೊಂಡು ಅನಂತ ತಮ್ಮ ಮಠ ಮಹಾಂತಗಳಲ್ಲಿ ಶಿವಾನುಭವ ಶಾಲೆಯನ್ನು ಪ್ರಾರಂಭಮಾಡಿ ಆರಂಭಕ್ಕೆ ಹತ್ತುಹತ್ತು ಜನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ರವಿವಾರಕ್ಕೊಮ್ಮೆ ಒಂದೊಂದು ತಾಸು ಇಬ್ಬರಿಗೂ ಪ್ರತ್ಯೇಕವಾಗಿ ಪಾಠಹೇಳಿ ಶಿವಾನುಭವದ ತಳಹದಿಯನ್ನೇ ಭದ್ರವಾಗಿ ಹಾಕಬೇಕು. ಆ ವಿದ್ಯಾರ್ಥಿಗಳು ಆ ಶಿವಾನುಭವ ಶಾಲೆಗೆ ಬರುವ ಮುಂದೆ ಸ್ನಾನಮಾಡಿ ಭಸ್ಮಧಾರಣ ಮಾಡಿಕೊಂಡು ಮಡಿ

ಅರಿವೆಗಳನ್ನು ಧರಿಸಿಕೊಂಡು ಒಳ್ಳೇ ಶುಚಿರ್ಭೂತರಾಗಿ ಅತ್ಯಂತ ಭಯ ಭಕ್ತಿಯಿಂದ ಬರಬೇಕು ಅವರು ಹಾಜರಿ ಇರಬೇಕು ಈ ಶಾಲೆಗಳಲ್ಲಿ ಬಿನ್ನಃ ಈ ಯುತ್ತೆ ಮೊದಲನೇ ಎರಡನೇ ಈ ಯತ್ತೆಗಳು ಈ ರೀತಿ ಕ್ಲಾಸುಗಳು ಇರಬೇಕು. ಆಯಾಯ ಕ್ಲಾಸಗಳಿಗೆ ಅನುರೂಪವಾದ ಪಠ್ಯ ಪುಸ್ತಕಗಳು ಚಿಕ್ಕಚಿಕ್ಕವಿದ್ದರೂ ಒಳ್ಳೇ ಚೊಕ್ಕಾದ ಮತ್ತು ಮನೋಹರವಾದ ಶೈಲಿಯಲ್ಲಿ ಬರೆಯಲ್ಪಡಬೇಕು ವರ್ಷಕ್ಕೊಂದಾವರ್ತಿ ಅಂಥ ವಿದ್ಯಾರ್ಥಿ, ವಿದ್ಯಾರ್ಥಿನೆಯರ ಪರೀಕ್ಷೆ ತಕ್ಕೊಂಡು ಪಾಸಾದವರಿಗೆ ಪ್ರಾಶಸ್ತಿ ಪತ್ರಗಳನ್ನು ಕೊಡುವದಾಗಬೇಕು.

ಈ ಶಿವಾನುಭವದ ತಳಹದಿಯನ್ನು ಭದ್ರಪಡಿಸುವದಕ್ಕಾಗಿ ತಮ್ಮ ತಮ್ಮ ಮಠ ಮಹಂತಗಳಲ್ಲಿ ಇಂಥ ಶಿವಾನುಭವ ಶಾಲೆಗಳನ್ನು ತೆರೆದು ಆತ್ಮೋದ್ಧಾರವನ್ನೂ ಮತ್ತು ಲೋಕೋದ್ಧಾರವನ್ನೂ ಮಾಡಿ ಕೃತಾರ್ಥರಾಗಬೇಕೆಂದು ಹಂಬಲಿಸುವ ಹರಗುರು ಚರಮೂರ್ತಿಗಳ ಒಂದು ಸಂಚಾರೀಪಥಕವು ಪ್ರತಿತಿಂಗಳಿಗೊಂದಾವರ್ತಿ ಗೊತ್ತಾದ ಓಂದೊಂದು ಮಠದಲ್ಲಿ ಕಲೆತು ಆ ಮಠಾಧೀಶ್ವರರು ತಮ್ಮ ಸ್ವಂತ ಖರ್ಚಿನಿಂದಲೆ ಏರ್ಪಡಿಸುವ ವ್ಯವಸ್ಥೆಯನ್ನು ಸ್ವೀಕರಿಸಿ ಅಲ್ಲಿ ನಡೆಯತಕ್ಕ ಶಿವಾನುಭವ ಪಾಠಕ್ರಮವನ್ನು ಮನನ ಮಾಡಿಕೊಂಡು ಮುಂದೆ ತಾವೇ ಪಾಠಕರಾಗಿ ಕಾರ್ಯಮಾಡಬೇಕು.

ಈ ಮಹತ್ಕಾರ್ಯ ಸಾಧನೆಗಾಗಿ ಹನ್ನೆರಡು ಮಠಗಳನ್ನು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಆರಿಸುವದು ನಡೆದಿದೆ ಈಗ ಸಧ್ಯಕ್ಕೆ ಅಂಥ ಏಳು ಮಠಗಳು ಗೊತ್ತಾಗಿವೆ. ಆ ಮಠಗಳ ಸ್ವಾಮಿಗಳು ತಾವೂ ಈ ಪಾಠಕ್ರಮವಲ್ಲಿ ವಿದ್ಯಾರ್ಥಿಯಾಗಿ ಭಾಗವಹಿಸಲು ಒಪ್ಪಿದ್ದಾರೆ.

ಈ ಪ್ರಕಾರ ಶ್ರೀ ಗಳವರು ಅಪ್ಪಣೆಕೊಡಿಸಿದರು ಆ ತರುವಾಯ "ಬುದ್ಧಿ" ದಿವ್ಯ ಸನ್ನಿಧಿಯು ಅಪ್ಪಣೆ ಕೊಡಿಸಿದ ಈ ಮಹತ್ ಕಾರ್ಯದ ವಿಚಾರವು ಈಗಿನಕಾಲದಲ್ಲಿ ಬಹಳ ಅವಶ್ಯವಿದೆ. ಮತ್ತು ಅದು ಅತಿ ಅವಶ್ಯವಾಗಿ ಕಾರ್ಯರೂಪಕ್ಕೆ ಬರಲೇ ಬೇಕಾಗಿದೆ. ಅದಕ್ಕೋಸ್ಕರ ಈ ಶಿವಾನುಭವ ಪಾಠಕ್ರಮವು ಮೊಟ್ಟಮೊದಲು ನಮ್ಮ ಬೈಲಹೊಂಗಲದಲ್ಲಿ ಪ್ರಾರಂಭವಾಗಬೇಕು. ಇದಕ್ಕಾಗಿ ಅವಧಿ ನೇಮಿಸಿ ಅಪ್ಪಣೆಯಾಗಬೇಕು ಎಂದು ವಿಜ್ಞಾಪಿಸಿಕೊಳ್ಳಲಾಯಿತು. ಅದಕ್ಕೆ ಶ್ರೀಗಳವರು ದಿನಾಂಕ

೬—೧೧—೧೯೫೩ ರಿಂದ ಒಂದು ವಾರದ ವರೆಗೆ ನಡೆಯಲು ಅಪ್ಪಣೆಯಿತ್ತರು ಅದನ್ನು ಶಿರಸಾವಹಿಸಿ ಬಂದು ಕಾರ್ಯಾರಂಭವಾಡಿತು.

ಆ ಪ್ರಕಾರ ಶ್ರೀ ಅರಭಾವಿ ಪುಣ್ಯಾರಣ್ಯ ಮಹಾತಪಸ್ವಿಗಳಾದ ಶ್ರೀ ಮ. ನಿ. ಪ್ರ. ಸ್ವ. ಶ್ರೀ ದುರದುಂಡೀಶ್ವರ ಮಹಾಸನ್ನಿಧಿಯ ನೇತೃತ್ವದಲ್ಲಿ ಶ್ರೀ ಮ. ನಿ. ಪ್ರ. ಸ್ವ. ಶ್ರೀ ಸರ್ಪಭೂಷಣ ಮಠಾಧ್ಯಕ್ಷರಾದ ಅಭಿನವ ಅಲ್ಲಮ' ರಾದ ಶ್ರೀ ಮಹಾದೇವ ಸ್ವಾಮಿಗಳು ಬೆಂಗಳೂರ ಇವರ ಪ್ರೇರಣೆಯ ಮೇರೆಗೆ ನಡೆದ ಈ ಕಾರ್ಯವು ಶ್ರೀ ಶಿವಯೋಗಿಯ ಅಗಾಧ ಲೀಲೆಯ ಒಂದು ದೃಶ್ಯವೆಂದೇ ಹೇಳಬೇಕಾಗಿದೆ..

ಯಾಕಂದರೆ ದಿನಾಂಕ ೬—೧೧—೧೯೫೩ ಗುರುವಾರದಿಂದ ಪ್ರಾರಂಭವಾಗಬೇಕೆಂದು ಗೊತ್ತಾದ ಈ ಕಾರ್ಯಕ್ಕೆ ನಿಯೋಜಿತರಾದ ಶ್ರೀಗಳರವರು ಮತ್ತು ಪಾಠಕ್ರಮದ ಪ್ರವಚಕರಾದ ಪಂಡಿತರು ಒಬ್ಬೊಬ್ಬರೇ ಬರುವ ದಾಗುವದಿಲ್ಲೆಂದು ಇದೇ ದಿನಾಂಕ ೪—೧೧—೫೩ರ ವರೆಗೆ ತಿಳಿಸಿದ ಪತ್ರ ಬಂದವು ಇದೆಲ್ಲವನ್ನೂ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರ ಸನ್ನಿಧಾನಕ್ಕೆ ತತ್ಕಾಲಕ್ಕೆ ಅಂಕಿತಮಾಡಿಕೊಳ್ಳುತ್ತಲೇ; ಇತ್ತ ಅವರವರ ಕಾರ್ಯ ಗೌರವದ ಮೂಲಕ ಬಾರದಿದ್ದರೂ ಶ್ರೀ ಶಿವಯೋಗೀಶ್ವರ ಪ್ರೇರಣೆಯಿಂದ ಸಂಕಲ್ಪ ಮಾಡಿದ ಈ ಕಾರ್ಯವು ಗೊತ್ತಾದ ಅವಧಿಗೆ ಸಾಗಲೇಬೇಕೆಂದು ಅಪ್ಪಣೆ ಕೊಡಿಸಿದರು. ನೋಡಿರಿ ಅಲ್ಲಿಯವರೆಗೆ ಹಬ್ಬಿದ ನಿರಾಶಾಜನಕ ವಾತಾವರಣದ ಕಾರ್ಮೋಡಗಳ ಮರುದಿನ ಅಂದರೆ ದಿನಾಂಕ ೫—೧೧—೫೩ರ ಬೆಳಗಿನಿಂದಲೇ ಒಂದೊಂದೇ ಬಯಲಾಗಿ ಬರಲಿಕ್ಕಾಗದೆಂದು ತಿಳಿಸಿದ ಮಹನೀಯರು ಒಬ್ಬೊಬ್ಬರೇ "ನಾವು ಹೊರಡುತ್ತೇವೆ ನಾವು ಬರುತ್ತೇವೆ" ಎಂದು ತಿಳಿಸಿದ ತಂತಿಗಳು ಬರತೊಡಗಿದವು. ನಿರಾಶೆಯು ನಿಟ್ಟುಸಿರು ನಿಂತು ಆಶಾದಾಯಕ ತಂಗಾಳಿಯು ಬೀಸಹತ್ತಿತು ಆನಂತರ ಈ ದಿವ್ಯ ಶಿವಾನುಭವ ಮಂಟಪವು ಅಂದಿನ ಪ್ರಮಥರ ಕಾಲದ ಅನುಭವ ಮಂಟಪದ ಪಡಿಯಚ್ಚಾಗಿದೆಂದು ಹೇಳಲು ಯಾವ ಅಭ್ಯಂತರವೂ ಕಾಣುವದಿಲ್ಲ.

ನಂತರ ಶ್ರೀ ಅರಭಾವಿ ಪುಣ್ಯಾರಣ್ಯ ಮಹಾತಪಸ್ವಿಗಳು ಬಳಿವಿಡಿದು ಶ್ರೀ 'ಅಭಿನವ ಅಲ್ಲಮ'ರಾದ ಶ್ರೀ ಬೆಂಗಳೂರ ಮಹಾದೇವ ಸ್ವಾಮಿಗಳು ಅವರೊಂದಿಗೆ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು

ಧಾರವಾಡ ಇವರ ಬಳಿ ಶ್ರೀ ನಂದಿವೇರಿ ಶಂಕರ ಸ್ವಾಮಿಗಳು ಇದಲ್ಲದೆ ವಚನವಾಙ್ಮಯ ವಿಶಾರದರಾದ ಶ್ರೀಮಾನ ಚೆನಮಲ್ಲಪ್ಪ ಮೇಸ್ತ್ರಿ ಶಿಳಾಳಕೊಪ್ಪ ಮೈಸೂರ ಇವರು ನಮ್ಮೆಲ್ಲರನ್ನು ತಣಿಸಿದ್ದಾರೆ ಇದು ಅನುಭವಗಮ್ಯವಾದ ವಿಷಯವು ಇರಲಿ.

ನಮ್ಮೀ ಕಾರ್ಯಕ್ರಮವು ಇಂಥ ಸಂಭ್ರಮದ ಸಂಕಟಪದದಲ್ಲಿ ಶ್ರೀ ಪಂಡಿತ ನಾಗಭೂಷಣ ಶಾಸ್ತ್ರಿಗಳು ಗದಗ ಇವರ ಶೂನ್ಯಸಂಪಾದನೆಯುಲ್ಲಿಯ ಶ್ರೀ ಶಿದ್ರಾಮ ಶಿವಯೋಗಿಯ ಸಂಪಾದನೆಯ ಪ್ರವಚನದಿಂದ ಪ್ರಾರಂಭವಾಯಿತು. ಅಜ್ಞ ಗುಡ್ಡರಿಗೆ ಹಿರಿಬಡ್ಡನಾದ ಶಿದ್ರಾಮೇಶ್ವರರ ಬಳಿಗೆ ಶ್ರೀ ಪ್ರಭುವು ದಯಮಾಡಿಸಿ ಲಿಂಗಧಾರಣೆಯ ಮಹತಿಯನ್ನು ಚನ್ನಾಗಿ ಅರುಹಿ ಅಲ್ಲಿಂದಾ ಕಲ್ಯಾಣಕ್ಕೆ ಅವನೊಡನೆ ಬಂದು ಆ ಯೋಗಿಗೆ ಅಲ್ಲಿ ಯಥಾರೀತಿ ಲಿಂಗಧಾರಣೆಯನ್ನು ಮಾಡಿಸಿದ ವಿಷಯವನ್ನು ತಮ್ಮ ಸುಂದರವಾದ ಸುಲಲಿತ ಶೈಲಿಯಿಂದ ೩-೪ ದಿವಸ ನಮ್ಮಗಳಿಗೆಲ್ಲಾ ಶ್ರವಣಮಾಡಿಸಿ ಗದಗಿಗೆ ಹೋದ ಬಳಿಕ ಆ ವಿಷಯವನ್ನೇ ನಮ್ಮೀ ಪಂಡಿತ ಶ್ರೀ ಬಸವಲಿಂಗ ಶಾಸ್ತ್ರಿಗಳು ಗುಡಗೇರಿ ಇವರು ಮುಂದುವರಿಸಿ ಈ ಸಂಪಾದನೆಯನ್ನು ಇಂದು ಮಂಗಲಗೊಳಿಸಿದ್ದಾರೆ.

ಇನ್ನು ನಮ್ಮೀ ಅಭಿನವ ಅಲ್ಲಮರಾದ ಶ್ರೀ ಮಹಾದೇವ ಸ್ವಾಮಿಗಳವರು ತಮ್ಮ ಅಧ್ಯಕ್ಷ ಪೀಠದಿಂದ ನಿತ್ಯನಿತ್ಯದಲ್ಲಿ ಅಪ್ಪಣೆ ಕೊಡಿಸಿದ್ದೇನಂದರೆ:—

ಈ ಶರೀರವು ಮಿಥ್ಯ ಈ ಪ್ರಪಂಚವು ಮಿಥ್ಯವಲ್ಲ ಇವನ್ನು ಯಾರೂ ಹೇಯವೆಂದ ತ್ಯಜಿಸತಕ್ಕದ್ದಲ್ಲ ನಮ್ಮ ಶರಣರು ಮತ್ತು ಬಸವಾದಿ ಪ್ರಮಥರು ಶೂನ್ಯಸಂಪಾದನೆಯಲ್ಲಿರುವ ಅಂದರೆ ಪರಿಪೂರ್ಣವಾಗಿರುವ ಪರವಸ್ತು ಆ ಲಿಂಗತತ್ವ ನಿಮ್ಮದಾಗಿ ಆ ತತ್ವ ಸಾಧನೆಗಾಗಿ ಎಲ್ಲ ಪ್ರಪಂಚವನ್ನು ಪ್ರಸಾದ ರೂಪವಾಗಿ ಮಾರ್ಪಡಿಸಿಕೊಂಡು ನಮಗೊಂದು ದಿವ್ಯ ಶಿವಾನುಭವವೆಂಬ ಬೆಳಕನ್ನು ಬೀರಿದ್ದಾರೆ. ಅದರ ಪ್ರಕಾಶದಲ್ಲಿ ನಾವು ಧೃಢನಂಬುಗೆಯಿಂದ ಸಾಗಿ ಜೀವನ ಸಾಫಲ್ಯವನ್ನು ಹೊಂದಬೇಕು.

ಶ್ರೀ ಬಸವಾದಿಪ್ರಮಥರು ಜಗತ್ಕಲ್ಯಾಣಕ್ಕಾಗಿ ಒದಗಿಸಿಕೊಟ್ಟಂಥ ಮಾನವ ಧರ್ಮವನ್ನು ಅವರ ವಚನ ಸಾಹಿತ್ಯದಲ್ಲಿ ಬಹಳ ನಿಚ್ಚಳವಾಗಿ ಕಾಣುತ್ತೇವೆ; ಸತ್ಯ, ಅಹಿಂಸೆ, ದಯಾ, ಪ್ರೇಮ ಕಾಯಕ-ನಿಷ್ಠೆ

ಇವೇ ಮುಂತಾದ ಪೂರ್ವಜರ ಭಾರತ ಸಂಸ್ಕೃತಿಯನ್ನೇ ಕಾಯ್ದು ಕೊಂಡು ಬಂದದ್ದು ಸ್ಪಷ್ಟ ತೋರುತ್ತಿದೆ. ಶರಣಸಾಹಿತ್ಯದಲ್ಲಿಡಗಿದ ಮಾನವಧರ್ಮವು ಬೆಳಕಿಗೆ ಬರುವ ಮುನ್ನಿದ್ದ ಹಿಂದಿನ ಹಿಂದೂ ಧರ್ಮ ಗ್ರಂಥಗಳೆಂದು ಬರೆಯಲ್ಪಟ್ಟವುಗಳು ರಾಶಿರಾಶಿಯಾಗಿ ದೊರೆಯುತ್ತಿವೆ; ಒಳ್ಳೇ ಮಹತ್ವದ್ದವೆಂದು ಹೇಳಲ್ಪಡುವ ಕೆಲವು ಗ್ರಂಥಗಳನ್ನು ಪರಿಶೀಲಿಸಿದಾಗ್ಯೂ, ಪರಿಪೂರ್ಣ ಮಾನವ ಧರ್ಮದ ತಿರುಳು ದೊರೆಯುವದು ಅತಿ ದುರ್ಲಭವು; ಧರ್ಮದ ಹೆಸರಿನಲ್ಲಿ ಅನ್ಯಾಯ ಪರಂಪರೆಯು ಆಗುತ್ತ ಬಂದದ್ದನ್ನು ನೋಡಬಹುದು ಸ್ವರ್ಗ-ನರಕಗಳು, ಪಾಪ-ಪುಣ್ಯಗಳು, ಕೀಳು-ಮೇಲುಗಳು, ನೀತಿ-ಅನೀತಿಗಳು, ಹಿಂಸೆ-ಅಹಿಂಸೆಗಳು, ಪಾತಕ-ಸೂತಕಗಳು,–ಇವುಗಳ ಸ್ಪಷ್ಟ ಕಲ್ಪನೆಯನ್ನು ಮತ್ತು ಇವುಗಳ ಯಥಾರ್ಥ ಭಾವಗಳನ್ನು ಜನಸಾಮಾನ್ಯರ ಮುಂದೆ ಅಚ್ಚ ತಿಳಿಗನ್ನಡದಲ್ಲಿ ಎಲ್ಲರೂ ಇಟ್ಟರು. ದೇವನೊಬ್ಬನೇ ಎಂಬ ಸತ್ಯವನ್ನು ಬಯಲಿಗೆಳೆದರು ನಡೆ-ನುಡಿಗಳ ಸಮ್ಮಿಲನದ ಸವಿಯನ್ನು ಮಾನವ ಸಮಾಜಕ್ಕೆ ನೀಡಿದರು. ಸ್ತ್ರೀ ಕುಲಕ್ಕೆ ಸಮಾಜದಲ್ಲಿ ಒಂದು ಉನ್ನತ ಸ್ಥಾನವನ್ನು ಕಲ್ಪಿಸಿಕೊಟ್ಟರು. ಆತ್ಮೋದ್ಧಾರವು ಸಕಲರ ಸೊತ್ತು. ಅದನ್ನು ಎಲ್ಲರೂ ಸಾಧಿಸಬಲ್ಲರೆಂದು ಘಂಟಾಘೋಷವಾಗಿ ಸಾರಿದರು. ಜೀವನು ದೇವನಾಗುವ ಸ್ವತಂತ್ರ ಹಕ್ಕು ಪ್ರತಿಯೊಬ್ಬನಿಗೂ ಉಂಟೆಂದು ಧಾರಾಳವಾಗಿ ಹೇಳಿದರು. ಇವರ ಲಿಂಗ-ದೇವ ತತ್ವಗಳು ತ್ರಿಕಾಲಬಾಧಿತವಾಗಿ ಅಚ್ಚಳಿಯದೆ ಬೆಳಗುತ್ತಲಿವೆ. ಆದ್ದರಿಂದ ಬರೀ ಬಾಯಿ-ಬ್ರಹ್ಮೋಪದೇಶಕರ ಹುರುಳಿಲ್ಲದ ಮಾತಿಗೆ ಬಲಿಬೀಳದೇ, ಅಂತರಂಗ ಬಹಿರಂಗ ಈ ಉಭಯ ಶುದ್ಧಿಗಳನ್ನು ಕಾಯ್ದು ಕೊಂಡು ಆತ್ಮೋದ್ಧಾರವನ್ನು ಕಂಡುಕೊಳ್ಳಿರಿ. ಇದೇ ಶರಣವಾಣಿಯು, ಇದುವೇ ಅಮರವಾಣಿಯು. ಈ ರೀತಿ ಶ್ರೀಗಳವರು ತಮ್ಮ ಅನುಭಾವ ಮತ್ತು ಅಧಿಕಾರವಾಣಿಯಿಂದ ಅಪ್ಪಣೆಕೊಡಿಸಿದರು.

ಇದಲ್ಲದೆ, ಬೆಳಗಾಂವಿಯ ಶ್ರೀ ತ್ಯಾಗವೀರ ಲಿಂಗರಾಜ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀಮಾನ್ ಡಿ. ಎಸ್. ಕರ್ಕಿಯವರು ತಮ್ಮದೇ ಆದ ಒಂದು ಸುಂದರವಾದ ಶೈಲಿಯಲ್ಲಿ ಲಿಂಗಾಂಗಸಾಮರಸ್ಯ ತತ್ವದ ನಿರೂಪಣೆಯನ್ನು ಒಳ್ಳೇ ಮಾರ್ಮಿಕವಾಗಿ-ಮಾಡಿದರು. ಮಾನವನ ಸರ್ವತೋಮುಖದ ವಿಕಾಸತೆಗೆ ಮುಖ್ಯವಾಗಿ (೧) ಜೀವನಾವಶ್ಯಕತೆಗಳು, (೨) ಸೌಂದರ್ಯತೆ, ತದ್ವಾರಾ (೩) ಆಧ್ಯಾತ್ಮಿಕತೆ, ಇವು ಬೇಕೇಬೇಕು. ಇವು

ಗಳಲ್ಲಿಯು ಒಂದನ್ನೊಂದರ ಸಹಜ ಸಾಮರಸ್ಯವೇ ಲಿಂಗಾಂಗಸಾಮರಸ್ಯದ ತಿರುಳು ಇರಬಹುದೇನೋ ಎಂದೂ, ಮತ್ತು ತಾವು ಇನ್ನೂ ಈ ವಿಷಯದಲ್ಲಿ ಸಂದೇಹಿಗಳೆಂದೂ ಹೇಳಿ, ತಮ್ಮ ಸೌಜನ್ಯಯುಕ್ತ ಸ್ವಾನುಭಾವವನ್ನು ಸಾದರಪಡಿಸಿದರು.

ಇದಲ್ಲದೇ, ನಮ್ಮೀ ಶ್ರೀ ಶಂಕರಸ್ವಾಮಿಗಳು ನಂದಿವೇರಿಮಠ ಇವರು ತಮ್ಮ ಅಸ್ಖಲಿತ ಪ್ರಸಾದವಾಣಿಯಿಂದ ಹಿಂದಿನ ಶರಣರ ವಚನಾಮೃತದ ಸುರಿಮಳೆಯನ್ನೇ ನಮ್ಮ ಹೃದಯ-ಭೂಮಿಗೆ ಸುರಿಸಿ, ಲಿಂಗಾಂಗಸಾಮರಸ್ಯಕ್ಕೆ ತಳಹದಿಯಾಗಿ ಬೇಕಾಗುವ ಶಿವಾನುಭವ-ಭಕ್ತಿ ಬೀಜವನ್ನು ಅಂಕುರಿಸಿದ್ದಾರೆ.

ಇದಲ್ಲದೇ, ನಮ್ಮೀ ಶ್ರೀಮಾನ್ ಚೆನಮಲ್ಲಪ್ಪ ಮೇಸ್ತ್ರಿ ಇವರು ದಿವ್ಯಜ್ಞಾನದ ಮುದ್ದಿಯಂತೆ ಇದ್ದು, ಆ ಮುದ್ದಿಯೊಡನೆ ತಮ್ಮ ಅನುಭವಾಮೃತವನ್ನು ಬೆರಸಿ, ತಮ್ಮದೇ ಆದ ಒಂದು ಸುಲಿದ ಬಾಳೇಹಣ್ಣಿನ ಮಧುರ ಶೈಲಿಯಲ್ಲಿ, ಎಲ್ಲರ ಮನೋಭಾವಗಳಲ್ಲಿ ಮೂಡಿ, ಪ್ರವಚನ ಮಾಡಿದರು. ಬಹಳ ಕ್ಲಿಷ್ಟವಾದ ತತ್ವ ವಿಷಯಗಳನ್ನು-ಅಂದರೆ ಲಿಂಗತತ್ವ, ಲಿಂಗಾಂಗಸಾಮರಸ್ಯತತ್ವ ಮತ್ತು ಸ್ವ-ಸ್ವರೂಪಜ್ಞಾನತತ್ವ ಇವೇ ಮೊದಲಾದ ವಿಷಯಗಳನ್ನು ಒಂದೊಂದೇ ತೆಗೆದುಕೊಂಡು ಚಂದಾಗಿ, ಅಂದಾಗಿ, ನಿರೂಪಿಸಿದ್ದಾರೆ —

ನೋಡಿರಿ, ನಮ್ಮ ಪೂರ್ವಜರು ಒಂದು ಅಣುವಿನಕ್ಕಿಂತಲೂ ಅಣುವಾಗಿಯೂ ಘನಕ್ಕಿಂತಲೂ ಘನವಾಗಿಯೂ ಪರಮಾತ್ಮನು ಇದ್ದಾನೆಂದೂ, ಮತ್ತು ಅವನು ಸರ್ವಾಂತರ್ಯಾಮಿ, ಅವಿನಾಶಿ ಇದ್ದಾನೆಂದೂ ಮನಗಂಡರು. ಅಣುವಿನಕ್ಕಿಂತಲೂ ಅಣುವಾದ ಪರಮಾಣುವನ್ನೇ ತಮ್ಮ ಅಳೆಗೋಲನ್ನಾಗಿ ಇಟ್ಟುಕೊಂಡು, ಅಲ್ಲಿಂದ ಹೊರಟು, "ಸರ್ವಂ ಖಲ್ವಿದಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ'' ಸೋಹಂ ॥ ಇವಕ್ಕೂ ಮುಂದೆ ಹೋಗಿ, ಅತಿ ಸೂಕ್ಷ್ಮವಾದ ಶಿವತತ್ವವನ್ನು ಸಿದ್ಧಮಾಡಿದ್ದಾರೆ. ಈ ನಿರಾಕಾರ "ಶಿವೋಹಂ" ತತ್ವಾನುಸಂಧಾನಕ್ಕೆ ಅವಶ್ಯವಾದ ಮತ್ತು ಅನುರೂಪವಾದ ಒಂದು ಸಾಧನೆಯು ಬೇಕೆಂದು ಆಲೋಚಿಸಿ, ಅವರ ಆ ಆಲೋಚನೆಯು ಪ್ರತಿಫಲವೇ, ಈಗ ನಮ್ಮ ಹಸ್ತದಲ್ಲಿ ಪೂಜೆಗೊಳ್ಳುವ ಇಷ್ಟಲಿಂಗವಾಗಿ ಪರಿಣಮಿಸಿವೆ. ಶಿವಮಯವಾದ ಈ ವಿಶ್ವ, ಈ ಭೂಮಿ, ಈ

ಸೂರ್ಯ ಚಂದ್ರರು, ಇವರೆಲ್ಲರೂ ಗೋಳಕಾರಾರವಿದ್ದು, ಮತ್ತು ಇಂಥ ಘನಕ್ಕೆ ಘನವಾದ ಶಿವತತ್ವವನ್ನು ಹೊಂದುವ ಕುರಿತು, ಅವುಗಳ ಪ್ರತೀಕವಾಗಿಯೇ ಈ ನಮ್ಮ ಇಷ್ಟಲಿಂಗದಾಕಾರವನ್ನು ಗೋಳಾಕಾರವಾಗಿ ಇಟ್ಟಿದ್ದಾನೆ. "ಅತ್ಯಾತಿಷ್ಟದ ಶಾಂಗುಲ'' ರಾದ ನೀವು. ಎನ್ನ ಕರಸ್ಥಲಕ್ಕೆ ಬಿಂದು ಚುಳುಕಾದಿರಯ್ಯ'' ಎಂದು ಹಾಡಿದ ಶರಣರ ವಾಣಿಯು ಇದನ್ನೇ ಪ್ರತಿಬಿಂಬಿಸುತ್ತಿದೆ.

ಈ ನಮ್ಮ ಇಷ್ಟಲಿಂಗವು ಬರೇ ಶಿಲೆಯಾಗಿರದೇ, ನಮ್ಮೊಳಗೇ ಇದ್ದ ಪಶ್ಚಿಮ ಚಕ್ರದಲ್ಲಿರುವ ಚಿತ್‌ಕಲೆಯನ್ನೇ ಶ್ರೀಗುರು ತನ್ನ ಹಸ್ತ-ಮಸ್ತಕ ಸಂಯೋಗದಿಂದ ಭಾವಕ್ಕೆ ತಂದು, ಭಾವದಿಂದ ಕರಸ್ಥಲಕ್ಕೆ ತಂದು ಸಯಪಾಲಿಸಿದ್ದಾನೆ.

ಈಗಿನ ವಿಜ್ಞಾನಿಗಳು, ನಮ್ಮ ದೃಷ್ಟಿಯು ಒಂದೇ ಕಡೆಗೆ ನೆಲೆನಿಂತು ಧೃಡಪಡುವದಕ್ಕೆ ಹೊಳಪುಳ್ಳ ನೀಲ-ಕರೇ ಬಣ್ಣದ ಒಂದು ವಸ್ತು ನಮ್ಮ ದೃಷ್ಟಿಗೆ ಎದುರಾಗಿ ಇರಬೇಕೆಂದು ಕಂಡುಹಿಡಿದ ಸತ್ಯತೆಯನ್ನು ನಮ್ಮ ಪೂರ್ವಜರು ಎಂದೋ ಕಂಡುಹಿಡಿದು, ಅದರ ಫಲವಾಗಿ ನಮ್ಮ ಇಷ್ಟಲಿಂಗಕ್ಕೆ ಅಂಥ ಬಣ್ಣದ ಕಂಥಿಯನ್ನು ಹೊದಿಸಿದ್ದಾರೆ. ನಮ್ಮ ಕಣ್ಣಿನ ಕರೇಗುಡ್ಡಿಯ ಮಧ್ಯದಲ್ಲಿ ಒಂದು ಚಿಕ್ಕದಾಗಿ ದುಂಡಾಗಿ ಇರುವ ಬಿಂದುವಿನ ಬಣ್ಣವೇ ನಮ್ಮ ಈ ಲಿಂಗಯ್ಯನ ಬಣ್ಣವಾಗಿದೆಂಬುವದನ್ನು ಲಕ್ಷಿಸಬೇಕು ಆ ನಮ್ಮ ಪಶ್ಚಿಮ ಚಕ್ರದಲ್ಲಿ ಜಂಗಮತತ್ವವಿರುವದರಿಂದ ಅದನ್ನೇ ಶ್ರೀಗುರು ನಮ್ಮ ಕರಕಮಲಕ್ಕೆ ಕರುಣಿಸಿದ್ದು ಅದನ್ನು ಪೂಜಿಸುವದೆಂದರೆ ನಾವು ಜಂಗಮವೇ ಎಂಬ ತತ್ವವು ಅದನ್ನೇ ಧೃಢಪಡಿಸುತ್ತಿದೆ.

ಒಂದೇ ನಿರಾಕಾರ ವಸ್ತುವು ಮೂರು ಭಾಗಗಳಾಗಿ ಗುರು ಲಿಂಗ ಜಂಗಮ, ವಾಗಿ ಪರಿಣಮಿಸಿ, ಪ್ರತಿ ಒಂದರಲ್ಲಿಯೂ ಮೂರನ್ನೂ ಕಂಡು ಜಂಗಮತತ್ವವುಳ್ಳ ಆ ನಮ್ಮ ಪಶ್ಚಿಮಚಕ್ರದಲ್ಲಿರುವ ಚಿತ್‌ಶಕ್ತಿಯು ಅಥವಾ ಆ ದಿವ್ಯ ಮಹಾಬೆಳಕು ಅಲ್ಲಿಂದಾ ಹೊರಟು ನಮ್ಮ ಕಣ್ಣುಗಳ ವರೆಗೆ ಬಂದು ಎರಡು ನರಗಳದ್ವಾರಾ ನಮ್ಮ ಕಣ್ಣಿಗೆ ಬಂದು ಆ ಕಣ್ಣುಗಳಿಂದ ಹೊರಹೊರಟು ನಮ್ಮ ಕರಸ್ಥಲದಲ್ಲಿದ್ದ ಲಿಂಗಯ್ಯನನ್ನು ಮುಟ್ಟಿ ಅಲ್ಲಿಂದಾ ಅದು (ಆ ಬೆಳಕು) ಪ್ರತಿಸ್ಫುರಣವಾಗಿ ನಮ್ಮ ಕಣ್ಣಿಗೆ ಹೊರಳಬಂದು ಕಣ್ಣಿನಿಂದಾ ಶಿಖಾಚಕ್ರದಾಟಿ, ಪಶ್ಚಿಮ ಚಕ್ರಮುಟ್ಟಿ

ಮಹಾಬೆಳಕಾಗಿ ಪರಿಣಮಿಸುವದು. ಇದೇ ನಾವು ಲಿಂಗಸಂತರು ನಿತ್ಯ ದಲ್ಲಿ ಇಷ್ಟಲಿಂಗ ಪೂಜೆಯಲ್ಲಿ ಅನುಭವಿಸಿ ಆನಂದದಿಂದಿರುವ ಸ್ವಸ್ವರೂಪ ಜ್ಞಾನವು.

ಇನ್ನು ನಮ್ಮ ಶರಣರು " ಲಿಂಗಾಂಗಸಾಮರಸ್ಯ " ವನ್ನು ವಿವರಿಸು ವಾಗ್ಗೆ ಬಳಸಿದ ಅಂಗ ಪದದ ಸಾಧಣ ಅರ್ಥವು– " ಅಂ ಗಚ್ಛತಿ ಇತಿ ಅಂಗಃ " ಅಂದರೆ-- ದೂರ ಹೋಗುವದೇ ಅಂಗವು; ಪರ ಅಂದರೆ; ಲಿಂಗದೆಡೆಗೆ ಅಂತಲೇ ಹೇಳಬೇಕ.. ಈ ಅಂಗವು ಸ್ಥೂಲಾಂಗ, ಸೂಕ್ಷ್ಮಾಂಗ ಕಾರಣಾಂಗ ಎಂದು ಮೂರು ತೆರನಾಗಿದ್ದು, ಇಷ್ಟ, ಪ್ರಾಣ ಭಾವ ಲಿಂಗಗಳನ್ನು ಕ್ರಮವಾಗಿ ಅವುಗಳಲ್ಲಿ ಸಂಭಂಧಿಸಿ ಪೂಜಿಸಿ ಅವುಗಳಲ್ಲಿ ತನ್ನನ್ನು ಬೆರಿಸಿ ಆನಂದಿಸುವದೇ ಲಿಂಗಾಂಗ ಸಾಮರಸ್ಯದ ರಹಸ್ಯವೆಂದು ಹೇಳಿದ್ದಾರೆ. ಪ್ರಾಣ, ಭಾವ ಈ ಎರಡೇ ಲಿಂಗಗಳ ಅನುಸಂಧಾನವು ಇಷ್ಟಲಿಂಗವಿಲ್ಲದೇ ಪರಿಪೂರ್ಣವಾಗಲಾರದು ಮತ್ತು ಸಾಧಿಸಲಾಗದೆಂದು ಕಂಡು, ಮತ್ತು ಪ್ರಾಣ-ಭಾವ ಇವರಷ್ಟೇ ಲಿಂಗಮಯವಾಗಿ ಉಳಿದು ಅಂದರೆ ಅಂತರಂಗದಲ್ಲಿರುವ ಸೂಕ್ಷ್ಮಾಂಗ-ಕಾರಣಾಂಗಗಳು ಇವೆರಡೇ ಲಿಂಗಮಯವಾಗಿ ಇದ್ದು, ಬಾಹ್ಯಶರೀರವು ಅಂದರೆ ಸ್ಥೂಲಾಂಗವು ಲಿಂಗಬಿಟ್ಟು ಇದ್ದರೆ ಸಮರಸವು ಅಸಾಧ್ಯ ಮತ್ತು ಅವಶ್ಯವೆಂದೇ ಕಂಡು ಈ ಇಷ್ಟಲಿಂಗವನ್ನು ದೇಹದ ಮೇಲೆ ಧರಿಸಲೇಬೇಕೆಂದು ಸ್ಪಷ್ಟವಾಗಿ ನಿರೂಪಿಸಿದರು.

ಇನ್ನು ಈ ಮೊದಲೇ ಹೇಳಿದ್ದಂತೆ ನಮ್ಮ ಈ ಲಿಂಗತತ್ವವು ಅನಿ ನಾಳ ಮತ್ತು ಚೈತನ್ಯಮಯವಾದ ಮತ್ತು ಪಿಂಡಾಂಡ–ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿಲಯಗಳಿಗೆ ಮೂಲಕಾರಣನಾದ ಪರವಸ್ತುವಿನ ಇರುವಿನ ಬಗೆ ಯನ್ನು ತೋರುವ ಪರಮಾಣಿ ( ಅ್ಯಟಂ ) ತತ್ವವನ್ನೊಳಕೊಂಡ ಈ ಲಿಂಗತತ್ವವು ವಿಶ್ವತತ್ವವಾಗಿ ಬೆಳಗಲು ಯಾವಅಭ್ಯಂತರವೂ ಇಲ್ಲವೆಂದು ಒಳ್ಳೇ ಸ್ಪಷ್ಟವಾಗಿ ಹೇಳಿದರು ಇಂಥ ಲಿಂಗತತ್ವವು ಒಂದು ಶ್ರೇಷ್ಠ ಮತ್ತು ಸುಲಭ ವೃತವಾಗಿ ಪರಿಣಮಿಸಿ ಅದರ ಅನುಸಂಧಾನ ಮಾಡುವ ನಮಗೆ ಜಾತಿ ಮತ ಪಂಥಗಳೆಂಬ ಸಂಕುಚಿತ ದೃಷ್ಟಿ ಸರ್ವಥಾ ಬರಲಾ ರದು. ಈ ಲಿಂಗತತ್ವಕ್ಕೆ ಮನವಲಿದು ಒಪ್ಪಿ, ಯಾರ ಬೇಕಾದವರು ಈ ವೃತವನ್ನು ಪಾಲಿಸಲು ಮುಕ್ತದ್ವಾರ ವಿರುವದರಿಂದಲೇ ಇದಕ್ಕೆ ವಿಶ್ವ ಧರ್ಮವೆಂದೂ ಅಥವಾ ಜ್ಯಾತ್ಯಾತೀತ ಧರ್ಮವೆಂದೂ ಕರೆಯುಲಿ ತಪ್ಪಾಗ ಲಾರದೆಂದೇ ಹೇಳಿದರು.

ಇನ್ನು ನಮ್ಮ ಲಿಂಗಪೂಜಾ ವಿಧಾನವನ್ನು ಸಂಕ್ಷಿಪ್ತರೀತಿಯಲ್ಲಿ ವಿವರಿಸುತ್ತ ಅಷ್ಟಾವರಣಗಳ ಅವಶ್ಯಕತೆಯನ್ನು ಸ್ಪಷ್ಟಗೊಳಿಸಿದರು ಮತ್ತು ಒಂದೆರಡು ಆವರಣಗಳ ಬಗ್ಗೆ ಸ್ವಲ್ಪದರಲ್ಲಿಯೇ ಈ ರೀತಿ ತಿಳಿಸಿದರು ಏನಂದರೆ—

ಮೂರು ಬೆರಳು ವಿಭೂತಿಯನ್ನು ಹಣೆಯಮೇಲೆ ನಾವು ಯಾಕೆ ಧರಿಸಬೇಕೆಂದು-ತಾವು ಪಾಪ ಇಂದ್ರಿಯಗಳನ್ನು ಮಲತ್ರಯಗಳನ್ನು ನಾಶಗೊಳಿಸಿಕೊಂಡು ಶಿವಯೋಗ ಸಾಧನೆಗೆ ಬೇಕಾದ ಅಂತರಂಗ ಪವಿತ್ರತೆಗಳನ್ನು ಹೊಂದಿರುವ ಮಟ್ಟನ್ನು ನಾವು ಮುಟ್ಟಿದ್ದನ್ನು ಸೂಚಿಸುವ ಒಂದು ಸಂಕೇತವಾಗಿ ನಾವು ಭಸ್ಮ ಧರಿಸಲೇ ಬೇಕೆಂದು ತಿಳಿಸಿದರು.

ಇನ್ನು ಮಂತ್ರದ ಬಗ್ಗೆ ಮಾತನಾಡುತ್ತ ವೀರಶೈವರಿಗೆ ಬೇಕಾದದ್ದು ಶಿವಪಂಚಾಕ್ಷರಿ ಮಂತ್ರಲ್ಲ. ಅದು ಶಿವಷಡಕ್ಷರಿ ಮಂತ್ರವೇ ಸರಿ ಯಾವ ಮಂತ್ರವಿದ್ದು ಅದನ್ನೇ ಎಲ್ಲರೂ ಶ್ರೀ ಗುರು ಮುಖದಿಂದ ಪಡೆದು ಬಳಸಿ ಸಿದ್ಧಿ ಪತಕ್ಕದೆಂದು ಸ್ಪಷ್ಟವಾಗಿ ತಿಳಿಸಿದರು. ಶಿವಾಯನಮಃ ಅಂದರೆ ಶಿವನಿಗೆ ನಮಸ್ಕಾರ ಎಂದು ಯಾರಬೇಕಾದವರು ಹೇಳಿಕೊಳ್ಳಬಹುದು ಆದರೆ ಆ ಷಡಕ್ಷರಿ ಮಂತ್ರವು " ನಮಃ ಶಿವಾಯ ಅ-ಉ-ಮ "ಅಂತವಿದ್ದು ' ನಮಃ ' ಎಂಬ ಪದಕ್ಕೆ ಅಂಗವೆಂತಲೂ, ' ಶಿವ ' ಎಂಬ ಪದಕ್ಕೆ ಲಿಂಗವೆಂತಲೂ, ' ಆಯ ' ಎಂಬ ಪದಕ್ಕೆ ಅವೆರಡೂ ಕೂಡಿ ಹೊಂದಲಿ ಎಂತಲೂ, ಅ-ಉ-ಮ ಎಂಬುದು ಅನಿರ್ವಾಚ್ಯ ಪರವಸ್ತುವೆಂತಲೂ ಹೀಗೆ ಒಳ್ಳೇ ಮಾರ್ಮಿಕವಾಗಿ ಮತ್ತು ತಾತ್ವಿಕವಾಗಿ, ಈ ಷಡಕ್ಷರಿ ಮಂತ್ರದ ವಿವರಣೆಯನ್ನು ಕೊಟ್ಟರು.

ಇನ್ನು ಗುರು, ಲಿಂಗ, ಜಂಗಮ, ರಿಗೆ ಅನುಕ್ರಮವಾಗಿ ತನು, ಮನ, ಧನ ಇವುಗಳನ್ನು ಅರ್ಪಿಸಬೇಕೆಂದು ಇದೆ. ಆದರೆ ಇದರಲ್ಲಿ ಜಂಗಮಕ್ಕೆ ಧನ ಅರ್ಪಿಸಬೇಕು ಅಂದಲ್ಲಿ ಧನ ಅಂದರೆ ಯಾವ ಧನ? ಧನ ಅಂದರೆ ಏನು? ಇಲ್ಲಿ ಧನ ಅಂದರೆ ಪ್ರಾಣ ಎಂದು ಒಳ್ಳೇ ಸೂಕ್ಷ್ಮವಾದ ತಾತ್ವಿಕ ಅರ್ಥವನ್ನು ಹೇಳಿದರು.

ಹಾಗೇ ಇಷ್ಟು ದಿನಗಳವರೆಗೆ ಇಲ್ಲಿ ಸಾಗಿದ ಶೂನ್ಯಸಂಪಾದನೆಯ ಪ್ರವಚನದತ್ತ ಹೊರಳಿ ' ಶೂನ್ಯ ' ಈ ಪದಕ್ಕೆ ' ಅಕ್ಷರ ' ಎಂಬ ಪದವನ್ನು ಕೆಲವಡೆಯಲ್ಲಿ ಉಪಯೋಗಸಿದ್ದು ಕಂಡು ಬರುತ್ತಿದೆಂದು ತಿಳಿಸಿ ಈ ' ಅಕ್ಷರ ' ಎಂದರೆ- ನಾಶರಹಿತವಾದದ್ದು ಯಾವುದೋ ಅದೇ ಈ

ನಮ್ಮ ಪಶ್ಚಿಮ ಚಕ್ರದಲ್ಲಿ ಬೆಳಗುವ ಮಹಾಬೆಳಕು ಚಿತ್ರಕಲೆ, ಅದೇ ಅನಿರ್ವಾಚ್ಯ ನಿರಾಕಾರ ಪರವಸ್ತುವೆಂದು ಭೋಧವಾಗುತ್ತದೆ. ಅದಕ್ಕೆ ಇಲ್ಲಿ ' ಶೂನ್ಯ " ಎಂದು ಹೇಳಲ್ಪಟ್ಟಿದೆ. ಈ ಶಿದ್ರಾಮೇಶ್ವರ ಸಂಪಾದನೆಯಲ್ಲಿ ನಾವು ಕಾಣುವದೇನಂದರೆ- ಶಿದ್ರಾಮೇಶ್ವರನು ತಾನು ಅನೇಕ ಸಿದ್ಧಿಗಳನ್ನು ಹೊಂದಿ ಅಲ್ಲದೆ ಪರಮಾತ್ಮನಿಂದ ಉರಿಗಂಣನ್ನು ಪಡೆದಿದ್ದೇನೆಂಬ ಅಹಂಕಾರ-ಉರಿಯನ್ನು ತನ್ನ ಹಣೆಯ ಮೇಲೆ ಇರಿಸಿಕೊಂಡು ಮೆರೆಯುವ ವರೆಗೆ ಅವನು ಈ ಶೂನ್ಯ ಸಾಧಿಸದೆ ಕೇವಲ ಗುಡ್ಡರ-ಒರೇ ಒಡ್ಡನಾಗಿಯೇ ಉಳಿಯಬೇಕಾಯಿತು ಆದರೆ ಅದೇ ಅಹಂಕಾರ ದುರಿಯನ್ನು ಮೆಟ್ಟಿ ತುಳಿದು, ತನ್ನ ಅಂಗಾಲಿನಲ್ಲಿ ಇಟ್ಟುಕೊಂಡಿದ್ದ ಅಲ್ಲಮನು ಪ್ರಭುವಾದನು. ತಾತ್ಪರ್ಯವಿಷ್ಟೇ ಏನಂದರೆ ಅಹಂಕಾರಿಯ ಜೀವನವು ಒಂದು ಶೂನ್ಯ ಅಂದರೆ ಇಂಥ (○) ಪೂಜಿ ಅಂದರೆ ಎನೂ ಸಾಧಿಸದೆ ವ್ಯರ್ಥವಾಗಿ ಹೋಗುವದು ಆದರೆ ಅದೇ ನಿರಹಂಕಾರವು ಜೀವನಿಗೆ ಪ್ರಭುತ್ವವನ್ನು ನೀಡುವದು. ಇದು ಸ್ಪಷ್ಟವಾಗಿ ಕಾಣುತ್ತದೆ.

ಯಾವಾಗ್ಗೆ ಪ್ರಭುದೇವರಿಂದ ಶಿದ್ರಾಮೇಶ್ವರನ ಅಹಂಕಾರ ದುರಿಯು ಅಡಗಿತೋ ಅಂದರೆ ಆತನ ಅಹಂಕಾರವು ನಿರನಯವಾಯಿತೋ ಆಗ್ಗೆ ಶಿದ್ರಾಮೇಶ್ವರನಿಗೆ ಜ್ಞಾನೋದಯವಾಗಿ ಪ್ರಭುವಿಗೆ ಶರಣಾಗತನಾಗಿ ನಿಜವಾದ ' ಶೂನ್ಯ ' ವನ್ನು ಸಂಪಾದನೆ ಮಾಡಿಕೊಂಡನು.

ಈ ರೀತಿಯಾಗಿ ತಿಳಿಸಿ ಹೇಳಿ ನಮ್ಮ ಶ್ರೀಮಾನ ಚೆನಮಲ್ಲಪ್ಪ ಮೇಸ್ತ್ರುರವರು ನಮ್ಮ ಆಯುಷ್ಯದಲ್ಲಿ ಸಮಗೊಂದು ಹೊಸದೊಂದು ಬೆಳಕನ್ನು ತೋರಿಸಿದರು.

ಇದಲ್ಲದೇ ಪಂಡಿತ ವೀರಯ್ಯನವರು ಕನಕಗಿರಿಮಠ ಹಿರಿಯಾಳ, ಕೀರ್ತನ ಕಲಾಕೋವಿದರು ಈಗೆಂಟುದಿವಸಗಳ ವರೆಗೆ ಇಲ್ಲಿಯ ತಿಪ್ಪೀ ಮಠದಲ್ಲಿ ತಮ್ಮ ಅಮೌಲ್ಯವಾದ ಅನುಭವಯುಕ್ತ ಶೈಲಿಯಿಂದ ಶ್ರೀ ನುಲಿಯ ಚಂದಯ್ಯನವರು ಶ್ರೀ ಮೋಳಗಿ ಮಾರಯ್ಯನವರು ಶ್ರೀ ಅಕ್ಕ ಮಹಾದೇವಿಯವರು ಇವರೇ ಮೊದಲಾದವರ ಜೀವನದ ಸೊಬಗನ್ನು ಕೀರ್ತನ ರೂಪದಲ್ಲಿ ಹೇಳಿ ನಮ್ಮೆಲ್ಲರನ್ನೂ ಆನಂದ ಸಾಗರದಲ್ಲಿ ತೇಲಿ ಬಿಟ್ಟಿದ್ದಾರೆ.

ಇನ್ನು ನಮ್ಮ ಮ. ನಿ. ಪ್ರ. ಸ್ವಾ. ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ ಇವರು "ಭ್ರಮರಕೀಟ" ನ್ಯಾಯದಂತೆ ತಮ್ಮ ಆಯುಷ್ಯದುದ್ದಕ್ಕೂ ಶ್ರೀ ಶಿವಯೋಗಿಗಳ ಧ್ಯಾನಾಸಕ್ತರಾಗಿದ್ದು, ಆ ಧ್ಯಾನದಿಂದ ಕೀಟವು ಭ್ರಮರವಾಗುವಂತೆ, ಇವರೂ ಆ ಶಿವಯೋಗಿ ಧ್ಯಾನದಿಂದ ಶಿವಯೋಗಿಯೇ ಆಗಿದ್ದಾರೆಂದು ಹೇಳಲು ಯಾವ ಸಂದೇಹವು ಇಲ್ಲ. ಇಂಥವರು ದಿನಂಪ್ರತಿ ನಡೆದ ಈ ಕಾರ್ಯಕ್ರಮದ ಅಂತ್ಯದಲ್ಲಿ ಮಂಗಲರೂಪದಿಂದ ತಮಗಾಗಿ ಶಿವಯೋಗಿಯಿಂದ ಮೀಸಲಾಗಿ ದಯಪಾಲಿಸಲ್ಪಟ್ಟ ದಿವ್ಯವಾಣಿಯೇ ಮನಸ್ಸೈಲಿಯೋಗಿ ಸ್ವಾನುಭಾವಯುಕ್ತ ಶಿವಾನುಭವದ ತಿರುಳನ್ನೇ ನಮ್ಮೆಲ್ಲರಿಗೆ ದಯಪಾಲಿಸಿದ್ದಾರೆ.

ಈಗೀಗ ಅತಿ ವಿಕೃತಸ್ಥಿತಿಗೆ ಬಂದು ಕಣ್ಮರೆಯಾಗಹತ್ತಿದ ಈ ಶಿವಾನುಭವದ ಅಭಿರುಚಿಯನ್ನು ಪುನಃ ಜಾಗ್ರತಗೊಳಿಸಿದುದೇ ಗತ್ಯಂತರವಿಲ್ಲೆಂದು ತಮ್ಮ ದಿವ್ಯ ಜ್ಞಾನದೃಷ್ಟಿಯಿಂದ ಕಂಡುಹಿಡಿದು, ಅದು ಕುಕ್ಕಡಿಸಿ ಭರದಿಂದ ಬೀಳಹತ್ತಿದ ಅದರ ತಳಹದಿಯನ್ನೇ ಭದ್ರಗೊಳಿಸಲು ಕಂಕಣಬದ್ಧರಾಗಿ ನಿಂತು, ಅಹೋರಾತ್ರಿ ಅವಿಶ್ರಾಂತವಾಗಿ ಪ್ರಯತ್ನಪಡುವವನ್ನು ನಾವು ಕಂಣಾರೆ ಕಾಣುತ್ತೇವೆ. ಶ್ರೀಗಳವರ ನಿತ್ಯಾಚರಣೆಯನ್ನು ನಿರೀಕ್ಷಿಸಿದಲ್ಲಿ, ಅವರ ಲಿಂಗಪೂಜೆ, ಅವರ ಪ್ರಸಾದತೃಪ್ತಿ, ಅವರ ಪ್ರಸಾದವಾಣಿ, ಇಷ್ಟೇಏಕೆ, ಅವರ ಜೀವನದ ಉಸಿರು ಇವು ಅಂದರೇನೋ ಈ ಶಿವಾನುಭವ ತಳಹದಿಯ ಭದ್ರತೆಯ ಕೆಲಸವಾಗಿ ನಿಂತಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪ್ರತಿಯೊಂದು ಮನೆಯೂ ಶಿವಾನುಭವ ಮಂಟಪವಾಗಬೇಕು; ಪ್ರತಿಯೊಬ್ಬರೂ ಶಿವಾನುಭವಿ ಶರಣರಾಗಬೇಕು; ಎಂಬ ಇವರ ಸದ್ಭಾವನೆಯು ಶಿವಯೋಗೀಶ್ವರ ಕೃಪೆಯಿಂದ ಇವರ ಜೀವಮಾನದಲ್ಲಿಯೇ ಕಾರ್ಯರೂಪಕ್ಕೆ ಇಳಿದು ಇಂಥ ಶಿವಾನುಭವದ ಸೊಬಗನ್ನು ನೋಡಿ ನಲಿಯುವವರಲ್ಲಿ ಯಾವ ಅನುಮಾನವೂ ಇಲ್ಲ ಯಾಕಂದರೆ ಈ ಶ್ರೀಗಳವರ ಸಂಕಲ್ಪ ಮಾತ್ರದಿಂದ, ಸರ್ವಕಾರ್ಯಗಳೂ ಅತ್ಯುತ್ತಮವಾಗಿ ಫಲಕಾರಿಯಾಗಿ ಪರಿಣಮಿಸಿದ್ದವನ್ನು ನಾವು ಕಂಣಾರೆ ಕಂಡಿದ್ದೇವೆ, ಅಂದ ಬಳಿಕ ಈ ದಿವ್ಯಕಾರ್ಯವಾದರೂ ಅಲ್ಲದೆ ಹೋಗಲು ಶಕ್ಯವಿಲ್ಲ.

ಇನ್ನೊಂದು ಮಾತು.

ಶಿವನೊಲಿಮೆಯಿಂದ ಶಿರಿಬಂದು ಶಿವಾನುಭವದ ಹಸಿವೆಯುಳ್ಳ ಶರಣರು ತಮ್ಮ ಆ ಹಸಿವೆತೃಪ್ತಿಗಾಗಿ ಪರಿಶ್ರಮಪಟ್ಟು ಒಳ್ಳೇ ಆನಂದದಿಂದ ಇಂಥ ಮಹತ್ಕಾರ್ಯಗಳನ್ನು ಅಲ್ಲಲ್ಲಿಗೆ ಏರ್ಪಡಿಸಿ ತಮ್ಮ ಉದ್ಧಾರವನ್ನೂ ಮತ್ತು ಜನಸಾಮಾನ್ಯರಲ್ಲಿ ಶಿವಾನುಭವ ಜಾಗ್ರತೆಯನ್ನು ಉಂಟುಮಾಡುವ ಇಂಥ ಸನ್ನಿವೇಶಗಳನ್ನು ಒದಗಿಸಿಕೊಂಡುದು ಅವರ ಪವಿತ್ರ ಕರ್ತವ್ಯವದೆ. ಈ ಕರ್ತವ್ಯಪಾಲನೆಯು ಅವರ ಜೀವನದ ಸೊಬಗಾಗಿದೆ ಅಂದಬಳಿಕ ಇದರಲ್ಲಿ ಯಾರೂ ಪರಸ್ಪರ ಉಪಕಾರವನ್ನು ಸ್ಮರಿಸಿ ಹೊಗಳುವ ಭಾಗವಿಲ್ಲ ಅಂದರೆ ಇಂಥ ಸನ್ನಿವೇಶಗಳ ಲಾಭಹೊಂದಿದವರೆಲ್ಲರೂ ಕೆಲವಾಂಶವಾದರೂ ಕಾರ್ಯರಂಗಕ್ಕೆ ಇಳಿಸಿ ನಮ್ಮ ಜೀವನವನ್ನು ಬೆಳಗಿಗೊಂಡರೆ ನಾವು ಎಲ್ಲರಿಗೂ ನಮ್ಮ ಕೃತಜ್ಞತೆಯನ್ನು ತೋರಿಸಿದಂತಾಗುವದೆಂಬುದು ಸ್ಪಷ್ಟವಾದ ಮಾತು. ಈ ರೀತಿ ನಡೆಯಲು ತಕ್ಕ ಸಾಮರ್ಥವನ್ನು ಮತ್ತು ಚೊಕ್ಕ ಬುದ್ಧಿಯನ್ನು ದಯಪಾಲಿಸಿ ಸರ್ವರನ್ನು ಕಾಪಾಡಲೆಂದು ಈ ಎಲ್ಲ ಸ್ವಾಮಿಗಳನ್ನು ಹಿರಿಗುರು ಚರಮೂರ್ತಿಗಳನ್ನು ಅನನ್ಯ ಭಾವದಿಂದ ಬೇಡುತ್ತೇನೆ.

---

# ಚಿರಬಾಂಧವ್ಯ

ಇಂದೇಕೆ ? ಬಳಲುವುದು.
ನಾವೆಲ್ಲ ನೀವೆಲ್ಲ !
ನಮ್ಮಲ್ಲಿ ನಿಮ್ಮಲ್ಲಿ ಭುವಿಯಲ್ಲಿ ಅಲ್ಲಲ್ಲಿ
ತುಂಬಿಹುದು. ವೈರದೊಳು ಅವಿಚಾರ ಭರದಲ್ಲಿ.
ಎಂದಳಿಯುದೆಂದಂದು ಮನವೆಲ್ಲ ನೊಂದಿಹುದು.
ಸಂದಿಸುತ ದಿನವೆಲ್ಲ ಮೊಗವೆಲ್ಲ ಕಂದಿಹುದು.
ಇಂದೇಕೆ ? ಬಳಲುವುದು.
ನಾವೆಲ್ಲ ನೀವೆಲ್ಲ !
ಅಪ್ಪಯ್ಯ ಅಣ್ಣಯ್ಯ ನಾವೆಲ್ಲ ನೀವೆಲ್ಲ.
ಬಂದಿರ್ದ. ಠಾವೆಲ್ಲ ಒಂದಲ್ಲವೇ? ಮೊದಲಲ್ಲಿ
ನಮಗಾಗಿ ನೀವೆಲ್ಲ? ನಿಮಗಾಗಿ ನಾವೆಲ್ಲ.
ಒಂದರಿಂದೊಂದಕ್ಕೆ ನಿಂತಿಹುದು ಧರೆಯೆಲ್ಲ.
ಇಂದೇಕೆ? ಬಳಲುವುದು.
ನಾವೆಲ್ಲ ನೀವೆಲ್ಲ
ಧರೆಯಿಂದ ನೀರಿಳಿದು ನಭದಿಂದ ಬರುವಂತೆ
ನೀರಳಿದು ನೀರಾಗಿ ನೀರಿನೊಳು ಬೆರೆವಂತೆ.
ವೈರವನು ಬಿಡುವೂನು ಬಾಂಧವ್ಯ ಬೆಳೆಸೂನು-
ಹಂದಿರವ ಹಾಕೂನು ಮಂದಿರವ ಕಟ್ಟೂನು.
ಅಂದೇಕೆ ? ಬಳಲುವುದು
ನಾವೆಲ್ಲ ನೀವೆಲ್ಲ !
ಅಂದದಲಿ ನೋಡೂನು ಚಂದದಲಿ ಕಾಣೂನು.
ನಂದದಲಿ ಕುಣಿಯೂನು ಒಂದರಲಿಗೂಡೂನು.
ಸಿಪ್ಪೆಯ ಹುಳುತಾನು ಹನಿಯನ್ನು ಧರಿಪಂತೆ.
ಮುತ್ತಾಗಿ ಬಿಡುವೂನು ನಾವೆಲ್ಲ ಹುಳದಂತೆ.
ಅಂದೇಕೆ ? ಬಳಲುವುದು.
ನಾವೆಲ್ಲ ನೀವೆಲ್ಲ !

ಕವಿಃ—ಮೋಟಗಿ ಮಲ್ಲಿಕಾರ್ಜುನ.

## ಸಿದ್ಧ ಗುರುಸಿದ್ಧಮಲ್ಲು !

ಸಿದ್ಧಗುರು ಸಿದ್ಧಮಲ್ಲು ಗುರುವೆ ಜಯ ಜಯ
ನಾಮ ರೂಪ ರಹಿತ ಪರಂಜ್ಯೋತಿ ಜಯ ಜಯ
ದೇವ ದೇವ ದೇವ ನೀನೆ, ದೇವ ಜಯ ಜಯ
ಆಸೆಯನ್ನು ದೂಡಿನಿಂತ ಪ್ರಭುವೆ ಜಯ ಜಯ ॥ ೧ ॥

ಶಿವ ಬುದ್ಧ ಸಿದ್ಧರಾಮ ನೀನೆ ಜಯ ಜಯ
ಸೋಮ ವಿಷ್ಣು ಬ್ರಹ್ಮರೆಲ್ಲ ನೀನೆ ಜಯ ಜಯ
ಭಕ್ತರ ಮಮತೆಯ ವಸ್ತು ನೀನೆ ಜಯ ಜಯ
ಮಾಯೆಯನ್ನು ದೂಡಿನಿಂತ ಗುರುವೆ ಜಯ ಜಯ ॥ ೨ ॥

ತಂದೆ ತಾಯಿ ಬಂಧು ಬಳಗ ನೀನೆ ಜಯ ಜಯ
ಸತ್ಕರ್ಮ ಧರ್ಮ ಪ್ರೇಮವೆಲ್ಲ ನೀನೆ ಜಯ ಜಯ
ಪ್ರಭುವು ದಯಾ ಗುರುವು ಎಮಗೆ ನೀನೆ ಜಯ ಜಯ
ಕಾಮವನ್ನು ತ್ಯಜಿಸಿನಿಂತ ಗುರುವೆ ಜಯ ಜಯ ॥ ೩ ॥

ವೀರಶೈವ ಮತೋದ್ಧಾರಕ ದೇವ ಜಯ ಜಯ
ಕರು ನಾಡಿನ ವಿಖ್ಯಾತ ಪುರುಷನೆ ದೇವ ಜಯ ಜಯ
ಭಕ್ತರ ಹುಕ್ಕುಮಲಾರ್ಕನೆ ದೇವ ಜಯ ಜಯ
ಸ್ವಾರ್ಥತೆಯನು ಮರೆದು ನಿಂತ ಪ್ರಭುವೆ ಜಯ ಜಯ ॥ ೪ ॥

ಕವಿ:- ಗುರುಸಿದ್ಧ ಶಿವಾಚಾರ್ಯರು ಗುರುವಿನಸುರಮಠ.



ಈ ಭಾಗದಲ್ಲಿದ್ದ ಜನರು ಅವಳಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡಬಹುದೆಂಬ ತಿಳಿವಳಿಕೆಯು ಅವರಲ್ಲಿ ಉಂಟಾಗಿತ್ತು. ಇಂಥ ಸ್ಥಿತಿಯಲ್ಲಿ ಅತ್ಯಂತ ಧೈರ್ಯಸ್ಥಳಾದ ನಾಗಲಾಂಬಿಕೆಯು ಹೀಗೆ ಕಾರ್ಯ ಮಾಡಲು ಒಪ್ಪಿ ಅವಳು ಭದ್ರಾನದೀ ತೀರ ಪ್ರದೇಶಕ್ಕೆ ಬಂದಳು. ಅವಳು ತರೀಕೆರೆ ಹತ್ತರ ಎಣ್ಣೆ ಹೊಳೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನದೀ ಭಾಗಕ್ಕೆ ಬರಲು ಅಲ್ಲಿಯೇ ಅವಳು ತನ್ನ ಬಿಡಾರವನ್ನು ಬಿಟ್ಟಳು. (ಇಲ್ಲಿಂದ ಬಾಳೇಹಳ್ಳಿಯು ಸ್ಥಾನವು ೩೫-೪೦ ಮೈಲುಗಳ ಮೇಲೆ ಇರುತ್ತದೆ.) ಇಲ್ಲಿ ಅವಳು ಇದ್ದುಕೊಂಡು ಶ್ರೀಶೈಲ ಪ್ರಾಂತದಿಂದ ಸಹಾಯವು ಬರುವ ವರೆಗೆ ಕಾದುಕೊಂಡಿರಬೇಕೆಂದು ನಿಶ್ಚಯಿಸಿದ್ದಳು.

**ನಂದಿಯಲ್ಲಿ ನುಲಿಯ ಚಂದಯ್ಯ**

ಅವಳ ಕೂಡ ನುಲಿಯ ಚಂದಯ್ಯನೂ ಇದ್ದನು. ಆದರೆ ಅವನು ಎಣ್ಣೆ ಹೊಳೆಯ ಸ್ಥಾನದಲ್ಲಿ ಇರದೆ ಈ ಸ್ಥಳದಿಂದ ದಕ್ಷಿಣಕ್ಕೆ ೮-೧೦ ಮೈಲುಗಳ ಮೇಲಿರುವ ನಂದೀ ಎಂಬ ಗ್ರಾಮಕ್ಕೆ ಬಂದು ನೆಲಿಸಿದನು. ಇಲ್ಲಿಯೇ ಅವನು ನುಲಿಯನ್ನು ಹೊಸೆಯುವ ಕಾಯಕವನ್ನು ಮಾಡುತ್ತ ಬಂದನು.

**ನಾಗಲಾಂಬಿಕೆಯ ಅವಸಾನ**

ನಾಗಲಾಂಬಿಕೆಯು ಎಣ್ಣೆ ಹೊಳೆಯ ಥಡದಲ್ಲಿ ಇದ್ದಾಗ್ಗೆ ಸಿದ್ಧ ವೀರಸ್ವಾಮಿಗಳೆಂಬವರು ಅಲ್ಲಿಗೆ ಬಂದು ಮಠವನ್ನು ಕಟ್ಟಿಸಿದರು. ಆದರೆ ಮುಂದೆ ನಾಗಲಾಂಬಿಕೆಯು ಬಹಳ ದಿವಸ ಇಲ್ಲಿ ಜೀವಿಸಿರಲಿಲ್ಲ. ಅವಳು ಅಲ್ಲಿಯೇ ಸಮಾಧಿಸ್ಥಳಾಗಿ ಇಹಲೋಕವನ್ನು ತ್ಯಜಿಸಿದಳು. ಅವಳ ಸಮಾಧಿಯು ಇಗಲೂ ಇದೇ ಸ್ಥಳದಲ್ಲಿದೆ. ಹೀಗೆ ವೀರಶೈವ ಸಮಾಜ ಮತ್ತು ಧರ್ಮಕ್ಕೋಸ್ಕರ ನಾಗಲಾಂಬಿಕೆಯು ತನ್ನ ತಮ್ಮ ಬಸವೇಶ್ವರನಂತೆ ಅದ್ಭುತ ಕಾರ್ಯಗಳನ್ನು ಮಾಡುತ್ತ ಮರಣ ಹೊಂದಿದ್ದಾಳೆ.

ಇತ್ತ ನುಲಿಯ ಚಂದಯ್ಯನೂ ಬಹಳ ದಿವಸ ನಂದೀಗ್ರಾಮದಲ್ಲಿರಲಿಲ್ಲ. ಅವನು ತಾನು 'ಕಲ್ಲು ಹತ್ತಿಗಿರಿ' ಎಂಬ ಊರಿಗೆ ಹೋಗುವೆನೆಂದು ಅಲ್ಲಿಯ ಜನರಿಗೆ ಹೇಳಿ ಅದೃಶ್ಯನಾದನಂತೆ. ಅವನ ಅಂತ್ಯವನ್ನು ಹೊಂದಿದ ಸ್ಥಾನವು ಯಾವದೆಂಬುದು ನಿಶ್ಚಿತವಾಗಿ ತಿಳಿದಿರುವದಿಲ್ಲ ಆದರೆ ನಂದೀಗ್ರಾಮದಲ್ಲಿ ನುಲಿಯ ಚಂದಯ್ಯನ ಜಾತ್ರೆಯು ಈಗಲೂ ನಡೆಯುತ್ತದೆ. ಈ ಪ್ರಕಾರ ಅಕ್ಕ ನಾಗಲಾಂಬಿಕೆ ಮತ್ತು ನುಲಿಯ ಚಂದಯ್ಯ ಇವರ ಅಂತ್ಯವು ಆಗಿರುತ್ತದೆ.

## ಶ್ರೀಶೈಲದಲ್ಲಿ ರುದ್ರ ಮುನಿಯು

ಹೀಗೆ ಅಕ್ಕ ನಾಗಲಾಂಬಿಕೆಯು ಭದ್ರಾನದೀ ಪ್ರದೇಶಕ್ಕೆ ಹೋಗು ಲಾಗಿ ಇತ್ತ ರುದ್ರಮುನಿಯು ಶ್ರೀ ಶೈಲಪ್ರಾಂತಕ್ಕೆ ಹೋಗಲು ಸಿದ್ಧನಾಗಿ ಮೊದಲು ಅವನು ಕಲ್ಯಾಣ ಪಟ್ಟಣಕ್ಕೆ ಬಂದನು. ಅಲ್ಲಿಂದ ಅವನು ಶ್ರೀಶೈಲಕ್ಕೆ ಬಂದು ರಣರಂಗದಲ್ಲಿ ವಿಜಯ ಹೊಂದಿದ. ಮುಕ್ತಿ ಮುನಿ ಮೊದಲಾದ ಶಿವಶರಣರನ್ನು ಕೂಡಿಕೊಂಡನು ಆಗ ರುದ್ರಮುನಿಯು ಶ್ರೀಶೈಲಸಿಂಹಾಸನವನ್ನು ಅಲ್ಲಿ ಸ್ಥಿರಪಡಿಸಿ ಶಿವಮೊಗ್ಗಾ ಜಿಲ್ಲೆಯ ಕಾಡು ಪ್ರದೇಶದಲ್ಲಿ ಏಕಾಕಿಯಾಗಿ ಮಾರ್ಗನಿರೀಕ್ಷಣೆ ಮಾಡುತ್ತಿದ್ದ ನಾಗಲಾಂಬಿ ಕೆಯ ಸಹಾಯಕ್ಕಾಗಿ ಶಿವಶರಣರ ಸೈನ್ಯಬಲವನ್ನು ದಿಗಂಬರ ಮುಕ್ತಿ ಮುನಿಯ ಆಧಿಪತ್ಯದಲ್ಲಿ ಕಳಿಸುವವನಾದನು.

## ದಿಗಂಬರ ಮುಕ್ತಿಮುನಿ

ದಿಗಂಬರ ಮುಕ್ತಿಮುನಿಯು ಎಣ್ಣೆಹೊಳೆ ಮತ್ತು ಚಾಳಿಹೊನ್ನೂರ ಪ್ರದೇಶಕ್ಕೆ ಬಂದು ವೈರಿಗಳೊಡನೆ ಘೋರವಾದ ಕದನಗಳಲ್ಲಿ ತೊಡಗಿದವ ನಾದನು. ಅವುಗಳಲ್ಲಿ ಪರವಾದಿಗಳು ಸಂಪೂರ್ಣವಾಗಿ ಸೋತು ಹೋದರು. ಹೀಗೆ ಈ ಭಾಗದಲ್ಲಿ ವೀರಶೈವ ಮತವು ಬೇರೂರಿತು. ಮುಂದೆ ಅದು ವಿಸ್ತಾರವನ್ನು ಹೊಂದುತ್ತ ಇಡೀ ಕರ್ನಾಟಕವನ್ನು ಆವರಿಸಿತು.

ಈ ಪ್ರಕಾರ ನಾಗಲಾಂಬಿಕೆಯು ಕರ್ನಾಟಕದಲ್ಲಿ ಹೆಸರಾದ ಸ್ತ್ರೀಯ ರಲ್ಲಿ ಅಗ್ರ ಸ್ಥಾನವನ್ನು ಹೊಂದಿದವಳಾಗಿದ್ದಾಳೆ. ಅವಳು ಮಾಡಿದ ಸಾಹ ಸದ ಕಾರ್ಯಗಳು ಅನಂತವಾಗಿವೆ ಅವಳು ಬಸವೇಶ್ವರನಿಗೆ ಯಾವಾಗಲೂ ಅನುವರ್ತಿಯಾಗಿ ಸಹಾಯ ಮಾಡುತ್ತ ಬಂದಳು ತಾಯಿ ತಂದೆಗಳು ಮತ್ತು ಬಂಧುಬಳಗದವರು ಬಸವೇಶ್ವರನನ್ನು ಮನೆಯಿಂದ ಹೊರಡಿಸಿದ ಬಳಿಕ ಅವಳೊಬ್ಬಳೇ ಅವನೊಡನೆ ಹೋಗಲು ಸಿದ್ಧಳಾದಳು. ಇದು ಅವಳ ಮನೋಧೈರ್ಯವನ್ನು ತೋರಿಸುತ್ತದೆ ಆಗ ಆಕೆಯಲ್ಲಿ ಬಹು ಚಿಕ್ಕ ವಯಸ್ಸಿನವಳಾಗಿದ್ದಳು ಆದರೂ ಶಿವಾನುಭವದ ಮೇಲಿದ್ದ ಅವಳ ಪ್ರೀತಿಯು ಅವಳನ್ನು ಹೀಗೆ ಕಷ್ಟ ಸಹಿಸಲು ಪ್ರೇರಣೆಗೊಳಿಸಿತು ಅವಳು ಶಿವಾನುಭವಿಯೂ ಉಚ್ಚ ಯೋಗಿಣಿಯೂ ಎಂದು ಪ್ರಸಿದ್ಧಿಯನ್ನು ಹೊಂದಿ ದಳು ಅವಳು ಚಿಕ್ಕವಯಸ್ಸಿನಲ್ಲಿಯೇ ತನ್ನ ಮಗ ಚನ್ನಬಸವೇಶ್ವರನಿಗೆ ಶಿವಾನುಭವದ ಜ್ಞಾನವನ್ನುಂಟುಮಾಡಿ ಅವನು ಶಿವಾನುಭವಿಗಳಲ್ಲಿ ಅಗ್ರ ಸ್ಥಾನವನ್ನು ವಹಿಸುವಂತೆ ಮಾಡಿದಳು. ಬಸವೇಶ್ವರನು ಕಲ್ಯಾಣದಲ್ಲಿ

ನೆಲಿಸಿದ ಬಳಿಕ ಆವನ ಕಾರ್ಯಗಳಲ್ಲಿ ಅವನಿಗೆ ಯಾವಾಗಲೂ ಸಹಾಯಕಳಾಗಿ ಕಾರ್ಯ ಮಾಡುವವಳಾದಳು. ಆವನ ಮನೆತನದ ಕಾರ್ಯಗಳು ಸುಲಭವಾಗಿ ನಡೆಯುವಂತೆ ಅವಳು ಏರ್ಪಾಡು ಮಾಡಿದಳು. ಮುಂದೆ ಶಿವಶರಣರು ಯುದ್ಧರಂಗಕ್ಕೆ ತೆರಳಲು ಅವಳು ಅವರಿಗೆ ಮುಂದಾಳುವಾಗಿ ನಿಂತಿದ್ದಾಳೆ- ಶಸ್ತ್ರವನ್ನು ಹಿಡಿದು ವೈರಿಗಳೊಡನೆ ಹೋರಾಡಿದ್ದಾಳೆ. ಶಿವಶರಣರಿಗೆ ಈ ಕಾಲದಲ್ಲಿ ಕಠಿಣ ಕಾಲವು ಪ್ರಾಪ್ತವಾಗಿತ್ತು. ಆದರೂ ಅವರು ಎದೆಗೆಡದಂತೆ ಅವರನ್ನು ಹುರಿದುಂಬಿಸುತ್ತ ಉಳವಿಯವರೆಗೂ ಬಂದಿದ್ದಾಳೆ. ಮುಂದೆ ಉಳವಿಯಲ್ಲಿ ಅವರಿಗೆ ಅಂತ್ಯಕಾಲವು ಉಂಟಾಯಿತು. ಆದರೂ ಆಕೆಯು ಧೈರ್ಯಗೆಡಲಿಲ್ಲ. ಮುಂದೆ ಭದ್ರಾನದೀ ತೀರದಲ್ಲಿ ಶಿವಶರಣರಿಗೋಸ್ಕರ ರಕ್ಷಣೆಯ ಸ್ಥಳವನ್ನು ನಿರ್ಮಿಸಿಕೊಂಡಳು. ಹೀಗೆ ನಾಗಲಾಂಬಿಕೆಯು ಮಾಡಿದ ಮಹತ್ ಕೃತ್ಯಗಳು ಅನಂತಮುಖವಾಗಿವೆ, ಅದ್ಭುತವಾಗಿವೆ. ಕರ್ನಾಟಕ ಇತಿಹಾಸದಲ್ಲಿ ಅವ ಹೆಸರು ಚಿರಸ್ಥಾಯಿಯಾಗಿ ಉಳಿಯಬೇಕು. ಬಸವೇಶ್ವರನಿಗೆ ಯಾವ ಸ್ಥಾನವು ಪ್ರಾಪ್ತವಾಗಿದೆಯೋ, ಅದಕ್ಕೆಲ್ಲ ಆಕೆಯೇ ಕಾರಣೀಭೂತಳಾಗಿದ್ದಾಳೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.



# ಚನ್ನಬಸವೇಶ್ವರ.

ಚನ್ನಬಸವೇಶ್ವರನು ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆಯ ಮಗನು. ಅವನ ತಂದೆಯ ಹೆಸರು ಶಿವಸ್ವಾಮಿಯು. ಚನ್ನಬಸವನು ಷಣ್ಮುಖನ ಅವತಾರವೆಂದು ವೀರಶೈವರು ತಿಳಿದಿದ್ದಾರೆ. ಷಣ್ಮುಖನು ಜ್ಞಾನದಲ್ಲಿ, ವಿದ್ಯೆಯಲ್ಲಿ, ಪಾಂಡಿತ್ಯದಲ್ಲಿ ಎಲ್ಲ ದೇವತೆಗಳಿಗಿಂತಲೂ ಮೇಲ್ತರದವನೆಂದು ಹಿಂದೂ ಧರ್ಮ ಗ್ರಂಥಗಳಲ್ಲಿ ಹೇಳಿದೆ. ಅಲ್ಲದೆ ಅವನು ತ್ರಿಪುರ ಸಂಹಾರಕನಾಗಿ ಪರಾಕ್ರಮಿ ಎಂತಲೂ ಹೆಸರಾಗಿದ್ದಾನೆ. ಚನ್ನಬಸವೇಶ್ವರನು ಷಣ್ಮುಖನಂತೆ ಪರಾಕ್ರಮಿಯೂ ವಿದ್ವತ್ತೆಯುಳ್ಳವನೂ ಇದ್ದುದರಿಂದ ಅವನು ಷಣ್ಮುಖನ ಅವತಾರವೆಂದು ವೀರಶೈವರು ತಿಳಿದಿದ್ದಾರೆ.

## ಚನ್ನಬಸವೇಶ್ವರನ ಜನನ

ನಾಗಲಾಂಬಿಕೆಯ ಗಂಡನಾದ ಶಿವಸ್ವಾಮಿಯ ಗ್ರಾಮವು ಯಾವುದು ಎಂಬುದು ನಮಗೆ ತಿಳಿದಿಲ್ಲ. ನಮ್ಮ ದೇಶದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ ಧಾರ್ಮಿಕ ಪುರುಷರಿದ್ದಲ್ಲಿ ಅವರು ಹೇಗೆ ಹುಟ್ಟಿದರೆಂಬುದರ ಬಗ್ಗೆ ಬಹುಶಃ ದಂತಕಥೆಗಳೂ ಪೊವಾಡಗಳೂ ಉಂಟಾಗುತ್ತವೆ. ಅವರು ಪೌರುಷೇಯರು ಅಂದರೆ ಸ್ತ್ರೀ ಪುರುಷರಿಂದ ಸಾಮಾನ್ಯ ಜನರಂತೆ ಜನ್ಮಿಸಿದವರಲ್ಲ, ಅವರು ಅಯೋನಿಜರೆಂದು ದಂತಕಥೆಗಳಿರುತ್ತವೆ. ಚನ್ನಬಸವೇಶ್ವರನು ಹೀಗೆಯೇ ಹುಟ್ಟಿದವನೆಂಬುದರ ಬಗ್ಗೆ ಒಂದು ದಂತಕಥೆಯು ಇರುತ್ತದೆ. ಅದು ಕೆಳಗೆ ಹೇಳಲ್ಪಟ್ಟಿದೆ

## ಕಕ್ಕಯ್ಯನ ಪ್ರಸಾದ

ಚನ್ನಬಸವೇಶ್ವರನು ಪ್ರಸಾದದ ಮೂಲಕ ಹುಟ್ಟಿದನೆಂದು, ವೀರಶೈವ ಪುರಾಣಗಳು ಹೇಳುತ್ತವೆ. ಬಸವೇಶ್ವರನ ಕಾಲದಲ್ಲಿ ಕಕ್ಕಯ್ಯನೆಂಬ ಒಬ್ಬ ಶಿವಶರಣನಿದ್ದನು ಅವನ ಪ್ರಸಾದದ ಮೂಲಕ ನಾಗಲಾಂಬಿಕೆಯಲ್ಲಿ ಚನ್ನಬಸವೇಶ್ವರನ ಜನನವಾಯಿತೆಂಬ ಕಥೆ ಇದೆ. ಅದು ಏನೆಂದರೆ:—

ಬಸವೇಶ್ವರನು ಒಂದು ದಿವಸ ತನ್ನ ಮಂದಿರದಿಂದ ಓಲಗಕ್ಕೆ ಹೋಗುವಾಗ್ಗೆ ದಾರಿಯಲ್ಲಿ ಢೋರರ ಕುಲದವನಾದ ಕಕ್ಕಯ್ಯನ ಹೆಂಡತಿಯು ತನ್ನ ಬಾಗಿಲಲ್ಲಿ ನಿಂತಿದ್ದಳು. ಅವಳು ಬಸವೇಶ್ವರನು ಹೋಗುತ್ತಿರುವದನ್ನು ನೋಡಿ ಅವನಿಗೆ ಅವಳು ಶರಣುಮಾಡಿ ಮನೆಗೆ ಪ್ರಸಾ

ದಕ್ಕೆ ಬರಲು ಹೇಳಿದಳು. ಆದರೆ ಬಸವೇಶ್ವರನು ಆಗ ಆವುದೋ ಒಂದು ವಿಚಾರದಲ್ಲಿ ಮಗ್ನನಾಗಿದ್ದುದರಿಂದ ಆಕೆಯು ತನ್ನನ್ನು ಮಾತಾಡಿಸಿದ್ದು ಅವನ ಲಕ್ಷಕ್ಕೆ ಬರಲಿಲ್ಲ. ಅವನು ಹಾಗೆಯೇ ಹೋಗಿ ಬಿಟ್ಟನು. ಇತ್ತ ಕಕ್ಕಯ್ಯನು ಮನೆಗೆ ಬಂದ ಬಳಿಕ ಈ ಸಂಗತಿಯನ್ನು ಅವನ ಹೆಂಡತಿಯು ಅವನಿಗೆ ಹೇಳಲಾಗಿ ಅವನು ವಿಸ್ಮಯಪಟ್ಟು, ಶಿವಶಿವಾ, ನಾವು ಬಸವರಾಜನ ಪಾದಚರಣಕ್ಕೆ ಸರಿಯೇ? ಅವರಿಗೆ ಊಟಕ್ಕೆ ಬರಲು ಯಾಕೆ ಹೇಳಿದೆ? ಎಂದು ಕೋಪಿಸಿ ಅವಳಿಗೆ ಝುಂಕಿಸಿ ನುಡಿದನು. ಇತ್ತ ಬಸವೇಶ್ವರನು ಓಲಗದಿಂದ ಮನೆಗೆ ತಿರುಗಿ ಬಂದು ವಿಶ್ರಮಿಸುತ್ತಿರುವಾಗ ಅವನು ತನ್ನ ಮನೋಮೂರ್ತಿಲಿಂಗದಲ್ಲಿ ಕಕ್ಕಯ್ಯನ ಹೆಂಡತಿಯು ಪ್ರಸಾದಕ್ಕೆ ಕರೆದದ್ದು ಫಕ್ಕನೆ ಅವನ ಲಕ್ಷಕ್ಕೆ ಬಂದಿತು. ಆಗ ಅವನು-ಅಕಟಕಟಾ, ಕಕ್ಕಯ್ಯಗಳ ಘನ ಪ್ರಸಾದವು ನನಗೆ ಎಂದು ದೊರೆದೀತೋ ಎಂದು ಈ ವರೆಗೆ ಅದನ್ನು ಕಾಯುತ್ತಾ ಬಂದೆನು. ಆದರೆ ಅದು ಇಂದು ನನ್ನ ಅಲಕ್ಷದಿಂದ ತಪ್ಪಿತ್ತಲ್ಲಾ, ಎಂದು ಪಶ್ಚಾತ್ತಾಪ ಪಟ್ಟನು. ಅಷ್ಟರಲ್ಲಿ ಅವನ ಅಭೀಷ್ಟವನ್ನು ಪೂರೈಸಲು ಬಂದಿದೆಯೋ ಏನೋ ಎನ್ನುವಂತೆ ಒಂದು ಇರಿವೆಯು ಕಕ್ಕಯ್ಯನ ಮನೆಯಿಂದ 'ಭಾಂಡ ಪ್ರಸಾದ"ದಲ್ಲಿಯ ಅನ್ನದ ಅಗುಳನ್ನು ತೆಗೆದುಕೊಂಡು ಅವನಿದ್ದ ಕಡೆಗೆ ಬರುತ್ತಾ ಇತ್ತು. ಅದನ್ನು ಬಸವೇಶ್ವರನು ಕಂಡು ಅದಕ್ಕೆ ಸಕ್ಕರೆಯನ್ನಿಕ್ಕಿ ಆ ಅನ್ನದಗುಳನ್ನು ತೆಗೆದು ಕೊಂಡು ನಾಗಲಾಂಬಿಕೆಯ ಕಯ್ಯಲ್ಲಿ ಕೊಟ್ಟನು. ಅವಳು ಕಕ್ಕಯ್ಯನ ವಿಷಯವಾಗಿ ಬಹು ಭಕ್ತಿಯುಳ್ಳವಳಾಗಿದ್ದಳು. ಆದ್ದರಿಂದ ಅವಳು ಅದನ್ನು ಸೇವಿಸಲು ಅವಳಿಗೆ ಗರ್ಭವು ನಿಂತಿತು. ಈ ಪ್ರಸಾದದ ಮೂಲಕವೇ ಮುಂದೆ ಚನ್ನಬಸವೇಶ್ವರನು ಅವಳಿಂದ ಜನ್ಮತಾಳಿದನು. ಹೀಗೆ ಈ ಕಥೆ ಇದೆ. ಈ ಭಾವವುಳ್ಳ ಆಖ್ಯಾಯಿಕೆಗಳು ವೀರಶೈವ ಪುರಾಣ ಗ್ರಂಥಗಳಲ್ಲೆಲ್ಲ ಇರುವದು ಕಂಡು ಬರುತ್ತದೆ.

## ಚನ್ನಬಸವೇಶ್ವರನ ತಂದೆಯು ಶಿವಸ್ವಾಮಿಯು

ಇದಕ್ಕೆ ಅಪವಾದವಾಗಿ ಸಿಂಗಿರಾಜ ಪುರಾಣ ಒಂದೇ ಗ್ರಂಥವಿರುತ್ತದೆ. ಈ ಪುರಾಣದ ಕರ್ತನು ಶಿವಶರಣರ ಅನೇಕ ಚರಿತ್ರಗಳನ್ನು ಬರೆದಿದ್ದಾನೆ. ಅವನು ಎಲ್ಲರಿಗಿಂತಲೂ ಹೆಚ್ಚಿಗೆ ಐತಿಹಾಸಿಕ ದೃಷ್ಟಿಯುಳ್ಳವನು. ಆವನು ನಾಗಲಾಂಬಿಕೆಗೆ ಗಂಡನಿದ್ದು ಅವನ ಹೆಸರು ಶಿವಸ್ವಾಮಿ ಎಂದು

ತನ್ನ ಗ್ರಂಥದಲ್ಲಿ ಕಾಣಿಸಿದ್ದಾನೆ. ಅವನು ಆಧಾರಗಳಿಲ್ಲದೆ ಹೀಗೆ ಬರೆಯುವ ಸಂಭವವಿಲ್ಲ. ಆದ್ದರಿಂದ ನಾಗಲಾಂಬಿಕೆಯು ಸರಿಯಾದ ರೀತಿಯಿಂದ ಲಗ್ನವಾಗಿ ಚನ್ನಬಸವೇಶ್ವರನನ್ನು ಹಡೆದದ್ದು ಹೆಚ್ಚಿಗೆ ವಿಶ್ವಸನೀಯವೆಂದು ನಮಗೆ ತೋರುತ್ತದೆ. ಇದರಲ್ಲಿ ಅಸ್ವಾಭಾವಿಕವಾದುದು ಏನೂ ಇರುವದಿಲ್ಲ.

ಇದಲ್ಲದೆ ಮೇಲೆ ಹೇಳಿದ ಕಡೆಯಲ್ಲಿ ಶಿವಾನುಭವ ಶಾಸ್ತ್ರಕ್ಕೆ ಮೇಳಗೂಡದ ಅನೇಕ ಸಂಗತಿಗಳೂ ಇರುತ್ತವೆ. ಒಂದು ಇರುವೆಯು ಕಕ್ಕಯ್ಯನ ಮನೆಯ ಅನ್ನದ ಅಗುಳನ್ನು ಕಚ್ಚಿಕೊಂಡು ಹೋಗುತ್ತಿದ್ದ ಬಳಿಕ ಅದು ಪ್ರಸಾದವೆಂದು ಭಾವಿಸಲು ಬರಲಾರದು. ಯಾಕಂದರೆ ಪ್ರಸಾದವಾದುದು ನೆಲಕ್ಕೆ ಬೀಳಕೂಡದು. ಕ್ಷುದ್ರ ಜಂತುಗಳಂತೂ ಅದನ್ನು ಮುಟ್ಟಲೇ ಬಾರದು. ಅವು ಮುಟ್ಟಿದರೆ ಅದು ಮುಸರಿಯು ಇದರಿಂದ ಪ್ರಸಾದದ ಸತ್ವವು ಹೋಗಿ ಬಿಡುತ್ತದೆ. ಆದ್ದರಿಂದ ಈ ಕಥೆಯಲ್ಲಿ ತಥ್ಯಾಂಶವಿರಲಾರದು. ಪ್ರಸಾದದ ಮಹಾತ್ಮೆಯನ್ನು ವಿವರಿಸುವ ಸಲುವಾಗಿ ಪುರಾಣಿಕರು ರಚಿಸಿದ ಒಂದು ಕಾಲ್ಪನಿಕ ಕಥೆ ಇದು ಎಂದು ನಮಗೆ ತೋರುತ್ತದೆ.

## ಚನ್ನಬಸವೇಶ್ವರನ ಜನನ ಎಲ್ಲಿ ಆಯಿತು.

ಹೀಗಿದ್ದ ಬಳಿಕ ಚನ್ನಬಸವೇಶ್ವರನು ಎಲ್ಲಿ ಮತ್ತು ಯಾವಾಗ ಹುಟ್ಟಿದನು ಎಂಬುದನ್ನು ನಿರ್ಧರಿಸುವದು ಒಂದು ಮಹತ್ವದ ವಿಷಯವಾಗಿದೆ. ವೀರಶೈವ ಪುರಾಣಗಳೆಲ್ಲ ಅವನು ಕಲ್ಯಾಣದಲ್ಲಿಯೇ ಹುಟ್ಟಿದನು ಮತ್ತು ಅವನು ಉಳವಿಗೆ ಹೋಗುವ ವರೆಗೂ ಅಲ್ಲಿಯೇ ಇದ್ದನು ಎಂದು ಹೇಳುತ್ತವೆ. ಆದರೆ ಇದಕ್ಕೂ ಇತಿಹಾಸಕ್ಕೂ ಮೇಳವಿರುವದಿಲ್ಲ. ಚನ್ನಬಸವೇಶ್ವರನು ಹುಟ್ಟಿದಾಗ ಬಸವ, ನಾಗಲಾಂಬಿಕೆ, ಬಿಜ್ಜಳ ಇವರಲ್ಲಿ ಯಾರೂ ಕಲ್ಯಾಣದಲ್ಲಿರಲಿಲ್ಲ.

ಚನ್ನಬಸವೇಶ್ವರನು ಉಳವಿಯಲ್ಲಿ ಐಕ್ಯಹೊಂದುವ ಕಾಲದಲ್ಲಿ ಅವನಿಗೆ ೨೪ ವರ್ಷಗಳಾಗಿದ್ದವು ಮತ್ತು ಬಸವೇಶ್ವರನು ಅವನಿಗಿಂತ ೧೨ ವರ್ಷ ಹಿರಿಯನು ಅಂದರೆ ಅವನಿಗೆ ೩೬ ವರ್ಷಗಳಾಗಿದ್ದವು ಎಂದು ವೀರಶೈವ ಗ್ರಂಥಕಾರರು ಯಾವಾಗಲೂ ಹೇಳುತ್ತ ಬಂದಿದ್ದಾರೆ. ಇದರಲ್ಲಿ ತಥ್ಯಾಂಶವಿದ್ದ ಹಾಗೆ ನಮಗೆ ತೋರುತ್ತದೆ. ಇದನ್ನು ಕುರಿತು ನಾವು ಬಸವೇಶ್ವರನ ಚರಿತ್ರೆಯಲ್ಲಿ ಹೆಚ್ಚಿಗೆ ನಿರೂಪಿಸುವೆವು.

ಚನ್ನಬಸವೇಶ್ವರನು ಕಲ್ಯಾಣದಲ್ಲಿ ಹುಟ್ಟಿದ್ದರೆ, ಮೇಲೆ ಹೇಳಿದ ಮಿತಿಗಳ ಪ್ರಕಾರ ಅವನು ೨೪ ವರ್ಷ ಅಲ್ಲಿ ಇರಬೇಕಾಯಿತು. ಮತ್ತು ಬಿಜ್ಜಳನು ಇಷ್ಟು ವರ್ಷ ಅಲ್ಲಿ ರಾಜ್ಯವಾಳಿದನೆಂದು ನಾವು ತಿಳಿಯಬೇಕಾಗುತ್ತದೆ. ಆದರೆ ೨೪ ವರ್ಷ ಅವನು ಕಲ್ಯಾಣಪಟ್ಟಣದಲ್ಲಿ ರಾಜ್ಯವಾಳಿಲ್ಲೆಂದು ಶಿಲಾಶಾಸನಗಳ ಆಧಾರದಿಂದ ಇತಿಹಾಸಜ್ಞರು ಕಂಡುಹಿಡಿದಿದ್ದಾರೆ. ಬಿಜ್ಜಳನ ಅನೇಕ ಶಿಲಾಶಾಸನಗಳು ಉತ್ತರ ಕರ್ನಾಟಕದಲ್ಲಿ ಮುಖ್ಯವಾಗಿ, ಇಂಗಳೇಶ್ವರ, ವಿಜಾಪುರ, ಹೂಲಿ, ಮನಗೋಳಿ, ಅಣ್ಣಿಗೇರಿ ಮುಂತಾದ ಕಡೆಗೆ ಇವೆ. ಮೈಸೂರು ಪ್ರಾಂತದಲ್ಲಿ ಬಳ್ಳಿಗಾವಿಯಲ್ಲಿ ಮತ್ತು ಶಿಕಾರಿಪುರ ತಾಲೂಕಿನಲ್ಲಿ ಅನೇಕ ಗ್ರಾಮಗಳಲ್ಲಿ ಇರುತ್ತವೆ. ಇವುಗಳ ಮೇಲಿಂದ ಬಿಜ್ಜಳನು ೧೧೫೬ ರಿಂದ ೧೧೬೨ ವರೆಗೆ ಸರ್ವಾಧಿಕಾರಿಯಾಗಿಯೂ ೧೧೬೨ ರಿಂದ ೧೧೬೮ ರ ವರೆಗೆ ಚಕ್ರವರ್ತಿಯಾಗಿಯೂ ಕಲ್ಯಾಣದಲ್ಲಿ ಚಾಲುಕ್ಯರ ರಾಜ್ಯವನ್ನು ಆಳಿದನೆಂದು ತಿಳಿದುಬರುತ್ತದೆ. ಅಂದರೆ ಅವನು ೬ ವರ್ಷ ಮಾತ್ರ ಕಲ್ಯಾಣದಲ್ಲಿ ರಾಜನಾಗಿದ್ದನು. ಈ ಅವಧಿಯಲ್ಲಿ ಬಸವೇಶ್ವರನು ಅವನಿಗೆ ಮಂತ್ರಿಯಾಗಿ ರಾಜ್ಯಭಾರ ನಡಿಸಿರಬಹುದು ಮತ್ತು ಅವನ ಕೂಡ ಅವನ ಅಕ್ಕನಾದ ನಾಗಲಾಂಬಿಕೆ ಮತ್ತು ಚನ್ನಬಸವೇಶ್ವರ ಇವರೂ ಸಹ ಕಲ್ಯಾಣದಲ್ಲಿ ಇದ್ದಿರಬಹುದು. ಆದರೆ ಚನ್ನಬಸವೇಶ್ವರನು ಐಕ್ಯಹೊಂದಿದಾಗ ಅವನಿಗೆ ೨೪ ವರ್ಷಗಳಾಗಿದ್ದರಿಂದ ಅವನು ಈ ಅವಧಿಯ ಪೂರ್ವದಲ್ಲಿಯೇ ನಾಗಲಾಂಬಿಕೆಯಲ್ಲಿ ಜನಿಸಿದ್ದಾನೆ. ಆಗ ನಾಗಲಾಂಬಿಕೆ ಮತ್ತು ಬಸವೇಶ್ವರ ಇವರು ಯಾರೂ ಕಲ್ಯಾಣದಲ್ಲಿದ್ದಿಲ್ಲ. ಅವನು ಬೇರೆ ಬೇರೆ ಕಡೆಗೆ ಮಾಂಡಲಿಕನಾಗಿ ಆಳುತ್ತಿದ್ದನು. ಆದ್ದರಿಂದ ಚನ್ನಬಸವೇಶ್ವರನು ಕಲ್ಯಾಣದಲ್ಲಿ ಹುಟ್ಟಿಲ್ಲೆಂಬುದು ಸ್ಪಷ್ಟವಾಗುತ್ತದೆ.

ಇದನ್ನು ನಾವು ಲಕ್ಷಿಸಿದಲ್ಲಿ ಕಕ್ಕಯ್ಯ ನಾಗಲಾಂಬಿಕೆ ಮತ್ತು ಬಿಜ್ಜಳ ಇವರಿಗೆ ಸಂಬಂಧಿಸಿದ ಕೆಲವು ಕಥೆಗಳಿದ್ದು ಅವುಗಳಲ್ಲಿ ತಥ್ಯಾಂಶವಿರಲಾರದೆಂದು ನಾವು ತಿಳಿಯಬೇಕಾಗುತ್ತದೆ. ಈ ಕಥೆಗಳು ಯಾವವೆಂದರೆ ನಾಗಲಾಂಬಿಕೆಗೆ ಲಗ್ನವಾಗಿದ್ದಿಲ್ಲ, ಅವಳು ಯಾವಾಗಲೂ ಕನ್ನಿಕೆಯಾಗಿದ್ದಳು, ಅವಳು ಕಕ್ಕಯ್ಯನ ಪ್ರಸಾದವನ್ನು ಗ್ರಹಿಸಿದ್ದರಿಂದ ಗರ್ಭಿಣಿಯಾದಳು, ಇದು ಬಿಜ್ಜಳನಿಗೆ ತಿಳಿಯಲಾಗಿ ಅವನು ನಾಗಲಾಂಬಿಕೆಯನ್ನು ಕಂಡು, ಗಂಡನಿಲ್ಲದೆ ನೀನು ಹೇಗೆ ಗರ್ಭಿಣಿಯಾದೆ ಎಂದು ಕೇಳಲಾಗಿ

ಗರ್ಭದಲ್ಲಿಯ ಶಿಶುವು ಇದು ಪ್ರಸಾದದ ಮಹಿಮೆಯೆಂದು ಉತ್ತರವನ್ನು ಕೊಟ್ಟಿತಂತೆ. ಇವೆಲ್ಲವುಗಳು ಕಟ್ಟು ಕಥೆಗಳೆಂದು ನಾವು ತಿಳಿಯಬೇಕಾಗುತ್ತದೆ. ಯಾಕಂದರೆ ಈ ಕಾಲದಲ್ಲಿ ಬಿಜ್ಜಳನು ಕಲ್ಯಾಣದಲ್ಲಿ ರಾಜನಾಗಿರಲಿಲ್ಲ ಬಸವೇಶ್ವರನೂ ಕಲ್ಯಾಣಕ್ಕೆ ಬಂದಿದ್ದಿಲ್ಲ, ಕಕ್ಕಯ್ಯನೂ ಅಲ್ಲಿ ಇರಲಿಲ್ಲ.

**ಚನ್ನಬಸವೇಶ್ವರನು ಹುಟ್ಟಿದಾಗ್ಗೆ ಕಕ್ಕಯ್ಯನು ಕಲ್ಯಾಣದಲ್ಲಿರಲಿಲ್ಲ.**

ಕಕ್ಕಯ್ಯನು ಬಸವೇಶ್ವರನ ಕೀರ್ತಿ ವಾರ್ತೆಯನ್ನು ಕೇಳಿ ಕಲ್ಯಾಣಕ್ಕೆ ಬಂದನೆಂತಲೂ ಅವನ ಪ್ರಸಾದವಾದ ಅನ್ನದ ಅಗುಳನ್ನು ನಾಗಲಾಂಬಿಕೆಯು ಸೇವಿಸಿ ಅವಳು ಗರ್ಭಿಣಿಯಾದಳೆಂತಲೂ ವೀರಶೈವ ಪುರಾಣಗಳಲ್ಲಿ ಹೇಳಿದೆ. ಆದರೆ ಕಕ್ಕಯ್ಯನು ಕಲ್ಯಾಣಕ್ಕೆ ಬಂದಿದ್ದರೆ, ಅದು ೧೧೫೬ ತರುವಾಯ ಇರಬಹುದು. ಅದಕ್ಕೂ ಪೂರ್ವದಲ್ಲಿ ಅವನು ಅಲ್ಲಿಗೆ ಬರುವ ಸಂಭವವೇ ಇಲ್ಲ. ಯಾಕಂದರೆ ಬಿಜ್ಜಳನಕಿಂತ ಮೊದಲು ಬಸವೇಶ್ವರನು ಕಲ್ಯಾಣದಲ್ಲಿ ಇರಲಿಲ್ಲ ಮತ್ತು ಆಗ ಅವನು ಮಂತ್ರಿಯೂ ಆಗಿರಲಿಲ್ಲ. ಆದ್ದರಿಂದ ಆಗ ಅವನು ದೇಶದಲ್ಲಿ ಪ್ರಸಿದ್ಧಿಯನ್ನೂ ಹೊಂದಿರಲಿಲ್ಲ. ಇಂಥ ಸಮಯದಲ್ಲಿ ಕಕ್ಕಯ್ಯನು ಕಲ್ಯಾಣಕ್ಕೆ ಬರುವದು ಅಸಂಭವವು. ಆದ್ದರಿಂದ ಅವನ ಪ್ರಸಾದವನ್ನು ನಾಗಲಾಂಬಿಕೆಯು ಸೇವಿಸುವದೂ ಅವಳು ಅದರಿಂದ ಗರ್ಭವತಿಯಾಗಿ ಚನ್ನಬಸವೇಶ್ವರನನ್ನು ಹಡೆದುದೂ ಕಾಲ್ಪನಿಕ ಕಥೆಗಳು ಎಂದು ನಮಗೆ ತೋರುತ್ತದೆ. ಹೀಗಿದ್ದ ಬಳಿಕ ಚನ್ನಬಸವೇಶ್ವರನು ಎಲ್ಲಿ ಹುಟ್ಟಿದನೆಂಬುದನ್ನು ನಾವು ನಿರ್ಧರಿಸುವದು ಅವಶ್ಯವಿದೆ.

ಬಿಜ್ಜಳನು ೧೧೫೬ ರಲ್ಲಿ ಕಲ್ಯಾಣದಲಿ ರಾಜ್ಯವಾಳಹತ್ತಿದನು. ಆದ್ದರಿಂದ ಅದಕ್ಕೂ ೧೨ ವರ್ಷ ಮೊದಲು ಬಸವೇಶ್ವರ ನಾಗಲಾಂಬಿಕೆಯರು ಯಾವ ಸ್ಥಳದಲ್ಲಿದ್ದರೋ ಅಲ್ಲಿ ಚನ್ನಬಸವೇಶ್ವರನು ಹುಟ್ಟಿರಬೇಕೆಂದು ನಾವು ಗ್ರಹಿಸಬೇಕಾಗುತ್ತದೆ.

ಬಸವೇಶ್ವರನು ೧೧೬೭ ರಲ್ಲಿ ಕೂಡಲಸಂಗಮದಲ್ಲಿ ಐಕ್ಯ ಹೊಂದಿದ್ದಾನೆ. ಆಗ ಅವನಿಗೆ ೩೬ ವರ್ಷಗಳಾಗಿದ್ದವು. ಆದ್ದರಿಂದ ಅವನು ೧೧೩೧ರಲ್ಲಿ ಜನಿಸಿರಬೇಕು. ಅದರ ತರುವಾಯ ೮ ವರ್ಷಗಳಾದ ಮೇಲೆ ಅಂದರೆ ೧೧೩೯ರಲ್ಲಿ ಅವನಿಗೆ ಯಜ್ಞೋಪವೀತ ಧಾರಣ ಮಾಡಲು ತಾಯಿ ತಂದೆಗಳು ಪ್ರಯತ್ನಿಸಿರಬೇಕು. ಆಗ ಅವನು ಅವನ್ನು ನಿರಾಕರಿಸಿದ್ದರಿಂದ

ಅವನು ಅವನ ಅಕ್ಕನಾದ ನಾಗಲಾಂಬಿಕೆಯೂ ಪಿತೃಗೃಹವನ್ನು ತ್ಯಜಿಸಿ ಸಂಗಮಕ್ಷೇತ್ರಕ್ಕೆ ಹೋಗಬೇಕಾಯಿತು. ಆದ್ದರಿಂದ ಮುಂಜಿಯ ಕಾಲದಲ್ಲಿ ಬಸವೇಶ್ವರನಿಗೆ ೮ ವರ್ಷಗಳಾಗಿದ್ದರೆ ನಾಗಲಾಂಬಿಕೆಯ ವಯಸ್ಸು ಆಗ ಬಹುಶಃ ೧೦ ಮತ್ತು ೧೪ ಈ ವರ್ಷಗಳ ಮಧ್ಯದಲ್ಲಿರಬೇಕು. ಮಧುವರಸ ಮಾದಲಾಂಬಿಕೆಯರು ಸನಾತನ ಬ್ರಾಹ್ಮಣ ಧರ್ಮದಂತೆ ಆಚರಿಸುವವರು. ಆದ್ದರಿಂದ ಅವರು ಈ ವಯಸ್ಸಿನಲ್ಲಿ ತಮ್ಮಲ್ಲಿ ವಾಸಿಸುತ್ತಿದ್ದ ನಾಗಲಾಂಬಿಕೆಗೆ ಒಬ್ಬ ವರನನ್ನು ನಿಯಮಿಸಿ ಅವಳ ಲಗ್ನ ಮಾಡಿರಲಿಕ್ಕೇಬೇಕೆಂದು ತೋರುತ್ತದೆ

ಆದ್ದರಿಂದ ಚನ್ನಬಸವೇಶ್ವರನು ಬಾಗೇವಾಡಿಯಲ್ಲಾಗಲಿ ಇಲ್ಲವೆ ಸಂಗಮದಲ್ಲಾಗಲೀ ಹುಟ್ಟಿರುವ ಸಂಭವವು ಬಹಳ ಹೆಚ್ಚಿಗಿರುತ್ತದೆ. ಇಲ್ಲವೆ ಆಕೆಯ ಗಂಡ ಶಿವಸ್ವಾಮಿಯ ಗ್ರಾಮದಲ್ಲಿ ಹುಟ್ಟಿರಬೇಕು. ಆದರೆ ಕಲ್ಯಾಣದಲ್ಲಿ ಹುಟ್ಟುವ ಸಂಭವವೇ ಇರುವದಿಲ್ಲ.

## ಶಿವಸ್ವಾಮಿಯು ಗಂಗಾಂಬಿಕೆಯ ಲಗ್ನಕ್ಕೆ ಹೋದದ್ದು

ಸಿಂಗಿರಾಜ ಪುರಾಣದಲ್ಲಿ ಹೇಳಿರುವದೇನೆಂದರೆ ಬಲದೇವ ಮಂತ್ರಿಯು ತನ್ನ ಮಗಳು ಗಂಗಾಬಿಕೆಯನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡುವ ಉದ್ದಿಶ್ಯವಾಗಿ ಅವನನ್ನು ಕಲ್ಯಾಣಕ್ಕೆ ಕರೆಯಿಸಿಕೊಂಡನು. ಆಗ ಅವನ ಕೂಡ ನಾಗಲಾಂಬಿಗೆಯೂ ಅವಳ ಗಂಡನಾದ ಶಿವಸ್ವಾಮಿಯೂ ಬಂದಿದ್ದರೆಂತಲೂ ಅವರನ್ನು ಬಲದೇವ ಮಂತ್ರಿಯು ಸೊಡ್ಡಳ ಬಾಚರಸನ ಮನೆಯಲ್ಲಿ ಇಳಿಸಿದನೆಂತಲೂ ಉಲ್ಲೇಖವಿದೆ. ಇದರಿಂದ ಕಲ್ಯಾಣಕ್ಕೆ ಬಸವೇಶ್ವರನು ಬರುವಮೊದಲೇ ನಾಗಲಾಂಬಿಕೆಯ ಲಗ್ನವಾಗಿತ್ತೆಂಬುದು ಸಿದ್ಧವಾಗುತ್ತದೆ.

ಬಸವೇಶ್ವರನು ೧೧೪೦ರಲ್ಲಿ ಬಾಗೇವಾಡಿಯಿಂದ ಹೊರಬಿದ್ದಂದಿನಿಂದ ೧೧೫೬ರಲ್ಲಿ ಅವನು ಮಂತ್ರಿಯಾಗುವ ವರೆಗೆ ಅಂದರೆ ಸುಮಾರು ೧೬ ವರ್ಷ ಅವನು ಕೂಡಲಸಂಗಮದಲ್ಲಿಯೇ ವಾಸಿಸಿರಬೇಕು. ಈ ಅವಧಿಯಲ್ಲಿ ನಾಗಲಾಂಬಿಕೆಯು ಶಿವಸ್ವಾಮಿಯ ಕೂಡ ಲಗ್ನಮಾಡಿಕೊಂಡು ಚನ್ನಬಸವೇಶ್ವರನನ್ನು ಹಡೆದಿರಬೇಕು.

ಬಸವೇಶ್ವರನ ಕಾಲದಲ್ಲಿ ವೀರಶೈವ ಸ್ತ್ರೀಪುರುಷರು ಧಾರ್ಮಿಕ ಸ್ಥಾನವನ್ನು ಹೊಂದಿದವರಿದ್ದರೂ ಅವರು ಲಗ್ನವಾಗುವದು ವಾಡಿಕೆಯಾಗಿತ್ತು. ಬಹು

ಜನ ವಚನಕಾರರು ಲಗ್ನವಾದವರು ಇದ್ದಾರೆ, ಹಾಗೆಯೇ ಸ್ತ್ರೀ ವಚನಕಾರರೂ ಲಗ್ನವಾದವರಿದ್ದರು. ಉದಾ:- ಲಿಂಗಮ್ಮ, ಮಹಾದೇವಿಯಮ್ಮ, ನರದಾನಿಗುಡ್ಡಮ್ಮ, ಬಸವೇಶ್ವರನ ಹೆಂಡಂದಿರಾದ ನೀಲಮ್ಮ. ಗಂಗಾಬಿಕೆ ಮುಂತಾದವರು. ಆದ್ದರಿಂದ ನಾಗಲಾಂಬಿಕೆಯೂ ಕೂಡ ಶಿವಸ್ವಾಮಿಯನ್ನು ಈ ಕಾಲದಲ್ಲಿ ಲಗ್ನವಾಗಿ ಹಡೆದಿರಬಹುದು.

ಬಿಜ್ಜಳನು ೧೧೫೬ರಲ್ಲಿ ಕಲ್ಯಾಣದಲ್ಲಿ ರಾಜ್ಯವಾಳಹತ್ತಿದನು. ಆಗ ನಾಗಲಾಂಬಿಕೆಯು ವಯಸ್ಸು ೩೦ ವರ್ಷಕ್ಕೆ ಸಮೀಪ ವಾಗಿರಬೇಕು. ಇಷ್ಟು ವರ್ಷ ಅವಳು ಸಂಗಮದಲ್ಲಿ ಕನ್ನಿಕೆಯಾಗಿ ಉಳಿದು ಆಮೇಲೆ ಲಗ್ನವಾಗುವ ಸಂಭವವು ಬಹಳ ಕಡಿಮೆ ಇದೆ. ಆದ್ದರಿಂದ ಅವಳ ಲಗ್ನವು ಬಾಗೇವಾಡಿಯಲ್ಲಿ ಆಗಿರಬೇಕು. ಇಲ್ಲವೆ ಅದು ಸಂಗಮಕ್ಷೇತ್ರಕ್ಕೆ ಹೋದಬಳಿಕ ಸ್ವಲ್ಪಕಾಲದಲ್ಲಿ ಆಗಿರಬೇಕು ಆಗ ಆಕೆಯ ವಯಸ್ಸು ೧೫—೧೬ ವರ್ಷ ಇರಬಹುದು.

ಈ ಎಲ್ಲ ವಿಷಯಗಳನ್ನು ನಾವು ವಿವೇಚಿಸಿದಲ್ಲಿ ಚನ್ನಬಸವೇಶ್ವರನು ಕೂಡಲಸಂಗಮಕ್ಕೆ ಬಸವೇಶ್ವನು ಬಂದ ಬಳಿಕ ಒಂದೆರಡು ವರ್ಷಗಳಲ್ಲಿ ಹುಟ್ಟಿರಬಹುದು, ಇಲ್ಲದಿದ್ದರೆ ಅವನು ಬಾಗೇವಾಡಿಯಲ್ಲಿ ಹುಟ್ಟಿರ ಬಹುದು, ಅಥವಾ ಶಿವಸ್ವಾಮಿಯ ಮೂಲಗ್ರಾಮದಲ್ಲಿ ಹುಟ್ಟಿರಬಹುದು ಆದರೆ ಅವನು ಕಲ್ಯಾಣದಲ್ಲಿ ಹುಟ್ಟಿಲ್ಲ.

### ಚನ್ನಬಸವೇಶ್ವರನ ವಿದ್ಯಾಭ್ಯಾಸ ಎಲ್ಲಿ ಆಯಿತು

ಕ್ರಿ. ಶ. ೧೧೪೦ ರಿಂದ ೧೧೫೬ ವರೆಗೆ ಅಂದರೆ ಸುಮಾರು ೧೬ ವರ್ಷ ಚನ್ನಬಸವೇಶ್ವನು ಬಸವೇಶ್ವರ ಮತ್ತು ನಾಗಲಾಂಬಿಕೆಯರ ಕೂಡ ಕೂಡಲಸಂಗಮ ಕ್ಷೇತ್ರದಲ್ಲಿ ಕಾಲ ಕಳೆದಿದ್ದಾನೆಂದು ಗಣಿಸಬಹುದು ಆರಂಭದ ಈ ೮ ವರ್ಷಗಳು ಬಾಲ್ಯವಸ್ಥೆ ಎಂದು ತಿಳಿದರೆ ಉಳಿದ ೮ವರ್ಷ ಅವನು ಅಲ್ಲಿ ವಿದ್ಯಭ್ಯಾಸ ಮತ್ತು ಜ್ಞಾನಾರ್ಜನೆಯಲ್ಲಿ ಕಾಲ ಕಳೆದಿದ್ದಾನೆ. ಆಗ ಚನ್ನಬಸವೇಶ್ವರನಿಗೆ ಲಿಂಗಧಾರಣೆ ಮಾಡಿದವನು ಬಸವೇಶ್ವರನೆಂದು ಗ್ರಂಥಗಳಲ್ಲಿ ಹೇಳಿದೆ. ಆದ್ದರಿಂದ ಈ ಕಾಲದಲ್ಲಿ ಬಸವೇಶ್ವರನು ಅವನಿಗೆ ಲಿಂಗೆದ ನೆಲೆಕಲೆಗಳನ್ನೂ ಶಿವಾನುಭವದ ತತ್ವಗಳನ್ನೂ ತಿಳಿಸಿರಬೇಕು. ಬಸವೇಶ್ವರನಂತೆಯೇ ನಾಗಲಾಂಬಿಕೆಯೂ ಕೂಡ ಶಿವಾನುಭವ ಶಾಸ್ತ್ರವನ್ನು ಚನ್ನಾಗಿ ಬಲ್ಲವಳಾಗಿದ್ದಾಳೆ. ಅವಳು ಯೋಗಿಣಿ ಎಂದು ವೀರಶೈವ ಗ್ರಂಥಗಳಲ್ಲಿ ಹೆಸರಾಗಿದ್ದಾಳೆ. ಇವರಿಬ್ಬರ ಸಿರೀಕ್ಷಣೆ

ಯಲ್ಲಿ ಚನ್ನಬಸವೇಶ್ವರನು ಕೂಡಲಸಂಗಮ ಕ್ಷೇತ್ರದಲ್ಲಿ ಷಟ್‌ಸ್ಥಲ ಶಾಸ್ತ್ರದ ತತ್ವಗಳನ್ನೂ ಷಟ್‌ಸ್ಥಲ ಸಿದ್ಧಾಂತವನ್ನೂ ತಿಳಿಧು ಕೊಂಡಿರ ಬೇಕು

**ಹಿಂದಿನ ಕ್ಷೇತ್ರ ಸ್ಥಾನಗಳು ವಿದ್ಯಾಮಂದಿರಗಳು.**

ಕೂಡಲ ಸಂಗಮ ಕ್ಷೇತ್ರವು ಯಾವಾಗಲೂ ಪ್ರಸಿದ್ಧವಾದ ಸ್ಥಾನ ವಾಗಿದೆ. ಹಿಂದಿನ ಕಾಲದಲ್ಲಿ ದೇವಾಲಯಗಳಿದ್ದ ಸ್ಥಾನಗಳಲ್ಲಿ ವಿದ್ವಾಂಸರು ಕಾಲ ಕಾಲಕ್ಕೆ ನೆರೆದು ಧರ್ಮ ಚರ್ಚೆ ಮಾಡುವರು. ಇದು ಆಗ ವಾಡಿಕೆಯಾಗಿತ್ತು. ಆದ್ದರಿಂದ ಶಿವಶರಣರು ಶ್ರೀಶೈಲ, ಕೂಡಲ ಸಂಗಮ ಇಲ್ಲಿಗೆ ಯಾವಾಗಲೂ ಬರುತ್ತಿದ್ದರು. ಶಂಕರ ದಾಸಿಮಯ್ಯನು ಕೃಷ್ಣಾನದೀ ತೀರದಲ್ಲಿದ್ದ ನದಲೆ ಎಂಬ ಗ್ರಾಮಕ್ಕೆ ಬರಲು ಅಲ್ಲಿ ಬಹು ಜನ ಶಿವಶರಣರು ಇದ್ದುದನ್ನು ನೋಡಿ ಅವನು ವಾರಣಾಸಿಗೆ ಹೋಗು ವದನ್ನು ಬಿಟ್ಟನು. ದೇವರ ದಾಸಿಮಯ್ಯನು ಶ್ರೀಶೈಲ ಕ್ಷೇತ್ರದಿಂದ ಮುದನೂರಿಗೆ ಬರಲು ಅಸಂಖ್ಯ ಶಿವಶರಣರು ಅಲ್ಲಿಗೆ ಬರಹತ್ತಲು ಅವನು ಪೊಟ್ಟಿಲ ಕೆರೆಗೆ ತಿರುಗಿ ಹೋಗುವದನ್ನು ನಿಲ್ಲಿಸಿದನು. ಮುದನೂರಿನ ಸಮೀಪದಲ್ಲಿ ಅನೇಕ ಶಿವಶರಣರ ಸ್ಥಾನಗಳಿದ್ದವು. ಸಿದ್ಧರಾಮೇಶ್ವರನ ಸ್ಥಾನವಾದ ಸೊನ್ನಲಾಪುರವು ಈ ಕಾಲದಲ್ಲಿ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧವಾದ ಕ್ಷೇತ್ರವಾಗಿತ್ತು. ಅಲ್ಲಿಯ ಕಪಿಲ ಸಿದ್ಧ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ರಾಜರು ಕೊಟ್ಟ ಉಂಬಳಿಗಳು ಅನೇಕ ಕಡೆಗೆ ಇವೆ. ಶಿವಮೊಗ್ಗಾ ಜಿಲ್ಹೆಯಲ್ಲಿ ಕೋಳೀಸಾಲೆ ಎಂಬಲ್ಲಿ, ಧಾರವಾಡ ಜಿಲ್ಹೆಯಲ್ಲಿ ಸಂಗೂರ ಮತ್ತು ಬುದ್ಧರಕಟ್ಟಿ ಈ ಗ್ರಾಮಗಳಲ್ಲಿ ಮತ್ತು ವಿಜಾಪೂರ ಜಿಲ್ಹೆಯಲ್ಲಿ ಮುದ್ದೇಬಿಹಾಳ ಸಮೀಪದಲ್ಲಿ ಅವನ ಶಾಸನಗಳು ಇವೆ. ಮಂಗಳವಾಡವು ಶೈವ, ಜೈನ, ಮತ್ತು ವೈಷ್ಣವ ಸಂಸ್ಕೃತಿಗಳಿಗೆಲ್ಲ ಕೇಂದ್ರ ಸ್ಥಾನವೆಂದೆನಿಸಿಕೊಂಡಿತ್ತು. ಬಾಗೇವಾಡಿಗೆ ಸಮೀಪವಿರುವ ಇಂಗಳೇಶ್ವರ ದಲ್ಲಿ ಅನೇಕ ದೇವಸ್ಥಾನಗಳಿವೆ. ಒಂದು ಕಾಲದಲ್ಲಿ ಜೈನರಿಗೆ ಕೇಂದ್ರ ವಾಗಿತ್ತು. ಬಾಗೇವಾಡಿ ತಾಲೂಕಿನಲ್ಲಿ ಮುತ್ತಗಿ ಗ್ರಾಮದಲ್ಲಿ ದೇವಾಲ ಯಗಳಿವೆ. ಈ ಗ್ರಾಮವು ಮತ್ತು ವಿಜಾಪೂರ ಇವು ಪಾಶುಪತರಿಗೆ ಸ್ಥಾನವಾಗಿದ್ದವು. ಇದಲ್ಲದೆ ನಾಡಿನಲ್ಲಿ ಬ್ರಾಹ್ಮಣರ ಧರ್ಮ ಸ್ಥಾನಗ ಳಾದ ಅಗ್ರಹಾರಗಳು ಎಲ್ಲ ಕಡೆಗೂ ಪಸರಿಸಿದ್ದವು. ಆದ್ದರಿಂದ ಬಸವ ಚನ್ನಬಸವ ನಾಗಲಾಂಬಿಕೆಯರು ಕೂಡಲ ಸಂಗಮ ಕ್ಷೇತ್ರದಲ್ಲಿ ಶಿವಾ

ಸುಭವ ಜ್ಞಾನವನ್ನು ಸಂಪಾದಿಸುತ್ತ ಕಾಲ ಕಳೆದರೆಂದು ಹೇಳಿದಲ್ಲಿ ಆದ ರಲ್ಲಿ ಅಸಂಭವನೀಯುವಾದದು ಏನೂ ಇರುವದಿಲ್ಲ. ಇದು ಹಿಂದಿನ ಕಾಲ ದಲ್ಲಿ ಕ್ಷೇತ್ರಗಳಲ್ಲಿ ವಾಡಿಕೆಯಾಗಿತ್ತು, ಆದ್ದರಿಂದ ಕೂಡಲ ಸಂಗವು ಕ್ಷೇತ್ರದಲ್ಲಿಯೇ ಬಸವ, ಚನ್ನಬಸವ, ನಾಗಲಾಂಬಿಕೆಯುರು ಅನೇಕ ವರ್ಷ ಇದ್ದು ತಮ್ಮ ಶಿವಜ್ಞಾನವನ್ನು ಹೆಚ್ಚಿಸಿ ಕೊಂಡು ಮುಂದೆ ಮಹ ತ್ವದ ಕಾರ್ಯಗಳನ್ನು ಮಾಡಲು ಯೋಗ್ಯತೆಯನ್ನು ಪಡೆದರೆಂದು ಹೇ ಳಲು ಯಾವ ಪ್ರತ್ಯವಾಯವೂ ಇರುವದಿಲ್ಲ.

## ಚನ್ನಬಸವೇಶ್ವರನು ವೀರಪುರುಷನು, ಯುದ್ಧ ಕಲೆಯನ್ನು ಅರಿತವನು

ಚನ್ನಬಸವೇಶ್ವರನು ಷಣ್ಮುಖನ ಅವತಾರವೆಂದು ವೀರಶೈವ ಗ್ರಂಥ ಕಾರರು ತಿಳಿದಿರುತ್ತಾರೆ. ಷಣ್ಮುಖನು ಯುದ್ಧ ಕಾರ್ಯಗಳಲ್ಲಿ ಅಗ್ರೇಸ ಸರನು, ಅವನು ಯುದ್ಧದ ದೇವತೆ ಎಂದು ಪ್ರಸಿದ್ಧನಾಗಿದ್ದಾನೆ. ಚನ್ನ ಬಸವೇಶ್ವರನು ವೀರಪುರುಷನು. ಬಿಜ್ಜಳನ ವಧೆಯಾದ ಬಳಿಕ ಬಿಜ್ಜಳನ ದಂಡಾಳುಗಳು ಶಿವಶರಣರ ಮೇಲೆ ಬಂದು ಬೀಳಲು ಚನ್ನಬಸವೇಶ್ವರನು ಅವರನ್ನು ಎದುರಿಸಿ ಕಾದಾಡಿದ್ದಾನೆ. ಮುಂದೆ ಅವನ ದಂಡಾಳುಗಳ ಕೂಡ ಬಹಳ ಜಾಣತನದಿಂದ ಹೋರಾಡಿದ್ದಾನೆ. ಅವನು ಹಾಗೆ ಮಾ ಡದೆ ಹೋಗಿದ್ದರೆ ಅವನು ನಾಶ ಹೊಂದುವ ಸಂಭವವಿತ್ತು.

ಹಿಂದಿನ ಕಾಲದಲ್ಲಿ ದೇಶದಲ್ಲಿ ಅಶಾಂತತೆಯು ಇದ್ದದರಿಂದ ಎಲ್ಲ ರೂ ಯುದ್ಧಮಾಡಲು ಸಿದ್ಧರಾಗಿರಬೇಕಾಗುತ್ತಿತ್ತು. ಈ ಕಾಲದಲ್ಲಿ ಚಾಲುಕ್ಯ ರಾಜರಕಾಲದಲ್ಲಿ ತಮ್ಮ ಸುತ್ತಲಿನ ರಾಜರೊಂದಿಗೆ ಯುದ್ಧಮಾ ಡುವ ಪ್ರಸಂಗಗಳು ಆಗಿಂದಾಗ್ಗೆ ಅವರಿಗೆ ಬರುತ್ತಿದ್ದವು. ಆದ್ದರಿಂದ ಬಿಜ್ಜ ಳನೂ, ಅವನ ಕೈಕೆಳಗಿನ ಮಾಂಡಲಿಕರೂ ಯುದ್ಧ ನಿಪುಣರಾಗಿ ರಾಜ್ಯ ವನ್ನು ಸಂರಕ್ಷಣ ಮಾಡುವಲ್ಲಿ ತತ್ಪರರಾಗಿದ್ದರು. ಅವರಂತೆಯೇ ಬಸವ ಚನ್ನ ಬಸವ, ಮಡಿವಾಳ ಮಾಚಿದೇವ ಮೊದಲಾದ ಶಿವಶರಣರೂ ಕೂಡ ಯುದ್ಧ ಕಲೆಯನ್ನು ಅರಿತವರಾಗಿ ಯುದ್ಧ ಮಾಡಲು ಸಿದ್ಧರಾಗಿರಬೇಕಾಗುತ್ತಿತ್ತು. ಆದ್ದರಿಂದ ಬಸವನು ದಂಡನಾಯಕನೆಂತಲೂ ಚೆನ್ನಬಸವನು ಚಿಕ್ಕದಂಡ ನಾಯಕನೆಂತಲೂ ಪುರಾಣಗಳಲ್ಲಿ ಕರೆಯಲ್ಪಟ್ಟಿದ್ದಾರೆ.

## ಬಿಜ್ಜಳನ ಕಾಲದಲ್ಲಿ ನಡೆದ ಯುದ್ಧಗಳು

ಬಿಜ್ಜಳನು ಚಾಲುಕ್ಯ ರಾಜನಿಗೆ ಮಾಂಡಲಿಕನಾಗಿದ್ದಾಗ್ಗೆ ಯುದ್ಧ ಮಾಡುವ ಪ್ರಸಂಗಗಳು ಅವನಿಗೆ ಬಂದಿದ್ದವು, ಆಗ ಅವನು ಹೊಯ ಸಳ ರಾಜರ ರಾಜ್ಯಕ್ಕೆ ಗಡಿಸೀಮೆಯಾದ ಶಿವಮೊಗ್ಗ ಜಿಲ್ಲೆಯಲ್ಲಿ ಬಹು ದಿವಸ ಮಾಂಡಲಿಕನಾಗಿ ರಾಜ್ಯವಾಳಿದನು. ಈ ಭಾಗದ ನೆರೆಯಲ್ಲಿ ಸಾಂತರರು, ಪಲ್ಲವರು ನೊಣಂಬರು ರಾಜ್ಯವಾಳುತ್ತಿದ್ದರು, ಇವರು ಆಳು ತ್ತಿದ್ದ ಪ್ರದೇಶಗಳಿಗೆ ಸಾಂತಲಿಗೆ, ನೊಣಂಬವಾಡಿ, ಎಂಬ ಹೆಸರುಗಳು ಉಂಟಾಗಿದ್ದವು ಈ ರಾಜ್ಯಗಳು ಮಾತ್ರವಲ್ಲದೆ ಗೋವೆ, ಹಾನಗಲ್ಲು ಮತ್ತು ಹಲಸಿಯಲ್ಲಿ ಕದಂಬ ರಾಜರ ಮನೆತನಗಳೂ ಆಳುತ್ತಿದ್ದವು. ಈ ರಾಜ್ಯಗಳಲ್ಲಿದ್ದ ರಾಜರು ಕಲ್ಯಾಣದ ಚಾಲುಕ್ಯ ರಾಜನೊಡನೆ ಅಂಕಿತ ರಾಗಿ ಯಾವಾಗಲು ಇರುತ್ತಿದ್ದಿಲ್ಲ. ಅವರ ಕೂಡ ಯುದ್ಧ ಮಾಡುವ ಪ್ರಸಂಗಗಳು ಚಾಲುಕ್ಯ ರಾಜರಿಗೆ ಆಗಿಂದಾಗ್ಗೆ ಬರುತ್ತಿದ್ದವು.

## ಬಸವನೂ ಚನ್ನಬಸವನೂ ನಾಗಲಾಂಬಿಕೆಯೂ ಯುದ್ಧಗಳನ್ನು ಕಂಡಿದ್ದಾರೆ

೧೧೪೩ ನೇ ವರ್ಷದಲ್ಲಿ ಚಾಲುಕ್ಯರಿಗೆ ಮಾಂಡಲಿಕನಾದ ಯಲಬು ರ್ಗಿಯ ಷೆರ್ಮಡಿ ರಾಜನು ಗೋವೆಯ ಕದಂಬರನ್ನೂ ಹೊಯಸಳ ರಾಜ ನನ್ನೂ ಜಯಿಸಿದನೆಂದು ಶಿಲಾಶಾಸನಗಳಲ್ಲಿ ಉಲ್ಲೇಖನಗಳು ಇರುತ್ತವೆ. ಬಸವೇಶ್ವರನು ಬಿಜ್ಜಳ ರಾಜನಲ್ಲಿ ನೌಕರಿ ಮಾಡುತ್ತಿದ್ದನೆಂದು ಹರಿ ಹರನು ಹೇಳುತ್ತಾನೆ. ಇದು ನಿಜವಿರಬಹುದು. ಆದ್ದರಿಂದ ಬಸವೇಶ್ವರನು ಬಿಜ್ಜಳನ ಕೂಡ ಬನವಾಸಿ ಬಳ್ಳಿಗಾವಿ ಈ ಪ್ರಾಂತಗಳಿಗೂ ಗೋವಾ ಹಲಸಿಗೆ ಮತ್ತು ಹಾನಗಲ್ಲುಗಳಿಗೂ ಹೋಗುವ ಸಂಭವವಿದೆ. ಅವನ ಕೂಡ ಅವನ ಅಕ್ಕ ನಾಗಲಾಂಬಿಕೆಯೂ ಅವಳ ಮಗನಾದ ಚನ್ನಬಸವನೂ ಸಹ ಇದ್ದಿರಬಹುದು. ಮಾಹೇಶ್ವರ ಸ್ಥಲದಲ್ಲಿ ಬಸವೇಶ್ವರನು ಅನೇಕ ವಚನಗಳನ್ನು ರಚಿಸಿದ್ದು ಅವುಗಳ ಮೇಲಿಂದ ಅವನು ಅನೇಕ ರಣರಂಗ ಗಳನ್ನು ಕಂಡಿರಬಹುದೆಂಬ ಅನುಮಾನವು ಉಂಟಾಗುತ್ತದೆ. ಅವನ ಕೂಡ ಚನ್ನಬಸವೇಶ್ವರನೂ ನಾಗಲಾಂಬಿಕೆಯೂ ಯುದ್ಧ ಭೂಮಿಯನ್ನು ಕಂಡಿ ರಬಹುದು.

ಆದ್ದರಿಂದ ಬನವಾಸಿ ಯಲ್ಲಾಪೂರ ಮತ್ತು ಉಳವಿ ಗ್ರಾಮಗಳದ್ದ ಪ್ರದೇಶಗಳೂ ತುಂಗಭದ್ರಾತೀರದ ಪ್ರದೇಶವೂ ಅವರಿಗೆ ಅಪರಿಚಿತವಾಗಿರಲಿಲ್ಲ. ಇಲ್ಲಿ ಇರುವ ಭದ್ರವಾದ ಸ್ಥಳಗಳ ಪರಿಚಯವು ಅವರಿಗೆ ಪೂರ್ಣವಾಗಿದ್ದು ಅವರಿಗೆ ಮುಂದೆ ತೊಂದರೆಗಳಾದ ಕಾಲದಲ್ಲಿ ಅವರು ಈ ಪ್ರದೇಶಗಳಿಗೆ ಹೋಗಿರಬಹುದು.

### ಬಸವ ಚನ್ನಬಸವ ನಾಗಲಾಂಬಿಕೆಯರು ಕೂಡಲ ಸಂಗಮಕ್ಕೆ ಮರಳಿದ್ದು

ಆದರೆ ಈ ಕಾಡು ಪ್ರದೇಶಗಳಲ್ಲಿ ಬಸವ ಚನ್ನಬಸವ ಮತ್ತು ನಾಗಲಾಂಬಿಕೆ ಇವರು ಬಿಜ್ಜಳನೆಲ್ಲಿ ಬಹಳ ದಿವಸವಿರದೆ ಕೂಡಲ ಸಂಗಮಕ್ಕೆ ಬೇಗನೆ ತಿರುಗಿ ಬಂದಿರಬಹುದೆಂದು ತೋರುತ್ತದೆ. ಹೀಗೆ ಅವರು ಈ ಕ್ಷೇತ್ರಕ್ಕೆ ಬಂದು ತಮ್ಮ ಷಟ್‌ಸ್ಥಲ ಸಿದ್ಧಾಂತದ ಚಿಂತನೆ ಮತ್ತು ಅದರ ತತ್ವಗಳ ಪ್ರಸಾರದ ಕಾರ್ಯಗಳಲ್ಲಿ ತೊಡಗಿರಬೇಕು.

### ಬಸವ ಚನ್ನಬಸವೇಶ್ವರರು ಷಟ್‌ಸ್ಥಲಗಳ ಸಂಶೋಧನೆ ಮಾಡಿದ್ದು

ಇದೇ ಕಾಲಕ್ಕೆ ಬಸವ ಚನ್ನಬಸವವೇಶ್ವರರು ಕರಣಹಸಿಗೆ, ಮಿಶ್ರಾರ್ಪಣ ಮಂತ್ರಗೊಪ್ಯ, ಷಟ್‌ಸ್ಥಲ, ವಚನ, ಮುಂತಾದ ಗ್ರಂಥಗಳನ್ನು ರಚಿಸಿರಬೇಕು. ಈ ಗ್ರಂಥಗಳೇ ಷಟ್‌ಸ್ಥಲ ಶಾಸ್ತ್ರಕ್ಕೆ ಮೂಲಗ್ರಂಥಗಳಾಗಿವೆ. ಇಷ್ಟೇ ಅಲ್ಲ, ಇವರೆಲ್ಲರೂ ಈ ತತ್ವಗಳನ್ನು ಸುತ್ತಲಿನ ಪ್ರದೇಶಗಳಲ್ಲಿ ಪ್ರಸಾರಪಡಿಸುವ ಕಾರ್ಯವನ್ನು ಸಹ ಮಾಡಿದ್ದಾರೆ.

### ಬಸವೇಶ್ವರನಿಗೆ ಬಲದೇವ ಮಂತ್ರಿಯು ತನ್ನ ಮಗಳನ್ನು ಕೊಟ್ಟಿದ್ದು

ಬಲದೇವ ಮಂತ್ರಿಯು ಚಾಲುಕ್ಯರಾಜ ಮತ್ತು ಬಿಜ್ಜಳ ಇವರ ಆಸ್ಥಾನದಲ್ಲಿ ಉಚ್ಚಸ್ಥಾನವನ್ನು ಹೊಂದಿದವನಾಗಿದ್ದನು. ಅವನಿಗೆ ಮಾದಲಾಂಬಿಕೆಯು ಸಹೋದರಿಯು. ಅವಳ ಮಗನೇ ಬಸವೇಶ್ವರನು. ಇಷ್ಟರಲ್ಲಿ ಬಲದೇವನು ಬಸವೇಶ್ವರನ ಯೋಗ್ಯತೆಯನ್ನು ಕಂಡುಕೊಂಡು ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ತನ್ನ ಮಗಳನ್ನು ಲಗ್ನ ಮಾಡಿಕೊಟ್ಟನು.

## ಕೂಡಲ ಸಂಗಮದಲ್ಲಿ ವಾಸ

ಹರಿಹರ ಕವಿಯು ಬಸವೇಶ್ವರನು ಚಿಕ್ಕಂದಿನಲ್ಲಿ ತನ್ನ ತಾಯಿಯ ತಾಯಿಯ ಮನೆಯಲ್ಲಿ ಸಂರಕ್ಷಣೆಹೊಂದಿದನೆಂದು ತನ್ನ ರಗಳೆಯಲ್ಲಿ ಬರೆದಿದ್ದಾನೆ. ಆದ್ದರಿಂದ ಕೂಡಲಸಂಗಮದಲ್ಲಿ ಬಸವೇಶ್ವರನು ತನ್ನ ಅಜ್ಜಿಯ ಮನೆಯಲ್ಲಿ ಬಹಳ ವರ್ಷ ಕಾಲಕಳೆದಿರಬಹುದೆಂದು ತೋರುತ್ತದೆ.

ಶಿಲಾಶಾಸನಗಳ ಮೇಲಿಂದ ಬಿಜ್ಜಳನು ಹನ್ನೆರಡು ವರ್ಷ ಕಲ್ಯಾಣದಲ್ಲಿ ರಾಜ್ಯವಾಳಿದ್ದಾನೆ. ಆದ್ದರಿಂದ ಬಸವೇಶ್ವರನು ತನ್ನ ೨೪ನೇ ವರ್ಷದಲ್ಲಿಯೇ ಮಂತ್ರಿಯಾಗಿರಬಹುದು. ಆಗ ಚನ್ನಬಸವೇಶ್ವರನಿಗೆ ೧೨ ವರ್ಷ ಮಾತ್ರ ವಯಸ್ಸಾಗಿದ್ದಿತು.

## ಚನ್ನಬಸವನು ಕಲ್ಯಾಣದಲ್ಲಿ ೧೨ ವರ್ಷ ಕಳೆದಿದ್ದು

ಚನ್ನಬಸವೇಶ್ವರನು ತನ್ನ ೧೨ನೇ ವರ್ಷದಿಂದ ೨೪ನೇ ವರ್ಷದ ವರೆಗೆ ಅಂದರೆ ೧೨ ವರ್ಷ ಕಲ್ಯಾಣದಲ್ಲಿ ಬಸವೇಶ್ವರಗೂಡ ಕಾಲಕಳೆದಿದ್ದಾನೆ. ಇದು ನೇಲಿನ ಸಂಗತಿಗಳಿಂದ ಗೊತ್ತಾಗುತ್ತದೆ ಈಕಾಲದಲ್ಲಿ ಬಿಜ್ಜಳನುಯಾವರಾಜರ ಕೂಡ ಯುದ್ಧ ಮಾಡಿದಂತೆ ಕಂಡುಬರುವದಿಲ್ಲ. ಪರರಾಜರಲ್ಲಿ ಅವನು ಅತ್ಯಂತ ವರ್ಚಸ್ಸುಳ್ಳವನಾಗಿದ್ದನು, ಅವನು ವೀರಬಿಜ್ಜಳನೆಂದು ವೀರಶೈವ ಮತ್ತು ಜೈನ ಗ್ರಂಥಗಳಲ್ಲಿ ಕರೆಯಲ್ಪಟ್ಟಿದ್ದಾನೆ. ಮಾಂಡಲಿಕ ರಾಜರು ಅವನಿಗೆ ಅಂಕಿತರಾಗಿ ವರ್ತಿಸಿದರೆಂದು ತೋರುತ್ತದೆ.

## ಕಲ್ಯಾಣದಲ್ಲಿ ಶಿವಾನುಭವ ಮಂಟಪದ ಸ್ಥಾಪನೆ

ಈ ಕಾಲದಲ್ಲಿ ನಾಡಿನಲ್ಲಿ ಶಾಂತತೆಯು ನೆಲಿಸಿತ್ತು. ಬಸವೇಶ್ವರನು ಆಗ ಬಹು ಬಲಿಷ್ಠನಾಗಿ ರಾಜ್ಯವಾಳುತ್ತಿದ್ದನು. ಇದೇ ಕಾಲದಲ್ಲಿ ಶಿವಾನುಭವ ಮಂಟಪವು ಕಲ್ಯಾಣದಲ್ಲಿ ಉಗಮ ಹೊಂದಿತು. ಇದರಿಂದ ಬಹುಜನ ವಿದ್ವಾಂಸರು ಕಲ್ಯಾಣಕ್ಕೆ ಬರಹತ್ತಿದರು. ಇದಕ್ಕೂ ಪೂರ್ವದಲ್ಲಿ ರೇವಣಸಿದ್ಧ, ದೇವರ ದಾಸಿಮಯ್ಯ, ಕೊಂಡುಗೂಳಿಯ ಕೇಶಿರಾಜ, ನಾಗಲಾಂಬಿಕೆ ಮೊದಲಾದವರು ಕೂಡಲಸಂಗಮ ಕ್ಷೇತ್ರದಲ್ಲಿ ಮತ್ತು ಅದರ ನೆರೆಹೊರೆಯ ಗ್ರಾಮಗಳಲ್ಲಿ ಇದ್ದು ಷಟ್‌ಸ್ಥಲ ಸಿದ್ಧಾಂತವನ್ನು ನೆಲೆಗೊಳಿಸಿದ್ದರು. ಇವರಲ್ಲಿ ರೇವಣಸಿದ್ಧೇಶ್ವರನು ಬಹು ಪ್ರಖ್ಯಾತನು. ಆದರೆ ಮುಂದೆ ಅವನು ಇಲ್ಲಿ ಬಹಳ ದಿವಸ ಇರಲಿಲ್ಲ. ಅವನು ಈ ಪ್ರಾಂತವನ್ನು ಬಿಟ್ಟು ಕೊಲಿ

ಪಾಕಿಗೆ ಹೋದನು. ಆದರೆ ಬಸವೇಶ್ವರನೂ ಅವನ ಸಂಗಡಿಗರೂ ಕಲ್ಯಾಣದಲ್ಲಿಯೇ ನೆಲೆಯಾಗಿ ನಿಂತು, ಷಟ್‌ಸ್ಥಲ ಸಿದ್ಧಾಂತದ ತತ್ವಗಳನ್ನು ರಾಜ್ಯದಲ್ಲಿ ಬೀರಿದರು. ಈ ಕಾರ್ಯದಲ್ಲಿ ಚನ್ನಬಸವೇಶ್ವರನು ಬಹು ಮಹತ್ವದ ಭಾಗವನ್ನು ವಹಿಸುತ್ತಿದ್ದನೆಂದು ಶಿವಾನುಭವ ಮಂಟಪದಲ್ಲಿ ನಡೆದ ವಾಗ್ವಾದಗಳಿಂದ ತಿಳಿದು ಬರುತ್ತದೆ.

ಕಲ್ಯಾಣಪಟ್ಟಣದಲ್ಲಿ ಶಿವಾನುಭವ ಮಂಟಪವು ಸ್ಥಾಪಿತವಾದ ಬಳಿಕ ಅವರ ಪ್ರಸಿದ್ಧಿಯು ಇಡೀ ಭಾರತದಲ್ಲಿ ಹಬ್ಬಿತೆಂದು ತೋರುತ್ತಿದೆ. ಆದ್ದರಿಂದ ಎಲ್ಲ ಭಾಗಗಳಲ್ಲಿದ್ದ ವಿದ್ವಾಂಸರು ಅಲ್ಲಿಗೆ ಬರಲಿಕ್ಕೆ ಹತ್ತಿದರು. ಕಾಶ್ಮೀರದ ರಾಜ ಮನೆತನದವರೂ ಶ್ರೀಶೈಲ ಪ್ರಾಂತದ ಸಕಲೇಶ ಮಾದರಸ ಮೊದಲಾದವರೂ ಪೂರ್ವದೇಶದ ಆಂಧ್ರ ಮತ್ತು ಓಡಿಸಾ ದೇಶದವರೂ ಕೇರಳ ಪ್ರಾಂತೀಯರೂ ಮುಖ್ಯವಾಗಿ ಕಲ್ಯಾಣಕ್ಕೆ ಬರುವವರಾದರು. ಹೀಗೆ ಬಹುಜನ ವಿದ್ವಾಂಸರು ಇಲ್ಲಿ ಸೇರಿಕೊಂಡು ತತ್ವ ವಿವೇಚನೆಯಲ್ಲಿ ತೊಗಿದ್ದರೆಂದು ವೀರಶೈವ ಗ್ರಂಥಗಳಲ್ಲಿ ಅಸಂಖ್ಯ ಉಲ್ಲೇಖಗಳಿರುತ್ತವೆ. ಈ ಕಾಲದಲ್ಲಿ ಚನ್ನಬಸವೇಶ್ವರನು ಯಾವ ಕಾರ್ಯಮಾಡಿದನೆಂಬುದನ್ನು ತಿಳಿಯುವದು ಬಹಳ ಮಹತ್ವದ್ದಾಗಿದೆ.

ಈ ಕಾಲದಲ್ಲಿ ನೆರೆದ ವಿದ್ವಾಂಸರು ನಡಿಸಿದ ವಾದವಿವಾದಗಳು ಶಿವಶರಣರ ಚರಿತ್ರೆಗಳಲ್ಲಿ ಹೇಳಲ್ಪಟ್ಟಿರುತ್ತವೆ. ಅವುಗಳ ಮೇಲಿಂದ ಆಯಾ ಶಿವಶರಣರು ತಮ್ಮದೊಂದು ವಿಶಿಷ್ಟ ಮಾರ್ಗವನ್ನು ನಿರ್ಧರಿಸಿಕೊಂಡು ಅದಕ್ಕನುಸಾರವಾಗಿ ನಡೆಯುತ್ತ ತಮ್ಮ ತಮ್ಮ ವಚನಗಳನ್ನು ರಚಿಸುತ್ತಿದ್ದರೆಂದು ತಿಳಿಯುತ್ತದೆ.

## ಚನ್ನಬಸವೇಶ್ವರನು ಪ್ರಸಾದಿಸ್ಥಲದವನು.

ಈ ಬಗ್ಗೆ ಬಂದ ವಿವರಣೆಗಳಲ್ಲಿ ಬಸವೇಶ್ವರನು ಭಕ್ತಸ್ಥಲದವನು, ಮಡಿವಾಳಮಾಚಿದೇವನು ಮಹೇಶ್ವರಸ್ಥಲದವನು, ಚನ್ನಬಸವೇಶ್ವರನು ಪ್ರಸಾದಿಸ್ಥಲದವನು, ಸಿದ್ಧರಾಮನು ಪ್ರಾಣಲಿಂಗಿಸ್ಥಲದವನು, ಅಜಗಣ್ಣನು ಐಕ್ಯಸ್ಥಲದವನು ಎಂದು ಹೇಳಲ್ಪಡುತ್ತ ಬಂದಿದ್ದಾರೆ. ಇವರಲ್ಲಿ ಚನ್ನಬಸವೇಶ್ವರನು ಪ್ರಸಾದಿಸ್ಥಲದವನೆಂದು ಹೇಳಲ್ಪಟ್ಟಿರುವನು. ಇದರ ಮೇಲಿಂದ ಅವನು ವೀರಶೈವ ಕ್ರಿಯೆಗಳನ್ನು ಹೇಗೆ ಮಾಡಬೇಕು, ಲಿಂಗಾರ್ಪಣಭಾವವು ಹೇಗಿರಬೇಕು, ಎಂಬ ವಿಷಯಗಳ ಬಗ್ಗೆ ವಿಶೇಷ ಸಂಶೋಧನೆ

ರಿದು ವಾಯುವಿನ ಚಲನೆಯನು ಪರಿಪೂರ್ಣದಿಂದ ಕೆಡಿಸಿ ಗಮನ ನಾಸ್ತಿಯಾಗಬೇಕು. ಹೀಗೆ ಪ್ರಾಣಲಿಂಗ ಸ್ಥಲವನಂ ಗಂಗೊಳ್ಳಬೇಕು. ಇದು ಸುಮನದ ನೆಲೆಯು. ಹೀಗೆ ಜಂಗಮಲಿಂಗದ ಮಿಶ್ರವನ್ನರಿಯ ಬೇಕು.

ಸುಜ್ಞಾನದ ನೆಲೆ:— ಪರ ಶಕ್ತಿಯ ಮಥನದಿಂದ ಸಮಾನ ವಾಯುವ ನಿಲಿಸಿ ವಿಶದ್ಧಿ ಚಕ್ರದ ಶ್ವೇತವರ್ಣದ ಷೋಡಶದಳದ ಷೋಡಶಾಕ್ಷರದ ಅಧಿದೈವ ಸದಾಶಿವನ ಅತೀತಾವಸ್ಥೆಯನ್ನು ಯಕಾರವೆಂಬ ಬೀಜಾಕ್ಷರ ದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರ ವಿಡಿದು ಆನಂದ ಭಕ್ತಿ ಯಿಂದ ಐದನೆಯ ತತ್ವದಾದಿಯ ಊರ್ಧ್ವದಿಕ್ಕಿನ ಈಶಾನ್ಯವನರಿದು ಆಕಾಶದ ಭ್ರಮೆಯನು ಪರಿಣಾಮದಿಂದ ತಿಳಿದು ಕರ್ಮನಾಸ್ತಿಯಾಗ ಬೇಕು. ಹೀಗೆ ಶರಣಸ್ಥಲವನಂಗಂಗೊಳ್ಳುವದು ಸುಜ್ಞಾನದ ನೆಲೆಯು. ಈ ಪ್ರಕಾರ ಪ್ರಸಾದಲಿಂಗದ ಮಿಶ್ರವನ್ನರಿಯಬೇಕು.

ಸದ್ಭಾವದ ನೆಲೆ:— ಚಿತ್ ಶಕ್ತಿಯ ಮಥನದಿಂದ ನಾಗಕೂರ್ಮ ಕೃಕರ ದೇವದತ್ತ ಧನಂಜಯಎಂಬ ಪಂಚವಾಯುಗಳನ್ನು ನಿಲಿಸಿ ಆಜ್ಞಾನ ಚಕ್ರದ ಮಾಣಿಕ್ಯವರ್ಣದ ದ್ವಿದಳದ ಹಂ ಕ್ಷಂ ಎಂಬೆರಡು ಅಕ್ಷರದ ಅಧಿದೈವ ಮಹಾಗುರುವಿನ ನಿರಾವಸ್ಥೆಯನು ಓಂಕಾರವೆಂಬ ಬೀಜಾಕ್ಷರ ದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರವಿಡಿದು ಸಮರಸ ಭಕ್ತಿ ಯಿಂದ ಆರನೆಯ ತತ್ವದಾದಿಯ ಗಂಭೀರ ದಿಕ್ಕಿನ ಮಹಾತತ್ವದ ಮುಖ ವನರಿದು ಆತ್ಮನ ಅಹಂ ಮಮತೆಯನು ಘನ ಪ್ರಕಾಶದಿಂದ ತಿಳಿದು ಮೋಕ್ಷಾರ್ಥನಾಸ್ತಿಯಾಗಬೇಕು. ಇದು ಐಕ್ಯ ಸ್ಥಲವನಂಗಂಗೊಳ್ಳುವದು. ಇದು ಸದ್ಭಾವದ ನೆಲೆಯು. ಹೀಗೆ ಮಹಾಲಿಂಗದ ಮಿಶ್ರವನ್ನರಿಯ ಬೇಕು.

ಪಂಚೀಕರಣ, ಮಿಶ್ರಾರ್ಪಣ, ಷಟ್‌ಸ್ಥಲಾಚರಣೆ, ಅಷ್ಟಾವರಣ, ಲಿಂಗಾಂಗಸಾಮರಸ್ಯ ಇವುಗಳ ಸಂಬಂಧವು:— ಪಂಚೀಕರಣದ ತತ್ವಕ್ಕ ನುಸರಿಸಿ ಮಿಶ್ರಾರ್ಪಣ ಇರುತ್ತದೆ. ಮಿಶ್ರಾರ್ಪಣವು ಷಟ್‌ಸ್ಥಲಾಚರಣೆ ಗಳಿಗೆ ಸಂಬಧಿಸಿರುತ್ತದೆ. ಈ ಷಟ್‌ಸ್ಥಲಗಳ ಸಂಬಂಧವು ಹಿಂದೆ ಹೇಳಲ್ಪಟ್ಟದೆ. ಷಟ್‌ಸ್ಥಲಾಚರಣೆಯು ಅಷ್ಟಾವರಣಗಳಲ್ಲಿ ರೂಪಗೊಳ್ಳು ತ್ತದೆ. ಅಷ್ಟಾವರಣಗಳ ಆಚರಣೆಯ ಮೂಲಕ ಇಷ್ಟ ಪ್ರಾಣ ಭಾವ

ಲಿಂಗಗಳು ತನ್ನಲ್ಲಿ ಅಳವಡುತ್ತದೆ. ತನ್ನಲ್ಲಿ ಅವು ಅಳವಟ್ಟಾಗಳೇ ಲಿಂಗಾಂಗಸಾಮರಸ್ಯವು ಒದಗುತ್ತವೆ. ಹೀಗೆ ಇವು ಪರಸ್ಪರ ಸಂಬಂಧವಿದೆ. ಆದ್ದರಿಂದ ಪಂಚೀಕರಣವನ್ನು ಮೊದಲು ಅರಿಯುವದು ಅವಶ್ಯವು.

ಪಂಚೀಕರಣದ ಜ್ಞಾನ:— ಪಂಚಮಹಾಭೂತಗಳಿಂದ ಶರೀರದಲ್ಲಿ ೨೫ ತತ್ವಗಳು ಉಂಟಾಗುತ್ತವೆ. ಈ ತತ್ವಗಳ ಮೂಲಕವೇ ಶರೀರದ ಕ್ರಿಯೆಗಳು ನಡೆಯುತ್ತವೆ. ಶರೀರದ ಕ್ರಿಯೆಗಳು ಲಿಂಗಕ್ರಿಯೆಗಳಾಗಬೇಕು. ಇದು ಮಿಶ್ರಾರ್ಪಣದ ಮೂಲಕ ಒದಗುತ್ತದೆ. ಈ ಲಿಂಗಕ್ರಿಯೆಗಳಿಂದ ಲಿಂಗಾಂಗಸಾಮರಸ್ಯವನ್ನು ಮುಂದೆ ಹೊಂದಬೇಕು. ೨೫ ತತ್ವಗಳ ಸಂಬಂಧದ ಜ್ಞಾನವೇ ಪಂಚೀಕರಣ ಜ್ಞಾನವು. ಇದರ ಜ್ಞಾನದಿಂದ ಲಿಂಗಾಂಗಸಾಮರಸ್ಯದ ರೀತಿಯು ತಿಳಿಯುತ್ತಿದೆ.

ಟೀಪು:— ಹಿಂದೆ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ ಇವುಗಳ ನೆಲೆಗಳು ಹೇಳಲ್ಪಟ್ಟಿವೆ. ಷಟ್‌ಸ್ಥಲಗಳನ್ನು ಒಳಕೊಳ್ಳುವ ರೀತಿಗಳು ಇವುಗಳಲ್ಲಿ ವಿವರಿಸಲ್ಪಟ್ಟಿವೆ. ಮನುಷ್ಯನ ಕ್ರಿಯೆಗಳು ಹೇಗೆ ಉಂಟಾಗುತ್ತವೆಂಬುದನ್ನು ಅರಿತಲ್ಲಿ ಇವುಗಳ ಜ್ಞಾನವಾಗುವದು. ಇದು ಮಿಶ್ರಾರ್ಪಣಕ್ಕೂ ಅವಶ್ಯವಾದದ್ದು. ಈ ವಿವರವುಹೇಗೆಂದರೆ:—

ವಾಯುಗಳ ಮೂಲಕ ಶರೀರದ ಕ್ರಿಯೆಗಳು ನಡಿಯುತ್ತವಷ್ಟೇ, ಇವುಗಳ ಮೂಲಕವೇ ಚಾಲನೆಗಳು ಆಯಾ ಅವಯವಗಳಿಗೆ ಮುಟ್ಟುತ್ತವೆ. ಈ ಚಾಲನೆಗಳು ಮನುಷ್ಯನಲ್ಲಿ ಸರಿಯಾಗಿ ನಡಿಯುವದಕ್ಕೋಸ್ಕರ ಸರಿಯಾದ ಶಕ್ತಿಗಳು ಈ ವಾಯುಗಳ ದ್ವಾರಾ ಸಂಚರಿಸಬೇಕು. ಇದರಿಂದ ಆ ವಾಯುಗಳು ಹರಿದಾಡುವ ತಪ್ಪು ದಾರಿಗಳು ಇಲ್ಲದಾಗುತ್ತವೆ. ಕ್ರಿಯಾಶಕ್ತಿಯ ಮಥನ ಅಂದರೆ ಹೊರಬೀಳುವಿಕೆಯಿಂದ ಪ್ರಾಣವಾಯುವೂ, ಜ್ಞಾನಶಕ್ತಿಯ ಮಥನದಿಂದ ಅಪಾನವಾಯುವೂ, ಇಚ್ಛಾಶಕ್ತಿಯ ಮಥನದಿಂದ ವ್ಯಾನವಾಯುವೂ, ಆದಿಶಕ್ತಿಯ ಮಥನದಿಂದ ಉದಾನವಾಯುವೂ, ಪರಾಶಕ್ತಿಯ ಮಥನದಿಂದ ಸಮಾನವಾಯುವೂ, ಚಿತ್‌ಶಕ್ತಿಯ ಮಥನದಿಂದ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ವಾಯುಗಳೂ ಸರಿಪಡುವವು.

ಹೀಗೆ ಇವುಗಳನ್ನು ಸರಿಪಡಿಸಬೇಕಾದರೆ ನಕಾರಾದಿ ಮಂತ್ರಗಳ ಮೂಲಕವೇ ಶಕ್ಯವು. ಮಂತ್ರದಿಂದ ಜಾಗ್ರದಾದಿ ಅವಸ್ಥೆಗಳೂ ಕೂಡ ಪರಿಣಾಮಕ್ಕೆ ಬರುವವು. ಆಧಾರಚಕ್ರದಲ್ಲಿಯ ಬ್ರಹ್ಮನ ಜಾಗ್ರತಾವಸ

ಯನ್ನು ನಕಾರ ಬೀಜಾಕ್ಷರ ಮಂತ್ರದಿಂದಲೂ ಸ್ವಾಧಿಷ್ಠಾನ ಚಕ್ರದಲ್ಲಿಯ ವಿಷ್ಣುವಿನ ಸ್ವಪ್ನಾವಸ್ಥೆಯನ್ನು ಮಕಾರ ಬೀಜಾಕ್ಷರದಿಂದಲೂ ಮಣಿಪೂರಕ ಚಕ್ರದಲ್ಲಿಯ ರುದ್ರನ ಸುಷುಪ್ತಾವಸ್ಥೆಯನ್ನು ಶಿಕಾರ ಬೀಜಾಕ್ಷರದಿಂದಲೂ ಅನಾಹತ ಚಕ್ರದಲ್ಲಿಯ ಈಶ್ವರನ ತೂರ್ಯಾವಸ್ಥೆಯನ್ನು ವಕಾರ ಬೀಜಾಕ್ಷರದಿಂದಲೂ ವಿಶುದ್ಧಿ ಚಕ್ರದಲ್ಲಿರುವ ಸದಾಶಿವನ ಅತೀತಾವಸ್ಥೆಯನ್ನು ಯಕಾರ ಬೀಜಾಕ್ಷರದಿಂದಲೂ ಆಜ್ಞಾ ಚಕ್ರದಲ್ಲಿಯ ಮಹಾ ಗುರುವಿನ ನಿರಾವಸ್ಥೆಯನ್ನು ಓಂಕಾರ ಬೀಜಾಕ್ಷರದಿಂದಲೂ ತಿಳಿಯಬೇಕು. ಇದರಿಂದ ಆ ಅವಸ್ಥೆಗಳಲ್ಲಿಯ ಪ್ರಾಪಂಚಿಕ ಒಲವುಗಳು ನಷ್ಟವಾಗುವವು. ಆಗ ಆವುಗಳ ವ್ಯಾಪಾರಗಳು ಅವನ ಅಂಕೆಯಲ್ಲಿ ಉಳಿಯುವವು.

ಹೀಗೆ ಅವು ಉಳಿವಲ್ಲಿ ಸದ್ಭಕ್ತಿ, ನೈಷ್ಠಿಕಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದ ಭಕ್ತಿ, ಮತ್ತು ಸಮರಸಭಕ್ತಿಗಳು, ನೆಲೆಗೊಳ್ಳುವವು. ಪೃಥ್ವಿ, ಆಪ್, ತೇಜ, ವಾಯು, ಆಕಾಶ, ಆತ್ಮ ಇವುಗಳ ಮೂಲಕ ಮನುಷ್ಯನಲ್ಲಿ ಅನುಕ್ರಮವಾಗಿ, ಉಂಟಾಗುವ ವ್ಯವಹಾರಿಕ ಗುಣಗಳು ಹೊರಟು ಹೋಗುವವು. ಅವು ಸಾಂಸಾರಿಕ ಒಲವುಗಳು, ಕಾವ್ಯಗಳು, ನಾನಾ ಬಗೆಯ ಗಮನಾಗಮನಗಳು ಮತ್ತು ಕರ್ಮಗಳು ಮತ್ತು ಅಹಂ ಮಮತೆಗಳು ಇದ್ದು ಅವು ದೂರಾಗುತ್ತವೆ.

ಇವುಗಳನ್ನು ದೂರಮಾಡುವಲ್ಲಿ ಮನುಷ್ಯನು ಕಿಂಕುರ್ವಾಣತೆ, ದೃಢವ್ರತ, ಶಿವಯೋಗ ಇವುಗಳನ್ನು ಮೊದಲನೆಯ ಮೂರು ಸ್ಥಲಗಳಲ್ಲಿ ಉಪಯೋಗಿಸಬೇಕು. ಮತ್ತು ಪರಿಪೂರ್ಣತ್ವ, ಪರಿಣಾಮ, ಘನ ಪ್ರಕಾಶ ಇವುಗಳ ಮೂಲಕ ಅನುಕ್ರಮವಾಗಿ ಕಡೆಯ ಮೂರು ಸ್ಥಲಗಳನ್ನು ಒಳಕೊಳ್ಳಬೇಕು.

ಹೀಗೆ ವರ್ಣಿಸಿದಲ್ಲಿ ಭಕ್ತ, ಮಹೇಶ್ವರಾದಿ ಆರು ಸ್ಥಲಗಳು ಮನುಷ್ಯನಲ್ಲಿ ಅಳವಡುತ್ತವೆ. ಅವು ಹೀಗೆ ಅಳವಡಲು ಹಿಂದೆ ಹೇಳಿದಂತೆ ಆಯಾ ಲಿಂಗಗಳ ಮಿಶ್ರಗಳನ್ನು ತನ್ನಲ್ಲಿ ಉಂಟು ಮಾಡಿಕೊಳ್ಳುವ ಸಾಮರ್ಥ್ಯವು ಒದಗುತ್ತದೆ.

ಈ ರೀತಿಗಳನ್ನು ವೀರಶೈವರ ಪಂಚೀಕರಣದ ಜ್ಞಾನದಿಂದ ಅರಿಯುವದು ಸುಲಭವು. ದೇಹದ ವ್ಯಾಪಾರಗಳನ್ನು ತಿಳಿಸುವದೇ ಈ ಪಂಚೀಕರಣದ ಉದ್ದೇಶವಿರುತ್ತದೆ.

**ಪಂಚವಿಂಶತಿ ತತ್ವದ ದೇಹವು:** ಆಕಾಶ ತತ್ವವು ಜ್ಞಾನ ಮೊದಲಾದ ಅಂತಃಕರಣ ಚತುಷ್ಟಯಗಳಲ್ಲಿರುತ್ತವೆ. ಈ ನಾಲ್ಕು ಮನ, ಬುದ್ಧಿ, ಚಿತ್ತ, ಅಹಂಕಾರಗಳಿವೆ. ವಾಯು ತತ್ವವು ಪಂಚಪ್ರಾಣ ವಾಯುಗಳಲ್ಲಿರುತ್ತದೆ. ಅವು ಸಮಾನ ವ್ಯಾನ ಉದಾನ ಅಪಾನ ಪ್ರಾಣ ವಾಯುಗಳಿರುತ್ತವೆ. ಅಗ್ನಿ ತತ್ವವು ಬುದ್ಧೇಂದ್ರಿಯಗಳಲ್ಲಿರುತ್ತದೆ. ಅವು ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣ ಇವುಗಳಿರುತ್ತವೆ. ಅಪ್ಪು ತತ್ವವು ಪಂಚ ವಿಷಯಗಳಲ್ಲಿರುತ್ತದೆ. ಅವು ಶಬ್ದ ಸ್ಪರ್ಶ ರೂಪ, ರಸ, ಗಂಧಗಳಿರುತ್ತವೆ. ಪೃಥ್ವೀ ತತ್ವವು ಕರ್ಮೇಂದ್ರಿಯಗಳಲ್ಲಿರುತ್ತದೆ. ಅವು ವಾಕ್, ವಾಣಿ, ಪಾದ, ಗುಹ್ಯ, ವಾಯು ಇವುಗಳಿರುತ್ತವೆ. (ಈ ತತ್ವಗಳ ವ್ಯಾಖ್ಯೆಗಳು ಹಿಂದೆ ಹೇಳಲ್ಪಟ್ಟಿವೆ.)

ಜ್ಞಾನ ಮೊದಲ್ಗೊಂಡು ಅಂತಃಕರಣ ಚತುಷ್ಟಯಗಳ ಉತ್ಪತ್ತಿಃ— ಆಕಾಶದ ಮೂಲತತ್ವವೇ ಜ್ಞಾನವು. ಈ ಆಕಾಶದೊಂದಂಶವು ವಾಯುವನ್ನು ಬೆರಿಸಲು ಮನಸ್ಸು, ಆಕಾಶದೊಂದಂಶವು ಅಗ್ನಿಯನ್ನು ಬೆರಿಸಲು ಬುದ್ಧಿಯು, ಆಕಾಶದೊಂದಂಶವು ಅಪ್ಪುವನ್ನು ಬೆರಿಸಲು ಚಿತ್ತು, ಆಕಾಶದೊಂದಂಶವು ಪೃಥ್ವಿಯನ್ನು ಬೆರಿಸಲು ಅಹಂಕಾರವು ಹುಟ್ಟುತ್ತವೆ.

ಪ್ರಾಣವಾಯುಗಳುತ್ಪತ್ತಿ:— ವಾಯುವಿನ ಒಂದಂಶವು ಆಕಾಶವನ್ನು ಬೆರಿಸಲು ಸಮಾನವಾಯುವು, ವಾಯುವಿನ ಮೂಲತತ್ವವೇ ಉದಾನವಾಯುವು, ವಾಯುವಿನೊಂದಂಶವು ಅಗ್ನಿಯನ್ನು ಬೆರಿಸಲು ವ್ಯಾನವಾಯುವು, ವಾಯುವಿನೊಂದಂಶವು ಅಪ್ಪುವನ್ನು ಬೆರಿಸಲು ಅಪಾನವಾಯುವು, ವಾಯುವಿನೊಂದಂಶವು ಪೃಥ್ವಿಯನ್ನು ಬೆರಿಸಲು ಪ್ರಾಣವಾಯುವು ಹುಟ್ಟುತ್ತವೆ.

ಬುದ್ಧೇಂದ್ರಿಯಗಳುತ್ಪತ್ತಿಃ— ಅಗ್ನಿಯ ಒಂದಂಶವು ಆಕಾಶವನ್ನು ಬೆರಿಸಲು ಶ್ರೋತ್ರೇಂದ್ರಿಯವು, ಅಗ್ನಿಯ ಒಂದಂಶವು ವಾಯುವನ್ನು ಬೆರಿಸಲು ತ್ವಗಿಂದ್ರಿಯವು, ಅಗ್ನಿಯ ಮೂಲತತ್ವವೇ ನೇತ್ರೇಂದ್ರಿಯವು, ಅಗ್ನಿಯ ಒಂದಂಶವು ಅಪ್ಪುವನ್ನು ಬೆರಿಸಲು ಜಿಹ್ವೇಂದ್ರಿಯವು, ಅಗ್ನಿಯ ಒಂದಂಶವು ಪೃಥ್ವಿಯನ್ನು ಬೆರಿಸಲು ಘ್ರಾಣೇಂದ್ರಿಯವು ಹುಟ್ಟುತ್ತವೆ.

ಪಂಚವಿಷಯಗಳುತ್ಪತ್ತಿಃ— ಅಪ್ಪುವಿನೊಂದಂಶವು ಆಕಾಶವನ್ನು ಬೆರಿಸಲು ಶಬ್ದ ವಿಷಯವು ಅಪ್ಪುವಿನೊಂದಂಶವು. ವಾಯುವನ್ನು ಬೆರಿಸಲು

ಸ್ಪರ್ಶನ ವಿಷಯವು, ಅಪ್ಪುವಿನೊಂದಂಶವು ಅಗ್ನಿಯನ್ನು ಬೆರಿಸಲು ರೂಪು ವಿಷಯವು, ಅಪ್ಪುವಿನ ಮೂಲತತ್ವವೇ ರಸ ವಿಷಯವು, ಅಪ್ಪುವಿನೊಂದಂಶವು ಪೃಥ್ವಿಯನ್ನು ಬೆರಿಸಲು ಗಂಧ ವಿಷಯವು ಹುಟ್ಟುತ್ತವೆ.

ಕರ್ಮೇಂದ್ರಿಯಗಳುತ್ಪತ್ತಿಃ— ಪೃಥ್ವಿಯು ಒಂದಂಶವು ಆಕಾಶವನ್ನು ಬೆರಿಸಲು ವಾಗಿಂದ್ರಿಯವು, ಪೃಥ್ವಿಯ ಒಂದಂಶವು ವಾಯುವನ್ನು ಬೆರಿಸಲು ಪಾಣೇಂದ್ರಿಯವು, ಪಥ್ವಿಯ ಒಂದಂಶವು ಅಗ್ನಿಯನ್ನು ಬೆರಿಸಲು ಪಾದೇಂದ್ರಿಯವು, ಪೃಥ್ವಿಯ ಒಂದಂಶವು ಅಪ್ಪುವನ್ನು ಬೆರಿಸಲು ಗುಹ್ಯೇಂದ್ರಿಯವು, ಪೃಥ್ವಿಯು ಮೂಲ ತತ್ವವೇ ಪಾಯುವಿಂದ್ರಿಯವು. ಹೀಗೆ ಇವು ಹುಟ್ಟುತ್ತವೆ.

ಟೀಪು:— ಆಯಾ ಭೂತಗಳ ಮೂಲಕ ಮೇಲೆ ಹೇಳಿದಂತೆ ತತ್ವಗಳುಂಟಾಗುತ್ತವೆ. ಇವು ಆ ಭೂತಗಳು ಅವುಗಳಲ್ಲಿ ಹೆಚ್ಚಾಗಿ ವಾಸವಾಗಿರುವದರಿಂದ ಅವು ಉಂಟಾಗುತ್ತವೆ. ಆದರೆ ಅವುಗಳ ಒಂದೊಂದಂಶದಲ್ಲಿ ಉಳಿದ ಭೂತಗಳು ಹೆಚ್ಚಾಗಿ ಬೆರೆದಲ್ಲಿ ಮೇಲೆ ಹೇಳಿದ ತತ್ವಗಳುಂಟಾಗುತ್ತವೆ. ಕೆಲವೊಂದು ಮಹಾಭೂತದ ಅಂಶವು ಮತ್ತೊಂದು ಮಹಾಭೂತದಲ್ಲಿ ಹೆಚ್ಚಾಗಿ ಬೆರೆಯಲು ಅವುಗಳಿಂದ ಉಂಟಾಗುವ ತತ್ವಗಳು ಕೆಳಗೆ ವಿವರವಾಗಿ ಹೇಳಲ್ಪಟ್ಟಿವೆ.

ಪಂಚವಿಂಶತಿ ತತ್ವಗಳು:— ಆಕಾಶ ತತ್ವವು ಉಳಿದ ತತ್ವಗಳಲ್ಲಿ ಹೆಚ್ಚಲು, ಜ್ಞಾನ, ಸಮಾನವಾಯು, ಶ್ರೋತ್ರ, ಶಬ್ದವಿಷಯ, ವಾಕ್ಕು ಇವುಗಳುಂಟಾಗುತ್ತವೆ. ವಾಯು ತತ್ವವು ಹೆಚ್ಚಲು ಮನ, ವ್ಯಾನ, ತ್ವಕ್ಕು, ಸ್ಪರ್ಶನ, ಪಾಣಿ ಇವುಗಳುಂಟಾಗುತ್ತವೆ. ತೇಜ ಅಥವಾ ಅಗ್ನಿ ತತ್ವವು ಹೆಚ್ಚಲು ಬುದ್ಧಿ, ಉದಾನ, ನೇತ್ರ, ರೂಪು, ಪಾದ ಇವುಗಳುಂಟಾಗುತ್ತವೆ. ಅಪ್ಪು ತತ್ವ ಹೆಚ್ಚಲು ಚಿತ್, ಅಪಾನವಾಯು, ಜಿಹ್ವೆ, ರಸ, ಗುಹ್ಯ ಇವುಗಳುಂಟಾಗುತ್ತವೆ. ಪೃಥ್ವಿ ತತ್ವ ಹೆಚ್ಚಲು ಅಹಂಕಾರ, ಪ್ರಾಣ, ಘ್ರಾಣ, ಗಂಧ, ಪಾಯು ಇವುಗಳುಂಟಾಗುತ್ತವೆ.

ಟೀಪು:— ಪಂಚಾಕ್ಷರಗಳಿಂದ ಪಂಚಮಹಾಭೂತಗಳಾಗಿರುತ್ತವೆ. ಈ ಪಂಚಾಕ್ಷರಗಳೇ ಲಿಂಗಗಳಿಗೆ ಸ್ಥಾನಗಳಾಗಿವೆ. ಪಂಚಭೂತಗಳ ಗುಣಗಳನ್ನು ಕಳೆಯಲು ಮನುಷ್ಯನು ಲಿಂಗಿಯಾಗುತ್ತಾನೆ. ಪಂಚಾಕ್ಷರಿಯ

ಐದು ಅಕ್ಷರಗಳಿಂದಲೇ ಪಂಚವಾಯುಗಳು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು; ಪಂಚವಿಷಯಗಳು, ಜ್ಞಾನ ಮೊದಲ್ಗೊಂಡು ಅಂತಃಕರಣ ಚತುಷ್ಟಯಗಳು, ಅನುಕ್ರಮವಾಗಿ ಆಯಾ ಲಿಂಗಗಳಿಗೆ ಅರ್ಪಿತವಾಗುತ್ತವೆ. ಅರ್ಪಿತದ ಕಡೆಯಲ್ಲಿ ಪಂಚಾಕ್ಷರಗಳು ಓಂಕಾರದಲ್ಲಿ, ಪಂಚಭೂತಗಳು ಆತ್ಮನಲ್ಲಿ, ಅಡಗುವವು. ಓಂಕಾರವು ಮಹಾಲಿಂಗವಿದ್ದು, ಈ ಲಿಂಗವು ಇವುಗಳನ್ನೆಲ್ಲ ಒಳಕೊಳ್ಳುತ್ತದೆ. ಆಗ ಭಕ್ತನು ಮಹಾಲಿಂಗದಲ್ಲಿ ಅವಿರಳ ಸಂಬಂಧಿಯಾಗಿ ಪ್ರಣವ ಸ್ವರೂಪನಾಗಿ ಐಕ್ಯ ಸ್ಥಿತಿಯನ್ನು ಹೊಂದುತ್ತಾನೆ.

ಆಗ ಪೃಥ್ವಿಯೆಂಬ ಭೂತವು ಭಕ್ತನಂಗವಾಗಿ ಭಕ್ತನಲ್ಲಿಯೇ ಅಡಗಿ, ಅಪ್ಪುವೆಂಬ ಭೂತವು ಮಾಹೇಶ್ವರನಂಗವಾಗಿ ಮಹೇಶ್ವರನಲ್ಲಿಯೇ ಅಡಗಿ, ಅಗ್ನಿಯು ಪ್ರಸಾದಿಯಂಗವಾಗಿ ಪ್ರಸಾದಿಯಲ್ಲಿಯೇ ಅಡಗಿ, ವಾಯುವು ಪ್ರಾಣಲಿಂಗಿಯಂಗವಾಗಿ ಪ್ರಾಣಲಿಂಗಿಯಲ್ಲಿಯೇ ಅಡಗಿ, ಆಕಾಶವೇ ಶರಣನಂಗವಾಗಿ ಶರಣನಲ್ಲಿಯೇ ಅಡಗಿ; ಆತ್ಮನೇ ಐಕ್ಯನಂಗವಾಗಿ ಐಕ್ಯದಲ್ಲಿಯೇ ಅಡಗುತ್ತವೆ.

ಹಾಗೆಯೇ ಆಚಾರಲಿಂಗದಂಗ ಭಕ್ತನಾಗಿ ಭಕ್ತನಲ್ಲಿಯೇ ಅಡಗಿ ಗುರುಲಿಂಗದಂಗ ಮಾಹೇಶ್ವರನಾಗಿ ಮಹೇಶ್ವರನಲ್ಲಿಯೇ ಅಡಗಿ, ಶಿವಲಿಂಗದಂಗ ಪ್ರಸಾದಿಯಾಗಿ ಪ್ರಸಾದಿಯಲ್ಲಿಯೇ ಅಡಗಿ' ಜಂಗಮಲಿಂಗದಂಗ ಪ್ರಾಣಲಿಂಗಿಯಾಗಿ ಪ್ರಾಣಲಿಂಗದಲ್ಲಿಯೇ ಅಡಗಿ, ಪ್ರಸಾದಲಿಂಗದಂಗ ಶರಣನಾಗಿ ಶರಣರಲ್ಲಿಯೇ ಅಡಗಿ, ಮಹಾಲಿಂಗದಂಗ ಐಕ್ಯನಾಗಿ ಐಕ್ಯನಲ್ಲಿಯೇ ಅಡಗುತ್ತವೆ.

ಈ ಸ್ಥಿತಿಯುಂಟಾಗಲು ಅಂಗವೇ ಕರ್ಪುರವಾಗಿ, ಲಿಂಗವೇ ಜ್ಯೋತಿಯಾಗಿ, ಉರಿಕರ್ಪುರ ಸಂಯೋಗವಾದಂತೆ ಶರಣನ ಅಂಗಕ್ಕೂ ಲಿಂಗಕ್ಕೂ ಅಭಿನ್ನತೆಯುಂಟಾಗಿ ಪರಮಾತ್ಮನಲ್ಲಿ ಭಕ್ತನು ಸಾಮರಸ್ಯವನ್ನು ಹೊಂದುತ್ತಾನೆ.

ಪಂಚೀಕರಣದ ಈ ಜ್ಞಾನದಿಂದ ಅರ್ಪಣದ ರೀತಿಯನ್ನು ತಿಳಿದು ಷಟ್‌ಸ್ಥಲಾಚರಣೆಗಳನ್ನು ಅಷ್ಟಾವರಣಗಳ ಮೂಲಕ ಜರಗಿಸುತ್ತ ಲಿಂಗಾಂಗ ಸಾಮರಸ್ಯವನ್ನು ಭಕ್ತನು ಹೊಂದಬೇಕು. ಇದು ಶಿವಶರಣರ ನಡೆಯು ವಚನಕಾರರು ನಿರೂಪಿಸುವ ಪದ್ಧತಿಯು.

ಕಾಯಯಾರ್ಪಣದ ರೀತಿಃ—

(೧) ಭೋಜ್ಯವೆಂಬ ರೂಪನ್ನು ಕಠಿಣವೆಂಬ ದ್ರವ್ಯವನ್ನು ಗಂಧವೆಂಬ ಪದಾರ್ಥವನ್ನು ಕ್ಷೀರಸ್ನಾನವನ್ನು ಓಂ ಹ್ರಾಂ ನಾಂ ನಮಃಶಿವಾಯ ಎಂಬ ಮಂತ್ರದಿಂದ ಪೀಠದಲ್ಲಿಯ ಆಚಾರಲಿಂಗಕ್ಕೆ ಅರ್ಪಿಸುವದು.

(೨) ಪಾನ್ಯವೆಂಬ ರೂಪನ್ನು ಮೃದುವೆಂಬ ದ್ರವ್ಯವನ್ನು ರಸವೆಂಬ ಪದಾರ್ಥವನ್ನು ದಧಿಸ್ನಾನವನ್ನು ಓಂ ಹ್ರೀಂ ಮಾಂ ನಮಃಶಿವಾಯ ಎಂಬ ಮಂತ್ರದಿಂದ ಕಟಿಯಲ್ಲಿಯ ಗುರುಲಿಂಗಕ್ಕೆ ಅರ್ಪಿಸುವದು.

(೩) ಭಕ್ಷ್ಯವೆಂಬ ರೂಪನ್ನು ಉಷ್ಣವೆಂಬ ದ್ರವ್ಯವನ್ನ ರೂಪು ಎಂಬ ಪದಾರ್ಥವನ್ನು ಘೃತಸ್ನಾನವನ್ನು ಓಂ ಹ್ರೂಂ ಶೀಂ ನಮಃ ಶಿವಾಯ ಎಂಬ ಮಂತ್ರದಿಂದ ವರ್ತುಳದಲ್ಲಿಯ ಶಿವಲಿಂಗಕ್ಕೆ ಸಮರ್ಪಿಸುವದು.

(೪) ಚೋಹವೆಂಬ ರೂಪನ್ನು ಶೈತ್ಯವೆಂಬ ದ್ರವ್ಯವನ್ನ ಸ್ಪರ್ಶನವೆಂಬ ಪದಾರ್ಥವನ್ನು ಇಕ್ಷು ಕ್ಷೀರ ಸ್ನಾನವನ್ನು ಓಂ ಹ್ರೈಂ ವಾಂ ನಮಃಶಿವಾಯ ಎಂಬ ಮಂತ್ರದಿಂದ ಗೋಮುಖದಲ್ಲಿಯ ಜನಾಂಗಕ್ಕೆ ಸಮರ್ಪಿಸುವದು.

(೫) ಲೇಹ್ಯವೆಂಬ ರೂಪನ್ನು ಮಿಶ್ರವೆಂಬ ದ್ರವ್ಯವನ್ನು ಶಬ್ದವೆಂಬ ಪದಾರ್ಥವನ್ನು ನಾರೀಕೇಳ ಕ್ಷೀರಸ್ನಾನವನ್ನು ಓಂ ಹ್ರೌಂ ಯಾಂ ನಮಃ ಶಿವಾಯ ಎಂಬ ಮಂತ್ರದಿಂದ ನಾಳದಲ್ಲಿಯ ಪ್ರಸಾದ ಲಿಂಗಕ್ಕೆ ಸಮರ್ಪಿಸುವದು.

(೬) ಇಲ್ಲದಲ್ಲಿಯ ರೂಪನ್ನು ಪರಿಣಾಮವೆಂಬ ದ್ರವ್ಯವನ್ನು ತೃಪ್ತಿ ಎಂಬ ಪದಾರ್ಥವನ್ನು ಸ್ವಾದೋದಕ ಸ್ನಾನವನ್ನು ಓಂ ಹ್ರಂ ಓಂ ನಮಃ ಶಿವಾಯ ಎಂಬ ಮಂತ್ರದಿಂದ ಮಸ್ತಕದಲ್ಲಿಯ ಮಹಾಲಿಂಗಕ್ಕೆ ಸಮರ್ಪಿಸುವದು.

ಕರಣಾರ್ಪಣದ ರೀತಿಃ— ಇಲ್ಲಿ ಅಂಗ, ಲಿಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪ್ರಸಾದ, ಪದಾರ್ಥ ಈ ಅಷ್ಟವಿಧ ಸಕೀಲಗಳಿವೆ. ಆಯಾ ಆರು ಲಿಂಗಗಳು ಪರಸ್ಪರ ಮಿಶ್ರಣವಾದಲ್ಲಿ ೩೬ ಆಗುವವು. ಈ ಮೂವತ್ತಾರುಗಳು ಪ್ರಾಣಲಿಂಗ ಸಂಬಂಧವಾಗಿವೆ. ಈ ೩೬ಲಿಂಗಗಳಿಗೆ ಮನೋಸಂಬಂಧವಾದ ೩೬ ತೆರದ ರುಚಿ ಪದಾರ್ಥಗಳನ್ನು ೩೬ ತೆರದ ಭಕ್ತಿ ಸಕೀಲಗಳಿಂದ ಸಮರ್ಪಿಸುವುದು.

